ಶ್ರೀಭವಿಷ್ಯೋತ್ತರಪುರಾಣಾಂತರ್ಗತ

# ಶ್ರೀವೇಂಕಟೇಶಮಹಾತ್ಮೆ



ಅನುವಾದಕರು

ಶ್ರೀ ರಾಘವೇಂದ್ರಗುರುವಂಶಭೂಷಣಂ

**ರಾಜಾ ಶ್ರೀ ಗುರುರಾಜಾಚಾರ್ಯರು**

ಶ್ರೀ ಸುಯಮೀರಾಘವೇಂದ್ರ
ಕೃಪಾಶ್ರಿತಂ



ಕಮಲೇಶ ಕುಸುಮ

## ಸಾಹಿತ್ಯ ಸಾಮ್ರಾಜ್ಯ : 143

ಶ್ರೀ ಭವಿಷ್ಯೋತ್ತರ ಪುರಾಣಾಂತರ್ಗತ

# ಶ್ರೀ ವೇಂಕಟೇಶಮಹಾತ್ಮ್ಯಮ್

ಅನುವಾದಕರು :
'ಶ್ರೀರಾಘವೇಂದ್ರಗುರುವಂಶಭೂಷಣಂ, ವಿದ್ಯಾಧಿರಾಜ,
ವೇದಾಂತಾಲಂಕಾರವಿದ್ವನ್ಮಣಿ, ವಿದ್ಯಾರತ್ನಂ
**ರಾಜಾಶ್ರೀ ಗುರುರಾಜಾಚಾರ್ಯ**

ಪ್ರಕಾಶಕರು
**ರಾಜಾ ಜಿ. ಸುಧೀಂದ್ರಾಚಾರ್ಯ**
ಶ್ರೀ ಸುಯಮೀರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು-ಬೆಂಗಳೂರು

**2017**

**Śrī Veṅkaṭeśa Māhātmyam**
***in Srī Bhaviṣyottara Purāṇam***

*Translated by :*
***Srī Rāghavendraguru Vamśabhūṣaṇam***
**Śrī Rājā S. Gururājāchārya**

*Published by :*
**Sri Suyami Raghavendra Research Center, Bangalore.**

| | | |
|---|---|---|
| ಗ್ರಂಥದ ಹೆಸರು | : | **ಶ್ರೀ ಭವಿಷ್ಯೋತ್ತರ ಪುರಾಣಾಂತರ್ಗತ**<br>**ಶ್ರೀ ವೇಂಕಟೇಶಮಹಾತ್ಮ್ಯಮ್** |
| ಅನುವಾದಕರು | : | **ರಾಜಾಶ್ರೀ ಗುರುರಾಜಾಚಾರ್ಯರು** |
| ಪ್ರಕಾಶಕರು | : | **ಶ್ರೀಸುಯಮಿರಾಘವೇಂದ್ರ ಸಂಶೋಧನ ಕೇಂದ್ರ**<br>'ಸಾಧನಾ', ನಂ. 213/ಡಿ, 2ನೇ 'ಬಿ' ಮುಖ್ಯರಸ್ತೆ<br>2ನೇ 'ಇ' ಅಡ್ಡರಸ್ತೆ, ಗಿರಿನಗರ ಮೊದಲನೇ ಹಂತ<br>ಬೆಂಗಳೂರು-560 085.<br>ಮೊ. : 99453 48633 |
| 1ನೇ ಮುದ್ರಣ | : | 1993 ಶ್ರೀ ಪರಿಮಳ ಸಂಶೋಧನ ಪ್ರಕಾಶನ ಮಂದಿರ |
| 2ನೇ ಮುದ್ರಣ | : | 2012 ಶ್ರೀ ಸುಯಮೀ ರಾಘವೇಂದ್ರ ಸಂಶೋಧನ ಕೇಂದ್ರ |
| 3ನೇ ಮುದ್ರಣ | : | 2014 ಶ್ರೀ ಸುಯಮೀ ರಾಘವೇಂದ್ರ ಸಂಶೋಧನ ಕೇಂದ್ರ |
| 4ನೇ ಮುದ್ರಣ | : | 2016 ಶ್ರೀ ಸುಯಮೀ ರಾಘವೇಂದ್ರ ಸಂಶೋಧನ ಕೇಂದ್ರ |
| 5ನೇ ಮುದ್ರಣ | : | 2017 ಶ್ರೀ ಸುಯಮೀ ರಾಘವೇಂದ್ರ ಸಂಶೋಧನ ಕೇಂದ್ರ |
| ಹಕ್ಕುಗಳು | : | ಪ್ರಕಾಶಕರು |
| ಬೆಲೆ | : | ರೂ. 250/- |
| ಮುಖಪುಟ ವಿನ್ಯಾಸ | : | **ಗುರುರಾಜ,** ಧೃತಿ ಎಂಟರ್ ಪ್ರೈಸಸ್ |
| ಮುದ್ರಣ | : | **ವಿ.ಎನ್. ಪ್ರಿಂಟರ್ಸ್**<br>ನಾಗಪ್ಪ ಸ್ಟ್ರೀಟ್, ಶೇಷಾದ್ರಿಪುರಂ,<br>ಬೆಂಗಳೂರು - 560 020<br>ಮೊ : 98459 74149 |

॥ ಶ್ರೀಮನ್ಮೂಲರಾಮೋವಿಜಯತೇ ॥ ॥ ಶ್ರೀ ಗುರುರಾಜೋವಿಜಯತೇ ॥

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಂಗತ
ಸರ್ವತಂತ್ರ ಸ್ವತಂತ್ರ ಶ್ರೀ ಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ
ಶ್ರೀಮನ್ಮೂಲರಘುಪತಿವೇದವ್ಯಾಸದೇವರ ದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ
ಮೂಲಮಹಾಸಂಸ್ಥಾನಧೀಶ್ವರರಾದ ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ
ಸಾಮ್ರಾಜ್ಯ ದಿಗ್ವಿಜಯ ವಿದ್ಯಾಸಿಂಹಾಸನಾಧೀಶ್ವರರಾದ ಶ್ರೀ ಸುಶಮೀಂದ್ರತೀರ್ಥ
ಶ್ರೀಪಾದಂಗಳವರ ಕರಕಮಲಸಂಜಾತರಾದ

**ಶ್ರೀ 108 ಸುಯತೀಂದ್ರತೀರ್ಥಶ್ರೀಪಾದಂಗಳವರ ವರಕುಮಾರಕರಾದ**

# ಶ್ರೀ 108 ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು

ಶ್ರೀಮದಖಿಲಾಂಡಕೋಟಿಬ್ರಹ್ಮಾಂಡನಾಯಕ ಜಗಜ್ಜನ್ಮಾದಿಕಾರಣ, ಸಕಲವೇದಾದಿಶಾಸ್ತ್ರ-ಮುಖ್ಯಪ್ರತಿಪಾದ್ಯ, ಅನಂತಕಲ್ಯಾಣ ಗುಣಪೂರ್ಣ ಶ್ರೀರಮಾಬ್ರಹ್ಮರುದ್ರೇಂದ್ರಾದಿ ದೇವತೋ-ಪಾಸಿತಚರಣಕಮಲ ಮೋಕ್ಷಾದಿ ಸಕಲ ಪುರುಷಾರ್ಥಪ್ರದ ಭಕ್ತಬಂಧು ಇಷ್ಟದೇವತಾ-ಕುಲದೇವತಾತ್ಮಕ ಶ್ರೀಪದ್ಮಾವತೀ ಸಮೇತ **ಶ್ರೀಮಲ್ಲಕ್ಷ್ಮೀವೇಂಟಕೇಶಮಹಾತ್ಮೆಯನ್ನು** ನಮ್ಮ ಪೂರ್ವಿಕ ಗುರುಗಳಾದ ಶ್ರೀ ಶ್ರೀ ಸುಯಮೀಂದ್ರತೀರ್ಥರ ಪೂರ್ವಾಶ್ರಮಪುತ್ರರಾದ ರಾಜಾಶ್ರೀ ಗುರುರಾಜಾಚಾರ್ಯರು ಕನ್ನಡ ಭಾಷೆಗೆ ಅನುವಾದ ಮಾಡಿದ್ದಾರೆ. ಇದು ಸಜ್ಜನೋಪ ಯುಕ್ತವಾಗಿದೆ. ಇಂತಹ ಮಂಗಳಕರ ಗ್ರಂಥವನ್ನು ಗುರುರಾಜಾಚಾರ್ಯರ ಪುತ್ರರಾದ ರಾಜಾ ಜಿ. ಸುಧೀಂದ್ರಾಚಾರ್ಯರು "ಶ್ರೀಸಯಮೀರಾಘವೇಂದ್ರ ಸಂಶೋಧನಾಕೇಂದ್ರ"ದ ವತಿಯಿಂದ ಪ್ರಕಾಶನಗೊಳಿಸುತ್ತಿದ್ದಾರೆ. ಈ ಗ್ರಂಥ ಪ್ರಕಾಶನಾಕಾರ್ಯದಲ್ಲಿ ಪಾಲ್ಗೊಂಡ ಪ್ರತಿಯೊಬ್ಬರಿಗೂ ಶ್ರೀರಾಘವೇಂದ್ರತೀರ್ಥ ಗುರ್ವಂತರ್ಗತ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಅಸ್ಮದುಪಾಸ್ಯಮೂರ್ತಿ ಶ್ರೀ ಮೂಲರಘುಪತಿ-ವೇದವ್ಯಾಸದೇವರು ತಥಾ ಶ್ರೀಗುರುರಾಜರು ಇನ್ನೂ ಹೆಚ್ಚಿನ ಇಂತಹ ಜ್ಞಾನ ಕಾರ್ಯಗಳನ್ನು ಮಾಡುವ ಶಕ್ತಿಯನ್ನು ನೀಡಲೆಂದು ಪ್ರಾರ್ಥಿಸುತ್ತೇವೆ.

**ಇತಿ ನಾರಾಯಣ ಸ್ಮರಣೆಗಳು**

॥ ಶ್ರೀ ಗುರುರಾಜೋವಿಜಯತೇ ॥

# ಅನುವಾದಕರ ಮನವಿ

ಶ್ರೀರಾಘವೇಂದ್ರ ಗುರುಸಾರ್ವಭೌಮರು ಅಲ್ಪನಾದ ನನ್ನಿಂದ ಅನೇಕ ಗ್ರಂಥಗಳನ್ನು ಬರೆಯಿಸಿ, ಪರಮಾನುಗ್ರಹ ಮಾಡಿದ್ದಾರೆ. ಬಹುವರ್ಷಗಳಿಂದ ನನ್ನ ಕುಲದೇವನಾದ ತಿರುಪತಿಯ ಶ್ರೀ ಶ್ರೀನಿವಾಸದೇವರ, ಜೀವೋತ್ತಮರೂ, ಆದಿ ಗುರುಗಳೂ ಆದ ಶ್ರೀಮನ್ಮಧ್ವಚಾರ್ಯರ (ಶ್ರೀವಾಯುದೇವರು), ನನ್ನ ವಂಶದ ಪ್ರಾಚೀನಾಚಾರ್ಯರೂ, ಕಲಿಯುಗ ಕಲ್ಪತರುಗಳೂ, ಜಗದ್ಗುರುಗಳೂ ಆದ ಶ್ರೀರಾಘವೇಂದ್ರಸ್ವಾಮಿಗಳವರ ಮೇಲೆ ರಚಿತವಾಗಿರುವ ಪರಮ ಮಂಗಳಕರಗಳಾದ ಚರಿತ್ರೆಗಳನ್ನು ಕನ್ನಡದಲ್ಲಿ ಅನುವಾದ ಮಾಡಿ ಮುದ್ರಿಸಿ ಭಕ್ತಜನರಿಗೆ ಅರ್ಪಿಸಲು ನಾನು ಆಶಿಸಿದ್ದೆ. ಶ್ರೀ ಹರಿವಾಯು ಗುರುರಾಜರು ನನ್ನ ಆಪೇಕ್ಷೆಯನ್ನು ಸಫಲಗೊಳಿಸಿ ಅನುಗ್ರಹಿಸಿದ್ದಾರೆ.

ಜಗನ್ಮಾನ್ಯಗಳಾದ ಶ್ರೀಭವಿಷ್ಯೋತ್ತರ ಪುರಾಣಾಂತರ್ಗತ ಶ್ರೀವೇಂಕಟೇಶಮಹಾತ್ಮೇ, ಶ್ರೀನಾರಾಯಣಪಂಡಿತಾಚಾರ್ಯ ವಿರಚಿತ ಅಣುಮಧ್ವವಿಜಯ ಮತ್ತು ಶ್ರೀ ನಾರಾಯಣಾಚಾರ್ಯ ವಿರಚಿತ ಶ್ರೀರಾಘವೇಂದ್ರವಿಜಯ ಹೀಗೆ ಈ ಮೂರು ಗ್ರಂಥಗಳ ಅನುವಾದವನ್ನು ನನ್ನಿಂದ ಮಾಡಿಸಿರುವ ಶ್ರೀನಿವಾಸ-ಶ್ರೀಮದಾಚಾರ್ಯ ಶ್ರೀ ರಾಘವೇಂದ್ರಸ್ವಾಮಿಗಳವರ ಅನುಗ್ರಹವನ್ನು ನಾನು ಈ ಶುಭಸಂದರ್ಭದಲ್ಲಿ ಸ್ಮರಿಸಿ ನನ್ನ ಅನಂತ ಭಕ್ತಿಪೂರ್ವಕ ಪ್ರಣಾಮಗಳನ್ನು ಸಮರ್ಪಿಸಿ ಕೃತಕೃತ್ಯನಾಗಬಯಸುತ್ತೇನೆ.

ಭವಿಷ್ಯೋತ್ತರ ಪುರಾಣಂತರ್ಗತ ಶ್ರೀವೇಂಕಟೇಶ ಮಹಾತ್ಮ್ಯದ ಮೂರು ಪ್ರತಿಗಳನ್ನಿಟುಕೊಂಡು ನಾಲ್ಕೈದು ತಿಂಗಳು ಶ್ರಮಿಸಿ ಅನುವಾದವನ್ನು ನನ್ನ ಯೋಗ್ಯತಾನುಸಾರ ಮಾಡಿದ್ದೇನೆ. ನಾನು ಅನುವಾದ ಮಾಡಿದೆನೆಂದು ಹೇಳುವುದಕ್ಕಿಂತ ಕುಲದೇವನಾದ ತಿರುಪತಿಯ ಶ್ರೀನಿವಾಸ, ಶ್ರೀವಾಯುದೇವರು, ಶ್ರೀಮಂತ್ರಾಲಯ ಶ್ರೀಪಾದಂಗಳವರುಗಳೇ ನನಗೆ ಪ್ರೇರಣೆ ಮಾಡಿ ನನ್ನಲ್ಲಿ ನಿಂತು ಬರೆಸಿದ್ದಾರೆಂದು ಹೇಳುವುದೇ ಅತ್ಯಂತ ಯುಕ್ತವಾಗಿದೆ.

ಸರ್ವಜನರ ಅನುಕೂಲಕ್ಕಾಗಿ ಈ ಗ್ರಂಥದಲ್ಲಿ ಮೊದಲು ಮೂಲಗ್ರಂಥದ ಶ್ಲೋಕಗಳನ್ನೂ, ನಂತರ ಅದರ ಅನ್ವಯಾರ್ಥವನ್ನು ಆ ಬಳಿಕ ಪ್ರತಿಯೊಂದು ಅಧ್ಯಾಯದ ಕಥಾಸಾರವನ್ನು ಕೊಟ್ಟಿದ್ದೇನೆ. ಇದರಿಂದ ವಿದ್ವಾಂಸರಿಗೂ, ಗ್ರಂಥವನ್ನು ಪುರಾಣ ಹೇಳವವರಿಗೂ ಮತ್ತು ಹರಿವಾಯುಗುರುಭಕ್ತರಿಗೂ ಉಪಕಾರವಾಗುವುದೆಂದು ನಂಬಿದ್ದೇನೆ.

ಈ ಗ್ರಂಥವೇ ಸಕಲ ವೇದ, ಉಪನಿಷತ್, ಪುರಾಣ, ಶಾಸ್ತ್ರಾದಿಗಳ ಸಾರಭೂತವಾಗಿರುವುದರಿಂದ ಆ ಬಗ್ಗೆ ಇಲ್ಲಿ ಬರೆಯುವುದರ ಅವಶ್ಯಕತೆ ಇಲ್ಲವೆಂದು ಭಾವಿಸುತ್ತೇನೆ.

ಶ್ರೀವೇಂಕಟೇಶನ ಉಪಾಸಕರೂ ಭಕ್ತರೂ ಆದ ಸಕಲ ಸಜ್ಜನರೂ ಈ ಗ್ರಂಥವನ್ನು ಓದಿ ಶ್ರೀ ಶ್ರೀನಿವಾಸನ ಅನುಗ್ರಹಕ್ಕೆ ಪಾತ್ರರಾಗಬೇಕಾಗಿ ಆಪೇಕ್ಷಿಸುತ್ತೇನೆ.

ಶ್ರೀರಾಮನವಮಿ
ತಾ. 02-04-1993
ಬೆಂಗಳೂರು

ಇತಿ ಸಜ್ಜನವಿಧೇಯ
**ರಾಜಾ ಶ್ರೀ ಗುರುರಾಜಾಚಾರ್ಯ**
ಶ್ರೀಪರಿಮಳ ಮಂದಿರ, ನಂಜನಗೂಡು

॥ ಶ್ರೀ ಗುರುರಾಜೋವಿಜಯತೇ ॥

# ಪ್ರಕಾಶಕರ ಕೃತಜ್ಞತಾ

ಶ್ರೀವ್ಯಾಸನಂದತೀರ್ಥೀಯಸತ್ತತ್ತ್ವಾಮೃತವರ್ಷಕಃ ।
ಸುಯಮೀರಾಘವೇಂದ್ರಾರ್ಯವಿದ್ಯಾಕೇಂದ್ರೋ ವಿರಾಜತೇ ॥

ಶ್ರೀ ರಾಯರ ಅನುಗ್ರಹದ ನೆರಳಲ್ಲಿ ಅರಳುತ್ತಿರುವ ಶ್ರೀ ಸುಯಮೀರಾಘವೇಂದ್ರ ಸಂಶೋಧನಾ ಕೇಂದ್ರ ಭಗವತ್ಸಂಕಲ್ಪ, ಶ್ರೀ ಗುರುರಾಜರ ಪ್ರೇರಣೆ, ಪರಮಾನುಗ್ರಹ ಮತ್ತು ಸಂಸ್ಥೆಯ ಸಾಮ್ರಾಟ್ ಪೋಷಕರುಗಳಾದ ಪರಮಪೂಜ್ಯ ಶ್ರೀ ಸುಯಮೀಂದ್ರ, ಶ್ರೀ ಸುಜಯೀಂದ್ರ, ಶ್ರೀಸುಶಮೀಂದ್ರ, ಶ್ರೀಸುಯತೀಂದ್ರತೀರ್ಥರು ಮತ್ತು ಅಧುನಾಪೀಠ ವಿರಾಜಮಾನರಾದ ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ ಅನುಗ್ರಹಾಶೀರ್ವಾದದ ರಕ್ಷಾಕವಚವನ್ನು ಧರಿಸಿ ಕಾರ್ಯೋನ್ಮುಖರಾಗಿರುವುದರ ಸತ್ಫಲವೇ ಸಾರಸ್ವತ ಲೋಕದಲ್ಲಿ ವೈಶಿಷ್ಟ್ಯ ಪೂರ್ಣವಾದ ಸಾಧನೆ ! ಸಜ್ಜನರ ಅಭಿಮಾನದ ಮಹಾಪೂರ ! ಇಂತಹ ಒಂದು ಅಪೂರ್ವವಾದ ಆರೋಹಣ ಸಾಧನೆಯ ಯಶಸ್ಸನ್ನು ನಮ್ಮದಾಗಿಸಿದ ಶ್ರೀಹರಿ-ವಾಯು-ರಾಘವೇಂದ್ರತೀರ್ಥಗುರುಸಾರ್ವಭೌಮರು ಹಾಗೂ ಪೂಜ್ಯ ಶ್ರೀಪಾದಂಗಳವರಿಗೆ ಭಕ್ತಿ-ಶ್ರದ್ಧಾಪೂರ್ವಕವಾದ ಪರಂಪರಾಗತ ಅನಂತಕೋಟಿ ಶಿರಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ನಮ್ಮ ಪ್ರಾರ್ಥನೆಯನ್ನು ಮನ್ನಿಸಿ "ಶ್ರೀ ವೇಂಕಟೇಶ ಮಹಾತ್ಮೆ" ಗ್ರಂಥಕ್ಕೆ ತಮ್ಮ ಅಮೂಲ್ಯವಾದ ಅನುಗ್ರಹ ಸಂದೇಶವನ್ನು ಕರುಣಿಸುವ ಮೂಲಕ ಗ್ರಂಥಕ್ಕೆ ಪಾವಿತ್ರ್ಯತೆಯ ಸನ್ನಿಧಾನವನ್ನು ತರುವುದರೊಂದಿಗೆ ಗ್ರಂಥವನ್ನು ಮಂತ್ರಾಲಯದಲ್ಲಿ ಇದೇ ಅಕ್ಟೋಬರ್ 21ನೇ ತಾರೀಖಿನಿಂದ 30ನೇ ತಾರೀಖಿನವರೆಗೆ ನಡೆಯುವ ಶರನ್ನವರಾತ್ರಿ ಉತ್ಸವದ ಸಂದರ್ಭದಲ್ಲಿ ಪ್ರಕಾಶನಗೊಳಿಸಿ ನಮ್ಮನ್ನು ಅನುಗ್ರಹಿಸಿ ಆಶೀರ್ವದಿಸುತ್ತಿರುವ ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರಿಗೆ ನಮ್ಮ ಭಕ್ತಿಪೂರ್ವಕವಾದ ಶಿರಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇವೆ.

'ಶ್ರೀರಾಘವೇಂದ್ರಗುರುವಂಶಭೂಷಣಂ' ರಾಜಾ ಶ್ರೀ ಗುರುರಾಜಾಚಾರ್ಯರು "ಶ್ರೀಭವಿಷ್ಯೋತ್ತರ ಪುರಾಣಾಂತರ್ಗತ ಶ್ರೀ ವೇಂಕಟೇಶಮಹಾತ್ಮೆ"ಯನ್ನು ಕನ್ನಡ ಭಾಷೆಗೆ ಅನುವಾದ ಮಾಡಿ ಮಹದುಪಕಾರ ಮಾಡಿದ್ದಾರೆ. ಇದು ವಿದ್ವಜ್ಜನರಂಜಕವೂ, ಸರ್ವಜನೋಪಯುಕ್ತವೂ ಆಗಿದೆ. ಇಂತಹ ಪರಮ ಮಂಗಳಕರ ಗ್ರಂಥವನ್ನು ನಮ್ಮ ಸಂಸ್ಥೆಯ

ದ್ವಾರಾ ಪ್ರಕಟಿಸುವುದಕ್ಕೆ ಕಾರಣರಾದ ಪೂಜ್ಯ ಆಚಾರ್ಯರಿಗೆ ನಮ್ಮ ಕೃತಜ್ಞತಾಪೂರ್ವಕವಾದ ಶಿರಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇವೆ.

ಶ್ರೀ ವೇಂಕಟೇಶಮಹಾತ್ಮೆ ಗ್ರಂಥವನ್ನು ಪ್ರಕಟಿಸಬೇಕೆಂಬ ನಮ್ಮ ಸದಾಶೆಯನ್ನು ಪೂರ್ಣಗೊಳಿಸಿ ಉದಾರ ರೀತಿಯಲ್ಲಿ ಸಹಾಯ ಸಹಕಾರವನ್ನು ಒದಗಿಸಿ, ಪ್ರೋತ್ಸಾಹಿಸಿದ ಭಗವದ್ಭಕ್ತರೂ ಸರಳ ಸಜ್ಜನಿಕೆಯ ಸಾತ್ವಿಕ ಸ್ವಭಾವದ ಸಜ್ಜನರೂ ಪ್ರಸಿದ್ಧ ಉದ್ಯಮಿಗಳೂ ಅವಿರತವಾಗಿ ಭಗವಂತನ ಹಾಗೂ ಶ್ರೀ ಗುರುರಾಜರ ಸೇವಾ ಕೈಂಕರ್ಯದಲ್ಲಿ ನಿರತರಾಗುತ್ತಿದವರು ಆದ ದಿ॥ ಶ್ರೀಯುತ ಯು. ಕೃಷ್ಣಮೂರ್ತಿರವರ ಧರ್ಮಪತ್ನಿಯವರಾದ ಶ್ರೀಮತಿ ಸುಶೀಲಾಮೂರ್ತಿಯವರು ಮತ್ತು ಅವರ ಮಕ್ಕಳಾದ ಶ್ರೀಯುತ ನಾಗರಾಜ್, ಶ್ರೀಯುತ ರವಿರಾಜ್, ಶ್ರೀಯುತ ರಾಜಾರಾಂ ಮತ್ತು ಕುಟುಂಬ ವರ್ಗದವರಿಗೆ ನಮ್ಮ ಧನ್ಯವಾದವನ್ನು ತಿಳಿಸುತ್ತೇವೆ.

ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿ ಸಮಯಕ್ಕೆ ಸರಿಯಾಗಿ ಪ್ರಕಟವಾಗುವುದಕ್ಕೆ ಅನುವು ಮಾಡಿಕೊಟ್ಟ "ವಿ.ಎನ್.ಪ್ರಿಂಟರ್ಸ್"ನ ಮಾಲೀಕರಾದ ಶ್ರೀ ಚಲಪತಿಯವರಿಗೆ ನಮ್ಮ ಧನ್ಯವಾಗಳು.

21.09.2017–30.09–207
**ಶರನ್ನವರಾತ್ರಿ**
ಮಂತ್ರಾಲಯ

ಪ್ರಕಾಶಕರು
**ಶ್ರೀ ಸುಯಮೀರಾಘವೇಂದ್ರ ಸಂಶೋಧನ ಕೇಂದ್ರ**
ನಂಜನಗೂಡು–ಬೆಂಗಳೂರು

॥ ಶ್ರೀ ಮನ್ಮೂಲರಾಮೋ ವಿಜಯತೇ ॥ ॥ ಶ್ರೀ ಗುರುರಾಜೋ ವಿಜಯತೇ ॥

# ಗ್ರಂಥ ಸಮರ್ಪಣೆ



ಶರನ್ನವರಾತ್ರಿಯ ಪರಮ ಮಂಗಳಕರ ಶುಭ ಸಂದರ್ಭದಲ್ಲಿ

ಶ್ರೀ ರಾಜಾಶ್ರೀ ಗುರುರಾಜಾಚಾರ್ಯರು

ಕನ್ನಡದಲ್ಲಿ ಅನುವಾದ ಮಾಡಿರುವ

ಶ್ರೀ ಭವಿಷ್ಯೋತ್ತರಪುರಾಣಾಂತರ್ಗತ ಶ್ರೀವೇಂಕಟೇಶಮಹಾತ್ಮೆ

ಎಂಬ ಶ್ರೇಷ್ಠ ಗ್ರಂಥವನ್ನು ಪರಮ ಪೂಜ್ಯ

ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ

ಅಮೃತಹಸ್ತಗಳಿಂದ ಶ್ರೀಪದ್ಮಾವತೀ ಸಮೇತ

ಶ್ರೀಮಲ್ಲಕ್ಷ್ಮೀವೇಂಕಟೇಶ್ವರ ದೇವರ

ಪರಮ ಪಾವನ ಚರಣಕಮಲಗಳಿಗೆ

ಸದ್ಭಕ್ತಿ, ಶ್ರದ್ಧಾದರ, ನಮನ

ಪೂರ್ವಕವಾಗಿ ಸಮರ್ಪಿಸಲ್ಪಟ್ಟಿದೆ.

ದಿನಾಂಕ : 21.09.2017 – 30.09.2017
ಶರನ್ನವರಾತ್ರೋತ್ಸವ
ಮಂತ್ರಾಲಯ

# ಸಾಮ್ರಾಟ್ ಪೋಷಕರು



ಶ್ರೀ ಸುಜಯೀಂದ್ರತೀರ್ಥರು



ಶ್ರೀ ಸುಶಮೀಂದ್ರತೀರ್ಥರು



ಶ್ರೀ ಸುಯತೀಂದ್ರತೀರ್ಥರು

# ಸಾಮ್ರಾಟ್ ಪೋಷಕರು



ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲ ಮಹಾಸಂಸ್ಥಾನ
ಶ್ರೀರಾಘವೇಂದ್ರ ಸ್ವಾಮಿಗಳವರ ಮಠದ ಆಧುನಾ ಪೀಠವಿರಾಜಮಾನರು
**ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥರು**

# ಸಂಶೋಧನ ಕೇಂದ್ರದ ಸ್ಫೂರ್ತಿಮೂರ್ತಿಗಳು



ರಾಜಾ ಶ್ರೀ ವೇಣುಗೋಪಾಲಾಚಾರ್ಯ



ರಾಜಾ ಶ್ರೀ ಗುರುರಾಜಾಚಾರ್ಯ



ರಾಜಾ ಶ್ರೀ ಲಕ್ಷ್ಮೀನಾರಾಯಣಾಚಾರ್ಯ

## ಸಂಸ್ಥಾಪಕರು



ಅನುವಾದಕರು

ಶ್ರೀರಾಘವೇಂದ್ರಗುರುವಂಶಭೂಷಣಂ

**ರಾಜಾ ಶ್ರೀ ಗುರುರಾಜಾಚಾರ್ಯ**

॥ ಶ್ರೀಮಲ್ಲಕ್ಷ್ಮೀವೇಂಕಟೇಶ್ವರಃ ಪ್ರಸನ್ನೋ ಭೂಯಾತ್ ॥

ಶ್ರೀ ಭವಿಷ್ಯೋತ್ತರ ಪುರಾಣಾಂತರ್ಗತ

# ಶ್ರೀವೇಂಕಟೇಶಮಹಾತ್ಮೆ

## ಶ್ರೀ ಶ್ರೀನಿವಾಸಕಲ್ಯಾಣೋತ್ಸವದ ಕನ್ನಡಾನುವಾದ

## ಮಂಗಳಾಚರಣ

॥ ಶ್ರೀ ಗುರುಭ್ಯೋನಮಃ ಶ್ರೀ ಮದಾನಂದತೀರ್ಥಭಗವತ್ಪಾದಾಚಾರ್ಯೇಭ್ಯೋ ನಮಃ ॥

ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥ ಪ್ರದಾಯಿನೇ ।
ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ ॥

ಶ್ರಿಯಃಕಾಂತಾಯ ಕಲ್ಯಾಣನಿಧಯೇ ನಿಧಯೇಽರ್ಥಿನಾಮ್ ।
ಶ್ರೀವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಳಮ್ ॥

ಬ್ರಹ್ಮರುದ್ರಾದಿವಂದ್ಯಂ ತ್ವಾಂ ಭಜೇ ವೇಂಕಟನಾಯಕಮ್ ।
ನಿವಾರಯಸ್ವಾನಿಷ್ಟಾನಿ ಸಾಧಯೇಷ್ಟಾನಿ ಮಾಧವ ॥

ಶ್ರೀರಾಮಂ ದಶದಿಗ್ವ್ಯಾಪ್ತಂ ದಶೇಂದ್ರಿಯ ನಿಯಾಮಕಮ್ ।
ದಶಾಸ್ಯಘ್ನಂ ದಾಶರಥಿಂ ಶ್ರೀನಿವಾಸಂ ಭಜೇಽನಿಶಮ್ ॥

ಶಮಯನ್ ಭವಸಂತಾಪಂ ರಮಯನ್ ಸಾಧುಚಾತಕಾನ್ ।
ಕೃಷ್ಣಮೇಘಃ ಕೃಪಾದೃಷ್ಟಿವೃರ್ಷ್ಟ್ಯಾ ಪುಷ್ಣಾತು ಮಾಮಪಿ ॥

ಲಕ್ಷ್ಮೀಂ ಕ್ಷೀರಸಮುದ್ರರಾಜತನಯಾಂ ಶ್ರೀರಂಗಧಾಮೇಶ್ವರೀಂ ।
ದಾಸೀಭೂತಸಮಸ್ತದೇವವನಿತಾಂ ಲೋಕೈಕದೀಪಾಂಕುರಾಮ್ ॥
ಶ್ರೀಮನ್ಮಂದಕಟಾಕ್ಷಲಬ್ಧವಿಭವಬ್ರಹ್ಮೇಂದ್ರಗಂಗಾಧರಾಮ್ ।
ತ್ವಾಂ ತ್ರೈಲೋಕ್ಯಕುಟುಂಬಿನೀಂ ಸರಸಿಜಾಂ ವಂದೇ ಮುಕುಂದಪ್ರಿಯಾಮ್ ॥

ಅಂಜನಾನಂದನಂ ವೀರಂ ಜಾನಕೀಶೋಕನಾಶನಮ್ ।
ಕಪೀಶಮಕ್ಷಹಂತಾರಂ ವಂದೇ ಲಂಕಾಭಯಂಕರಮ್ ॥

ಮೂಕೋಽಪಿ ಯತ್ಪ್ರಸಾದೇನ ಮುಕುಂದ ಶಯನಾಯತೇ ।
ರಾಜರಾಜಾಯತೇ ರಿಕ್ತೋ ರಾಘವೇಂದ್ರಂ ತಮಾಶ್ರಯೇ ॥

ವಂದಾರುಜನಸಂದೋಹಮಂದಾರತರುಸನ್ನಿಭಮ್ ।
ವೃಂದಾರಕಗುರುಪ್ರಖ್ಯಂ ವಂದೇ ವಾದೀಂದ್ರದೈಶಿಕಮ್ ॥

ಧರಣೀಮಂಡಲೇ ಖ್ಯಾತಂ ಧೈರ್ಯಾದಿ ಗುಣಬೃಂಹಿತಮ್ ।
ಧಿಕ್ಕೃತಾಶೇಷವಾದೀಭಂ ಧೀರಸಿಂಹ ಗುರುಂ ಭಜೇ ॥

ಸುಧಾಸಾರಾರ್ಥತತ್ವಜ್ಞಂ ಸುರದ್ರುಮಸಮಂ ಸತಾಮ್ ।
ಸುರಾಧಿಪಗುರುಪ್ರಖ್ಯಂ ಸುಜ್ಞಾನೇಂದ್ರಗುರುಂ ಭಜೇ ।

ಸುಧಾಜಿಜ್ಞಾಸಯಾ ಸರ್ವ ಸುಬುಧಾನಂದದಾಯಕಾನ್ ।
ಸುಪ್ರಜ್ಞೇಂದ್ರ ಮುನೀನ್ ವಂದೇ ಸದಾ ವಿದ್ಯಾಗುರೂನ್ ಮಮ ॥

ಸುವಿದ್ವತ್ಕಮಲೋಹ್ಲಾಸಮಾರ್ತಾಂಡಂ ಸುಗುಣಾಕರಮ್ ।
ಸಚ್ಛಾಸ್ತ್ರಾಸಕ್ತ ಹೃದಯಂ ಸುಕೃತೀಂದ್ರ ಗುರುಂ ಭಜೇ ॥

ಸುಧಾದ್ಯಮಲ ಸದ್ಬೋಧಂ ಸುಕೀರ್ತಿವಿಲಸದ್ದಿಶಮ್ ।
ಸುಧೀಸಂಸ್ತುತ್ಯಸುಗುಣಂ ಸುಶೀಲೇಂದ್ರ ಗುರುಂ ಭಜೇ ॥

ಸುಶೀಲೇಂದ್ರಕರಾಬ್ಜೋತ್ಥಂ ಸುಶಾಂತ್ಯಾದಿಗುಣಾರ್ಣವಮ್ ।
ಸುಧಾಪ್ರವಚನಾಸಕ್ತಂ ಸುವ್ರತೀಂದ್ರಗುರುಂ ಭಜೇ ॥

ಸುಖತೀರ್ಥಮತಾಬ್ಧೀಂದುಂ ಸುಧೀಂದ್ರಸುತಸೇವಕಮ್ ।
ಸುಧಾಪರಿಮಳಾಸಕ್ತಂ ಸುಯಮೀಂದ್ರಗುರುಂ ಭಜೇ ॥

ಸುಯಮೀಂದ್ರಕರಾಬ್ಜೋತ್ಥಂ ಸುವಿದ್ಯಾಬೋಧಕಂ ಸದಾ ।
ಸುಮೂಲರಾಮಪೂಜಾಢ್ಯಂ ಸುಜಯೀಂದ್ರಗುರುಂ ಭಜೇ ॥

ಆಪಾದಮೌಲಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥

ಅ೩ ೫೦

ಶ್ರೀ ಮಲ್ಲಕ್ಷ್ಮೀವೇಂಕಟೇಶ್ವರಾಯ ನಮಃ

# ಅನುವಾದಕರ ಮಂಗಳಾಚರಣ

ಶಂಖಾರಿಪದ್ಮಗದಯೋರುವಿಭಾಸಮಾನಂ ।
ಪಂಕಾಪಹಾರಿ ಶುಭಸಂಪದಭೀಷ್ಟಕಾರಿಮ್ ॥
ತಂ ಕಾಮಯೇ ನಿಖಿಲದೇವವರಂ ಕುಲೇಶಂ ।
ಪಂಕೇರುಹಾಕ್ಷಯುಗಲಂ ವರವೇಂಕಟೇಶಮ್ ॥ 1 ॥

ಶ್ರೀರಾಮಚಂದ್ರಪರಿಸೇವಕ ವಾನರೇಂದ್ರಂ ।
ಕೃಷ್ಣೇಷ್ಟಪೂರಣಚಣಂ ವರಭೀಮಸೇನಮ್ ॥
ಪಾರಾಶರಾಶಯನಿರೂಪಕ ಮಧ್ವಮೌನಿಂ ।
ರೂಪತ್ರಯಾತ್ಮಕ ಗುರುಂ ಪವನಂ ನಮಾಮಿ ॥ 2 ॥

ಶ್ರೀರಾಘವೇಂದ್ರಸದ್ವಂಶ್ಯಸುಯಮೀಂದ್ರಯತೀಶಿತುಃ ।
ರಾಜಾಶ್ರೀಗುರುರಾಜಾಖ್ಯಃ ಪೂರ್ವಾಶ್ರಮತನೂಭವಃ ॥ 3 ॥

ಶ್ರೀವೇಂಕಟೇಶಮಾಹಾತ್ಮ್ಯಂ ಭವಿಷ್ಯೋತ್ತರರಾಜಿತಮ್ ।
ಕರ್ನಾಟಭಾಷಾಮಾಶ್ರಿತ್ಯ ವಿವೃಣೋಮಿ ಯಥಾಮತಿ ॥ 4 ॥

ಡಿ ಐ

# ಮೊದಲನೆಯ ಅಧ್ಯಾಯ

## ಮಂಗಳಾಚರಣ

*ಮೂಲ—*

**ಬ್ರಹ್ಮರುದ್ರಾದಿವಂದ್ಯಂ ತ್ವಾಂ ಭಜೇ ವೇಂಕಟನಾಯಕಮ್ ।**
**ನಿವಾರಯಸ್ವಾನಿಷ್ಟಾನಿ* ಸಾಧಯೇಷ್ಟಾನಿ ಮಾಧವ ॥ 1 ॥**

*ಅನ್ವಯಾರ್ಥ:—* ಮಾಧವ = ಎಲೈ ರಮಾರಮಣನಾದ ಶ್ರೀಹರಿಯೇ! ಬ್ರಹ್ಮರುದ್ರಾದಿವಂದ್ಯಂ = ಬ್ರಹ್ಮ = ಚತುರ್ಮುಖಬ್ರಹ್ಮದೇವರು, ರುದ್ರ = ರುದ್ರ ದೇವರು, ಆದಿ = ಇವರೇ ಮೊದಲಾದ ದೇವತೆಗಳಿಂದ, ವಂದ್ಯಂ = ನಮಸ್ಕಾರ ಮಾಡಿಸಿಕೊಳ್ಳುವ, ವೇಂಕಟನಾಯಕಂ- ವೇಂ = ಪಾಪವನ್ನು, ಕಟತೇ = ಸುಡುವುದರಿಂದ 'ವೇಂಕಟ' ಎಂದು ಹೆಸರು ಪಡೆದಿರುವ ಪರ್ವತಕ್ಕೆ, ನಾಯಕಂ = ಸ್ವಾಮಿಯಾದ, ತ್ವಾಂ = ನಿನ್ನನ್ನು, ಭಜೇ = ಸೇವಿಸುತ್ತೇನೆ. ಆಶು = ಶೀಘ್ರವಾಗಿ, (ಪಾ- ಸ್ವ = ನಮ್ಮ, ಅನಿಷ್ಟಾನಿ = ನಮಗೆ ಬರುವ ದುಃಖಗಳನ್ನು, ನಿವಾರಯ = ಪರಿಹರಿಸು, (ನಿವಾರಯ = ಪರಿಹರಿಸುವವನಾಗು), ಸ್ವ ಇಷ್ಟಾನಿ = ನಮಗೆ ಅಪೇಕ್ಷಿತವಾಗಿರುವ ಐಹಿಕ ಪಾರಮಾರ್ಥಿಕ ಶುಭಗಳನ್ನು, ಸಾಧಯ = ಸಾಧಿಸಿಕೊಡು.

ತಾತ್ಪರ್ಯ:— ಜಗನ್ಮಾತೆಯಾದ ಶ್ರೀಲಕ್ಷ್ಮೀದೇವಿಗೆ ಪತಿಯಾದ ಶ್ರೀಹರಿ ಪರಮಾತ್ಮನೇ ! ನಿನ್ನ ನಾಭಿಕಮಲದಿಂದ ಜನಿಸಿದ ಶ್ರೀಚತುರಾನನ ಬ್ರಹ್ಮದೇವರು ಮತ್ತು ಶ್ರೀರುದ್ರದೇವರೇ ಮೊದಲಾದ ದೇವತೆಗಳಿಂದ ನಮಸ್ಕೃತನಾದ, ಪಾಪವನ್ನು ಕಳೆಯುವ ಸಾಮರ್ಥ್ಯವಿರುವುದರಿಂದ ವೇಂಕಟ ಎಂಬ ಪರ್ವತಕ್ಕೆ (ವೇಂಕಟಾಚಲಕ್ಕೆ) ಸ್ವಾಮಿಯಾದ ನಿನ್ನನ್ನು ಭಜಿಸುತ್ತೇನೆ. ನಮಗೆ ಇಲ್ಲಿ ಬಂದೊದಗುವ ಸಮಸ್ತ ದುಃಖ(ಸಂಕಟ)ಗಳನ್ನು ಶೀಘ್ರವಾಗಿ ಪರಿಹರಿಸು ಮತ್ತು ಇಹಪರಗಳಲ್ಲಿ ನಮಗೆ ಅವಶ್ಯಕವಾದ ಇಷ್ಟಾರ್ಥ (ಪುರುಷಾರ್ಥ)ಗಳನ್ನು ಸಾಧಿಸಿಕೊಟ್ಟು ಕಾಪಾಡು ಎಂದು ಭಾವ ॥ 1 ॥

ನೈಮಿಷಾರಣ್ಯದಲ್ಲಿ ಶೌನಕಾದಿ ಅನೇಕ ಋಷಿಮುನಿಗಳು ಸಮ್ಮಿಲಿತರಾಗಿದ್ದಾರೆ. ಸಾಧುಸಜ್ಜನರ ಸಮ್ಮೇಳನವಾದಾಗ ಅವರು ಸತ್ಕಥಾಕಾಲಕ್ಷೇಪ ಮಾಡುವುದು ಸಂಪ್ರದಾಯ. ಅದರಂತೆ ಜ್ಞಾನಿಗಳಾದ ಸೂತಋಷಿಗಳನ್ನು ಶೌನಕಾದಿಮುನಿಗಳು ಪ್ರಶ್ನಿಸಿದರು.

*ಮೂಲ— ಶ್ರೀ ಶೌನಕ ಉವಾಚ -*

**ಕಥಿತಂ ರಂಗಮಾಹಾತ್ಮ್ಯಂ ತ್ವಯಾ ಹಸ್ತಿಗಿರೀಶಿತುಃ ।**
**ಜಗನ್ನಾಥಸ್ಯ ವೈ ವಿಷ್ಣೋರ್ಮಾಹಾತ್ಮ್ಯಮತುಲಂಮುನೇ ॥ 2 ॥**

**ಇದಾನೀಂ ಶ್ರೋತುಮಿಚ್ಛಾಮಿ ಮಾಹಾತ್ಮ್ಯಂ ವೇಂಕಟೇಶಿತುಃ ।**

---

*ಪಾಠಾಂತರಃ - ನಿವಾರಯಶ್ವಾನಿಷ್ಟಾನಿ

ಶೌನಕ ಉವಾಚ = ಶೌನಕರು ಮಾತನಾಡಿದರು. ರಂಗಮಾಹಾತ್ಮ್ಯಂ = ಶ್ರೀರಂಗನಾಥನ ಮಹಿಮೆ, ಹಸ್ತಿಗಿರೀಶಿತುಃ = ಗಜಾದ್ರಿಗೆ ಸ್ವಾಮಿಯಾದ ಶ್ರೀಹರಿಯ ಮಹಿಮೆ, ಜಗನ್ನಾಥಸ್ಯ = ಜಗತ್ತಿಗೆ ಪ್ರಭುವಾದ ಶ್ರೀ ಜಗನ್ನಾಥಕ್ಷೇತ್ರದಲ್ಲಿ ವಿರಾಜಿಸುವ ವಿಷ್ಣೋಃ = ಶ್ರೀವಿಷ್ಣುವಿನ, ಅತುಲಂ = ಅಳತೆಗೆಟುಕದ, ಮಾಹಾತ್ಮ್ಯಂ = ಮಹಿಮೆಯು, ಕಥಿತಂ = ನಿಮ್ಮಿಂದ ಹೇಳಲ್ಪಟ್ಟಿತು. ಇದಾನೀಂ = ಈಗ, ವೇಂಕಟೇಶಿತುಃ = ಶ್ರೀವೇಂಕಟಗಿರಿಗೆ ಸ್ವಾಮಿಯಾದ ಶ್ರೀನಿವಾಸನ, ಮಾಹಾತ್ಮ್ಯಂ = ಮಹಿಮೆಯನ್ನು, ಶ್ರೋತುಂ = ಕೇಳಲು, ಇಚ್ಛಾಮಿ = ಆಶಿಸುತ್ತೇನೆ.

ಸೂತಾಚಾರ್ಯರೇ! ಇದುವರೆವಿಗೆ ನೀವು ಶ್ರೀರಂಗದಲ್ಲಿರುವ ರಂಗನಾಥನ ಮಹಿಮೆಯನ್ನೂ, ಗಜಾದ್ರಿ ಎಂಬ ಬೆಟ್ಟದಲ್ಲಿರುವ ಶ್ರೀಹರಿಯ ಮಹಿಮೆಯನ್ನೂ ನಿರೂಪಿಸಿದಿರಿ. ಈಗ ನಾನು ವೇಂಕಟಾಚಲಕ್ಕೆ ಪ್ರಭುವಾದ ಶ್ರೀ ವಿಷ್ಣುವಿನ ಮಹಿಮೆಯನ್ನು ಆಲಿಸಲು ಅಪೇಕ್ಷಿಸುತ್ತೇನೆ ॥ 2 ॥

*ಮೂಲ— ಸೂತ ಉವಾಚ -*

**ಸಾಧುಪೃಷ್ಟಂ ತ್ವಯಾ ಬ್ರಹ್ಮನ್ ಚರಿತಂ ವೇಂಕಟೇಶಿತುಃ ॥ 3 ॥**

**ಯಥಾಶ್ರುತಂ ಮಯಾ ಪೂರ್ವಂ ವ್ಯಾಸೇನಾಮಿತತೇಜಸಾ ।**
**ತಥಾ ಧ್ಯಾಯನ್ ಸಮಾಚಕ್ಷೇ*ಸಾವಧಾನಮನಾಃ ಶ್ರುಣು ॥ 4 ॥**

ಹೇ ಬ್ರಹ್ಮನ್ = ಎಲೈ ಬ್ರಹ್ಮಜ್ಞಾನಿಯಾದ ಶೌನಕಮುನಿಯೇ, ತ್ವಯಾ = ನಿನ್ನಿಂದ, ವೇಂಕಟೇಶಿತುಃ = ಶ್ರೀವೇಂಕಟನಾಥನ, ಚರಿತಂ = ಚರಿತೆಯನ್ನು ಹೇಳೆಂಬುದಾಗಿ, ಸಾಧು = ಚೆನ್ನಾಗಿ, ಪೃಷ್ಟಂ = ಕೇಳಲ್ಪಟ್ಟಿತು. (ನೀನು ಪ್ರಶ್ನಿಸಿದ ವೇಂಕಟಗಿರಿಗೆ ಪತಿಯಾದ ಶ್ರೀನಿವಾಸನ ಮಾಹಾತ್ಮ್ಯವು) ಪೂರ್ವಂ = ಪೂರ್ವದಲ್ಲಿ, ಅಮಿತತೇಜಸಾ = ಅತ್ಯಂತ ಅಧಿಕತೇಜಸ್ವಿಗಳಾದ, ವ್ಯಾಸೇನ = ಶ್ರೀವೇದವ್ಯಾಸದೇವರಿಂದ, ಮಯಾ = ನನ್ನಿಂದ, ಯಥಾ = ಯಾವ ರೀತಿಯಾಗಿ, ಶ್ರುತಂ = ಕೇಳಲ್ಪಟ್ಟಿತ್ತೋ, ತಥಾ = ಅದರಂತೆಯೇ, ಧ್ಯಾಯನ್ = ಶ್ರೀಹರಿಚರಿತೆಯನ್ನು ಚೆನ್ನಾಗಿ ಧ್ಯಾನಿಸಿ, ಸಮಾಚಕ್ಷೇ (ಪ್ರವಕ್ಷ್ಯಾಮಿ) = ನಿನಗೆ ಹೇಳುತ್ತೇನೆ. ಸಾವಧಾನಮನಾಃ = ಸಮಾಧಾನಮನಸ್ಕನಾಗಿ (ಎಚ್ಚರವಿಟ್ಟು) ಶ್ರುಣು = ಕೇಳು ॥ 4 ॥

ಎಲೈ ಭೂಸುರನಾದ ಶೌನಕ ಮುನಿಯೇ! ನೀನು ವೇಂಕಟಾಚಲಪತಿಯ ಮಹಿಮೆಯನ್ನು ನಿರೂಪಿಸುವಂತೆ ಕೇಳಿದ್ದು ಅತ್ಯಂತಯುಕ್ತವಾಗಿದೆ. ಹಿಂದೆ ಅತಿಶಯ ತೇಜೋವಿಭೂಷಿತರಾದ ಶ್ರೀವೇದವ್ಯಾಸ ದೇವರಿಂದ ನಾನು ಹೇಗೆ ಕೇಳಿದ್ದೇನೋ ಅದರಂತೆಯೇ ಚೆನ್ನಾಗಿ ಧ್ಯಾನಿಸಿ ವೇಂಕಟಗಿರಿಗೆ ಅಧಿಪತಿಯಾದ ಶ್ರೀಮಹಾವಿಷ್ಣುವಿನ ಚರಿತ್ರೆಯನ್ನು ಹೇಳುತ್ತೇನೆ. ನಾನು ಹೇಳುವುದನ್ನು ಮನಸ್ಸಿಟ್ಟು ಲಾಲಿಸು ॥ 4 ॥

ೞ ಬ

---

*ಪಾಠಾಂತರ - ಪ್ರವಕ್ಷ್ಯಾಮಿ

# ಶ್ರೀವೇಂಕಟಗಿರಿಮಹಾತ್ಮೆ

*ಮೂಲ— ಸೂತ ಉವಾಚ -*

**ಪುರಾತು ಜನಕೋ ನಾಮ ರಾಜಾ ಪರಮಧಾರ್ಮಿಕಃ ।**
**ಸತ್ಯವಾಕ್ಸರ್ವಶಾಸ್ತ್ರೇಷು ಕೋವಿದಃ ಕೋಪವರ್ಜಿತಃ ॥ 5 ॥**

**ವಾಸುದೇವಪ್ರಸಾದಸ್ಯ ಮುಖ್ಯಪಾತ್ರೋಭವನ್ನೃಪಃ ।**
**ನಿರ್ಮಮೋ ನಿತ್ಯತೃಪ್ತಶ್ಚ ನಿರಹಂಕೃತಿರಾತ್ಮವಾನ್ (ಆತ್ಮವಿತ್ ) ॥ 6 ॥**

**ತಸ್ಯ ಭ್ರಾತಾಭವತ್ಪೂರ್ವಂ ಕುಶಕೇತುರಿತಿ ಸ್ಮೃತಃ ।**
**ಕುಶಧ್ವಜಸ್ಯ ತನಯಾಸ್ತ್ರಯ ಸ್ತ್ರೈಲೋಕ್ಯಸುಂದರಾಃ ॥ 7 ॥**

**ದುಹಿತ್ರೃಣಾಂ[1] ತ್ರಯಸ್ತಸ್ಯ ಕುಶಕೇತೋರ್ಮಹಾತ್ಮನಃ ।**
**ಜನಕಸ್ಯಾಭವತ್ಪುತ್ರೀ ಜಾನಕೀನಾಮ ವಲ್ಲಭಾ ॥ 8 ॥**

**ಭ್ರಾತ್ರಾ ಚಕಾರಯಾಮಾಸ ರಾಜ್ಯಂ ಜನಕಭೂಪತಿಃ ।**
**ಸ ಭ್ರಾತುರಾಜ್ಞಯಾ[2] ರಾಜ್ಯಂ ಚಕಾರಾರ್ಯೇಷು ಭಕ್ತಿಮಾನ್ ॥ 9 ॥**

*ಅನ್ವಯಾರ್ಥ:—* ಶ್ರೀಸೂತಃ ಉವಾಚ = ಶ್ರೀ ಸೂತಾಚಾರ್ಯರು ಹೇಳಿದರು. ಪುರಾತು = ಪೂರ್ವದಲ್ಲಿ, ಪರಮ ಧಾರ್ಮಿಕಃ = ಅತ್ಯಂತ ಧರ್ಮನಿರತನಾದ, ಸತ್ಯವಾಕ್ = ಸತ್ಯವನ್ನೇ ನುಡಿಯುವವನಾದ, ಸರ್ವಶಾಸ್ತ್ರೇಷು = ಸಮಸ್ತಶಾಸ್ತ್ರಗಳಲ್ಲಿ, ಕೋವಿದಃ = ಪಾರೀಣನಾದ, ಕೋಪವರ್ಜಿತಃ = ಕ್ರೋಧವಿಲ್ಲದಿರುವ, ಜನಕೋನಾಮ = ಜನಕನೆಂಬ ಹೆಸರಿನ, ರಾಜಾ = ದೊರೆಯು, ಅಭವತ್ = ಇದ್ದನು (ಆದನು). ನಿರ್ಮಮಃ = ಯಾವುದರಲ್ಲಿಯೂ ಮಮತೆಯಿಲ್ಲದ, ನಿತ್ಯತೃಪ್ತಃ = ಸರ್ವದಾ ತೃಪ್ತಿಯುಕ್ತನಾದ, ಅರ್ಥಾತ್ ಪೂರ್ಣಕಾಮನಾದ, ನಿರಹಂಕೃತಿಃ = ಅಹಂಕಾರ ರಹಿತನಾದ (ಗರ್ವವಿಲ್ಲದ), ಆತ್ಮವಿತ್ = ಶ್ರೀಹರಿಯೇ ಸರ್ವೋತ್ತಮನೆಂಬ ಜ್ಞಾನವುಳ್ಳ ಅಥವಾ ಆತ್ಮವಿತ್ = ಸರ್ವೋತ್ತಮನಾದ ಶ್ರೀಹರಿಯೇ ಪರಮಾತ್ಮನೆಂದರಿತಿದ್ದ, ನೃಪಃ = ನರಪತಿಯಾದ ಆ ಜನಕರಾಯನು, ವಾಸುದೇವ ಪ್ರಸಾದಸ್ಯ = ಶ್ರೀವಿಷ್ಣುವಿನ ಅನುಗ್ರಹಕ್ಕೆ, ಮುಖ್ಯಪಾತ್ರಃ = ಪ್ರಮುಖಪಾತ್ರನು (ಮುಖ್ಯಾನುಗ್ರಹಕ್ಕೆ ಯೋಗ್ಯನು) ಅಭವತ್ = ಆಗಿದ್ದನು. ತಸ್ಯ = ಆ ಜನಕ ರಾಜನಿಗೆ, ಕುಶಕೇತುಃ = ಕುಶಧ್ವಜನು, ಇತಿ = ಎಂದು, ಸ್ಮೃತಃ = ಪ್ರಸಿದ್ಧನಾದ, ಭ್ರಾತಾ = ಸಹೋದರನು, ಪೂರ್ವಂ = ಹಿಂದೆ, ಅಭವತ್ = ಆಗಿದ್ದನು, ಕುಶಧ್ವಜಸ್ಯ = ಆ ಕುಶಕೇತುವಿಗೆ, ತ್ರೈಲೋಕ್ಯಸುಂದರಾಃ = ತ್ರಿಲೋಕಸುಂದರಿಯರಾದ, ತ್ರಯಃ = ಮೂವರು, ತನಯಾಃ = ಹೆಣ್ಣುಮಕ್ಕಳು, ಅಭವನ್ = (ಆದರು), ॥ ಜನಕಭೂಪತಿಃ = ಜನಕರಾಯನು, ಭ್ರಾತ್ರಾ = ಸಹೋದರನಾದ ಕುಶಧ್ವಜನಿಂದ, ರಾಜ್ಯಂ = ಕಾಶೀದೇಶದ ರಾಜ್ಯಭಾರವನ್ನು, ಕಾರಯಾಮಾಸ = ಮಾಡಿಸಿದನು. ಆರ್ಯೇಷು = ಪೂಜ್ಯರಾದ ಹಿರಿಯರಲ್ಲಿ, ಭಕ್ತಿಮಾನ್ = ಭಕ್ತಿಯುಳ್ಳ, ಸಃ = ಕುಶಧ್ವಜನು, ಭ್ರಾತುಃ = ಅಣ್ಣನಾದ ಜನಕರಾಜನ, ಆಜ್ಞಯಾ = ಆಜ್ಞೆಯಿಂದ (ನಿತ್ಯಂ = ನಿತ್ಯವೂ) ರಾಜ್ಯಂ = ಕಾಶೀರಾಜ್ಯವನ್ನು, ಚಕಾರ = ಪರಿಪಾಲನೆಮಾಡಿದನು ॥ 5 – 9 ॥

1) ತ್ರಯ ತಸ್ಯ, 2) ನಿತ್ಯಂ

ಕದಾಚಿಜ್ಜನಕೋ ರಾಜಾ ಮನಸೀತ್ಥಮಚಿಂತಯತ್ ।
ಸುಖಮೇವ ಸದಾ ಮೇ ಸ್ಯಾದ್ದುಃಖಂ ಮಾಭೂದಿತಿ ಸ್ಮರನ್ ॥ 10 ॥

ದುಃಖಂ ನ ಪಶ್ಯೇ ನೇತ್ರಾಭ್ಯಾಂ ಸುಖಂ ಪಶ್ಯೇ ಸದಾಽಽತ್ಮನಃ ।
ಅಸಾಧುಸಮ್ಮತಂ ವಾಕ್ಯಂ ಶ್ರುತ್ವಾ ತದುದಿತಂ ಹರಿಃ ॥ 11 ॥

ದುಃಖಂ ಪ್ರದರ್ಶಯಾಮಾಸ ರಾಜ್ಯಮತ್ತಸ್ಯ ಭೂಪತೇಃ ।
ಕದಾಚಿದ್ದೈವಯೋಗೇನ ಕುಶಕೇತುರಗಾನ್ಮೃತಿಮ್ ॥ 12 ॥

ಹತೇಽನುಜೇತು ತದ್ಭಾರ್ಯಾ ತೇನ ಸಾಕಂ ಮಮಾರ ಹ ।
[3]ರಾಜ್ಯ ಪುತ್ರಾಂಸ್ತತಸ್ತ್ಯಕ್ತ್ವಾ ಜಗಾಮ ಪತಿಲೋಕತಾಮ್ ॥ 13 ॥

ತೌದಂಪತೀ ನೃಪೋ ದೃಷ್ಟ್ವಾ ತ್ಯಕ್ತಪುತ್ರೌ ಸುಖೋಚಿತೌ ।
ವಿಲಲಾಪ ಮಹಾರಾಜಾ ಭ್ರಾತರಂ ಭ್ರಾತೃವಲ್ಲಭಾಮ್ ॥ 14 ॥

ಹಾ ಭದ್ರೇ! ಬಾಲಕಾನ್ತ್ಯಕ್ತ್ವಾ ವೃದ್ಧಂ ಮಾಂ ಜನಕಂ ತಥಾ ।
ಕ್ವ ಗಚ್ಛಸಿ ವರಾರೋಹೇ ಪತಿಮಾಲಿಂಗ್ಯ ಮಂಗಲೇ ॥ 15 ॥

ಅಶೀತಿವರ್ಷಸಾಹಸ್ರಂ ಸಂಪ್ರಾಪ್ತಂ ಮಮ ಭಾಮಿನಿ ।
ಏತಾವತ್ಕಾಲಪರ್ಯಂತಂ ಅದೃಷ್ಟಂ ದುಃಖಸಂಚಯಮ್ ॥ 16 ॥

ಅದ್ಯ ದೃಷ್ಟಂ ವರಾರೋಹೆ ತ್ವದ್ವಿಯೋಗೇನ ಕೇವಲಮ್ ।
ಇತಿ ಸಂಚಿತ್ಯ ಮನಸಾ ವಾರಂ ವಾರಂ ಮಹೀಪತಿಃ ॥ 17 ॥

ಚಕಾರ ಪ್ರೇತಕಾರ್ಯಾಣಿ ಪುತ್ರಾಣಾಂ ಚೈವ ಶೈಶವಾತ್ ।
ಮಾತೃಹೀನಾನ್ನೃಪೋ ಬಾಲಾನಾಲಿಂಗ್ಯಾಂಕೇ ನಿಧಾಯ ಚ ॥ 18 ॥

ಭೋ ಪುತ್ರಾ ಬಾಲಭಾವೇಪಿ ಮಾತೃಹೀನಾಶ್ಚ ಕರ್ಶಿತಾಃ ।
ಕಥಂ ಪಶ್ಯಾಮಿ ನೇತ್ರಾಭ್ಯಾಂ ಮಾತೃಹೀನಾಂಶ್ಚ ಬಾಲಕಾನ್ ॥ 19 ॥

ಸ ತು (ಚ) ಚಿಂತಾಪರೋ ಭೂತ್ವಾ ತ್ಯಕ್ತರಾಜ್ಯೋಽತಿ ದುಃಖಿತಃ ।
ತ್ಯಕ್ತಾನ್ನಸ್ತ್ಯಕ್ತಭೋಗಶ್ಚ ತ್ಯಕ್ತನಿದ್ರೋಽತಿಕರ್ಶಿತಃ ॥ 20 ॥

ಕದಾಚಿತ್ = ಒಂದಾನೊಂದು ಸಮಯ, ರಾಜಾ = ದೊರೆಯಾದ, ಜನಕಃ = ಜನಕರಾಯನು, ಮನಸಿ = ಮನಸ್ಸಿನಲ್ಲಿ ಇತ್ಥಂ = ಈ ಪ್ರಕಾರವಾಗಿ, ಅಚಿಂತಯತ್ = ಯೋಚನೆಮಾಡಿದನು, ಮೇ = ನನಗೆ, ಸದಾ = ಸರ್ವದಾ, ಸುಖಮೇವ = ಸುಖವೇನೇ, ಸ್ಯಾತ್ = ಉಂಟಾಗಲಿ, ದುಃಖಂ = ದುಃಖವು, ಮಾಭೂತ್ = ಆಗದಿರಲಿ, ಇತಿ = ಹೀಗೆ, ಸ್ಮರನ್ = ನೆನೆದು, ಸದಾ = ಯಾವಾಗಲೂ, ಆತ್ಮನಃ = ನನ್ನ ಸುಖಂ = ಸುಖವನ್ನೇ, ಪಶ್ಯೇ = ನೋಡುತ್ತೇನೆ, ನೇತ್ರಾಭ್ಯಾಂ = ಕಣ್ಣುಗಳಿಂದ, ದುಃಖಂ = ದುಃಖವನ್ನು, ನಪಶ್ಯೇ = ನೋಡಲಾರೆ (ಎಂಬುದಾಗಿ ಯೋಚಿಸಿದನೆಂದು

3) ರಾಜ್ಯಂ ಪುತ್ರಾನ್ತತಸ್ತ್ಯಕ್ತ್ವಾ

ಭಾವ). ಹರಿಃ = ಶ್ರೀಹರಿಯು, ತದುದಿತಂ = ಅವನಿಂದ ಹೇಳಲ್ಪಟ್ಟ (ಅವನು ಹೇಳಿದ), ಅಸಾಧುಸಮ್ಮತಂ = ಅಯೋಗ್ಯರಿಗೆ ಯುಕ್ತವಾದ, ವಾಕ್ಯಂ = ವಚನವನ್ನು, ಶ್ರುತ್ವಾ = ಕೇಳಿ, ರಾಜ್ಯಮತ್ತಸ್ಯ = ರಾಜವೈಭವಾದಿಗಳಿಂದ ಮದಿಸಿದ (ಮತ್ತನಾದ), ಭೂಪತೇಃ = ಜನಕರಾಜನಿಗೆ, ದುಃಖಂ = ದುಃಖವನ್ನು, ಪ್ರದರ್ಶಯಾಮಾಸ = ತೋರಿಸಿದನು. ಕದಾಚಿತ್ = ಒಂದುದಿನ, ದೈವಯೋಗೇನ = ದೈವೇಚ್ಛೆಯಿಂದ ಕುಶಕೇತು = ಕುಶಧ್ವಜನು, ಮೃತಿಂ = ಮರಣವನ್ನು, ಅಗಾತ್ = ಹೊಂದಿದನು. ಅನುಜೇ = ತಮ್ಮನಾದ ಕುಶಧ್ವಜನು, ಹತೇ = ಮರಣಿಸಲ್ಲು, ತದ್ಭಾರ್ಯಾ = ಕುಶಧ್ವಜನ ಪತ್ನಿಯು, ತೇನಸಾಕಂ = ಪತಿಯೊಡನೆ, ಮಮಾರಹ = ಮರಣಿಸಿದಳು (ಸಹಗಮನ ಮಾಡಿದಳು), ತತಃ = ಆನಂತರ, ರಾಜ್ಯಂ ಪುತ್ರಾಂಶ್ಚ (ರಾಜ್ಯಪುತ್ರಾನ್) = ರಾಜ್ಯಸುಖವನ್ನೂ ಮತ್ತು ಮಕ್ಕಳನ್ನೂ, ತ್ಯಕ್ತ್ವಾ = ಬಿಟ್ಟು, ಪತಿಲೋಕತಾಂ = ಪತಿಯು ಪಡೆದ ಲೋಕವನ್ನು ಕುರಿತು, ಜಗಾಮ = ತೆರಳಿದಳು. ನೃಪಃ = ಜನಕಭೂಪತಿಯು, ಸುಖೋಚಿತೌ = ಸುಖಿಸಲು ಅರ್ಹರಾದ, ತ್ಯಕ್ತಪುತ್ರೌ = ಮಕ್ಕಳನ್ನು ತ್ಯಜಿಸಿದ, ತೌ ದಂಪತಿ = ಮರಣಿಸಿದ ಆ ದಂಪತಿಗಳನ್ನು, ದೃಷ್ಟ್ವಾ = ನೋಡಿ, ಮಹಾರಾಜಃ = ಜನಕರಾಯನು, ಭ್ರಾತೃವಲ್ಲಭಾಂ = ಸಹೋದರನನ್ನು ಮತ್ತು ಅವನ ಪ್ರಿಯಳನ್ನು ಕುರಿತು, ವಿಲಲಾಪ = ವಿಲಪಿಸಿದನು. ಹಾ ಭದ್ರೇ = ಅಯ್ಯೋ ಮಂಗಳಕರಳೇ, ವರಾರೋಹೇ = ಉತ್ತಮ ಪ್ರದೇಶವುಳ್ಳವಳೇ, ಪತಿಮಾಲಿಂಗ್ಯ = ಗಂಡನನ್ನು ಆಲಿಂಗಿಸಿಕೊಂಡು, ಬಾಲಕಾನ್ = ಹುಡುಗರನ್ನು, ತಥಾ = ಹಾಗು, ವೃದ್ಧಂ = ವೃದ್ಧನಾದ, ಜನಕಂ = ತಂದೆಯಂತಿರುವ, ಮಾಂ = ನನ್ನನ್ನೂ, ತ್ಯಕ್ತ್ವಾ = ಬಿಟ್ಟು ಮಂಗಲೇ = ಶುಭಕರಳೇ, ಕ್ವಗಚ್ಛಸಿ = ಎಲ್ಲಿಗೆ ಹೋಗುತ್ತಿದ್ದೀಯೆ? ಭಾಮಿನಿ = ಎಲೌ ಕುಶಧ್ವಜನ ಪತ್ನಿಯೇ, ಮಮ = ನನಗೆ, ಅಶೀತಿವರ್ಷಸಾಹಸ್ರಂ = ಎಂಭತ್ತುಸಾವಿರವರ್ಷಗಳು, ಸಂಪ್ರಾಪ್ತಂ = ಬಂದೊದಗಿದೆ. ಏತಾವತ್ಕಾಲ ಪರ್ಯಂತಂ = ಇಂದಿನವರೆವಿಗೂ ದುಃಖ ಸಂಚಯಂ = ದುಃಖ ಪರಂಪರೆಯು, ಅದೃಷ್ಟಂ = ನನ್ನಿಂದ ನೋಡಲ್ಪಡಲಿಲ್ಲ, ವರಾರೋಹೇ = ಶ್ರೇಷ್ಠವಾದ ಉಬ್ಬಿದ ಪ್ರದೇಶವುಳ್ಳವಳೇ (ಆರೋಹ ಪ್ರದೇಶ ಉಳ್ಳವಳೇ), ಅದ್ಯ = ಈವಾಗ, ತ್ವದ್ವಿಯೋಗೇನ = ನಿನ್ನ ವಿಯೋಗದಿಂದ, ಕೇವಲಂ = ಹೆಚ್ಚಾಗಿ, ದೃಷ್ಟಂ = ನೋಡಲ್ಪಟ್ಟಿತು. (ದುಃಖಪರಂಪರೆಯು ಅನುಭವಿಸಲ್ಪಟ್ಟಿತೆಂದು ಭಾವ), ಇತಿ = ಹೀಗೆ ಮಹೀಪತಿಃ = ಜನಕರಾಜನು, ಮನಸಿ = ಮನದಲ್ಲಿ, ವಾರಂವಾರಂ = ಪುನಃಪುನಃ ಸಂಚಿಂತ್ಯ = ಚಿಂತಿಸಿ, ಪುತ್ರಾಣಾಂ = ಕುಶಧ್ವಜನ ಮಕ್ಕಳಿಗೆ, ಶೈಶವಾತ್ = ಬಾಲ್ಯವಾದದ್ದರಿಂದ ಪ್ರೇತಕಾರ್ಯಾಣಿ = ಉತ್ತರಕ್ರಿಯೆಗಳನ್ನು ಚಕಾರ = ಮಾಡಿದನು. ನೃಪಃ = ರಾಜಾ ಜನಕನು, ಮಾತೃಹೀನಾನ್ = ತಾಯಿಯಿಲ್ಲದ, ಬಾಲಾನ್ = ಬಾಲಕರನ್ನು, ಆಲಿಂಗ್ಯ = ಅಪ್ಪಿಕೊಂಡು, ಅಂಕೇನಿಧಾಯ = ತೊಡೆಯ ಮೇಲೆ ಕೂಡಿಸಿಕೊಂಡು, ಭೋಪುತ್ರಾಃ = ಎಲೈ ಮಕ್ಕಳೇ, ಬಾಲಭಾವೇಪಿ = ಸಣ್ಣವಯಸ್ಸಿನಲ್ಲೇ, ಮಾತೃಹೀನಾಃ = ತಾಯಿಯನ್ನು ಕಳೆದುಕೊಂಡು, ಕರ್ಶಿತಾಃ = (ಕೃಶರಾಗಿದ್ದೀರಿ), ನೇತ್ರಾಭ್ಯಾಂ = (ನನ್ನೀ) ಕಣ್ಣುಗಳಿಂದ, ಮಾತೃಹೀನಾನ್ = ತಾಯಿಯಿಲ್ಲದ, ಬಾಲಕಾನ್ = ಮಕ್ಕಳಾದ ನಿಮ್ಮನ್ನು, ಕಥಂ = ಎಂತು, ಪಶ್ಯಾಮಿ = ನೋಡಿಯೇನು? ಸ ತು = ಆ ಜನಕರಾಯನು, ಚಿಂತಾಪರಃ = ವ್ಯಥೆ (ಚಿಂತಾಯುಕ್ತನು) ಯುಳ್ಳವನು ಭೂತ್ವಾ = ಆಗಿ, ತ್ಯಕ್ತರಾಜ್ಯ = ರಾಜ್ಯಾಡಳಿತಾದಿಗಳನ್ನು ಕಡೆಗಣಿಸಿ, ಅತಿದುಃಖಿತಃ = ಅತಿಶಯದುಃಖಿಯಾಗಿ, ತ್ಯಕ್ತಾನ್ನಃ = ಅನ್ನಾಹಾರಗಳನ್ನು ಬಿಟ್ಟು, ತ್ಯಕ್ತಭೋಗಶ್ಚ = ರಾಜಭೋಗ (ಸುಖ)ಗಳನ್ನು ತೊರೆದು, ತ್ಯಕ್ತನಿದ್ರಃ = ನಿದ್ರಾರಹಿತನಾಗಿ, ಅತಿಕರ್ಶಿತಃ = ತುಂಬಾಕೃಶನಾಗಿ, (ಸ್ಥಿತಃ = ಕಾಲಯಾಪನೆ ಮಾಡುತ್ತಿದ್ದನು) ।। 10-20 ।।

**ತಸ್ಯ ದುಃಖಸ್ಯ ಶಾಂತ್ಯರ್ಥಂ ಶತಾನಂದಃ ಪುರೋಹಿತಃ ।**
**ಸಂಪ್ರಾಪ್ತೋ ದೈವಯೋಗೇನ ವಾಮದೇವಾನುಜೋ ಮುನಿಃ ।। 21 ।।**

**ಪ್ರಾಪ್ತಂ ಪುರೋಹಿತಂ ದೃಷ್ಟ್ವಾ ರಾಜಾ ಪೂಜಾಮಕಲ್ಪಯತ್ ।**
**ಸಂಪೂಜಿತೋ ಮುನಿವರಃ ಪ್ರವಿಷ್ಟೋ ಮೃಗಚರ್ಮಣಿ ।। 22 ।।**

**ತತಃ ಕಾಲೋಚಿತಂ ವಾಕ್ಯಂ ಕಥಯಾಮಾಸ ಗೌತಮಿಮ್ ।**

*ಜನಕ ಉವಾಚ –*

**ಶತಾನಂದ ಮಹಾಪ್ರಾಜ್ಞ ಕಾ ಗತಿಃ ಪುರತೋ ಮಮ ॥ 23 ॥**

**ವೃದ್ಧತ್ವಾದಾತ್ಮನಶ್ಚೈವ ಪುತ್ರಾಣಾಂ ಚೈವ ಶೈಶವಾತ್ ।**
**ಕನ್ಯಾನಾಂ ಚ ವರಾಭಾವಾದ್ಧತಬಂಧೋರ್ಮಹಾಮುನೇ ॥ 24 ॥**

**ಬಹವಃ ಶತ್ರವಸ್ಸಂತಿ ರಾವಣೇಂದ್ರಜಿತಾದಯಃ ।**
**ತೇಭ್ಯೋಯುದ್ಧಂ ಕಥಂ ದಾಸ್ಯೇ ಅಸಹಾಯೋತಿಜೀರ್ಣವಾನ್ ॥ 25 ॥**

**ದಿವಾ ನಕ್ತಂ ಸಮಾಯಾತಿ ರಾವಣಃ ಕೇನ ಹೇತುನಾ ।**
**ನ ಜಾನೇ ಮುನಿವರ್ಯಾಹಂ ಪ್ರಜ್ಞಾಚಕ್ಷುರ್ನವಿದ್ಯತೇ ॥ 26 ॥**

**ನಿಮಿತ್ತಮೇಕಂ ಕಥಿತಂ ದ್ವಿತೀಯಂ ಪ್ರವದಾಮ್ಯಹಮ್ ।**
**ಸೀತಾಯಾಶ್ಚಾತಿರೂಪಾಯಾಃ ಸುರೂಪಃ ಪುರುಷೋ ಯಥಾ ॥ 27 ॥**

**ಲಭ್ಯತೇ ವದ ವಿಪೇಂದ್ರ ತೃತೀಯಂ ಪ್ರವದಾಮಿ ತೇ ।**
**ಧೀರ್ಘಾಯುಷಶ್ಚ ಮೇ ಪುತ್ರಾಃ ಪುತ್ರ್ಯಶ್ಚಾಪಿ ಸಭರ್ತೃಕಾಃ ॥ 28 ॥**

**ಏಕದೇಶಾಧಿಪಸ್ಯೈವ ಸ್ನುಷಾಸ್ತಾಶ್ಚ ಭವಂತ್ವಿತಿ ।**
**ಜಾಮಾತರಶ್ಚ ಚತ್ವಾರಶ್ಚೈಕರಾಜಸುತಾಸ್ತಥಾ ॥ 29 ॥**

**ಭ್ರಾತೃಹೀನಸ್ಯ ಮೇ ರಾಜ್ಯಂ ಸ್ವಯಮೇವ ಪುರೋಹಿತ ।**
**ಕೇನೋಪಾಯೇನ ಭೂಯಾದ್ಧಿ ಇತಿ ತತ್ಕಾರಣಂ ವದ ॥ 30 ॥**

ತಸ್ಯ = ಜನಕರಾಯನು, ದುಃಖಸ್ಯ = ದುಃಖದ (ವ್ಯಥೆಯ), ಶಾಂತ್ಯರ್ಥಂ = ಸಮಾಧಾನಾರ್ಥವಾಗಿ, ಪುರೋಹಿತಃ = ರಾಜಪುರೋಹಿತನಾದ, ವಾಮದೇವಾನುಜಃ = ವಾಮದೇವ ಋಷಿಯ ತಮ್ಮನಾದ, ಶತಾನಂದಃ = ಶತಾನಂದನಾಮಕನಾದ, ಮುನಿಃ = ಮುನಿಯು, ದೈವಯೋಗೇನ = ದೈವೇಚ್ಛೆಯಿಂದ, ಸಂಪ್ರಾಪ್ತಃ = ಆಗಮಿಸಿದನು. ರಾಜಾ = ಜನಕಮಹೀಪತಿಯು, ಪ್ರಾಪ್ತಂ ಬಂದಿರುವ, ಪುರೋಹಿತಂ = ಪುರೋಹಿತನಾದ ಶತಾನಂದಮುನಿಯನ್ನು, ದೃಷ್ಟ್ವಾ = ನೋಡಿ, ಪೂಜಾಂ = ಅರ್ಘ್ಯಪಾದ್ಯಾದಿ ಪೂಜೆಗಳನ್ನು ಅಕಲ್ಪಯತ್ = ನೆರವೇರಿಸಿದನು. ಮುನಿವರಃ = ಮನನಶೀಲರಲ್ಲಿ ಉತ್ತಮನಾದ ಶತಾನಂದನು, ಸಂಪೂಜಿತಃ = ಪೂಜಿತನಾಗಿ, ಮೃಗಚರ್ಮಣಿ = ಕೃಷ್ಣಾಜಿನದ (ಜಿಂಕೆಯ ಚರ್ಮದ) ಮೇಲೆ, ಪ್ರವಿಷ್ಟಃ = ಕುಳಿತುಕೊಂಡನು. ತತಃ = ಆನಂತರ, ಜನಕರಾಯನು, ಗೌತಮಿಂ = ಗೌತಮಋಷಿಗಳ ಪುತ್ರರಾದ ಶತಾನಂದರನ್ನು ಕುರಿತು, ಕಾಲೋಚಿತಂ = ದೊಡ್ಡವರು ಮನೆಗೆ ಬಂದಾಗ ಮಾಡಬೇಕಾದ ಕುಶಲಪ್ರಶ್ನಾದಿ ಕಾಲೋಚಿತವಾದ, ವಚನಂ = ಮಾತನ್ನು, ಕಥಯಾಮಾಸ = ಹೇಳಿದನು. ಜನಕ ಉವಾಚ = ಜನಕರಾಯನು ಹೀಗೆ ಮಾತನಾಡಿದನು. ಮಹಾಮುನೇ = ಮಹರ್ಷಿಯಾದ, ಮಹಾಪ್ರಾಜ್ಞ = ಸಕಲ ವಿಚಾರಗಳನ್ನೂ ವಿಶೇಷವಾಗಿ ತಿಳಿದಿರುವ,

ಶತಾನಂದ = ಶತಾನಂದಮುನಿಯೇ!, ಆತ್ಮನಶ್ಚ = ನನಗೆ, ವೃದ್ಧತ್ವಾತ್ = ವೃದ್ಧತ್ವವಿರುವುದರಿಂದಲೂ, ಪುತ್ರೀಣಾಂ = ಮಕ್ಕಳಿಗೆ, ಶೈಶವಾಚ್ಚೈವ = ಬಾಲ್ಯವಾಗಿರುವುದರಿಂದಲೂ, ಚ = ಮತ್ತು, ಕನ್ಯಾನಂ = ಸೀತಾದೇವಿ, ಮಾಂಡವಿ, ಶ್ರುತಕೀರ್ತಿ, ಹಾಗೂ ಊರ್ಮಿಳೆಯರೆಂಬ ನಾಲ್ವರು ಹೆಣ್ಣುಮಕ್ಕಳಿಗೆ, ವರಾಭಾವಾತ್ = ವಿವಾಹಮಾಡಿಕೊಡಲು ಅನುರೂಪರಾದ ವರಗಳು ಇಲ್ಲದಿರುವುದರಿಂದಲೂ, ಹತಬಂಧೋಃ = ಸಹೋದರನನ್ನು ಕಳೆದುಕೊಂಡಿರುವ (ಮಮ = ನನಗೆ), ಪುರತಃ ಮುಂದೆ, ಕಾಗತಿಃ? = ಗತಿಯೇನು?, ರಾವಣೇಂದ್ರ ಜಿತಾದಯಃ = ರಾವಣ, ಅವನ ಮಗನಾದ ಇಂದ್ರಜಿತ್ (ಮೇಘನಾದ) ಮೊದಲಾದ, ಬಹವಃ = ಅನೇಕ, ಶತ್ರವಃ = ವೈರಿಗಳು, ಸಂತಿ = ಇದ್ದಾರೆ. ಅಸಹಾಯಃ = ಸಹಾಯಕರಿಲ್ಲದಿರುವ, ಅತಿಜೀರ್ಣವಾನ್ = (ಗಲಿತಾಂಗನಾದ) ದೇಹಶಕ್ತಿ ಕುಂದಿರುವ, (ಅಹಂ = ನಾನು), ತೇಭ್ಯಃ = ರಾವಣಾದಿ ನನ್ನ ಶತ್ರುಗಳಿಗೆ, ಯುದ್ಧಂ = ಯುದ್ಧವನ್ನು, ಕಥಂ = ಹೇಗೆ, ದಾಸ್ಯೇ = ಕೊಟ್ಟೇನು!, ಮುನಿವರ್ಯ = ಎಲೈ ಮುನಿವರನೇ, ರಾವಣಃ = ರಾವಣನು, ಇಹ = ಇಲ್ಲಿಗೆ, ದಿವಾನಕ್ತಂ = ಹಗಲು-ರಾತ್ರಿಯಲ್ಲಿಯೂ ಸಹ, ಕೇನ ಹೇತುನಾ = ಅದಾವ ಕಾರಣದಿಂದ, ಸಮಾಯಾತಿ = ಬರುತ್ತಿರುವನೋ, ನ ಜಾನೇ = ಅದರ ನಿಮಿತ್ತವನ್ನು ನಾನು ಅರಿತಿಲ್ಲ (ಅರಿಯೆನು), ಪ್ರಜ್ಞಾಚಕ್ಷುಃ = ನನಗೆ ಜ್ಞಾನದೃಷ್ಟಿಯು, ನವಿದ್ಯತೇ = ಇರುವುದಿಲ್ಲ, ಏಕಂ = ಒಂದು, ನಿಮಿತ್ತಂ = ಕಾರಣವು, ಕಥಿತಂ = ಹೇಳಲ್ಪಟ್ಟಿತು, ಅಹಂ = ಈಗ ನಾನು, ದ್ವಿತೀಯಂ = ಎರಡನೆಯ ಕಾರಣವನ್ನು, ಪ್ರವದಾಮಿ = ಹೇಳುತ್ತೇನೆ. ಅತಿರೂಪಾಯಾಃ = ಅತಿಸೌಂದರ್ಯವುಳ್ಳ, ಸೀತಾಯಾಃ = ಸೀತಾದೇವಿಗೆ, ಸುರೂಪಃ = ಸುಂದರನಾದ, ಪುರುಷಃ = ವರನು, ಯಥಾ = ಹೇಗೆ, ಲಭ್ಯತೇ = ದೊರಕುವನೆಂಬುದನ್ನು (ವದ = ಹೇಳು), ವಿಪ್ರೇಂದ್ರ = ದ್ವಿಜೋತ್ತಮ, ತೃತೀಯಂ = ಮೂರನೆಯ ಕಾರಣವನ್ನು ತೇ = ನಿನಗೆ, ಪ್ರವದಾಮಿ = ಹೇಳುವೆನು. ಮೇ = ನನ್ನ, ಪುತ್ರಾಃ = ಗಂಡುಮಕ್ಕಳು, ದೀರ್ಘಾಯುಷಃ = ದೀರ್ಘಾಯುಷ್ಯವಂತರಾಗಿಯೂ, ಪುತ್ರ್ಯಃ = ಹೆಣ್ಣುಮಕ್ಕಳು, ಸಭರ್ತೃಕಾಃ = ಗಂಡಂದಿರಿಂದೊಡಗೂಡಿ, ಸುಮಂಗಲಿಯರಾಗಿಯೂ, (ತಾಃ = ಅವರು) ಏಕದೇಶಾಧಿಪಸ್ಯೈವ = ಒಂದು ದೇಶಾಧಿಪತಿಯ, ಸ್ನುಷಾಃ = ಸೊಸೆಯರು, ಭವಂತು = ಆಗಲಿ, ಇತಿ = ಹೀಗೆ, ಚತ್ವಾರಃ = ನಾಲ್ವರು, ಜಾಮಾತರಃ = ಅಳಿಯಂದಿರು, ತಥಾ = ಹಾಗೆಯೇ, ಏಕರಾಜಸುತಾಃ = ಒಬ್ಬರಾಜನ ಮಕ್ಕಳಾಗಿರಬೇಕು. ಪುರೋಹಿತ = ಪುರೋಹಿತರಾದ ಶತಾನಂದಮುನಿಗಳೇ, ಭ್ರಾತೃಹೀನಸ್ಯ = ಸಹೋದರನಿಲ್ಲದಿರುವ, ಮೇ = ನನಗೆ, ಸ್ವಯಮೇವ = ಸ್ವತಃ (ನನ್ನಿಂದಲೇ), ರಾಜ್ಯಂ = ರಾಜ್ಯವು ಕೇನೋಪಾಯೇನ = ಯಾವ ಉಪಾಯದಿಂದ, ಭೂಯಾದ್ಧಿ = ತೊಂದರೆಯಿಲ್ಲದೆ ನಡೆದೀತು?, ತತ್ಕಾರಣಂ - ತತ್ = ರಾಜ್ಯಭಾರವು ಸಕ್ರಮವಾಗಿ ಜರುಗಲು, ಕಾರಣಂ = ಕಾರಣವನ್ನು, ಇತಿ = ಈ ರೀತಿಯಾದರೆ ಸಾಧ್ಯ ಎಂಬುದನ್ನು, ವದ = ಹೇಳು. ॥ 21-30 ॥

*ಮೂಲ— ಶತಾನಂದ ಉವಾಚ -*

**ಅಸ್ತಿ ಕಶ್ಚಿದ್ವಿಶೇಷೋಽಸ್ಮಿನ್ ಭೂಲೋಕೇ ಭೂಮಿಪಾಲಕ ।**
**ದುಹಿತುಸ್ತವ ಕಲ್ಯಾಣಂ ಸುಖದಂ ಶತ್ರುನಾಶನಮ್** ॥ 31 ॥

**ವೈಕುಂಠಗಿರಿಮಾಹಾತ್ಮ್ಯಂ ಸಭವಿಷ್ಯಂ ಸಹೋತ್ತರಮ್ ।**
**ಕಲೌ ತತ್ಕೀರ್ತನಂ ಪುಣ್ಯಂ ಸರ್ವದುಃಖಹರಂ ಶಿವಮ್** ॥ 32 ॥

**ಧನಕಾಮಸ್ಯ ಧನದಂ ಪುತ್ರಕಾಮಸ್ಯ ಪುತ್ರದಮ್ ।**
**ರೋಗಾರ್ತಾನಾಂ ರೋಗಹರಂ ಜ್ಞಾನಿನಾಂ ಜ್ಞಾನಸಾಧನಮ್** ॥ 33 ॥

**ಯಚ್ಛ್ರುತ್ವಾ ಸರ್ವಲೋಕೇಶೋ ಬ್ರಹ್ಮಾ ಬ್ರಹ್ಮಪದಂಗತಃ ।**
**ನೀಲಕಂಠ ಇದಂ ಶ್ರುತ್ವಾ ನಿರ್ವಿಷಃ ಸುಖಮಾಪ್ತವಾನ್ ॥ 34 ॥**

**ವಜ್ರೀ ನಾಕಪದಂ ಪ್ರಾಪ್ತೋ ಯತ್ಕಥಾ ಶ್ರವಣಾದರಾತ್ ।**
**ಕಿಮುಕ್ತೇನ ವಿಶೇಷೇಣ ತತ್ಫಲಂ ಕ್ಷಿಪ್ರಮೈಷ್ಯಸಿ ॥ 35 ॥**

**ಇತ್ಯುಕ್ತೋ ಮುನಿನಾಥೇನ ಜನಕೋ ವಾಕ್ಯಮಬ್ರವೀತ್ ।**

*ಜನಕ ಉವಾಚ -*

**ವದ ವೈಕುಂಠಮಹಾತ್ಮ್ಯಂ ಕಲೌ ತಚ್ಚರಿತಂ ಕಥಮ್ ॥ 36 ॥**

ಶತಾನಂದ ಉವಾಚ = ಶತಾನಂದರು ಹೇಳಿದರು. ಭೂಮಿಪಾಲಕ = ಧರೆಯನ್ನು ರಕ್ಷಿಸುವ ಜನಕಮಹಾರಾಜ ! ಕೇಳು, ಅಸ್ಮಿನ್ = ಈ, ಭೂಲೋಕೇ = ಭೂಲೋಕದಲ್ಲಿ, ಕಶ್ಚಿತ್ = ಒಂದಾನೊಂದು, ವಿಶೇಷಃ = ಮಹಿಮೋಪೇತವಾದ, ವಿಶೇಷ ಸ್ಥಳವು (ಕ್ಷೇತ್ರವು) ಷ ಅಸ್ತಿ = ಇರುವುದು, ತವ = ನಿನ್ನ, ದುಹಿತುಃ = ಪುತ್ರಿಯಾದ ಸೀತಾದೇವಿಯು, ಕಲ್ಯಾಣಂ = ಮದುವೆಯು, ಸುಖದಂ = ಮುಂದೆ ನಿನಗೆ ಕ್ಷೇಮಕರವಾದುದೂ, ಶತ್ರುನಾಶನಂ = ರಾವಣಾದಿ ನಿನ್ನ ಎಲ್ಲ ಶತ್ರುಗಳನ್ನು ನಾಶಪಡಿಸುವುದೂ (ಆಗುವುದು) ॥ 31 ॥ ಸಭವಿಷ್ಯಂ = ಮುಂದೆ ಜರುಗುವ ಚರಿತ್ರೆಯಿಂದ ಕೂಡಿರುವ, (ಭವಿಷ್ಯೋತ್ತರ ಪುರಾಣಾಂತರ್ಗತವಾದ) ಸಹೋತ್ತರಂ = ಪರ್ವತದ ಮೇಲ್ಭಾಗದಲ್ಲಿರುವ ತೀರ್ಥ ದೇವ ಮಹಿಮಾದಿಗಳಿಂದ ಸಹಿತವಾದ; ವೈಕುಂಠಗಿರಿಮಾಹಾತ್ಮ್ಯಂ - ವೈಕುಂಠ = ವೈಕುಂಠವೆಂಬ ಹೆಸರಿನ, ಗಿರಿ = ಪರ್ವತದ, ಮಾಹಾತ್ಮ್ಯಂ = ಮಹಿಮೆಯನ್ನು (ವೇಂಕಟೇಶಮಾಹಾತ್ಮ್ಯವನ್ನು) ನಿರೂಪಿಸುವ ಚರಿತ್ರೆಯು, ಅಸ್ತಿ = ಇರುವುದು. ಕಲೌ = ಕಲಿಯುಗದಲ್ಲಿ, ತತ್ಕೀರ್ತನಂ = ವೈಕುಂಠಗಿರಿಯ ಮಹಿಮೆಯನ್ನು ಹೇಳುವುದು, ಅಂದರೆ ಕೀರ್ತಿಸುವುದು, ಪುಣ್ಯಂ = ಸುಕೃತ (ಧರ್ಮ) ಸಂಪಾದಕವಾದುದು, ಮತ್ತು, ಸರ್ವದುಃಖಹರಂ = ಸಕಲ ವ್ಯಥೆಯನ್ನು ಪರಿಹರಿಸುವಂತಹುದು. ಶಿವಂ = ಶುಭಕರವೂ ಆಗಿದೆ. ॥ 32 ॥ ಧನಕಾಮಸ್ಯ = ದ್ರವ್ಯಾಪೇಕ್ಷಿಗೆ, ಧನಂ = ಧನಪ್ರದವಾದುದೂ, ಪುತ್ರಕಾಮಸ್ಯ = ಸತ್ಪುತ್ರರನ್ನು ಅಪೇಕ್ಷಿಸುವವನಿಗೆ, ಪುತ್ರದಂ = ಮಕ್ಕಳನ್ನು ಕೊಡುವಂತಹದೂ, ರೋಗಾರ್ತಾನಾಂ = ವಿವಿಧ ವ್ಯಾಧಿಗಳಿಂದ ಬಳಲುವವರಿಗೆ, ರೋಗಹರಂ = ರೋಗಪರಿಹಾರಕವಾದುದ್ದಾಗಿಯೂ, ಜ್ಞಾನಿನಾಂ = ಜ್ಞಾನಿಗಳಿಗೆ (ಜ್ಞಾನಾಪೇಕ್ಷಿಗಳಿಗೆ) ಜ್ಞಾನದಂ = ಪರಮಾತ್ಮಜ್ಞಾನ ಸಾಧನವೂ ಆಗಿರುವುದು. ॥ 33 ॥ ಯತ್ = ಯಾವ ವೈಕುಂಠಗಿರಿಯ ಮಹಿಮೆಯನ್ನು, ಶ್ರುತ್ವಾ = ಕೇಳಿ, ಸರ್ವಲೋಕೇಶ್ವರಃ = ಸಮಸ್ತ ಲೋಕಗಳಿಗೆ ಸ್ವಾಮಿಯಾದ, ಬ್ರಹ್ಮಾ = ಚತುರಾನನ ಬ್ರಹ್ಮದೇವರು, ಬ್ರಹ್ಮಪದಂ = ಸತ್ಯಲೋಕಾಧಿಪತ್ಯವನ್ನು (ಬ್ರಹ್ಮಪದವನ್ನು) ಗತಃ = ಪಡೆದರು, ಇದಂ = ಈ ವೈಕುಂಠ ಪರ್ವತದ ಮಹಿಮೆಯನ್ನು ಶ್ರುತ್ವಾ = ಶ್ರವಣಮಾಡಿ, ನೀಲಕಂಠಃ = ರುದ್ರದೇವರು, ನಿರ್ವಿಷಃ = ಅಮೃತಮಥನ ಕಾಲದಲ್ಲಿ ಹುಟ್ಟಿದ ಕಾಲಕೂಟವಿಷದ ಸಂಕಟದಿಂದ ಮುಕ್ತರಾಗಿ, ಸುಖಂ = ಆನಂದವನ್ನು, ಆಪ್ತವಾನ್ = ಹೊಂದಿದರು. ॥ 34 ॥ ವಜ್ರೀ = ವಜ್ರಾಯುಧವುಳ್ಳ, ಇಂದ್ರದೇವರು, ಯತ್ = ಯಾವ, ಕಥಾ = ವೈಕುಂಠಗಿರಿಯ ಮಹಿಮೆಯನ್ನು, ಶ್ರವಣಾದರಾತ್ = ಆದರದಿಂದ ಕೇಳಿದ್ದರಿಂದ, ನಾಕಪದಂ = ಸ್ವರ್ಗಾಧಿಪತ್ಯವನ್ನು, ಪ್ರಾಪ್ತಃ = ಪಡೆದರು. ಕಿಮುಕ್ತೇನ ವಿಶೇಷೇಣ = ಹೆಚ್ಚು ಹೇಳುವುದೇನಿದೆ? ತತ್ಫಲಂ = ವೈಕುಂಠಗಿರಿ ಮಹಾತ್ಮೆಯನ್ನು ಶ್ರವಣ ಮಾಡುವುದರಿಂದ ಲಭಿಸುವ ಫಲವನ್ನು, ಕ್ಷಿಪ್ರಂ = ಶೀಘ್ರವಾಗಿ, ಏಷ್ಯಸಿ = ಹೊಂದುತ್ತೀಯೇ ॥ 35 ॥ ಇತಿ = ಈ ಪ್ರಕಾರವಾಗಿ, ತೇನಮುನಿನಾ = ಆ ಶತಾನಂದ ಮುನಿಗಳಿಂದ, ಉಕ್ತಃ = ಹೇಳಲ್ಪಟ್ಟ ಜನಕರಾಯನು, ವಾಕ್ಯಂ =

ಮುಂದೆ ನಿರೂಪಿಸುವ ರೀತಿಯಲ್ಲಿ, ಅಬ್ರವೀತ್ = ಹೇಳಿದನು. ಜನಕ ಉವಾಚ = ಜನಕರಾಯನು ಮಾತನಾಡಿದನು. ವೈಕುಂಠಮಾಹಾತ್ಮ್ಯಂ = ವೈಕುಂಠಪರ್ವತದ ಮಹಿಮೆಯನ್ನೂ, ಕಲೌ = ಕಲಿಯುಗದಲ್ಲಿ, ತತ್ = ಆ ಗಿರಿಯ, ಚರಿತಂ = ಚರಿತ್ರಯು, ಕಥಂ = ಹೇಗೆ ಎಂಬುದನ್ನು, ವದ = ಹೇಳಿರಿ. ॥ 36 ॥

## ಕಥಾಸಾರ

ಪೂರ್ವದಲ್ಲಿ ಅತ್ಯಂತ ಧರ್ಮಿಷ್ಠನೂ, ಸತ್ಯವನ್ನೇ ನುಡಿಯುವವನೂ, ಸಕಲಶಾಸ್ತ್ರಪಾರಂಗತನೂ, ಕ್ರೋಧವಿಲ್ಲದವನೂ ಆದ ಜನಕರಾಯನೆಂಬ ಮಹಾರಾಜನಿದ್ದನು. ಯಾವುದರಲ್ಲಿಯೂ ಮಮತೆಯಿಲ್ಲದ ಆತನು ಸರ್ವದಾ ತೃಪ್ತನಾಗಿದ್ದನು (ಪೂರ್ಣಕಾಮನಾಗಿದ್ದನು), ಅಹಂಕಾರರಹಿತನಾದ ರಾಜನು ಶ್ರೀಹರಿಯೇ ಸರ್ವೋತ್ತಮನೆಂದು ದೃಢವಾಗಿ ಅರಿತಿದ್ದನು. ಆ ಜನಕರಾಯನು ಶ್ರೀ ವಾಸುದೇವನ ಪರಮಾನುಗ್ರಹಕ್ಕೆ ಮುಖ್ಯ ಪಾತ್ರನಾಗಿದ್ದನು. ಅವನಿಗೆ ಕುಶಧ್ವಜನೆಂಬ ವಿಖ್ಯಾತನಾದ ಸಹೋದರನು ಇದ್ದನು. ಆ ತಮ್ಮನಿಗೆ ತ್ರಿಲೋಕ ಸುಂದರಿಯರಾದ ಮೂವರು ಕುಮಾರಿಯರಿದ್ದರು. ಅವರು ಜನಿಸುವ ಮೊದಲೇ ಜನಕರಾಯನಿಗೆ ಅತ್ಯಂತ ಪ್ರೀತ್ಯಾಸ್ಪದಳಾದ ಜಾನಕಿಯೆಂಬ ಪುತ್ರಿಯು ಜನಿಸಿದ್ದಳು. ಆ ಜನಕಭೂಪತಿಯು ತನ್ನ ಸಹೋದರನಾದ ಕುಶಕೇತುವಿನಿಂದ ಕಾಶೀರಾಜ್ಯದ ಪರಿಪಾಲನೆ ಮಾಡಿಸುತ್ತಿದ್ದನು. ಪೂಜ್ಯರಾದ ಹಿರಿಯರಲ್ಲಿ ಭಕ್ತಿಭರಿತನಾಗಿದ್ದ ಆ ಕುಶಧ್ವಜನು ಅಣ್ಣನ ಆಣತಿಯಂತೆ ಕಾಶೀರಾಜ್ಯವನ್ನು ಪಾಲಿಸುತ್ತಿದ್ದನು.

ಒಂದು ದಿನ ಜನಕರಾಜನು ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು:- ನನಗೆ ಯಾವಾಗಲೂ ಸುಖವೇ ದೊರಕುತ್ತಿರಲಿ, ದುಃಖವು ಯಾವಾಗಲೂ ಬರುವುದು ಬೇಡ. ನಾನು ದುಃಖವನ್ನೆಂದಿಗೂ ನೋಡಲಾರೆ. ಸದಾ ಸುಖವನ್ನೇ ಕಾಣುತ್ತಾ ಸುಖವನ್ನನುಭವಿಸುತ್ತಿರುತ್ತೇನೆ. ಆಗ ಶ್ರೀಹರಿಪರಮಾತ್ಮನು ಅಸಜ್ಜನರು ಬಯಸುವ, ಆಡುವಂತೆ ಜನಕರಾಯನಾಡಿದ ಮಾತನ್ನು ಕೇಳಿ ರಾಜ್ಯಭೋಗ-ಸುಖಾಧಿಕ್ಯದಿಂದ ಮದಿಸಿದ ಜನಕರಾಜನಿಗೆ ದುಃಖಪ್ರದರ್ಶನ ಮಾಡಿದನು. ಒಂದು ದಿವಸ ಜನಕಭೂಪತಿಯ ಸಹೋದರನಾದ ಕುಶಧ್ವಜನು ದೈವಯೋಗದಿಂದ ಮೃತನಾದನು. ಅವನು ಮರಣಿಸಿದ ಮೇಲೆ ಕುಶಕೇತುವಿನ ಹೆಂಡತಿಯು ಪತಿಯದೇಹದೊಡನೆ ಸಹಗಮನ ಮಾಡಿ, ರಾಜ್ಯಭೋಗ ಸುಖಗಳನ್ನೂ, ತನ್ನ ಮಕ್ಕಳನ್ನೂ ತ್ಯಜಿಸಿ ಪತಿಯು ಪಡೆದ ಲೋಕವನ್ನೇ ತಾನು ಪಡೆದಳು. ಇದರಿಂದ ಜನಕರಾಜನಿಗೆ ಆಘಾತವಾಯಿತು. ಪುರೋಭಿವೃದ್ಧಿ ಪಡೆದು ಸುಖಿಸಬೇಕಾದ, ಮಕ್ಕಳನ್ನು ಬಿಟ್ಟು ತನ್ನ ಕಣ್ಣೆದುರಿಗೆ ಸಹೋದರ ಮತ್ತು ಅವನ ಪತ್ನಿಯು ಪರಲೋಕ ಸೇರಿದ್ದರಿಂದ ಅವರ ವಿಯೋಗದುಃಖದಿಂದ ಕಡುನೊಂದು ಅವರನ್ನೇ ನೆನೆಯುತ್ತಾ ಜನಕರಾಯನು ಪ್ರಲಪಿಸಿದನು. 'ಅಯ್ಯೋ, ಇದೆಂತಹ ದುಃಖ ಪ್ರಾಪ್ತವಾಯಿತು. ಮನೋಹರಿಯೂ, ಮಂಗಳಕರಳೂ ಆದ ಉತ್ತಮ ಆರೋಹಪ್ರದೇಶರಂಜಿತಳಾಗಿದ್ದ ಪ್ರಿಯ ತಮ್ಮನ ಮಡದಿಯೇ, ಸಣ್ಣವರಾದ ಮಕ್ಕಳನ್ನೂ, ಮುದುಕನಾದ ನನ್ನನ್ನೂ ಬಿಟ್ಟು ಕುಶಧ್ವಜನನ್ನು ಆಲಿಂಗಿಸಿಕೊಂಡು ಚಿತೆಯನ್ನೇರಿ ಎಲ್ಲಿಗೆ ತೆರಳಿದೆಯಮ್ಮ! ಕುಶಕೇತುವಿನ ಅರ್ಧಾಂಗಿನಿಯೇ, ನನಗೀಗ ಎಂಭತ್ತು ಸಾವಿರ ವರ್ಷ ವಯಸ್ಸಾಗಿದೆ. ಇಮುವರೆಗೆ ನಾನು ಯಾವ ಬಗೆಯ ದುಃಖ-ವ್ಯಥೆಗಳನ್ನು ಅನುಭವಿಸಿರಲಿಲ್ಲ, ಈಗ ನಿನ್ನ ವಿಯೋಗದಿಂದ ಹಿಂದೆ ನಾನು ಕಾಣದ ದುಃಖವನ್ನು ಅನುಭವಿಸಿದೆನು'- ಎಂದು ಮತ್ತೆ ಮತ್ತೆ, ತಮ್ಮ-ತಮ್ಮನ ಪತ್ನಿಯನ್ನು ನೆನೆನೆನೆದು ದುಃಖಿಸಿದನು, ತಮ್ಮನ ಮಕ್ಕಳಿನ್ನೂ ಬಾಲ್ಯಾವಸ್ಥೆಯಲ್ಲಿದ್ದುದರಿಂದ ಜನಕಮಹಾರಾಜನು, ಸಹೋದರ-ನಾದಿನಿಯರ ಉತ್ತರ ಕ್ರಿಯೆಗಳನ್ನು ತಾನೇ ನೆರವೇರಿಸಿದನು. ಅನಾಥರಾದ ತಮ್ಮನ ಮಕ್ಕಳನ್ನು ತೊಡೆಯಮೇಲೆ ಕೂಡಿಸಿಕೊಂಡು ಬಿಗಿದಪ್ಪಿ 'ಮಕ್ಕಳೇ, ಕೇವಲ ಬಾಲ್ಯದಲ್ಲಿಯೇ ನೀವು ತಂದೆತಾಯಿಯರನ್ನು ಕಳೆದುಕೊಂಡು ಕಷ್ಟಪಡುತ್ತಿರುವಿರಲ್ಲಾ! ಮಾತೃಹೀನರಾದ ನಿಮ್ಮನ್ನು ಈ ಕಣ್ಣುಗಳಿಂದ ಅದೆಂತು ನೋಡಲಿ?' ಇಂತು ಚಿಂತಾಕ್ರಾಂತನಾಗಿ ಜನಕರಾಜನು ರಾಜಕಾರ್ಯಗಳನ್ನು ಕಡೆಗಣಿಸಿ, ದುಃಖತಪ್ತನಾಗಿ ಅನ್ನಾಹಾರಗಳನ್ನೂ; ರಾಜ್ಯಸುಖಗಳನ್ನೂ ಪರಿತ್ಯಜಿಸಿ, ನಿದ್ರೆಯನ್ನೂ ಮಾಡದಲೇ ಬಹಳ ಕೃಶನಾದನು.

ಆಗ ಅದೇ ಸಮಯಕ್ಕೆ ದೊರೆಯಾದ ಜನಕರಾಯನನ್ನು ಸಾಂತ್ವನಗೊಳಿಸಲು ರಾಜಪುರೋಹಿತರಾದ ವಾಮದೇವ ಋಷಿಗಳ ಸಹೋದರರಾದ ಶತಾನಂದ ಮುನಿಗಳು ಅರಮನೆಗೆ ಆಗಮಿಸಿದರು. ತನ್ನಲ್ಲಿಗೆ ಬಂದ ರಾಜಪುರೋಹಿತರಾದ ಶತಾನಂದರನ್ನು ಸ್ವಾಗತಿಸಿ, ನರಪತಿಯು ಅರ್ಘ್ಯಪಾದ್ಯಾದಿಗಳಿಂದ ಅವನನ್ನು ಸೇವಿಸಿದನು. ರಾಜನಿಂದ ಪೂಜಿತರಾದ ಶತಾನಂದ ಮುನಿಗಳು ಕೃಷ್ಣಾಜಿನದ ಮೇಲೆ ಕುಳಿತರು. ಆಗ ಮಹಾರಾಜನು ಜ್ಞಾನಿಗಳಾದ ಕುಲಪುರೋಹಿತರಾದ ಶತಾನಂದರನ್ನು ಕುರಿತು ಇಂತೆಂದನು.

''ಜ್ಞಾನಿವರ್ಯರಾದ ಪೂಜ್ಯಮುನಿಪುಂಗವರೇ! ನಾನು ವೃದ್ಧನಾಗಿದ್ದೇನೆ. ಮಕ್ಕಳು ಇನ್ನೂ ಬಾಲ್ಯಾವಸ್ಥೆಯಲ್ಲಿದ್ದಾರೆ. ಸೀತಾದೇವಿ, ಮಾಂಡವಿ, ಶ್ರುತಕೀರ್ತಿ ಮತ್ತು ಊರ್ಮಿಳಾ ಎಂಬ ನಮ್ಮ ನಾಲ್ವರು ಹೆಣ್ಣುಮಕ್ಕಳಿಗೆ, ವಿವಾಹವನ್ನು ನೆರವೇರಿಸಲು ಅನುರೂಪ ಗುಣಸಂಪನ್ನರಾದ ವರಗಳು ದೊರಕದಂತಾಗಿದೆ. ನನಗೆ ಸಹಾಯಕನಾಗಿದ್ದ ತಮ್ಮ ಕುಶಧ್ವಜನು ದಿವಂಗತನಾಗಿರುವುದರಿಂದ ನನಗೆ ಮುಂದೇನು ಗತಿ? ಸ್ವಾಮಿ, ರಾವಣ, ಮೇಘನಾದ (ಇಂದ್ರಜಿತ್) ಮುಂತಾಗಿ ನನಗೆ ಅನೇಕ ಶತ್ರುಗಳಿದ್ದಾರೆ. ಅಸಹಾಯಕನೂ, ಅತಿ ವೃದ್ಧನೂ ಆಗಿ ಶಕ್ತಿಗುಂದಿರುವ ನಾನು ಶತ್ರುಗಳು ಯುದ್ಧಕ್ಕೆ ಬಂದರೆ, ಅವರೊಡನೆ ನಾನೆಂದು ಹೋರಾಡಬಲ್ಲೆ? ಮುನೀಂದ್ರ! ಆ ರಾವಣನಂತೂ ಹಗಲು ರಾತ್ರಿಯೆನ್ನದೆ ಸದಾ ಇಲ್ಲಿಗೆ ಬರುತ್ತಿರುವನು. ಅವನೇಕೆ ಹೀಗೆ ಬರುತ್ತಿರುವನೋ ಆ ಕಾರಣವನ್ನು ನಾನರಿಯೆನು. ಏಕೆಂದರೆ ನನಗೆ ಜ್ಞಾನ ದೃಷ್ಟಿ ಇಲ್ಲವಷ್ಟೆ! ನನ್ನ ಚಿಂತೆಗೆ ಇದು ಮೊದಲನೆಯ ಕಾರಣ. ಇನ್ನು ಎರಡನೆಯ ಕಾರಣವನ್ನು ಹೇಳುವೆನು ಕೇಳಿರಿ.''

ಜನಕರಾಯನು ಮುಂದುವರೆದು ಇಂತು ನಿರೂಪಿಸಿದನು- ''ಅತಿಶಯ ರೂಪ-ಲಾವಣ್ಯಗಳಿಂದ ಕಂಗೊಳಿಸುವ ನನ್ನ ಪುತ್ರಿ ಸೀತಾದೇವಿಗೆ ಅನುರೂಪ ಗುಣಸಂಪನ್ನನಾದ ಉತ್ತಮನಾದ ವರನು ದೊರಕಬೇಕು. ಇನ್ನು ಮೂರನೆಯ ಕಾರಣವನ್ನು ವಿಜ್ಞಾಪಿಸುವೆನು, ಲಾಲಿಸಿರಿ, ನನ್ನ ಸುತರು ದೀರ್ಘಾಯುಷ್ಯವಂತರಾಗಿರಬೇಕು. ನನ್ನ ಹೆಣ್ಣುಮಕ್ಕಳೂ ಶ್ರೇಷ್ಠ ಪತಿಗಳೊಡನೆ ಬಾಳುತ್ತಾ ದೀರ್ಘಾಯುಷಿಗಳಾಗಿರಬೇಕು. ಮತ್ತು ಅವರು ಒಂದೇ ದೇಶದ ಅಧಿಪತಿಯಾದ ರಾಜನಿಗೆ ಸೊಸೆಯರಾಗಿರಬೇಕು. ನನ್ನ ನಾಲ್ಕು ಜನ ಅಳಿಯಂದಿರೂ ಏಕರಾಜ್ಯಾಧಿಪತಿಯ ಮಕ್ಕಳಾಗಿರಬೇಕು- ಎಂದು ನಾನು ಅಪೇಕ್ಷಿಸುತ್ತೇನೆ. ಇದೂ ಅಲ್ಲದೆ ಸಹೋದರನಾದ ಕುಶಧ್ವಜನನ್ನು ಕಳೆದುಕೊಡಿರುವ ನಾನು ಸ್ವತಃ ರಾಜ್ಯಭಾರ ಮಾಡಲು ಉಪಾಯವೇನು? ಈ ಎಲ್ಲ ವಿಷಯಗಳಿಗೂ ನೀವು ನನಗೆ ಸೂಕ್ತ ಸಲಹೆಯನ್ನು ನೀಡಿ ಅನುಗ್ರಹಿಸಿರಿ'' ಎಂದು ಶತಾನಂದರನ್ನು ಪ್ರಾರ್ಥಿಸಿದನು.

ಜನಕರಾಯನ ಮಾತನ್ನಾಲಿಸಿ ಶತಾನಂದಮುನಿಗಳು ಇಂತು ಹೇಳಿದರು- ರಾಜನ್! ನಾನು ಹೇಳುವುದನ್ನು ಮನವಿಟ್ಟು ಕೇಳು. ಈ ಧರಾತಲದಲ್ಲಿ ಅತ್ಯಂತ ಮಹಿಮಾನ್ವಿತವೂ, ವೈಶಿಷ್ಟ್ಯಪೂರ್ಣವೂ ಆದ ಕ್ಷೇತ್ರ ಒಂದಿದೆ. ಆ ಕ್ಷೇತ್ರದ ಮಹಿಮಾತಿಶಯವನ್ನು ಕೇಳುವುದರಿಂದ ನಿನ್ನ ಪ್ರಿಯ ಕುಮಾರಿಯಾದ ಸೀತಾದೇವಿಯ ಕಲ್ಯಾಣವೂ, ಮುಂದೆ ನಿನಗತಿ ಕ್ಷೇಮಕರವೂ, ನಿನ್ನ ವೈರಿಗಳಾದ ರಾವಣಾದಿಗಳ ನಾಶವೂ ಉಂಟಾಗುವುದು. ಭವಿಷ್ಯ ಅಂದರೆ ಮುಂದಾಗುವ ಚರಿತ್ರೆಯಿಂದ ಬೆಡಗುಗೊಂಡಿರುವ ಮತ್ತು ಪರ್ವತದ ಶಿರೋಭಾಗದಲ್ಲಿರುವ ತೀರ್ಥ ಹಾಗೂ ದೇವ ಮಹಿಮೆಗಳಿಂದ ಸಹಿತವಾದ ವೈಕುಂಠವೆಂಬ ಶುಭನಾಮದ ಪರ್ವತದ; ''ವೈಕುಂಠಗಿರಿ''ಯ ಮಹಿಮೆಯನ್ನು ನಿರೂಪಿಸುವ ಚರಿತ್ರೆಯೊಂದಿದೆ. ಕಲಿಯುಗದಲ್ಲಿ ಆ ವೈಕುಂಠಗಿರಿ ಮಾಹಾತ್ಮ್ಯವನ್ನು ಕೀರ್ತನೆ ಮಾಡುವುದು, ಅತ್ಯಂತ ಪುಣ್ಯಸಂಪಾದಕವಾದುದಲ್ಲದೆ, ಸಮಸ್ತ ದುಃಖ ಪರಿಹಾರಕವೂ, ಶುಭಪ್ರದವೂ ಆಗಿದೆ. ಹಣ ಬಯಸುವವರಿಗೆ ಧನಪ್ರದವೂ ಸತ್ಸಂತಾನಾಪೇಕ್ಷಿಗಳಿಗೆ ಸತ್ಪುತ್ರರನ್ನು ಕರುಣಿಸುವುದೂ, ವಿಧ ವಿಧ ರೋಗಗಳಿಂದ ಬಳಲುತ್ತಿರುವವರ ಸಮಸ್ತ ರೋಗ ನಿವಾರಕವೂ, ಜ್ಞಾನಾಪೇಕ್ಷಿಗಳಿಗೆ ಭಗವದ್ ಜ್ಞಾನ ಸಾಧನವೂ ಆಗಿರುವುದು.

ಶ್ರೀವೈಕುಂಠಗಿರಿಯ ಮಹಿಮೆಯನ್ನು ಕೀರ್ತನೆ ಮಾಡಿದ, ಉದ್ಧೃತರಾದ ಕೆಲ ಮಹಾವ್ಯಕ್ತಿಗಳ ವಿಚಾರವನ್ನು ತಿಳಿಸುತ್ತೇನೆ ಕೇಳು– ಜಗತ್ಪಿತಾಮಹರಾದ ಚತುರಾನನರಾದ ಬ್ರಹ್ಮದೇವರು ಈ ವೈಕುಂಠಗಿರಿಯ ಮಹಿಮೆಯನ್ನಾಲಿಸಿ ಸರ್ವಲೋಕಾಧಿಪತ್ಯದ್ಯೋತಕವಾದ ಸತ್ಯಲೋಕಾಧಿಪತ್ಯವನ್ನೂ ಅಂದರೆ ಬ್ರಹ್ಮಪದವನ್ನು ಪಡೆದರು. ಅಮೃತಮಥನ ಕಾಲದಲ್ಲಿ ಹುಟ್ಟಿದ ಹಾಲಾಹಲ(ಕಾಲಕೂಟವಿಷ)ವನ್ನು ಪಾನಮಾಡಿ, ಅದರ ವ್ಯಥೆಯಿಂದ ಬಹುಕಷ್ಟಪಡುತ್ತಿದ್ದ ರುದ್ರದೇವರು ಈ ವೈಕುಂಠ ಪರ್ವತದ ಮಹಾತ್ಮ್ಯವನ್ನು ಶ್ರವಣಮಾಡಿ ಕಾಲಕೂಟ ವಿಷದ ಬಾಧೆಯಿಂದ ಮುಕ್ತರಾಗಿ ಸುಖವನ್ನು ಪಡೆದರು. ನಾಕಾಧಿಪತಿಯಾದ, ವಜ್ರಧರನಾದ ದೇವೇಂದ್ರನು ಈ ಪರ್ವತದ ಮಹಿಮಾಶ್ರವಣದ ಫಲದಿಂದ ಸ್ವರ್ಗಲೋಕದ ಅಧಿಪತ್ಯವನ್ನು ಹೊಂದಿದನು. ಇನ್ನು ಹೆಚ್ಚು ಹೇಳುವುದೇನಿದೆ? ರಾಜೇಂದ್ರ! ಈ ವೈಕುಂಠಗಿರಿಯ ಮಹಿಮೆಯನ್ನು ಕೇಳುವುದರಿಂದ ಲಭಿಸುವ ಫಲವನ್ನು ನೀನು ಅತಿಶೀಘ್ರವಾಗಿ ಪಡೆಯುತ್ತೀಯೇ!'' ಎಂದು ಶತಾನಂದರು ನಿರೂಪಿಸಿದರು. ಅದನ್ನಾಲಿಸಿ ಜನಕಮಹೀಪತಿಯು ''ಸ್ವಾಮಿ, ಮುನಿಪುಂಗವರೇ! ನೀವು ನನ್ನಲ್ಲಿ ಕರುಣೆ ಬೀರಿ ವೈಕುಂಠಪರ್ವತದ ಮಹಿಮೆಯನ್ನೂ, ಕಲಿಯುಗದಲ್ಲಿ ಅದರ ಚರಿತವು ಯಾವ ಪ್ರಕಾರವಾದುದೆಂಬುದನ್ನು ನನಗೆ ದಯಮಾಡಿ ತಿಳಿಸಿರಿ'' ಎಂದನು ॥ 36 ॥

# ವೃಷಭಾಚಲ ಮಹಿಮೆ

*ಮೂಲ— ಶತಾನಂದ ಉವಾಚ -*

**ಕೃತೇ ವೃಷಾದ್ರಿಂ ವಕ್ಷ್ಯಂತಿ ತ್ರೇತಾಯಾಮಂಜನಾಚಲಮ್ ।**
**ದ್ವಾಪರೇ ಶೇಷಶೈಲೇತಿ ಕಲೌ ಶ್ರೀವೇಂಕಟಾಚಲಮ್** ॥ 37 ॥

**ನಾಮಾನಿ ಯುಗಭೇದೇನ ಶೈಲಸ್ಯಾಸ್ಯ ಭವಂತಿ ಹಿ ।**

*ಅನ್ವಯಾರ್ಥ:—* ಶತಾನಂದ ಉವಾಚ = ಶತಾನಂದ ಮುನಿಗಳು ಹೇಳಿದರು. ಕೃತೇ = ಕೃತಯುಗದಲ್ಲಿ, ವೃಷಾದ್ರಿಂ = ವೃಷಭಪರ್ವತವೆಂದೂ, ತ್ರೇತಾಯಾಂ = ತ್ರೇತಾಯುಗದಲ್ಲಿ ಅಂಜನಾಚಲಂ = ಅಂಜನಾಚಲವೆಂದೂ, ದ್ವಾಪರೇ = ದ್ವಾಪರಯುಗದಲ್ಲಿ, ಶೇಷಶೈಲೇತಿ = ಶೇಷಾಚಲವೆಂದೂ, ಕಲೌ = ಕಲಿಯುಗದಲ್ಲಿ, ಶ್ರೀವೇಂಕಟಾಚಲಂ- ಶ್ರೀಸಕಲಸಂಪದ್ಯುಕ್ತವೂ, ವೇದಪ್ರತಿಪಾದ್ಯಮಹಿಮೋಪೇತವೂ ಆದ ವೇಂಕಟಾಚಲವೆಂದೂ (ಸುಜನರು) ವಕ್ಷ್ಯಂತಿ = ಹೇಳುವರು. ಅಸ್ಯಶೈಲಸ್ಯ = ಈ ಪರ್ವತಕ್ಕೆ, ಯುಗಭೇದೇನ = ಬದಲಾದ ಯುಗಗಳನ್ನನುಸರಿಸಿ, ಅಂದರೆ ಯುಗಗಳು ಬದಲಾಗುವುದರಿಂದ ಆ ಕಾರಣದಿಂದಲೂ, ನಾಮಾನಿ = ವೃಷಭಾಚಲ, ಅಂಜನಾಚಲ, ಶೇಷಾಚಲ ಮತ್ತು ವೇಂಕಟಾಚಲವೆಂಬ ಹೆಸರುಗಳು, ಭವಂತಿ = ಉಂಟಾಗುವುದು (ಬರುವುದು), ಹಿ = ಇದು ಪ್ರಸಿದ್ಧವು.

*ಜನಕ ಉವಾಚ -*

**ಚತುರ್ಯುಗೇಷು ಯತ್ಪ್ರೋಕ್ತಂ ನಾಮ ತಸ್ಯ ಗಿರೇರ್ಮುನೇ** ॥ 38 ॥

**ಕೃತೇ ವೃಷಾದ್ರಿರಿತಿ ಚ ಕಥಂ ನಾಮ ಭವಿಷ್ಯತಿ ।**

**ಅನ್ವಯಾರ್ಥ:—** ಜನಕ ಉವಾಚ = ಶತಾನಂದರು ಹೇಳಿದ ವಿವರಣೆಯನ್ನು ಕೇಳಿ ಜನಕಮಹಾರಾಜನು ಇಂತು ಹೇಳಿದನು. ಮುನೇ* = ಶತಾನಂದಮುನಿಗಳೇ! ಚತುರ್ಯುಗೇಷು = ನಾಲ್ಕು ಅಂದರೆ ಕೃತ ಮುಂತಾದ ನಾಲ್ಕು ಯುಗಗಳಲ್ಲಿ, ತಸ್ಯ = ಆ, ಗಿರೇಃ = ಪರ್ವತಕ್ಕೆ, ಯತ್ = ಯಾವ, ನಾಮ = ಹೆಸರು, ಪ್ರೋಕ್ತಂ = ಹೇಳಲ್ಪಟ್ಟಿತ್ತೋ, ಆಯಾ ಯುಗಗಳಲ್ಲಿ, ಕೃತೇ = ಕೃತಯುಗದಲ್ಲಿ, ವೃಷಾದ್ರಿಃ = ವೃಷಭಪರ್ವತವು, ಇತಿ = ಈ ಪ್ರಕಾರವಾಗಿ, ನಾಮ = ಹೆಸರು, ಕಥಂ = ಹೇಗೆ, ಭವಿಷ್ಯತಿ = (ಬಂದಿತು?) ಬರುತ್ತದೆ?

*ಶತಾನಂದ ಉವಾಚ -*

**ಪುರಾ ತು ವೃಷಭೋನಾಮ ರಾಕ್ಷಸೋ ರೂಕ್ಷ ಕರ್ಮಕೃತ್ ॥ 39 ॥**

**ಅತ್ರಸ್ಥಂ ಶೇಷಶೈಲೇತು ತಾಪಸಾನತ್ಯಬಾಧಯತ್ ।**
**ತೇನ ಸಂಕ್ಲಿಷ್ಟತಪಸಃ ತದ್ವಧೇ ಶರಣಂಗತಾಃ ॥ 40 ॥**

**ಶ್ರೀನಿವಾಸಂ ಹೃಷೀಕೇಶಂ ಭಕ್ತಾನಾಮಭಯಪ್ರದಮ್ ।**
**ತುಷ್ಟವುರ್ಹೃಷ್ಟಮನಸಃ ಸ್ರಷ್ಟಾರಂ ಸರ್ವಚೇತಸಾಮ್ ॥ 41 ॥**

**ವಿಜ್ಞಾಪಯನ್ಮುನಿಶ್ರೇಷ್ಠಾಃ ತಸ್ಯ ಕೃತ್ಯಂ ಕೃತಸ್ತವಾಃ ।**
**ಪ್ರಾದುರ್ಬಭೂವ ಭಗವಾನ್ ಮುನೀನಾಂ ಪುರತೋ ಹರಿಃ ॥ 42 ॥**

ಶತಾನಂದ ಉವಾಚ = ಶತಾನಂದರು ಹೇಳಲಾರಂಭಿಸಿದರು - ಪುರಾತು = ಪೂರ್ವಕಾಲದಲ್ಲಿ, ವೃಷಭೋನಾಮ = ವೃಷಭನಾಮಕನಾದ, ರೂಕ್ಷ = ಕ್ರೂರವಾದ, ಕರ್ಮ = ಕಾರ್ಯ(ಕೆಲಸ)ವನ್ನು, ಕೃತ್ = ಮಾಡುವ, ರಾಕ್ಷಸಃ = ರಾಕ್ಷಸನು (ದೈತ್ಯನು), ಅತ್ರಸ್ಥ = ಈ ಸ್ಥಳದಲ್ಲಿದ್ದು (ಇಲ್ಲಿರುವ) ಶೇಷಶೈಲೇತು = ಶೇಷಾಚಲದಲ್ಲಿ (ಇದ್ದ), ತಾಪಸಾನ್ = ತಪೋಧನರಾದ ಋಷಿಗಳು, ಅತ್ಯಬಾಧಯತ್ = ಅತಿಶಯವಾಗಿ ಪೀಡಿಸುತ್ತಿದ್ದನು. ತೇನ = (ಅವನ ಬಾಧೆಯಿಂದ) ಅವನಿಂದ, ಸಂಕ್ಲಿಷ್ಟತಪಸಃ - ಸಂಕ್ಲಿಷ್ಟ = ಹೆಚ್ಚಾದ ಕ್ಲೇಶವನ್ನು ಹೊಂದಿದ, ತಪಸಃ = ತಪಸ್ವಿಗಳಾದ (ತಪಸ್ಸುಳ್ಳ) ಋಷಿಗಳು, ತದ್ವಧೇ = ವೃಷಭಾಸುರನ ಸಂಹಾರಕ್ಕಾಗಿ, ಭಕ್ತಾನಾಂ = ಭಕುತಜನರಿಗೆ, ಅಭಯಪ್ರದಂ = ಅಭಯವನ್ನೀಯುವ, ಶ್ರೀನಿವಾಸಂ = ರಮಾದೇವಿಗೆ ಆಶ್ರಯನಾದ, ಹೃಷೀಕೇಶಂ = ಶ್ರೀವಿಷ್ಣುವನ್ನು, (ಶ್ರೀಹರಿಗೆ) ಶರಣಂಗತಾಃ = ಶರಣುಹೋದರು. ಸರ್ವಚೇತಸಾಂ = ಸಮಸ್ತಚೇತನರುಗಳಿಗೆ, (ಅಂದರೆ ಚೇತನರನ್ನು) ಸ್ರಷ್ಟಾರಂ = ಸೃಜಿಸುವ ಶ್ರೀಹರಿಯನ್ನು, ಹೃಷ್ಟಮನಸಃ = ಸಂತುಷ್ಟಚಿತ್ತರಾಗಿ, (ಸಂತೋಷಚಿತ್ತದಿಂದ) ತುಷ್ಟುವುಃ = ಸ್ತೋತ್ರಾದಿಗಳಿಂದ ಆನಂದಗೊಳಿಸಿದರು. ಕೃತಸ್ತವಾಃ = ಇಂತು ಭಗವಂತನನ್ನು ಸ್ತುತಿಸಿದ, ಮುನಿಶ್ರೇಷ್ಠಾಃ = ಋಷಿವರ್ಯರುಗಳು, ತಸ್ಯ = ಆ ವೃಷಭಾಸುರನ, ಕೃತ್ಯಂ = ತಪಸ್ವಿಗಳಿಗೆ ಅವನು ಕೊಡುತ್ತಿರುವ ಕ್ರೂರಹಿಂಸೆ ಮೊದಲಾದ ಕಾರ್ಯಗಳನ್ನು, ವಿಜ್ಞಾಪಯನ್ = ಶ್ರೀವಿಷ್ಣುವಿನಲ್ಲಿ ಅರುಹಿದರು. ಭಗವಾನ್ = ಷಡ್ಗುಣೈಶ್ವರ್ಯ ಭರಿತನಾದ (ಪೂಜ್ಯನಾದ), ಹರಿಃ = ಶ್ರೀವಿಷ್ಣುವು, ಮುನೀನಾಂ = ಮುನಿಗಳ, ಪುರತಃ = ಮುಂಭಾಗದಲ್ಲಿ, ಪ್ರಾದುರ್ಬಭೂವ = ಪ್ರಸನ್ನನಾಗಿ ಮೈದೋರಿದನು ॥ 39-42 ॥

*ಮುನಯ ಊಚುಃ ॥*

**ಭಗವನ್ನರವಿಂದಾಕ್ಷ ವೃಷಭೋ ನಾಮ ರಾಕ್ಷಸಃ ।**
**ಅಬಾಧಯತ್ಸದಾ ಕ್ರೂರಃ ತಪೋಭಂಗಕರಃ ಖಲಃ ॥ 43 ॥**

---

* ಮನನಶೀಲರನ್ನು ಮುನಿಗಳೆನ್ನುವರು.

**ತಸ್ಮಾದ್ರಕ್ಷಸ್ವ ನೋ ದೇವ ಭಯಾದ್ರಾಕ್ಷಸಕಲ್ಪಿತಾತ್ ।**
**ಬಾಢಮಿತ್ಯುಕ್ತವಾನ್ ಕೃಷ್ಣೋ ದುಷ್ಟಮಭ್ಯದ್ರವದ್ರುಷಾ ॥ 44 ॥**

ಮುನಯ ಊಚುಃ = ಋಷಿಮುನಿಗಳೂ ಭಗವಂತನಲ್ಲಿ ಇಂತು ವಿಜ್ಞಾಪಿಸಿದರು. ಭಗವನ್ = ಪೂಜ್ಯನಾದ ಅರವಿಂದಾಕ್ಷ = ಎಲೈ ಕಮಲನಯನನಾದ ಶ್ರೀಮನ್ನಾರಾಯಣನೇ! ಕ್ರೂರಃ = ಹಿಂಸಾಕೃತ್ಯದಲ್ಲಿ ತೊಡಗಿರುವ, ಖಲಃ = ನೀಚನಾದ, ತಪೋಭಂಗಕರಃ = ಋಷಿಗಳು ಮಾಡುವ ತಪಸ್ಸನ್ನು ಕೆಡಿಸುತ್ತಿರುವ, ವೃಷಭೋನಾಮ = ವೃಷಭನೆಂಬ ಹೆಸರಿನ, ರಾಕ್ಷಸಃ = ಅಸುರನು, ಸದಾ = ಯಾವಾಗಲೂ, ಅಬಾಧಯತ್ = ನಮಗೆ ಸದಾ ವ್ಯಥೆ ಪಡಿಸುತ್ತಿರುವನು. ದೇವ = ಪ್ರಭುವೇ, ರಾಕ್ಷಸಕಲ್ಪಿತಾತ್ – ರಾಕ್ಷಸ = ವೃಷಭಾಸುರನಿಂದ, ಕಲ್ಪಿತಾತ್ = ಉಂಟಾಗಿರುವ, (ಉಂಟಾಗುತ್ತಿರುವ) ಭಯಾತ್ = ಬಾಧೆಯಿಂದ (ಭಯದಿಂದ), ನಃ = ನಮ್ಮನ್ನು, ರಕ್ಷಸ್ವ = ಕಾಪಾಡು (ಎಂದು ಪ್ರಾರ್ಥಿಸಿದರು), ಕೃಷ್ಣಃ = ಶ್ರೀಹರಿಯು, ಬಾಢಂ ಇತಿ = ನಿಮ್ಮಿಚ್ಛೆಯಂತಾಗಲಿ ಎಂದು, ಉಕ್ತವಾನ್ = ಹೇಳಿದನು. (ಹಾಗು) ರುಷಾ = ತನ್ನ ಭಕ್ತರಿಗೆ ಹಿಂಸೆ ಕೊಡುತ್ತಿರುವನೆಂಬ ಕೋಪದಿಂದ ದುಷ್ಟಂ = ದುಷ್ಟನಾದ ವೃಷಭಾಸುರನನ್ನು, ಅಭ್ಯದ್ರವತ್ = ಅಟ್ಟಿಸಿಕೊಂಡು ಹೋದನು ॥ 44 ॥

**ಸ ರಾಕ್ಷಸೋ ಮಹಾರಾಜ ತೀರ್ಥೇ ತುಂಬುರುಸಂಜ್ಞಿಕೇ ।**
**ಸ್ನಾತ್ವಾ ನಿತ್ಯಂ ವರಾಂ ಪುಣ್ಯಾಂ ಶಾಲಗ್ರಾಮಶಿಲಾಂ ನೃಪ ॥ 45 ॥**

**ನಾರಸಿಂಹಾತ್ಮಿಕಾಂ ದಿವ್ಯಾಂ ಸುಕರಾಲಾಮಧೋಮುಖೀಮ್ ।**
**ನಿತ್ಯಮಾರಾಧಯದ್ದೈವಮಿತಿ ನಿಶ್ಚಿತ್ಯ ರಾಕ್ಷಸಃ ॥ 46 ॥**

**ಪೂಜಾಂತೇ ಸಶಿರಃಪುಷ್ಪಂ ಖಡ್ಗೇನಾಹೃತ್ಯ ಭೂಪತೇ ।**
**ಸಮರ್ಪಯತ್ಯಸೌ ನಿತ್ಯಮಾಗಚ್ಛತಿ ಹಿ ತತ್ಪುನಃ ॥ 47 ॥**

**ಏವಂ ಪಂಚಸಹಸ್ರಾಣಿ ವರ್ಷಾಣಿ ವಿಗತಾನಿ ಚ ।**
**ತಸ್ಮಿನ್ ಕಾಲೇಽರವಿಂದಾಕ್ಷಃ ಪ್ರತ್ಯಕ್ಷಸ್ಸಮಭೂತ್ತದಾ ॥ 48 ॥**

**ಶಿಲಾಂತರ್ಯಾಮೀ ಭಗವಾನ್ ಶ್ರೀನಿವಾಸಸ್ಸತಾಂಗತಿಃ ।**
**ತಮಾಲೋಕ್ಯ ಹೃಷೀಕೇಶಂ ವೃಷಭೋ ದಂಡವದ್ಭುವಿ ॥ 49 ॥**

**ಪಪಾತ ರಾಜಶಾರ್ದೂಲ ಸ ವಿಸಂಜ್ಞಾಮುಪೇಯಿವಾನ್ ।**
**ಮುಹೂರ್ತಾಂತೇ ಸಮುತ್ಥಾಯ ಪ್ರತ್ಯಭಾಷತ ಕೇಶವಮ್ ॥ 50 ॥**

ನೃಪ = ಪ್ರಜಾಪಾಲಕನಾದ ಮಹಾರಾಜ = ಎಲೈ ಜನಕಮಹಾರಾಜ! ಸ ರಾಕ್ಷಸಃ = ಆ ವೃಷಭಾಸುರನು, ತುಂಬುರು ಸಂಜ್ಞಿಕೇ = ತುಂಬುರು ಎಂಬ ಹೆಸರಿನ, ತೀರ್ಥೇ = ಪುಣ್ಯಸರಸ್ಸಿನಲ್ಲಿ (ಪುಣ್ಯೋದಕದಲ್ಲಿ), ನಿತ್ಯಂ = ಪ್ರತಿದಿನವೂ ಸ್ನಾತ್ವಾ = ಸ್ನಾನ ಮಾಡಿ, ವರಾಂ = ಶ್ರೇಷ್ಠವಾದ, ಪುಣ್ಯಾಂ = ಸುಕೃತ ಸಂಪಾದಕವಾದ, ದಿವ್ಯಾಂ = ದಿವ್ಯವಾದ, ಸುಕಲಾಂ = ಕೋರೆಗಳಿಂದಯುಕ್ತವಾದ (ಅಗಲವಾದ), ಅಧೋಮುಖೀಂ = ಕೆಳಮುಖವುಳ್ಳ, ನಾರಸಿಂಹಾತ್ಮಿಕಾಂ = ಶ್ರೀನೃಸಿಂಹಮೂರ್ತಿ ರೂಪದ, ಶಾಲಗ್ರಾಮ ಶಿಲಾಂ = ಶಾಲಗ್ರಾಮಶಿಲಾಮೂರ್ತಿಯನ್ನು (ಶಾಲಗ್ರಾಮ ಶಿಲೆಯನ್ನು) ಇತಿ ನಿಶ್ಚಿತ್ಯ = ಈ ಶಿಲೆಯಲ್ಲಿ

ಶ್ರೀನರಸಿಂಹದೇವನು ಸನ್ನಿಹಿತನಾಗಿರುವನೆಂದು ಭಾವಿಸಿ, ರಾಕ್ಷಸಃ = ವೃಷಭಾಸುರನು, ನಿತ್ಯಂ = ಪ್ರತಿದಿವಸವೂ, ದೇವಂ = ಶ್ರೀನೃಸಿಂಹಸ್ವಾಮಿಯನ್ನು, ಆರಾಧಯನ್ = ಪೂಜಾರಾಧನೆಗಳಿಂದ ಸೇವಿಸುತ್ತಾ, ಭೂಪತೇ = ಎಲೈ ಭೂಮಿಪಾಲನೇ, ಪೂಜಾಂತೇ = ಹೀಗೆ ದೇವರನ್ನು ಪೂಜಿಸಿದ ಮೇಲೆ, ಸಃ = ರಕ್ಕಸನು, ಖಡ್ಗಂ = ಕತ್ತಿಯನ್ನು, ಉದ್ಧೃತ್ಯ = ಮೇಲೆತ್ತಿ, ಪುಣ್ಯಂ = ಪುಣ್ಯಕರವಾದ, ಶಿರಃ = ತನ್ನ ತಲೆಯನ್ನು, ಛಿತ್ವಾ = ಕತ್ತರಿಸಿ, ಸಮರ್ಪಯಿತ್ವಾ = ಶ್ರೀನೃಸಿಂಹನಿಗೆ ಸಮರ್ಪಿಸಿ, ಸತತಂ = ಸರ್ವದಾ (ಅಪೂಜಯತ್ = ಪೂಜಿಸುತ್ತಿದ್ದನು). ತಚ್ಛಿರಃ = ಆ ಅಸುರನ ಶಿರಸ್ಸು, ಪುನಃ = ಮತ್ತೆ, ಆಗತಂ = ಬರುತ್ತಿತ್ತು. ಏವಂ = ಹೀಗೆ, ಪಂಚವರ್ಷಸಹಸ್ರಾಣಿ = ಐದುಸಾವಿರವರ್ಷಗಳು. ವಿಗತಾನಿ = ಕಳೆದವು. ತಸ್ಮಿನ್ ಕಾಲೇ = ಆ ಸಮಯಕ್ಕೆ, ಅರವಿಂದಾಕ್ಷಃ = ತಾವರೆಗಣ್ಣುಳ್ಳ, ಶಿಲಾಂತರ್ಯಾಮಿ = ಶಾಲಗ್ರಾಮಶಿಲೆಯಲ್ಲಿ ಅಂತರ್ಗತನಾದ, ಭಗವಾನ್* = ಸಮಗ್ರವಾದ ಐಶ್ವರ್ಯ-ವೀರ್ಯ-ಯಶಸ್ಸು- ಸಂಪತ್ತು-ಜ್ಞಾನ ಮತ್ತು ವಿಜ್ಞಾನಗಳೆಂಬ ಷಡ್ಗುಣಯುಕ್ತನಾದ್ದರಿಂದ ಭಗವಂತನೆಂದು ಕರೆಯಿಸಿಕೊಳ್ಳುವ, ಶ್ರೀನಿವಾಸಃ = ಲಕ್ಷ್ಮೀದೇವಿಗೆ ಆಶ್ರಯನಾದ, ಸತಾಂಗತಿಃ = ಸಜ್ಜನರಿಗೆ ದಿಕ್ಕಾಗಿರುವ ಶ್ರೀಹರಿಯು, ತದಾ = ಆವಾಗ, ಪ್ರತ್ಯಕ್ಷಃ ಸಮಭವತ್ = ಕಣ್ಣಿಗೆ ಗೋಚರಿಸಿದನು. ವೃಷಭಃ = ವೃಷಭಾಸುರನು, ತಂ ಹೃಷಿಕೇಶಂ = ಆ ವಿಷ್ಣುವನ್ನು, ಆಲೋಕ್ಯ = ನೋಡಿ, ದಂಡವತ್ = ಕಟ್ಟಿಗೆಯಂತೆ, ಭುವಿ = ಧರೆಯಲ್ಲಿ (ಭೂಮಿಯಮೇಲೆ) ಪಪಾತ = ಬಿದ್ದನು. ರಾಜಶಾರ್ದೂಲ! = ನೃಪೋತ್ತಮನಾದ ಜನಕರಾಯ, ಸಃ = ಆ ರಕ್ಕಸನು, ವಿಸಂಜ್ಞಾಂ = ಮೂರ್ಛೆಯನ್ನು, ಉಪೇಯಿವಾನ್ = ಹೊಂದಿದನು, ಮುಹೂರ್ತಾಂತೇ = ಒಂದು ಮುಹೂರ್ತ ಕಾಲ ಕಳೆದಮೇಲೆ, ಸಮುತ್ಥಾಯ = ಮೂರ್ಛೆ ತಿಳಿದು ಮೇಲೆದ್ದು, ಕೇಶವಂ = ಬ್ರಹ್ಮರುದ್ರಾದಿಗಳಿಗೆ ನಿಯಾಮಕನಾದ ಶ್ರೀಹರಿಯನ್ನು ಕುರಿತು, ಪ್ರತ್ಯಭಾಷತ = ಮಾತನಾಡಿದನು ॥ 45-50 ॥

*ವೃಷಭ ಉವಾಚ -*

**ಕೇಶವಾನಂತ ಗೋವಿಂದ ಶ್ರೀನಿವಾಸ ಸುರೋತ್ತಮ ।**
**ನ ಚ ಮೋಕ್ಷಂ ನ ಚ ಸ್ವರ್ಗಂ ಪಾರಮೇಷ್ಠ್ಯಪದಂ ಹರೇ ॥ 51 ॥**

**ನ ಯಾಚೇ ಜಗತಾಂ ನಾಥ ಯುದ್ಧಭಿಕ್ಷಾಂ ಚ ದೇಹಿ ಮೇ ।**
**ದಶಾವತಾರವಿಭವಃ ಶ್ರುತಸ್ತೇ ವಿಕ್ರಮೋ ವಿಭೋ ॥ 52 ॥**

**ಅದ್ಯ ತತ್ಸತ್ಯಮಾಧತ್ಸ್ವ ವಿಕ್ರಮಂ ಪುರುಷೋತ್ತಮ ।**
**ದೇವಸ್ತದ್ಭಾರತೀಂ ಶ್ರುತ್ವಾ ಕಿಂಚಿದ್ಧಾಸ್ಯಮುಖೋ ಹರಿಃ ॥ 53 ॥**

**ಉವಾಚ ವಚನಂ ತಂ ಚ ರಾಕ್ಷಸಂ ಯುದ್ಧದುರ್ಮದಮ್ ।**

ವೃಷಭ ಉವಾಚ = ವೃಷಭಾಸುರನು ಇಂತು ವಿಜ್ಞಾಪಿಸಿದನು (ಮಾತನಾಡಿದನು). ಕೇಶವ = ಬ್ರಹ್ಮರುದ್ರಾದಿಗಳಿಗೆ ನಿಯಾಮಕನಾದ, ಅನಂತ = ಕೊನೆಯಿಲ್ಲದ (ಅಥವಾ ನಾಶರಹಿತನಾದ), ಗೋವಿಂದ = ಹಿರಣ್ಯಾಕ್ಷನನ್ನು ವಧಿಸಿ ವಸುಧೆಯನ್ನು ಪಿಡಿದು ಮೇಲೆತ್ತಿದವನಾದ (ವೇದೋದ್ಧಾರಕನಾದ) ಸುರೋತ್ತಮ = ಬ್ರಹ್ಮರುದ್ರೇಂದ್ರಾದಿ ದೇವತೆಗಳಿಗಿಂತ ಶ್ರೇಷ್ಠನಾದ, ಶ್ರೀನಿವಾಸ = ಲಕ್ಷ್ಮಿಗೆ ಆಶ್ರಯನಾದ, ಹರೇ = ಶ್ರೀಮನ್ನಾರಾಯಣನೇ ! (ಅಹಂ = ನಾನು) ಮೋಕ್ಷಂ = ಮುಕ್ತಿಯನ್ನು, ನ ಯಾಚೇ = ಬೇಡುವುದಿಲ್ಲ, ಚ = ಮತ್ತು, ಸ್ವರ್ಗಂ = ಸ್ವರ್ಗವನ್ನು, ನ ಯಾಚೇ = ಬೇಡುವುದಿಲ್ಲ, ಚ = ಮತ್ತು, ಪಾರಮೇಷ್ಠ್ಯಪದಂ = ಬ್ರಹ್ಮಪದವನ್ನೂ ಸಹ, ನ ಯಾಚೇ = ಕೋರುವುದಿಲ್ಲ, ಜಗನ್ನಾಥ = ಜಗತ್ತಿಗೆ

*ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಸ್ತಥಾ । ಸಂಪದೋ ಜ್ಞಾನ ವಿಜ್ಞಾನ ಷಣ್ಣಾಂ ಭಗ ಇತೀರಿತಾ ॥

ಸ್ವಾಮಿಯಾದ ಶ್ರೀಹರಿಯೇ ! ಮೇ = ನನಗೆ, ಯುದ್ಧಭಿಕ್ಷಾಂ = ಯುದ್ಧಭಿಕ್ಷೆಯನ್ನು, ದೇಹಿ = ಕೊಡು. ವಿಭೋ = ಪ್ರಭುವೇ, ಪುರುಷೋತ್ತಮ = ಪುರುಷೋತ್ತಮನೆ, ದಶಾವತಾರವಿಭವಂ = ನೀನೆತ್ತಿದ ಹತ್ತು ಅವತಾರಗಳ ವೈಭವವು, ತೇ = ನಿನ್ನ, ವಿಕ್ರಮಂ = ಪರಾಕ್ರಮವು, ಇವುಗಳು ಶ್ರುತಃ = ನನ್ನಿಂದ ಕೇಳಲ್ಪಟ್ಟಿದೆ. ಅದ್ಯ = ಈಗ, ತಂ ವಿಕ್ರಮಂ = ಆ ಸಾಮರ್ಥ್ಯವನ್ನು, ಸತ್ಯಂ = ಸತ್ಯ ಭೂತವಾದದ್ದನ್ನಾಗಿ, ಆಧತ್ಸ್ವ = ವಹಿಸುವವನಾಗು (ಮಾಡಿತೋರಿಸು). ದೇವಃ = ದೇವೋತ್ತಮನಾದ, ಹರಿಃ = ಶ್ರೀವಿಷ್ಣುವು, ತದ್ಭಾರತೀಂ = ಆ ವೃಷಭಾಸುರನ ವಚನವನ್ನು, ಶ್ರುತ್ವಾ = ಕೇಳಿ, ಕಿಂಚಿತ್ = ಸ್ವಲ್ಪ, ಹಾಸ್ಯಮುಖಃ = ನಗುಮೊಗವುಳ್ಳವನಾಗಿ (53) ಯುದ್ಧ ದುರ್ಮದಂ = ಯುದ್ಧ ವಿಷಯದಲ್ಲಿ ಮತ್ತನಾದ, ತಂ ರಾಕ್ಷಸಂ = ಆ ವೃಷಭಾಸುರನನ್ನು ಕುರಿತು, ವಚನಂ = ಮಾತನ್ನು, ಉವಾಚ = ಆಡಿದನು.

*ಶ್ರೀ ಭಗವಾನುವಾಚ-*

**ಅಲಮಿತ್ಯುಕ್ತವಾನ್ ಕೃಷ್ಣಃ ತಥಾಸ್ತ್ವತ್ಯರಿಮರ್ದನಃ ॥ 54 ॥**

**ತಯೋರ್ಯುದ್ಧಮಭೂತ್ತತ್ರ ವೃಷಭಶ್ರೀನಿವಾಸಯೋಃ ।**
**ಯತ್ಕೃತಂ ಶ್ರೀನಿವಾಸೇನ ತತ್ಕೃತಂ ವೃಷಭೇಣ ಚ ॥ 55 ॥**

**ತದದ್ಭುತ ಮಭೂತ್ತತ್ರ ದೇವಾನಾಂ ಪಶ್ಯತಾಮಪಿ ।**
**ತದ್ಯುದ್ಧಕೌಶಲಂ ದೃಷ್ಟ್ವಾ ಭಗವಾನ್ ಪರ್ಯಪೂಜಯತ್ ॥ 56 ॥**

**ಭೋ ರಾಕ್ಷಸಕುಲೋತ್ಪನ್ನ ಪಶ್ಯ ಮೇ ಪೌರುಷಂ ಬಲಮ್ ।**
**ತತಃ ಸಂದರ್ಶಯಾಮಾಸ ಗರುಡಂ ವಿಕೃತಾಕೃತಿಮ್ ॥ 57 ॥**

**ತತ್ರಸ್ಥಂ ವಾಸುದೇವಂ ಚ ವಿಶ್ವರೂಪಿಣಮವ್ಯಯಮ್ ।**
**ಸಹಸ್ರಭುಜಸಂಯುಕ್ತಂ ಸಹಸ್ರಾಯುಧಭೂಷಿತಮ್ ॥ 58 ॥**

**ತನ್ಮಾಯಾಂ ರಾಕ್ಷಸೋ ದೃಷ್ಟ್ವಾ ಪ್ರತ್ಯೇಕಂ ಗರುಢಂ ಹರಿಮ್ ।**
**ದರ್ಶಯಾಮಾಸ ರಾಜೇಂದ್ರ ಸ್ವಮಾಯಾಂ ಸುರಮೋಹಿನೀಮ್ ॥ 59 ॥**

**ನಕ್ತಂಚರಸ್ಯ ಚರಿತಂ ಅತಿಕ್ರಾಂತುಂ ಕ್ಷಮೋ ಹರಿಃ ।**
**ಶಶಂಸ ರಾಕ್ಷಸಂ ವೀರಂ ಸಾಧು! ಸಾಧ್ವಿತ್ಯಭಾಷತ ॥ 60 ॥**

**ರೇರೇ ತೇ ರಾಕ್ಷಸಶ್ರೇಷ್ಠ ಚಕ್ರೇಣ ಶತನೇಮಿನಾ ।**
**ಆಹರಿಷ್ಯೇ ಶಿರಃ ಕಾಯಾದ್ಯಥಾ ಪಕ್ವಫಲಂ ದ್ರುಮಾತ್ ॥ 61 ॥**

**ಇತ್ಯುಕ್ತೋ ದೇವರಾಜೇನ ವೃಷಭೋ ದಂಡವದ್ಭುವಿ ।**
**ಪ್ರಣಿಪತ್ಯಾಽಽಹ ವಿಶ್ವೇಶಮಸ್ತುವದ್ರಾಕ್ಷಸೇಶ್ವರಃ ॥ 62 ॥**

ಶ್ರೀಭಗವಾನುವಾಚ = ಪರಮಪೂಜ್ಯ ಸ್ವಾಮಿಯಾದ ಶ್ರೀಹರಿಯು ನುಡಿದನು. ಅರಿಮರ್ದನಃ = ಶತ್ರುಮರ್ದಕನಾದ, ಕೃಷ್ಣಃ = ವಿಷ್ಣುವು, ತಥಾಸ್ತ್ವಿತಿ = ಹಾಗೆಯೇ ಆಗಲಿ ಎಂದು, ಅಲಂ = ಸಾಕು, ಇತಿ = ಈ ಪ್ರಕಾರವಾಗಿ, ಉಕ್ತವಾನ್ =

ಹೇಳಿದನು. (54) ತತ್ರ = ವೈಕುಂಠಗಿರಿಯಲ್ಲಿ, ವೃಷಭ-ಶ್ರೀನಿವಾಸಯೋಃ = ವೃಷಭಾಸುರ-ಶ್ರೀನಿವಾಸನಿಗೂ, ಯುದ್ಧಂ = ಕದನವು, ಅಭವತ್ = ಆಯಿತು. ಶ್ರೀನಿವಾಸೇನ = ಶ್ರೀಹರಿಯಿಂದ, ಯತ್ಕೃತಂ = ಯಾವುದು ಮಾಡಲ್ಪಟ್ಟಿತ್ತೋ, ವೃಷಭೇನ ಚ = ವೃಷಭನಾಮಕ ರಾಕ್ಷಸನಿಂದಲೂ, ತತ್ಕೃತಂ = ಅದು ಮಾಡಲ್ಪಟ್ಟಿತು. ತತ್ರ = ಆ ಕದನದ ಸಮಯದಲ್ಲಿ ಪಶ್ಯತಾಂ = ಯುದ್ಧವನ್ನು ನೋಡುತ್ತಿರುವ, ದೇವಾನಾಮಪಿ = ದೇವತೆಗಳಿಗೂ ಸಹ, ತತ್ = ಆ ಯುದ್ಧವು, ಅದ್ಭುತಂ = ಆಶ್ಚರ್ಯಕರವು, ಅಭೂತ್ = ಆಯಿತು. ತದ್ಯುದ್ಧಕೌಶಲಂ - ತದ್ಯುದ್ಧ = ಆ ಅಸುರನ ಯುದ್ಧದ, ಕೌಶಲಂ = ಕುಶಲತೆಯನ್ನು ನಿರುಕಿಸಿ, ಭಗವಾನ್ = ಶ್ರೀಹರಿಪರಮಾತ್ಮನು, ಪರ್ಯಪೂಜಯತ್ = ಅವನ ಯುದ್ಧಕೌಶಲವನ್ನು ಶ್ಲಾಘಿಸಿದನು. ಭೋ ರಾಕ್ಷಸಕುಲೋತ್ಪನ್ನ = ಎಲವೋ ಅಸುರಕುಲ ಸಂಜಾತನಾದ ರಕ್ಕಸನೇ, ಮೇ = ನನ್ನ, ಪೌರುಷಂ = ಪುರುಷ ಸಂಬಂಧವಾದ, ಬಲಂ = ಶಕ್ತಿಯನ್ನು, ಪಶ್ಯ = ನೋಡು (ಹೀಗೆ ಹೇಳಿ), ಸಃ = ಹರಿಯು, ತತಃ = ಆ ತರುವಾಯ, ವಿಕೃತಾಕೃತಿಂ = ವಿಕಾರವಾದ ರೂಪವುಳ್ಳ (ಅಕರಾಳವಿಕರಾಳ ರೂಪದ), ಗರುಡಂ = ಗರುತ್ಮಂತನನ್ನು, ದರ್ಶಯಾಮಾಸ = ತೋರಿಸಿದನು. ತತ್ರಸ್ಥಂ = ಆ ವೈನತೇಯನ ಮೇಲೆ ಇರುವ(ಕುಳಿತಿರುವ), ವಿಶ್ವರೂಪಿಣಂ = ವಿಶ್ವರೂಪನಾದ, ಅವ್ಯಯಂ = ನಾಶರಹಿತನಾದ, ಸಹಸ್ರಭುಜಸಂಯುಕ್ತಂ = ಸಾವಿರತೋಳುಗಳಿಂದ ಸಹಿತನಾದ, ಸಹಸ್ರಾಯುಧಧಾರಿಣಂ = ಸಾವಿರ ಸಂಖ್ಯಾತ ಶಸ್ತ್ರಗಳನ್ನು ಧರಿಸಿರುವ, (ಸಹಸ್ರಾಯುಧಭೂಷಿತಂ = ಸಾವಿರಾರು ಆಯುಧಗಳಿಂದ ಅಲಂಕೃತನಾದ) ವಾಸುದೇವಂ = ಶ್ರೀನಾರಾಯಣನನ್ನು (ಅಂದರೆ ವಾಸುದೇವರೂಪನಾದ ತನ್ನನ್ನೇ) (ದರ್ಶಯಾಮಾಸ = ತೋರಿಸಿದನು), (58) ರಾಕ್ಷಸಃ = ವೃಷಭಾಸುರನು, ತನ್ಮಾಯಾಂ = ವಿಷ್ಣುಮಾಯೆಯನ್ನು, ದೃಷ್ಟ್ವಾ = ನೋಡಿ, ರಾಜೇಂದ್ರ = ರಾಜಶ್ರೇಷ್ಠನಾದ ಜನಕರಾಜ! ಪ್ರತ್ಯೇಕಂ = ಬೇರೆಯ, ಗರುಡಂ = ಗರುಡನನ್ನೂ, ಹರಿಂ = ಅವನ ಮೇಲೆ ಕುಳಿತಿರುವ ಹರಿಯನ್ನೂ, ಸುರಮೋಹಿನೀಂ = ದೇವತೆಗಳಿಗೂ ಭ್ರಮೆಯನ್ನುಂಟುಮಾಡುವ (ಮೋಹಗೊಳಿಸುವ) ಸ್ವಮಾಯಾಂ = ತನ್ನ ರಾಕ್ಷಸ ಮಾಯೆಯನ್ನು, ದರ್ಶಯಾಮಾಸ = ದರ್ಶನ ಮಾಡಿಸಿದನು. ನಕ್ತಂಚರಸ್ಯ = ರಾಕ್ಷಸನ, ಚರಿತಂ = ಮಾಯೆಯ ಚರಿತೆಯನ್ನು, ಅತಿಕ್ರಾಂತುಂ = ಮೀರಿನಡೆಯಲು, ಕ್ಷಮಃ = ಸಮರ್ಥನಾದ, ಹರಿಃ = ವಿಷ್ಣುವು, ವೀರಂ = ಶೂರನಾದ, ರಾಕ್ಷಸಂ = ವೃಷಭಾಸುರನನ್ನು, ಶಶಂಸ = ಹೊಗಳಿ ಇಂತೆಂದನು-ಸಾಧು ಸಾಧು = ಚೆನ್ನಾಗಿದೆ, ಚೆನ್ನಾಗಿದೆ (ಭಲೇ ಭಲೇ), ಇತಿ = ಈ ಪ್ರಕಾರವಾಗಿ, ಅಭ್ಯಭಾಷತ = ನುಡಿದನು. (60) ರೇರೇ ರಾಕ್ಷಸ = ನೀಚನಾದ ರಕ್ಕಸನೇ, ತ್ವಾಂ = ನಿನ್ನನ್ನು ಕುರಿತು (ಮುಕ್ತೇನ = ನನ್ನಿಂದ ಬಿಡಲ್ಪಟ್ಟ), ಶತನೇಮಿನಾ = ಸಾವಿರಾರು ಸಂಖ್ಯೆಯ ಅಲಗುಗಳುಳ್ಳ, ಚಕ್ರೇಣ = ಸುದರ್ಶನ ಚಕ್ರದಿಂದ = ದ್ರುಮಾತ್ = ವೃಕ್ಷದ ದೆಶೆಯಿಂದ, ಪಕ್ವಫಲಂ = ಮಾಗಿದಹಣ್ಣನ್ನು, ಯಥಾ = ಹೇಗೋ (ಹಾಗೆ) ಕಾಯಾತ್ = ನಿನ್ನ ಶರೀರದಿಂದ, ಶಿರಃ = ತಲೆಯನ್ನು, ಆಹರಿಷ್ಯೇ = ತೆಗೆಯುವೆನು, ದೇವರಾಜೇನ = ಇಂದ್ರಾದಿ ದೇವತೆಗಳಿಗೆ ಪ್ರಭುವಾದ ಶ್ರೀಹರಿಯಿಂದ, ಇತಿ = ಹೀಗೆ, ಉಕ್ತಃ = ಹೇಳಲ್ಪಟ್ಟವನಾದ, ವೃಷಭಃ = ವೃಷಭಾಸುರನು, ಭುವಿ = ಭೂಮಿಯ ಮೇಲೆ, ದಂಡವತ್ = ಕಟ್ಟಿಗೆಯೋಪಾದಿಯಲ್ಲಿ ಬಿದ್ದು, ಪ್ರಣಿಪತ್ಯ = ನಮಸ್ಕರಿಸಿ, ಅಸ್ತುವತ್ = ಸ್ತುತಿಸಿದನು. ರಾಕ್ಷಸೇಶ್ವರಃ = ರಕ್ಕಸರಿಗೆ ರಾಜನಾದ ವೃಷಭಾಸುರನು, ವಿಶ್ವೇಶಂ = ಜಗತ್ಸ್ವಾಮಿಯಾದ(ನಿಯಾಮಕ) ಶ್ರೀಹರಿಯನ್ನು ಕುರಿತು, ಆಹ = ಹೇಳಿದನು ॥ 54-62 ॥

*ವೃಷಭ ಉವಾಚ -*

**ಚಕ್ರಪಾಣೇ ನಮಸ್ತುಭ್ಯಂ ಚಕ್ರಸ್ಯ ಚರಿತಂ ಶ್ರುತಮ್ ।**
**ಯಚ್ಚಕ್ರೇಣ ಪ್ರತಪ್ತಸ್ತು ಮುಕ್ತಿಮೇತಿ ನ ಸಂಶಯಃ ॥ 63 ॥**

**ಯಚ್ಚಕ್ರೇಣ ಪುರಾ ರಾಜಾ ಕೀರ್ತಿಮಾನ್ ಕೀರ್ತಿಮಾಪ್ತವಾನ್ ।**
**ತ್ವಚ್ಚಕ್ರೇಣ ಹತಃ ಶೀಘ್ರಂ ವ್ರಜಾಮಿ ತವ ಮಂದಿರಮ್ ॥ 64 ॥**
**ಏವಮುಕ್ತ್ವಾ ಹರೇಃ ಪಾದೌ ಸಂಸ್ಪೃಶ್ಯ ವೃಷಭಾಸುರಃ ।**
**ವರಂ ಯಯಾಚೇ ವೃಷಭೋ ಭವೇಚ್ಛೈಲೋ ಮಮಾಭಿಧಃ ॥ 65 ॥**
**ಭವೇದ್ದೇವಂ ಸಮಾಲಿಂಗ್ಯ ತ್ಯಕ್ತವಾನ್ ಹಿ ಕಲೇವರಮ್ ।**
**ತಸ್ಮಾದ್ವೃಷಭ ಶೈಲೋಽಯಂ ಕೃತೇ ಖ್ಯಾತಿಮಗಾತ್ಪುರಾ ॥ 66 ॥**

ವೃಷಭ ಉವಾಚ = ವೃಷಭಾಸುರನು ಇಂತು ನುಡಿದನು – ಚಕ್ರಪಾಣೇ = ಸುದರ್ಶನ ಚಕ್ರವನ್ನು ಕರದಲ್ಲಿ ಪಿಡಿದಿರುವ ಶ್ರೀಹರಿಯೇ, ತುಭ್ಯಂ = ನಿನಗೆ, ನಮಃ = ನಮಸ್ಕಾರವು, ಚಕ್ರಸ್ಯ = ನಿನ್ನೀ ಸುದರ್ಶನದ, ಚರಿತಂ = ಚರಿತ್ರೆಯು, ಶ್ರುತಂ = (ನನ್ನಿಂದ) ಕೇಳಲ್ಪಟ್ಟಿದೆ. ಯಚ್ಚಕ್ರೇಣ = ಯಾವ ಸುದರ್ಶನ ಚಕ್ರದಿಂದ, ತಪ್ತಸ್ತು = ಅಗ್ನಿಸಂಸ್ಕಾರ ಪೂರ್ವಕ ತಪ್ತನಾದವನು (ತಪ್ತಮುದ್ರಾಂಕಿತನಾದವನು), ಅಥವಾ – ಪ್ರತಪ್ತಃ = ಸಂಹೃತನಾದವನು, ಮುಕ್ತಿಂ = ಮೋಕ್ಷವನ್ನು, ಏತಿ = ಪಡೆಯುವನು, ನ ಸಂಶಯಃ = ಈ ವಿಚಾರದಲ್ಲಿ ಸಂದೇಹವಿಲ್ಲ, ಪುರಾ = ಪೂರ್ವದಲ್ಲಿ, ರಾಜಾ = ದೊರೆಯಾದ, ಕೀರ್ತಿಮಾನ್ = ಕೀರ್ತಿಮಂತನೆಂಬುವನು, ಯಚ್ಚಕ್ರೇಣ = ಯಾವ ನಿನ್ನ ಚಕ್ರದಿಂದ, ಕೀರ್ತಿಂ = ಯಶಸ್ಸನ್ನು, ಆಪ್ತವಾನ್ = ಪಡೆದನು. ತ್ವಚ್ಚಕ್ರೇಣ = ಇಂತಹ ಮಹಿಪೂರ್ಣವಾದ ನಿನ್ನ ಚಕ್ರದಿಂದ, ಹತಃ = ಸಂಹೃತನಾಗಿ, ಶೀಘ್ರಂ = ಶೀಘ್ರವಾಗಿ, ತವ = ನಿನ್ನ, ಮಂದಿರಂ = ಮಂದಿರವಾದ ವೈಕುಂಠವನ್ನು ಕುರಿತು, ವ್ರಜಾಮಿ = ಹೋಗುತ್ತೇನೆ. ಏವಂ = ಹೀಗೆ, ಉಕ್ತ್ವಾ = ಹೇಳಿ, ವೃಷಭಾಸುರಃ = ವೃಷಭಾಸುರನು, ಹರೇಃ = ವಿಷ್ಣುವಿನ, ಪಾದೌ = ಚರಣಗಳನ್ನು, ಸಂಸ್ಪೃಶ್ಯ = ಮುಟ್ಟಿ ನಮಸ್ಕರಿಸಿ, ಶೈಲಃ = ಈ ಪರ್ವತವು, ಮಮ = ನನ್ನ, ವೃಷಅಭಿಧಃ = ವೃಷಭನಾಮದಿಂದ, ಭವೇತ್ = ಪ್ರಸಿದ್ಧವಾಗಲಿ ಎಂದು, ವರಂ = ವರವನ್ನು, ಯಯಾಚೇ = ಬೇಡಿದನು. ನಂತರ, ದೇವಂ = ಶ್ರೀಹರಿಯನ್ನು, ಸಮಾಲಿಂಗ್ಯ = ಆಲಿಂಗಿಸಿ, ಕಲೇವರಂ = ಶ್ರೀವಿಷ್ಣುಚಕ್ರದಿಂದ ಆಹತನಾಗಿ ದೇಹವನ್ನು, ತ್ಯಕ್ತವಾನ್ = ಬಿಟ್ಟನು (ತ್ಯಜಿಸಿದನು), ತಸ್ಮಾತ್ = ಆದುದರಿಂದ (ಶ್ರೀಹರಿಯನ್ನು ಪರ್ವತವು ತನ್ನ ಹೆಸರಿನಿಂದ ಪ್ರಖ್ಯಾತವಾಗುವಂತೆ ವರ ಬೇಡಿ ಪಡೆದದ್ದರಿಂದ), ಪುರಾ = ಹಿಂದೆ, ಕೃತೇ = ಕೃತಯುಗದಲ್ಲಿ, ಅಯಂ = ಈ ಪರ್ವತವು, ವೃಷಭಶೈಲ ಇತಿ = ವೃಷಭಾಚಲವೆಂದು, ಖ್ಯಾತಿಂ = ಪ್ರಸಿದ್ಧಿಯನ್ನು, ಅಗಾತ್ = ಹೊಂದಿತು ॥ 62–66 ॥

## ವೃಷಭಾಚಲ ಮಹಿಮೆಯ ಕಥಾಸಾರ

*ಶತಾನಂದರು:–* ''ರಾಜನ್! ಕೃತಯುಗದಲ್ಲಿ ಈ ಬೆಟ್ಟವು ವೃಷಭಾಚಲವೆಂದೂ, ತ್ರೇತಾಯುಗದಲ್ಲಿ ಅಂಜನಾಚಲವೆಂದೂ, ದ್ವಾಪರಯುಗದಲ್ಲಿ ಶೇಷಾಚಲವೆಂತಲೂ, ಕಲಿಯುಗದಲ್ಲಿ ಈ ಬೆಟ್ಟವು ಸಕಲ ಸಂಪದ್ಯುಕ್ತವಾದ್ದರಿಂದಲೂ, ವೇದಪ್ರತಿಪಾದ್ಯಮಹಿಮೋಪೇತವಾದುದರಿಂದಲೂ ಸಹ ವೇಂಕಟಗಿರಿಯೆಂದೂ ಹೆಸರುವಾಸಿಯಾಯಿತೆಂದು ಪ್ರಾಜ್ಞರು ಹೇಳುವರು. ಈ ಪರ್ವತಕ್ಕೆ ಯುಗಭೇದದಿಂದ ವೃಷಭಾಚಲ–ಅಂಜನಾಚಲ–ಶೇಷಾಚಲ–ವೇಂಕಟಾಚಲವೆಂದು ಹೆಸರು–ಗಳು ಬಂದಿರುವುದು. ಇದು ಪ್ರಸಿದ್ಧವು!'' ಎಂದು ಹೇಳಿದರು.

ಅವರ ಮಾತು ಕೇಳಿ ಜನಕಮಹಾರಾಜನು – ''ಮನನಶೀಲರಾದ ಶತಾನಂದ ಮುನಿಗಳೇ! ಕೃತ ಮೊದಲಾಗಿ ನಾಲ್ಕು ಯುಗಗಳಲ್ಲಿ ಈ ಪರ್ವತಕ್ಕೆ ಬೇರೆ ಬೇರೆ ಹೆಸರುಗಳುಂಟಾದವೆಂದು ನೀವು ಹೇಳಿದಿರಷ್ಟೇ! ಸಂತೋಷ, ಕೃತಯುಗದಲ್ಲಿ ಇದಕ್ಕೆ ವೃಷಾದ್ರಿ ಎಂಬ ಹೆಸರು ಹೇಗೆ ಬಂದಿತು? ದಯಮಾಡಿ ತಿಳಿಸಿರಿ'' ಎಂದು ಪ್ರಾರ್ಥಿಸಿದನು.

ಆಗ ಶತಾನಂದರು ಹೀಗೆ ನಿರೂಪಿಸಹತ್ತಿದರು – ''ಮಹಾರಾಜ, ಕೇಳು, ಪೂರ್ವಕಾಲದಲ್ಲಿ ವೃಷಭನೆಂಬ ರಕ್ಕಸನು ಈ ಸ್ಥಳದಲ್ಲಿದ್ದು ಶೇಷಾಚಲದಲ್ಲಿದ್ದ ತಪಸ್ವಿಗಳಾದ ಋಷಿಮುನಿಗಳನ್ನು ಪೀಡಿಸುತ್ತಿದ್ದನು. ಆ ರಕ್ಕಸನ ಬಾಧೆಯಿಂದ ಅತ್ಯಂತ ಸಂಕಟಕ್ಕೊಳಗಾದ ಋಷಿ-ಮುನಿಗಳು ಭಕ್ತರಿಗೆ ಅಭಯಪ್ರದನೂ, ಶ್ರೀಮಹಾಲಕುಮಿಗೆ ಆಶ್ರಯನೂ ಆದ ವಿಷ್ಣುವಿಗೆ ನೀನೇ ಗತಿಯೆಂದು ಶರಣುಹೋದರು. ವೃಷಭಾಸುರನ ಸಂಹಾರಕ್ಕಾಗಿ ಅವರು ಸಮಸ್ತಚೇತನರನ್ನು ಸೃಜಿಸುವ ಶ್ರೀಹರಿಯನ್ನು ಹರ್ಷಚಿತ್ತರಾಗಿ ಸ್ತೋತ್ರಗಳಿಂದ ಆನಂದಗೊಳಿಸಿದರು. ಋಷಿಗಳು ವೃಷಭಾಸುರನಿಂದ ತಮಗಾಗುತ್ತಿರುವ ಕಷ್ಟವನ್ನೂ, ಅವನು ಕೊಡುತ್ತಿರುವ ಹಿಂಸೆಯನ್ನೂ ಶ್ರೀವಿಷ್ಣುವಿನಲ್ಲಿ ವಿನಂತಿಸಿದರು.

ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಮನ್ನಾರಾಯಣನು ಮುನಿವರರ ಸ್ತುತಿಯಿಂದ ಪ್ರಸನ್ನನಾಗಿ ಸಂತಸದಿಂದ ಮೈದೋರಿದನು. ಆಗ ಪರಮಾನಂದ ತುಂದಿಲರಾದ ಋಷಿಗಳು ಶ್ರೀಹರಿಪರಮಾತ್ಮನಲ್ಲಿ ಇಂತು ವಿಜ್ಞಾಪಿಸಿದರು – ''ದೇವಾಧಿದೇವ! ಹೇ ಭಗವನ್! ಕಮಲನಯನ, ಶ್ರೀನಾರಾಯಣ! ವೃಷಭನೆಂಬ ರಾಕ್ಷಸನೊಬ್ಬನಿದ್ದಾನೆ. ಅವನು ಅತಿ ನೀಚನು, ಹಿಂಸಕನಾಗಿದ್ದಾನೆ, ಮುನಿಗಳ ತಪಸ್ಸನ್ನು ಭಂಗಗೊಳಿಸುತ್ತಾ ಸರ್ವದಾ ನಮಗೆ ಬಹು ವ್ಯಥೆಯನ್ನುಂಟು ಮಾಡುತ್ತಿದ್ದಾನೆ. ಪ್ರಭು! ಆ ವೃಷಭಾಸುರನ ಭಯವನ್ನು ಪರಿಹರಿಸಿ ನಮ್ಮನ್ನು ರಕ್ಷಿಸು.'' ಶ್ರೀಹರಿಯು ಮುನಿಗಳ ಪ್ರಾರ್ಥನೆಯನ್ನು ಆಲಿಸಿ 'ನಿಮ್ಮ ಮನೋಭೀಷ್ಟವನ್ನು ಪೂರೈಸುತ್ತೇನೆ' ಎಂದು ಅವರಿಗೆ ಅಭಯವನ್ನಿತ್ತು, ತನ್ನ ಭಕುತರನ್ನು ಹಿಂಸಿಸುತ್ತಿರುವನೆಂಬ ಕೋಪದಿಂದ ಶ್ರೀಹರಿಯು ವೃಷಭಾಸುರನನ್ನು ಅರಸುತ್ತ ಹೊರಟನು.''

'' ಎಲೈ ಜನಕಮಹಾರಾಜ! ಮುಂದಿನ ಕಥೆಯನ್ನು ಕೇಳು. ಆ ವೃಷಭ ರಾಕ್ಷಸನು ಪ್ರತಿದಿನವೂ ತುಂಬುರುತೀರ್ಥದಲ್ಲಿ ಸ್ನಾನಮಾಡಿ ಉತ್ತಮವೂ, ಸುಕೃತ ಸಂಪಾದಕವೂ ಮತ್ತು ದಿವ್ಯವೂ ಆದ ಕರಾಳವದನದ, ಅಧೋಮುಖವುಳ್ಳ ಶ್ರೀನರಸಿಂಹಮೂರ್ತಿಯ ಶಾಲಗ್ರಾಮವನ್ನು, ಇದರಲ್ಲಿ ಭಗವಂತನು ಸನ್ನಿಹಿತನಾಗಿರುವನೆಂದು ಭಾವಿಸಿ, ಪ್ರತಿದಿನವೂ ಶ್ರೀನರಸಿಂಹಸ್ವಾಮಿಯನ್ನು ಪೂಜಾರಾಧನೆಗಳಿಂದ ಸೇವಿಸುತ್ತಾ, ಪೂಜೆಯು ಮುಗಿದ ಮೇಲೆ, ಫಲ ಸಮರ್ಪಣಾರೂಪವಾಗಿ ತನ್ನ ಶಿರಸ್ಸನ್ನು ಖಡ್ಗದಿಂದ ಕತ್ತರಿಸಿ ನರಸಿಂಹರೂಪೀ ಹರಿಗೆ ಸಮರ್ಪಿಸುವನು. ಇಂತು ದಿನದಿನವೂ ಶಿಲಾರೂಪೀ ಸ್ವಾಮಿಗೆ ಶಿರವನ್ನು ಸಮರ್ಪಿಸುವನು. ಅಚ್ಚರಿಯೆಂದರೆ, ತಕ್ಷಣವೇ ಅವನ ಶಿರವು ಮತ್ತೆ ಅವನ ದೇಹಕ್ಕೆ ಬಂದು ಸೇರುತ್ತಿತ್ತು! ಇದೇ ರೀತಿಯಾಗಿ ಐದು ಸಹಸ್ರ ವರ್ಷಗಳು ಗತಿಸಿದವು.

ಹೀಗೆ ಐದುಸಾವಿರ ವರ್ಷಗಳಾಗುವ ಸಮಯಕ್ಕೆ ಸರಿಯಾಗಿ ಶಾಲಗ್ರಾಮ ಶಿಲೆಯಲ್ಲಿ ಸನ್ನಿಹಿತನಾದ, ಸಮಗ್ರೈಶ್ವರ್ಯ-ವೀರ್ಯ-ಯಶಸ್ಸು-ಸಂಪತ್ತು-ಜ್ಞಾನ ಹಾಗೂ ವಿಜ್ಞಾನಗಳೆಂಬ ಷಡ್ಗುಣ ಸಂಪನ್ನನಾದುದರಿಂದ ಭಗವಚ್ಛಬ್ದವಾಚ್ಯನಾದ, ಕಮಲನಯನನಾದ, ಕಮಲೆಗೆ ಆಶ್ರಯನೂ, ಸಜ್ಜನಪೋಷಕನೂ ಆದ ಶ್ರೀಹರಿಯು ಆ ರಕ್ಕಸನಿಗೆ ಪ್ರತ್ಯಕ್ಷನಾಗಿ ದರ್ಶನವಿತ್ತನು. ಶ್ರೀಹರಿಯನ್ನು ಕಂಡು ವೃಷಭಾಸುರನು ದಂಡಪ್ರಣಾಮ ಮಾಡಿದನು ಮತ್ತು ಶ್ರೀಹರಿಯು ದರ್ಶನ ವಿತ್ತನಲ್ಲಾ ಎಂಬ ಆನಂದಾತಿಶಯದಿಂದ ಮೂರ್ಛೆತಾಳಿದನು. ಜನಕರಾಜ! ಸ್ವಲ್ಪಕಾಲವಾದ ಮೇಲೆ ಆ ವೃಷಭನು ಮೂರ್ಛೆಯಿಂದೆಚ್ಚೆತ್ತು ಬ್ರಹ್ಮರುದ್ರಾದಿಗಳಿಗೆ ನಿಯಾಮಕನಾದ ವಿಷ್ಣುವಿನಲ್ಲಿ ಇಂತು ವಿಜ್ಞಾಪಿಸಿದನು.

''ದೇವ, ಕೇಶವ! ನೀನು ನಾಶರಹಿತನು. ಗೋವಿಂದ, ಬ್ರಹ್ಮರುದ್ರೇಂದ್ರಾದಿ ದೇವತೆಗಳಲ್ಲಿ ನೀನು ಉತ್ತಮನು. ಶ್ರೀನಿವಾಸ, ನಾರಾಯಣ! ಮೋಕ್ಷಕೊಡೆಂದು ನಾನು ನಿನ್ನನ್ನು ಬೇಡುವುದಿಲ್ಲ, ಸ್ವರ್ಗಲೋಕವನ್ನೂ ಬಯಸುವುದಿಲ್ಲ, ಬ್ರಹ್ಮಪದಕ್ಕಾಗಿಯೂ ನಿನ್ನನ್ನು ಯಾಚಿಸುವುದಿಲ್ಲ, ಜಗನ್ನಾಥ! ನೀನು ನನಗೆ ಯುದ್ಧಭಿಕ್ಷೆಯನ್ನು ಕರುಣಿಸು. ಎಲೈ ಪುರುಷೋತ್ತಮನಾದ ವಿಭುವೇ! ನೀನು ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ ಬುದ್ಧ ಮತ್ತು ಕಲ್ಕಿ ಎಂಬ ಹತ್ತು ಅವತಾರಗಳನ್ನೆತ್ತಿ ತೋರಿದ ವೈಭವದ ಪರಿಯನ್ನು ಕೇಳಿದ್ದೇನೆ. ಆಯಾ ಅವತಾರಗಳಲ್ಲಿ

ನೀನು ಪ್ರದರ್ಶಿಸಿದ ಅದ್ಭುತ ಪರಾಕ್ರಮಾದಿ ವೈಶಿಷ್ಟ್ಯಗಳನ್ನೂ ಕೇಳಿ ತಿಳಿದಿದ್ದೇನೆ. ದೇವ! ನೀನು ದಶಾವತಾರ ಕಾಲದಲ್ಲಿ ಪ್ರಕಟಿಸಿದ ನಿನ್ನ ಅಸದೃಶ ಸಾಮರ್ಥ್ಯವು ಸತ್ಯವೆಂಬುದನ್ನೀಗ ನೀನು ನನಗೆ ತೋರಿಸಿಕೊಡು!''

ವೃಷಭಾಸುರನ ವಿಜ್ಞಾಪನೆಯನ್ನು ಕೇಳಿದ ಪ್ರಭುವಾದ ಶ್ರೀಹರಿಯು ತನ್ನ ಪರಾಕ್ರಮದ ಬಲದಿಂದ ಮದಿಸಿದ, ಯುದ್ಧ ಭಿಕ್ಷೆಯನ್ನು ಕೋರುತ್ತಿರುವ ವೃಷಭಾಸುರನನ್ನು ಮಂದಹಾಸ ವದನಾರವಿಂದನಾಗಿ ನೋಡಿ, ರಿಪುಸಂಹಾರಕನಾದ ಭಗವಾನ್ ಶ್ರೀವಿಷ್ಣುವು ''ತಥಾಸ್ತು'' (ಹಾಗೆಯೇ ಆಗಲಿ) ಎಂದರುಹಿ ಯುದ್ಧಕ್ಕೆ ಸನ್ನದ್ಧನಾದನು.

ವೇಂಕಟಗಿರಿಯಲ್ಲಿ ಆಗ ವೃಷಭ – ಶ್ರೀನಿವಾಸರಲ್ಲಿ ಘೋರಕದನವು ಪ್ರಾರಂಭವಾಯಿತು. ಹರಿಯು ತೋರಿದ ಯುದ್ಧಕೌಶಲಕ್ಕೆ ಪ್ರತಿಯಾಗಿ ವೃಷಭನು ತಾನೂ ಕೌಶಲವನ್ನು ಪ್ರದರ್ಶಿಸಿದನು. ವೃಷಭ – ಶ್ರೀನಿವಾಸರ ಅದ್ಭುತವಾದ ಯುದ್ಧ ವೈಖರಿಯನ್ನು ಅಂಬರದಲ್ಲಿ ನೆರೆದಿದ್ದ ಅಮರೇಂದ್ರಾದಿ ಸುಮನಸರು ವಿಸ್ಮಿತರಾಗಿ ನೋಡಿದರು. ಆ ರಕ್ಕಸನ ಕದನ ಕೌಶಲವನ್ನು ಕಂಡು ಶ್ರೀಹರಿಯು ''ಸಾಧು, ಸಾಧು'' ಎಂದು ಶ್ಲಾಘಿಸಿ, ನಂತರ ''ಎಲವೆಲವೋ ರಾಕ್ಷಸಕುಲಸಂಜಾತನಾದ ವೃಷಭ! ಈಗ ನೋಡು ಪುರುಷೋತ್ತಮನಾದ ನನ್ನ ಸಾಮರ್ಥ್ಯವನ್ನು!'' ಎಂದು ಹೇಳಿ ವಿಕಾರಾಕಾರದ ಗರುಡನನ್ನು ತೋರಿಸಿದನು. ಅನಂತರ ವೈನತೇಯನ ಮೇಲೆ ಕುಳಿತಿರುವ ವಿರಾಟ್‌ರೂಪನೂ, ನಾಶರಹಿತನೂ, ಸಹಸ್ರಭುಜಮಂಡಿತನೂ, ಸಹಸ್ರಾರು ವಿಧ ಆಯುಧಗಳನ್ನು ಕರಗಳಲ್ಲಿ ಹಿಡಿದಿರುವವನೂ ಆದ, ತನ್ನದೇ ಆದ ವಿಶ್ವರೂಪವನ್ನು ತೋರಿಸಿದನು. ವೃಷಭಾಸುರನು ಆ ವಿಷ್ಣುಮಾಯೆಯನ್ನು ನೋಡಿದನು. ಹೇ ಜನಕರಾಜ! ಆಗ ಆ ರಕ್ಕಸನೂ ತನ್ನ ಅಸುರ ಮಾಯೆಯಿಂದ ಬೇರೊಬ್ಬ ವಿಕೃತಾಕೃತಿಯ ಗರುಡನನ್ನೂ, ಅವನ ಹೆಗಲೇರಿ ಕುಳಿತಿರುವ ವಿಷ್ಣುವನ್ನೂ ತೋರಿಸಿದನು! ಆ ರಾಕ್ಷಸನ ಮಾಯೆಯು ದಿವಿಜರನ್ನೂ ಭ್ರಮಗೊಳಿಸುವಂತಿತ್ತು. ಈ ವೃಷಭಾಸುರನ ಮೋಹಕರವಾದ ಅಸುರಮಾಯೆಯನ್ನು ಸುಲಭವಾಗಿ ಅತಿಕ್ರಮಿಸಲು ಪರಮಸಮರ್ಥನಾದ ವಿಷ್ಣುವು ಆ ರಕ್ಕಸನನ್ನು ಭಲೇ, ಭಲೇ ಎಂದು ಅಭಿನಂದಿಸಿ, ''ಎಲವೂ ನೀಚ ರಕ್ಕಸನೇ! ಈಗ ನೋಡು ಸಹಸ್ರ ಅಲಗುಗಳಿಂದ ಶೋಭಿಸುವ ನನ್ನೀ ಸುದರ್ಶನ ಚಕ್ರದಿಂದ ಮರದಲ್ಲಿರುವ ಪಕ್ವವಾದ ಫಲವನ್ನು ಕತ್ತರಿಸಿ ಬೀಳಿಸುವಂತೆ, ನಿನ್ನ ದೇಹದಿಂದ ತಲೆಯನ್ನು ಛೇದಿಸಿ, ಬೀಳಿಸುತ್ತೇನೆ'' ಎಂದು ಇಂದ್ರಾದಿಗಳಿಗೆ ಪ್ರಭುವಾದ ಶ್ರೀಹರಿಯು ಹೇಳಲು, ವೃಷಭಾಸುರನು ನೆಲದಮೇಲೆ ಬಿದ್ದು ಸಾಷ್ಟಾಂಗ ಪ್ರಣಾಮ ಮಾಡಿ ಸ್ತುತಿಸಲಾರಂಭಿಸಿದನು.

''ದೇವ, ಚಕ್ರಪಾಣಿ! ಶ್ರೀಹರಿ, ನಿನಗೆ ನಮೋನಮಃ, ಸ್ವಾಮಿ, ನಿನ್ನ ಚಕ್ರದ ಚರಿತೆಯನ್ನು ನಾನು ಕೇಳಿ ತಿಳಿದಿರುವೆನು! ನಿನ್ನ ಸುದರ್ಶನ ಚಕ್ರದಿಂದ ಅಂಕಿತನಾದವನು (ಅಂದರೆ ತಪ್ತಮುದ್ರಾಂಕನ ಮಾಡಿಸಿಕೊಂಡವನು) ಅಥವಾ ಆ ಸುದರ್ಶನ ಚಕ್ರದಿಂದ ಸಂಸ್ಕೃತನಾದವನು (ಅಥವಾ ಸಂಹೃತನಾದವನು) ಮೋಕ್ಷವನ್ನು ಪಡೆಯುವನು. ಇದರಲ್ಲಿ ಸಂದೇಹವಿನಿತಿಲ್ಲ. ಹಿಂದೆ ಕೀರ್ತಿಮಂತನೆಂಬ ದೊರೆಯು ನಿನ್ನೀ ಚಕ್ರದ ಪ್ರಭಾವದಿಂದ ಕೀರ್ತಿಯನ್ನು ಗಳಿಸಿದನು. ಆದುದರಿಂದ ನಾನೀಗ ನಿನ್ನ ಚಕ್ರದ ಪ್ರಭಾವದಿಂದ ಸಂಹೃತನಾಗಿ ಬಹುಬೇಗ ನಿನ್ನ ಮಂದಿರವಾದ ವೈಕುಂಠಕ್ಕೆ ತೆರಳುವೆನು'' ಇಂತು ವಿಜ್ಞಾಪಿಸಿ ವೃಷಭಾಸುರನು ಶ್ರೀಹರಿಯ ಪಾದಸ್ಪರ್ಶ ಮಾಡಿ ನಮಿಸಿ ''ದೇವ! ಈ ಪರ್ವತವು ''ವೃಷಭಾಚಲ'' ಎಂದು ನನ್ನ ಹೆಸರಿನಿಂದ ಪ್ರಖ್ಯಾತವಾಗುವಂತೆ ಅನುಗ್ರಹಿಸು'' ಎಂದು ದೇವರಲ್ಲಿ ವರವನ್ನು ಬೇಡಿದನು. ಭಗವಂತನು ಅದರಂತೆ ವರವಿತ್ತನು. ಅನಂತರ ವೃಷಭಾಸುರನು ಭಗವಂತನನ್ನು ಆಲಿಂಗಿಸಿ, ಶ್ರೀಹರಿಯ ಚಕ್ರದಿಂದ ಸಂಹೃತನಾಗಿ ದೇಹವನ್ನು ತ್ಯಜಿಸಿ ಸದ್ಗತಿಯನ್ನು ಪಡೆದನು. ಆದುದರಿಂದ ಜನಕಮಹಾರಾಜ! ಈ ಕಾರಣದಿಂದಾಗಿ ಕೃತಯುಗದಲ್ಲಿ ಈ ಪರ್ವತವು ''ವೃಃ ಾಚಲ''ವೆಂದು ಪ್ರಖ್ಯಾತವಾಯಿತು.'' ಎಂದು ನಿರೂಪಿಸಿದರು.

ಆ ಖ

## ಅಂಜನಾಚಲ ಮಹಿಮೆ

*ಮೂಲ— ಜನಕ ಉವಾಚ -*

**ಕಥಮಂಜನಶೈಲೇತಿ ತ್ರೇತಾಯಾಂ ನಾಮ ಮೇ ವದ ।**

*ಶತಾನಂದ ಉವಾಚ -*

**ಪುರಾ ಕೇಸರಿಣಃ ಪತ್ನೀ ಅಂಜನಾ ಕಂಜಲೋಚನಾ ॥ 67 ॥**

**ಅನಪತ್ಯಾಖ್ಯದುಃಖೇನ ಮತಂಗಮುನಿಮಭ್ಯಗಾತ್ ।**

**ಆನಮ್ಯ ಮುನಿಶಾರ್ದೂಲಂ ಅನಿಂದ್ಯಾಪತ್ಯಕರ್ಶಿತಾ ॥ 68 ॥**

**ಉವಾಚ ವಚನಂ ನೇತ್ರನೀರಸಿಕ್ತಕಲೇವರಾ ।**

*ಅನ್ವಯಾರ್ಥ:—* ಜನಕ ಉವಾಚ = ಜನಕರಾಯನು ಹೇಳಿದನು, ತ್ರೇತಾಯಾಂ = ತ್ರೇತಾಯುಗದಲ್ಲಿ, ಅಂಜನಶೈಲೇತಿ = ಅಂಜನಾಚಲವೆಂದು, ಕಥಂ (ನಾಮ) = ಹೇಗೆ ಹೆಸರುಂಟಾಯಿತು, ಮೇ = ನನಗೆ, ವದ = ಹೇಳಿರಿ. ಶತಾನಂದ ಉವಾಚ = ಶತಾನಂದರು ಹೇಳಿದರು - ಪೂರಾ = ಪೂರ್ವದಲ್ಲಿ, ಕೇಸರಿಣಃ = ಕೇಸರಿಯೆಂಬ ಕಪಿವೀರನಿಗೆ, ಪತ್ನಿ = ಮಡದಿಯಾದ, ಕಂಜಲೋಚನಾ = ಕಮಲಸದೃಶನೇತ್ರಗಳುಳ್ಳ, ಅಂಜನಾ = ಅಂಜನೆಯೆಂಬುವವಳು, ಅನಪತ್ಯ ದುಃಖೇನ = ಮಕ್ಕಳಿಲ್ಲವೆಂಬ ವ್ಯಥೆಯಿಂದ, ಮತಂಗಮುನಿಂ = ಮತಂಗ ಋಷಿಗಳ ಬಳಿಗೆ, ಅಭ್ಯಗಾತ್ = ಆಗಮಿಸಿದಳು. ಅನಿಂದ್ಯಾ = ಪರಮಪತಿವ್ರತೆಯಾದ, ಅಪತ್ಯಕರ್ಶಿತಾ = ಸಂತಾನವಿಲ್ಲದ ದುಃಖದಿಂದ ಕೃಶಳಾದ, ನೇತ್ರನೀರಸಿಕ್ತಕಲೇವರಾ, ನೇತ್ರ = ಕಣ್ಣುಗಳ, ನೀರ = ನೀರಿನಿಂದ, ಸಿಕ್ತ = ವದ್ದೆಯಾದ, ಕಲೇವರಾ = ಶರೀರವುಳ್ಳ ಆ ಅಂಜನೆಯು, ಮುನಿಶಾರ್ದೂಲಂ = ಋಷಿ ಶ್ರೇಷ್ಠರಾದ ಮತಂಗಮುನಿಗಳನ್ನು, ಆನಮ್ಯ = ನಮಸ್ಕರಿಸಿ, ವಚನಮುವಾಚ = ಮಾತನಾಡಿದಳು.

*ಅಂಜನೋವಾಚ-*

**ಕಿಂ ಮೇ ತಾಪಸಶಾರ್ದೂಲ ಅಪುತ್ರಾಯಾಶ್ಚ ಕಾ ಗತಿಃ ॥ 69 ॥**

**ಏವಮುಕ್ತೋಂಜನಾದೇವ್ಯಾ ಮತಂಗೋ ವಾಕ್ಯಮಬ್ರವೀತ್ ।**

*ಮತಂಗ ಉವಾಚ -*

**ಪಂಪಾಯಾಃ ಪೂರ್ವದಿಗ್ಭಾಗೇ ಪಂಚಾಶದ್ಯೋಜನಾಂತರೇ ॥ 70 ॥**

**ನಾರಸಿಂಹಾಶ್ರಮೋ ದೇವಿ ವರ್ತತೇ ವಸುಧಾತಲೇ ।**

**ತಸ್ಯ ದಕ್ಷಿಣ ದಿಗ್ಭಾಗೇ ನಾರಾಯಣಗಿರೇ ಸ್ತಟೇ ॥ 71 ॥**

**ಉತ್ತರೇ ಸ್ವಾಮಿತೀರ್ಥಸ್ಯ ವರ್ತತೇ ಕ್ರೋಶಮಾತ್ರಕೇ ।**

**ವಿಯದ್ಗಂಗೇತಿ ವಿಖ್ಯಾತಾ ತತ್ರಗಚ್ಛ ಯಥಾ ಸುಖಮ್ ॥ 72 ॥**

ತತ್ರ ಸ್ನಾತ್ವಾ ತು ಕಲ್ಯಾಣಿ ದ್ವಾದಶಾಬ್ದಂ ತಪಶ್ಚರ ।
ತೇನ ಪುಣ್ಯೇನ ತೇ ಪುತ್ರೋ ಭವಿಷ್ಯತಿ ಗುಣಾಧಿಕಃ ॥ 73 ॥

ಮತಂಗೇನೈವಮುಕ್ತಾ ಸಾ ನಾರಾಯಣಗಿರಿಂ ನೃಪ ।
ಕೃತ್ವಾ ಸ್ವಾಮಿಸರಃಸ್ನಾನಂ ಅಶ್ವತ್ಥಸ್ಯ ಪ್ರದಕ್ಷಿಣಮ್ ॥ 74 ॥

ವರಾಹರೂಪಿಣಂ ನತ್ವಾ ಪೀತ್ವಾ ತತ್ಸಲಿಲಂ ಶುಭಮ್ ।
ಆಕಾಶಗಂಗಾಮಾಸಾದ್ಯ ತಪಃ ಕರ್ತುಮುಪಾಶ್ರಿತಾ ॥ 75 ॥

ಮುನೀನಾಮಂತ್ರ್ಯ ಭರ್ತಾರಂ ವ್ರತಾರ್ಥಂ ಭಕ್ಷ್ಯವರ್ಜಿತಾ ।
ಉಪವಾಸಪರಾ ಬಾಲಾ ಬಾಹ್ಯಭೋಗವಿವರ್ಜಿತಾ ॥ 76 ॥

ಕಾಷ್ಠವತ್ಪರ್ಯವಸ್ಥಾಪ್ಯ ಶರೀರಂ ಸ್ವಾತ್ಮನಃ ಶುಚಿಃ ।
ಪೂರ್ಣೇ ಸಂವತ್ಸರೇ ಜಾತೇ ವಾಯುದೇವೋ ಮಹಾಬಲಃ ॥ 77 ॥

ಫಲಮಾದಾಯ ಭಕ್ಷ್ಯಾರ್ಥಂ ಪ್ರತ್ಯಹಂ ದಾಪಯನ್ಮರುತ್ ।
ಅಥೈಕಸ್ಮಿನ್ ದಿನೇ ವಾಯುಃ ಫಲೇ ವೀರ್ಯಂ ಪ್ರಪೂರ್ಯ ಚ ॥ 78 ॥

ವೀರ್ಯಗರ್ಭಫಲಂ ತಸ್ಯಾಃ ಪ್ರಾಕ್ಷಿಪತ್ಕರಸಂಪುಟೇ ।
ಫಲಂ ಸಾ ಮನ್ಯಮಾನಾ ಹಿ ಕ್ಷುದಾರ್ತಾ ತತ್ಪ್ರಭಕ್ಷಯತ್ ॥ 79 ॥

ತತೋ ಗರ್ಭಃ ಸಮುತ್ಪನ್ನೋಽಂಜನಾಯಾಶ್ಚ ಭೂಮಿಪ ।
ಮುನೀನಾಮಭವದ್ಧರ್ಷೋ ವಾಯೋರ್ಗರ್ಭ ಸಮುದ್ಭವಃ ॥ 80 ॥

ಅಂಜನಾ ದಶಮಾಸಾಂತೇ ಸುಷುವೇ ಪುತ್ರಮುತ್ತಮಮ್ ।
ಹನೂಮಂತಮಮುಂ ಪ್ರಾಹುಃ ಮುನಯೋ ವೀತಕಲ್ಮಷಾಃ ॥ 81 ॥

ಅಂಜನಾ ವ್ರತಮಾಸ್ಥಾಯ ಪ್ರಾಪ್ತ ಪುತ್ರಾ ಭವದ್ಗಿರೌ ।
ತಸ್ಮಾದಂಜನಶೈಲೋಽಯಂ ಲೋಕೇ ವಿಖ್ಯಾತ ಕೀರ್ತಿಮಾನ್ ॥ 82 ॥

ಅಂಜನೋವಾಚ = ಅಂಜನೆಯು ಹೇಳಿದಳು - ತಾಪಸಶಾರ್ದೂಲ = ಎಲೈ ಮುನಿವರ್ಯ, ಅಪುತ್ರಾಯಾಃ = ಮಕ್ಕಳಿಲ್ಲದ, ಮೇ = ನನಗೆ, ಕಾ ಗತಿಃ = ಮುಂದೇನು ಗತಿ? ಕಿಂ = ನಾನೇನು ಮಾಡಲಿ? ಅಂಜನಾದೇವ್ಯಾ = ಅಂಜನಾದೇವಿಯಿಂದ, ಏವಮುಕ್ತಃ = ಹೀಗೆ ಹೇಳಿಸಿಕೊಳ್ಳಲ್ಪಟ್ಟವನಾದ, ಮತಂಗಃ = ಮತಂಗಮುನಿಯು, ವಾಕ್ಯಂ = ಮಾತನ್ನು, ಅಬ್ರವೀತ್ = ಹೇಳಿದನು. ಮತಂಗ ಉವಾಚ = ಮತಂಗ ಋಷಿಗಳು ಮಾತನಾಡಿದರು. ಪಂಪಾಯಾಃ = ಪಂಪಾಸರೋವರದ, ಪೂರ್ವದಿಗ್ಭಾಗೇ = ಪೂರ್ವದಿಕ್ಕಿನಲ್ಲಿರುವ ಸ್ಥಳದಲ್ಲಿ, ಪಂಚಾಶತ್ ಯೋಜನಾಂತರೇ = ಐವತ್ತು (ಗಾವುದಗಳ) ಯೋಜನಗಳ ಮಧ್ಯದಲ್ಲಿ, ದೇವಿ = ಎಲೈ ಅಂಜನಾದೇವಿ ! ವಸುಧಾತಲೇ = ಭೂಮಿಯಲ್ಲಿ

ನಾರಸಿಂಹಾಶ್ರಮಃ = ಶ್ರೀನರಸಿಂಹಾಶ್ರಮವು, ವರ್ತತೇ = ಇರುವುದು. ತಸ್ಯ = ಆ ನರಸಿಂಹಾಶ್ರಮದ, ದಕ್ಷಿಣ ದಿಗ್ಭಾಗೇ = ದಕ್ಷಿಣ ದಿಕ್ಕಿಗಿರುವ ಪ್ರದೇಶದಲ್ಲಿ, ನಾರಾಯಣಗಿರೇಃ = ನಾರಾಯಣ ಪರ್ವತದ, ತಟೇ = ದಡದಲ್ಲಿ, ಸ್ವಾಮಿತೀರ್ಥಸ್ಯ = ಸ್ವಾಮಿಪುಷ್ಕರಣೀತೀರ್ಥದ, ಉತ್ತರೇ = ಉತ್ತರ ದಿಕ್ಕಿನಲ್ಲಿ, ಕ್ರೋಶಮಾತ್ರಕೇ = ಒಂದು ಹರಿದಾರಿಯ ದೂರದಲ್ಲಿ, ವಿಯದ್ಗಂಗೇತಿ = ಆಕಾಶಗಂಗಾ ಎಂದು, ವಿಖ್ಯಾತಾ = ಪ್ರಸಿದ್ಧವಾದ ತೀರ್ಥವೊಂದು, (ಅಸ್ತಿ = ಇದೆ). ತತ್ರ = ಆ ಆಕಾಶಗಂಗಾ ತೀರ್ಥವಿರುವ ಕ್ಷೇತ್ರಕ್ಕೆ, ಯಥಾಸುಖಂ = ಸುಖವಾಗುವುದು ಹೇಗೋ ಹಾಗೆ (ಸುಖವಾಗಿ), ಗಚ್ಛ = ಹೋಗು, ಕಲ್ಯಾಣಿ = ಶೋಭನಾಂಗಿ, ತತ್ರ = ಆಕಾಶಗಂಗೆಯಲ್ಲಿ, ಸ್ನಾತ್ವಾ = ಸ್ನಾನಮಾಡಿ, ದ್ವಾದಶಾಬ್ದಂ = ಹನ್ನೆರಡು ವರುಷಕಾಲ, ತಪಃ = ತಪಸ್ಸನ್ನು, ಚರ = ಮಾಡು. ತೇನ = ಆ ತಪಸ್ಸಿನ, ಪುಣ್ಯೇನ = ಪುಣ್ಯಫಲದಿಂದ, ತೇ = ನಿನಗೆ, ಗುಣಾಧಿಕಃ = ಸದ್ಗುಣ ಶ್ರೇಷ್ಠನಾದ, ಪುತ್ರಃ = ಕುವರನು, ಭವಿಷ್ಯತಿ = ಆಗುತ್ತಾನೆ (ಜನಿಸುತ್ತಾನೆ.) (73) ನೃಪ = ಜನಕರಾಯನೇ, ಮತಂಗೇನ = ಮತಂಗಮುನಿಯಿಂದ, ಏವಂ = ಇಂತು, ಉಕ್ತಾ = ಹೇಳಲ್ಪಟ್ಟ, ಸಾ = ಅಂಜನೆಯು, ನಾರಾಯಣಗಿರಿಂ = ನಾರಾಯಣ ಪರ್ವತವನ್ನು (ಸೇರಿ), ಸ್ವಾಮಿಸರಃಸ್ನಾನಂ = ಸ್ವಾಮಿಪುಷ್ಕರಣಿಯ ಜಲದಲ್ಲಿ ಸ್ನಾನವನ್ನು, ಕೃತ್ವಾ = ಮಾಡಿ, ಅಶ್ವತ್ಥಸ್ಯ = ಅಶ್ವತ್ಥವೃಕ್ಷಕ್ಕೆ, ಪ್ರದಕ್ಷಿಣಂ = ಪ್ರದಕ್ಷಿಣೆಯನ್ನು, ಕೃತ್ವಾ = (ಮಾಡಿ) ನೆರವೇರಿಸಿ, ವರಾಹರೂಪಿಣಂ = ಶ್ರೀವರಾಹರೂಪದ ಹರಿಗೆ, ನತ್ವಾ = ನಮಸ್ಕರಿಸಿ, ಶುಭಂ = ಮಂಗಳಪ್ರದವಾದ, ತತ್ = ಆ ವರಾಹಕ್ಷೇತ್ರದಲ್ಲಿರುವ ನೀರನ್ನು, ಪೀತ್ವಾ = ಪಾನಮಾಡಿ (ಕುಡಿದು) ಆಕಾಶಗಂಗಾಂ = ಆಕಾಶಗಂಗಾತೀರ್ಥವನ್ನು, ಆಸಾದ್ಯ = ಹೊಂದಿ, ತಪಃ = ತಪಸ್ಸನ್ನು, ಕರ್ತುಂ = ಮಾಡಲೋಸುಗ, ಉಪಾಶ್ರಿತಾ = ಆ ಸುಕ್ಷೇತ್ರವನ್ನು ಆಶ್ರಯಿಸಿದಳು. ಭಕ್ಷ್ಯಾರ್ಥಂ = ಆಹಾರಾದಿ ನಿಯಮಗಳಿಗಾಗಿ, ಭರ್ತಾರಂ = ಪತಿಯಾದ ಕೇಸರಿಯನ್ನು, ಮುನೀನ್ = ಋಷಿಮುನಿಗಳನ್ನು, ಆಮಂತ್ರ್ಯ = ಆಹ್ವಾನಿಸಿ ವಿಚಾರವಿನಿಮಯದಿಂದ ನಿಯಮ ನಿಬಂಧನೆಗಳನ್ನು ಕೇಳಿ ತಿಳಿದುಕೊಂಡು, ಭಕ್ಷ್ಯವರ್ಜಿತಾ = ಭಕ್ಷ್ಯಾದಿ ಆಹಾರರಹಿತಳಾಗಿ, ಉಪವಾಸಪರಾ = ಉಪೋಷಣ ಮಾಡುತ್ತಾ, ಬಾಹ್ಯಭೋಗ ವಿವರ್ಜಿತಾ- ಬಾಹ್ಯ = ಹೊರಗಿನ, ಭೋಗ = ವಸ್ತ್ರಾಲಂಕಾರ ಭೋಗ - ನಿದ್ರಾದಿ ಸುಖಗಳಿಂದ, ವಿವರ್ಜಿತಳಾಗಿ, ಬಾಲಾ = ಹದಿವಯಸ್ಸಿನವಳಾದ ಅಂಜನೆಯು, ಶುಚಿಃ = ಪರಿಶುದ್ಧಳಾಗಿ, ಸ್ವಾತ್ಮನಃ = ತನ್ನ, ಶರೀರಂ = ದೇಹವನ್ನು, ಕಾಷ್ಠವತ್ = ಕಟ್ಟಿಗೆಯೋಪಾದಿಯಲ್ಲಿ ಪರ್ಯವಸ್ಥಾಯ = (ಪರ್ಯವಸ್ಥಾಪ್ಯ) ನಿಲ್ಲಿಸುವವಳಾಗಿ, ಕಠೋರವಾದ ತಪಸ್ಸಿನಲ್ಲಿ ಮಗ್ನಳಾದಳು ಎಂದು ಭಾವ.

ಸಂವತ್ಸರೇ = ಒಂದು ವರ್ಷಕಾಲವು, ಪೂರ್ಣೇ ಜಾತೇ ಸತಿ = ಪೂರ್ಣವಾಗುತ್ತಿರಲು, ಮಹಾಬಲಃ = ಅತ್ಯಂತ ಬಲಶಾಲಿಯಾದ, ಮರುತ್ = ಮಾರುತನು, ವಾಯುಃ = ಮುಖ್ಯಪ್ರಾಣದೇವನು, ಫಲಂ = ಒಂದು ಹಣ್ಣನ್ನು, ಆದಾಯ = ತೆಗೆದುಕೊಂಡು ಬಂದು, ಪ್ರತ್ಯಹಂ = ಪ್ರತಿದಿನವೂ, ದಾಪಯತ್ = ಗಾಳಿಯ ಮೂಲಕವಾಗಿ ಅಂಜನೆಗೆ ನೀಡುತ್ತಿದ್ದನು. ಅಥ = ಅನಂತರ, ವಾಯುಃ = ವಾಯುದೇವನು, ಏಕಸ್ಮಿನ್ ದಿನೇ = ಒಂದು ದಿವಸ, ಫಲೇ = ಹಣ್ಣಿನಲ್ಲಿ, ವೀರ್ಯಂ = ವೀರ್ಯವನ್ನು (ತನ್ನ ತೇಜಸ್ಸನ್ನು) ಪ್ರಪೂರ್ಯಚ = ತುಂಬಿದವನಾಗಿ, ತಸ್ಯಾಃ = ಅಂಜನಾದೇವಿಯ, ಕರಸಂಪುಟೇ = ಕರಪುಟದಲ್ಲಿ ವೀರ್ಯಗರ್ಭಂ = ವೀರ್ಯದಿಂದ ತುಂಬಿದ (ತೇಜಸ್ಸಿನಿಂದ ಪೂರ್ಣವಾದ), ಫಲಂ = ಹಣ್ಣನ್ನು, ಪ್ರಾಕ್ಷಿಪತ್ = ಹಾಕಿದನು. ಕ್ಷುದಾರ್ತಾ - ಕ್ಷುದಾ = ಹಸಿವಿನಿಂದ, ಆರ್ತಾ = ಪೀಡಿತಳಾದ, ಸಾ = ಆ ಅಂಜನಾದೇವಿಯು, ಫಲಂ = ಅದನ್ನು ಸಾಮಾನ್ಯ ಫಲವೆಂದು, ಮನ್ಯಮಾನಾ = ತಿಳಿದವಳಾಗಿ, ತತ್ = ಶ್ರೀ ವಾಯುದೇವರ ವೀರ್ಯದಿಂದ (ತೇಜಸ್ಸಿನಿಂದ) ಪೂರ್ಣವಾದ ಆ ಫಲವನ್ನು ಪ್ರಭಕ್ಷಯತ್ = ಸಂತೋಷದಿಂದ ಭಕ್ಷಿಸಿದಳು ॥ 79 ॥ ಭೂಮಿಪ = ಧರೆಗರಸನಾದ ಜನಕರಾಯ, ತತಃ = ಆ ತರುವಾಯ, ಅಂಜನಾಯಾಃ = ಅಂಜನಾದೇವಿಗೆ, ಗರ್ಭಂ = ಗರ್ಭವು, ಸಮುತ್ಪನ್ನಾ = ಉಂಟಾಯಿತು (ಅಂಜನೆಯು ಗರ್ಭಿಣಿಯಾದಳು) ಚ = ಮತ್ತು, ವಾಯೋಃ = ವಾಯುದೇವರ ದೆಸೆಯಿಂದ, ಗರ್ಭಸಮುದ್ಭವಃ = ಅಂಜನೆಯಲ್ಲಿ ಗರ್ಭೋತ್ಪತ್ತಿಯಿಂದ, ಮುನೀನಾಂ = ಅಲ್ಲಿನ ಋಷಿಮುನಿಗಳಿಗೆ, ಹರ್ಷಃ = ಸಂತೋಷವು, ಅಭವತ್ = ಉಂಟಾಯಿತು

(ಶ್ರೀಮುಖ್ಯಪ್ರಾಣದೇವರಿಂದ ಅಂಜನೆಯು ಗರ್ಭಿಣಿಯಾದಳೆಂಬ ವಿಷಯ ಋಷಿಗಳಿಗೆ ಹರ್ಷವಾಯಿತೆಂದು ಭಾವ. (80) ಅಂಜನಾ = ಅಂಜನೆಯು, ದಶಮಾಸಾಂತೇ = ಹತ್ತನೆಯ ತಿಂಗಳ ಕೊನೆಗೆ, ಉತ್ತಮಂ = ಶ್ರೇಷ್ಠನಾದ, ಪುತ್ರಂ = ಮಗನನ್ನು ಸುಷುವೇ = ಪ್ರಸವಿಸಿದಳು (ಹಡೆದಳು). ವೀತಕಲ್ಮಷಾಃ - ವೀತ = ಕಳೆದುಹೋದ, ಕಲ್ಮಷಾಃ = ಪಾಪವುಳ್ಳ, ಮುನಯಃ = ಋಷಿಮುನಿಗಳು, ಅಮುಂ = ಈ ಅಂಜನೆಯ ಮಗನನ್ನು, ಹನೂಮಂತಂ = ಹನುಮಂತನೆಂದು, ಪ್ರಾಹುಃ = ಹೇಳುವರು. (ಆ ಮಗುವಿಗೆ ಹನೂಮಂತನೆಂದು ನಾಮಕರಣ ಮಾಡಿದರೆಂದು ಭಾವ) ಗಿರೌ = ಈ ವೃಷಭ ಪರ್ವತದಲ್ಲಿ, ಅಂಜನಾ = ಅಂಜನಾದೇವಿಯು, ವ್ರತಂ = ನಿಯಮವನ್ನು, ಆಸ್ಥಾಯ = ಸಕ್ರಮವಾಗಿ ಆಚರಿಸಿ, ಪ್ರಾಪ್ತಪುತ್ರಾ = ಪುತ್ರನನ್ನು ಪಡೆದವಳು (ಅಭವತ್ = ಆದಳು), ತಸ್ಮಾತ್ = ಆದುದರಿಂದ, ಲೋಕೇ = ಜಗತ್ತಿನಲ್ಲಿ ಅಯಂ = ಈ ವೃಷಭಾಚಲವು, ಅಂಜನಶೈಲೇತಿ = ಅಂಜನಾಚಲವೆಂದು, ತ್ರೇತಾಯುಗದಲ್ಲಿ ವಿಖ್ಯಾತಕೀರ್ತಿಮಾನ್ - ವಿಖ್ಯಾತ = ಪ್ರಸಿದ್ಧವಾದ, ಕೀರ್ತಿಮಾನ್ = ಕೀರ್ತಿಯುಳ್ಳದ್ದು (ಅಭವತ್) ಆಯಿತು. ॥ 82 ॥

*ಜನಕ ಉವಾಚ -*

**ಸುಸಂತೋಷೋ ಭವದ್ಬ್ರಹ್ಮನ್ ಶ್ರುತ್ವಾ ತನ್ನಾಮಕಾರಣಮ್ ।**
**ದ್ವಾಪರೇ ಶೇಷಶೈಲೇತಿ ಕಥಂ ಖ್ಯಾತಿರ್ಭವಿಷ್ಯತಿ ॥ 83 ॥**

ಜನಕ ಉವಾಚ = ಆಗ ಜನಕರಾಯನು ಇಂತೆಂದನು. ಬ್ರಹ್ಮನ್ = ಬ್ರಾಹ್ಮಣೋತ್ತಮರಾದ (ಉತ್ತಮ ಬ್ರಹ್ಮಜ್ಞಾನಿಗಳಾದ) ಶತಾನಂದ ಮುನಿಗಳೇ, ತನ್ನಾಮಕಾರಣಂ = ಆ ಪರ್ವತಕ್ಕೆ ಅಂಜನಾಚಲವೆಂದು ಹೆಸರುಂಟಾದುದರ ಕಾರಣವನ್ನು, ಶ್ರುತ್ವಾ = ಕೇಳಿ, ಸುಸಂತೋಷಃ = ಸಮೀಚೀನಹರ್ಷವು ಅಭವತ್ = ಉಂಟಾಯಿತು. ದ್ವಾಪರೇ = ದ್ವಾಪರಯುಗದಲ್ಲಿ, ಶೇಷಶೈಲೇತಿ = ಶೇಷಾಚಲವೆಂದು, ಖ್ಯಾತಿಃ = ಪ್ರಸಿದ್ಧಿಯು, ಕಥಂ = ಹೇಗೆ, ಭವಿಷ್ಯತಿ = ಪ್ರಾಪ್ತವಾಗುವುದು? (ಎಂಬುದನ್ನು ನಿರೂಪಿಸಿರಿ ಎಂದು ಭಾವ) ॥ 83 ॥

## ಅಂಜನಾಚಲ ಮಹಿಮೆಯ ಕಥಾಸಾರ

ಜನಕರಾಯನು ಶತಾನಂದ ಮುನಿಗಳ ನಿರೂಪಣೆಯನ್ನಾಲಿಸಿ ಪರಮಾನಂದ ಭರಿತನಾಗಿ "ಸ್ವಾಮಿ, ತ್ರೇತಾಯುಗದಲ್ಲಿ ಈ ಪರ್ವತಕ್ಕೆ 'ಅಂಜನಾಚಲ'ವೆಂಬ ಹೆಸರು ಹೇಗೆ ಬಂದಿತು? ತಿಳಿಸುವ ಕೃಪೆಮಾಡಿರಿ" ಎಂದು ಪ್ರಾರ್ಥಿಸಲು ಶತಾನಂದರು ಇಂತು ನಿರೂಪಿಸಿದರು.

"ಪೂರ್ವದಲ್ಲಿ ಕೇಸರಿಯೆಂಬ ಕಪಿವೀರನಿಗೆ ಕಮಲನಯನೆಯಾದ ಅಂಜನೆಯೆಂಬ ಪತ್ನಿಯಿದ್ದಳು. ಅವಳು ತನಗೆ ಮಕ್ಕಳಾಗಲಿಲ್ಲವೆಂಬ ದುಃಖದಿಂದ ಮತಂಗ ಋಷಿಗಳ ಆಶ್ರಮಕ್ಕೆ ಆಗಮಿಸಿದಳು. ಪರಮಪತಿವ್ರತೆಯೂ, ಸಂತಾನವಿಲ್ಲದ ವ್ಯಥೆಯಿಂದ ಕೃಶಳೂ ಆದ, ಆ ಅಂಜನಾದೇವಿಯು ಕಣ್ಣೀರು ಸುರಿಸುತ್ತಾ ಋಷಿಪುಂಗವರಾದ ಮತಂಗ ಮುನಿಗಳ ಕಾಲಿಗೆರಗಿ ವಿಜ್ಞಾಪಿಸಿದಳು.

ಅಂಜನೆ:- ಋಷಿಶ್ರೇಷ್ಠರೇ ! ಸಂತಾನ ಭಾಗ್ಯವಿಲ್ಲದ ನನಗೆ ಮುಂದೇನು ಗತಿ ? ಈಗ ನಾನೇನು ಮಾಡಬೇಕು ? ತಾವು ನನಗೆ ಮಾರ್ಗದರ್ಶನ ಮಾಡಬೇಕು.

ಮತಂಗರು:- ವತ್ಸೆ ! ನಿನ್ನ ಮನದ ದುಃಖ ಪರಿಹಾರವಾಗುವುದು, ಚಿಂತಿಸದಿರು. ಕೇಳು - ಪಂಪಾಸರೋವರದ ಪೂರ್ವದಿಕ್ಕಿನಲ್ಲಿ ಐವತ್ತು ಯೋಜನಗಳ ಮಧ್ಯದ ವಸುಧಾತಳದಲ್ಲಿ ನರಸಿಂಹಾಶ್ರಮವಿದೆ. ಅಂಜನಾದೇವಿ, ಆ

ನಾರಸಿಂಹಾಶ್ರಮಃ = ಶ್ರೀನರಸಿಂಹಾಶ್ರಮವು, ವರ್ತತೇ = ಇರುವುದು. ತಸ್ಯ = ಆ ನರಸಿಂಹಾಶ್ರಮದ, ದಕ್ಷಿಣ ದಿಗ್ಭಾಗೇ = ದಕ್ಷಿಣ ದಿಕ್ಕಿಗಿರುವ ಪ್ರದೇಶದಲ್ಲಿ, ನಾರಾಯಣಗಿರೇಃ = ನಾರಾಯಣ ಪರ್ವತದ, ತಟೇ = ದಡದಲ್ಲಿ, ಸ್ವಾಮಿತೀರ್ಥಸ್ಯ = ಸ್ವಾಮಿಪುಷ್ಕರಣೀತೀರ್ಥದ, ಉತ್ತರೇ = ಉತ್ತರ ದಿಕ್ಕಿನಲ್ಲಿ, ಕ್ರೋಶಮಾತ್ರಕೇ = ಒಂದು ಹರಿದಾರಿಯ ದೂರದಲ್ಲಿ, ವಿಯದ್ಗಂಗೇತಿ = ಆಕಾಶಗಂಗಾ ಎಂದು, ವಿಖ್ಯಾತಾ = ಪ್ರಸಿದ್ಧವಾದ ತೀರ್ಥವೊಂದು, (ಅಸ್ತಿ = ಇದೆ). ತತ್ರ = ಆ ಆಕಾಶಗಂಗಾ ತೀರ್ಥವಿರುವ ಕ್ಷೇತ್ರಕ್ಕೆ, ಯಥಾಸುಖಂ = ಸುಖವಾಗುವುದು ಹೇಗೋ ಹಾಗೆ (ಸುಖವಾಗಿ), ಗಚ್ಛ= ಹೋಗು, ಕಲ್ಯಾಣಿ = ಶೋಭನಾಂಗಿ, ತತ್ರ = ಆಕಾಶಗಂಗೆಯಲ್ಲಿ, ಸ್ನಾತ್ವಾ = ಸ್ನಾನಮಾಡಿ, ದ್ವಾದಶಾಬ್ದಂ = ಹನ್ನೆರಡು ವರುಷಕಾಲ, ತಪಃ = ತಪಸ್ಸನ್ನು, ಚರ = ಮಾಡು. ತೇನ = ಆ ತಪಸ್ಸಿನ, ಪುಣ್ಯೇನ = ಪುಣ್ಯಫಲದಿಂದ, ತೇ = ನಿನಗೆ, ಗುಣಾಧಿಕಃ = ಸದ್ಗುಣ ಶ್ರೇಷ್ಠನಾದ, ಪುತ್ರಃ = ಕುವರನು, ಭವಿಷ್ಯತಿ = ಆಗುತ್ತಾನೆ (ಜನಿಸುತ್ತಾನೆ.) (73) ನೃಪ = ಜನಕರಾಯನೇ, ಮತಂಗೇನ = ಮತಂಗಮುನಿಯಿಂದ, ಏವಂ = ಇಂತು, ಉಕ್ತಾ = ಹೇಳಲ್ಪಟ್ಟ, ಸಾ = ಅಂಜನೆಯು, ನಾರಾಯಣಗಿರಿಂ = ನಾರಾಯಣ ಪರ್ವತವನ್ನು (ಸೇರಿ), ಸ್ವಾಮಿಸರಃಸ್ನಾನಂ = ಸ್ವಾಮಿಪುಷ್ಕರಣಿಯ ಜಲದಲ್ಲಿ ಸ್ನಾನವನ್ನು, ಕೃತ್ವಾ = ಮಾಡಿ, ಅಶ್ವತ್ಥಸ್ಯ = ಅಶ್ವತ್ಥವೃಕ್ಷಕ್ಕೆ, ಪ್ರದಕ್ಷಿಣಂ = ಪ್ರದಕ್ಷಿಣೆಯನ್ನು, ಕೃತ್ವಾ = (ಮಾಡಿ) ನೆರವೇರಿಸಿ, ವರಾಹರೂಪಿಣಂ = ಶ್ರೀವರಾಹರೂಪದ ಹರಿಗೆ, ನತ್ವಾ = ನಮಸ್ಕರಿಸಿ, ಶುಭಂ = ಮಂಗಳಪ್ರದವಾದ, ತತ್ = ಆ ವರಾಹಕ್ಷೇತ್ರದಲ್ಲಿರುವ ನೀರನ್ನು, ಪೀತ್ವಾ = ಪಾನಮಾಡಿ (ಕುಡಿದು) ಆಕಾಶಗಂಗಾಂ = ಆಕಾಶಗಂಗಾತೀರ್ಥವನ್ನು, ಆಸಾದ್ಯ = ಹೊಂದಿ, ತಪಃ = ತಪಸ್ಸನ್ನು, ಕರ್ತುಂ = ಮಾಡಲೋಸುಗ, ಉಪಾಶ್ರಿತಾ = ಆ ಸುಕ್ಷೇತ್ರವನ್ನು ಆಶ್ರಯಿಸಿದಳು. ಭಕ್ಷ್ಯಾರ್ಥಂ = ಆಹಾರಾದಿ ನಿಯಮಗಳಿಗಾಗಿ, ಭರ್ತಾರಂ = ಪತಿಯಾದ ಕೇಸರಿಯನ್ನು, ಮುನೀನ್ = ಋಷಿಮುನಿಗಳನ್ನು, ಆಮಂತ್ರ್ಯ = ಆಹ್ವಾನಿಸಿ ವಿಚಾರವಿನಿಮಯದಿಂದ ನಿಯಮ ನಿಬಂಧನೆಗಳನ್ನು ಕೇಳಿ ತಿಳಿದುಕೊಂಡು, ಭಕ್ಷ್ಯವರ್ಜಿತಾ = ಭಕ್ಷ್ಯಾದಿ ಆಹಾರರಹಿತಳಾಗಿ, ಉಪವಾಸಪರಾ = ಉಪೋಷಣ ಮಾಡುತ್ತಾ, ಬಾಹ್ಯಭೋಗ ವಿವರ್ಜಿತಾ- ಬಾಹ್ಯ = ಹೊರಗಿನ, ಭೋಗ = ವಸ್ತ್ರಾಲಂಕಾರ ಭೋಗ - ನಿದ್ರಾದಿ ಸುಖಗಳಿಂದ, ವಿವರ್ಜಿತಳಾಗಿ, ಬಾಲಾ = ಹದಿವಯಸ್ಸಿನವಳಾದ ಅಂಜನೆಯು, ಶುಚಿಃ = ಪರಿಶುದ್ಧಳಾಗಿ, ಸ್ವಾತ್ಮನಃ = ತನ್ನ, ಶರೀರಂ = ದೇಹವನ್ನು, ಕಾಷ್ಠವತ್ = ಕಟ್ಟಿಗೆಯೋಪಾದಿಯಲ್ಲಿ, ಪರ್ಯವಸ್ಥಾಯ = (ಪರ್ಯವಸ್ಥಾಪ್ಯ) ನಿಲ್ಲಿಸುವವಳಾಗಿ, ಕಠೋರವಾದ ತಪಸ್ಸಿನಲ್ಲಿ ಮಗ್ನಳಾದಳು ಎಂದು ಭಾವ.

ಸಂವತ್ಸರೇ = ಒಂದು ವರ್ಷಕಾಲವು, ಪೂರ್ಣೇ ಜಾತೇ ಸತಿ = ಪೂರ್ಣವಾಗುತ್ತಿರಲು, ಮಹಾಬಲಃ = ಅತ್ಯಂತ ಬಲಶಾಲಿಯಾದ, ಮರುತ್ = ಮಾರುತನು, ವಾಯುಃ = ಮುಖ್ಯಪ್ರಾಣದೇವನು, ಫಲಂ = ಒಂದು ಹಣ್ಣನ್ನು, ಆದಾಯ = ತೆಗೆದುಕೊಂಡು ಬಂದು, ಪ್ರತ್ಯಹಂ = ಪ್ರತಿದಿನವೂ, ದಾಪಯತ್ = ಗಾಳಿಯ ಮೂಲಕವಾಗಿ ಅಂಜನೆಗೆ ನೀಡುತ್ತಿದ್ದನು. ಅಥ = ಅನಂತರ, ವಾಯುಃ = ವಾಯುದೇವನು, ಏಕಸ್ಮಿನ್ ದಿನೇ = ಒಂದು ದಿವಸ, ಫಲೇ = ಹಣ್ಣಿನಲ್ಲಿ, ವೀರ್ಯಂ = ವೀರ್ಯವನ್ನು (ತನ್ನ ತೇಜಸ್ಸನ್ನು) ಪ್ರಪೂರ್ಯಚ = ತುಂಬಿದವನಾಗಿ, ತಸ್ಯಾಃ = ಅಂಜನಾದೇವಿಯ, ಕರಸಂಪುಟೇ = ಕರಪುಟದಲ್ಲಿ ವೀರ್ಯಗರ್ಭಂ = ವೀರ್ಯದಿಂದ ತುಂಬಿದ (ತೇಜಸ್ಸಿನಿಂದ ಪೂರ್ಣವಾದ), ಫಲಂ = ಹಣ್ಣನ್ನು, ಪ್ರಾಕ್ಷಿಪತ್ = ಹಾಕಿದನು. ಕ್ಷುದಾರ್ತಾ - ಕ್ಷುದಾ = ಹಸಿವಿನಿಂದ, ಆರ್ತಾ = ಪೀಡಿತಳಾದ, ಸಾ = ಆ ಅಂಜನಾದೇವಿಯು, ಫಲಂ = ಅದನ್ನು ಸಾಮಾನ್ಯ ಫಲವೆಂದು, ಮನ್ಯಮಾನಾ = ತಿಳಿದವಳಾಗಿ, ತತ್ = ಶ್ರೀ ವಾಯುದೇವರ ವೀರ್ಯದಿಂದ (ತೇಜಸ್ಸಿನಿಂದ) ಪೂರ್ಣವಾದ ಆ ಫಲವನ್ನು ಪ್ರಭಕ್ಷಯತ್ = ಸಂತೋಷದಿಂದ ಭಕ್ಷಿಸಿದಳು ।। 79 ।। ಭೂಮಿಪ = ಧರೆಗರಸನಾದ ಜನಕರಾಯ, ತತಃ = ಆ ತರುವಾಯ, ಅಂಜನಾಯಾಃ = ಅಂಜನಾದೇವಿಗೆ, ಗರ್ಭಂ = ಗರ್ಭವು, ಸಮುತ್ಪನ್ನಾ = ಉಂಟಾಯಿತು (ಅಂಜನೆಯು ಗರ್ಭಿಣಿಯಾದಳು) ಚ = ಮತ್ತು, ವಾಯೋಃ = ವಾಯುದೇವರ ದೆಸೆಯಿಂದ, ಗರ್ಭಸಮುದ್ಭವಃ = ಅಂಜನೆಯಲ್ಲಿ ಗರ್ಭೋತ್ಪತ್ತಿಯಿಂದ, ಮುನೀನಾಂ = ಅಲ್ಲಿನ ಋಷಿಮುನಿಗಳಿಗೆ, ಹರ್ಷಃ = ಸಂತೋಷವು, ಅಭವತ್ = ಉಂಟಾಯಿತು

(ಶ್ರೀಮುಖ್ಯಪ್ರಾಣದೇವರಿಂದ ಅಂಜನೆಯು ಗರ್ಭಿಣಿಯಾದಳೆಂಬ ವಿಷಯ ಋಷಿಗಳಿಗೆ ಹರ್ಷವಾಯಿತೆಂದು ಭಾವ. (80) ಅಂಜನಾ = ಅಂಜನೆಯು, ದಶಮಾಸಾಂತೇ = ಹತ್ತನೆಯ ತಿಂಗಳ ಕೊನೆಗೆ, ಉತ್ತಮಂ = ಶ್ರೇಷ್ಠನಾದ, ಪುತ್ರಂ = ಮಗನನ್ನು ಸುಷುವೇ = ಪ್ರಸವಿಸಿದಳು (ಹಡೆದಳು). ವೀತಕಲ್ಮಷಾಃ - ವೀತ = ಕಳೆದುಹೋದ, ಕಲ್ಮಷಾಃ = ಪಾಪವುಳ್ಳ, ಮುನಯಃ = ಋಷಿಮುನಿಗಳು, ಅಮುಂ = ಈ ಅಂಜನೆಯ ಮಗನನ್ನು, ಹನೂಮಂತಂ = ಹನುಮಂತನೆಂದು, ಪ್ರಾಹುಃ = ಹೇಳುವರು. (ಆ ಮಗುವಿಗೆ ಹನೂಮಂತನೆಂದು ನಾಮಕರಣ ಮಾಡಿದರೆಂದು ಭಾವ) ಗಿರೌ = ಈ ವೃಷಭ ಪರ್ವತದಲ್ಲಿ, ಅಂಜನಾ = ಅಂಜನಾದೇವಿಯು, ವ್ರತಂ = ನಿಯಮವನ್ನು, ಆಸ್ಥಾಯ = ಸಕ್ರಮವಾಗಿ ಆಚರಿಸಿ, ಪ್ರಾಪ್ತಪುತ್ರಾ = ಪುತ್ರನನ್ನು ಪಡೆದವಳು (ಅಭವತ್ = ಆದಳು), ತಸ್ಮಾತ್ = ಆದುದರಿಂದ, ಲೋಕೇ = ಜಗತ್ತಿನಲ್ಲಿ, ಅಯಂ = ಈ ವೃಷಭಾಚಲವು, ಅಂಜನಶೈಲೇತಿ = ಅಂಜನಾಚಲವೆಂದು, ತ್ರೇತಾಯುಗದಲ್ಲಿ ವಿಖ್ಯಾತಕೀರ್ತಿಮಾನ್ - ವಿಖ್ಯಾತ = ಪ್ರಸಿದ್ಧವಾದ, ಕೀರ್ತಿಮಾನ್ = ಕೀರ್ತಿಯುಳ್ಳದ್ದು (ಅಭವತ್) ಆಯಿತು. ॥ 82 ॥

*ಜನಕ ಉವಾಚ -*

**ಸುಸಂತೋಷೋ ಭವದ್ಬ್ರಹ್ಮನ್ ಶ್ರುತ್ವಾ ತನ್ನಾಮಕಾರಣಮ್ ।**
**ದ್ವಾಪರೇ ಶೇಷಶೈಲೇತಿ ಕಥಂ ಖ್ಯಾತಿರ್ಭವಿಷ್ಯತಿ ॥ 83 ॥**

ಜನಕ ಉವಾಚ = ಆಗ ಜನಕರಾಯನು ಇಂತೆಂದನು. ಬ್ರಹ್ಮನ್ = ಬ್ರಾಹ್ಮಣೋತ್ತಮರಾದ (ಉತ್ತಮ ಬ್ರಹ್ಮಜ್ಞಾನಿಗಳಾದ) ಶತಾನಂದ ಮುನಿಗಳೇ, ತನ್ನಾಮಕಾರಣಂ = ಆ ಪರ್ವತಕ್ಕೆ ಅಂಜನಾಚಲವೆಂದು ಹೆಸರುಂಟಾದುದರ ಕಾರಣವನ್ನು, ಶ್ರುತ್ವಾ = ಕೇಳಿ, ಸುಸಂತೋಷಃ = ಸಮೀಚೀನಹರ್ಷವು ಅಭವತ್ = ಉಂಟಾಯಿತು. ದ್ವಾಪರೇ = ದ್ವಾಪರಯುಗದಲ್ಲಿ, ಶೇಷಶೈಲೇತಿ = ಶೇಷಾಚಲವೆಂದು, ಖ್ಯಾತಿಃ = ಪ್ರಸಿದ್ಧಿಯು, ಕಥಂ = ಹೇಗೆ, ಭವಿಷ್ಯತಿ = ಪ್ರಾಪ್ತವಾಗುವುದು? (ಎಂಬುದನ್ನು ನಿರೂಪಿಸಿರಿ ಎಂದು ಭಾವ) ॥ 83 ॥

## ಅಂಜನಾಚಲ ಮಹಿಮೆಯ ಕಥಾಸಾರ

ಜನಕರಾಯನು ಶತಾನಂದ ಮುನಿಗಳ ನಿರೂಪಣೆಯನ್ನಾಲಿಸಿ ಪರಮಾನಂದ ಭರಿತನಾಗಿ ''ಸ್ವಾಮಿ, ತ್ರೇತಾಯುಗದಲ್ಲಿ ಈ ಪರ್ವತಕ್ಕೆ 'ಅಂಜನಾಚಲ'ವೆಂಬ ಹೆಸರು ಹೇಗೆ ಬಂದಿತು? ತಿಳಿಸುವ ಕೃಪೆಮಾಡಿರಿ'' ಎಂದು ಪ್ರಾರ್ಥಿಸಲು ಶತಾನಂದರು ಇಂತು ನಿರೂಪಿಸಿದರು.

''ಪೂರ್ವದಲ್ಲಿ ಕೇಸರಿಯೆಂಬ ಕಪಿವೀರನಿಗೆ ಕಮಲನಯನೆಯಾದ ಅಂಜನೆಯೆಂಬ ಪತ್ನಿಯಿದ್ದಳು. ಅವಳು ತನಗೆ ಮಕ್ಕಳಾಗಲಿಲ್ಲವೆಂಬ ದುಃಖದಿಂದ ಮತಂಗ ಋಷಿಗಳ ಆಶ್ರಮಕ್ಕೆ ಆಗಮಿಸಿದಳು. ಪರಮಪತಿವ್ರತೆಯೂ, ಸಂತಾನವಿಲ್ಲದ ವ್ಯಥೆಯಿಂದ ಕೃಶಳೂ ಆದ, ಆ ಅಂಜನಾದೇವಿಯು ಕಣ್ಣೀರು ಸುರಿಸುತ್ತಾ ಋಷಿಪುಂಗವರಾದ ಮತಂಗ ಮುನಿಗಳ ಕಾಲಿಗೆರಗಿ ವಿಜ್ಞಾಪಿಸಿದಳು.

ಅಂಜನೆ:- ಋಷಿಶ್ರೇಷ್ಠರೇ ! ಸಂತಾನ ಭಾಗ್ಯವಿಲ್ಲದ ನನಗೆ ಮುಂದೇನು ಗತಿ ? ಈಗ ನಾನೇನು ಮಾಡಬೇಕು ? ತಾವು ನನಗೆ ಮಾರ್ಗದರ್ಶನ ಮಾಡಬೇಕು.

ಮತಂಗರು:- ವತ್ಸೆ ! ನಿನ್ನ ಮನದ ದುಃಖ ಪರಿಹಾರವಾಗುವುದು, ಚಿಂತಿಸದಿರು. ಕೇಳು - ಪಂಪಾಸರೋವರದ ಪೂರ್ವದಿಕ್ಕಿನಲ್ಲಿ ಐವತ್ತು ಯೋಜನಗಳ ಮಧ್ಯದ ವಸುಧಾತಳದಲ್ಲಿ ನರಸಿಂಹಾಶ್ರಮವಿದೆ. ಅಂಜನಾದೇವಿ, ಆ

ನರಸಿಂಹಾಶ್ರಮದ ದಕ್ಷಿಣ ದಿಗ್ಭಾಗದಲ್ಲಿ, ನಾರಾಯಣ ಪರ್ವತದ ತಪ್ಪಲಿನಲ್ಲಿ, ಸ್ವಾಮಿ ಪುಷ್ಕರಣೀತೀರ್ಥಕ್ಕೆ ಉತ್ತರ ದಿಕ್ಕಿನಲ್ಲಿ ಒಂದು ಹರಿದಾರಿಯ ದೂರದಲ್ಲಿ ''ಆಕಾಶಗಂಗಾ'' ಎಂದು ವಿಖ್ಯಾತವಾದ ತೀರ್ಥವಿದೆ. ನೀನು ಆ ಆಕಾಶಗಂಗಾತೀರ್ಥವಿರುವ ಸುಕ್ಷೇತ್ರಕ್ಕೆ ಸುಖವಾಗಿ ಹೋಗಿ ಸೇರು. ಮಂಗಳಾಂಗಿ ! ನೀನು ಆ ವಿಯದ್ಗಂಗೆಯಲ್ಲಿ ಪ್ರತಿ ದಿನ ಸ್ನಾನ ಮಾಡುತ್ತಾ ಹನ್ನೆರಡು ವರ್ಷಕಾಲ ತಪಸ್ಸನ್ನಾಚರಿಸು, ಆ ತಪಸ್ಸಿನ ಪುಣ್ಯ ಫಲದಿಂದ ನಿನಗೆ ಸದ್ಗುಣ ಸಂಪನ್ನನಾದ ಪುತ್ರನು ಜನಿಸುತ್ತಾನೆ'' – ಎಂದು ಮತಂಗರು ಹೇಳಿದ ವಿಚಾರವನ್ನು ಜನಕರಾಯನಿಗೆ ಶತಾನಂದರು ತಿಳಿಸಿ ಮುಂದುವರೆದು ಹೀಗೆ ಹೇಳಹತ್ತಿದರು.

ಶತಾನಂದರು:- ''ಜನಕಭೂಪಾಲ! ಮತಂಗಮುನಿಗಳಿಂದ ಇಂತು ಆಜ್ಞಪ್ತಳಾದ ಅಂಜನಾದೇವಿಯು ಮತಂಗರಿಗೊಂದಿಸಿ, ಅಪ್ಪಣೆಪಡೆದು ನಾರಾಯಣ ಪರ್ವತಕ್ಕೆ ತೆರಳಿದಳು. ಅಲ್ಲಿ ಅವಳು ಸ್ವಾಮಿಪುಷ್ಕರಣಿಯ ಪವಿತ್ರ ಜಲದಲ್ಲಿ ಮಿಂದು ಶ್ರೀವರಾಹರೂಪೀ ಹರಿಗೆ ವಂದಿಸಿ, ಮಂಗಳಪ್ರದವಾದ ವರಾಹಕ್ಷೇತ್ರದಲ್ಲಿರುವ ಸ್ವಾಮಿಪುಷ್ಕರಣಿಯ ಜಲವನ್ನು ಕುಡಿದು, ''ಆಕಾಶಗಂಗಾತೀರ್ಥ''ಕ್ಕೆ ಹೋಗಿ ತಪಸ್ಸಿಗಾಗಿ ಅಲ್ಲಿ ವಾಸಮಾಡಿದಳು. ಅಂಜನೆಯು ತಪಸ್ಸನ್ನು ಮಾಡುವಾಗ ತಾನು ಆಚರಿಸಬೇಕಾದ ಆಹಾರಾದಿ ನಿಯಮಗಳನ್ನು ಪತಿಯಾದ ಕೇಸರಿ ಮತ್ತು ಅಲ್ಲಿನ ಮುನಿಗಳೊಡನೆ ವಿಚಾರ ವಿನಿಮಯ ಮಾಡಿ ತಿಳಿದಳು. ಅವರ ಸಲಹೆಯಂತೆ ಅಂಜನೆಯು ಆಹಾರ ರಹಿತಳಾಗಿ ಉಪವಾಸ ಮಾಡುತ್ತಾ, ಆಹಾರ-ನಿದ್ರಾದಿಭೋಗಗಳನ್ನು ಬಿಟ್ಟು, ಹದಿವಯಸ್ಸಿನ ಆ ಲಲನಾಮಣಿಯು ಪರಿಶುದ್ಧಳಾಗಿ, ದೇಹವನ್ನು ಕಟ್ಟಿಗೆಯಂತೆ ಒಣಗಿಸುತ್ತಾ ತಪೋನಿರತಳಾದಳು. ಇಂತು ಒಂದು ವರ್ಷ ಕಾಲವು ಪೂರ್ಣವಾಗುತ್ತಿರಲು, ಅತ್ಯಧಿಕ ಬಲಶಾಲಿಗಳಾದ, ಸಪ್ತ ಮರುತ್ತುಗಳಿಗೆ ಅಧಿಪತಿಗಳಾದ ಶ್ರೀವಾಯುದೇವರು ಪ್ರತಿದಿನವೂ ಒಂದು ಹಣ್ಣನ್ನು ಗಾಳಿಯ ಮೂಲಕವಾಗಿ ಅಂಜನೆಯ ಕರದಲ್ಲಿ ಹಾಕುತ್ತಿದ್ದರು. ಅನಂತರ ಒಂದು ದಿವಸ ಶ್ರೀಮುಖ್ಯ ಪ್ರಾಣದೇವರು (ವಾಯುದೇವರು) ಫಲದಲ್ಲಿ ತಮ್ಮ ತೇಜಸ್ಸನ್ನು (ವೀರ್ಯವನ್ನು) ತುಂಬಿ, ವೀರ್ಯಗರ್ಭಿತವಾದ ಆ ಹಣ್ಣನ್ನು ಅಂಜನಾದೇವಿಯ ಕರಪುಟದಲ್ಲಿ ಹಾಕಿದರು. ಹಸಿವಿನಿಂದ ಬಳಲಿದ ಅಂಜನೆಯು ಆ ಫಲವನ್ನು ಪ್ರತಿದಿನ ತನಗೆ ಲಭಿಸುತ್ತಿದ್ದ ಸಾಮಾನ್ಯಫಲವೆಂದೇ ಭಾವಿಸಿ ತಿಂದಳು.

ಧರೆಗೆ ಅರಸನಾದ ಜನಕರಾಯ ! ಆ ಫಲವನ್ನು ಭಕ್ಷಿಸಿದ ತರುವಾಯ ಅಂಜನಾದೇವಿಯ ಗರ್ಭಧರಿಸಿದಳು. ಶ್ರೀವಾಯುದೇವರ ಅನುಗ್ರಹದಿಂದ ಅಂಜನೆಯು ಗರ್ಭವತಿಯಾದಳೆಂದು ಅಲ್ಲಿದ್ದ ಎಲ್ಲ ಋಷಿಮುನಿಗಳು ಅರಿತು ಪರಮಾನಂದ ತುಂದಿಲರಾದರು. ಅಂಜನಾದೇವಿಯು ಹತ್ತನೆಯ ತಿಂಗಳ ಕೊನೆಯ ಭಾಗದಲ್ಲಿ ಶ್ರೇಷ್ಠನಾದ ಪುತ್ರನನ್ನು ಪ್ರಸವಿಸಿದಳು. ಕಲ್ಮಷರಹಿತರಾದ ಮುನಿಗಳು ಅಂಜನೆಯ ಪುತ್ರನನ್ನು ''ಹನೂಮಂತ''ನೆಂದು ಕರೆದರು. ಅಂದರೆ ಆ ಮಗುವಿಗೆ ಹನೂಮಂತನೆಂದು ನಾಮಕರಣ ಮಾಡಿದರೆಂದು ಭಾವ. ಈ ವೃಷಭಾದ್ರಿಯಲ್ಲಿ ಅಂಜನಾದೇವಿಯು ವ್ರತನಿಯಮ ಉಪವಾಸಗಳನ್ನು ಸಕ್ರಮವಾಗಿ ನೆರವೇರಿಸುತ್ತಾ ತಪಸ್ಸು ಮಾಡಿ ಪುತ್ರನನ್ನು ಪಡೆದಳಾದುದರಿಂದ ಜಗತ್ತಿನಲ್ಲಿ ಈ ವೃಷಭಾಚಲವು ತ್ರೇತಾಯುಗದಲ್ಲಿ ''ಅಂಜನಾಚಲ''ವೆಂದು ಪ್ರಖ್ಯಾತವಾಗಿ ಕೀರ್ತಿಗಳಿಸಿತು.''

ಶತಾನಂದರ ನಿರೂಪಣೆಯಿಂದ ಹರ್ಷನಿರ್ಭರನಾದ ಜನಕಮಹಾರಾಜನು ''ಬ್ರಹ್ಮನ್! (ಬ್ರಹ್ಮಜ್ಞಾನಿಗಳಾದ ಶತಾನಂದರೇ!) ಆ ಪರ್ವತಕ್ಕೆ ಅಂಜನಾಚಲವೆಂದು ಹೆಸರು ಬಂದುದಕ್ಕೆ ಕಾರಣವನ್ನು ತಿಳಿದು ಸಂತೋಷವಾಯಿತು. ಸ್ವಾಮಿ ! ಈಗ ತಾವು ಆ ಪರ್ವತಕ್ಕೆ ದ್ವಾಪರಯುಗದಲ್ಲಿ ''ಶೇಷಾಚಲ''ವೆಂದು ಹೆಸರು ಬಂದ ಬಗೆಯನ್ನು ದಯಮಾಡಿ ತಿಳಿಸಿ'' ಎಂದು ಪ್ರಾರ್ಥಿಸಿದನು. ।। 83 ।।

ಥಿ ಜ

## ಶೇಷಾಚಲ ಮಹಿಮೆ

*ಮೂಲ— ಶತಾನಂದ ಉವಾಚ -*

**ಪುರಾ ವೈಕುಂಠನಗರೇ ಆದಿಶೇಷಂ ಸಮಾದಿಶತ್ ।**
**ದೇವಾದಿದೇವೋ ಭಗವಾನ್ ರಮಯನ್ ರಮಯಾಸಹ* ॥ 84 ॥**

**ತಸ್ಮಿನ್ ಕಾಲೇ ಮಹಾರಾಜ ಮಾರುತಃ ಪ್ರಾಣವಲ್ಲಭಃ ।**
**ಅಕಸ್ಮಾತ್ಕಾರಣಾತ್ಪ್ರಾಪ್ತೋ ಭಗವದ್ದರ್ಶನಾಯ ಚ ॥ 85 ॥**

**ದ್ವಾರಂ ನಿರೋಧಯಾಮಾಸ ರುಕ್ಮದಂಡೇನ ಸರ್ಪರಾಟ್ ।**
**ಕಿಮರ್ಥಂ ರುದ್ಧಸೇ ಮೂರ್ಖ ಕಾರ್ಯಸ್ಯ ಮಹತೀ ತ್ವರಾ ॥ 86 ॥**

*ಅನ್ವಯಾರ್ಥ:—* ಶತಾನಂದ ಉವಾಚ = ಶತಾನಂದರು ಹೇಳಿದರು, ಪುರಾ = ಪೂರ್ವದಲ್ಲಿ, ದೇವಾದಿದೇವಃ = ಎಲ್ಲಾ ದೇವತೆಗಳಿಗೂ ಪ್ರಭುವಾದ, ಭಗವಾನ್ = ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಹರಿಯು, ರಮಯಾಸಹ = ಲಕ್ಷ್ಮಿಯೊಡನೆ, ರಮಯನ್‌ಸನ್ = ಕ್ರೀಡಿಸುತ್ತಾ, (ರಮಯಾಸಾರ್ಧಂ = ಲಕ್ಷ್ಮೀದೇವಿಯಿಂದೊಡಗೂಡಿ, ರಮಿಷ್ಯತಿ ಸತಿ = ಕ್ರೀಡಿಸುತ್ತಿರುವ ಸಮಯದಲ್ಲಿ) ವೈಕುಂಠನಗರೇ = ಶ್ರೀವೈಕುಂಠಪುರಿಯಲ್ಲಿ, ದ್ವಾರಿ = ಬಾಗಿಲಿನಲ್ಲಿ, ಆದಿಶೇಷಂ = ಆದಿಶೇಷನನ್ನು, ಸಮಾದಿಶತ್ = ಅಂತಃಪುರದಲ್ಲಿ ಯಾರನ್ನೂ ಬಿಡಬಾರದೆಂದು ಆಜ್ಞಾಪಿಸಿದನು, ಮಹಾರಾಜ = ಜನಕರಾಜನೇ ! ತಸ್ಮಿನ್ಕಾಲೇ = ಆ ಸಮಯದಲ್ಲಿ, ಪ್ರಾಣವಲ್ಲಭಃ = ಸಕಲಪ್ರಾಣಿಗಳಿಗೆ (ಚೇತನ ವರ್ಗಕ್ಕೆ) ಪ್ರಭುಗಳಾದ, ಮಾರುತಃ = ಶ್ರೀವಾಯುದೇವರು, ಭಗವದ್ದರ್ಶನಾಯ ಭಗವತಃ = ಭಗವಾನ್ ಶ್ರೀಹರಿಪರಮಾತ್ಮನ, ದರ್ಶನಾಯ = ಸಂದರ್ಶನಕ್ಕಾಗಿ, ಅಕಸ್ಮಾತ್ = ಇದ್ದಕ್ಕಿದ್ದಂತೆ, ಕಾರಣಾತ್ = ಅವಶ್ಯ ಕಾರಣದಿಂದಾಗಿ, ಪ್ರಾಪ್ತಃ = ಬಂದರು, ಸರ್ಪರಾಟ್ = ಆಗ ಸರ್ಪಗಳಿಗೆ ಅಧಿಪತಿಯಾದ ಶೇಷದೇವನು, ರುಕ್ಮದಂಡೇನ = ಬಂಗಾರದ ಕೋಲಿನಿಂದ, ದ್ವಾರಂ = ಬಾಗಿಲನ್ನು (ಬಾಗಿಲಿಗೆ ಅಡ್ಡ ನಿಂತು) ನಿರೋಧಯಾಮಾಸ = ವಾಯುದೇವರನ್ನು ತಡೆಗಟ್ಟಿದನು. ಆಗ ಶ್ರೀಪವಮಾನರು, ಮೂರ್ಖ = ಎಲೈ ಮೂಢನಾದ ಶೇಷದೇವ ! ಕಿಮರ್ಥಂ = ಏತಕ್ಕಾಗಿ, ರುದ್ಧಸೇ = ಒಳಗೆ ಹೋಗದಂತೆ ತಡೆಯುತ್ತಿರುವೆ? ಕಾರ್ಯಸ್ಯ = ನಾನು ಬಂದಿರುವ ಕಾರ್ಯವು, ಮಹತೀತ್ವರಾ = ಬಹು ಅವಸರದ್ದಾಗಿದೆ (ಎಂದರು) ॥ 84-86 ॥

*ಶೇಷ ಉವಾಚ -*

**ಅಹಮಾಜ್ಞಾಧರೋ ವಿಷ್ಣೋರ್ಮಾಗಚ್ಛಾಂತಸ್ತತೋ ಮರುತ್ ।**
**ಇತಿ ತಸ್ಯವಚಃ ಶ್ರುತ್ವಾ ಜಗತ್ಪ್ರಾಣೋಽಬ್ರವೀದಿದಮ್ ॥ 87 ॥**

**ಜಯಶ್ಚ ವಿಜಯಶ್ಚೈವ ಶಪ್ತೌ ತೌ ಮುನಿಭಿಃ ಪುರಾ ।**
**ಅಹಂಕಾರೇಣಸಹಿತೌ ಕುಂಭಕರ್ಣದಶಾನನೌ ॥ 88 ॥**

---

*ಪಾಃ- ರಮಯಾಸಾರ್ಧಂ ರಮಿಷ್ಯತಿ.

ನರಸಿಂಹಾಶ್ರಮದ ದಕ್ಷಿಣ ದಿಗ್ಭಾಗದಲ್ಲಿ, ನಾರಾಯಣ ಪರ್ವತದ ತಪ್ಪಲಿನಲ್ಲಿ, ಸ್ವಾಮಿ ಪುಷ್ಕರಣೀತೀರ್ಥಕ್ಕೆ ಉತ್ತರ ದಿಕ್ಕಿನಲ್ಲಿ ಒಂದು ಹರಿದಾರಿಯ ದೂರದಲ್ಲಿ ''ಆಕಾಶಗಂಗಾ'' ಎಂದು ವಿಖ್ಯಾತವಾದ ತೀರ್ಥವಿದೆ. ನೀನು ಆ ಆಕಾಶಗಂಗಾತೀರ್ಥವಿರುವ ಸುಕ್ಷೇತ್ರಕ್ಕೆ ಸುಖವಾಗಿ ಹೋಗಿ ಸೇರು. ಮಂಗಳಾಂಗಿ ! ನೀನು ಆ ವಿಯದ್ಗಂಗೆಯಲ್ಲಿ ಪ್ರತಿ ದಿನ ಸ್ನಾನ ಮಾಡುತ್ತಾ ಹನ್ನೆರಡು ವರ್ಷಕಾಲ ತಪಸ್ಸನ್ನಾಚರಿಸು, ಆ ತಪಸ್ಸಿನ ಪುಣ್ಯ ಫಲದಿಂದ ನಿನಗೆ ಸದ್ಗುಣ ಸಂಪನ್ನನಾದ ಪುತ್ರನು ಜನಿಸುತ್ತಾನೆ'' - ಎಂದು ಮತಂಗರು ಹೇಳಿದ ವಿಚಾರವನ್ನು ಜನಕರಾಯನಿಗೆ ಶತಾನಂದರು ತಿಳಿಸಿ ಮುಂದುವರೆದು ಹೀಗೆ ಹೇಳಹತ್ತಿದರು.

ಶತಾನಂದರು:- ''ಜನಕಭೂಪಾಲ! ಮತಂಗಮುನಿಗಳಿಂದ ಇಂತು ಆಜ್ಞಪ್ತಳಾದ ಅಂಜನಾದೇವಿಯು ಮತಂಗರಿಗೊಂದಿಸಿ, ಅಪ್ಪಣೆಪಡೆದು ನಾರಾಯಣ ಪರ್ವತಕ್ಕೆ ತೆರಳಿದಳು. ಅಲ್ಲಿ ಅವಳು ಸ್ವಾಮಿಪುಷ್ಕರಣಿಯ ಪವಿತ್ರ ಜಲದಲ್ಲಿ ಮಿಂದು ಶ್ರೀವರಾಹರೂಪೀ ಹರಿಗೆ ವಂದಿಸಿ, ಮಂಗಳಪ್ರದವಾದ ವರಾಹಕ್ಷೇತ್ರದಲ್ಲಿರುವ ಸ್ವಾಮಿಪುಷ್ಕರಣಿಯ ಜಲವನ್ನು ಕುಡಿದು, ''ಆಕಾಶಗಂಗಾತೀರ್ಥ''ಕ್ಕೆ ಹೋಗಿ ತಪಸ್ಸಿಗಾಗಿ ಅಲ್ಲಿ ವಾಸಮಾಡಿದಳು. ಅಂಜನೆಯು ತಪಸ್ಸನ್ನು ಮಾಡುವಾಗ ತಾನು ಆಚರಿಸಬೇಕಾದ ಆಹಾರಾದಿ ನಿಯಮಗಳನ್ನು ಪತಿಯಾದ ಕೇಸರಿ ಮತ್ತು ಅಲ್ಲಿನ ಮುನಿಗಳೊಡನೆ ವಿಚಾರ ವಿನಿಮಯ ಮಾಡಿ ತಿಳಿದಳು. ಅವರ ಸಲಹೆಯಂತೆ ಅಂಜನೆಯು ಆಹಾರ ರಹಿತಳಾಗಿ ಉಪವಾಸ ಮಾಡುತ್ತಾ, ಆಹಾರ-ನಿದ್ರಾದಿಭೋಗಗಳನ್ನು ಬಿಟ್ಟು, ಹದಿವಯಸ್ಸಿನ ಆ ಲಲನಾಮಣಿಯು ಪರಿಶುದ್ಧಳಾಗಿ, ದೇಹವನ್ನು ಕಟ್ಟಿಗೆಯಂತೆ ಒಣಗಿಸುತ್ತಾ ತಪೋನಿರತಳಾದಳು. ಇಂತು ಒಂದು ವರ್ಷ ಕಾಲವು ಪೂರ್ಣವಾಗುತ್ತಿರಲು, ಅತ್ಯಧಿಕ ಬಲಶಾಲಿಗಳಾದ, ಸಪ್ತ ಮರುತ್ತುಗಳಿಗೆ ಅಧಿಪತಿಗಳಾದ ಶ್ರೀವಾಯುದೇವರು ಪ್ರತಿದಿನವೂ ಒಂದು ಹಣ್ಣನ್ನು ಗಾಳಿಯ ಮೂಲಕವಾಗಿ ಅಂಜನೆಯ ಕರದಲ್ಲಿ ಹಾಕುತ್ತಿದ್ದರು. ಆನಂತರ ಒಂದು ದಿವಸ ಶ್ರೀಮುಖ್ಯ ಪ್ರಾಣದೇವರು (ವಾಯುದೇವರು) ಫಲದಲ್ಲಿ ತಮ್ಮ ತೇಜಸ್ಸನ್ನು (ವೀರ್ಯವನ್ನು) ತುಂಬಿ, ವೀರ್ಯಗರ್ಭಿತವಾದ ಆ ಹಣ್ಣನ್ನು ಅಂಜನಾದೇವಿಯ ಕರಪುಟದಲ್ಲಿ ಹಾಕಿದರು. ಹಸಿವಿನಿಂದ ಬಳಲಿದ ಅಂಜನೆಯು ಆ ಫಲವನ್ನು ಪ್ರತಿದಿನ ತನಗೆ ಲಭಿಸುತ್ತಿದ್ದ ಸಾಮಾನ್ಯಫಲವೆಂದೇ ಭಾವಿಸಿ ತಿಂದಳು.

ಧರೆಗೆ ಅರಸನಾದ ಜನಕರಾಯ ! ಆ ಫಲವನ್ನು ಭಕ್ಷಿಸಿದ ತರುವಾಯ ಅಂಜನಾದೇವಿಯ ಗರ್ಭಧರಿಸಿದಳು. ಶ್ರೀವಾಯುದೇವರ ಅನುಗ್ರಹದಿಂದ ಅಂಜನೆಯು ಗರ್ಭವತಿಯಾದಳೆಂದು ಅಲ್ಲಿದ್ದ ಎಲ್ಲ ಋಷಿಮುನಿಗಳು ಅರಿತು ಪರಮಾನಂದ ತುಂದಿಲರಾದರು. ಅಂಜನಾದೇವಿಯು ಹತ್ತನೆಯ ತಿಂಗಳ ಕೊನೆಯ ಭಾಗದಲ್ಲಿ ಶ್ರೇಷ್ಠನಾದ ಪುತ್ರನನ್ನು ಪ್ರಸವಿಸಿದಳು. ಕಲ್ಮಷರಹಿತರಾದ ಮುನಿಗಳು ಅಂಜನೆಯ ಪುತ್ರನನ್ನು ''ಹನೂಮಂತ''ನೆಂದು ಕರೆದರು. ಅಂದರೆ ಆ ಮಗುವಿಗೆ ಹನೂಮಂತನೆಂದು ನಾಮಕರಣ ಮಾಡಿದರೆಂದು ಭಾವ. ಈ ವೃಷಭಾದ್ರಿಯಲ್ಲಿ ಅಂಜನಾದೇವಿಯು ವ್ರತನಿಯಮ ಉಪವಾಸಗಳನ್ನು ಸಕ್ರಮವಾಗಿ ನೆರವೇರಿಸುತ್ತಾ ತಪಸ್ಸು ಮಾಡಿ ಪುತ್ರನನ್ನು ಪಡೆದಳಾದುದರಿಂದ ಜಗತ್ತಿನಲ್ಲಿ ಈ ವೃಷಭಾಚಲವು ತ್ರೇತಾಯುಗದಲ್ಲಿ ''ಅಂಜನಾಚಲ''ವೆಂದು ಪ್ರಖ್ಯಾತವಾಗಿ ಕೀರ್ತಿಗಳಿಸಿತು.''

ಶತಾನಂದರ ನಿರೂಪಣೆಯಿಂದ ಹರ್ಷನಿರ್ಭರನಾದ ಜನಕಮಹಾರಾಜನು ''ಬ್ರಹ್ಮನ್! (ಬ್ರಹ್ಮಜ್ಞಾನಿಗಳಾದ ಶತಾನಂದರೇ!) ಆ ಪರ್ವತಕ್ಕೆ ಅಂಜನಾಚಲವೆಂದು ಹೆಸರು ಬಂದುದಕ್ಕೆ ಕಾರಣವನ್ನು ತಿಳಿದು ಸಂತೋಷವಾಯಿತು. ಸ್ವಾಮಿ ! ಈಗ ತಾವು ಆ ಪರ್ವತಕ್ಕೆ ದ್ವಾಪರಯುಗದಲ್ಲಿ ''ಶೇಷಾಚಲ''ವೆಂದು ಹೆಸರು ಬಂದ ಬಗೆಯನ್ನು ದಯಮಾಡಿ ತಿಳಿಸಿ'' ಎಂದು ಪ್ರಾರ್ಥಿಸಿದನು. ॥ 83 ॥

## ಶೇಷಾಚಲ ಮಹಿಮೆ

*ಮೂಲ— ಶತಾನಂದ ಉವಾಚ -*

**ಪುರಾ ವೈಕುಂಠನಗರೇ ಆದಿಶೇಷಂ ಸಮಾದಿಶತ್ ।**
**ದೇವಾದಿದೇವೋ ಭಗವಾನ್ ರಮಯನ್ ರಮಯಾಸಹ* ॥ 84 ॥**

**ತಸ್ಮಿನ್ ಕಾಲೇ ಮಹಾರಾಜ ಮಾರುತಃ ಪ್ರಾಣವಲ್ಲಭಃ ।**
**ಅಕಸ್ಮಾತ್ಕಾರಣಾತ್ಪ್ರಾಪ್ತೋ ಭಗವದ್ದರ್ಶನಾಯ ಚ ॥ 85 ॥**

**ದ್ವಾರಂ ನಿರೋಧಯಾಮಾಸ ರುಕ್ಮದಂಡೇನ ಸರ್ಪರಾಟ್ ।**
**ಕಿಮರ್ಥಂ ರುದ್ಧಸೇ ಮೂರ್ಖ ಕಾರ್ಯಸ್ಯ ಮಹತೀ ತ್ವರಾ ॥ 86 ॥**

ಅನ್ವಯಾರ್ಥ:— ಶತಾನಂದ ಉವಾಚ = ಶತಾನಂದರು ಹೇಳಿದರು, ಪುರಾ = ಪೂರ್ವದಲ್ಲಿ, ದೇವಾದಿದೇವಃ = ಎಲ್ಲಾ ದೇವತೆಗಳಿಗೂ ಪ್ರಭುವಾದ, ಭಗವಾನ್ = ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಹರಿಯು, ರಮಯಾಸಹ = ಲಕ್ಷ್ಮಿಯೊಡನೆ, ರಮಯನ್‌ಸನ್ = ಕ್ರೀಡಿಸುತ್ತಾ, (ರಮಯಾಸಾರ್ಧಂ = ಲಕ್ಷ್ಮೀದೇವಿಯಿಂದೊಡಗೂಡಿ, ರಮಿಷ್ಯತಿ ಸತಿ = ಕ್ರೀಡಿಸುತ್ತಿರುವ ಸಮಯದಲ್ಲಿ) ವೈಕುಂಠನಗರೇ = ಶ್ರೀವೈಕುಂಠಪುರಿಯಲ್ಲಿ, ದ್ವಾರಿ = ಬಾಗಿಲಿನಲ್ಲಿ, ಆದಿಶೇಷಂ = ಆದಿಶೇಷನನ್ನು, ಸಮಾದಿಶತ್ = ಅಂತಃಪುರದಲ್ಲಿ ಯಾರನ್ನೂ ಬಿಡಬಾರದೆಂದು ಆಜ್ಞಾಪಿಸಿದನು, ಮಹಾರಾಜ = ಜನಕರಾಜನೇ ! ತಸ್ಮಿನ್ಕಾಲೇ = ಆ ಸಮಯದಲ್ಲಿ, ಪ್ರಾಣವಲ್ಲಭಃ = ಸಕಲಪ್ರಾಣಿಗಳಿಗೆ (ಚೇತನ ವರ್ಗಕ್ಕೆ) ಪ್ರಭುಗಳಾದ, ಮಾರುತಃ = ಶ್ರೀವಾಯುದೇವರು, ಭಗವದ್ದರ್ಶನಾಯ ಭಗವತಃ = ಭಗವಾನ್ ಶ್ರೀಹರಿಪರಮಾತ್ಮನ, ದರ್ಶನಾಯ = ಸಂದರ್ಶನಕ್ಕಾಗಿ, ಅಕಸ್ಮಾತ್ = ಇದ್ದಕ್ಕಿದ್ದಂತೆ, ಕಾರಣಾತ್ = ಅವಶ್ಯ ಕಾರಣದಿಂದಾಗಿ, ಪ್ರಾಪ್ತಃ = ಬಂದರು, ಸರ್ಪರಾಟ್ = ಆಗ ಸರ್ಪಗಳಿಗೆ ಅಧಿಪತಿಯಾದ ಶೇಷದೇವನು, ರುಕ್ಮದಂಡೇನ = ಬಂಗಾರದ ಕೋಲಿನಿಂದ, ದ್ವಾರಂ = ಬಾಗಿಲನ್ನು (ಬಾಗಿಲಿಗೆ ಅಡ್ಡ ನಿಂತು) ನಿರೋಧಯಾಮಾಸ = ವಾಯುದೇವರನ್ನು ತಡೆಗಟ್ಟಿದನು. ಆಗ ಶ್ರೀಪವಮಾನರು, ಮೂರ್ಖ = ಎಲೈ ಮೂಢನಾದ ಶೇಷದೇವ ! ಕಿಮರ್ಥಂ = ಏತಕ್ಕಾಗಿ, ರುದ್ಧಸೇ = ಒಳಗೆ ಹೋಗದಂತೆ ತಡೆಯುತ್ತಿರುವೆ? ಕಾರ್ಯಸ್ಯ = ನಾನು ಬಂದಿರುವ ಕಾರ್ಯವು, ಮಹತೀತ್ವರಾ = ಬಹು ಅವಸರದ್ದಾಗಿದೆ (ಎಂದರು) ॥ 84-86 ॥

*ಶೇಷ ಉವಾಚ -*

**ಅಹಮಾಜ್ಞಾಧರೋ ವಿಷ್ಣೋರ್ಮಾಗಚ್ಛಾಂತಸ್ತತೋ ಮರುತ್ ।**
**ಇತಿ ತಸ್ಯವಚಃ ಶ್ರುತ್ವಾ ಜಗತ್ಪ್ರಾಣೋಬ್ರವೀದಿದಮ್ ॥ 87 ॥**

**ಜಯಶ್ಚ ವಿಜಯಶ್ಚೈವ ಶಪ್ತೌ ತೌ ಮುನಿಭಿಃ ಪುರಾ ।**
**ಅಹಂಕಾರೇಣಸಹಿತೌ ಕುಂಭಕರ್ಣದಶಾನನೌ ॥ 88 ॥**

---

*ಪಾಃ- ರಮಯಾಸಾರ್ಧಂ ರಮಿಷ್ಯತಿ.

**ವಿಸ್ಮೃತಂ ತತ್ತ್ವಯಾ ಮೂರ್ಖ ದ್ವಾರಪತ್ಯೇ ನಿಯೋಜಿತೌ ।**
**ತದ್ವಾಕ್ಯೇನಾಹಿರಾಜೇಂದ್ರಃ ಪ್ರಜಜ್ವಾಲ ವಿಷೋಲ್ಬಣಃ ॥ 89 ॥**

ಶೇಷ ಉವಾಚ = (ವಾಯುದೇವರ ಮಾತನ್ನಾಲಿಸಿ) ಶೇಷದೇವರು ಹೇಳಿದರು. ಹೇ ಮರುತ್ = ಎಲ್ಯೆ ವಾಯುವೇ, ಅಹಂ = ನಾನು, ವಿಷ್ಣೋಃ = ಶ್ರೀಹರಿಯ, ಆಜ್ಞಾಧರಃ = ಅಪ್ಪಣೆಯನ್ನು ಪಾಲಿಸುವವನು, (ಶ್ರೀಹರಿಯು ಯಾರನ್ನೂ ಬಿಡಬಾರದೆಂದು ಆಜ್ಞಾಪಿಸಿರುವುದರಿಂದ ಅದನ್ನು ಪಾಲಿಸುತ್ತಿದ್ದೇನೆ), ತತಃ = ಆದುದರಿಂದ, ಅಂತಃ = ಅಂತಃಪುರದೊಳಗೆ, ಮಾಗಚ್ಛ = ಹೋಗಬೇಡ. ಇತಿ = ಈ ಪ್ರಕಾರವಾಗಿ ಹೇಳಿದ, ತಸ್ಯ = ಶೇಷದೇವನ, ವಚಃ = ವಚನವನ್ನು, ಶ್ರುತ್ವಾ = ಕೇಳಿ, ಜಗತ್ಪ್ರಾಣಃ = ಜಗತ್ತಿಗೆ ಪ್ರಾಣರಾದ ವಾಯುದೇವರು, ಇದಂ = ಈ ಮಾತನ್ನು, ಅಬ್ರವೀತ್ = ಹೇಳಿದರು. ಮೂರ್ಖ = ಮೂರ್ಖನಾದ ಶೇಷದೇವ ! ಪುರಾ = ಹಿಂದೆ, ದ್ವಾರಪತ್ಯೇ = ಬಾಗಿಲು ಕಾಯುವ ಕೆಲಸದಲ್ಲಿ, ನಿಯೋಜಿತೌ = ನಿಯಮಿಸಲ್ಪಟ್ಟ, ಜಯಃ = ಜಯನು, ಚ = ಮತ್ತು, ವಿಜಯಃ = ವಿಜಯನು ಎಂಬ, ತೌ = ಆ ಇಬ್ಬರು ದ್ವಾರಪಾಲಕರು, ಮುನಿಭಿಃ = ಸನಕ ಸನಂದನಾದಿ ಋಷಿಗಳಿಂದ, ಶಪ್ತೌ = ಶಾಪಪಡೆದವರಾಗಿ, ಅಹಂಕಾರೇಣ = ಗರ್ವದಿಂದ, ಸಹಿತೌ = ಯುಕ್ತರಾದವರಾದ, ಕುಂಭಕರ್ಣದಶಾನನೌ = ರಾವಣಕುಂಭಕರ್ಣರೆಂಬ ರಾಕ್ಷಸರಾದ, ತತ್ = ಆ ವಿಚಾರವು ತ್ವಯಾ = ನಿನ್ನಿಂದ, ವಿಸ್ಮೃತಂ (ಕಿಂ) = ಮರೆಯಲ್ಪಟ್ಟಿತೇನು? ॥ 87-89 ॥

**ಗರ್ಹಯನ್ ವಚನೈಸ್ತೀಕ್ಷ್ಣೈಃ ಮುಖ್ಯಪ್ರಾಣಮಹೀಶ್ವರಃ ।**

*ಶೇಷ ಉವಾಚ -*

**ಕಿಂ ಗರಿಷ್ಠವಚಃ ಪ್ರೋಕ್ತಂ ಜೀವನೇಚ್ಛಾ ನ ವಿದ್ಯತೇ ॥ 90 ॥**

**ಯಥಾ ಭಾನುಗತಿಂ ಲೋಕೋ ನೈವ ಜಾನಂತಿ ಮೋಹಿತಾಃ ।**
**ತತ್ಕಥಂ ನರವದ್ವಾಯೋ! ವೃಥಾ ಗರ್ವಂ ಪ್ರಭಾಷಸೇ ॥ 91 ॥**

**ಬಲೇ ಜ್ಞಾನೇ ವಿರಾಗೇ ಚ ವಿಷ್ಣುಭಕ್ತೋ ನ ಮತ್ಸಮಃ ।**
**ಸರ್ವದಾಂತಃ ಪುರೇವಾಸಃ ಪುತ್ರಾಣಾಮಧಿಕೋ ಹರೇಃ ॥ 92 ॥**

**ನೃಲೋಕಾನಾಂ ಹಿತಾರ್ಥಾಯ ಹಿತಾರ್ಥೇ ಜಗದೀಶಿತುಃ ।**
**ಸ್ಥಾಪಿತೋ ದ್ವಾರಪಾಲತ್ವೇ ಲಕ್ಷ್ಮೀನಾರಾಯಣೇನ ಚ ॥ 93 ॥**

ತದ್ವಾಕ್ಯೇನ = ವಾಯುದೇವರು ಹೇಳಿದ ಮಾತಿನಿಂದ, ವಿಷೋಲ್ಬಣಃ = ಉಕ್ಕೇರಿದ ವಿಷವುಳ್ಳವನಾದ, ಅಹಿರಾಜೇಂದ್ರಃ = ಸರ್ಪಾಧಿಪನಾದ ಆದಿಶೇಷನು, ಪ್ರಜಜ್ವಾಲ = ಕ್ರೋಧದಿಂದ ಉರಿದೇಳುತ್ತಾ, ತೀಕ್ಷ್ಣೈಃ = ಮೊನಚಾದ, ವಚನೈಃ = ವಾಕ್ಯಗಳಿಂದ, ಮುಖ್ಯಪ್ರಾಣಂ = ಸಕಲಜೀವನಿಯಾಮಕರಾದ ವಾಯುದೇವರನ್ನು, ಗರ್ಹಯನ್ = ನಿಂದಿಸುತ್ತಾ, ಶೇಷ ಉವಾಚ = ಶೇಷದೇವನಿಂತೆಂದನು - ವಾಯೋ = ಎಲ್ಯೆ ವಾಯುವೇ, (ತ್ವಯಾ = ನಿನ್ನಿಂದ), ಕಿಂ = ಏನು, ಗರಿಷ್ಠವಚಃ = ದೊಡ್ಡಮಾತು, ಪ್ರೋಕ್ತಂ ? = ಹೇಳಲ್ಪಟ್ಟಿತು? ಜೀವನೇಚ್ಛಾ = ನಿನಗೆ ಜೀವಿಸಬೇಕೆಂಬ ಅಪೇಕ್ಷೆಯು, ನವಿದ್ಯತೇ (ಕಿಂ) = ಇಲ್ಲವೇನು ? ಮೋಹಿತಾಃ = ಅಜ್ಞಜನರು, ಲೋಕೇ = ಜಗತ್ತಿನಲ್ಲಿ, ಭಾನುಗತಿಂ = ಸೂರ್ಯನ ಗತಿಯನ್ನು ನೈವ ಜಾನಂತಿ = ತಿಳಿಯುವುದೇ ಇಲ್ಲ, ನರವತ್ = ಅಂಧಮಾನವನಂತೆ, ವೃಥಾ = ವ್ಯರ್ಥವಾಗಿ, ಗರ್ವಂ = ಅಹಂಕಾರವಿರುವಂತೆ, ಪ್ರಭಾಷಸೇ = ಮಾತನಾಡುತ್ತಿರುವೆಯಲ್ಲ ! ಬಲೇ = ಶಕ್ತಿ (ಸಾಮರ್ಥ್ಯ)ಯಲ್ಲಿ, ಜ್ಞಾನೇ = ಸರ್ವವಿಷಯಕ ಜ್ಞಾನದಲ್ಲಿ

(ಅಥವಾ ಭಗವದ್ ಜ್ಞಾನದಲ್ಲಿ), ವಿರಾಗೇವಾ = ವೈರಾಗ್ಯದಲ್ಲಾಗಲಿ, ಮತ್ಸಮಃ = ನನಗೆ ಸಮಾನನಾದ, ವಿಷ್ಣುಭಕ್ತಃ = ಶ್ರೀಹರಿಭಕ್ತನು, ನ = ಇಲ್ಲ, ಸದೈವ = ಸರ್ವದಾ (ನನಗೆ), ಅಂತಃಪುರೇ = ಪರಮಾತ್ಮನ ಅಂತಃಪುರದಲ್ಲಿ, ವಾಸಃ = ವಾಸ್ತವ್ಯವು (ಅಸ್ತಿ = ಇದೆ) ಹರೇಃ = ಶ್ರೀವಿಷ್ಣುವಿನ, ಪುತ್ರಾಣಾಂ = ಸುತರಿಗಿಂತಲೂ, ಅಧಿಕಃ = ಹೆಚ್ಚುಪ್ರೀತಿಪಾತ್ರನಾಗಿದ್ದೇನೆ, ನೃಲೋಕಾನಾಂ = ಮಾನವರೆಲ್ಲರ (ಮನುಷ್ಯಲೋಕದ), ಹಿತಾರ್ಥಾಯ = ಕ್ಷೇಮಕ್ಕಾಗಿ, ಜಗದೀಶಿತುಃ = ಶ್ರೀಹರಿಯ, ಹಿತಾರ್ಥೇ ಚ = ಹಿತಕ್ಕಾಗಿಯೂ, ಲಕ್ಷ್ಮೀನಾರಾಯಣೇನ = ರಮಾರಮಣನಾದ ನಾರಾಯಣನಿಂದ, ದ್ವಾರಪಾಲತ್ವೇ = ಬಾಗಿಲುಕಾಯುವ ಉದ್ಯೋಗದಲ್ಲಿ, ಸ್ಥಾಪಿತಃ = ವ್ಯವಸ್ಥೆಮಾಡಲ್ಪಟ್ಟಿದ್ದೇನೆ (ನಿಯೋಜಿತನಾಗಿದ್ದೇನೆ) ॥ 90-93 ॥

ವಾಯುರುವಾಚ-

**ಬಿಡಾಲೋಽಂತಃ ಸ್ಥಿತೋವಾಪಿ ಬಹಿಸ್ಥೇಭ ಸಮೋ ನ ಹಿ ।**
**ಶಯಾನಂ ರತ್ನಪರ್ಯಂಕೇ ರಾಜಾನಮಪಿ ಸೇವತೇ ॥ 94 ॥**

**ಕಶ್ಚಿದ್ದೂತೋ ನಿಯುಕ್ತಸ್ತು ಪರ್ಯಂಕಾರೂಢವಾನ್ ಸ್ವಯಮ್ ।**
**ಕಿಮಾಧಿಕ್ಯಂ ತಸ್ಯ ಶೇಷ ಪುತ್ರೇ ಕಾ ನ್ಯೂನತಾ ವದ ॥ 95 ॥**

**ತಯೋರ್ವಿವಾದೋಹ್ಯಭವತ್ ಶೇಷವಾಯ್ವೋರ್ಮಹಾತ್ಮನೋ ।**
**ಲಕ್ಷ್ಮ್ಯಾ ನಿಬೋಧಿತಃ ಶ್ರೀಮಾನುತ್ತಸ್ಥೌ ಗರುಡಧ್ವಜಃ ॥ 96 ॥**

**ಕಿಮರ್ಥಂ ಕ್ರೋಶಸೇ ಶೇಷ ಪುಮಾನ್ ಕೋತ್ರಾಗತಃ ಪರಃ ।**
**ಇತ್ಯುಕ್ತೋ ದೇವದೇವೇನ ಫಣಿರಾಜೋಽಭ್ಯಭಾಷತ ॥ 97 ॥**

ವಾಯುರುವಾಚ = ವಾಯುದೇವರು ಹೇಳಿದರು. ಅಂತಸ್ಥಿತಃ = ದೊರೆಯ ಅರಮನೆಯಲ್ಲಿರುವ, ಬಿಡಾಲೊವಾಪಿ = ಮಾರ್ಜಾಲ (ಬೆಕ್ಕೊ)ವೂ ಸಹ, ರತ್ನ ಪರ್ಯಂಕೇ = ರತ್ನಪಲ್ಲಂಗದ ಹಾಸಿಗೆಯಮೇಲೆ, ಶಯಾನಂ = ಮಲಗಿರುವ, ರಾಜನಂ = ಮಹಾರಾಜನನ್ನು, ಸೇವತೇ = ಸೇವಿಸುತ್ತಿದ್ದರೂ, ಬಹಿಸ್ಥೇಭಸಮಃ = ಅರಮನೆಯ ಹೊರಗಿರುವ ಆನೆಗೆ ಸಮಾನವು, ನಹಿ = ಆಗುವುದಿಲ್ಲ! (ಅಲ್ಲ). ಶೇಷ = ಎಲೈ ಶೇಷನೇ, ಕಶ್ಚಿದ್ದೂತಃ = ಒಬ್ಬ ರಾಜಸೇವಕನು, ನಿಯುಕ್ತಃ = ಅಂತಃಪುರದಲ್ಲಿ ರಾಜನಸೇವೆಯಲ್ಲಿ ನಿಯುಕ್ತನಾಗಿದ್ದು, ಸ್ವಯಂ = ತಾನೂಸಹ, ಪರ್ಯಂಕಾರೂಢವಾನ್, ಪರ್ಯಂಕ = ಪ್ರಭುವಿನ ಮಂಚದ ಸುಪ್ಪತ್ತಿಗೆಯ ಮೇಲೆ, ಆರೂಢವಾನ್ = ಪಾದಸೇವೆ ಮಾಡಲು ಹತ್ತಿ ಕುಳಿತಿರುತ್ತಾನೆ, ಅಂದಮಾತ್ರಕ್ಕೆ, ತಸ್ಯ = ಆ ದೂತನಿಗೆ, ಕಿಮಾಧಿಕ್ಯಂ = ದೊಡ್ಡಸ್ತಿಕೆಯೇನು? ಪುತ್ರೇ = ರಾಜಕುಮಾರನಿಗೆ, ಕಾನ್ಯೂನತಾ = ಅರಸನ ಹಾಸಿಗೆಯಮೇಲೆ ಕುಳಿತಿಲ್ಲವೆಂಬುದರಿಂದ ನ್ಯೂನತೆಯೇ? ವದ = ಹೇಳಯ್ಯ ! ಮಹಾತ್ಮನಃ = ಬುದ್ಧಿವಂತರಾದ (ಮಹಾನುಭಾವರಾದ) ತಯೋಃ = ಆಶೇಷ - ವಾಯುಗಳಿಗೂ, ವಿವಾದಃ = ಇಂತು ವಿವಾದವು (ಜಗಳವು), ಅಭವತ್ = ಆಯಿತು, ಲಕ್ಷ್ಮ್ಯಾ = ಮಹಾಲಕ್ಷ್ಮೀದೇವಿಯಿಂದ, ನಿಬೋಧಿತಃ = ಎಚ್ಚರಿಸಲ್ಪಟ್ಟ, ಶ್ರೀಮಾನ್ = ವೇದಪ್ರತಿಪಾದ್ಯ ಮಹಿಮನಾದ, ಗರುಡಧ್ವಜಃ = ಶ್ರೀಮನ್ನಾರಾಯಣನು, ಉತ್ತಸ್ಥೌ = (ಉತಸ್ಥೌ) = ಮೇಲೆದ್ದನು, ಮತ್ತು ಶೇಷನನ್ನು ಕುರಿತು-, ಹೇ ಶೇಷ = ಶೇಷನೇ, ಕಿಮರ್ಥಂ = ಏತಕ್ಕಾಗಿ, ಕ್ರೋಶಸೇ = ಕೂಗಾಡುತ್ತಿರುವೇ? ಪರಃ = ಬೇರೆಯವರಾದ, ಕಃ ಪುರುಷಃ = ಯಾವ ಪುರುಷನು, ಅತ್ರ = ಇಲ್ಲಿಗೆ, ಆಗತಃ = ಬಂದಿದ್ದಾನೆ? ದೇವದೇವೇನ = ದೇವಾಧಿದೇವತೆಗಳಿಗೆಲ್ಲಾ ಪ್ರಭುವಾದ ಶ್ರೀಹರಿಯಿಂದ, ಇತಿ = ಹೀಗೆ, ಉಕ್ತಃ = ಹೇಳಲ್ಪಟ್ಟವನಾಗಿ, ಫಣಿರಾಜಃ = ಆದಿಶೇಷನು, ಅಭ್ಯಭಾಷತ = ದೇವರ ಮುಂದೆ ಮಾತನಾಡಿದನು ॥ 94-97 ॥

*ಶೇಷ ಉವಾಚ -*

**ಮಲಯಾಚಲವಾಸೇನ ವಾಯುನಾತ್ಯಂತಗರ್ವಿಣಾ ।**
**ಅವಾಚ್ಯವಚನಂ ಚೋಕ್ತಮನೇನಾತ್ಯಂತಮಾನಿನಾ** ॥ 98 ॥

**ತಸ್ಮಿನ್ನೇವ ಹಿ ಕಾಲೇತು ಸಾಷ್ಟಾಂಗಂ ಪ್ರಣಿಪತ್ಯ ತಮ್ ।**
**ವಾಯುಸ್ತುಷ್ಟಾವ ಪುರುಷಂ ಪುರಾಣಂ ವೇದಗೋಚರಮ್** ॥ 100 ॥

**ತುಷ್ಟೋ ಬಭೂವ ನೃಪತೇ ! ವಾಯುರತ್ಯಂತ ಭಕ್ತಿಮಾನ್ ।**
**ಅಹಂ ಸಮರ್ಥೋ ಭಗವನ್ ಬಲೇ ಜ್ಞಾನೇ ಚ ತ್ವತ್ ಪ್ರಿಯೇ** ॥ 101 ॥

**ಮತ್ಸಮೋ ನಾಸ್ತಿ ಭೂಲೋಕೇ, ನಾಕೇ ವಾ ಬ್ರಹ್ಮಣೋಸ್ಮಹೇ ।**
**ಸರೀಸೃಪವಚಃ ಶ್ರುತ್ವಾ ಸಂಪೂಜ್ಯ ಫಣಿನಂ ಹರಿಃ** ॥ 102 ॥

ಶೇಷ ಉವಾಚ = ಶೇಷದೇವನು ವಿಜ್ಞಾಪಿಸಿದನು. ಮಲಯಾಚಲವಾಸೇನ = ಮಲಯಪರ್ವತದಲ್ಲಿ ವಾಸಮಾಡುತ್ತಿರುವ, ಅತ್ಯಂತಗರ್ವಿಣಾ = ಅತಿದುರಭಿಮಾನಿಯಾದ (ಅತಿಮಾನವಂತನಾದ), ವಾಯುನಾ = ವಾಯುದೇವನಿಂದ ಅವಾಚ್ಯವಚನಂ = ಹೇಳಬಾರದ ಮಾತುಗಳು, ಉಕ್ತಂ = ಹೇಳಲ್ಪಟ್ಟಿತು, ತಸ್ಮಿನ್ನೇವ ಹಿ = ಅದೇ, ಕಾಲೇ = ಸಮಯದಲ್ಲಿ, ವಾಯುಃ = ವಾಯುದೇವರು, ಪುರಾಣಂ = ಅನಾದಿಯಾದ, ವೇದಗೋಚರಂ = ವೇದಗಳಿಂದ ಮಾತ್ರ ತಿಳಿಯಲು ಶಕ್ಯನಾದ (ವೈದೈಕವೇದ್ಯನಾದ), ತಂ = ಆ, ಪುರುಷಂ = ಪರಮಪುರುಷನಾದ ಶ್ರೀಹರಿಯನ್ನು ಕುರಿತು (ಶ್ರೀಹರಿಗೆ), ಸಾಷ್ಟಾಂಗಂ ಪ್ರಣಿಪತ್ಯ = ಸಾಷ್ಟಾಂಗ ನಮಸ್ಕಾರ ಮಾಡಿ, ತಂ = ಶ್ರೀವಿಷ್ಣುವನ್ನು, ತುಷ್ಟಾವ = ವೇದಮಂತ್ರಗಳಿಂದ ಸ್ತೋತ್ರಮಾಡಿ ಆನಂದಗೊಳಿಸಿದರು, ವಾಯುಂ = ವಾಯುದೇವರನ್ನು, ಆಲೋಕ್ಯ = ಕೃಪಾದೃಷ್ಟಿಯಿಂದ ನೋಡಿ, ವಾರಿಜಾಕ್ಷಃ = ಕಮಲಾಕ್ಷನಾದ ಶ್ರೀಹರಿಯು, ದ್ರುತಂ = ಶೀಘ್ರವಾಗಿ, ವಚನಂ = ವಾಕ್ಯವನ್ನು, ಅಬ್ರವೀತ್ = ಹೇಳಿದನು, ಪುತ್ರ = ಕುಮಾರ ! ಅತ್ಯಂತ ಮಾನಿನಾ = ಅತಿಶಯ ದುರಭಿಮಾನಿಯಾದ, ಶೇಷೇಣ (ಸಹ) = ಶೇಷನೊಡನೆ, ಕಿಮರ್ಥಂ = ಏತಕ್ಕಾಗಿ, ಕಲಹಃ = ವ್ಯಾಜ್ಯ? (ಕಲಹ ಮಾಡುತ್ತಿರುವೆ?) ನೃಪತೇ = ಎಲೈ ಜನಕರಾಜ! ಅತ್ಯಂತ ಭಕ್ತಿಮಾನ್ = ಶ್ರೀವಿಷ್ಣುವಿನಲ್ಲಿ ಅತಿಶಯ ಭಕ್ತಿಯುಳ್ಳ, ವಾಯುಃ = ಪವಮಾನನು, ತುಷ್ಟೋ ಬಭೂವ = ಶ್ರೀಹರಿಯ ಪ್ರಿಯವಚನಗಳಿಂದ ಸಂತುಷ್ಟನಾದನು. ಶೇಷ ಉವಾಚ = ಆಗ ಶೇಷದೇವನು ಹೇಳಿದನು. ಭಗವನ್ = ಪೂಜ್ಯನಾದ ಶ್ರೀಹರಿಯೇ ! ಬಲೆ = ಶಕ್ತಿಯಲ್ಲಿ, ಜ್ಞಾನೇ = ಜ್ಞಾನದಲ್ಲಿ (ಬುದ್ಧಿಯಲ್ಲಿ), ತ್ವತ್ ಪ್ರಿಯೇ = ನಿನಗೆ ಪ್ರಿಯವಾದ ಕಾರ್ಯ ಮಾಡುವುದರಲ್ಲಿ, ಅಹಂ = ನಾನು, ಸಮರ್ಥಃ = ಸಮರ್ಥನು. ಭೂಲೋಕೆ = ಧರಣಿಯಲ್ಲಿ, ನಾಕೇ = ಸ್ವರ್ಗದಲ್ಲಿ, ಮತ್ಸಮಃ = ನನಗೆ ಸಮಾನರು, ನಹಿ = ಬೇರಾರೂ ಇಲ್ಲ, ಬ್ರಹ್ಮಣಃ = ಪಿತಾಮಹರಾದ ಬ್ರಹ್ಮದೇವರ, ಗೃಹೇವಾ = ಸತ್ಯಲೋಕದಲ್ಲಿಯಾಗಲಿ, ಕೋವಾ = ಯಾವನೊಬ್ಬನೂ, ಮತ್ಸಮಃ = ನನಗೆ ಸರಿಸಾಟಿಯಾದವನು, ನಾಸ್ತಿ = ಇಲ್ಲ (ಎಂದು ಹೇಳಿದನು). ಹರಿಃ = ಶ್ರೀಮನ್ನಾರಾಯಣನು, ಸರೀಸೃಪವಚಃ = ಶೇಷದೇವನ ಮಾತನ್ನು, ಶ್ರುತ್ವಾ = ಆಲಿಸಿ, ಫಣಿನಂ = ಆ ಆದಿಶೇಷನನ್ನು, ಸಂಪೂಜ್ಯ = ಸಂಭಾವಿಸಿ (ಇಂತು ಹೇಳಿದನು).

*ಭಗವಾನುವಾಚ -*

**ನ ವಾಙ್ಮಾತ್ರೇಣ ಪೌರುಷ್ಯಂ ಕ್ರಿಯಾಕೇವಲಮುತ್ತಮಮ್ ।**
**ಬಲಾಬಲಂ ಪರೀಕ್ಷ್ಯಂತಿ ದೇವಾಶ್ಚೇಂದ್ರ ಪುರೋಗಮಾಃ** ॥ 103 ॥

**ಅತ್ರೈವೋತ್ತರ ದಿಗ್ಭಾಗೇ ಪರ್ವತಂ ಮೇರುನಂದನಮ್ ।**
**ಸ್ವಕಾಯರಜ್ಜುನಾ ಬಧ್ವಾ ಬಲಂ ತೇ ಯಾವ ದಸ್ತಿ ಹಿ ॥ 104 ॥**

**ತಿಷ್ಠ ಭದ್ರ ಮಹಾಭೋಗಿನ್ ವಿಷಪೂತ್ಕಾರ ಸಂಯುತಃ ।**
**ಹೃಷಿಕೇಶ ವಚಃ ಶ್ರುತ್ವಾ ಹೃಷ್ಟಪುಷ್ಟಾಂಗವಿಭ್ರಮಃ ॥ 105 ॥**

**ಸ್ವಕಾಯರಜ್ಜುನಾ ಬಧ್ವಾ ಹ್ಯಾನಂದಾದ್ರಿಂ ಮಹೀಪತೇ ।**
**ತಮಾಲೋಕ್ಯಾಗ್ನಿದಯಿತಃ ಪರ್ವತಂ ತಮುಪಾಗತಃ ॥ 106 ॥**

**ಆಜ್ಞಯಾ ವಾಸುದೇವಸ್ಯ ದೇವಾನಾಂ ಪಶ್ಯತಾಮಪಿ ।**
**ಕನಿಷ್ಠಾಂಗುಲಿ ಸಂಸ್ಪರ್ಶಾ ತ್ಪರ್ವತೋ ಭೋಗಿಸಂಯುತಃ ॥ 107 ॥**

**ಸಹಸ್ರಮರ್ಧಲಕ್ಷಂ ಚ ದಕ್ಷಿಣಾಭಿಮುಖೋ ಯಯೌ ।**
**ಮೇರುಸ್ತುಷ್ಟಾವ ನೃಪತೇ ಬಲದೇವಂ ಮಹಾಬಲಮ್ ॥ 108 ॥**

ಶ್ರೀ ಭಗವಾನುವಾಚ = ಶ್ರೀಭಗವಂತನಾದ ವಿಷ್ಣುವು, ಹೀಗೆ ಅಪ್ಪಣೆ ಕೊಡಿಸಿದನು. ವಾಙ್ಮಾತ್ರೇಣ = ಬರಿಮಾತಿನಿಂದ (ಬಡಾಯಿಕೊಚ್ಚುವುದರಿಂದ), ಪೌರುಷಂ = ಸಾಮರ್ಥ್ಯವು, ನ = ಉಂಟಾಗುವುದಿಲ್ಲ (ಪ್ರಕಟವಾಗುವುದಿಲ್ಲ). ಕ್ರಿಯಾ = ಮಾಡುವ ಕೆಲಸವೇ, ಕೇವಲಂ = ನಿಜವಾಗಿ, ಉತ್ತಮಂ = ಶ್ರೇಷ್ಠವು, ಇಂದ್ರ ಪುರೋಗಮಾಃ = ದೇವೇಂದ್ರನೇ ಮೊದಲಾದ, ದೇವಾಃ = ದೇವತೆಗಳು, ಬಲಾಬಲಂ = ನಿಮ್ಮಿಬ್ಬರ ಬಲ ಮತ್ತು ಆ ಸಾಮರ್ಥ್ಯವನ್ನು, ಪರೀಕ್ಷಂತಿ = ಪರೀಕ್ಷಿಸುವರು. ॥ 103 ॥ ಆದುದರಿಂದ – ಅತ್ರೈವ = ಇಲ್ಲಿಯೇ, ಉತ್ತರದಿಗ್ಭಾಗೇ = ಉತ್ತರ ದಿಕ್ಕಿನ ಭಾಗದಲ್ಲಿ, ಮೇರುನಂದನಂ = ಮೇರುವಿನ ಮಗನಾದ, ಪರ್ವತಂ = ಆನಂದಾದ್ರಿಯನ್ನು, ತೇ = ನಿನ್ನ, ಬಲಂ = ಶಕ್ತಿಯು, ಯಾವದಸ್ತಿ ಹಿ = ಎಷ್ಟಿದೆಯೋ, ಅಷ್ಟು ಬಲದಿಂದ, ಸ್ವಕಾಯ ರಜ್ಜುನಾ = ನಿನ್ನ ದೇಹವೆಂಬ ಹಗ್ಗದಿಂದ, ಬಧ್ವಾ = ಕಟ್ಟಿ, (ನಿನ್ನ ದೇಹರೂಪ ಹಗ್ಗದಿಂದ ಆನಂದಾದ್ರಿಯನ್ನು ಬಿಗಿದುಕೊಂಡು) ಭದ್ರ = ಶುಭಕರನಾದ, ಮಹಾಭೋಗಿನ್ = ಮಹಾಸರ್ಪನಾದ ಆದಿಶೇಷ, ವಿಷಪೂತ್ಕಾರ ಸಂಯುತಃ = ವಿಷದಗಾಳಿಯನ್ನು ಉಗುಳುತ್ತಾ, ತಿಷ್ಠ = ಇರು. ಮಹೀಪತೇ = ಜನಕರಾಜ ! ಹೃಷೀಕೇಶವಚಃಶ್ರುತ್ವಾ – ಹೃಷಿಕೇಶ = ಶ್ರೀಹರಿಯ, ವಚಃ = ವಚನವನ್ನು, ಶ್ರುತ್ವಾ = ಕೇಳಿ, ಹೃಷ್ಟಪುಷ್ಟಾಂಗವಿಭ್ರಮಃ – ಹೃಷ್ಟ = ಸಂತೋಷದಿಂದ, ಪುಷ್ಟ = ಉಬ್ಬಿದ, ಅಂಗ = ಅವಯವಗಳ, ವಿಭ್ರಮಃ = ವಿಭ್ರಮದಿಂದ, ಸ್ವಕಾಯರಜ್ಜನಾ = ತನ್ನ ದೇಹವೆಂಬ ಹಗ್ಗದಿಂದ (ಶೇಷನು), ತಂ = ಆನಂದಾದ್ರಿಯನ್ನು, ಬಧ್ವಾ = ಸುತ್ತಿಕೊಂಡು (ವಿರಾಜಿಸಿದನು). ತಂ – ಆನಂದಾದ್ರಿಯನ್ನು ಸುತ್ತಿಕೊಂಡಿರುವ ಶೇಷದೇವನನ್ನು, ಆಲೋಕ್ಯ = ನೋಡಿ, ಅಗ್ನಿದಯಿತಃ = ಅಗ್ನಿಯ ಮಿತ್ರನಾದ ವಾಯುದೇವರು, ತಂ ಪರ್ವತಂ (ಪ್ರತಿ) = ಆ ಆನಂದಾದ್ರಿಯ ಬಳಿಗೆ, ಉಪಾಗತಃ = ಬಂದವನಾಗಿ (ಬಂದು), ವಾಸುದೇವಸ್ಯ = ಶ್ರೀಮನ್ನಾರಾಯಣನ, ಆಜ್ಞಯಾ = ಅಪ್ಪಣೆಯಿಂದ, ದೇವಾನಾಂ = ದೇವತೆಗಳು, ಪಶ್ಯತಾಮಪಿ = ನೋಡುನೋಡುತ್ತಿರುವಂತೆಯೇ (ಆನಂದಾದ್ರಿಯನ್ನು ತನ್ನ ಕಿರುಬೆರಳಿನಿಂದ ಸ್ಪರ್ಶಿಸಿದನು.) ಕನಿಷ್ಠಾಂಗುಲಿ ಸಂಸ್ಪರ್ಶಾತ್–ಕನಿಷ್ಠಾಂಗುಲಿ = ವಾಯುದೇವರ ಕಿರುಬೆರಳಿನ, ಸಂಸ್ಪರ್ಶಾತ್ = ಮುಟ್ಟುವ ಮಾತ್ರದಿಂದ, ಭೋಗಿಸಂಯುತಃ = ಶೇಷದೇವನಿಂದ ಸಹಿತವಾದ, ಪರ್ವತಃ = ಆನಂದಾದ್ರಿಯು, ಸಹಸ್ರಮರ್ಧಲಕ್ಷಂಚ = ಐವತ್ತೊಂದು ಸಾವಿರ ಯೋಜನ(ಗಾವುದ) ದೂರ, ದಕ್ಷಿಣಾಭಿಮುಖಃ = ದಕ್ಷಿಣದಿಕ್ಕಿಗೆ ಅಭಿಮುಖವಾಗಿ, ಯಯೌ = ಹೋಯಿತು !, ನೃಪತೇ = ಎಲೈ ಜನಕಮಹಾರಾಜ, ಮೇರುಃ = ಮೇರು ಪರ್ವತ (ರಾಜನು), ಮಹಾಬಲಂ = ಅತ್ಯಂತ

ಬಲಶಾಲಿಯಾದ, ಬಲದೇವಂ = ಬಲದೇವನೆಂದೇ ವಿಖ್ಯಾತನಾದ ವಾಯುದೇವನನ್ನು, ತುಷ್ಟಾವ = ಸ್ತೋತ್ರಮಾಡಿ ಸಂತೋಷಗೊಳಿಸಿದನು. ॥ 108 ॥

ಮೇರುರುವಾಚ-

**ತ್ರಾಯತಾಂ ತ್ರಾಯತಾಂ ಸ್ವಾಮಿನ್ ಪುತ್ರಂ ಬಾಲಂ ಮಹಾಬಲ ।**
**ಏವಮುಕ್ತೋ ಮೇರುಣಾಥ ವಾಯುಸ್ತ್ವರಿತಮಾನಸಃ ॥ 109 ॥**

**ಶೇಷೇಣ ಗಿರಿಪುತ್ರೇಣ ಸ್ವರ್ಣಮುಖ್ಯಾಸ್ತಟೋತ್ತರೇ ।**
**ಸ್ಥಾಪಯಾಮಾಸ ರಾಜೇಂದ್ರಗಿರಿರಾಜಂ ಸಪನ್ನಗಮ್ ॥ 110 ॥**

**ಶೇಷೋ ಗತಮದಃ ಪಶ್ಚಾತ್ ತುಷ್ಟಾವ ಮರುತಾಂ ಪತಿಮ್ ।**
**ಕ್ಷಮಸ್ವ ಮಮ ದೌರಾತ್ಮ್ಯಮಜ್ಞಾನೇನಾಗತಂ ವಿಭೋ ॥ 111 ॥**

**ನಿರ್ವೈರ ಸ್ತತ್ಪ್ರಸಾದಂ ಚ ಚಕಾರ ಮರುತಾಂಪತಿಃ ।**
**ರಾಜನ್ ಶೇಷನಿಮಿತ್ತೇನ ಶೇಷಾಚಲಮಿಮಂ ವಿದುಃ ॥ 112 ॥**

ಮೇರುರುವಾಚ = ಮೇರುವು ಮಾತನಾಡಿದನು. ಸ್ವಾಮಿನ್ = ಪ್ರಭುಗಳಾದ, ಮಹಾಬಲ = ವಾಯುದೇವ, ಬಾಲಂ = ಬಾಲಕನಾದ, ಪುತ್ರಂ = ನನ್ನ ಮಗನಾದ ಆನಂದಾದ್ರಿಯನ್ನು, ತ್ರಾಯತಾಂ ತ್ರಾಯತಾಂ = ಕಾಪಾಡಿರಿ, ರಕ್ಷಿಸಿರಿ. ಏವಂ = ಈ ಪ್ರಕಾರವಾಗಿ, ಮೇರುಣಾ = ಮೇರುವಿನಿಂದ, ಉಕ್ತಃ = ಪ್ರಾರ್ಥಿತನಾದ, ವಾಯುಃ = ವಾಯುದೇವನು, ಅಥ = ಅನಂತರ, ತ್ವರಿತಮಾನಸಃ = ಆನಂದ ಪರ್ವತವನ್ನು ರಕ್ಷಿಸಬೇಕೆಂದು ಕೂಡಲೇ ಮನಸ್ಸುಳ್ಳವನಾಗಿ, ಶೇಷೇಣ = ಆದಿಶೇಷನಿಂದಲೂ, ಗಿರಿಪುತ್ರೇಣ = ಮೇರುಕುವರನಾದ ಆನಂದಾದ್ರಿಯಿಂದಲೂ, (ಪ್ರಾರ್ಥಿತಃ = ನಮ್ಮನ್ನು ರಕ್ಷಿಸಿರಿ ಎಂದು ಪ್ರಾರ್ಥಿತನಾಗಿ), ಹೇ ರಾಜೇಂದ್ರ = ಜನಕರಾಯನೇ, ಸ್ವರ್ಣಮುಖ್ಯಾಃ = ಸುವರ್ಣಮುಖೀ ನದಿಯ, ತಟೋತ್ತರೇ = ದಡದ ಉತ್ತರ ಭಾಗದಲ್ಲಿ, ಸಪನ್ನಗಂ = ಆದಿಶೇಷನಿಂದ ಸಹಿತವಾದ, ಗಿರಿರಾಜಂ = ಆನಂದಾದ್ರಿಯನ್ನು, ಸ್ಥಾಪಯಾಮಾಸ = ಸ್ಥಾಪನೆ ಮಾಡಿದನು. ಗತಮದಃ = ಮದವಿಲ್ಲದವನಾಗಿ (ಮದವಿಳಿದ ಮೇಲೆ) ಶೇಷಃ = ಆದಿಶೇಷನು, ಮರುತಾಂಪತಿಂ = ಮರುತ್ತುಗಳಿಗೆ ಸ್ವಾಮಿಯಾದ ವಾಯುದೇವನನ್ನು, ತುಷ್ಟಾವ = ಇಂತು ಸ್ತುತಿಸಿದನು. ವಿಭೋ = ಸರ್ವಶಕ್ತಿ ಸಂಪನ್ನನಾದ ಹೇ ಮುಖ್ಯಪ್ರಾಣದೇವ ! ಅಜ್ಞಾನೇನ = ಅಜ್ಞಾನದಿಂದ, ಆಗತಂ = ಬಂದಂತಹ (ಬಂದಿದ್ದ) ಮಮ = ನನ್ನ, ದೌರಾತ್ಮ್ಯಂ = ದುಷ್ಟತನವನ್ನು, ಕ್ಷಮಸ್ವ = ಕ್ಷಮಿಸು - (ಹೀಗೆ ಪ್ರಾರ್ಥಿಸಲ್ಪಟ್ಟ), ನಿರ್ವೈರಃ = ಯಾರಲ್ಲೂ ದ್ವೇಷವಿಲ್ಲದ, ಅಥವಾ ಆದಿಶೇಷನಲ್ಲಿ ವಿರೋಧವಿಲ್ಲದವನಾದ, ಮರುತಾಂಪತಿಃ = ಮುಖ್ಯಪ್ರಾಣದೇವನು (ವಾಯುದೇವನು) ತತ್ = ಆ ಶೇಷದೇವನಲ್ಲಿ ಪ್ರಸಾದಂ = ಅನುಗ್ರಹವನ್ನು, ಚಕಾರ = ಮಾಡಿದನು. (ಮತ್ತು ಶೇಷದೇವನಿಗೆ ಈ ಕಾರ್ಯವು ಶ್ರೀಹರಿ ಸಂಕಲ್ಪದಂತೆ ಜರುಗಿದೆ. ಮುಂದೆ ಇಲ್ಲಿಗೆ ಶ್ರೀಹರಿಯು ಬಂದು ವಾಸಿಸುವನು. ಆದರಿಂದ ನಿನ್ನ ಹೆಸರೂ ವಿಖ್ಯಾತವಾಗುವುದೆಂದು ಹೇಳಿ ಅನುಗ್ರಹಿಸಿದರೆಂದು ಭಾವ) ರಾಜನ್ = ಜನಕರಾಜ, ಶೇಷನಿಮಿತ್ತೇನ = ಶೇಷದೇವನ ಕಾರಣದಿಂದಾಗಿ, ಇಮಂ = ಈ ಪರ್ವತವನ್ನು, ಶೇಷಾಚಲಂ = ಶೇಷಪರ್ವತವೆಂದು, ವಿದುಃ = ಜ್ಞಾನಿಗಳು ತಿಳಿಯುವರು. ॥ 110-112 ॥

# ಶೇಷಾಚಲಮಹಿಮೆಯ ಕಥಾಸಾರ

ಜನಕಮಹಾರಾಜನು ಶತಾನಂದ ಮುನಿಗಳನ್ನು ದ್ವಾಪರಯುಗದಲ್ಲಿ ಆ ಪರ್ವತಕ್ಕೆ 'ಶೇಷಾಚಲ'ವೆಂದು ಹೆಸರು ಬಂದ ಬಗೆಯನ್ನು ತಿಳಿಸಿರಿ ಎಂದು ವಿಜ್ಞಾಪಿಸಲು ಶತಾನಂದರು ಹೇಳಲಾರಂಭಿಸಿದರು.

ಶತಾನಂದ:- ಪೂರ್ವದಲ್ಲಿ ವೈಕುಂಠಪುರದಲ್ಲಿ ದೇವೋತ್ತಮನೂ, ಷಡ್ಗುಣೈಶ್ವರ್ಯಪೂರ್ಣನೂ ಆದ ಶ್ರೀಮನ್ನಾರಾಯಣನು ಅಂತಃಪುರದಲ್ಲಿ ಶ್ರೀಲಕ್ಷ್ಮೀದೇವಿಯೊಡನಿರುವಾಗ, ಅಂತಃಪುರದ ಬಾಗಿಲು ಕಾಯಲು ಶೇಷದೇವನನ್ನು ನೇಮಿಸಿ, ಒಳಗೆ ಯಾರನ್ನೂ ಬಿಡಬಾರದೆಂದು ಆಜ್ಞಾಪಿಸಿದನು. ಜನಕರಾಯ ! ಅದೇ ಸಮಯದಲ್ಲಿ ಸಮಸ್ತ ಪ್ರಾಣಿಗಳಿಗೆ ನಿಯಾಮಕರಾದ ಶ್ರೀಮುಖ್ಯಪ್ರಾಣ (ವಾಯು)ದೇವರು ಇದ್ದಕ್ಕಿದ್ದಂತೆ ವಿಶೇಷ ಕಾರ್ಯಗೌರವದಿಂದ ಶ್ರೀಹರಿಪರಮಾತ್ಮನ ಸಂದರ್ಶನಕ್ಕೆ ಅಲ್ಲಿಗೆ ಆಗಮಿಸಿದರು. ಆಗ ಸರ್ಪಗಳಿಗೆ ರಾಜನಾದ ಶೇಷದೇವನು ಕರದಲ್ಲಿ ಸುವರ್ಣದಂಡವನ್ನು ಹಿಡಿದು ಬಾಗಿಲಿಗೆ ಅಡ್ಡನಿಂತು ವಾಯುದೇವರು ಒಳಗೆ ಪ್ರವೇಶಿಸದಂತೆ ತಡೆದನು. ಭಗವಂತನ ದರ್ಶನಕ್ಕೆ ಅಡ್ಡಿಯುಂಟುಮಾಡಿದ್ದರಿಂದ ಅಸಮಾಧಾನಗೊಂಡು ವಾಯುದೇವರು ಶೇಷದೇವನನ್ನು ನೋಡಿ ''ಎಲವೋ ಮೂಢ, ನನ್ನನ್ನೇಕೆ ತಡೆಯುತ್ತಿರುವೆ ? ಕಾರ್ಯಗೌರವದಿಂದ ಶ್ರೀಹರಿಯ ದರ್ಶನಕ್ಕೆ ಬಂದಿದ್ದೇನೆ. ನನ್ನನ್ನು ತಡೆಯಬೇಡ'' ಎಂದರು. ಆಗ ಶೇಷದೇವನು ''ವಾಯುದೇವ ! ನಾನು ಶ್ರೀಹರಿಯ ಆಜ್ಞಾಧಾರಕನು. ಅಂತಃಪುರದೊಳಗೆ ಯಾರನ್ನೂ ಬಿಡಬಾರದೆಂದು ವಿಷ್ಣುವು ಆಜ್ಞಾಪಿಸಿರುವನು. ಅಂತೆಯೇ ನಿನ್ನನ್ನು ತಡೆಯುತ್ತಿರುವೆನು. ನೀನು ಒಳಗೆ ಹೋಗಕೂಡದು'' ಎಂದನು.

ಆಗ ಜಗತ್ಪ್ರಾಣರಾದ ವಾಯುದೇವರು ''ಮೂಢನಾದ ಶೇಷದೇವ ! ಹಿಂದೆ ಜಯ-ವಿಜಯರೆಂಬ ದ್ವಾರಪಾಲಕರು ತಮ್ಮ ಸ್ಥಾನಬಲದ ಗರ್ವದಿಂದ ಉನ್ಮತ್ತರಾಗಿ ಭಗವದ್ಭಕ್ತರೂ, ಜ್ಞಾನಿಗಳೂ ಆದ ಸನಕ - ಸನಂದನಾದಿ ಋಷಿಗಳನ್ನು ಪರಮಾತ್ಮನ ದರ್ಶನಕ್ಕೆ ಬಿಡದೆ ತಡೆಗಟ್ಟಿ ಅಪಮಾನಗೊಳಿಸಿದ್ದರಿಂದ ''ಗರ್ವಾಂಧರಾದ ನೀವು ಶ್ರೀವೈಕುಂಠದಲ್ಲಿರಲು ಯೋಗ್ಯರಲ್ಲ! ನೀವು ರಾಕ್ಷಸರಾಗಿ ಜನಿಸಿರಿ'' ಎಂದು ಸನಕಾದಿಗಳಿಂದ ಶಾಪ ಪಡೆದು, ಅಹಂಕಾರಮತ್ತರಾಗಿ ರಾವಣ-ಕುಂಭಕರ್ಣರೆಂಬ ರಾಕ್ಷಸರಾಗಿ ಹುಟ್ಟಿದ ವಿಚಾರವನ್ನು ನೀನು ಮರೆತುಬಿಟ್ಟಿರುವೆಯೇನು?' ಎಂದರು.

''ಜನಕರಾಜ! ವಾಯುದೇವನ ವಚನವನ್ನಾಲಿಸಿ ಶೇಷದೇವನು ವಿಷಾಧಿಕ್ಯದಿಂದ ಉಲ್ಬಣಿಸಿ, ಕ್ರೋಧದಿಂದ ಉರಿದೆದ್ದು ಮೊನಚಾದ ವಾಕ್ಯಗಳಿಂದ ಸಕಲಜೀವನಿಯಾಮಕನಾದ ಮುಖ್ಯಪ್ರಾಣದೇವನನ್ನು ನಿಂದಿಸುತ್ತಾ ''ಎಲೈ ವಾಯುದೇವ! ಬಹಳ ದೊಡ್ಡ ದೊಡ್ಡ ಮಾತುಗಳನ್ನಾಡುತ್ತಿರುವೆಯಲ್ಲ ? ನಿನಗೆ ಬದುಕುವ ಅಪೇಕ್ಷೆ ಇಲ್ಲವೇನು ? ಅಜ್ಞಜನರು ಜಗತ್ತಿನಲ್ಲಿ ಸೂರ್ಯನಗತಿಯನ್ನು ತಿಳಿಯಲಾರರು. ಅಂತಹ ಹುಲುಮಾನವರಂತೆ ವ್ಯರ್ಥವಾಗಿ ಅಹಂಕಾರದಿಂದ ಮಾತನಾಡುತ್ತಿರುವೆಯಲ್ಲ! ಕೇಳು, ಶಕ್ತಿ (ಸಾಮರ್ಥ್ಯದಲ್ಲಿ)ಯಲ್ಲಿ, ಸರ್ವವಿಷಯಕ ಜ್ಞಾನದಲ್ಲಿ, ವೈರಾಗ್ಯದಲ್ಲಾಗಲೀ ನನಗೆ ಸಮಾನರಾದವರಾರೂ ಇಲ್ಲ, ನಾನು ಸರ್ವದಾ ಶ್ರೀಹರಿಯ ಅಂತಃಪುರದಲ್ಲಿ ವಾಸಿಸುವವನು, ಶ್ರೀಹರಿಯ ಪುತ್ರರಿಗಿಂತಲೂ ಶ್ರೀಹರಿಗೆ ನಾನು ಹೆಚ್ಚು ಪ್ರೀತಿಪಾತ್ರನು! ಮನುಷ್ಯಲೋಕದ ಕ್ಷೇಮಕ್ಕಾಗಿ, ಜಗದೀಶನಾದ ಶ್ರೀಹರಿಯ ಹಿತಕ್ಕಾಗಿ ಶ್ರೀಲಕ್ಷ್ಮೀನಾರಾಯಣನು ನನ್ನನ್ನು ಈ ದ್ವಾರಪಾಲನೆಯ ಉದ್ಯೋಗದಲ್ಲಿ ನೇಮಿಸಿದ್ದಾನೆ'' ಎಂದನು.

ಅವನ ನುಡಿಯನ್ನಾಲಿಸಿ ವಾಯುದೇವನು ''ಅಯ್ಯಾ, ದೊರೆಯ ಅರಮನೆಯಲ್ಲಿರುವ ಮಾರ್ಜಾಲವೂ (ಬೆಕ್ಕು) ಸಹ ರತ್ನಮಂಚದಲ್ಲಿ ಸುಪ್ಪತ್ತಿಗೆಯ ಮೇಲೆ ಪವಡಿಸಿರುವ ಅರಸನನ್ನು ತಾನೂ ಹಾಸಿಗೆಯೇರಿ ಸೇವಿಸುತ್ತಿರಬಹುದು ಅಂದ ಮಾತ್ರಕ್ಕೆ ಅರಮನೆಯ ಹೊರಗಿರುವ ಪಟ್ಟದಾನೆಗೆ ಅದು ಸಮವಾದೀತೆ ? ಶೇಷದೇವ, ಮಹಾರಾಜನ ಸೇವೆಗಾಗಿ ನಿಯುಕ್ತನಾದ ಓರ್ವ ಸಾಮಾನ್ಯ ಸೇವಕನು ದೊರೆಯ ಪರ್ಯಂಕದಲ್ಲಿ ಹಾಸಿಗೆಯಲ್ಲಿ ಕುಳಿತು ಪ್ರಭುವಿನ ಪಾದ ಸಂವಹನ ಮಾಡುತ್ತಿರುತ್ತಾನೆ. ಅಷ್ಟುಮಾತ್ರದಿಂದ ಅದು ಅವನಿಗೆ ದೊಡ್ಡಸ್ತಿಕೆಯಾದೀತೆ ? ರಾಜಕುಮಾರನು ಅರಸನ ಮಂಚವೇರದಿದ್ದರೂ ಅದು ಯುವರಾಜನಿಗೆ ನ್ಯೂನತೆ ಎನಿಸುವುದೇನು ?'' ಎಂದನು.

ಹೀಗೆ ಮಹಾನುಭಾವರಾದ ಆ ಶೇಷ-ವಾಯುಗಳಲ್ಲಿ ಮಾತಿನ ಚಕಮಕಿಯಾಗುತ್ತಿರಲು, ಶ್ರೀಲಕ್ಷ್ಮೀದೇವಿಯು ವೇದಪ್ರತಿಪಾದ್ಯನಾದ ಶ್ರೀಮನ್ನಾರಾಯಣನನ್ನು ಎಚ್ಚರಗೊಳಿಸಿ, ವಾಯು-ಶೇಷರ ಮಧ್ಯೆ ನಡೆದಿರುವ ವಾಗ್ವಾದ ವಿಚಾರವನ್ನು ಸ್ವಾಮಿಯಲ್ಲಿ ಅರುಹಿದಳು. ಆಗ ಶ್ರೀಹರಿಯು ಮೇಲೆದ್ದು ಹೊರಬಂದು ''ಶೇಷ! ಏಕಿಂತು ಕೂಗಾಡುತ್ತಿರುವೆ ? ಇಲ್ಲಿಗೆ ಪರಕೀಯ ಪುರುಷರಾರು ಬಂದಿದ್ದಾರೆ'' ಎಂದು ಪ್ರಶ್ನಿಸಲು ಶೇಷದೇವನು- ''ಪ್ರಭು, ಮಲಯಾಚಲವಾಸಿಯೂ, ಬಹುಗರ್ವಿಷ್ಠನೂ, ದುರಭಿಮಾನಿಯೂ ಆದ ವಾಯುದೇವನು ಆಡಬಾರದ ಮಾತುಗಳನ್ನಾಡುತ್ತಿದ್ದಾನೆ. ಅಂತೆಯೇ ಈ ಕಲಹ'' ಎಂದು ವಿನಂತಿಸಿದನು. ಆಗ ವಾಯುದೇವನು ಮುಂದೆ ಬಂದು ಅನಾದಿ ನಿತ್ಯನೂ ವೇದಗೋಚರನೂ (ವೇದೈಕವೇದ್ಯನೂ) ಆದ ಪರಮಪುರುಷ ಶ್ರೀಮನ್ನಾರಾಯಣನನ್ನು ಕಂಡು ಸಾಷ್ಟಾಂಗ ನಮಸ್ಕಾರ ಮಾಡಿ, ವೇದಮಂತ್ರಗಳಿಂದ ಶ್ರೀವಿಷ್ಣುವನ್ನು ಸ್ತುತಿಸಿ ಸಂತೋಷಗೊಳಿಸಿದನು. ತನಗೆ ಪರಮಪ್ರಿಯನಾದ ಮುಖ್ಯಪ್ರಾಣನನ್ನು ಕೃಪಾದೃಷ್ಟಿಯಿಂದ ಅವಲೋಕಿಸಿ ಕಮಲನಯನನಾದ ಕಮಲಾಕಾಂತನು ಕಮನೀಯ ಮಂದಹಾಸರಂಜಿತ ಮುಖದಿಂದ ''ಕುಮಾರ! ಪವಮಾನ! ಅತಿದುರಭಿಮಾನಿಯಾದ ಆ ಶೇಷನೊಡನೆ ನಿನಗೇಕೆ ಕಲಹ ?'' ಎಂದು ಮಧುರವಾಣಿಯಿಂದ ಮಾತನಾಡಿದನು. ಜನಕರಾಜ! ಶ್ರೀವಿಷ್ಣುವಿನಲ್ಲಿ ಅತಿಶಯ ಭಕ್ತಿಯುಳ್ಳ ವಾಯುದೇವರು ಶ್ರೀಹರಿಯ ಪ್ರಿಯನುಡಿಗಳಿಂದ ಸಂತೋಷಗೊಂಡು ವಿನೀತನಾಗಿ ನಿಂತನು.

ಭಗವಂತನು ವಾಯುದೇವನಲ್ಲಿ ಸುಪ್ರಸನ್ನನಾಗಿ ಪ್ರಿಯನುಡಿಗಳನ್ನಾಡಿದ್ದನ್ನು ಕಂಡು ಗರ್ವಿಷ್ಠನಾದ ಶೇಷದೇವನಿಗೆ ಅಸಮಾಧಾನವಾಯಿತು. ಆಗ ಶೇಷನು ಹರಿಯ ಮುಂದೆ ಇಂತು ತನ್ನ ಹಿರಿಮೆ-ಗರಿಮೆಗಳನ್ನು ಕೊಚ್ಚಿಕೊಳ್ಳಲಾರಂಭಿಸಿದನು. ''ಪೂಜ್ಯನಾದ ಶ್ರೀಹರಿಯೇ ! ಶಕ್ತಿಯಲ್ಲಿ, ಭಕ್ತಿಯಲ್ಲಿ, ಜ್ಞಾನದಲ್ಲಿ ಮತ್ತು ನಿನಗೆ ಪ್ರಿಯವಾದುದನ್ನು ಮಾಡುವುದರಲ್ಲಿ, ನಾನು ಮಹಾಸಮರ್ಥನು ! ಭೂಲೋಕದಲ್ಲಿ, ಸ್ವರ್ಗಲೋಕದಲ್ಲಿ, ನನಗೆ ಸಮಾನರಾದವರು ಯಾರೂ ಇಲ್ಲ ! ಅಷ್ಟೇ ಏಕೇ ? ನಾಲ್ಮೊಗನಾದ ಬ್ರಹ್ಮದೇವನ ಸತ್ಯಲೋಕದಲ್ಲಿಯೂ ಕೂಡ ನನಗೆ ಸರಿಸಾಟಿಯಾದವರು ಮತ್ತೊಬ್ಬರಿಲ್ಲ !''

ಶೇಷದೇವನ ನುಡಿಗಳನ್ನಾಲಿಸಿ ಭಗವಾನ್ ಶ್ರೀಹರಿಯು ಅವನನ್ನು ಸಂಭಾವಿಸಿ ಇಂತು ಅಪ್ಪಣೆ ಕೊಡಿಸಿದನು- ''ಶೇಷ ! ಬರಿಯ ಬಾಯಿಬಡಾಯಿಯ ಬಡಿವಾರದಿಂದಲೇ ಯಾರೊಬ್ಬರೂ ಸಮರ್ಥರೆನಿಸುವುದಿಲ್ಲ. ಮಾತಿಗಿಂತ ಕೃತಿಯು ಮೇಲು ! ಪ್ರತ್ಯಕ್ಷವಾಗಿ ಸಾಮರ್ಥ್ಯ ಪ್ರದರ್ಶಕ ಕಾರ್ಯವನ್ನೆಸಗಿ ತೋರಿಸುವುದೇ ಶ್ರೇಷ್ಠವಾದದ್ದು. ಆದ್ದರಿಂದ ನಿಮ್ಮಿಬ್ಬರ ಬಲಾಬಲದ ಪರೀಕ್ಷೆಯಾಗಿ ಹೋಗಲಿ ! ಇಂದ್ರಾದಿ ವೃಂದಾರಕ ವೃಂದವು ನಿಮ್ಮಿಬ್ಬರ ಶಕ್ತಿ-ಸಾಮರ್ಥ್ಯಗಳನ್ನು ಪರೀಕ್ಷಿಸುವುದು. ಶುಭಕರನಾದ ಆದಿಶೇಷನೇ ! ಇಲ್ಲಿಯೇ ಉತ್ತರ ದಿಕ್ಕಿನ ಪ್ರದೇಶದಲ್ಲಿ ಮೇರುಪರ್ವತ ರಾಜಕುಮಾರನಾದ ಆನಂದಾದ್ರಿಯಿರುವುದಷ್ಟೆ? ನೀನು ನಿನಗಿರುವ ಸಮಸ್ತಬಲವನ್ನು ಪ್ರಯೋಗಿಸಿ, ಆನಂದಾದ್ರಿಯನ್ನು ನಿನ್ನ ಶರೀರರೂಪ ಹಗ್ಗದಿಂದ ಬಿಗಿಯಾಗಿ ಸುತ್ತಿಕೊಂಡು ವಿಷಪೂರಿತ ಗಾಳಿಯನ್ನುಗುಳುತ್ತಾ ಇರು. ಆಗ ವಾಯುದೇವನು ನಿನ್ನನ್ನೂ ಆನಂದಾದ್ರಿಯನ್ನೂ ಕದಲಿಸಲಿ, ಆಗ ನಿಮ್ಮಿಬ್ಬರಲ್ಲಿ ಸಮರ್ಥರಾರೆಂಬುದು ನಿರ್ಣಯವಾಗುವುದು''.

ಜನಕ ಮಹಾರಾಜ ! ಶ್ರೀಹರಿಯ ಆದೇಶವನ್ನಾಲಿಸಿ, ಸಂತೋಷದಿಂದ ಮೈಯ್ಯುಬ್ಬಿ ವಿಜೃಂಭಿಸಿದ ಶೇಷದೇವನು ತನ್ನ ದೇಹವೆಂಬ ಹಗ್ಗದಿಂದ ಆನಂದಾದ್ರಿಯನ್ನು ಬಿಗಿಯಾಗಿ ಸುತ್ತಿನಿಂತನು. ಅದನ್ನು ನೋಡಿ ಅಗ್ನಿಯ ಗೆಳೆಯನಾದ ವಾಯುದೇವನು ಆನಂದಗಿರಿಯ ಸಮೀಪಕ್ಕೆ ಬಂದು ಶ್ರೀಮನ್ನಾರಾಯಣನ ಆಣತಿಯಂತೆ, ಸಮಸ್ತದೇವತೆಗಳು ಗಗನಮಾರ್ಗದಲ್ಲಿ ನಿಂತು ವಿಸ್ಮಯಸ್ಮಿತ ಪಕ್ಷ್ಮಪುಟನೇತ್ರರಾಗಿ ನೋಡುತ್ತಿರುವಂತೆಯೇ ತನ್ನ ಕಿರುಬೆರಳಿನಿಂದ ಆನಂದಾದ್ರಿಯನ್ನು ಸ್ಪರ್ಶ ಮಾಡಿದನು. ಏನಾಶ್ಚರ್ಯ! ಶ್ರೀವಾಯುದೇವನ ಕಿರುಬೆರಳಿನ ಸ್ಪರ್ಶಮಾತ್ರದಿಂದ ಆದಿಶೇಷನಿಂದ ಸಹಿತವಾದ ಆನಂದಪರ್ವತವು ಭರದಿಂದ ಮೇಲೆಹಾರಿ ಐವತ್ತೊಂದು ಸಾವಿರ ಯೋಜನದಷ್ಟು ದೂರದವರೆಗೆ ದಕ್ಷಿಣಾಭಿ-ಮುಖವಾಗಿ ಹೊರಟುಹೋಯಿತು !

ಮೇರುಪರ್ವತರಾಜನು ತನ್ನ ಕುಮಾರನಿಗೆ ಬಂದೊದಗಿದ ಆಪತ್ತನ್ನು ಕಂಡು ಬಲಾಭಿಮಾನಿ ದೇವನಾದ, ಅತ್ಯಂತ ಪರಾಕ್ರಮಿಯಾದ ವಾಯುದೇವನನ್ನು ''ಮಹಾಪ್ರಭುಗಳೇ ! ಬಾಲಕನಾದ ನನ್ನ ಕಂದನನ್ನು ಕಾಪಾಡಿರಿ, ಸಂರಕ್ಷಿಸಿರಿ'' ಎಂದು ಮೊರೆಯಿಟ್ಟನು. ಆಗ ಶೇಷ ಮತ್ತು ಆನಂದಾದ್ರಿಗಳೂ ವಾಯುದೇವರ ಪ್ರಖರ ಪರಾಕ್ರಮದ ರಭಸವನ್ನು ಸಹಿಸಲಾಗದೆ ಕಾಪಾಡುವಂತೆ ಪವಮಾನನನ್ನು ಬೇಡಿದರು. ದಯಾಳುಗಳಾದ ವಾಯುದೇವರು ಆನಂದಪರ್ವತ ಮತ್ತು ಶೇಷದೇವರನ್ನೂ ರಕ್ಷಿಸಲು ಮನಸ್ಸು ಮಾಡಿ ಕೂಡಲೇ ಶೇಷನಿಂದ ಸಹಿತವಾದ ಆನಂದಗಿರಿಯನ್ನು ಸುವರ್ಣಮುಖರೀ ನದಿಯ ತಟದ ಉತ್ತರಭಾಗದಲ್ಲಿ ಸ್ಥಾಪಿಸಿದರು. ಆಗ ಸಮಸ್ತದೇವತೆಗಳು ಬಲ-ಜ್ಞಾನ-ಶ್ರೀಹರಿಭಕ್ತಿಗಳಲ್ಲಿ ಶ್ರೀವಾಯು-ದೇವರು ಎಲ್ಲರಿಗಿಂತಲೂ ಶ್ರೇಷ್ಠರೆಂದು ನಿರ್ಣಯಿಸಿದರು.

ಆಗ ಶೇಷದೇವನ ಮದವಿಳಿದುಹೋಯಿತು, ಗರ್ವ ಪರಿಹಾರವಾಯಿತು, ಅಜ್ಞಾನವೂ ಪರಿಹಾರವಾಯಿತು ! ಜಗತ್ಪ್ರಾಣನೂ, ಜೀವೋತ್ತಮನೂ ಆದ ಶ್ರೀಮುಖ್ಯಪ್ರಾಣನನ್ನು ಅವಹೇಳನ ಮಾಡಿದ್ದಕ್ಕೆ ಪಶ್ಚಾತ್ತಾಪಪಟ್ಟು ಶೇಷದೇವರು ವಾಯುದೇವರಿಗೆ ನಮಸ್ಕರಿಸಿ ''ಸರ್ವಶಕ್ತಿ ಸಂಪನ್ನರಾದ ಶ್ರೀಮುಖ್ಯಪ್ರಾಣದೇವರೇ ! ನನಗೆ ಅಜ್ಞಾನದಿಂದ ಅಹಂಕಾರ ಬಂದಿತ್ತು. ನಾನು ಮಾಡಿದ ತಪ್ಪು ನಿಂದಾರೂಪ ದುಷ್ಕಾರ್ಯವನ್ನು ಕ್ಷಮಿಸಿರಿ'' ಎಂದು ಪ್ರಾರ್ಥಿಸಿದರು. ನಿರ್ವೈರರೂ, ಶೇಷನಲ್ಲಿ ದ್ವೇಷವಿಲ್ಲದವರೂ ಕರುಣಾಳುಗಳೂ ಆದ ವಾಯುದೇವರು ಶೇಷದೇವರ ಅಪರಾಧವನ್ನು ಕ್ಷಮಿಸಿ ಅವರಲ್ಲಿ ಅನುಗ್ರಹ ಮಾಡಿದರು. ಮತ್ತು ''ಶೇಷದೇವ ! ಇದೆಲ್ಲವೂ ಶ್ರೀಹರಿಯ ಸಂಕಲ್ಪದಂತೆ ಜರುಗಿದೆ. ಮುಂದೆ ಈ ಪರ್ವತಕ್ಕೆ ಶ್ರೀಹರಿಯು ಬಂದು ಇಲ್ಲಿ ವಾಸಮಾಡುವನು. ಅದರಿಂದ ನಿನ್ನ ಹೆಸರೂ ವಿಖ್ಯಾತವಾಗುವುದು'' ಎಂದು ಹೇಳಿ ಅವರನ್ನು ಆನಂದಗೊಳಿಸಿದರು.

ಜನಕಮಹಾರಾಜ! ಶೇಷದೇವರ ನಿಮಿತ್ತವಾಗಿ ಈ ಪರ್ವತವನ್ನು ''ಶೇಷಾಚಲ'' ಎಂದು ಕೋವಿದರು ತಿಳಿಯುವರು. ಈ ಕಾರಣದಿಂದಾಗಿ ಈ ಪರ್ವತವು ಶೇಷಶೈಲವೆಂದು ಪ್ರಖ್ಯಾತವಾಯಿತು'' ಎಂದು ಶತಾನಂದರು ಜನಕರಾಯನಿಗೆ ನಿರೂಪಿಸಿದರು.

## ಶ್ರೀವೇಂಕಟಾಚಲ ಮಹಿಮೆ

*ಮೂಲ— ಜನಕ ಉವಾಚ -*

**ಕಲೌ ವೇಂಕಟಶೈಲೇತಿ ಕಥಂ ನಾಮ ಮಹಾಮುನೇ ।**

*ಶತಾನಂದ ಉವಾಚ -*

**ಪುರಾ ಪುರಂದರೋ ನಾಮ ಸೋಮಯಾಜೀ ದೃಢವ್ರತಃ ॥ 113 ॥**

**ಕಾಲಹಸ್ತ್ಯಾಖ್ಯನಗರೇ ಸತ್ಯವಾಕ್ ಬ್ರಾಹ್ಮಣೋಽಭವತ್ ।**

**ಅಪುತ್ರಸ್ಯಾಪಿ ವಿಪ್ರಸ್ಯ*ನಾಭೂದ್ದುಃಖಂ ಸುತಾಪ್ತಯೇ ॥ 114 ॥**

*ಪಾಠಾಂತರಃ- ಹ್ಯಭೂದ್ದುಃಖಂ. ಅಂದರೆ ಭಗವಂತನ ಚಿತ್ತದಲ್ಲಿದ್ದರೆ ಪುತ್ರನು ಜನಿಸುವನು. ಅದಕ್ಕಾಗಿ ಚಿಂತಿಸಬಾರದು ಎಂದು ಶಾಸ್ತ್ರಜ್ಞ-ನಾದ್ದರಿಂದ ಅವನಿಗೆ ದುಃಖವಾಗಲಿಲ್ಲವೆಂದು ತಿಳಿಯಬೇಕು.

**ದೈವೇನ ಪೂರ್ವಪುಣ್ಯೇನ ಪುತ್ರೋಽಭೂದ್ವೃದ್ಧಭೂಸುರೇ ।**
**ಚಕಾರ ನಾಮ ಲಿಖಿತಂ ಮಾಧವಂ ವಿಪ್ರಸಂಸದಿ ॥ 115 ॥**

**ಪುತ್ರೋಽಪನೀತೋ ಬಾಲಸ್ತು ವವೃಧೇ ಚಂದ್ರವನ್ನೃಪ ।**
**ವೇದವೇದಾಂಗತತ್ತ್ವಜ್ಞಃ ಸರ್ವಶಾಸ್ತ್ರವಿಶಾರದಃ ॥ 116 ॥**

**ತತಃ ಕಾಲಾಂತರೇ ಪುತ್ರಂ ಪ್ರಾಪ್ತದಾರಂ ಚಕಾರ ಹ ।**
**ಸ ಚಂದ್ರಲೇಖಯಾ ರೇಮೇ ಬಹುಕಾಲಂ ಸ ಮಾಧವಃ ॥ 117 ॥**

**ಪಂಚಯಜ್ಞಪರೋ ನಿತ್ಯಂ ಪಂಚಾನನ ಸಮದ್ಯುತಿಃ ।**
**ತ್ರಿಸಪ್ತವರ್ಷಂ ರಾಜೇಂದ್ರ ದ್ವಿತೀಯ ಇವ ಭಾಸ್ಕರಃ ॥ 118 ॥**

**ಸಾ ಕನ್ಯಾ ಪಾಂಡ್ಯದೇಶೀಯಾ ಪಾಂಡವಾನಾಂ ತಥಾ ಪ್ರಿಯಾ ।**
**ಪತೌ ಸುಪ್ತೇ ಸ್ವಯಂಶೇತೇ ಪತೌ ಭುಕ್ತೇ ಸ್ವಭೋಜನಮ್ ॥ 119 ॥**

**ಕದಾಚಿದ್ದ್ವಿಜಪುತ್ರಸ್ತು ದಿವಾಸಂಗಮತತ್ಪರಃ ।**
**ರಾಜಪುತ್ರೀಂ ಸಮಾಸಾದ್ಯ ರಾಜನ್ ಕಾಮಾತುರೋ ದ್ವಿಜಃ ॥ 120 ॥**

**ಮಮೇಚ್ಛಾ ವರ್ತತೇ ಭದ್ರೇ ! ಸಂಗಮೇ ತವ ಭಾಮಿನಿ ।**
**ಪತಿವಾಕ್ಯಮುಪಾಕರ್ಣ್ಯ ಪತಿಂ ಪ್ರಾಹ ಪ್ರಜಾಪತೇ ॥ 121 ॥**

ಅನ್ವಯಾರ್ಥ:— ಜನಕ ಉವಾಚ = ಶೇಷಾಚಲ ಮಹಿಮೆಯನ್ನು ತಿಳಿದು ಸಂತೋಷಗೊಂಡ ಜನಕರಾಯನು ಶತಾನಂದರನ್ನು ಪ್ರಶ್ನಿಸಿದನು-ಮಹಾಮುನೇ = ಮನನಶೀಲರಲ್ಲಿ ಶ್ರೇಷ್ಠರಾದ ಶತಾನಂದರೇ, ಕಲೌ = ಕಲಿಯುಗದಲ್ಲಿ ವೇಂಕಟಶೈಲೇತಿ = (ಈ ಪರ್ವತಕ್ಕೆ) ವೇಂಕಟಾಚಲವೆಂದು, ನಾಮ = ಹೆಸರು, ಕಥಂ(ಅಭವತ್) = ಹೇಗುಂಟಾಯಿತು? ಶತಾನಂದ ಉವಾಚ = ರಾಜನ ಪ್ರಶ್ನೆಗೆ ಶತಾನಂದರು ಇಂತು ನಿರೂಪಿಸಿದರು. ಪುರಾ = ಹಿಂದಿನ ಕಾಲದಲ್ಲಿ, ದೃಢವ್ರತಃ = ಸ್ಥಿರನಿಯಮವುಳ್ಳ, ಪುರಂದರೋನಾಮ = ಪುರಂದರನೆಂಬ ಹೆಸರಿನ ಸೋಮಯಾಜೀ = (ಸೋಮಯಾಗಾದಿ ಯಜ್ಞಗಳನ್ನು ಆಚರಿಸುವ) ಸೋಮಯಾಜಿಯು, ಸತ್ಯವಾಕ್ = ಸತ್ಯವನ್ನೇ ನುಡಿಯುವ, ಬ್ರಾಹ್ಮಣಃ = ಬ್ರಾಹ್ಮಣನು, ಕಾಲಹ ಸ್ತ್ಯಾಖ್ಯನಗರೇ = ಕಾಳಹಸ್ತಿ ಎಂಬ ಪಟ್ಟಣದಲ್ಲಿ, ಅಭವತ್ = ಆದನು(ಅಂದರೆ ಇದ್ದನು) - ಅಪುತ್ರಸ್ಯ = ಗಂಡುಮಗನಿಲ್ಲದ, ವಿಪ್ರಸ್ಯ = ಭೂಸುರನಿಗೆ, ಸುತಾಪ್ತಯೇ = ಪುತ್ರನನ್ನು ಪಡೆಯಬೇಕೆಂಬ ಬಗ್ಗೆ, ದುಃಖಂ = ವ್ಯಥೆಯು, ನಾಭೂತ್* = ಉಂಟಾಗಲಿಲ್ಲ. ॥ 114 ॥ ದೈವೇನ = ದೈವಯೋಗದಿಂದ, ಪೂರ್ವಪುಣ್ಯೇನ = ಹಿಂದೆಮಾಡಿದ ಪುಣ್ಯ(ಫಲ)ದಿಂದ, ವೃದ್ಧಭೂಸುರೇ = ಆ ವೃದ್ಧಬ್ರಾಹ್ಮಣನಿಗೆ, ಪುತ್ರಃ = ಮಗನು, ಅಭೂತ್ = ಆದನು. ವಿಪ್ರಸಂಸದಿ = ಭೂಸುರರ ಸಭೆಯಲ್ಲಿ, ಮಾಧವಂ (ಇತಿ) = ಮಾಧವನೆಂದು ನಾಮಲಿಖಿತಂ = (ಮಗನಿಗೆ) ನಾಮಕರಣವನ್ನು ಮಾಡಿದನು.॥ 115 ॥ ಹೇ ನೃಪ = ಎಲೈ ಜನಕರಾಜನೇ, ಬಾಲಃ = ಬಾಲಕನಾದ, ಪುತ್ರಃ = ಮಗನು, ಉಪನೀತಃ = ಉಪನಯನ ಸಂಸ್ಕಾರವನ್ನು ಹೊಂದಿದವನಾಗಿ, ಚಂದ್ರವತ್ = ಶುಕ್ಲಪಕ್ಷದ ಚಂದ್ರನಂತೆ, ವವೃಧೇ = ದಿನೇ ದಿನೇ ಅಭಿವೃದ್ಧಿಸಿದನು. ವೇದವೇದಾಂಗತತ್ತ್ವಜ್ಞಃ - ವೇದ = ಋಗಾದಿ

*(ಪಾಠಾಂತರ - ಸುತಾಪ್ತಯೇ = ಮಗನನ್ನು ಪಡೆಯುವ ವಿಚಾರವಾಗಿ, ದುಃಖಂ = ವ್ಯಥೆಯು, ಅಭೂದ್ಧಿ = ಆಗಿಯೇ ಇತ್ತು.)

ನಾಲ್ಕು ವೇದಗಳು, ವೇದಾಂಗ = ಶಿಕ್ಷಾ, ವ್ಯಾಕರಣ,ಛಂದಸ್ಸು ನಿರುಕ್ತಃ, ಜ್ಯೋತಿಷ, ಕಲ್ಪ ಮೊದಲಾದ ವೇದಾಂಗಗಳು ಮತ್ತು, ತತ್ತ್ವಜ್ಞಃ = ವೇದಾಂತ ಶಾಸ್ತ್ರಗಳನ್ನು ಅರಿತವನಾಗಿ, (ತತ್ವಜ್ಞಃ = ರಹಸ್ಯಗಳನ್ನರಿತವನಾಗಿ), ಸರ್ವವಿದ್ಯಾವಿಶಾರದಃ = ಸಕಲವಿದ್ಯೆಗಳಲ್ಲಿ ಕುಶಲನಾಗಿದ್ದನು. ।। 116 ।। ತತಃ = ಗುರುಕುಲದಲ್ಲಿ ವಾಸಮಾಡಿ ವಿದ್ಯಾವಂತನಾದ ಮೇಲೆ, ಪುತ್ರಂ = (ಸೋಮಯಾಜಿಯು) ತನ್ನ ಮಗನನ್ನು, ಪ್ರಾಪ್ತದಾರಂ = ಪತ್ನಿಯುಳ್ಳವನನ್ನಾಗಿ, ಚಕಾರ ಹ = ಮಾಡಿದನು (ಅಂದರೆ ಮಗನಿಗೆ ಮದುವೆ ಮಾಡಿದನು). ಸಃ = ಮಾಧವನು, ಚಂದ್ರಲೇಖಯಾ = ಚಂದ್ರಲೇಖೆ ಎಂಬ ಮಡದಿಯೊಡನೆ, ಬಹುಕಾಲಂ = ಬಹುಕಾಲದವರೆವಿಗೆ, ರೇಮೇ = ಕ್ರೀಡಿಸಿದನು. ।। 117 ।। ರಾಜೇಂದ್ರ = ಜನಕರಾಯನೇ - ನಿತ್ಯಂ = ಪ್ರತಿದಿನವೂ ಪಂಚಯಜ್ಞಪರೋ = ದೇವ, ಪಿತೃ, ಮನುಷ್ಯ (ಋಷಿ?) ಭೂತ, ಬ್ರಹ್ಮ - ಎಂಬ ಪಂಚಯಜ್ಞಗಳನ್ನಾಚರಿಸುತ್ತಾ, ಪಂಚಾನನ ಸಮಃ = ಸಿಂಹಸದೃಶವಾದ, ದ್ಯುತಿಃ = ಕಾಂತಿಯುಳ್ಳ ಸಃ = ಮಾಧವನು, ತ್ರಿಸಪ್ತವರ್ಷಂ = ಇಪ್ಪತ್ತೊಂದು ವರ್ಷಗಳವರೆವಿಗೆ, ದ್ವಿತೀಯ ಇವ = ಎರಡನೆಯ ಸೂರ್ಯನಂತೆ ಶೋಭಿಸಿದನು. ।। 118 ।। ಪಾಂಡುದೇಶೀಯಾ = ಪಾಂಡು ದೇಶದವಳಾದ, ಪಾಂಡವಾನಾಂ = ಪಾಂಡವ ವಂಶ ಸಂಜಾತರಾದ ರಾಜರಿಗೆ, ಪ್ರಿಯಾ = ಪ್ರೀತಿಪಾತ್ರಳಾದ, ಕನ್ಯಾ = ಕುಮಾರಿಯಾದ, ಸಾ = ಆ, ಚಂದ್ರಲೇಖಾ = ಚಂದ್ರಲೇಖೆಯು, ಪತೌ ಸುಪ್ತೇ = ಗಂಡನು ಮಲಗಿದರೆ, ಸ್ವಯಂ = ತಾನೂ, ಶೇತೇ = ಮಲಗುವವಳು, ತಥಾ = ಹಾಗೆಯೇ = ಪತೌಭುಕ್ತೇತು = ಪತಿಯು ಭೋಜನ ಮಾಡಿದ ಮೇಲೆಯೇ, ಭೋಜನಂ = ಭೋಜನವನ್ನು ಮಾಡುತ್ತಿದ್ದಳು. ।। 119 ।।

ರಾಜನ್ = ಭೂಪತಿಯೇ, ಕದಾಚಿತ್ = ಒಂದಾನೊಂದು ದಿನ, ದ್ವಿಜಪುತ್ರಃ = ಪುರಂದರ ಸೋಮಯಾಜಿಯ ಮಗನಾದ ಮಾಧವನು, ದಿವಾಸಂಗಮತತ್ಪರಃ- ಹಗಲಿನಲ್ಲಿ ಪತ್ನಿಯ ಸಂಗಮಾಡಬಯಸಿದ, ದ್ವಿಜಃ = ಆ ಭೂಸುರನು, ಕಾಮಾತುರಃ = ಕಾಮಪೀಡಿತನಾಗಿ, ರಾಜಪುತ್ರೀಂ = ಅರಸುಕುವರಿಯಾದ ಚಂದ್ರಲೇಖೆಯನ್ನು ಸಮಾಸಾದ್ಯ= ಸಮೀಪಿಸಿ, ಭದ್ರೇ = ಮಂಗಳಕರಳಾದ, ಭಾಮಿನಿ = ಚಂದ್ರಲೇಖೆಯೇ, ತವ = ನಿನ್ನ ಸಂಗಮೇ = ಸಂಗಮ (ಮಾಡಬೇಕೆಂದು)ದಲ್ಲಿ, ಮಮ = ನನಗೆ, ಇಚ್ಛಾ = ಅಪೇಕ್ಷೆಯು, ವರ್ತತೇ = ಆಗಿದೆ. ಪ್ರಜಾಪತೆ! = ಪ್ರಜರಿಗೆ ಸ್ವಾಮಿಯಾದ ಜನಕರಾಯನೇ, ಪತಿವಾಕ್ಯಂ = ಪತಿಯ ಮಾತನ್ನು ಸಮಾಕರ್ಣ್ಯ = ಆಲಿಸಿ, ಪತಿಂ = ಗಂಡನನ್ನು ಉದ್ದೇಶಿಸಿ, ಪ್ರಾಹ = ಇಂತೆಂದಳು ।।121।।

*ಚಂದ್ರಲೇಖೋವಾಚ-*

**ಶರೀರಮಸ್ಥಿಮಾಂಸಾದ್ಯೈಃ ಪೂರಿತಂ ಪುರುಷರ್ಷಭ ।**
**ಶರೀರೇಣ ಶರೀರಸ್ಯ ಸಂಗಮಃ ಸಾಧ್ವಸಂಮತಃ ।। 122 ।।**

**ತತ್ರಾಪಿ ದಿವಸಕ್ರೀಡಾಮಯುಕ್ತಾಂ ಮುನಯೋ ವಿದುಃ ।**
**ನಿಕೇತನೇ ಪಿತಾ ಮಾತಾ ಅಗ್ನಿಹೋತ್ರಂ ಚ ದೇವರಾಟ್ ।। 123 ।।**

**ಪ್ರಭಾಕರ ಪ್ರಭಾಂ ಪಶ್ಯ ತ್ಯಜ ಕಾಮಂ ದ್ವಿಜಾತ್ಮಜ ।**
**ವಧೂವಚನಮಾಕರ್ಣ್ಯ ಮಾಧವೋ ವಾಕ್ಯಮಬ್ರವೀತ್ ।। 124 ।।**

ಚಂದ್ರಲೇಖಾ ಉವಾಚ = ಚಂದ್ರಲೇಖೆಯು ಹೇಳಿದಳು - ಪುರುಷರ್ಷಭ = ಪುರುಷ ಶ್ರೇಷ್ಠನೇ ! ಶರೀರಂ = ದೇಹವು, ಅಸ್ಥಿಮಾಂಸಾದ್ಯೈಃ = ಎಲುಬು, ಮಾಂಸ, ಚರ್ಮಗಳಿಂದ, ಪೂರಿತಂ = ತುಂಬಿದೆ. ಶರೀರೇಣ = ಶರೀರದಿಂದ, ಶರೀರಸ್ಯ = ಶರೀರಕ್ಕೆ, ಸಂಗಮಃ = ಬೆರೆಯುವಿಕೆಯು, ಸಾಧ್ವಸಮ್ಮತಃ = ಸಜ್ಜನರಿಗೆ ಸಮ್ಮತವಲ್ಲದ್ದು ಅಥವಾ ಸಾಧ್ವ

ಸಮ್ಮತಃ = ನಿಷ್ಕಾಮಿಗಳಿಗೆ ಯೋಗ್ಯವಲ್ಲದ್ದು, ತತ್ರಾಪಿ = ಅದರಲ್ಲಿಯೂ, ದಿವಸಕ್ರೀಡಾಂ = ಹಗಲು ಸಂಗಮಿಸುವುದನ್ನು, ಅಯುಕ್ತಾಂ = ಯೋಗ್ಯವಲ್ಲದ್ದೆಂದು, ಮುನಯಃ = ಋಷಿಗಳು, ವಿದುಃ = ತಿಳಿದಿದ್ದಾರೆ. ನಿಕೇತನೇ = ಮನೆಯಲ್ಲಿ, ಪಿತಾ = ನಿಮ್ಮ ತಂದೆ, ಮಾತಾ = ತಾಯಿ, ಅಗ್ನಿಹೋತ್ರಂ = ಯಜ್ಞನಿಯಮವಿದೆ (ಯಜ್ಞೇಶ್ವರನೂ) ದೇವರಾಟ್ = ಇಂದ್ರದೇವತಾಕವಾದ ಯಾಗ (ಇಷ್ಟಿ) ಮಾಡುವ ದಿನವಾದುದರಿಂದ ಇಂದ್ರದೇವರೂ ಇದ್ದಾರೆ. ದ್ವಿಜಾತ್ಮಜ! = ಭೂಸುರ ಸುತನಾದ ಪತಿದೇವ ! ದಿವಾಕರಪ್ರಭಾಂ = ಸೂರ್ಯನ ಕಾಂತಿಯನ್ನು, ಪಶ್ಯ = ಅವಲೋಕಿಸು, ಕಾಮಂ = ಆಸೆಯನ್ನು, ತ್ಯಜ = ಬಿಡು. ವಧೂವಚನಂ ಆಕರ್ಣ್ಯ = (ಹೀಗೆ ಹೇಳಿದ)ಪತ್ನಿಯ ಮಾತನ್ನು ಕೇಳಿ, ಮಾಧವಃ = ಮಾಧವ ಬ್ರಾಹ್ಮಣನು, ವಾಕ್ಯಂ ಅಬ್ರವೀತ್ = ಮಾತನಾಡಿದನು.।। 124 ।।

*ಮಾಧವ ಉವಾಚ -*

**ಭಾಮಿನೀ ಭವ ಮೇ ಸೌಖ್ಯೇ ಪೂರಯಾದ್ಯ ಮನೋಗತಮ್ ।**
**ಭರ್ತುರ್ವಚನಮಾಕರ್ಣ್ಯ ಭರ್ತಾರಂ ವಾಕ್ಯಮಬ್ರವೀತ್ ।। 125 ।।**

*ಚಂದ್ರಲೇಖೋವಾಚ-*

**ಗಚ್ಛಾಮಿ ಜಲಹೇತೋಸ್ತು ಗಚ್ಛ ತ್ವಂ ಪುರತೋ ಮುನೇ ।**
**ತದಾ ಜಗಾಮ ರಾಜೇಂದ್ರ ಕುಶಾರ್ಥಂ ಕುಸ್ವಭಾವತಃ ।। 126 ।।**

**ಸಾ ಜಗಾಮಾಥ ಪಾನೀಯಪಾತ್ರಮಾದಾಯ ಭಾಮಿನೀ ।**
**ತಾಮನ್ವಗಾನ್ಮಾಧವೋಽಪಿ ವನಕೂಟಮಭಿದ್ರುತಮ್ ।। 127 ।।**

ಮಾಧವ ಉವಾಚ = ಮಾಧವನಿಂತೆಂದನು - ಭಾಮಿನೀ = ಪತ್ನಿಯಾದ ಚಂದ್ರಲೇಖೆಯೇ, ಮೇ = ನನ್ನ, ಸೌಖ್ಯೇ = ಸುಖಕ್ಕಾಗಿ, ಭವ = ಸಹಕರಿಸುವವಳಾಗು, ಮನೋಗತಂ = ನನ್ನ ಮನದಾಶೆಯನ್ನು, ಅದ್ಯ = ಈವಾಗ, ಪೂರಯ = ಪೂರ್ಣಮಾಡು, ಭರ್ತುಃ = ಗಂಡನ, ವಚನಂ = ನುಡಿಯನ್ನು, ಆಕರ್ಣ್ಯ = ಕೇಳಿ, ಭರ್ತಾರಂ = ಪತಿಯನ್ನು ಕುರಿತು, ವಾಕ್ಯಮಬ್ರವೀತ್ = ಮಾತನ್ನು ಹೇಳಿದಳು. ಚಂದ್ರಲೇಖಾ ಉವಾಚ = ಚಂದ್ರಲೇಖೆಯು ಮಾತನಾಡಿದಳು. ಮುನೇ = ಮುನಿಯೇ, ಜಲಹೇತೋಃ = ನೀರು ತರುವುದಕ್ಕಾಗಿ, ಗಚ್ಛಾಮಿ = ಹೋಗುತ್ತೇನೆ, ತ್ವಂ = ನೀನು, ಮಮಪುರತಃ = ನನ್ನಮುಂದೆ (ನನಗೆ ಮುಂದಾಗಿ) ಗಚ್ಛ = ಹೋಗುವವನಾಗು, ತದಾ = ಆವಾಗ, ರಾಜೇಂದ್ರ = ಹೇ ಜನಕರಾಯ ! ಸ್ವಭಾವತಃ = ಸ್ವಾಭಾವಿಕವಾಗಿ (ಎಂದಿನಂತೆ), ಕುಶಾರ್ಥಂ = ದರ್ಭೆಯನ್ನು ತರಲು, ಮಾಧವನು ಪತ್ನಿಗಿಂತ ಮುಂಚೆ ಹೊರಟನು (ಪಾಠಾಂತರ - ಕುಸ್ವಭಾವತಃ = ಕಾಮಪೀಡಿತನಾಗಿ ಕುಸ್ವಭಾವದಿಂದ, ಕುಶಾರ್ಥಂ = ದರ್ಭೆಯನ್ನು ತರಲು) ಜಗಾಮ = ಹೊರಟನು. ಸಾಭಾಮಿನೀ = ಆ ಚಂದ್ರಲೇಖೆಯು, ಪಾನೀಯಪಾತ್ರಂ = ನೀರು ತರುವ ಕೊಡವನ್ನು, ಆದಾಯ = ತೆಗೆದುಕೊಂಡು, ಅಥ = ಪತಿಯು ಹೊರಟನಂತರ, ಜಗಾಮ = ಹೋದಳು. ಮಾಧವೋಽಪಿ = ಮಾಧವನೂ ಸಹ, ತಾಂ = ಪತ್ನಿಯನ್ನು, ಅಭಿದ್ರುತಂ = ಅನುಸರಿಸಿ ಬೇಗಬೇಗನೆ, ವನಕೂಟಂ = ಗಿಡಮರ ಬಳ್ಳಿಗಳಿಂದ ಯುಕ್ತವಾದ ಪ್ರದೇಶಕ್ಕೆ, ಅನ್ವಗಾತ್ = ಅನುಸರಿಸಿ ಹೋದನು. ।। 127 ।।

**ವನಾಂತರೇ ವಸಂತೀಂ ಚ ವನಿತಾಂ ದ್ರುಮಮೂಲಗಾಮ್ ।**
**ವಿಚಿತ್ರರೂಪಲಾವಣ್ಯಾಂ ಪೂರ್ಣಚಂದ್ರನಿಭಾನನಾಮ್ ।। 128 ।।**

**ಧವಲಾಂಬರ ಸಂಬದ್ಧಾಂ ಕಟಿಮೇಖಲಯಾನ್ವಿತಾಮ್ ।**
**ಸುನಾಸಾಂ ಸುಭಗಾಂ ಸುಭ್ರೂಂ ಸುಪೂರ್ಣಸುಪಯೋಧರಾಮ್ ॥ 129 ॥**

**ತಾಂ ದೃಷ್ಟ್ವಾ ಮೋಹಿತೋ ವಿಪ್ರಃ ಕುಂತಲಾಂ ನೀಲಕುಂತಲಾಮ್ ।**
**ಸ್ನಿಗ್ಧಕಂಚುಕಸಂಬದ್ಧಾಂ ಕೋಕಿಲಸ್ವರರಂಜಿತಾಮ್ ॥ 130 ॥**

**ಅಂಜನಾಲಿಪ್ತನಯನಾಂ ಮಂಜುಲಸ್ವರರಂಜಿತಾಮ್ ।**
**ಪಾದೇನ ವಿಲಿಖಂತೀಂ ಗಾಂ ಜಾನುಸ್ಥಿತ ಶಿರೋರುಹಾಮ್ ॥ 131 ॥**

**ದೃಷ್ಟ್ವಾ ಕ್ಲಿಷ್ಟಮನಾ ಭೂತ್ವಾ ಚಿಂತಯನ್ ಬ್ರಹ್ಮನಿರ್ಣಯಮ್ ।**
**ಸ್ವಭಾರ್ಯಾಂ ಪ್ರತ್ಯುವಾಚೇದಂ ಗಚ್ಛ ಪ್ರಾಣಪ್ರಿಯೇ ಗೃಹಮ್ ॥ 132 ॥**

**ಇಚ್ಛಾ ಮೇ ಪೂರ್ಣತಾಂ ಯಾತಾ ತ್ವದ್ಭಕ್ತ್ಯಾ ಪರಿತೋಷಿತಃ ।**

*ಚಂದ್ರಲೇಖೋವಾಚ-*

**ಅಲಮುಕ್ತಂ ತ್ವಯಾ ಭದ್ರ ಗಚ್ಛಾಮಿ ಭವನಂ ಸ್ವಕಮ್ ॥ 133 ॥**

**ಭರ್ತುರಾಜ್ಞಾಮುಪಾನೀಯ ಚಂದ್ರಲೇಖಾ ಗೃಹಂ ಗತಾ ।**
**ಯಾವದ್ಗಚ್ಛತಿ ಸಾ ಭಾರ್ಯಾ ತಾವತ್ತತ್ರ ಸ್ಥಿತೋಭವತ್ ॥ 134 ॥**

ವನಾಂತರೇ = ವನದ ಮಧ್ಯಭಾಗದಲ್ಲಿ, ವಸಂತೀಂ = ವಾಸಮಾಡುವ, ದ್ರುಮ ಮೂಲಗಾಂ = ಮರದ ಬುಡಭಾಗವನ್ನು ಆಶ್ರಯಿಸಿರುವ, ವಿಚಿತ್ರ ರೂಪಲಾವಣ್ಯಾಂ = ಅಪೂರ್ವವಾದ ಆಕಾರ-ಸೌಂದರ್ಯವುಳ್ಳ, ಪೂರ್ಣಚಂದ್ರನಿಭಾನನಾಂ = ಪೂರ್ಣಿಮೆಯ ಚಂದ್ರನಿಗೆ ಸಮಾನವಾದ ಮುಖವಿರಾಜಿತಳಾದ, ಧವಳಾಂಬರ ಸಂಬದ್ಧಾಂ = ಬಿಳುಪಾದ ಸೀರೆಯನ್ನುಟ್ಟಿರುವ, ಕಟಿಮೇಖಲಯಾನ್ವಿತಾಂ - ಕಟಿ = ಸೊಂಟದಲ್ಲಿ, ಮೇಖಲಯಾ = ಡಾಬಿನಿಂದ (ನಡುಪಟ್ಟಿಯಿಂದ), ಅನ್ವಿತಾಂ = ಕೂಡಿರುವ, ಸುನಾಸಾಂ = ಸುಂದರವಾದ ಮೂಗುಳ್ಳ, ಸುಭಗಾಂ = ಶ್ರೇಷ್ಠವಾದ ಭಗಪ್ರದೇಶ ರಂಜಿತಳಾದ, ಸುಭ್ರೂಂ = ಕಾಮನ ಬಿಲ್ಲಿನಂತೆ ಮನೋಹರವಾದ ಹುಬ್ಬುಗಳುಳ್ಳ, ಸುಪೂರ್ಣಸುಪಯೋಧರಾಂ = ತುಂಬಿದ ಎದೆಯುಳ್ಳ, ನೀಲಕುಂತಲಾಂ = ಕಪ್ಪಾದ ಕೇಶವುಳ್ಳ, ತಾಂ ಕುಂತಲಾಂ = ಆ ಕುಂತಳೆಯೆಂಬ ಚಂಡಾಲ ಸ್ತ್ರೀಯನ್ನು, ದೃಷ್ಟ್ವಾ = ನೋಡಿ, ಮೋಹಿತಃ = ಮೋಹಗೊಂಡ, ವಿಪ್ರಃ = ಭೂಸುರನಾದ ಮಾಧವನು, ಸ್ನಿಗ್ಧಕಂಚುಕ ಸಂಬದ್ಧಾಂ = ಮನೋಹರವಾದ ಕುಪ್ಪಸವನ್ನು ತೊಟ್ಟಿರುವ, ಕೋಕಿಲಸ್ವರರಂಜಿತಾಂ = ಕೋಗಿಲೆಯ ಇಂಪಾದ ಧ್ವನಿಯಿಂದ ಶೋಭಿಸುವ, ಅಂಜನಾಲಿಪ್ತನಯನಾಂ = ಕಣ್ಣಿಗೆ ಕಾಡಿಗೆಯನ್ನು ಹಚ್ಚಿಕೊಂಡಿರುವ, ಮಂಜುಳಸ್ವರ ರಂಜಿತಾಂ = ಇಂಪಾದ ಸ್ವರ ಶೋಭಿತಳಾದ, ಪಾದೇನ = ಕಾಲಿನಿಂದ (ಕಾಲಿನ ಅಂಗುಷ್ಠದಿಂದ), ಗಾಂ = ಭೂಮಿಯನ್ನು (ನೆಲವನ್ನು) ವಿಲಿಖಂತೀಂ = ಬರೆಯುವವಳಂತೆ ಕೆರೆಯುತ್ತಿರುವ, ಜಾನುಸ್ಥಿತ ಶಿರೋರುಹಾಂ = ಮೊಳಕಾಲಿನವರಗೆ ಉದ್ದವಾದ ಜಡೆ (ಕೂದಲು)ಯುಳ್ಳ, ತಾಂ ದೃಷ್ಟ್ವಾ = ಆ ಕುಂತಳೆಯನ್ನು ನೋಡಿ, ಆಕ್ಲಿಷ್ಟಮನಾಃ ಭೂತ್ವಾ = ಅವಳತ್ತಲೇ ಆಕರ್ಷಿತವಾದ ಮನಸ್ಸುಳ್ಳವನಾಗಿ, (ಆಕ್ಲಿಷ್ಟ ಮನಸ್ಕನಾಗಿ) ಬ್ರಹ್ಮ ನಿರ್ಣಯಂ = ಬ್ರಹ್ಮನ ಸೃಷ್ಟಿಯ ಅಪೂರ್ವ ನೈಜತೆಯನ್ನು, ಚಿಂತಯನ್ = ಮನದಲ್ಲೇ ಮೆಲಕುಹಾಕುತ್ತಾ, ಸ್ವಭಾರ್ಯಾಂ = ತನ್ನ ಸತಿಯನ್ನು ಕುರಿತು, ಇದಂ ಪ್ರತ್ಯುವಾಚ = ಇಂತು ಹೇಳಿದನು,

ಪ್ರಾಣಪ್ರಿಯೇ = ಪ್ರಾಣಕಾಂತೆಯಾದ ಚಂದ್ರಲೇಖೆಯೇ, ಗೃಹಂಗಚ್ಛ = ಮನೆಗೆ ಹೋಗು ॥ 132 ॥ ಮೇ = ನನ್ನ, ಇಚ್ಛಾ = ಅಪೇಕ್ಷೆಯು, ಪೂರ್ಣತಾಂಯಾತಾ = ಪರಿಪೂರ್ಣವಾಯಿತು, ತ್ವದ್ಭಕ್ತ್ಯಾ = ನಿನ್ನ ಪತಿಭಕ್ತಿಯಿಂದ, ಪರಿತೋಷಿತಃ = ನಾನು ಸಂತುಷ್ಟನಾಗಿದ್ದೇನೆ. ಚಂದ್ರಲೇಖೋವಾಚ = ಪತಿಯ ಮಾತು ಕೇಳಿ ಚಂದ್ರಲೇಖೆಯು ಇಂತೆಂದಳು, ಭದ್ರ = ಮಂಗಳಕರನಾದ ಪತಿಯೇ, ತ್ವಯಾ = ನಿನ್ನಿಂದ, ಅಲಮುಕ್ತಂ = ಯೋಗ್ಯವಾದ ಮಾತುಹೇಳಲ್ಪಟ್ಟಿತು, ಸ್ವಕಂ = ನಮ್ಮ, ಭವನಂ = ಮನೆಗೆ, ಗಚ್ಛಾಮಿ = ಹೋಗುವೆನು, ಭರ್ತುರಾಜ್ಞಾಂ = ಹೀಗೆ ಪತಿಯ ಅಪ್ಪಣೆಯನ್ನು, ಉಪಾನೀಯ = ಪಡೆದು, ಚಂದ್ರಲೇಖಾ = ಚಂದ್ರಲೇಖೆಯು, ಗೃಹಂಗತಾ = ಮನೆಗೆ ಹೋದಳು. ಸಾ ಭಾರ್ಯಾ = ಆ ತನ್ನ ಪತ್ನಿಯು, ಯಾವದ್ಗಚ್ಛತಿ = ಹೋಗುವವರೆಗೆ, ತತ್ರ = ಅಲ್ಲಿಯೇ, ಸ್ಥಿತೋಭವತ್ = ಇರುವವನಾದನು ॥ 134 ॥

**ಗತಾಯಾಂ ಸ್ವಪ್ರಿಯಾಯಾಂಚ ತಾಂ ಬಾಲಾಂ ಪರ್ಯಪದ್ಯತ ।**
**ಶನೈರ್ಜಗಾಮ ರಾಜೇಂದ್ರ ಸ್ಮರೇಣ ಹೃತಚೇತನಃ ॥ 135 ॥**

**ಸಮೀಪಸ್ಥಂ ಮುನಿಂ ಪ್ರೇಕ್ಷ್ಯ ರಾಜನ್ ಪ್ರಥುಲಲೋಚನಾ ।**
**ಸ್ವರಭೇದಂ ಪ್ರಕುರ್ವಂತೀ ವಾಕ್ಯಮೂಚೇಥ ಮಾಧವಮ್ ॥ 136 ॥**

ಸ್ವಪ್ರಿಯಾಂ = ನಿಜಸತಿಯಾದ ಚಂದ್ರಲೇಖೆಯು, ಗತಾಯಾಂ = ಹೊರಟ ಮೇಲೆ, ರಾಜೇಂದ್ರ = ಜನಕರಾಯ! ಸ್ಮರೇಣ = ಮನ್ಮಥನಿಂದ, ಹೃತಚೇತನಃ = ಅಪಹೃತ ಬುದ್ಧಿಶಕ್ತಿಯುಳ್ಳವನಾಗಿ (ಅಪಹೃತಮನಸ್ಸುಳ್ಳವನಾಗಿ), ಶನೈಃ = ಮೆಲ್ಲಗೆ, ತಾಂ ಬಾಲಾಂ = ಚಂಡಾಲಬಾಲಿಕೆಯನ್ನು ಕುರಿತು, ಜಗಾಮ = ಹೋದನು. ಚ = ಮತ್ತು, ಪರ್ಯಪದ್ಯತ = ಅವಳ ಬಳಿಸೇರಿದನು. ॥ 135 ॥ ರಾಜನ್ = ಜನಕರಾಜ ! ಪೃಥುಲಲೋಚನಾ = ವಿಸ್ತಾರವಾದ ನೇತ್ರಗಳುಳ್ಳ ಕುಂತಳೆಯು, ಅಥ = ಮಾಧವನು ತನ್ನ ಸನಿಹಕ್ಕ ಬಂದಮೇಲೆ, ಸಮೀಪಸ್ಥಂ = ಅತಿಹತ್ತಿರ ನಿಂತಿರುವ, ಮುನಿಂ = ಮಾಧವನನ್ನು, ಪ್ರೇಕ್ಷ್ಯ = ನೋಡಿ, ಸ್ವರಭೇದಂ = ಎತ್ತಿದ ವಕ್ರಧ್ವನಿಯನ್ನು, ಪ್ರಕುರ್ವಂತೀ = ಮಾಡುತ್ತಾ, ಮಾಧವಂ = ಆ ಮಾಧವನನ್ನು ಕುರಿತು, ವಾಕ್ಯಂ = ವಚನವನ್ನು, ಊಚೇ = ಹೇಳಿದಳು. ॥ 136 ॥

**ಕುಂತಲೋವಾಚ-**

**ಮಾ ಯಾಹಿ ಮುನಿಶಾರ್ದೂಲ ಮತ್ಸಮೀಪಂ ಮಹಾಮತೇ ।**
**ಸ ಚ ತದ್ವಚನಂ ಶ್ರುತ್ವಾ ಸಹಸಾ ವಾಕ್ಯಮಬ್ರವೀತ್ ॥ 137 ॥**

**ಮಾಧವ ಉವಾಚ -**

**ಕಾ ತ್ವಂ ಕಲ್ಯಾಣಿ ಕಸ್ಮಾಚ್ಚ ಜಾತಾಸಿ ಜನನೀ ಚ ಕಾ ।**
**ಆವಾಸಸ್ತವ ಭದ್ರಂ ತೇ ಕಸ್ಮಿನ್ ರಾಷ್ಟ್ರೇ ವರಾನನೇ ॥ 138 ॥**

**ಸಾ ಚೇತ್ಥಮುಕ್ತಾ ಮುನಿನಾ ಜಾತಿಮಾಹಮನಸ್ವಿನೀ ॥ 139 ॥**

ಕುಂತಲೋವಾಚ = ಕುಂತಲೆಯು ಹೇಳಹತ್ತಿದಳು, ಮುನಿಶಾರ್ದೂಲ = ಮುನಿವರ, ಮಹಾಬುದ್ಧೇ = ಅತಿ ಧೀಮಂತನಾದ ಮಾಧವನೇ, ಮತ್ಸಮೀಪಂ = ನನ್ನ ಸನಿಹಕ್ಕೆ, ಮಾಯಾಹಿ = ಬರಬೇಡ. ಸಚ = ಮಾಧವನು, ತದ್ವಚನಂ = ಅವಳ ನುಡಿಯನ್ನು, ಶ್ರುತ್ವಾ = ಕೇಳಿ, ಸಹಸಾ = ಕೂಡಲೇ, ವಾಕ್ಯಮಬ್ರವೀತ್ = ಮಾತನಾಡಿದನು ॥ 137 ॥ ಮಾಧವ

ಉವಾಚ = ಮಾಧವನು ಹೇಳಿದನು, ಕಲ್ಯಾಣಿ = ಮಂಗಳಕರಳೇ, ತ್ವಂ ಕಾ? = ನೀನು ಯಾರು?, ಕಸ್ಮಾಚ್ಚಜಾತಾ = ಯಾರಿಂದ ಜನಿಸಿದಿ?, ಜನನೀಚ ಕಾ? = ತಾಯಿಯಾರು?, ವರಾನನೇ = ಶ್ರೇಷ್ಠಮುಖವುಳ್ಳವಳೇ, ಕಸ್ಮಿನ್ರಾಷ್ಟ್ರೇ = ಯಾವ ದೇಶದಲ್ಲಿ, ತವ = ನಿನ್ನ, ಆವಾಸಃ = ವಾಸಸ್ಥಳವು? ತೇ = ನಿನಗೆ, ಭದ್ರಂ = ಮಂಗಳವಾಗಲಿ. ಮನಸ್ವಿನೀ = ಯೋಗ್ಯಳಾದ, ಸಾಚ = ಆ ಕುಂತಳೆಯು, ಮುನಿನಾ = ಮಾಧವನಿಂದ, ಇತ್ಥಂ = ಹೀಗೆ, ಉಕ್ತಾ = ಹೇಳಲ್ಪಟ್ಟವಳಾಗಿ, ಜಾತಿಮಾಹ = ತಾನು ಜನಿಸಿದ ಜಾತಿಯನ್ನು ನಿರೂಪಿಸಿದಳು. ।। 139 ।।

*ಕುಂತಲೋವಾಚ-*

**ಕಿಂ ಮಾಂ ಪೃಚ್ಛಸಿ ಪಾಪಿಷ್ಠಾಂ ಅಂತ್ಯಜಾತಿಕುಲೋದ್ಭವಾಮ್ ।**
**ಅಂತ್ಯಜಾಂತ್ಯಜಯೋರ್ಜಾತಾಂ ಸುರಾಮಾಂಸಾಶನೀಂ ಖಲಾಮ್ ।। 140 ।।**

**ಮಧ್ಯದೇಶೇ ನಿವಾಸೋ ಮೇ ಕಿಂ ತ್ವಂ ಪೃಚ್ಛಸಿ ಭೂಸುರ ।**
**ವೇದಾಂತವೇದ್ಯೋ ವಿಪ್ರೇಂದ್ರ ನ ಮಾಂ ತ್ವಂ ದ್ರಷ್ಟುಮರ್ಹಸಿ ।। 141 ।।**

**ಮಾಂ ಸ್ಪ್ರಷ್ಟುಂ ಕ್ರೀಡನಾರ್ಥಂ ವಾ ಕಥಮಿಚ್ಛಸಿ ಮೂಢಧೀಃ ।**
**ಜಲ್ಪಂತೀಂ ತಾಂ ಸಮಾಲೋಕ್ಯ ಮಾಧವೋ ವಾಕ್ಯಮಬ್ರವೀತ್ ।। 142 ।।**

ಕುಂತಲೋವಾಚ = ಕುಂತಲೆಯು ಇಂತೆಂದಳು:- ಪಾಪಿಷ್ಠಾಂ = ಪಾಪಕಾರ್ಯದಲ್ಲಿ ಉದ್ಯುಕ್ತಳಾದ, ಅಂತ್ಯಜಾತಿ ಕುಲೋದ್ಭವಾಂ = ಚಂಡಾಲಜಾತಿಯ ವಂಶದಲ್ಲಿ ಜನಿಸಿರುವ, ಅಂತ್ಯಜಾಂತ್ಯಜಯೋಃ = ಚಂಡಾಲ-ಚಂಡಾಲಿಯರಿಗೆ, ಜಾತಾಂ = ಹುಟ್ಟಿದ, (ಅಂದರೆ ಚಂಡಾಲನಾದ ತಂದೆಯಿಂದ ಚಂಡಾಲಿಯಲ್ಲಿ ಹುಟ್ಟಿದವಳು), ಸುರಾಮಾಂಸಾಶನೀಂ = ಮದ್ಯಮಾಂಸಗಳನ್ನು ತಿನ್ನುವ, ಖಲಾಂ = ನೀಚಳಾದ, ಮಾಂ = ನನ್ನನ್ನು, ಕಿಂಪೃಚ್ಛಸಿ = ಏನೆಂದು ಪ್ರಶ್ನಿಸುವೆ ।। 140 ।। ಭೂಸುರ = ಎಲೈ ಬ್ರಾಹ್ಮಣನೇ, ಮಧ್ಯದೇಶಃ = ಮಧ್ಯದೇಶವು, ಮೇ = ನನಗೆ, ನಿವಾಸಃ = ವಾಸಸ್ಥಾನವು, ತ್ವಂ = ನೀನು, ಕಿಂಪೃಚ್ಛಸಿ = ಇವನ್ನೆಲ್ಲಾ ಏತಕ್ಕಾಗಿ ಕೇಳುತ್ತಿರುವೆ? ವೇದಾಂತ = ತತ್ತ್ವಶಾಸ್ತ್ರವನ್ನು, ವೇದ್ಯಃ = ತಿಳಿದಿರುವ, ತ್ವಂ = ನೀನು, ಮಾಂ = ನನ್ನನ್ನು, ದ್ರಷ್ಟುಂ ನಾರ್ಹಸಿ = ನೋಡಲೂಬಾರದು (ನಾನು ಚಂಡಾಲಳಾದ್ದರಿಂದ ನೋಡುವುದು ಯುಕ್ತವಲ್ಲ), ಮೂಢಧೀಃ = ಸದಸದ್ವಿವೇಕ ಬುದ್ಧಿರಹಿತನೇ (ಮೂರ್ಖನೇ), ಮಾಂ = ನನ್ನನ್ನು, ಸ್ಪ್ರಷ್ಟುಂ = ಮುಟ್ಟಲು, ಕ್ರೀಡನಾರ್ಥಂ ವಾ = ಅಥವಾ ವಿಹರಿಸಲು, ಕಥಮಿಚ್ಛಸಿ? = ಅದೆಂತು ಅಪೇಕ್ಷಿಸುವೆ? ಮಾಧವಃ = ಮಾಧವನು, ಜಲ್ಪಂತೀಂ = ಇಂತು ಹೇಳುತ್ತಿರುವ, ತಾಂ = ಆ ಚಂಡಾಲ ಸ್ತ್ರೀಯನ್ನು, ಸಮಾಲೋಕ್ಯ = ಚೆನ್ನಾಗಿ ನೋಡಿ (ದೃಷ್ಟಿಸಿ ನೋಡಿ), ವಾಕ್ಯಮಬ್ರವೀತ್ = ಮಾತನಾಡಿದನು. ।। 142 ।।

*ಮಾಧವ ಉವಾಚ -*

**ವೃಥಾ ನಾರಾಯಣಾಜ್ಜಾತೋ ಬ್ರಹ್ಮಾ ಲೋಕಪಿತಾಮಹಃ ।**
**ಅಂಧ ಏವ ಮಹಾರಾಜ ರೋಚತೇ ಮೇ ಮತಿಸ್ಸದಾ ।। 143 ।।**

**ವೃಥಾ ಸಂಜನಯಾಮಾಸ ವನಿತಾಂ ವನಹೇತವೇ ।**
**ತಥಾಪಿ ಮಮ ಬುದ್ಧಿಸ್ತು ತತ್ರೈವ ರಮತೇ ಸದಾ ।। 144 ।।**

**ಲವಣೋದಕಜಾತಾನಿ ರತ್ನಾನಿ ವಿವಿಧಾನಿ ಚ ।**
**ಅಂಗೀಕುರ್ವಂತಿ ದೇವಾಶ್ಚ ತೇಜಃಪ್ರಾಧಾನ್ಯಕಾರಣಾತ್ ॥ 145 ॥**

**ತಸ್ಮಾದಹಂ ಸುರೂಪತ್ವಾತ್ ತ್ವಯಿ ಭೋಗಂ ಕರೋಮಿ ಚ ।**
**ಇತೋ ವಾ ನರಕಂ ಯಾಸ್ಯೇ ಪಿತೃಭಿಸ್ಸಹ ಸುಸ್ಮಿತೇ ॥ 146 ॥**

ಮಾಧವ ಉವಾಚ = ಮಾಧವನು ಹೇಳಿದನು - ಲೋಕಪಿತಾಮಹಃ = ಸರ್ವಲೋಕಪಿತಾಮಹನಾದ, ಬ್ರಹ್ಮಾ = ಬ್ರಹ್ಮದೇವನು, ನಾರಾಯಣಾತ್ = ಹರಿಯಿಂದ, ವೃಥಾ = ವ್ಯರ್ಥವಾಗಿ, ಜಾತಃ = ಜನಿಸಿದನು, ಮಹಾರಾಜ = ಜನಕ ಮಹಾರಾಜನೇ, (ಮಾಧವನು ಹೇಳಿದ್ದನ್ನು ಕೇಳು) ವನಿತಾಂ = ಸುರಸುಂದರಿಯಾದ ಈ ಸ್ತ್ರೀಯನ್ನು, ವನಹೇತವೇ = ಅರಣ್ಯದ ಪಾಲಾಗುವಂತೆ, ವೃಥಾ = ವ್ಯರ್ಥವಾಗಿ, ಜನಯಾಮಾಸ = ಸೃಷ್ಟಿಮಾಡಿದನಲ್ಲ ! ಅಂಥವಿವ = ಇದನ್ನು ಪರಿಶೀಲಿಸಿದರೆ ಬ್ರಹ್ಮದೇವನು ನಿಜವಾಗಿಯೂ ಕುರುಡನೇ ಸರಿ-ಎಂದು, ಮೇಮತಿಃ = ನನ್ನ ಬುದ್ಧಿಗೆ, ಸದಾ ರೋಚತೇ = ಸದಾ ಹೊಳೆಯುವುದು, ತಥಾಪಿ = ಇಷ್ಟಾದರೂ (ಇವಳು ಚಂಡಾಲಿಯಾಗಿದ್ದರೂ), ಮಮಬುದ್ಧಿಸ್ತು = ನನ್ನ ಮನಸ್ಸಾದರೋ, ತತ್ರೈವ = ಅವಳಲ್ಲಿಯೇ, ಸದಾ = ಯಾವಾಗಲೂ, ರಮತೇ = ನೆಟ್ಟು ಹೋಗಿದೆ. ॥ 144 ॥ ಲವಣೋದಕ ಜಾತಾನಿ = ಲವಣ ಜಲಧಿಯಲ್ಲಿ ಹುಟ್ಟಿದ, ವಿವಿಧಾನಿ = ವಿಧವಿಧಗಳಾದ, ರತ್ನಾನಿ = ರತ್ನಗಳನ್ನು, ದೇವಾಶ್ಚ = ದೇವತೆಗಳೂ ಕೂಡ, ತೇಜಃ- ಪ್ರಾಧಾನ್ಯಕಾರಣಾತ್ = ಕಾಂತಿಯುಕ್ತವಾದುದೆಂಬ ಮುಖ್ಯಕಾರಣದಿಂದ, ಅಂಗೀಕುರ್ವಂತಿ = ಸ್ವೀಕಾರಮಾಡುವರು. ತಸ್ಮಾತ್ = ತೇಜಃಪ್ರಧಾನವಸ್ತುವೆಂದು ಅಮರರು ಪರಿಗ್ರಹಿಸುವಂತೆಯೇ, ಸುಸ್ವರೂಪತ್ವಾತ್ = ತೇಜಸ್ವಿನಿಯಾದ ರೂಪಸಿಯಾಗಿರುವುದರಿಂದ, ಅಹಂ = ನಾನು, ತ್ವಯಿ = ನಿನ್ನಲ್ಲಿ, ಭೋಗಂ = ಸಂಭೋಗವನ್ನು, ಕರೋಮಿಚ = ಮಾಡಿಯೇ ಮಾಡುತ್ತೇನೆ, ಸುಸ್ಮಿತೇ = ಸುಂದರ ಮಂದಹಾಸರಂಜಿತಳಾದ ಕುಂತಳೆಯೇ! ಇತೋವಾ = ನನ್ನೀ ಕೃತಿಯಿಂದ (ಪಾಪಿಷ್ಠನಾದಲ್ಲಿ) ಈ ಲೋಕವನ್ನು ತ್ಯಜಿಸಿದ ಮೇಲೆ, ಪಿತೃಭಿಸ್ಸಹ = ನನ್ನ ಪಿತೃಗಳಿಂದ ಸಹಿತನಾಗಿ, ನರಕಂ = ನರಕಲೋಕಕ್ಕೆ, ಯಾಸ್ಯೇ = ಹೋಗುವೆನು ! (ಅಂದರೆ ನರಕವನ್ನು ಅನುಭವಿಸಿದರೂ ಪರವಾಗಿಲ್ಲ - ನಿನ್ನೊಡನೆ ಕ್ರೀಡಿಸುತ್ತೇನೆ ಎಂದು ಭಾವ) ॥ 146 ॥

ಮೂಲ—

**ಇತ್ಯೇವಮುಕ್ತಾ ದ್ವಿಜಬಾಲಕೇನ ರುರೋದ ಕನ್ಯಾ ತರಣಾರುಣಪ್ರಭಾ ।**
**ದಿವೌಕಸೋ ವಿಪ್ರವರೋ ವಿಮುಚ್ಯತಾಂ ದೋಷಾದಮುಷ್ಮಾದಸತೀ ಪ್ರಸಂಗಾತ್ ॥ 147 ॥**

ತರುಣಾರುಣಪ್ರಭಾ-ತರುಣ = ಆಗ ತಾನೆ ಉದಯಿಸುತ್ತಿರುವ, ಅರುಣ = ಸೂರ್ಯನ ಸಾರಥಿಯಾದ ಅರುಣನಂತೆ, ಪ್ರಭಾ = ಕಾಂತಿಯುಕ್ತಳಾದ, ಕನ್ಯಾ = ಆ ಚಂಡಾಲ ಕನ್ನಿಕೆಯಾದ ಕುಂತಳೆಯು, ದ್ವಿಜಬಾಲಕೇನ = ಬ್ರಾಹ್ಮಣಕುಮಾರನಿಂದ (ಬಾಲಕ = ಅಧೀತನ್ಯಾಯ ವ್ಯಾಕರಣಾದಿಶಾಸ್ತ್ರಃ, ತೇನ-ಬಾಲಕನು ಸ್ತ್ರೀ ಸಂಗಕ್ಕೆ ಪ್ರಾಪ್ತವಯಸ್ಕನಾಗದಿರುವುದರಿಂದ ಅರ್ಹನಾಗಲಾರ. ಆದರೂ ಇಲ್ಲಿ ಬಾಲಕನೆಂದು ಪ್ರಯೋಗವಿದೆ. ಆದ್ದರಿಂದ ಬಾಲಕನೆಂದರೆ ನ್ಯಾಯ ವ್ಯಾಕರಣಾದಿ ಶಾಸ್ತ್ರಗಳನ್ನು ಓದಿರುವವನೆಂದು ಅರ್ಥಮಾಡುವುದು ಸೂಕ್ತವಾಗಿದೆ.) ಇತ್ಯೇವಂ = ಈ ಪ್ರಕಾರವಾಗಿ, ಉಕ್ತಾ = ಹೇಳಲ್ಪಟ್ಟವಳಾಗಿ, ರುರೋದ = ಅನ್ಯಾಯವಾಗಿ ಬ್ರಾಹ್ಮಣನು ಹಾಳಾಗುವನಲ್ಲಾ ಎಂದು ಅತ್ತಳು. ದಿವೌಕಸಃ = ಹೇ ದೇವತೆಗಳೇ, ವಿಪ್ರವರಃ = ಬ್ರಾಹ್ಮಣ ಶ್ರೇಷ್ಠನು, ಅಸತೀ = ಸತಿಯಾಗಲು ಅರ್ಹಳಲ್ಲದ

ಚಂಡಾಲಕನ್ಯೆಯಾದ ನನ್ನ (ಅಥವಾ ಅಸತೀ = ಜಾರಿಣಿಯಾದ ನನ್ನ) ಪ್ರಸಂಗಾತ್ = ಸಂಗಮರೂಪವಾದ, ಅಮುಷ್ಮಾತ್ = ಈ ಯಾವ, ದೋಷಾತ್ = ದೋಷ (ಪಾಪ)ದ ದೆಶೆಯಿಂದ, ವಿಮುಚ್ಯತಾಂ = ಮುಕ್ತನಾಗಲಿ (ವಿಮೋಚನಗೊಳಿಸಲ್ಪಡಲಿ) ।। 147 ।।

**ದಿಗ್ದೇವತಾ ಯಾಶ್ಚ ಗಣಾಧಿನಾಥೋ ಹ್ಯಗ್ನಿಂದು ಪೂರ್ವಾ: ಸಚರಚರಾಶ್ಚ ।**
**ಶೃಣ್ವಂತು ವಾಕ್ಯಂ ಮಮ ವಿಪ್ರಪುತ್ರೋ ವೃಥಾ ಮೃತಿಂ ಹಾಸ್ಯತಿ**
**ಪಾಪಿಸಂಗಾತ್ ।। 148 ।।**

**ವಿಲಲಾಪ ಮಹಾರಾಜ ಬ್ರಾಹ್ಮಣಾರ್ಥಂ ಸುಮಧ್ಯಮಾ ।**
**ಮಾ ಸ್ಪೃಶಾದ್ಯ ಮಹೀದೇವ ಪಾಪಿನೀಂ ವ್ಯಭಿಚಾರಿಣೀಮ್।**
**ಕಃ ಸ್ಪೃಶೇದಗ್ನೀಮಾರ್ತಸ್ಸನ್ ಸರ್ಪಂ ವ್ಯಾಘ್ರಂ ಗಜಂ ನೃಪ ।। 149 ।।**

**ಪರಪತ್ನ್ಯಗ್ನಿತುಲ್ಯಾ ಸ್ಯಾತ್ತತ್ರ ಚಂಡಾಲಕನ್ಯಕಾ ।**
**ಉತ್ತಮಂ ಪದಮಾಸ್ಥಾಯ ನೀಚ ಇಚ್ಛೇತ್ಯಧೋಗತಿಮ್ ।। 150 ।।**

**ಜ್ಞಾನಿನೋ ನ ವೃಥಾ ವಿಪ್ರ ತವ ಬುದ್ಧಿಸ್ತು ತಾದೃಶೀ ।**
**ಜಾತೀದ್ವೇ ನಿರ್ಮಿತೇ ಪೂರ್ವಂ ವಿಷ್ಣುನಾ ದ್ವಿಜಸತ್ತಮ ।। 151 ।।**

**ಪುಂಸ್ತ್ವಸ್ತ್ರೀತ್ವಪ್ರಭೇದೇನ ಚಾತುರ್ವರ್ಣ್ಯೇನ ಭೂಸುರ ।**
**ಬ್ರಾಹ್ಮಣಸ್ಯ ಬ್ರಹ್ಮಯೋನಿಂ ಪರೇಷಾಂತು ಪರಸ್ಪರಮ್ ।। 152 ।।**

**ವಿಪರೀತಮಹಂ ಪಶ್ಯೇ ಧರ್ಮತ್ಯಾಗಂ ದ್ವಿಜನ್ಮನಾಮ್ ।**
**ಶರೀರಂ ತವ ವಿಪೇಂದ್ರ ವೇದಪೂತಂ ವಿಶೇಷತಃ ।। 153 ।।**

**ಋತುಕಾಲೇ ಯದಾ ಮಾತುಃ ತವಪಿತ್ರಾ ನಿಶಾಗಮೇ ।**
**ರೇತೋತ್ಸೃಷ್ಟಂ ವೇದಪೂತಂ ಗರ್ಭಾಧಾನಮಿಮಂ ವಿದುಃ ।। 154 ।।**

**ಶ್ರೀಮಂತಂ ಕಲ್ಪಯಾಮಾಸುಃ ಮಂತ್ರೈರ್ವೇದಮಯೈರ್ದ್ವಿಜ ।**
**ದಶಮಾಸೇ ತು ಸಂಪ್ರಾಪ್ತೇ ಪ್ರಾಸೂತ ಜನನೀ ತವ ।। 155 ।।**

**ತಥೈವ ಜಾತಕರ್ಮಾದಿ ಕೃತವಾನ್ ಶಾಸ್ತ್ರಪೂರ್ವಕಮ್ ।**
**ಅನ್ನಪ್ರಾಶನಚೌಲಾದಿ ಬ್ರಹ್ಮಪುತ್ರೋತ್ಸವಾದಿಕಮ್ ।। 156 ।।**

**ಅಗ್ನಿಸಾಕ್ಷಿವಿಧಾನೇನ ಪ್ರಾಪ್ತದಾರಂ ಚಕಾರ ಸಃ ।**
**ಅಧೀತ ವೇದವೇದಾಂಗ ಶ್ಚಾಹಿತಾಗ್ನಿವ್ರತೇ ಸ್ಥಿತಃ ।। 157 ।।**

**ಏತಾದೃಶಸ್ಯ ದೇಹಸ್ಯ ಸಂಗಮಸ್ತು ಕಥಂಭವೇತ್ ।**

ಯಾಃ = ಯಾವ, ಅಗ್ನೀಂದು ಪೂರ್ವಾಃ = ಅಗ್ನಿ, ಚಂದ್ರ ಮೊದಲಾದ, ದಿಗ್ದೇವತಾಃ = ದಿಕ್ಕುಗಳಿಗೆ ಅಭಿಮಾನಿಗಳಾದ ಇಂದ್ರಾದಿ ದೇವತೆಗಳು, ಗಣಾಧಿನಾಥಃ = ಗಣಗಳಿಗೆ ಅಧಿಪತಿಯಾದ ವಿನಾಯಕನು, ಸಚರಾಚರಾಶ್ಚ = ಸ್ಥಾವರಜಂಗಮಾದಿಗಳೂ (ಚೇತನಾಚೇತನಗಳೂ) ಸಹ, ಮಮ = ನನ್ನ, ವಾಕ್ಯಂ = ವಚನವನ್ನು, ಶೃಣ್ವಂತು = ಕೇಳಲಿ, ವಿಪ್ರಮುಖ್ಯಃ = ಭೂಸುರೋತ್ತಮನಾದ ಮಾಧವನು, ಪಾಪಿಸಂಗಾತ್ = ಪಾಪಿಷ್ಠಳೂ, ಅಂತ್ಯಜಳೂ ಆದ ನನ್ನ ಸಂಗಮದಿಂದ, ವೃಥಾ = ಅನ್ಯಾಯವಾಗಿ, ಮೃತಿಂ = ಮರಣವನ್ನು, ಯಾಸ್ಯತಿ = ಹೊಂದುವನಲ್ಲ ! ಹಿ = ಇದು ಖಂಡಿತ. ॥ 148 ॥ ಮಹೀದೇವ = ಭೂಸುರನೇ, ಅದ್ಯ = ಈಗ, ಪಾಪಿನೀಂ = ಪಾಪಿಷ್ಠಳಾದ, ವ್ಯಭಿಚಾರಿಣೀಂ = ಜಾರಿಣಿಯಾದ ನನ್ನನ್ನು, ಮಾಸ್ಪೃಶ = ಮುಟ್ಟಬೇಡ, (ಇಂತೆಂದು) ಮಹಾರಾಜ! = ಜನಕರಾಯನೇ, ಸುಮಧ್ಯಮಾ = ಸಮೀಚಿನ ನಡುವುಳ್ಳ ಕುಂತಳೆಯು, ಬ್ರಾಹ್ಮಣಾರ್ಥಂ = ಆ ವಿಪ್ರನಿಗಾಗಿ, ವಿಲಾಪ = ಪ್ರಲಾಪಿಸಿದಳು. ಎಲೈ ಮಾಧವನೇ, ಆರ್ತಸ್ಸನ್ = ಆರ್ತನಾಗಿ, (ಆತುರವುಳ್ಳವನಾಗಿ), ಅಸ್ಪೃಶ್ಯಂ = ತೊಡಬಾರದ, ಅಗ್ನಿಂ = ಬೆಂಕಿಯನ್ನು, ವ್ಯಾಘ್ರಂ = ಹುಲಿಯನ್ನು, ಗಜಂ = ಕಾಡಿನ ಗಂಡುಸಲಗವನ್ನು, ಕಃ = ಯಾವನು ತಾನೆ, ಸ್ಪೃಶೇತ್ = ಮುಟ್ಟುವನು? ॥ 149 ॥ ಪರಪತ್ನೀ = ಪರಪತ್ನಿಯು, ಅಗ್ನಿತುಲ್ಯಾ = ಬೆಂಕಿಗೆ ಸಮಾನಳು, ತತ್ರ = ಅದರಲ್ಲಿಯೂ, ಚಂಡಾಲಕನ್ಯಕಾ = ಚಂಡಾಲಪುತ್ರಿಯು ! ಹೀಗಿರಲು, ಜ್ಞಾನಿನಃ = ಜ್ಞಾನಿಗಳು, ಉತ್ತಮಂ = ಶ್ರೇಷ್ಠವಾದ, ಪದಂ = ಬ್ರಾಹ್ಮಣಪದವನ್ನು, ಆಸ್ಥಾಯ, ಪಡೆದವನು, ನೀಚ = ನಿಷ್ಕೃಷ್ಟವಾದ, ಅಧೋಗತಿಂ = ಪತನವನ್ನು (ನರಕವನ್ನು) ನಇಚ್ಛಂತಿ = ಇಚ್ಛಿಸುವುದಿಲ್ಲ ॥ 150 ॥ ವಿಪ್ರ = ಬ್ರಾಹ್ಮಣನೇ, ಜ್ಞಾನಿನಃ = ಜ್ಞಾನಿಯಾದ, ತವ = ನಿನ್ನ, ಬುದ್ಧಿಃ = ಮತಿಯು, ವೃಥಾ = ವ್ಯರ್ಥವಾಗಿ, ತಾದೃಶೀ = ಉತ್ತಮಪದದಲ್ಲಿದ್ದೂ ಅದನ್ನು ಬಿಟ್ಟು ನಿಷ್ಕೃಷ್ಟವಾದ ನರಕವನ್ನು ಬಯಸುವಂತಹುದಾಗಿದೆ. ದ್ವಿಜಸತ್ತಮ = ಭೂಸುರೋತ್ತಮನೇ, ಪೂರ್ವಂ = ಹಿಂದೆ, ವಿಷ್ಣುನಾ = ಶ್ರೀಹರಿಯಿಂದ ಪುಂಸ್ತ್ವಸ್ತ್ರೀತ್ವಪ್ರಭೇದೇನ = ಗಂಡು – ಹೆಣ್ಣು ಎಂಬ ಪ್ರಭೇದದಿಂದ, ದ್ವೇ = ಎರಡು, ಜಾತಿ = ಜಾತಿಯು, ನಿರ್ಮಿತೇ = ನಿರ್ಮಿತವಾಗಿವೆ ॥ 151 ॥ ಚಾತುರ್ವರ್ಣ್ಯೇನ ಚ = ಬ್ರಹ್ಮ-ಕ್ಷತ್ರಿಯ-ವೈಶ್ಯ-ಶೂದ್ರ ಭೇದದಿಂದ ನಾಲ್ಕು ವರ್ಣವಿಭಾಗದಿಂದಲೂ, ನಿರ್ಮಿತೇ = ನಿರ್ಮಿತವಾಗಿದೆ. ಭೂಸುರ = ಬ್ರಾಹ್ಮಣನೇ, ಬ್ರಾಹ್ಮಣಸ್ಯ = ಬ್ರಾಹ್ಮಣನಿಗೆ, ಬ್ರಹ್ಮಯೋನಿಂ = ಬ್ರಾಹ್ಮಣಯೋನಿಯಲ್ಲಿ ಜನಿಸಿದ ಸ್ತ್ರೀಯೂ, ಪರೇಷಾಂತು = ಉಳಿದ ಕ್ಷತ್ರಿಯಾದಿ ಮೂರುವರ್ಣದವರಿಗೆ, ಪರಸ್ಪರಂ = ಆಯಾ ವರ್ಣದಲ್ಲಿ ಹುಟ್ಟಿದ ಸ್ತ್ರೀಯರೆಂದು (ವ್ಯವಸ್ಥೆ ಮಾಡಲ್ಪಟ್ಟಿದೆ). ॥ 152 ॥ ದ್ವಿಜನ್ಮನಾಂ = ಬ್ರಾಹ್ಮಣರ, ಧರ್ಮತ್ಯಾಗಂ = ಸ್ವಜಾತೀಯ ಸ್ತ್ರೀ ಪರಿಗ್ರಹರೂಪವಾದ ಸ್ವಧರ್ಮವನ್ನು ಬಿಡುವಂತಹ, ವಿಪರೀತಂ = ವಿರುದ್ಧ ಕ್ರಮವನ್ನು, ಅಹಂ = ನಾನು, ಪಶ್ಯೇ = (ನಿನ್ನೀವರ್ತನೆಯಿಂದ) ನೋಡುವೆನು (ಕಾಣುತ್ತಿದ್ದೇನೆ). ವಿಪೇಂದ್ರ = ಎಲೈ ವಿಪ್ರೋತ್ತಮನೇ, ತವ = ನಿನ್ನ, ಶರೀರಂ = ದೇಹವು, ವಿಶೇಷತಃ = ವಿಶೇಷವಾಗಿ, ವೇದಪೂತಂ = ವೇದಗಳಿಂದ (ವೇದಾಧ್ಯಯನ-ಜಪ-ತಪಾದಿಗಳಿಂದ) ಪಾವನವಾಗಿದೆ. ॥ 153 ॥ ಯದಾ = ಯಾವಾಗ, ನಿಶಾಗಮೇ = ರಾತ್ರಿಯಲ್ಲಿ (ರಾತ್ರಿಯ ಎರಡನೆಯ ಯಾಮದಲ್ಲಿ) ತವ = ನಿನ್ನ, ಪಿತ್ರಾ = ತಂದೆಯಿಂದ, ಮಾತುಃ = ನಿನ್ನ ಜನನಿಯಲ್ಲಿ, ಋತುಕಾಲೇ = ಋತುಸ್ನಾತಳಾದ ಸಮಯದಲ್ಲಿ, ವೇದಪೂತಂ = ವೇದಮಂತ್ರಗಳಿಂದ ಪರಿಶುದ್ಧವಾದ, ರೇತಃ = ವೀರ್ಯವು, ಉತ್ಸೃಷ್ಟಂ = ಬಿಡಲ್ಪಟ್ಟಿತು. ಇಮಂ = ಇದನ್ನು, ಗರ್ಭಾದಾನಂ = ಗರ್ಭಾದಾನ ಸಂಸ್ಕಾರವೆಂದು, ವಿದುಃ = ತಿಳಿಯುತ್ತಾ ಬಂದಿರುವರು ॥ 154 ॥ ದ್ವಿಜ = ವಿಪ್ರನೇ, ವೇದಮಯ್ಯೈಃ = ವೇದಮಯವಾದ, ಮಂತ್ರೈಃ = ಮಂತ್ರಗಳಿಂದ, ಸೀಮಂತಂ = (ನಿನ್ನ ತಾಯಿಯು ಗರ್ಭಿಣಿಯಾಗಿ ಏಳನೇ ತಿಂಗಳು ನಡೆಯುತ್ತಿರುವಾಗ) ಸೀಮಂತವೆಂಬ ಸಂಸ್ಕಾರವನ್ನು, ಕಲ್ಪಯಾಮಾಸುಃ = ನೆರವೇರಿಸಿದರು. ದಶಮಾಸೇ = ಹತ್ತನೆಯ ತಿಂಗಳು, ಸಂಪ್ರಾಪ್ತೇತು = ಬಂದಾಗ, ತವ = ನಿನ್ನ, ಜನನೀ = ತಾಯಿಯು, ಪ್ರಾಸೂತ = ನಿನ್ನನ್ನು ಹಡೆದಳು. ॥ 155 ॥ ತಥೈವ = ಅದರಂತೆಯೇ (ಕಾಲಕಾಲಗಳಲ್ಲಿ) ಶಾಸ್ತ್ರಪೂರ್ವಕಂ = ಶಾಸ್ತ್ರೋಕ್ತ ರೀತಿಯಿಂದ,

ಜಾತಕರ್ಯಾದಿ = ಜಾತಕರ್ಮಸಂಸ್ಕಾರ, ನಾಮಕರಣಾದಿಗಳನ್ನೂ, ಕೃತವಾನ್ = ನಿನ್ನ ತಂದೆಯು ನೆರವೇರಿಸಿದನು. ತಥೈವ = ಅದರಂತೆಯೇ ಅನ್ನ ಪ್ರಾಶನಚೌಲಾದಿ = ಅನ್ನಪ್ರಾಶನ, ಚಂಡಿಕೆ ಬಿಡಿಸುವುದು, ಅಕ್ಷರಾಭ್ಯಾಸ ಮಾಡಿಸುವುದು, ಮುಂತಾದ ಮತ್ತು ಬ್ರಹ್ಮಪುತ್ರೋತ್ಸವಾದಿಕಂ = ಉಪನಯನ ಸಂಸ್ಕಾರ ಹಾಗೂ ದ್ವಿಜತ್ವಪ್ರಾಪ್ತಿರೂಪ ಉತ್ಸವಗಳನ್ನು ನೆರವೇರಿಸಿದನು. ॥ 156 ॥ ಅಗ್ನಿಸಾಕ್ಷಿವಿಧಾನೇನ = ಅಗ್ನಿಸಾಕ್ಷಿಯಾದ ವಿಧಿವಿಧಾನಗಳಿಂದ, ಸಃ = ನಿನ್ನ ಜನಕನು, ಪ್ರಾಪ್ತದಾರಂ = ನಿನ್ನನ್ನು ಪತ್ನಿಯನ್ನು ಪಡೆದವನನ್ನಾಗಿ (ನಿನಗೆ ಮದುವೆ ಮಾಡಿದನು.) ಚಕಾರ = ನೆರವೇರಿಸಿದನು. ಅಧೀತವೇದವೇದಾಂಗ ಶ್ಚಾಹಿತಾಗ್ನಿವ್ರತೇ-ಅಧೀತ = ಅಧ್ಯಯನ ಮಾಡಲ್ಪಟ್ಟು, ವೇದ = ಋಗಾದಿ ನಾಲ್ಕುವೇದಗಳು, ವೇದಾಂಗ = ವೇದಗಳಿಗೆ ಅಂಗಭೂತವಾದ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪಾದಿಶಾಸ್ತ್ರವುಳ್ಳವನಾಗಿ, ಆಹಿತಾಗ್ನಿವ್ರತೇ = ಮನೆಯಲ್ಲಿ ಆಹಿತಾಗ್ನಿಯನ್ನಿಟ್ಟುಕೊಂಡು ಯಜ್ಞವನ್ನು ನೆರವೇರಿಸುವ, ವ್ರತೇ = ನಿಯಮದಲ್ಲಿ, ಸ್ಥಿತಃ = ನೀನು ಇರುವವನಾಗಿದ್ದೀಯೇ ॥ 157 ॥ ಏತಾದೃಶಸ್ಯ = ಇಂತು ಪರಿಪೂತವಾದ, ದೇಹಸ್ಯ = ನಿನ್ನ ಶರೀರಕ್ಕೆ, ಸಂಗಮಸ್ತು = ಅಪವಿತ್ರವಾದ ನನ್ನ ದೇಹದೊಡನೆ ಸಂಗಮವು (ಮಿಲನವು) ಕಥಂ = ಹೇಗೆ, ಭವೇತ್ = ಉಂಟಾದೀತು?

**ಕರ್ಣೌ ಹರಿಕಥಾಲಾಪಾತ್ ಪಾವಿತೌ ನಾಸಿಕಾ ತವ ॥ 158 ॥**

**ಹರ್ಯರ್ಪಿತ ಸುಗಂಧೇನ ಪಾವಿತಂ ಜಠರಂ ಮುನೇ ।**
**ವಾಸುದೇವಾರ್ಪಿತಾನ್ನೇನ ಪೂರಿತಂ ಪುರುಷರ್ಷಭ ॥ 159 ॥**

**ಕೃಷ್ಣಾರ್ಚನ ಪ್ರಸಂಗೇನ ಕರೌ ಪಾವಿತ್ರ್ಯಮಾಗತೌ ।**
**ಹರಿನಾಮ ಕಲಾಪೇನ ಜಿಹ್ವಾ ತೇ ಪಾವನೀ ಕೃತಾ ॥ 160 ॥**

**ಪುಣ್ಯಕ್ಷೇತ್ರಾನುಚಾರೇಣ ಪಾದೌ ತೇ ಪಾವನೀ ಕೃತೌ ।**
**ಏತಾದೃಶೇನ ದೇಹೇನ ಕಥಂ ಸಂಗಃ ಪ್ರಶಸ್ಯತೇ ॥ 161 ॥**

ತವ = ನಿನ್ನ, ಕರ್ಣೌ = ಕಿವಿಗಳು, ಹರಿಕಥಾಲಾಪಾತ್ = ಶ್ರೀವಿಷ್ಣುವಿನ ವಿವಿಧಾವತಾರ, ಲೀಲಾವಿಲಾಸ, ಮಹಿಮಾ ನಿರೂಪಕ, ಪುರಾಣಾದಿ ಕಥೆಗಳನ್ನು ಕೇಳುವುದರಿಂದ, ಪಾವಿತೌ = ಪಾವಿತವಾಗಿವೆ. ತವ = ನಿನ್ನ ನಾಸಿಕಾ = ಮೂಗು, ಹರ್ಯರ್ಪಿತ ಸುಗಂಧೇನ = ಶ್ರೀಹರಿಪರಮಾತ್ಮನಿಗೆ ಸಮರ್ಪಿಸಿದ, ಹೂವು, ತುಳಸಿ, ಗಂಧ, ಧೂಪ ಇವುಗಳ ಪರಿಮಳದಿಂದ, ಪಾವಿತಂ = ಪವಿತ್ರಗೊಳಿಸಲ್ಪಟ್ಟಿದೆ. ಮುನೇ = ಮಾಧವನೇ, ತವ = ನಿನ್ನ ಜಠರಂ = ಉದರವು, ವಾಸುದೇವಾರ್ಪಿತಾನ್ನೇನ = ಶ್ರೀವಿಷ್ಣುವಿಗೆ ಸಮರ್ಪಿಸಿದ (ನೈವೇದ್ಯ ಮಾಡಿದ) ಸಾತ್ವಿಕಾನ್ನದಿಂದ, ಪೂರಿತಂ = ಪೂರ್ಣವಾಗಿದೆ (ತುಂಬಿದೆ) ॥ ಪುರುಷರ್ಷಭ = ಪುರುಷ ಶ್ರೇಷ್ಠನೇ, ಕೃಷ್ಣಾರ್ಚನ ಪ್ರಸಂಗೇನ - ಕೃಷ್ಣ = ಶ್ರೀಕೃಷ್ಣಪರಮಾತ್ಮನ, ಅರ್ಚನ ಪ್ರಸಂಗೇನ = ಷೋಡಶೋಪಚಾರ ಪೂಜಾದಿಗಳಿಂದ, ಕರೌ = ನಿನ್ನ ಕರಗಳು, ಪಾವಿತ್ರ್ಯಮಾಗತೌ = ಪರಿಶುದ್ಧತೆಯನ್ನು ಹೊಂದಿದೆ. ಹರಿನಾಮ ಕಲಾಪೇನ = ಶ್ರೀಹರೇ, ವಾಸುದೇವ, ಜಗಜ್ಜನ್ಮಾದಿಕಾರಣ, ಸರ್ವೋತ್ತಮ, ಭಕ್ತವತ್ಸಲ, ಶ್ರೀಮನ್ನಾರಾಯಣ ಮುಂತಾಗಿ ಶ್ರೀಹರಿಯ ನಾಮಗಳನ್ನು ಉಚ್ಚರಿಸುವುದರಿಂದ, ತೇ ಜಿಹ್ವಾ = ನಿನ್ನ ನಾಲಿಗೆಯು, ಪಾವನೀಕೃತಾ = ಪವಿತ್ರೀಕೃತವಾಗಿದೆ ॥ ತೇ = ನಿನ್ನ ಪಾದೌ = ಎರಡು ಪಾದಗಳು, ಪುಣ್ಯಕ್ಷೇತ್ರಾನುಚಾರೇಣ = ಪವಿತ್ರಕ್ಷೇತ್ರಗಳಾದ ಬದರಿ, ಹೃಷಿಕೇಶ, ಹರಿದ್ವಾರ, ಮಥುರಾ, ಪೂರಿಜಗನ್ನಾಥ, ಕಾಶೀ, ಪ್ರಯಾಗ, ರಾಮೇಶ್ವರ, ಅನಂತಶಯನ, ಶ್ರೀರಂಗ ಮೊದಲಾದವುಗಳು, ಅನುಚಾರೇಣ = ಯಾತ್ರೆ (ಸಂಚಾರ) ಮಾಡುವುದ ರಿಂದ, ಪಾವನೀಕೃತೌ = ಪವಿತ್ರವಾಗಿ (ಮಾಡಲ್ಪಟ್ಟಿವೆ) ಏತಾದೃಶೇನ = ಇಂತಹ ಪಾವನವಾದ, ದೇಹೇನ = ನಿನ್ನ ದೇಹದೊಡನೆ, ಸಂಗಃ = ಅಪವಿತ್ರವಾದ ನನ್ನ ಶರೀರ ಸಂಗಮವು, ಕಥಂ = ಹೇಗೆ, ಪ್ರಶಸ್ಯತೇ = ಯೋಗ್ಯವೆನಿಸೀತು? ॥ 158-161॥

**ತ್ವಮಪಿ ಶ್ರುಣು ಮಾಹಾತ್ಮ್ಯಂ ದೇಹಸ್ಯ ಮಮ ಭೋ ದ್ವಿಜ ।**
**ಅವಾಚ್ಯವಚನೇನ್ನೈವ ಜಿಹ್ವಾ ಮೇ ದಹ್ಯ ತೇ ಸದಾ ॥ 162 ॥**

**ಸುರಾಮಾಂಸಾಶನೇನ್ನೈವ ಜಠರಂ ಗುಲ್ಮತಾಂಗತಮ್ ।**
**ವ್ಯಭಿಚಾರಕಥಾಲಾಪಾತ್ ಕರ್ಣೌ ಮೇ ಶಿಥಲೀ ಕೃತೌ ॥ 163 ॥**

**ಪಾದೌ ಜಾರಗೃಹಂ ಗತ್ವಾ ಪಾಷಾಣಸದೃಶೌ ಮಮ ।**
**ಗೋವಧಾನ್ಮತ್ಕರೌ ಕ್ರೂರೌ ಯಮದಂಡಸಮಪ್ರಭೌ ॥ 164 ॥**

**ಏತಾದೃಶಸ್ಯ ದೇಹಸ್ಯ ಸಂಗಮಸ್ತು ಕಥಂ ಭವೇತ್ ।**
**ಉತ್ತಮೋ ನೀಚತಾಂ ಪ್ರಾಪ್ಯ ಕಥಂ ಸ್ವರ್ಗಂ ಗಮಿಷ್ಯತಿ ॥ 165 ॥**

**ಪರಸ್ತ್ರೀಸಂಗದೋಷೇಣ ಬಹವೋ ಮರಣಂಗತಾಃ ।**
**ತಸ್ಮಾದುತ್ತಿಷ್ಠ ಭದ್ರಂ ತೇ ತವ ದಾಸೀಭವಾಮಿ ಭೋ ॥ 166 ॥**

ಭೋ ದ್ವಿಜ = ಎಲೈ ಬ್ರಾಹ್ಮಣನೇ, ತ್ವಮಪಿ = ನೀನು ಕೂಡ (ನೀನೀಗ) ಮಮದೇಹಸ್ಯ = ನನ್ನ ಶರೀರದ, ಮಾಹಾತ್ಮ್ಯಂ = ಮಹಿಮೆ (ಯೋಗ್ಯತೆ)ಯನ್ನು ಶ್ರುಣು = ಕೇಳು, ಅವಾಚ್ಯವಚನೇನ್ನೈವ - ಅವಾಚ್ಯ = ಹೇಳಬಾರದ, ವಚನೇನ್ನೈವ = ಕೆಟ್ಟ, ಕ್ರೂರಮಾತುಗಳಿಂದಲೇ, ಮೇ ಜಿಹ್ವಾ = ನನ್ನ ನಾಲಿಗೆಯು, ಸದಾ = ಯಾವಾಗಲೂ, ದಹ್ಯತೇ = ಸುಡುತ್ತಲಿದೆ. ॥ 162 ॥ ಸುರಾಮಾಂಸಾಶನೇನ್ನೈವ = ಮದ್ಯಮಾಂಸಗಳನ್ನು ತಿನ್ನುವುದರಿಂದಲೇ, ಜಠರಂ = ನನ್ನ ಹೊಟ್ಟೆಯು, ಗುಲ್ಮತಾಂಗತಂ = ಉಬ್ಬಿದೆ. (ಉಬ್ಬಿದ ಬುಟ್ಟಿಯಂತಾಗಿದೆ) ಮೇಕರ್ಣೌ = ನನ್ನ ಕಿವಿಗಳು, ವ್ಯಭಿಚಾರ ಕಥಾಲಾಪಾತ್ = ಜಾರತನದ ಕಥೆಯ ಅಶ್ಲೀಲ ಮಾತುಗಳನ್ನಾಡುವುದರಿಂದ ಶಿಥಲೀಕೃತೌ = ಶಿಥಿಲವಾಗಿ ಹೋಗಿವೆ. ॥ 163 ॥ ಮಮಪಾದೌ = ನನ್ನ ಚರಣಗಳು, ಜಾರಗೃಹಂ = ವಿಟಪುರುಷರ ಮನೆಗಳನ್ನು ಕುರಿತು, ಗತ್ವಾ = ಹೋಗಿ, ಪಾಷಾಣ ಸದೃಶೌ = ಕಲ್ಲಿನಂತೆ ಕಠಿಣವಾಗಿದೆ. ಮತ್ಕರೌ = ನನ್ನ ಎರಡು ಕರಗಳು, ಗೋವಧಾತ್ = ಪಾವನ ಗೋವುಗಳನ್ನು ಕೊಲ್ಲುವುದರಿಂದ, ಕ್ರೂರೌ = ಕ್ರೂರವೂ, ಯಮದಂಡಪ್ರಭೌ = ಯಮನ ದಂಡಕ್ಕೆ ಸಮಾನ ಕಾಂತಿಯುಕ್ತವಾಗಿರುವುದೂ ಆಗಿವೆ. ॥ 164 ॥ ಏತಾದೃಶಸ್ಯ = ಹೀಗೆ ಅಪವಿತ್ರವೂ, ನಿಕೃಷ್ಟವೂ ಆದ, ದೇಹಸ್ಯ = ಅಂತ್ಯಜಳಾದ ನನ್ನ ದೇಹಕ್ಕೆ, ಸಂಗಮಸ್ತು = ನಿನ್ನ ಪವಿತ್ರ ಶರೀರದೊಡನೆ ಮಿಲನವು, ಕಥಂ ಭವೇತ್ = ಅದೆಂತು ಸಾಧ್ಯವಾದೀತು? ಉತ್ತಮಃ = ಶ್ರೇಷ್ಠವರ್ಣದವನು, ನೀಚತಾಂ = ನೀಚತ್ವವನ್ನು, ಪ್ರಾಪ್ಯ = ಹೊಂದಿ, ಕಥಂ = ಎಂತು, ಸ್ವರ್ಗಂ = ಸ್ವರ್ಗಲೋಕಕ್ಕೆ ಗಮಿಷ್ಯತಿ ? = ಹೋಗುವನು ? ॥ 165 ॥ ಪರಸ್ತ್ರೀಸಂಗದೋಷೇಣ = ಬೇರೊಬ್ಬರ ಮಡದಿಯ ಸಂಗಮಾಡುವುದರಿಂದ ಉಂಟಾದ ದೋಷದಿಂದ, ಬಹವಃ = ಅನೇಕರು, ಮರಣಂಗತಾಃ = ಮರಣವನ್ನಪ್ಪಿದ್ದಾರೆ. ತಸ್ಮಾತ್ = ಆದುದರಿಂದ, ಉತ್ತಿಷ್ಠ = ಈ ದುರ್ಬುದ್ಧಿಯನ್ನು ಬಿಟ್ಟು ಎದ್ದೇಳು ! (ಎಚ್ಚೆತ್ತು ಎದ್ದೇಳು) ತೇ = ನಿನಗೆ, ಭದ್ರಂ = ಮಂಗಳವಾಗಲಿ, ತವ ದಾಸೀಭವಾಮಿ = ನಿನ್ನ ಸೇವಕಳಾಗಿರುತ್ತೇನೆ (ಅಂದರೆ ಸೇವಕಳ ಸಂಬಂಧ ನಿಷಿದ್ಧವಾದ್ದರಿಂದ ನಾನು ನಿನ್ನ ಸೇವಕಳೆಂದು ಭಾವಿಸು ಎಂದು ಭಾವ ॥ 166 ॥

**ಮೂಲ—**

**ವನಿತಾವಚನಂ ಶ್ರುತ್ವಾ ವಾಕ್ಯಮೂಚೇ ದ್ವಿಜಾತ್ಮಜಃ ।**

*ಮಾಧವ ಉವಾಚ॥*

ತ್ವದೀಯ ಸಂಗೋ ಬಹುಕಾಲ ಪುಣ್ಯಪ್ರಭಾವತೋ ಮುಕ್ತಿಕರಃ ಶುಭಾವಹಃ ॥ 167 ॥

ದೈವೇನ ಯೋಗೇನ ಹರೇಃ ಪ್ರಸಾದ-ಪ್ರಭಾವಲಭ್ಯಃ ಪುರುಷಾರ್ಥಹೇತುಃ ।
ತಸ್ಮಾದ್ಭಜಸ್ವಾನುಗತೋಽಸ್ಮಿ ಭಾಮಿನೀ ತ್ಯಜಾದ್ಯ ಲಜ್ಜಾಂ ಕುರುಮೇ ಮನೋಗತಮ್॥ 168 ॥

ಗಚ್ಛಂತ್ಯದ್ಯ ಮಮ ಪ್ರಾಣಾಃ ತ್ವದ್ವಿಯೋಗೇನ ಕೇವಲಮ್ ।
ತಸ್ಮಾಜ್ಜೀವಯ ಭದ್ರೇ ತ್ವಂ ಮರಣಾಭಿಮುಖಂ ಚ ಮಾಮ್ ॥ 169 ॥

ಏವಮುಕ್ತಾ ದ್ವಿಜೇಂದ್ರೇಣ ಪೃಥುಶ್ರೋಣೀ ಸಮುತ್ಥಿತಾ ।
ಪಲಾಯನಾಯಾಶುಮತಿಂ ಚಕ್ರೇ ಚಂಡಾಲ ಕನ್ಯಕಾ ॥ 170 ॥

ಧಾವಮಾನಾಮನುದ್ರುತ್ಯ ಮಾಧವಸ್ತಾಮುಪಾಸ್ಪೃಶತ್ ।
ಗೌರವಂ ಜನಕಸ್ಯಾಥ ಜನನ್ಯಾ ಜನನೀಪಿತುಃ ॥ 171 ॥

ಸ್ಯಾದಿತಿಕ್ರೋಶಮಾನಾಂ ತಾಂ ಮಾಧವೋ ಮನ್ಮಥಾರ್ದಿತಃ ।
ಬಲಾತ್ಕಾರೇಣ ಸಂಗೃಹ್ಯ ಬುಭುಜೇ ಬ್ರಾಹ್ಮಣಾಧಮಃ ॥ 172 ॥

ದ್ವಿಜಾತ್ಮಜಃ = ಬ್ರಾಹ್ಮಣಪುತ್ರನಾದ ಮಾಧವನು, ವನಿತಾವಚನಂ = ಚಂಡಾಲಸ್ತ್ರೀಯಾದ ಕುಂತಳೆಯ ಮಾತನ್ನು, ಶ್ರುತ್ವಾ = ಕೇಳಿ, ವಾಕ್ಯಂ = ಮಾತನ್ನು ಊಚೇ = ಹೇಳಿದನು, ಮಾಧವ ಉವಾಚ = ಮಾಧವನು ಇಂತು ಹೇಳಿದನು. ಬಹುಕಾಲ ಪುಣ್ಯಪ್ರಭಾವತಃ- ಬಹುಕಾಲ = ಅನೇಕ ವರ್ಷಗಳವರೆಗೆ ಮಾಡಿದ, ಪುಣ್ಯ = ಪುಣ್ಯದ (ಧರ್ಮದ), ಪ್ರಭಾವತಃ = ಮಹಿಮೆಯಿಂದ ದೈವೇನಯೋಗೇನ = ದೈವಯೋಗದಿಂದ, ಹರೇಃ = ಶ್ರೀಹರಿಯ, ಪ್ರಸಾದಪ್ರಭಾವ ಲಭ್ಯಃ - ಪ್ರಸಾದ = ಅನುಗ್ರಹದಿಂದ, ಪ್ರಭಾವ ಲಭ್ಯಃ = ಪ್ರಭಾವದಿಂದ ದೊರಕುವ, ಶುಭಾವಹಃ = ಮಂಗಳಕರವಾದ್ದನ್ನು ತಂದುಕೊಡುವ, ಮುಕ್ತಿಕರಃ ಮೋಕ್ಷವನ್ನು ತಂದುಕೊಡುವ, ತ್ವದೀಯ = ನಿನ್ನ, ಸಂಗಃ = ಮಿಲನವು, ಪುರುಷಾರ್ಥಹೇತುಃ = ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ವಿಧ ಪುರುಷಾರ್ಥಗಳಿಗೆ, ಹೇತುಃ = ಕಾರಣವಾಗಿದೆ, ಭಾಮಿನಿ = ಎಲ್ಲೆ ಕುಂತಳೆ, ತಸ್ಮಾತ್ = ಆದುದರಿಂದ, ಭಜಸ್ವ = ನನ್ನನ್ನು ಹೊಂದುವವಳಾಗು, ಅನುಗತಃ = ನಿನಗೆ ವಿಧೇಯನು (ಅನುಸರಿಸಿಕೊಂಡಿರುವವನು) ಅಸ್ಮಿ = ಆಗಿದ್ದೇನೆ, ಅದ್ಯ = ಈಗ; ಲಜ್ಜಾಂ = ನಾಚಿಕೆಯನ್ನು, ತ್ಯಜ = ಬಿಡು, ಮೇ = ನನ್ನ, ಮನೋಗತಂ = ಮನದಲ್ಲಿರುವ ಇಚ್ಛೆಯನ್ನು, ಕುರು = ಪೂರ್ಣಮಾಡು ॥ 167-168 ॥

***"ತ್ವದೀಯಬಿಂಬಾಧರಪಾನತೋಽಧಿಕಂ ಸುಖಂ ನ ಕಾಂಕ್ಷೇ ಸುರಲೋಕ ದುರ್ಲಭಮ್ ॥"**

*ಅನ್ವಯಾರ್ಥ:—* (ತ್ವದೀಯ = ನಿನ್ನ, ಬಿಂಬಾಧರ ಪಾನತಃ = ಆಕೃತಿಗನುಗುಣವಾದ ಚೆಂದುಟಿಯ ಅಮೃತ-ಪಾನಕ್ಕಿಂತಲೂ), ಸುರಲೋಕದುರ್ಲಭಂ = ಸ್ವರ್ಗಲೋಕದಲ್ಲಿಯೂ ದೊರೆಯದ ಹೆಚ್ಚಾದ, ಸುಖಂ = ಸುಖವನ್ನು, ನಕಾಂಕ್ಷೆ = ಅಪೇಕ್ಷಿಸುವುದಿಲ್ಲ !

---

* ಬೇರೊಂದು ಪ್ರತಿಯಲ್ಲಿರುವ ಹೆಚ್ಚಿನ ಪದ್ಯ

ತ್ವದ್ವಿಯೋಗೇನ = ನಿನ್ನ ಮಿಲನವಾಗದಿರುವುದರಿಂದ, ಅದ್ಯ = ಈಗ, ಮಮಪ್ರಾಣಾಃ = ನನ್ನ ಪ್ರಾಣಗಳು, ಕೇವಲಂ = ಅತ್ಯಂತವಾಗಿ, ಗಚ್ಛಂತಿ = ಹೋಗುತ್ತದೆ (ಹೋಗುತ್ತಲಿದೆ). ತಸ್ಮಾತ್ = ಆದ್ದರಿಂದ, ಭದ್ರೇ = ಶುಭಕರಳಾದ ಕುಂತಳೆಯೇ, ತ್ವಂ = ನೀನು, ಮರಣಾಭಿಮುಖಂ = ಮರಣಾಭಿಮುಖನಾಗಿರುವ, ಮಾಂ = ನನ್ನನ್ನು, ಜೀವಯ = ಬದುಕಿಸು (ನಿನ್ನ ಸಂಗ ಸುಖದಿಂದ ಬದುಕಿಸು). ॥ 169 ॥ ಏವಂ = ಹೀಗೆ, ದ್ವಿಜೇಂದ್ರೇಣ = ಬ್ರಾಹ್ಮಣೋತ್ತಮನಾದ ಮಾಧವನಿಂದ, ಉಕ್ತಾ = ಹೇಳಿಸಿಕೊಳ್ಳಲ್ಪಟ್ಟ, ಪೃಥುಶ್ರೇಣಿ = ತುಂಬಿದ ನಿತಂಬಗಳುಳ್ಳ, ಚಂಡಾಲಕನ್ಯಕಾ = ಅಂತ್ಯಜಕನ್ಯೆಯಾದ ಕುಂತಳೆಯು, ಸಮುತ್ಥಿತಾ = ಮೆಲ್ಲನೆ ಮೇಲೆದ್ದು, ಪಲಾಯನಾಯ = ಅಲ್ಲಿಂದ ಓಡಿಹೋಗಲು, ಆಶು = ಶೀಘ್ರವಾಗಿ, ಮತಿಂಚಕ್ರೇ = ಮನಸ್ಸುಮಾಡಿದಳು ॥ 170 ॥ ಮಾಧವಃ = ಮಾಧವನು, ಧಾವಮಾನಾಂ = ಓಡಿ ಹೋಗುತ್ತಿರುವ, ತಾಂ = ಕುಂತಳೆಯನ್ನು, ಅನುದೃತ್ಯ = ಬೆನ್ನಟ್ಟಿಹೋಗಿ, ಉಪಾಸ್ಪೃಶತ್ = ಮುಟ್ಟಿಹಿಡಿದನು, ಜನಕಸ್ಯ = ನಿನ್ನ ತಂದೆಯ, ಜನನೀ ಪಿತುಃ = ತಾಯಿ ಮತ್ತು ಮಾತಾಮಹರ, ಅಥ = ಆನಂತರ, ಗೌರವಂ = ನಿಮ್ಮ ವಂಶದ ಗೌರವವು, ಸ್ಯಾತ್ = ಆಗಲಿ, (ಅಂದರೆ – ನಿನ್ನ ತಂದೆ, ತಾಯಿ, ಮಾತಾಮಹ, ನಿನ್ನ ವಂಶದ ಮೇಲೆ ಆಣೆ ಇಟ್ಟಿದೇನೆ ! ನನ್ನನ್ನು ಮುಟ್ಟಬೇಡ) ಇತಿ = ಎಂದು, ಕ್ರೋಶಮಾನಾಂ = ಕೂಗಿಕೊಳ್ಳುತ್ತಿರುವ ಕುಂತಳೆಯ ಆಣೆಯನ್ನೂ, ಅನಾಲೋಚ್ಯ = ಯೋಚಿಸದೆ, ಮನ್ಮಥಾರ್ದಿತಃ = ಕಾಮಪೀಡಿತವಾದ, ಮಾಧವಃ = ಮಾಧವನೆಂಬ, ಬ್ರಾಹ್ಮಣಾಧಮಃ = ಆ ನೀಚ ಬ್ರಾಹ್ಮಣನು, ತಾಂ = ಕುಂತಳೆಯನ್ನು, ಬಲಾತ್ಕಾರೇಣ = ಬಲವಂತದಿಂದ, ಬುಭುಜೇ = ಭೋಗಿಸಿದನು ॥ 172 ॥

**ಭೋಗಾತ್ಯಯೇ ದ್ವಿಜಂ ಬಾಲಾ ವಾಚಮೂಚೇ ಮನಸ್ವಿನೀ ।**

***ಕುಂತಲೋವಾಚ-***

**ಅದ್ಯಪ್ರಭೃತಿ ಭೋವಿಪ್ರ ಪತಿಸ್ತ್ವಂ ಮಮ ಭೂಸುರ ॥ 173 ॥**

**ತ್ಯಜ ಯಜ್ಞೋಪವೀತಂ ತೇ ಮುಂಡಯಿತ್ವಾ ಶಿರಸ್ತಥಾ ।**
**ಅಬ್ರಾಹ್ಮಣ್ಯಮುಪಾಗಮ್ಯ ಭಕ್ಷ ಗೋಮಾಂಸಮುತ್ತಮಮ್ ॥ 174 ॥**

**ಪಿಬ ಮದ್ಯೋದಕಂ ಶೀಘ್ರಂ ಚಂಡಾಲತ್ವಮುಪಾಗತಃ ।**
**ತದ್ವಾಕ್ಯಮಾಕರ್ಣ್ಯ ತದಾ ತಯೋಕ್ತಂ ಸರ್ವಮಾಚರತ್ ॥ 175 ॥**

**ಚಂಡಾಲಾಚರಿತಾಚಾರಂ ಜಗಾಮ ವಿಧಿಚೋದಿತಃ ।**
**ವಿಪ್ರಸ್ತಯಾ ಸಮೇತಸ್ತು ಕೃಷ್ಣವೇಣೀ ನದೀತಟಮ್ ॥ 176 ॥**

ಭೋಗಾತ್ಯಯೇ = ಅವಳನ್ನು ಸಂಭೋಗಿಸಿದ ಮೇಲೆ, ಮನಸ್ವಿನೀ = ಸ್ವಾಭಿಮಾನಿಯಾದ, ಬಾಲಾ = ಚಂಡಾಲ ಕನ್ಯೆಯಾದ ಕುಂತಳೆಯು, ದ್ವಿಜಂ = ಮಾಧವನನ್ನು ಕುರಿತು, ವಾಚಮೂಚೇ = ಮಾತನಾಡಿಸಿದಳು. ಭೂಸುರ = ಬ್ರಾಹ್ಮಣನೇ, ಅದ್ಯಪ್ರಭೃತಿ = ಇಂದಿನಿಂದ, ತ್ವಂ = ನೀನು, ಮಮ = ನನ್ನ, ಪತಿಃ = ಗಂಡನಾಗಿದ್ದೀಯೆ. (ಅತಃ = ಆದುದರಿಂದ), ಭೋವಿಪ್ರ = ಎಲೈ ಭೂಸುರನೇ, ತೇ = ನಿನ್ನ, ಯಜ್ಞೋಪವೀತಂ = ಜನಿವಾರವನ್ನು, ತ್ಯಜ = ತೆಗೆದುಹಾಕಿಬಿಡು, ತಥಾ = ಹಾಗೆಯೇ, ತೇ ಶಿರಃ = ನಿನ್ನ ತಲೆಯನ್ನು, ಮುಂಡಯಿತ್ವಾ = ಕೂದಲಿಲ್ಲದಂತೆ ಬೋಳಿಸಿಕೊಂಡು, ಚಂಡಾಲತ್ವಂ = ಚಂಡಾಲತನವನ್ನು, ಉಪಾಗತಃ = ಹೊಂದಿದವನಾಗಿ, ಅಬ್ರಾಹ್ಮಣ್ಯಂ = ಬ್ರಾಹ್ಮಣ್ಯವಿಲ್ಲದಿರುವಿಕೆಯನ್ನು, ಉಪಾಗಮ್ಯ = ಹೊಂದಿ, ಉತ್ತಮಂ = ಚಂಡಾಲರಿಗೆ ಶ್ರೇಷ್ಠವಾದ, ಗೋಮಾಂಸಂ = ಆಕಳಿನ ಮಾಂಸವನ್ನು, ಭಕ್ಷ = ತಿನ್ನು, ಶೀಘ್ರಂ =

ಬೇಗನೆ, ಮದೋದ್ಯಕಂ = ಹೆಂಡವನ್ನು, ಪಿಬ = ಕುಡಿ, ವಿಪ್ರಃ = ಆ ಮಾಧವನು, ತದ್ವಾಕ್ಯಂ = ಅವಳ ವಚನವನ್ನು, ಆಕರ್ಣ್ಯ = ಕೇಳಿ, ತದಾ = ಆವಾಗ, ತಯೋಕ್ತಂ = ಅವಳು ಹೇಳಿದ್ದನ್ನು, ಚಂಡಾಲಂಚರಿತಾಚಾರಂ = ಚಂಡಾಲರಿಗೆ ಯುಕ್ತವಾದ ಆಚಾರಗಳನ್ನು ಮಾಡುತ್ತಾ, ವಿಧಿಚೋದಿತಃ = ವಿಧಿಯಿಂದ ಪ್ರೇರಿತನಾಗಿ, ಸರ್ವಂ = ಎಲ್ಲವನ್ನೂ, (ಅಂದರೆ ಯಜ್ಞೋಪವೀತವನ್ನು ಕಿತ್ತುಹಾಕಿ, ತಲೆಯನ್ನು ಬೋಳಿಸಿಕೊಂಡು, ಚಂಡಾಲನಾಗಿ, ಮದ್ಯಮಾಂಸಗಳನ್ನು ಭುಜಿಸುವ ಕಾರ್ಯವನ್ನು) ಆಚರತ್ = ಮಾಡಿದನು. ವಿಪ್ರಃ = ಮಾಧವನು, ತಯಾ = ಕುಂತಳೆಯಿಂದ, ಸಮೇತಸ್ತು = ಸಹಿತನಾಗಿ, ಕಾಳಹಸ್ತಿ ಪಟ್ಟಣವನ್ನು ತ್ಯಜಿಸಿ, ಕೃಷ್ಣವೇಣನದೀತಟಂ = ಕೃಷ್ಣವೇಣೀನದಿಯ ತೀರದ ಸ್ಥಳಕ್ಕೆ, ಜಗಾಮ = ಹೊರಟುಹೋದನು. ॥ 176 ॥

**(¹"ತದ್ವಾಕ್ಯಮಾಕರ್ಣ್ಯ ಜಗಾಮ ವಿಪ್ರಃ ತಯಾಸಮೇತೋ ನಿಕಟಂ ಕೃಷ್ಣವೇಣ್ಯಾಃ"**

ವಿಪ್ರಃ = ಬ್ರಾಹ್ಮಣಾಭಾಸನಾದ ಮಾಧವನು, ತದ್ವಾಕ್ಯಮಾಕರ್ಣ್ಯ = ಅವಳ ಮಾತನ್ನಾಲಿಸಿ, ತಯಾಸಮೇತಃ = ಅವಳಿಂದ ಕೂಡಿ, ಕೃಷ್ಣವೇಣ್ಯಾಃ = ಕೃಷ್ಣವೇಣೀ ನದಿಯ, ನಿಕಟಂ = ಹತ್ತಿರ ಸ್ಥಳಕ್ಕೆ, ಜಗಾಮ = ಹೋದನು, ಸುರಾಂಪೀತ್ವಾ = ಹೆಂಡವನ್ನು ಕುಡಿದು, ಮಾಂಸ ನಿಷೇವಣಂಚ = ಮಾಂಸಭಕ್ಷಣವನ್ನೂ ಸಹ, ಕೃತ್ವಾ = ಮಾಡಿ, ತಯಾ = ಅವಳೊಡನೆ, ಮೂಢಮತಿಃ = ವಿವೇಕವಿಲ್ಲದವನಾಗಿ, ಸಃ = ಮಾಧವನು, ರೇಮೇ = ಕ್ರೀಡಿಸುತ್ತಿದ್ದನು.)

ಮೂಲ—

**ದ್ವಾದಶಾಬ್ಧಂ ವಸನ್ ವಿಪ್ರಃ ತತ್ಸಂಗಪರಿಮೋಹಿತಃ ।**
**ಅನಿತ್ಯತ್ವಾಚ್ಛರೀರಸ್ಯ ಕಾಲಪಾಶೇನ ಯಂತ್ರಿತಾ ॥ 177 ॥**

**ಜಗಾಮ ಮರಣಂ ರಾಜನ್ ಕುಂತಲಾ ನೀಲಕುಂತಲಾ ।**
**ತಯಾ ವಿಹರಿತಃ ಶ್ರೀಮಾನ್ ಮಾಧವೋ ದುಃಖಕಾತರಃ ॥ 178 ॥**

**ಅಚರದ್ಭುವನಂ ಸರ್ವಮುನ್ಮಾದೇನೋದ್ಭ್ರಮನ್ನಿವ ।**
**ತದಾ ತು ದೈವಯೋಗೇನ ರಾಜಾನಶ್ಚೋತ್ತರಾಸ್ತದಾ ॥ 179 ॥**

**ಯಾತ್ರಾರ್ಥಮನುಜಗ್ಮುಸ್ತೇ ವರಾಹಸ್ಯ ತು ಪರ್ವತಮ್ ।**
**ಮಾರ್ಗಮಧ್ಯೇ ದದರ್ಶಾಸೌ ಮಾಧವಸ್ತಾನ್ಮಹೀಪತೀನ್ ॥ 180 ॥**

ವಿಪ್ರಃ = ಮಾಧವ ಬ್ರಾಹ್ಮಣನು, ತತ್ಸಂಗಪರಿಮೋಹಿತಃ = ಕುಂತಳೆಯ ಶಾರೀರಿಕ ಸಂಬಂಧದಿಂದ ಮೋಹಿತನಾಗಿ, ದ್ವಾದಶಾಬ್ಧಂ = ಹನ್ನೆರಡು ವರುಷಗಳವರೆಗೆ, ವಸನ್ = ಹೀಗೆ ಕಾಲಯಾಪನೆ ಮಾಡುತ್ತಿದ್ದನು. ಶರೀರಸ್ಯ = ಮಾನವ ದೇಹವು, ಅನಿತ್ಯತ್ವಾತ್ = ಶಾಶ್ವತವಲ್ಲವಾದ್ದರಿಂದ, ರಾಜನ್! = ಎಲೈ ಜನಕರಾಜ! ಕಾಲಪಾಶೇನ = ಯಮಪಾಶದಿಂದ, ಯಂತ್ರಿತಾ = ಬದ್ಧಳಾಗಿ, ನೀಲಕುಂತಲಾ = ಕರಿಗೂದಲಿನ, ಕುಂತಲಾ = ಕುಂತಳೆಯು, ಮರಣಂ ಜಗಾಮ = ಮೃತಳಾದಳು. ತಯಾ = ಕುಂತಳೆಯಿಂದ, ವಿರಹಿತಃ = ವಿಯೋಗಹೊಂದಿದವನಾಗಿ, ದುಃಖಕಾತರಃ = ದುಃಖದಿಂದ ಬೆದರಿದ, ಶ್ರೀಮಾನ್ = ಪಾಪವೆಂಬ ವಿಷದಿಂದ ಪೂರ್ಣನಾದ, ಮಾಧವಃ = ಮಾಧವನು, ವಿಭ್ರಮನ್ನಿವ = ಹುಚ್ಚನಂತೆ, ಅಭ್ರಮನ್ = ಅಲೆದಾಡುತ್ತ, ಸಮಸ್ತಂಭುವನಂ = ಭೂಭಾಗದಲ್ಲೆಲ್ಲಾ, ಅಚರತ್ = ಸುತ್ತುತ್ತಿದ್ದನು. ತದಾ ತು = ಅದೇ ವೇಳೆಯಲ್ಲಿ, ದೈವಯೋಗೇನ = ದೇವೇಚ್ಛೆಯಿಂದ, ಉತ್ತರಾಃ = ಉತ್ತರದೇಶೀಯರಾದ, (ತೇ = ಪ್ರಸಿದ್ಧರಾದ),

[1] ಈ ಗ್ರಂಥದಲ್ಲಿಲ್ಲದ ಬೇರೊಂದು ಮುದ್ರಿತ ಪ್ರತಿಯಲ್ಲಿರುವ ಪದ್ಯ

ರಾಜಾನಃ = ನರಪತಿಗಳು, ಯಾತ್ರಾರ್ಥಂ = ತೀರ್ಥಕ್ಷೇತ್ರ ಯಾತ್ರೆಗಾಗಿ, ವರಾಹಸ್ಯ = ಶ್ರೀವರಾಹದೇವರ, ಪರ್ವತಂತು = ಬೆಟ್ಟವನ್ನು ಕುರಿತು, ಅನುಜಗ್ಮುಃ = ಹೊರಟರು. ಅಸೌ ಮಾಧವಃ = ಈ ಮಾಧವನು, ಮಾರ್ಗಮಧ್ಯೆ = ಹುಚ್ಚನಂತೆ ಅಲೆದಾಡುತ್ತಿರುವಾಗ ಮಧ್ಯಮಾರ್ಗದಲ್ಲಿ, ತಾನ್ = ಆ, ಮಹೀಪತೀನ್ = ಅರಸರನ್ನು, ದದರ್ಶ = ನೋಡಿದನು. || 177-180 ||

**ಭ್ರಮನ್ನೇವಾಥ ತೈಸ್ಸಾರ್ಧಂ ತದುಚ್ಛಿಷ್ಟಾನ್ನಭೋಜನಃ ।**
**ಪ್ರಾಪ್ತಃ ಸಪ್ತಗಿರಿಂ ರಾಜನ್ ದೈವಯೋಗೇನ ಭೂಸುರಃ || 181 ||**

**ತೇ ರಾಜಾನಸ್ತತ್ರ ಗತ್ವಾ ತೀರ್ಥೇ ಕಪಿಲಸಂಜ್ಞಿಕೇ ।**
**ಸ್ನಾತ್ವಾ ಭಕ್ತಿಸಮಾಯುಕ್ತಾಃ ವಪನಂ ಚಕ್ರುರಾದರಾತ್ || 182 ||**

ತೈಸ್ಸಾರ್ಧಂ = ಆ ನೃಪತಿಗಳೊಡನೆಯೇ, ಭ್ರಮನ್ = ತಾನು ತಿರುಗಾಡುತ್ತಾ, ತದುಚ್ಛಿಷ್ಟಂ = ಅವರು ಉಂಡುಳಿದ ಎಂಜಲನ್ನವನ್ನು ಭೋಜನಃ = ಉಣ್ಣುವವನಾಗಿ, ಭೂಸುರಃ = ಬ್ರಾಹ್ಮಣನಾದ ಮಾಧವನು, ದೈವಯೋಗೇನ = ದೈವಸಂಕಲ್ಪದಿಂದ, ಸಪ್ತಗಿರಿಂ = ಸಪ್ತಗಿರಿಗೆ (ಪಾಠಾಂತರ ಸಪ್ತಗಿರಿಂ = ಶೇಷಪರ್ವತಕ್ಕೆ) ಪ್ರಾಪ್ತಃ = ಬಂದನು || 181 || ತತ್ರ = ಆ ಶೇಷಾಚಲದಲ್ಲಿ, ತೇ ರಾಜಾನಃ = ಆ ರಾಜರು, ಕಪಿಲಸಂಜ್ಞಿಕೇ = ಕಪಿಲ ಎಂಬ ಹೆಸರುಳ್ಳ, ತೀರ್ಥೇ = ಪವಿತ್ರ ಜಲದಲ್ಲಿ, ಸ್ನಾತ್ವಾ = ಸ್ನಾನಮಾಡಿ, ಭಕ್ತಿಸಮಾಯುಕ್ತಾಃ = ಭಕ್ತಿಸಹಕೃತರಾಗಿ, ವಪನಂ = ಮುಂಡನವನ್ನು, ಆದರಾತ್ = ವಿಶ್ವಾಸಪೂರ್ವಕವಾಗಿ, ಚಕ್ರುಃ = ಮಾಡಿಸಿಕೊಂಡರು. || 182 ||

**ತದಾ ನೃಪಾಃ ಸುಸಂಹೃಷ್ಟಾಃ ಪಾರ್ವಣಾನಿ ದದುರ್ನೃಪ ।**
**ಮಾಧವೋಽಪಿ ಶುಭೇ ತೀರ್ಥೇ ಸ್ನಾತ್ವಾ ವಪನಪೂರ್ವಕಮ್ || 183 ||**

**ಪಾರ್ವಣಾನಿ ಮೃದಾ ಕೃತ್ವಾ ಪಿತೃಭ್ಯಃ ಶ್ರದ್ಧಯಾ ದದೌ ।**
**ದೈವಾ ದ್ವಾ ಕರ್ಮಯೋಗೇನ ಮಾಧವೋ ಗತಕಲ್ಮಷಃ || 184 ||**

**ತಸ್ಮಾದ್ಯೋ ಮಾನವೋ ಭಕ್ತ್ಯಾ ಕುರ್ಯಾತ್ತೀರ್ಥಾವಗಾಹನಮ್ ।**
**ಪಿತೃಶ್ರಾದ್ಧಂ ಪಿಂಡದಾನಂ ತತ್ರ ಚೇನ್ಮುಕ್ತಿಭಾಗ್ಭವೇತ್**
**ಮೃತ್ಪಿಂಡಂ ಕೃತವಾನ್ ವಿಪ್ರಃ ಪುಣ್ಯಕ್ಷೇತ್ರೇ ಪುರಾತನೇ || 185 ||**

**ಕಿಂವರ್ಣಯಾಮಃ ಪುರುಷೋತ್ತಮಸ್ಯ ಕ್ಷೇತ್ರಸ್ಯ ತೀರ್ಥಸ್ಯ ಸುಪುಣ್ಯಶಕ್ತಿಮ್ ।**
**ಮೃತ್ಪಿಂಡದಾನೇನ ಪಿತಾಮಹಾದ್ಯಾಃ ಮುಕ್ತಿಂ ಪ್ರಯಾತಾ ಮುರವೈರಿಶಾಸನಾತ್ || 186 ||**

**ಪ್ರಭಾತೇ ವಿಮಲೇ ಪ್ರಾಪ್ತೇ ರಾಜಾನೋ ರಾಜಸತ್ತಮ ।**
**ಸಮಾರುಹ್ಯ ಗಿರಿಶ್ರೇಷ್ಠಂ ಸಪುತ್ರಾಶ್ಚ ಸಬಾಂಧವಾಃ || 187 ||**

**ತೇಷಾಮನು ಮಹಾರಾಜ್ಞಾಮಾಪ ಶೇಷಗಿರಿಂ ದ್ವಿಜಃ ।**
**ವಿಶ್ರಾಂತಾಸ್ಸರ್ವರಾಜಾನಃ ತತ್ರ ತತ್ರ ಮಹೀಪತೇ || 188 ||**

**ಸೋಽಪಿ ತಸ್ಥೌ ದ್ವಿಜಶ್ರೇಷ್ಠೋ ಮಾಧವೋ ಗಿರಿಮಸ್ತಕೇ ।**
**ಭೂಧರಸ್ಪರ್ಶಮಾತ್ರೇಣ ತದಘಂ ಪರ್ಯತಪ್ಯತ ॥ 189 ॥**

ಹೇನೃಪ = ಎಲೈ ಜನಕರಾಜ. ತದಾ = ಆಗ, ನೃಪಾಃ = ನರಪತಿಗಳು, ಸುಸಂಹೃಷ್ಟಾಃ = ಅತ್ಯಂತ ಸಂತೋಷವುಳ್ಳವರಾಗಿ, ಪಾರ್ವಣಾನಿ ದದುಃ = (ಪಿತೃಗಳಿಗೆ) ಪಿಂಡಪ್ರದಾನ ಮಾಡಿದರು. ಮಾಧವೋಽಪಿ = ಮಾಧವನೂ ಸಹ, ಶುಭೇತೀರ್ಥೇ = ಮಂಗಳಕರವಾದ ಕಪಿಲತೀರ್ಥದಲ್ಲಿ, ವಪನ ಪೂರ್ವಕಂ = ಶಿರೋಮುಂಡನದೊಡನೆ, ಸ್ನಾತ್ವಾ = ಸ್ನಾನಮಾಡಿ, ಮೃದಾ = ಮಣ್ಣಿನಿಂದ, ಪಾರ್ವಣಾನಿ = ಪಿಂಡಗಳನ್ನು, ಕೃತ್ವಾ = ಮಾಡಿ, ಪಿತೃಭ್ಯಃ = ಪಿತೃಗಳಿಗೆ, ಶ್ರದ್ಧಯಾ = ಆಸ್ತಿಕ್ಯಬುದ್ಧಿಯಿಂದ, ದದೌ = ಕೊಟ್ಟನು. ದೈವಾದ್ = ದೈವೇಚ್ಛೆಯಿಂದ, ವಾ = ಅಥವಾ, ಕರ್ಮಯೋಗೇನ = ಹಿಂದಿನ ಜನ್ಮದಲ್ಲಿ ಆಚರಿಸಿದ ಸುಕೃತ ಕರ್ಮಗಳ ಫಲದಿಂದಾಗಿಯೋ, ಮಾಧವಃ = ಮಾಧವನು, ಗತಕಲ್ಮಷಃ (ಅಭೂತ್) = ಪಾಪ ರಹಿತನಾದನು ॥ 183–184 ॥ ತಸ್ಮಾತ್ = ಆದುದರಿಂದ, ಯಃ ಮಾನವಃ = ಯಾವ ಮನುಷ್ಯನು, ಭಕ್ತ್ಯಾ = ಪ್ರೇಮದಿಂದ, ತೀರ್ಥಾವಗಾಹನಂ = ಕಪಿಲತೀರ್ಥದಲ್ಲಿ ಅವಗಾಹನ ಸ್ನಾನವನ್ನು ಕುರ್ಯಾತ್ ಚೇತ್ = ಮಾಡಿದ ಪಕ್ಷದಲ್ಲಿ, ಮುಕ್ತಿಭಾಗ್ ಭವೇತ್ = ಮೋಕ್ಷಕ್ಕೆ ಭಾಜನನಾಗುತ್ತಾನೆ (ಮೋಕ್ಷವನ್ನು ಪಡೆಯುವನು). ಪುರಾತನೇ = ಪ್ರಾಚೀನವಾದ (ಅನಾದಿಯಾದ) ಪುಣ್ಯಕ್ಷೇತ್ರೇ = ಪುಣ್ಯಪ್ರದವಾದ ವೈಕುಂಠ ಗಿರಿಯಲ್ಲಿ, ವಿಪ್ರಃ = ಮಾಧವನು, ಮೃತ್ಪಿಂಡಂ = ಮಣ್ಣಿನ ಪಿಂಡವನ್ನು, ಕೃತವಾನ್ = (ಮಾಡಿ) ಪಿತೃಗಳಿಗೆ ಪ್ರದಾನಮಾಡಿದನು. ॥ 185 ॥ ಪುರುಷೋತ್ತಮಸ್ಯ = ಪರಮಪುರುಷನಾದ ಶ್ರೀಹರಿ ಪರಮಾತ್ಮನ, ಕ್ಷೇತ್ರಸ್ಯ = ವೆಂಕಟಗಿರಿ (ಪ್ರದೇಶದ) ಕ್ಷೇತ್ರದ, ತೀರ್ಥಸ್ಯ = ಪುಣ್ಯತೀರ್ಥದ (ಪುಣ್ಯೋದಕದ), ಸುಪುಣ್ಯ ಶಕ್ತಿಂ = ಉತ್ತಮವಾದ ಸುಕೃತವನ್ನು ಕೊಡುವ ಸಾಮರ್ಥ್ಯವನ್ನು, ಕಿಂವರ್ಣಯಾಮಃ = ಏನೆಂದು ವರ್ಣಿಸೋಣ ? ಮೃತ್ಪಿಂಡ ದಾನೇನ = ಕೇವಲ ಮಣ್ಣಿನ ಪಿಂಡಪ್ರದಾನ ಮಾತ್ರದಿಂದಲೇ, ಪಿತಾಮಹಾದ್ಯಾಃ = ಮಾಧವನ ಅಪ್ಪ, ಅಜ್ಜ, ಮುತ್ತಜ್ಜ ಮೊದಲಾದ ಪಿತೃಗಳು, ಮುರವೈರಿ ಶಾಸನಾತ್ = ಮುರನಾಮಕ ಆಸುರನ ಶತ್ರುವಾದ ಶ್ರೀಹರಿಯ ಅಪ್ಪಣೆಯಿಂದ, ಮುಕ್ತಿಂ = ಶಾಶ್ವತ ಸುಖವನ್ನು (ಮೋಕ್ಷವನ್ನು) ಪ್ರಯಾತಾಃ = ಹೊಂದಿದರು (ಪಡೆದರು) ॥ 189 ॥

**ಮಾಧವಸ್ಯಾಭವತ್ಕಷ್ಟಂ ಯಥಾ ಮಕ್ಷಿಕಭಕ್ಷಣಾತ್ ।**
**ವಮಂತಮೇನಂ ತಂ ಪಾಪಂ ಸಮಾವೃಣ್ವನ್ ಸಮಂತತಃ ॥**
**ತದಂಗಜಾತಃ ಕೋಽಪ್ಯಗ್ನಿಃ ಅದ್ರಿಮಾಹಾತ್ಮ್ಯತಃ ತದಾ ।**
**ಪ್ರಜಜ್ವಾಲ ದಹನ್ ಪಾಪಂ ಸುರಾಮಾಂಸಾಶನೋದ್ಭವಮ್ ॥ 190 ॥**

ರಾಜಸತ್ತಮ = ರಾಜಶ್ರೇಷ್ಠನಾದ ಜನಕರಾಜ ! ವಿಮಲೇ = ನಿರ್ಮಲವಾದ, ಪ್ರಭಾತೇ ಪ್ರಾಪ್ತೇಸತಿ = ಬೆಳಗಾಗುತ್ತಿರಲು, ಸಪುತ್ರಾಃ = ಸುತರಿಂದೊಡಗೂಡಿ, ಸಂಬಾಂಧವಾಃ = ಬಾಂಧವರಿಂದ ಸಹಿತರಾದ, ರಾಜಾನಃ = ಆ ನೃಪತಿಗಳು, ಗಿರಿಶ್ರೇಷ್ಠಂ = ಪರ್ವತಶ್ರೇಷ್ಠವಾದ ವೇಂಕಟಾಚಲವನ್ನು, ಸಮಾರುಹ್ಯ = ಏರಿ, ಸರ್ವರಾಜಾನಃ = ಆ ಎಲ್ಲ ರಾಜರುಗಳೂ, ತತ್ರತತ್ರ = ಅಲ್ಲಲ್ಲಿ, ವಿಶ್ರಾಂತಾಃ = ಇಳಿದುಕೊಂಡು ವಿಶ್ರಾಂತಿ ಪಡೆದರು. ॥ 187–188 ॥ ಮಹೀಪತೇ = ಜನಕರಾಯನೇ, ದ್ವಿಜಃ = ಮಾಧವನು, ತೇಷಾಂ ಮಹಾರಾಜ್ಞಾ = ಆ ದೊರೆಗಳನ್ನು, ಅನು = ಅನುಸರಿಸಿಕೊಂಡು, ಶೇಷಗಿರಿಂ = ಶೇಷಾಚಲವನ್ನು, ಆಪ = ಹೊಂದಿದನು (ಸೇರಿದನು), ದ್ವಿಜಶ್ರೇಷ್ಠಃ = ಬ್ರಾಹ್ಮಣೋತ್ತಮನಾದ, ಸೋಽಪಿಮಾಧವಃ = ಆ ಮಾಧವನೂ ಸಹ, ಗಿರಿಮಸ್ತಕೇ = ಗಿರಿಶಿಖರದಲ್ಲಿ (ಪರ್ವತದ ಮೇಲ್ಭಾಗದಲ್ಲಿ) ತಸ್ಥೌ = ಇದ್ದನು. ಭೂಧರಸ್ಪರ್ಶಮಾತ್ರೇಣ = ಪರ್ವತದ ಸ್ಪರ್ಶ ಮಾತ್ರದಿಂದಲೇ, ತದಘಂ = ಮಾಧವನ ಪಾಪವು, ಪರ್ಯತಪ್ಯತ

= ಪರಿತಪಿಸಿತು (ಕುದಿಯಿತು) ॥ 189 ॥ ಮಕ್ಷಿಕಭಕ್ಷಣಾತ್ = ನೊಣವನ್ನು ನುಂಗುವುದರಿಂದ, ಯಥಾ = ಹೇಗೆ ಹೊಟ್ಟೆ ತೊಳೆಸಿ ವಾಂತಿಯಾಗಿ ಸಂಕಟವಾಗುವುದೋ, (ತಥಾ = ಅದರಂತೆ), ಮಾಧವಸ್ಯ = ಮಾಧವನಿಗೆ, ಕಷ್ಟಮಭೂತ್ = ಕಷ್ಟವುಂಟಾಯಿತು, ತಂ ಪಾಪಂ = ಆ ಪಾಪವನ್ನು, ವಮಂತಂ = ವಾಂತಿಮಾಡಿಕೊಳ್ಳುತ್ತಿರುವ, ಏನಂ = ಮಾಧವನನ್ನು, ಸಮಂತತಃ = ಪಾಪರೂಪವಾಂತಿಯು ಸುತ್ತಲೂ, ಸಮಾವೃಣ್ವನ್ = ಸುತ್ತುಗಟ್ಟಿ ಹರಿಯಿತು, ತದಾ = ಆವಾಗ, ಅದ್ರಿಮಾಹಾತ್ಮ್ಯತಃ = ಆ ಗಿರಿಯ ಮಹಿಮೆಯಿಂದ, ತದಂಗಜಾತಃ = ಅವನ ಶರೀರದಿಂದ ಹುಟ್ಟಿದ, ಕೋಽಪ್ಯಗ್ನಿಃ = ಒಂದಾನೊಂದು ಬೆಂಕಿಯು, ಪ್ರಜಜ್ವಾಲ = ಪ್ರಜ್ವಲಿಸಿತು, ಮತ್ತು ಸುರಾಮಾಂಸಾಶನೋದ್ಭವಂ = ಮದ್ಯಮಾಂಸಗಳ ಭಕ್ಷಣದಿಂದುಂಟಾದ, ಪಾಪಂ = ಪಾಪವನ್ನು, ದಹನ್ = ಸುಟ್ಟುಹಾಕಿತು. ॥ 190 ॥

**ತಸ್ಯ ದುರ್ಗಂಧಧೂಮೇನ ತ್ರಾಸಿತಾಃ ಸರ್ವದೇವತಾಃ ।**
**ತದ್ಭಾವವೇದಿನೋ ದೇವಾಃ ಬ್ರಹ್ಮರುದ್ರಪುರಸ್ಸರಾಃ ॥ 191 ॥**

**ವಿಮಾನಾನಿ ವಿಚಿತ್ರಾಣಿ ಭಾಸಯಂತಾಃ ಸಮಾಗತಾಃ ।**
**ಖಮಾರ್ಗೇ ಸಂಸ್ಥಿತಾಸ್ಸರ್ವೇ ದೃಷ್ಟ್ವಾ ತಚ್ಚರಿತಂ ನೃಪ ॥ 192 ॥**

**ವವೃಷುಃ ಪುಷ್ಪವರ್ಷಾಣಿ ಮಾಧವಸ್ಯೋತ್ತಮಾಂಗಕೇ ।**
**ದೃಷ್ಟ್ವಾ ಪಿತಾಮಹಃ ಶ್ರೀಮಾನ್ ವಿಮಾನಾದವರುಹ್ಯ ಸಃ ॥ 193 ॥**

**ಮಾಧವಂ ಗ ತ ಪಾಪ್ಮಾನಂ ಅಜಾಮಿಲಂ ಯಥಾ ಹರಿಃ ।**
**ಕೃಪಯೋದ್ಧೃತವಾನ್ ಕೃಷ್ಣಃ ಕೃಪಾಲುರ್ದ್ವಿಜಪುಂಗವಮ್ ॥ 194 ॥**

**ಇತಿ ಸಂಚಿತಯಂಸ್ತಸ್ಯ ನಿಕಟಂ ಪ್ರಾಪ ಸಾದರಮ್ ।**
**ಜಿಘ್ರಂಶ್ಚ ತಚ್ಛಿರಃ ಶ್ರೀಮಾನ್ ಬ್ರಹ್ಮಾ ವಾಕ್ಯಮಥಾಬ್ರವೀತ್ ।**
**ಭೋಭೋ ಮಾಧವ ವಿಪೇಂದ್ರ ಗತಪಾಪೋಽಸಿ ಕೇವಲಮ್ ॥ 195 ॥**

**ಸ್ವಾಮಿತೀರ್ಥಸ್ಯ ನಿಕಟಂ ಗತ್ವಾ ಸ್ನಾತ್ವಾಥ ತಜ್ಜಲೇ ।**
**ವರಾಹವದನಂ ನತ್ವಾ ತ್ಯಜ ದೇಹಂ ಮಹೀಸುರ ॥ 196 ॥**

**ಮಹೀಪಾಲೋಽಥ ಭೂತ್ವಾತು ಕುರು ರಾಜ್ಯಮಕಂಟಕಮ್ ।**
**ಪಾಂಡವಾನಾಂ ಚ ದೌಹಿತ್ರಕುಲೇ ಜಾತೋಽತಿಕೀರ್ತಿಮಾನ್ ॥ 197 ॥**

**ಸುಧರ್ಮಸ್ಯ ಸುತೋ ಭೂತ್ವಾಕಾಶನಾಮಾಥ ದಕ್ಷಿಣೇ ।**
**ನಾರಾಯಣಪುರೇ ವೀರ ತೋಂಡದೇಶಾಧಿಪೋ ಭವ ॥ 198 ॥**

ತಸ್ಯ = ಮಾಧವನ ಆ ಪಾಪದ, ದುರ್ಗಂಧ ಧೂಮೇನ = ದಹಿಸಿದ್ದರಿಂದುಂಟಾದ ದುರ್ವಾಸನೆಯ ಹೊಗೆಯಿಂದ, ಸರ್ವದೇವತಾಃ = ಸಕಲ ದೇವತೆಗಳು, ತ್ರಾಸಿತಾಃ = (ತೊಂದರೆಗೊಳಗಾದರು) ತ್ರಸ್ತರಾದರು, ತದ್ಭಾವವೇದಿನಃ = ಪಾಪಮುಕ್ತನಾಗಿ ತನ್ನ ಉದ್ಧಾರವಾಗಬೇಕೆಂದು ಬಯಸಿದ ಅವನ ಭಾವವರಿತು, ವಾಂತಿಯಾದ ವಿಷಯವನ್ನರಿತ, ಬ್ರಹ್ಮರುದ್ರಪುರಸ್ಸರಾಃ = ಬ್ರಹ್ಮದೇವರು-ರುದ್ರದೇವರು ಮೊದಲಾದ ದೇವಾದಿ ದೇವತೆಗಳು, ವಿಚಿತ್ರಾಣಿ = ಚಿತ್ರ

ವಿಚಿತ್ರಗಳಾದ, ವಿಮಾನಾನಿ = ವಿಮಾನಗಳನ್ನು, ಆರುಹ್ಯ = ಹತ್ತಿ ಕುಳಿತು, ಭಾಸಯಂತಃ = (ದಿಕ್ಕುಗಳನ್ನು) ಪ್ರಕಾಶಗೊಳಿಸುತ್ತಾ, ಸಮಾಗತಾಃ = ಆಗಮಿಸಿದರು. ಹೇ ನೃಪ ! = ಎಲೈಜನಕರಾಯ, ಖಮಾರ್ಗೇ = ಆಕಾಶಮಾರ್ಗದಲ್ಲಿ (ಗಗನಮಾರ್ಗದಲ್ಲಿ), ಸಂಸ್ಥಿತಾಃ ಸಂತಃ = ನಿಂತವರಾಗಿ, ತಚ್ಚರಿತಂ = ಮಾಧವನ ನಡತೆಯನ್ನು (ಆಚರಣೆಯನ್ನು), ದೃಷ್ಟ್ವಾ = ಅವಲೋಕಿಸಿ, ಮಾಧವಸ್ಯ = ಆ ಮಾಧವನ, ಉತ್ತಮಾಂಗಕೇ = ತಲೆಯಮೇಲೆ (ಶಿರಸ್ಸಿನಲ್ಲಿ) ಪುಷ್ಪವರ್ಷಾಣಿ = ಕುಸುಮವರ್ಷವನ್ನು (ಹೂವಿನ ಮಳೆಯನ್ನು), ವವೃಷುಃ = ಸುರಿಸಿದರು. ಶ್ರೀಮಾನ್ = ಕಾಂತಿಸಂಪನ್ನನಾದ, ವೇದಪ್ರತಿಪಾದ್ಯನಾದ, ಸರಸ್ವತೀ ದೇವಿಯಿಂದ ಸಹಿತನಾದ, ಸಃ ಪಿತಾಮಹಃ = ಆ ಬ್ರಹ್ಮದೇವನು, ವಿಮಾನಾತ್ = ವಿಮಾನದಿಂದ, ಅವರುಹ್ಯ = ಕೆಳಗಿಳಿದು ಬಂದು, ದೃಷ್ಟ್ವಾ = ಮಾಧವನನ್ನು ಕೃಪಾದೃಷ್ಟಿಯಿಂದ ಅವಲೋಕಿಸಿ. ।। 191-193 ।। ಕೃಪಾಲುಃ = ದಯಾಮಯನಾದ, ಹರಿಃ = ಹರಿರೂಪೀ ಪರಮಾತ್ಮನು, ಅಥವಾ ಕೃಷ್ಣಃ = ಪಾಪನಾಶಕನಾದ, ಹರಿಃ = ಶ್ರೀಹರಿಯು, ಗತಪಾಪ್ಮಾನಂ = ಪಾಪ ಮುಕ್ತನಾದ, ಅಜಾಮಿಳಂ = ಅಜಾಮಿಳನೆಂಬ ಭಕ್ತನನ್ನು, ಕೃಪಯಾ = ಕಾರುಣ್ಯದಿಂದ, ಯಥಾಉದ್ಧೃತವಾನ್ = ಹೇಗೆ ಉದ್ಧರಿಸಿದನೋ ಹಾಗೆ, ಗತಪಾಪ್ಮಾನಂ = ಪಾಪಮುಕ್ತನಾದ, ದ್ವಿಜಪುಂಗವಂ = ಬ್ರಾಹ್ಮಣಶ್ರೇಷ್ಠನಾದ ಮಾಧವನನ್ನು, ಇತಿಸಂಚಿಂತ್ಯ = ತಾನೂ ಉದ್ಧರಿಸಬೇಕೆಂದು ಯೋಚಿಸಿ, ತಸ್ಯ = ಮಾಧವನ, ನಿಕಟಂ = ಸಮೀಪಕ್ಕೆ, ಪ್ರಾಪ = ಬಂದನು. ಮತ್ತು, ಸಾದರಂ = ಆದರದಿಂದ, ತಚ್ಛಿರಃ = ಮಾಧವನ ಶಿರಸ್ಸನ್ನು, ಜಿಘ್ರಂಶ್ಚ = ಆಘ್ರಾಣಿಸಿದನು ಕೂಡ. ಶ್ರೀಮಾನ್ = ಸರಸ್ವತಿಯಿಂದ ಸಹಿತನಾದ, ಬ್ರಹ್ಮಾ = ಬ್ರಹ್ಮದೇವನು, ಅಥ = ಆ ತರುವಾಯ, ವಾಕ್ಯಮಬ್ರವೀತ್ = ಮಾತನಾಡಿದನು, ಭೋಭೋ (ಎರಡು ಸಲ ಭೋಭೋ ಎಂದಿರುವುದು ''ಆದರಾತ್ ದ್ವಿರುಕ್ತಿಃ'' ಎಂಬಂತೆ ಹೆಚ್ಚಿನ ಆದರ ತೋರಲು ಎಂದು ತಿಳಿಯಬೇಕು.) ವಿಪೇಂದ್ರ = ಎಲೈ ಭೂಸುರೋತ್ತಮನಾದ, ಮಾಧವ = ಮಾಧವನೇ ! ಕೇವಲಂ ಗತಪಾಪೋऽಸಿ = ಸಂಪೂರ್ಣವಾಗಿ ಪಾಪರಹಿತನಾಗಿದ್ದೀಯೆ ! ।। 195 ।। ಸ್ವಾಮಿ ತೀರ್ಥಸ್ಯ = ಸ್ವಾಮಿಪುಷ್ಕರಣಿಯ, ನಿಕಟಂ = ಸಮೀಪಕ್ಕೆ, ಗತ್ವಾ = ಹೋಗಿ, ತಜ್ಜಲೇ = ಆ ಪವಿತ್ರ ಜಲದಲ್ಲಿ, ಸ್ನಾತ್ವಾ = ಸ್ನಾನಮಾಡಿ, ಅಥ = ಆನಂತರ, ವರಾಹವದನಂ = ವರಾಹಮುಖವುಳ್ಳ ಶ್ರೀಹರಿಯನ್ನು, ನತ್ವಾ = ನಮಸ್ಕರಿಸಿ, ಮಹೀಸುರ = ಎಲೈ ಮಾಧವ ಭೂಸುರನೇ ! ದೇಹಂ = ನಿನ್ನ ದೇಹವನ್ನು, ತ್ಯಜ = ಬಿಡು (ತ್ಯಜಿಸು) ।। 196 ।। ಅಥತು = ನಿನ್ನ ಮುಂದಿನ ಜನ್ಮದಲ್ಲಿ, ಪಾಂಡವಾನಾಂ = ಪಾಂಡವರ, ದೌಹಿತ್ರಕುಲೇ = ಹೆಣ್ಣುಮಗಳ ವಂಶದಲ್ಲಿ, ಜಾತಃ = ಹುಟ್ಟಿದವನಾಗಿ, ಅತಿಕೀರ್ತಿಮಾನ್ = ಅತಿಶಯ ಕೀರ್ತಿಸಂಪನ್ನನಾದ, ಮಹೀಪಾಲಃ ಭೂತ್ವಾ = ಮಹಾರಾಜನಾಗಿ, ಅಕಂಟಕಂ = ಶತ್ರುಬಾಧೆಯಿಲ್ಲದ, ರಾಜ್ಯಂ = ರಾಜ್ಯವನ್ನು (ಅರಸೊತ್ತಿಗೆಯನ್ನು), ಕುರು = ಪರಿಪಾಲಿಸು ।। 197 ।। ಸುಧರ್ಮಸ್ಯ = ಸುಧರ್ಮರಾಜನಿಗೆ, ಸುತೋ ಭೂತ್ವಾ = ಮಗನಾಗಿ, ಆಕಾಶನಾಮಾ = ಆಕಾಶರಾಜನೆಂಬ ಹೆಸರಿನಿಂದ, ದಕ್ಷಿಣೇ = ದಕ್ಷಿಣದೇಶದಲ್ಲಿ, ನಾರಾಯಣಪುರೇ = ನಾರಾಯಣಪುರದಲ್ಲಿ, ಹೇ ವೀರ = ಎಲೈ ವೀರನೇ, ತೋಂಡದೇಶಾಧಿಪೋ = ತೋಂಡದೇಶಕ್ಕೆ ಅಧಿಪತಿಯು, ಭವ = ಆಗು. ।। 198 ।।

**ತವ ಪುತ್ರೀ ಜಗನ್ಮಾತಾ ಜಾಮಾತಾ ಚ ಜಗತ್ಪತಿಃ ।**
**ಭವಿಷ್ಯತಿ ಮಹಾರಾಜ ಪಶ್ಚಾದ್ವೈಕುಂಠಮಾಪ್ಸ್ಯಸಿ ।। 199 ।।**

**ಇತಿ ತಸ್ಯ ವರಂ ದತ್ವಾ ಚತುರಶ್ಚತುರಾನನಃ ।**
**ತದಾ ನಾಮ ಚಕಾರಾದ್ರೇಃ ವೇಂಕಟಾಚಲ ಇತ್ಯಪಿ ।। 200 ।।**

**ವೇಂ ಪಾಪಂ ಕಟತೇ ಯಸ್ಮಾತ್ಪಾಪದಾಹನ ಶಕ್ತಿತಃ ।**
**ವೇಂಕಟಾಚಲ ಇತ್ಯೇವ ನಾಮ ದೇವಾ ಸ್ತದಾ ಜಗುಃ ।। 201 ।।**

**ತಸ್ಮಾದ್ವೇಂಕಟಶೈಲೋಽಯಂ ಲೋಕೇ ವಿಖ್ಯಾತಕೀರ್ತಿಮಾನ್ ।**
**ಪ್ರಭಾತಕಾಲೇ ರಾಜೇಂದ್ರ ಯಃ ಕೀರ್ತಯತಿ ಭೂಧರಮ್ ॥ 202 ॥**

**ತಸ್ಯ ಪುಣ್ಯಫಲಂ ವಕ್ಷ್ಯೇ ಶೃಣು ರಾಜನ್ ಯಥಾ ಸ್ಥಿತಮ್ ।**
**ಫಲಂ ಭವೇದ್ಭುವಂ ಗಂಗಾಸೇತುಯಾತ್ರಾ ಸಹಸ್ರಜಮ್ ॥ 203 ॥**

**ಇತಿಹಾಸಮಿಮಂ ಪ್ರೋಕ್ತಂ ಗೌತಮೇನ ಮಯೋದಿತಮ್ ।**
**ಪುಣ್ಯಂ ಪರಮಕಲ್ಯಾಣಂ ಶ್ರವಣಾದ್ಭದ್ರದಾಯಕಮ್ ॥ 204 ॥**

ಜಗನ್ಮಾತಾ = ಲೋಕಜನನಿಯಾದ ಶ್ರೀಮಹಾಲಕ್ಷ್ಮಿಯು, ತವ = ನಿನಗೆ, ಪುತ್ರೀ ಭವಿಷ್ಯತಿ = ಮಗಳಾಗುತ್ತಾಳೆ, ಚ = ಮತ್ತು, ಜಗತ್ಪತಿಃ = ಸಕಲ ಜಗತ್ತಿಗೆ ಸ್ವಾಮಿಯಾದ ಶ್ರೀಮನ್ನಾರಾಯಣನು, ಜಾಮಾತಾ ಭವಿಷ್ಯತಿ = ಅಳಿಯನಾಗುತ್ತಾನೆ. ಮಹಾರಾಜ! = ಭಾವಿರಾಜನಾಗುವ ನೀನು, ಪಶ್ಚಾತ್ = ಬಹುಕಾಲ ರಾಜ್ಯಭಾರ ಮಾಡಿದ ಮೇಲೆ, ವೈಕುಂಠಂ = ಶ್ರೀ ವೈಕುಂಠವನ್ನು (ಶ್ರೀವಿಷ್ಣುಲೋಕವನ್ನು), ಆಪ್ಸ್ಯಸಿ = ಪಡೆಯುತ್ತೀಯೆ! ॥ 199 ॥ ಚತುರಃ = ಬುದ್ಧಿವಂತನಾದ (ಅಥವಾ ಕುಶಲನಾದ), ಚತುರಾನನಃ = ನಾಲ್ಮೊಗನು (ಬ್ರಹ್ಮನು), ಇತಿ = ಇಂತು, ತಸ್ಯ = ಮಾಧವನಿಗೆ, ವರಂ = ವರವನ್ನು, ದತ್ವಾ = ಪ್ರದಾನಮಾಡಿ, (ಅಥ = ಆ ತರುವಾಯ), ತದಾ = ಆವಾಗ, ವೇಂಕಟಾಚಲ ಇತ್ಯಪಿ = ಆ ಪರ್ವತಕ್ಕೆ ವೇಂಕಟಾಚಲವೆಂದೂ, ನಾಮ ಚಕಾರ = ಹೆಸರಿಟ್ಟನು. ॥ 200 ॥

ವೇಂ = ಪಾಪವನ್ನು, ಯಸ್ಮಾತ್ = ಯಾವ ಕಾರಣದಿಂದ, ಕಟತೇ = ಸುಡುತ್ತದೆಯೋ (ತಸ್ಮಾತ್ = ಆ) ಪಾಪದಾಹನ ಶಕ್ತಿತಃ = ಪಾಪವನ್ನು ದಹಿಸುವ ಸಾಮರ್ಥ್ಯವಿರುವುದರಿಂದ, ವೇಂಕಟಾಚಲ ಇತ್ಯೇವ = (ಈ ಪರ್ವತಕ್ಕೆ) ವೇಂಕಟಾಚಲವೆಂದೇ, ನಾಮ = ಹೆಸರನ್ನು, ತದಾ = ಆಗ, ದೇವಾಃ = ದೇವತೆಗಳು, ಜಗುಃ = ಹೇಳುವವರಾದರು, ॥ 201 ॥ ತಸ್ಮಾತ್ = ಆದುದರಿಂದ, ಅಯಂ = ಈ ವೇಂಕಟಶೈಲಃ = ವೇಂಕಟಾಚಲವು, ಲೋಕೇ = ಪ್ರಪಂಚದಲ್ಲಿ, ವಿಖ್ಯಾತ ಕೀರ್ತಿಮಾನ್ = ಕೀರ್ತಿಯಿಂದ ಪ್ರಸಿದ್ಧವಾಯಿತು (ವಿಖ್ಯಾತ ಕೀರ್ತಿಯುಳ್ಳದ್ದಾಯಿತು). ರಾಜೇಂದ್ರ = ಎಲೈ ಜನಕ ಮಹಾರಾಜ ! ಪ್ರಭಾತಕಾಲೇ = ಪ್ರಾತಃಕಾಲದಲ್ಲಿ, ಯಃ = ಯಾವ ಮಾನವನು, ಭೂಧರಂ = ವೇಂಕಟಗಿರಿಯನ್ನು, ಕೀರ್ತಯತಿ = ಕೀರ್ತನೆ ಮಾಡುವನೋ, ರಾಜನ್ = ದೊರೆಯೇ, ತಸ್ಯ = ಅಂಥವನಿಗೆ, ಯಥಾಸ್ಥಿತಂ = ಕ್ಲಿಪ್ತವಾಗಿ ದೊರಕುವ, ಪುಣ್ಯಫಲಂ = ಸುಕೃತಫಲವನ್ನು, ವಕ್ಷ್ಯೇ = ಹೇಳುತ್ತೇನೆ, ಶೃಣು = ಕೇಳು, ಭುವಂ = ಭೂಮಿಯ, ಗಂಗಾಸೇತುಯಾತ್ರಾ ಸಹಸ್ರಜಂ - ಗಂಗಾ = ಗಂಗಾನದಿ, ಸೇತು = ರಾಮಸೇತುಗಳ, ಯಾತ್ರಾ = ಯಾತ್ರೆಯ, ಸಹಸ್ರಜಂ = ಸಾವಿರಪಟ್ಟಾದ, ಫಲಂ = ಪುಣ್ಯಫಲವು, ಭವೇತ್ = ಉಂಟಾಗುವುದು. ॥ 202-203 ॥

ಮಯಾ = ನನ್ನಿಂದ, ಉದಿತಂ = ಈವರೆಗೆ ಹೇಳಲ್ಪಟ್ಟ, ಇಮಂ = ಈ, ಇತಿಹಾಸಂ = ಕಥೆಯು, ಗೌತಮೇನ = ಗೌತಮ ಮಹರ್ಷಿಗಳಿಂದ, ಪ್ರೋಕ್ತಂ = ಹೇಳಲ್ಪಟ್ಟಂತಹುದು, ಪುಣ್ಯಂ = ಪುಣ್ಯಕರವಾದ, ಪರಮ ಕಲ್ಯಾಣಂ = ಪರಮಮಂಗಳಕರವು, ಶ್ರವಣಾತ್ = ಇದನ್ನು ಶ್ರವಣ ಮಾಡುವುದರಿಂದ, ಭದ್ರದಾಯಕಂ = ಶುಭವನ್ನು ಕೊಡುವಂತಹುದು. ॥ 204 ॥

## ವೇಂಕಟಾಚಲಮಹಿಮೆಯ ಕಥಾಸಾರ

ಶೇಷಾಚಲದ ಪ್ರಸಿದ್ಧಿ-ಮಹಿಮಾದಿಗಳನ್ನು ತಿಳಿದು ಮುದಿಸಿದ ಜನಕಮಹಾರಾಜನು- ''ಮಹರ್ಷಿಗಳಾದ ಶತಾನಂದರೇ ! ಕಲಿಯುಗದಲ್ಲಿ ಈ ಪರ್ವತಕ್ಕೆ ವೇಂಕಟಾಚಲವೆಂಬ ಹೆಸರು ಬಂದ ಬಗೆಯನ್ನು ತಿಳಿಸಿರಿ'' ಎನಲು ಶತಾನಂದರು ಹೇಳಲಾರಂಭಿಸಿದರು:-

ಶತಾನಂದ:- ಪೂರ್ವದಲ್ಲಿ ಧೃಡನಿಯಮಪರಾಯಣನಾದ, ಯಜ್ಞ-ಯಾಗಾಚರಣದಲ್ಲಿ ನಿರತನಾದ, ಸತ್ಯವನ್ನೇ ನುಡಿಯುತ್ತಿದ್ದ ಪುರಂದರನೆಂಬ ಹೆಸರಿನ ಬ್ರಾಹ್ಮಣನು ಕಾಳಹಸ್ತಿ ಎಂಬ ಪಟ್ಟಣದಲ್ಲಿ ವಾಸಮಾಡುತ್ತಿದ್ದನು. ಅವನಿಗೆ ಪುತ್ರ ಸಂತಾನವಿರಲಿಲ್ಲ. ತನಗೆ ಮಗನಾಗಲಿಲ್ಲವೆಂದು ಅವನು ದುಃಖಿಸಲಿಲ್ಲ ! ಶಾಸ್ತ್ರಜ್ಞನಾದ್ದರಿಂದ ಶ್ರೀಹರಿಯ ಸಂಕಲ್ಪಕ್ಕೆ ವಿರುದ್ಧವಾಗಿ ಚಿಂತಿಸಬಾರದೆಂಬುದನ್ನು ಅವನು ಅರಿತಿದ್ದನಾದ್ದರಿಂದ ದುಃಖಿಸಲಿಲ್ಲ. (ಪಾಠಾಂತರ:- ತನಗೆ ಮಕ್ಕಳಾಗಲಿಲ್ಲವೆಂದು ಅವನಿಗೆ ದುಃಖವಾಯಿತು). ಆದರೆ ದೈವಯೋಗದಿಂದ ಬಹುಕಾಲವಾದ ಮೇಲೆ. ಪೂರ್ವಜನ್ಮದ ಸುಕೃತ ಫಲದಿಂದ ವೃದ್ಧನಾದ ಪುರಂದರ ಸೋಮಯಾಜಿಗೆ ಓರ್ವ ಪುತ್ರನು ಜನಿಸಿದನು. ಆನಂದಭರಿತನಾದ ಪುರಂದರನು ಭೂಸುರ ಸಭೆಯಲ್ಲಿ ಮಗನಿಗೆ ಮಾಧವ ಎಂದು ನಾಮಕರಣ ಮಾಡಿದನು (ಹೆಸರಿಟ್ಟನು). ಜನಕರಾಯ! ಬಾಲಕ ಮಾಧವನು ತಂದೆಯಿಂದ ಉಪನಯನ ಸಂಸ್ಕಾರವನ್ನು ಪಡೆದು, ಚಂದ್ರನಂತೆ ದಿನೇದಿನೇ ಅಭಿವೃದ್ಧಿಸಿದನು. ಅವನು ಋಗ್ವೇದ-ಯಜುರ್ವೇದಾದಿ ನಾಲ್ಕು ವೇದಗಳು, ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪಗಳೆಂಬ ವೇದಾಂಗಗಳು, ವೇದಾಂತ ತತ್ತ್ವ ರಹಸ್ಯಗಳನ್ನು ಚೆನ್ನಾಗಿ ಅರಿತು ಸಕಲ ವಿದ್ಯೆಗಳಲ್ಲಿ ಪ್ರವೀಣನಾದನು ಗುರುಕುಲ ವಾಸವನ್ನು ಮುಗಿಸಿಬಂದ ಮಾಧವನಿಗೆ ತಂದೆಯಾದ ಪುರಂದರ ಸೋಮಯಾಜಿಯು ಉತ್ತಮ ವಧುವನ್ನು ತಂದುಕೊಂಡು ಲಗ್ನಮಾಡಿಸಿದನು. ಗೃಹಸ್ಥ ಧರ್ಮವನ್ನು ಸ್ವೀಕರಿಸಿದ ಮಾಧವನು ಮಡದಿಯಾಡ ಚಂದ್ರಲೇಖೆಯೊಡನೆ ಬಹುಕಾಲ ವಿಹರಿಸುತ್ತಾ ಸಂತೋಷದಿಂದಿದ್ದನು. ಬ್ರಾಹ್ಮಣರಿಗೆ ಮುಖ್ಯವಾದ, ದೇವ, ಪಿತೃ, ಮಾನವ, ಭೂತ, ಬ್ರಹ್ಮ ಎಂಬ ಪಂಚಯಜ್ಞಗಳನ್ನು ಶ್ರದ್ಧೆಯಿಂದಾಚರಿಸುತ್ತಾ, ಸಿಂಹದಂತೆ ಕಾಂತಿಸಂಪನ್ನನಾದ ಮಾಧವನು ಇಪ್ಪತ್ತೊಂದು ವರ್ಷಕಾಲ ಅಪರಸೂರ್ಯನಂತೆ ಗೃಹಸ್ಥ ಧರ್ಮವನ್ನು ಪರಿಪಾಲಿಸುತ್ತಾ ಸುಖದಿಂದ ಕಾಲಕಳೆದನು. ಪಾಂಡ್ಯದೇಶದವಳಾದ ಚಂದ್ರಲೇಖೆಯು, ಪಾಂಡವರ ವಂಶದಲ್ಲಿ ಜನಿಸಿದ ರಾಜರಿಗೆ ಪ್ರೀತಿಪಾತ್ರಳಾದ ಮಗಳಾಗಿದ್ದಳು. ಪತಿವ್ರತೆಯಾದ ಆ ರಾಜಕುವರಿಯು ಪತಿಯು ಮಲಗಿದ ಮೇಲೆ ಅವನ ಸೇವೆ ಮಾಡಿ ತಾನು ಮಲಗುವಳು. ಪತಿಯು ಭೋಜನ ಮಾಡಿದ ಮೇಲೆ ತಾನು ಊಟ ಮಾಡುವಳು. ಹೀಗೆ ಚಂದ್ರಲೇಖೆಯು ಪತಿಪರಾಯಣೆ ಎಂದು ಹೆಸರು ಗಳಿಸಿದ್ದಳು.

ಜನಕಮಹಾರಾಜ! ಪುರಂದರ ಸೋಮಯಾಜಿಯ ಸುತನಾದ ಮಾಧವನು ಒಂದು ದಿನ ಹಗಲಿನಲ್ಲಿಯೇ ಪತ್ನಿಯೊಡನೆ ಕ್ರೀಡಿಸಲು ಆಶಿಸಿ, ಕಾಮಪೀಡಿತನಾಗಿ, ರಾಜಕುಮಾರಿಯಾದ ಪತ್ನಿಯ ಬಳಿಗೆ ಬಂದು 'ಮಂಗಳಕರಳಾದ ಚಂದ್ರಲೇಖೆಯೇ ! ನಾನೀಗ ನಿನ್ನೊಡನೆ ರಮಿಸಲು ಅಪೇಕ್ಷೆಯುಂಟಾಗಿದೆ'- ಎಂದನು. ಪ್ರಜಾಪಾಲಕನಾದ ಜನಕರಾಜ! ಆ ಸಾಧ್ವಿಯು ಪತಿಯ ವಚನವನ್ನಾಲಿಸಿ ''ಪುರುಷಶ್ರೇಷ್ಠ ! ಶರೀರವು ಮೂಳೆ, ಮಾಂಸ, ಚರ್ಮಗಳಿಂದ ತುಂಬಿದೆ. ಇಂತಹ ಶರೀರದೊಡನೆ ಶರೀರದ ಸಂಬಂಧವು ಸಾಧುಜನರಿಗೆ ಸಮ್ಮತವಲ್ಲದ್ದು. ಅದರಲ್ಲಿಯೂ ದಿವಾಸಂಗಮವು ಯೋಗ್ಯವಲ್ಲವೆಂದು ಋಷಿ-ಮುನಿಗಳು (ತಿಳಿಯುವರು) ಭಾವಿಸಿರುವರು. ಮೇಲಾಗಿ ನಮ್ಮ ಮನೆಯಲ್ಲಿ ಪೂಜ್ಯರಾದ ನಿಮ್ಮ ತಂದೆ ತಾಯಿಯರಿದ್ದಾರೆ. ಯಜ್ಞೇಶ್ವರನು ಪ್ರಜ್ವಲಿಸುತ್ತಿರುವನು. ಈ ದಿನ ಇಂದ್ರದೇವತಾಕವಾದ ಇಷ್ಟಿಯ ದಿನವಾದುದರಿಂದ ಇಂದ್ರದೇವನೂ ಮನೆಯಲ್ಲಿ ಸನ್ನಿಹಿತನಾಗಿದ್ದಾನೆ. ದ್ವಿಜಕುಮಾರ ! ಬೆಳಗುತ್ತಿರುವ ಸೂರ್ಯನ ಕಾಂತಿಯನ್ನು ಪರಿಕಿಸು. ಆದ್ದರಿಂದ ನಿನ್ನ ಕಾಮೇಚ್ಛೆಯನ್ನು ಬಿಡು'' ಎಂದು ವಿಜ್ಞಾಪಿಸಿದಳು. ಕಾಮಬಾಣಪೀಡಿತನಾದ ಮಾಧವನು ಸತಿಯ ನುಡಿ ಕೇಳಿ ''ಪ್ರಿಯೆ, ಚಂದ್ರಲೇಖಾ, ನನ್ನ ಸುಖಕ್ಕಾಗಿ ನೀನು ಸಹಕರಿಸಲೇಬೇಕು. ಭಾಮಿನಿ ! ನನ್ನ ಮನದಾಶೆಯನ್ನು ಪೂರೈಸು'' ಎಂದನು. ಚಂದ್ರಲೇಖೆಯು ನಿರ್ವಾಹವಿಲ್ಲದೆ, ಪತಿಯ ಅಪ್ಪಣೆಯನ್ನು ಮೀರಲಾಗದೆ, ''ಹೂಂ, ಸರಿ, ಸ್ವಾಮಿ, ನಾನು ನೀರು ತರಲು ಹೋಗುವೆನು, ನೀವು ನನಗಿಂತ ಮೊದಲು ಹೋಗಿರಿ'' ಎಂದಳು. ಆಗ ಮಾಧವನು ಸ್ವಾಭಾವಿಕವಾಗಿ ಪ್ರತಿದಿನದಂತೆ, (ಅಥವಾ ಕಾಮಾರ್ತನಾಗಿ ಕುಸ್ವಭಾವದಿಂದ) ದರ್ಭೆಯನ್ನು ತರುವ ನೆಪದಿಂದ ಪತ್ನಿಗಿಂತ ಮುಂಚೆಯೇ ಮನೆಬಿಟ್ಟು ಹೊರಟನು.

ಚಂದ್ರಲೇಖೆಯು ನೀರು ತರುವ ವ್ಯಾಜದಿಂದ ನೀರಿನ ಕೊಡವನ್ನು ತೆಗೆದುಕೊಂಡು ಪತಿಯ ನಿರ್ಗಮಿಸಿದ ಮೇಲೆ ತಾನೂ ಹೊರಟಳು. ಮುಂದಾಗಿ ಹೊರಟು ಅವಳ ದಾರಿ ಕಾಯುತ್ತಿದ್ದ ಮಾಧವನು ಅವಳು ಬಂದಮೇಲೆ ಅವಳನ್ನು ಅನುಸರಿಸಿ ಗಿಡಮರಬಳ್ಳಿಗಳಿಂದ ನಿಬಿಡವಾದ ವನಪ್ರದೇಶಕ್ಕೆ ಬಂದನು. ಆ ವನಮಧ್ಯದಲ್ಲಿ ಅವನೊಂದು ವಿಚಿತ್ರ ದೃಶ್ಯವನ್ನು ಕಂಡನು. ಆ ವನದ ಮಧ್ಯಭಾಗದಲ್ಲಿ ವಾಸಿಸುತ್ತಿರುವ, ಒಂದು ವೃಕ್ಷದ ಬುಡವನ್ನಾಶ್ರಯಿಸಿ ಕುಳಿತಿರುವ ಓರ್ವ ಸ್ತ್ರೀಯಳನ್ನು ಮಾಧವನು ನೋಡಿದನು. ಅವಳು ಅತಿಶಯ ರೂಪಲಾವಣ್ಯವತಿಯಾಗಿದ್ದಳು. ಅವಳ ಮುಖವು ಹುಣ್ಣಿಮೆಯ ಪೂರ್ಣಚಂದ್ರನಂತೆ ಇದ್ದಿತು, ಕಂಗೊಳಿಸುವ ಮುಖದಿಂದ ಅವಳು ಬೆಳಗುತ್ತಿದ್ದಳು. ಬಿಳಿಯ ಸೀರೆಯನ್ನುಟ್ಟು ಕಟಿಯಲ್ಲಿ ಡಾಬನ್ನು ಧರಿಸಿದ್ದಳು. ಸುಂದರವಾದ ಮೂಗು, ಉತ್ತಮ ಭಗಪ್ರದೇಶ, ಕಾಮನಬಿಲ್ಲಿನಂತಿರುವ ಹುಬ್ಬುಗಳು, ತುಂಬಿದ ಸ್ತನಗಳಿಂದ ಮೋಹಕಳಾಗಿದ್ದಳು. ನೀಲವರ್ಣದ ಕೇಶರಾಶಿಯಿಂದ ಪರಿಶೋಭಿಸುವ ಕುಂತಳಾ ಎಂಬ ಆ ಚಂಡಾಲ ಕನ್ಯೆಯನ್ನು ನೋಡಿ ಮಾಧವನು ಅವಳಲ್ಲಿ ಮೋಹಪರವಶನಾದನು. ಆ ರೂಪಸಿಯು ಚಂದದ ಕುಪ್ಪುಸವನ್ನು ತೊಟ್ಟಿದ್ದಳು. ಅವಳ ಧ್ವನಿಯು ಕೋಗಿಲೆಯ ಮಂಜುಳದಿಂಚರವನ್ನು ಹೋಲುತ್ತಿದ್ದಿತು. ಕಣ್ಣಿಗೆ ಕಾಡಿಗೆಯನ್ನು ಹಚ್ಚಿಕೊಂಡಿರುವ ಅವಳು ರಮಣೀಯ ಸ್ವರದಿಂದ ಮನೋಹರಳಾಗಿದ್ದಳು. ಆ ಕುಂತಳೆಯು ಕಾಲಿನ ಬೆರಳುಗಳಿಂದ ನೆಲವನ್ನು ಕೆರೆಯುತ್ತಿದ್ದಳು. ಅವಳ ಉದ್ದವಾದ ಜಡೆಯು ಮೊಳಕಾಲಿನವರೆಗೆ ಓಲಾಡುತ್ತಿತ್ತು. ಇಂತು ವಿಚಿತ್ರ ಸೌಂದರ್ಯದಿಂದ ರಾಜಿಸುತ್ತಿರುವ ಕುಂತಳೆಯನ್ನು ನೋಡಿ ಅವಳತ್ತವೇ ಆಕರ್ಷಿತವಾದ ಮನಸ್ಸುಳ್ಳವನಾಗಿ ಮಾಧವನು ಬ್ರಹ್ಮಸೃಷ್ಟಿಯ ಅಪೂರ್ವ ನೈಜತೆಯನ್ನು ಮನದಲ್ಲಿ ಮೆಲುಕುಹಾಕುತ್ತಾ ತನ್ನ ಪತ್ನಿಯನ್ನು ಕುರಿತು ''ಪ್ರಾಣಕಾಂತೆ ! ನೀನಿನ್ನು ಮನೆಗೆ ತೆರಳು. ನನ್ನ ಮನದಾಶೆಯು ಪೂರ್ಣವಾಯಿತು. ನಿನಗಿರುವ ಪತಿಭಕ್ತಿಯನ್ನು ಕಂಡು ಸಂತುಷ್ಟನಾಗಿದ್ದೇನೆ'' ಎಂದು ಹೇಳಿದನು. ಆಗ ಆ ಚಂದ್ರಲೇಖೆಯು ಪತಿಯ ನುಡಿ ಕೇಳಿ ಮುದಿಸಿ ''ಶುಭಕರನಾದ ಪತಿದೇವ ! ನೀನೀಗ ಯೋಗ್ಯವಾದುದನ್ನೇ ಹೇಳಿರುವೆ. ನಾನಿನ್ನು ಮನೆಗೆ ಮರುಳುವೆನು'' ಎಂದು ಹೇಳಿ ಮಾಧವನ ಅಪ್ಪಣೆ ಪಡೆದು ಹೊರಟಳು. ಮಾಧವನು ಪತ್ನಿಯು ಅಲ್ಲಿಂದ ಹೊರಟು ಕಣ್ಮರೆಯಾಗುವವರೆಗೆ ಅಲ್ಲಿಯೇ ನಿಂತನು.

''ಜನಕರಾಜ ! (ಶತಾನಂದರು ಹೇಳುತ್ತಿದ್ದಾರೆ)- ಚಂದ್ರಲೇಖೆಯು ತೆರಳಿದ ಮೇಲೆ ಪಂಚಬಾಣನ ಶರಾಹತಿಗೆ ತುತ್ತಾದ ಮಾಧವನು ಮೆಲ್ಲಮೆಲ್ಲನೆ ಚಂಡಾಲ ಕನ್ಯೆಯಾದ ಕುಂತಳೆಯ ಬಳಿಗೆ ಹೋಗಿ ಸೇರಿದನು. ಅರಳಿದ ಕಣ್ಣುಳ್ಳ ಕುಂತಳೆಯು ಮಾಧವನು ತನ್ನ ಬಳಿ ಸಾರಿದುದನ್ನು ಕಂಡು ಕರ್ಕಶಧ್ವನಿಯಿಂದ ''ಎಲೈ ಮುನಿವರ ! ನನ್ನ ಸನಿಹಕ್ಕೆ ಬರಬೇಡ'' ಎಂದಳು. ಅವಳ ನುಡಿಕೇಳಿ ಮಾಧವನು ''ಶುಭಾಂಗಿ ! ನೀನಾರು? ಯಾರ ಮಗಳು? ನಿನ್ನ ತಾಯಿ ಯಾರು? ವರಾನನೇ ! ನೀನು ವಾಸಮಾಡುವ ದೇಶವಾವುದು? ನಿನಗೆ ಮಂಗಳವಾಗಲಿ'' ಎಂದೆನಲು ಮನಸ್ವಿನಿಯಾದ ಆ ಕುಂತಳೆಯು ಅವನ ಪ್ರಶ್ನೆಗೆ ತನ್ನ ಜಾತಿ ಮುಂತಾದುವನ್ನು ತಿಳಿಸಹತ್ತಿದಳು. ''ಅಯ್ಯಾ ! ನಾನು ಸದಾ ಪಾಪಕಾರ್ಯ ನಿರತಳು. ಅಂತ್ಯಜಕುಲ ಸಂಜಾತೆಯು, ಅಂತ್ಯಜರಾದ ತಾಯಿ ತಂದೆಗಳಿಗೆ ಜನಿಸಿರುವವಳು. ಮದ್ಯ ಮಾಂಸಗಳನ್ನು ಭಕ್ಷಿಸುವ ನೀಚಳಾದ ನನ್ನ ಬಗೆಗೆ ಏಕೆ ಪ್ರಶ್ನಿಸುವೆ? ಹೇ ದ್ವಿಜವರ್ಯ ! ನನ್ನ ವಾಸ ಮಧ್ಯದೇಶದಲ್ಲಿ, ಇದನ್ನೆಲ್ಲಾ ಕೇಳುವ ಕಾರಣವೇನು? ವೇದೋಪನಿಷದಾದಿ ವಿದ್ಯೆಗಳಲ್ಲಿ ಪರಿಣತನಾದ ನೀನು ನನ್ನನ್ನು ನೋಡಲೂಬಾರದು. (ನಿನ್ನ ವರ್ತನೆಯನ್ನು ಕಂಡು ನನಗೆ ಸಂಶಯ ಬರುತ್ತಿದೆ) ಸದಸದ್ವಿವೇಕ (ಯುಕ್ತಾಯುಕ್ತ) ಬುದ್ಧಿಯಿಲ್ಲದ ಹೇ ಬ್ರಾಹ್ಮಣನೇ ! ನನ್ನನ್ನು ಸ್ಪರ್ಶಿಸಲು, ಅಥವಾ ನನ್ನೊಡನೆ ಕ್ರೀಡಿಸಲೂ ಅದೆಂತು ಬಯಸುವೆ?' ಇಂತು ಹೇಳುತ್ತಿರುವ ಕುಂತಳೆಯನ್ನು ಕಾಮದೃಷ್ಟಿಯಿಂದ ನೋಡಿ ಮಾಧವನು - ''ಛೇ, ಬ್ರಹ್ಮದೇವನು ನಾರಾಯಣನಿಗೆ ಜನಿಸಿದ್ದು ವ್ಯರ್ಥ ! ಇಂತಹ ರೂಪ-ಸೌಂದರ್ಯಸಂಪನ್ನಳಾದ ಈ ಕುಂತಳೆಯನ್ನು ಕಾಡುಪಾಲಾಗುವಂತೆ ಮಾಡಿ ವೃಥಾ ಸೃಜಿಸಿದನಲ್ಲ! ಇದನ್ನು ಪರಿಶೀಲಿಸಿದರೆ ಬ್ರಹ್ಮನು ನಿಜವಾಗಿ ಕುರುಡನೇ ಅಹುದು ಎಂದು ನನ್ನ ಮನವು ಸಾರುತ್ತಿದೆ. ಹೂಂ, ಇಷ್ಟಾದರೂ, ಇವಳು ಅಂತ್ಯಜ ಸ್ತ್ರೀಯಾಗಿದ್ದರೂ,

ನನ್ನ ಮನಸ್ಸು ಇವಳಲ್ಲೆ ನೆಟ್ಟುಹೋಗಿದೆ. ಲವಣ ಜಲಧಿಯಲ್ಲಿ ಹುಟ್ಟಿದ ವಿಧವಿಧ ನವರತ್ನಗಳನ್ನು ದೇವತೆಗಳೂ ಸಹ ಅವು ಕಾಂತಿಯುಕ್ತವಾಗಿದೆಯೆಂಬ ಮುಖ್ಯಕಾರಣದಿಂದ ಪರಿಗ್ರಹಿಸುವರಲ್ಲವೇ? ದೇವತೆಗಳು ಕಾಂತಿಯ ಕಾರಣದಿಂದ ರತ್ನಗಳನ್ನು ಸ್ವೀಕರಿಸುವಂತೆ ನಾನೂ ಸಹ, ಕಾಂತಿಸಂಪನ್ನಳೂ, ಸುಕಸುಂದರಿಯೂ ಆದ ಎಲೈ ಕುಂತಳೆಯೇ! ನಿನ್ನನ್ನು ಪರಿಗ್ರಹಿಸಿ ಸಂಭೋಗಿಸುತ್ತೇನೆ! ಸುಂದರ ಮಂದಹಾಸ ಶೋಭಿತಳಾದ ಕುಂತಳೆಯೇ! ನಿನ್ನನ್ನು ಭೋಗಿಸಿದ ಮೇಲೆ ನನ್ನ ಪಾಪಕಾರ್ಯದಿಂದ ಈ ಲೋಕವನ್ನು ತ್ಯಜಿಸಿದ ಮೇಲೆ ನನ್ನ ಪಿತೃವರ್ಗದಿಂದೊಡಗೂಡಿ ನರಕಕ್ಕೆ ಹೋಗಲೂ ಸಿದ್ಧ ! ಈ ಕಾರ್ಯದಿಂದ ನರಕಪ್ರಾಪ್ತಿಯಾದರೂ ಆಗಲಿ ನಾನು ಸಿದ್ಧನಾಗಿದ್ದೇನೆ'' ಎಂದು ಬಡಬಡಿಸಿದನು. ॥ 146 ॥

ತನ್ನ ಮಡದಿಯನ್ನು ಮನೆಗೆ ಕಳುಹಿಸಿದ ಮಾಧವನು ಅಂತ್ಯಜಳಾದ ಕುಂತಳೆಯ ರೂಪಲಾವಣ್ಯಾದಿಗಳಿಗೆ ಮಾರುಹೋಗಿ ಅವಳ ಅಂಗಸಂಗವನ್ನು ಬಯಸಿ ಅವಳಿಂದ ತಿರಸ್ಕೃತನಾದನು. ಆ ತರುವಾಯ ಆಗತಾನೆ ಉದಯಿಸಿದ ಭಾಸ್ಕರನ ಸಾರಥಿಯಾದ ಅರುಣನ ಹೊಂಬಣ್ಣದ ಕಾಂತಿಯಿಂದ ಶೋಭಿತಳಾದ ಕುಂತಳೆಯು ಉತ್ತಮ ವರ್ಣದವನೂ, ವೇದವೇದಾಂಗಪಾರಂಗತನೂ, ಕರ್ಮಠನೂ, ಬ್ರಾಹ್ಮಣೋತ್ತಮನೂ ಆದ ಮಾಧವನು ಅನ್ಯಾಯವಾಗಿ ಕೆಟ್ಟು ಹೋಗುವನಲ್ಲಾ ಎಂದು ಅವನ ಒಳಿತಿಗಾಗಿ ಅಳಹತ್ತಿದಳು. ''ಎಲೈ ದೇವತೆಗಳಿರಾ ! ಜಾರಿಣಿಯಾದ ಚಂಡಾಲ ಕನ್ಯೆಯಾದ ನನ್ನ ಸಂಗ ಮಾಡಿ ಪಾಪಿಯಾಗದಂತೆ ಈ ಬ್ರಾಹ್ಮಣನನ್ನು ಕಾಪಾಡಿರಿ ! ಅವನು ಪಾಪ ಕೆಲಸ ಮಾಡದಂತೆ ತಡೆಯಿರಿ. ಅಗ್ನಿ, ಚಂದ್ರಾದಿ ದಿಗ್ದೇವತೆಗಳೇ, ಗಣನಾಯಕನಾದ ವಿಘ್ನೇಶ್ವರ, ಸ್ಥಾವರ ಜಂಗಮಾದಿ ವಸ್ತುಗಳೇ ನನ್ನೀ ವಚನವನ್ನಾಲಿಸಿರಿ, ಬ್ರಾಹ್ಮಣೋತ್ತಮನಾದ ಈ ಮಾಧವನು ಅನ್ಯಾಯವಾಗಿ ಪಾಪಿಷ್ಠಳಾದ, ಅಂತ್ಯಜಳಾದ ನನ್ನ ಸಂಗಮ ಮಾಡಿ ಮರಣಭಾಜನಾಗುವನಲ್ಲಾ ! ಅಯ್ಯಾ, ಬ್ರಾಹ್ಮಣನೇ ! ಪಾಪಿನಿಯೂ ಜಾರಿಣಿಯೂ ಆದ ನನ್ನನ್ನು ಮುಟ್ಟಬೇಡ ಎಂದು, ಹೇಳಿ, ಸಮೀಚೀನ ಮಧ್ಯಪ್ರದೇಶವುಳ್ಳ ಆ ಕುಂತಳೆಯು ಆ ಭೂಸುರನಿಗಾಗಿ ಪ್ರಲಪಿಸಿದಳು. 'ಅಯ್ಯಾ ದ್ವಿಜನೇ ! ಆರ್ತನಾದ (ಆತುರವುಳ್ಳ) ಆದಾವನು ತಾನೆ ಮುಟ್ಟಬಾರದ ಬೆಂಕಿ, ಹುಲಿ, ಮದಿಸಿದ ಕಾಡು ಸಲಗಗಳನ್ನು ಮುಟ್ಟುವನು? ಮತ್ತೊಬ್ಬನ ಮಡದಿಯು ಬೆಂಕಿಗೆ ಸಮಾನಳು. ಅದರಲ್ಲೂ ನಾನು ಚಂಡಾಲ ಸ್ತ್ರೀಯು, ಉತ್ತಮ ವರ್ಣದ ಬ್ರಾಹ್ಮಣ್ಯಪದವನ್ನು ಪಡೆದಿರುವವನು ಹೀನಗತಿ ಅಂದರೆ ನರಕವನ್ನು ಪಡೆಯಬಯಸುವುದಿಲ್ಲ! ಆದರೂ ಎಲೈ ಮಾಧವ ! ಜ್ಞಾನಿಯೂ, ಉತ್ತಮ ಪದವನ್ನು ಪಡೆದವನಾಗಿದ್ದರೂ, ನಿನ್ನ ಬುದ್ಧಿಯು ನಿಕೃಷ್ಟವಾದ ನರಕವನ್ನು ಬಯಸುತ್ತಿದೆಯಲ್ಲಾ ! ಇದಕ್ಕೆ ಏನೆನ್ನಬೇಕೋ ತಿಳಿಯದಾಗಿದೆ.

ಭೂಸುರೋತ್ತಮ ! ಪೂರ್ವದಲ್ಲಿ ಶ್ರೀವಿಷ್ಣುವು ಗಂಡು-ಹೆಣ್ಣು ಎಂಬ ಭೇದದಿಂದ ಎರಡು ಜಾತಿಯನ್ನು; ಬ್ರಹ್ಮ-ಕ್ಷತ್ರಿಯ-ವೈಶ್ಯ-ಶೂದ್ರ ಭೇದದಿಂದ ನಾಲ್ಕು ವರ್ಣ ವಿಭಾಗಪೂರ್ವಕವಾಗಿ ನಿರ್ಮಿಸಿದನು. ಬ್ರಾಹ್ಮಣ ತಾಯಿತಂದೆಗಳಲ್ಲಿ ಜನಿಸಿದ ಬ್ರಾಹ್ಮಣನಿಗೆ, ಬ್ರಾಹ್ಮಣ ಯೋನಿಯಲ್ಲಿ ಜನಿಸಿದ ಬ್ರಾಹ್ಮಣ ಸ್ತ್ರೀಯೇ ಪತ್ನಿಯಾಗಿರತಕ್ಕದ್ದೆಂದೂ, ಇನ್ನುಳಿದ ಕ್ಷತ್ರಿಯ-ವೈಶ್ಯ-ಶೂದ್ರ ವರ್ಣದವರಿಗೆ ಆಯಾ ವರ್ಣದ ಸ್ತ್ರೀಯರೇ ಪತ್ನಿಯರಾಗಿರಬೇಕೆಂದೂ ವ್ಯವಸ್ಥೆ ಮಾಡಿದ್ದಾನೆ. ಹೀಗಿರಲು ಬ್ರಾಹ್ಮಣನು ಸ್ವಜಾತಿಯ ಬ್ರಾಹ್ಮಣ ಸ್ತ್ರೀಯನ್ನು ಪರಿಗ್ರಹಿಸಬೇಕೆಂಬ ಸ್ವಧರ್ಮವನ್ನು ತ್ಯಜಿಸುವಂತಹ ವಿರುದ್ಧಾಚರಣೆಯನ್ನು ನಾನೀಗ ಕಾಣುತ್ತಿದ್ದೇನೆ !

ಹೇ ಭೂಸುರವರ ! ನಿನ್ನ ನನ್ನ ಶರೀರಗಳಿಗಿರುವ ಅಂತರ, ಅವುಗಳ ವೈಶಿಷ್ಟಾದಿಗಳನ್ನು ಸ್ವಲ್ಪ ಹೇಳುತ್ತೇನೆ ಕೇಳು. ನಿನ್ನ ದೇಹವು ಅತಿಶಯ ವೇದಾಧ್ಯಯನ-ಜಪ-ತಪಾದಿಗಳಿಂದ ಪಾವನವಾಗಿದೆ. ಋತುಸ್ನಾನ ಮಾಡಿದ ನಿನ್ನ ತಾಯಿಯು ರಾತ್ರಿ ಎರಡನೆಯಾಮದಲ್ಲಿ ನಿನ್ನ ತಂದೆಯಿಂದ ವೇದಮಂತ್ರಗಳಿಂದ ಪೂತವಾದ ವೀರ್ಯವನ್ನು ಧರಿಸಿದಳು. ಇದಕ್ಕೆ ಗರ್ಭಾದಾನ ಸಂಸ್ಕಾರವೆಂದು ಪ್ರಾಜ್ಞರು ತಿಳಿಯುವರು. ನಿನ್ನ ಮಾತೆಯು ಗರ್ಭಿಣಿಯಾದ ಮೇಲೆ ಏಳನೆಯ ತಿಂಗಳಿನಲ್ಲಿ

ವೇದಮಾತ್ರಗಳಿಂದ ಸೀಮಂತವೆಂಬ ಸಂಸ್ಕಾರವನ್ನು ಹಿರಿಯರು ನೆರವೇರಿಸಿದರು. ಒಂಭತ್ತು ತುಂಬಿ ಹತ್ತನೆಯ ಮಾಸವು ಬಂದಾಗ ನಿನ್ನ ತಾಯಿಯು ನಿನ್ನನ್ನು ಹಡೆದಳು.ಇದೇ ಪ್ರಕಾರವಾಗಿ ಶಾಸ್ತ್ರೋಕ್ತ ಪ್ರಕಾರವಾಗಿ ನಿನ್ನ ಪಿತನು, ಜನಿಸಿದ ನಿನಗೆ ಜಾತಕರ್ಮ ಸಂಸ್ಕಾರವನ್ನು ನೆರವೇರಿಸಿ ಹೆಸರಿಟ್ಟನು (ನಾಮಕರಣ ಮಾಡಿದನು). ಎಂಟನೆಯ ತಿಂಗಳಿನಲ್ಲಿ ಅನ್ನಪ್ರಾಶನ, ಮೂರನೆಯ ವಯಸ್ಸಿನಲ್ಲಿ ಚೌಲ ಮತ್ತು ಅಕ್ಷರಾಭ್ಯಾಸಗಳನ್ನೂ, ಗರ್ಭಾಷ್ಟಮದಲ್ಲಿ ವೈದಿಕ ವಿಧಿಪೂರ್ವಕವಾಗಿ ಉಪನಯನ (ಬ್ರಹ್ಮೋಪದೇಶ) ದ್ವಿಜತ್ವ ಪ್ರಾಪ್ತಿ-ಉತ್ಸವಾದಿಗಳನ್ನು ನೆರವೇರಿಸಿದನು. ಇದರಂತೆ ಗುರುಕುಲವಾಸಮಾಡಿ ಹಿಂದಿರುಗಿದ ನಿನಗೆ ಉತ್ತಮ ಕನ್ಯೆಯನ್ನು ತಂದುಕೊಂಡು ಅಗ್ನಿಸಾಕ್ಷಿಯಾಗಿ ವಿವಾಹಮಾಡಿದನು.

ಇಂತು ಗೃಹಸ್ಥನಾದ ನೀನು ವೇದ-ವೇದಾಂಗಪಾರಂಗತನಾಗಿ, ಮನೆಯಲ್ಲಿ ಆಹಿತಾಗ್ನಿಯನ್ನಿಟ್ಟುಕೊಂಡು ಯಜನವ್ರತ ನಿಯಮ ತತ್ಪರನಾಗಿದ್ದೀಯೆ. ಇಂತು ಪರಮ ಪರಿಶುದ್ಧವಾದ ನಿನ್ನ ಶರೀರದೊಡನೆ, ಪರಿಶುದ್ಧವಲ್ಲದ ನನ್ನ ದೇಹದ ಮಿಲನವು ಹೇಗೆ ಉಂಟಾದೀತು? (ಹೇಗೆ ಘಟಿಸುವುದು)? ನಿನ್ನ ಶರೀರದ ಯೋಗ್ಯತೆ, ಪಾವಿತ್ರ್ಯತೆಗಳನ್ನು ನಿರೂಪಿಸುತ್ತೇನೆ ಆಲಿಸು. ಶ್ರೀಹರಿಯ ಲೀಲಾವಿಲಾಸಮಹಿಮಾದಿಗಳ ಚರಿತೆಯನ್ನು ದಿನಾ ಶ್ರವಣ ಮಾಡುವುದರಿಂದ ನಿನ್ನ ಕಿವಿಗಳು ಪಾವನವಾಗಿವೆ. ಶ್ರೀವಿಷ್ಣುವಿಗೆ ಸಮರ್ಪಿಸಿದ ತುಳಸೀ, ಪುಷ್ಪ, ದೀಪ, ಧೂಪಗಳ ಪರಿಮಳವನ್ನು ಆಘ್ರಾಣಿಸಿ ನಿನ್ನ ನಾಸಿಕವು ಪವಿತ್ರವಾಗಿದೆ. ಮಾಧವ ! ಶ್ರೀರಮಾರಮಣನಾದ ಶ್ರೀಮನ್ನಾರಾಯಣನಿಗೆ ನಿವೇದಿತವಾದ ಪವಿತ್ರಾನ್ನದಿಂದ ನಿನ್ನ ಉದರವು ಪೂರ್ಣವಾಗಿದೆ (ತುಂಬಿದೆ). ಪುರುಷಶ್ರೇಷ್ಠನಾದ ಮಾಧವನೇ! ಶ್ರೀಕೃಷ್ಣ ಪರಮಾತ್ಮನನ್ನು ಪ್ರತಿದಿನ ಪೂಜಿಸುವುದರಿಂದ ನಿನ್ನ ಕರಗಳು ಪಾವನವಾಗಿವೆ. ನಿನ್ನ ನಾಲಿಗೆಯು ಶ್ರೀಹರೇ, ಗೋವಿಂದ, ವಾಸುದೇವ, ಶ್ರೀಕೃಷ್ಣ ಸೀತಾಪತೇ, ಪುರುಷೋತ್ತಮ, ನಾರಾಯಣ ಎಂಬ ಶ್ರೀಭಗವಂತನ ನಾಮೋಚ್ಚಾರದಿಂದ ಪರಿಶುದ್ಧವಾಗಿದೆ. ಬದರಿ, ಕೇದಾರನಾಥ, ಹರಿದ್ವಾರ, ಹೃಷಿಕೇಶ, ಮಥುರಾ, ಬೃಂದಾವನ, ಪೂರಿ ಜಗನ್ನಾಥ, ಕಾಶಿ, ಪ್ರಯಾಗ, ರಾಮೇಶ್ವರ, ಅನಂತಶಯನ, ಶ್ರೀರಂಗ, ಕಂಚಿ ಮುಂತಾದ ಪುಣ್ಯಕ್ಷೇತ್ರಗಳ ಯಾತ್ರಾದಿಗಳಿಂದ ನಿನ್ನ ಪಾದಗಳು ಪಾವನವಾಗಿವೆ. ಇಂತಹ ಪರಿಶುದ್ಧವಾದ ನಿನ್ನ ಶರೀರದೊಡನೆ ಅತಿ ಅಪವಿತ್ರವಾದ ನನ್ನ ದೇಹದ ಮಿಲನವು ಅದೆಂತು ಯೋಗ್ಯವಾದೀತು?

ಅಯ್ಯಾ ಬ್ರಾಹ್ಮಣ ! ನೀನು ಈಗ ನನ್ನ ದೇಹದ ಮಹಿಮೆ (ಯೋಗ್ಯತೆ)ಯನ್ನು ಸ್ವಲ್ಪ ಕೇಳು. ಯಾವಾಗಲೂ ಆಡಬಾರದ ಕ್ರೂರ-ಬಿರುನುಡಿಗಳನ್ನಾಡುವುದರಿಂದಲೇ ನನ್ನ ರಸನೆಯು (ನಾಲಿಗೆಯು) ಸುಡುತ್ತಲಿದೆ. ಸರ್ವದಾ ಮದ್ಯ-ಮಾಂಸಗಳನ್ನು ಭಕ್ಷಿಸುವುದರಿಂದ ನನ್ನ ಹೊಟ್ಟೆ (ಗುಲ್ಮದಂತಾಗಿದೆ) ಉಬ್ಬಿಕೊಂಡಿದೆ. ನನ್ನ ಕರ್ಣಗಳು ಸತತವಾಗಿ ವ್ಯಭಿಚಾರಕ್ಕೆ ಸಂಬಂಧಿಸಿದ ಅಶ್ಲೀಲ ಮಾತುಗಳನ್ನು ಕೇಳಿ, ಕೇಳಿ ಶಿಥಿಲವಾಗಿ ಹೋಗಿದೆ. ನನ್ನೀ ಪಾದಗಳಾದರೋ ವಿಟಪುರುಷರ ಮನೆಗಳಿಗೆ ಹೋಗಿ ಹೋಗಿ ಪಾಷಾಣ ಸದೃಶ (ಕಲ್ಲಿನಂತಾಗಿದೆ)ವಾಗಿದೆ. ನನ್ನ ಕರಗಳು ಗೋವುಗಳನ್ನು ಪ್ರತಿದಿನ ಸಂಹರಿಸುವುದರಿಂದ ಅತಿಕ್ರೂರವೂ ಯಮನ ದಂಡದ ಸಮಾನವಾದ ಕಾಂತಿಯುಕ್ತವೂ ಆಗಿದೆ. ಇಂತಹ ಅಪವಿತ್ರಳೂ, ನೀಚಳೂ ಆದ, ಚಂಡಾಲಳಾದ ನನ್ನ ದೇಹಕ್ಕೆ, ಪರಮಪಾವನವಾದ ನಿನ್ನ ಶರೀರದೊಡನೆ ಸಂಬಂಧವು ಹೇಗೆ ಸಾಧ್ಯವಾದೀತು ? ಉತ್ತಮ ವರ್ಣಸಂಜಾತನು ನೀಚತನವನ್ನು ಹೊಂದಿದಮೇಲೆ ಸ್ವರ್ಗಲೋಕಕ್ಕೆ ಹೋಗುವ ಬಗೆಯೆಂತು? ಮತ್ತೊಬ್ಬನ ಮಡದಿಯ ಮಿಲನದಿಂದ ಮಾನವರನೇಕರು ಮರಣವನ್ನಪ್ಪಿರುವುದು ಪ್ರಸಿದ್ಧವಾಗಿದೆ. ಆದ್ದರಿಂದ ನಿನ್ನ ಕುಬುದ್ಧಿಯನ್ನು ಬಿಟ್ಟು ಎದ್ದೇಳು (ಜಾಗೃತನಾಗು). ನಿನಗೆ ಮಂಗಳವಾಗಲಿ. ನಾನು ನಿನ್ನ ಸೇವಕಳೆಂದು ತಿಳಿ. ಏಕೆಂದರೆ ಸೇವಕಳ ಸಂಗ ಕೂಡದಷ್ಟೇ? -ಮುಂತಾಗಿ ಕುಂತಳೆಯು ಮಾಧವನಿಗೆ ಬುದ್ಧಿ ಹೇಳಿದಳು. ॥ 166 ॥

ಕುಂತಳೆಯ ಮಾತನ್ನಾಲಿಸಿ ಬ್ರಾಹ್ಮಣ ಪುತ್ರನಾದ ಮಾಧವನು ಕುಂತಳೆಯನ್ನು ಕುರಿತು ''ಕುಂತಳೇ! ನಿನ್ನ ಅಂಗಸಂಗವು ಸಾಮಾನ್ಯವಾದುದಲ್ಲ ! ಅನೇಕ ವರ್ಷಗಳ ಕಾಲ ಮಾಡಿದ ಪುಣ್ಯದ (ಧರ್ಮದ) ಮಹಿಮೆಯಿಂದಲೂ,

ದೈವಯೋಗದಿಂದಲೂ, ಶ್ರೀಹರಿಯ ಅನುಗ್ರಹದಿಂದ ದೊರಕಿದ ಶುಭಪ್ರದವಾದ, ಶುಭಕರವಾದ ನಿನ್ನ ಸಂಗಮವು ಧರ್ಮ-ಅರ್ಥ-ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ವಿಧ ಪುರುಷಾರ್ಥಗಳಿಗೆ ಕಾರಣವಾಗಿದೆ ! ಆದ್ದರಿಂದ ಎಲೈ ಭಾಮಿನಿ ! ನನ್ನೊಡನೆ ಕ್ರೀಡಿಸು. ನಾನು ನಿನಗೆ ವಿಧೇಯನಾಗಿ, ಅನುಸರಿಸಿಕೊಂಡಿರುತ್ತೇನೆ ! ಆದ್ದರಿಂದ ನೀನೀಗ ನಾಚಿಕೆಯನ್ನು ಬಿಡು. ಮತ್ತು ನನ್ನ ಮನಸ್ಸಿನ ಕಾಮನೆಯನ್ನು ಪೂರ್ಣಮಾಡು. (ಬೇರೊಂದು ಪ್ರತಿಯ ಪಾಠಾಂತರ-ಸ್ವರ್ಗಲೋಕದಲ್ಲಿಯೂ ದುರ್ಲಭವಾದ ನಿನ್ನ ಸುಂದರಾಕೃತಿಗನುಗುಣವಾದ ನಿನ್ನ ಚೆಂದುಟಿಯ ಅಮೃತಪಾನಕ್ಕಿಂತಲೂ ಹೆಚ್ಚಿನದಾದ ಮತ್ತಾವ ಸುಖವನ್ನೂ ನಾನು ಬಯಸುವುದಿಲ್ಲ !)

ಕುಂತಳೇ! ನಿನ್ನ ಮಿಲನವಿನ್ನೂ ಆಗದಿರುವುದರಿಂದ ಈಗ ನನ್ನ ಪ್ರಾಣಗಳೇ ಹೋಗುತ್ತಿವೆ. ಆದುದರಿಂದ ಮಂಗಳಕರಳೇ, ಮರಣಸನ್ನಿಹಿತನಾಗಿರುವ ನನ್ನನ್ನು ನಿನ್ನ ಅಂಗಸಂಗದಿಂದ ಬದುಕಿಸು'' ಎಂದನು. ಮಾಧವನ ಮಾತುಕೇಳಿ ತುಂಬುನಿತಂಬಿನಿಯಾದ ಆ ಅಂತ್ಯಜಳಾದ ಕುಂತಳೆಯು ''ಇನ್ನು ಇಲ್ಲಿರುವುದು ಯೋಗ್ಯವಲ್ಲ, ಪಲಾಯನ ಮಾಡುವುದೇ ಸೂಕ್ತ'' ಎಂದಾಲೋಚಿಸಿ ಮೆಲ್ಲನೆ ಮೇಲೆದ್ದು ಓಡಹತ್ತಿದಳು. ಆಗ ಮಾಧವನು ಕುಂತಳೆಯನ್ನು ಬೆನ್ನಟ್ಟಿಹೋಗಿ ತಡೆದು ಸ್ಪರ್ಶಿಸಿದನು. ಆಗ ಕುಂತಳೆಯು ''ಬ್ರಾಹ್ಮಣ ಬೇಡ ಬೇಡ, ನನ್ನನ್ನು ಮುಟ್ಟಬೇಡ, ನಿನ್ನ ತಂದೆಯಾಣೆ, ತಾಯಿಯ ಆಣೆ, ಮಾತಾಮಹನ ಆಣೆ-ನನ್ನನ್ನು ಮುಟ್ಟಬೇಡ'' ಎಂದು ಕೂಗುತ್ತಿರುವ ಕುಂತಳೆಯ ಆಣೆ (ಪ್ರಮಾಣ)ವನ್ನು ಲೆಕ್ಕಿಸದೆ ಕಾಮಪೀಡಿತನಾದ ಬ್ರಾಹ್ಮಣನಾದ ಆ ಮಾಧವನು ಕುಂತಳೆಯನ್ನು ಬಲವಂತವಾಗಿ ಹಿಡಿದು ಸಂಭೋಗಿಸಿದನು.

ಸಂಭೋಗಾನಂತರ ಪತಿವ್ರತೆಯಾದ ಕುಂತಳೆಯು ಮಾಧವನನ್ನು ನೋಡಿ, ''ಎಲೈ ಭೂಸುರನೇ, ಇಂದಿನಿಂದ ನೀನು ನನಗೆ ಗಂಡನಾಗಿದ್ದೀಯೆ. ಆದ್ದರಿಂದ ನಿನ್ನ ಜನಿವಾರವನ್ನು ತ್ಯಜಿಸು, ನಿನ್ನ ತಲೆಯನ್ನು ಬೋಳಿಸಿಕೊಂಡು ಚಂಡಾಲನಾಗು! ಅಬ್ರಾಹ್ಮಣ್ಯವನ್ನು ಪಡೆದು ಚಂಡಾಲರಿಗೆ ಉತ್ತಮಾಹಾರವಾದ, ಗೋಮಾಂಸವನ್ನು ಭಕ್ಷಿಸು, ಮತ್ತು ಹೆಂಡವನ್ನು ಕುಡಿ'', ಎಂದು ಹೇಳಿದಳು. ಮಾಧವನು ಅವಳು ಹೇಳಿದಂತೆ ಚಂಡಾಲಾಚಾರವನ್ನೆಸಗುತ್ತಾ ವಿಧಿಯಿಂದ ಪ್ರೇರಿತನಾಗಿ, ಸರ್ವಕಾರ್ಯವನ್ನೂ ಅಂದರೆ ಯಜ್ಞೋಪವೀತವನ್ನು ಕಿತ್ತೆಸೆದು, ತಲೆಯನ್ನು ಬೋಳಿಸಿಕೊಂಡು, ಗೋಮಾಂಸವನ್ನು ತಿಂದು ಮದ್ಯಪಾನ ಮಾಡಿದನು. ಆನಂತರ ಮಾಧವನು ಕುಂತಳೆಯಿಂದೊಡಗೂಡಿ, ಕಾಳಹಸ್ತಿ ಪಟ್ಟಣವನ್ನು ಬಿಟ್ಟು ಕೃಷ್ಣವೇಣಿ ನದಿಯ ತೀರದಲ್ಲಿರುವ ಒಂದು ಸ್ಥಳಕ್ಕೆ ಹೊರಟುಹೋದನು. ।। 176 ।।

(ಗ್ರಂಥಾಂತರ ಪದ್ಯಗಳ ಭಾವ-ಮಾಧವನು ಕುಂತಳೆಯ ನುಡಿ ಕೇಳಿ ಅವಳು ಹೇಳಿದಂತೆ ಮಾಡಿ, ಅವಳೊಡನೆ, ಕೃಷ್ಣವೇಣಿ ನದಿಯ ಸನಿಹದ ಪ್ರದೇಶಕ್ಕೆ ಹೋದನು. ಮತ್ತು ಮದ್ಯಪಾನ-ಮಾಂಸಭಕ್ಷಣ ಮಾಡುತ್ತಾ ಮೂಢ ಬುದ್ಧಿಯಾದ ಮಾಧವನು ಅವಳೊಡನೆ ಕ್ರೀಡಿಸುತ್ತಾ ಕಾಲಕಳೆದನು.)

ಮಾಧವನು ಕುಂತಳೆಯ ಅಂಗಸಂಗದ ಮೋಹದಿಂದ ಪರವಶನಾಗಿ ಅವಳೊಡನೆ ವಿಹರಿಸುತ್ತಾ ಹನ್ನೆರಡು ವರ್ಷಗಳವರೆಗೆ ಕಾಲಕಳೆದನು. ಜನಕ ಮಹಾರಾಜ! ಮಾನವ ಶರೀರವು ಅಶಾಶ್ವತವಾದ್ದರಿಂದ ಕಾಲನ ಕರಾಳಪಾಶಕ್ಕೆ ಸಿಲುಕಿದ, ಕರಿಗೂದಲಿನಿಂದ ಶೋಭಿಸುತ್ತಿದ್ದ ಕುಂತಳೆಯು ಒಂದು ದಿನ ಮರಣವನ್ನಪ್ಪಿದಳು. ಪ್ರಿಯಕರಳಾದ ಕುಂತಳೆಯು ಮೃತಳಾದ್ದರಿಂದ ಅವಳ ವಿಯೋಗ ದುಃಖದಿಂದ ಕಾತರನಾದ, ಪಾಪರೂಪ ವಿಷಪೂರಿತನಾದ ಮಾಧವನು ಹುಚ್ಚನಂತೆ ಅಲೆದಾಡುತ್ತಾ ಭೂಮಿಯಲ್ಲೆಲ್ಲಾ ತಿರುಗಹತ್ತಿದನು. ಅದೇ ಸಮಯಕ್ಕೆ ಸರಿಯಾಗಿ ದೇವೇಚ್ಛೆಯಿಂದ ಉತ್ತರದೇಶದ ಪ್ರಸಿದ್ಧರಾದ ರಾಜರ ಗುಂಪೊಂದು ತೀರ್ಥಕ್ಷೇತ್ರ ಯಾತ್ರೆಯನ್ನು ಕೈಗೊಂಡು ಶ್ರೀ ವರಾಹದೇವರ ಬೆಟ್ಟಕ್ಕೆ ಹೊರಟರು. ಮಾಧವನು ಮಾರ್ಗಮಧ್ಯದಲ್ಲಿ ಹುಚ್ಚನಂತೆ ಅಲೆಯುತ್ತಿರುವಾಗ ಅವರನ್ನು ಕಂಡನು. ಮಾಧವನೂ ಅವರನ್ನು ಅನುಸರಿಸಿ ಹೋಗುತ್ತಾ ಅವರು ಉಂಡುಳಿದ ಎಂಜಲನ್ನವನ್ನು ತಿನ್ನುತ್ತಾ ದೈವಯೋಗದಿಂದ ಅವರೊಡನೆ ಸಪ್ತಗಿರಿಗೆ (ಶೇಷಗಿರಿಗೆ)

ವೇದಮಾತ್ರಗಳಿಂದ ಸೀಮಂತವೆಂಬ ಸಂಸ್ಕಾರವನ್ನು ಹಿರಿಯರು ನೆರವೇರಿಸಿದರು. ಒಂಭತ್ತು ತುಂಬಿ ಹತ್ತನೆಯ ಮಾಸವು ಬಂದಾಗ ನಿನ್ನ ತಾಯಿಯು ನಿನ್ನನ್ನು ಹಡೆದಳು.ಇದೇ ಪ್ರಕಾರವಾಗಿ ಶಾಸ್ತ್ರೋಕ್ತ ಪ್ರಕಾರವಾಗಿ ನಿನ್ನ ಪಿತನು, ಜನಿಸಿದ ನಿನಗೆ ಜಾತಕರ್ಮ ಸಂಸ್ಕಾರವನ್ನು ನೆರವೇರಿಸಿ ಹೆಸರಿಟ್ಟನು (ನಾಮಕರಣ ಮಾಡಿದನು). ಎಂಟನೆಯ ತಿಂಗಳಿನಲ್ಲಿ ಅನ್ನಪ್ರಾಶನ, ಮೂರನೆಯ ವಯಸ್ಸಿನಲ್ಲಿ ಚೌಲ ಮತ್ತು ಅಕ್ಷರಾಭ್ಯಾಸಗಳನ್ನೂ, ಗರ್ಭಾಷ್ಟಮದಲ್ಲಿ ವೈದಿಕ ವಿಧಿಪೂರ್ವಕವಾಗಿ ಉಪನಯನ (ಬ್ರಹ್ಮೋಪದೇಶ) ದ್ವಿಜತ್ವ ಪ್ರಾಪ್ತಿ-ಉತ್ಸವಾದಿಗಳನ್ನು ನೆರವೇರಿಸಿದನು. ಇದರಂತೆ ಗುರುಕುಲವಾಸಮಾಡಿ ಹಿಂದಿರುಗಿದ ನಿನಗೆ ಉತ್ತಮ ಕನ್ಯೆಯನ್ನು ತಂದುಕೊಂಡು ಅಗ್ನಿಸಾಕ್ಷಿಯಾಗಿ ವಿವಾಹಮಾಡಿದನು.

ಇಂತು ಗೃಹಸ್ಥನಾದ ನೀನು ವೇದ-ವೇದಾಂಗಪಾರಂಗತನಾಗಿ, ಮನೆಯಲ್ಲಿ ಆಹಿತಾಗ್ನಿಯನ್ನಿಟ್ಟುಕೊಂಡು ಯಜನವ್ರತ ನಿಯಮ ತತ್ಪರನಾಗಿದ್ದೀಯೆ. ಇಂತು ಪರಮ ಪರಿಶುದ್ಧವಾದ ನಿನ್ನ ಶರೀರದೊಡನೆ, ಪರಿಶುದ್ಧವಲ್ಲದ ನನ್ನ ದೇಹದ ಮಿಲನವು ಹೇಗೆ ಉಂಟಾದೀತು? (ಹೇಗೆ ಘಟಿಸುವುದು)? ನಿನ್ನ ಶರೀರದ ಯೋಗ್ಯತೆ, ಪಾವಿತ್ರ್ಯತೆಗಳನ್ನು ನಿರೂಪಿಸುತ್ತೇನೆ ಆಲಿಸು. ಶ್ರೀಹರಿಯ ಲೀಲಾವಿಲಾಸಮಹಿಮಾದಿಗಳ ಚರಿತೆಯನ್ನು ದಿನಾ ಶ್ರವಣ ಮಾಡುವುದರಿಂದ ನಿನ್ನ ಕಿವಿಗಳು ಪಾವನವಾಗಿವೆ. ಶ್ರೀವಿಷ್ಣುವಿಗೆ ಸಮರ್ಪಿಸಿದ ತುಳಸೀ, ಪುಷ್ಪ, ದೀಪ, ಧೂಪಗಳ ಪರಿಮಳವನ್ನು ಆಘ್ರಾಣಿಸಿ ನಿನ್ನ ನಾಸಿಕವು ಪವಿತ್ರವಾಗಿದೆ. ಮಾಧವ ! ಶ್ರೀರಮಾರಮಣನಾದ ಶ್ರೀಮನ್ನಾರಾಯಣನಿಗೆ ನಿವೇದಿತವಾದ ಪವಿತ್ರಾನ್ನದಿಂದ ನಿನ್ನ ಉದರವು ಪೂರ್ಣವಾಗಿದೆ (ತುಂಬಿದೆ). ಪುರುಷಶ್ರೇಷ್ಠನಾದ ಮಾಧವನೇ! ಶ್ರೀಕೃಷ್ಣ ಪರಮಾತ್ಮನನ್ನು ಪ್ರತಿದಿನ ಪೂಜಿಸುವುದರಿಂದ ನಿನ್ನ ಕರಗಳು ಪಾವನವಾಗಿವೆ. ನಿನ್ನ ನಾಲಿಗೆಯು ಶ್ರೀಹರೇ, ಗೋವಿಂದ, ವಾಸುದೇವ, ಶ್ರೀಕೃಷ್ಣ ಸೀತಾಪತೇ, ಪುರುಷೋತ್ತಮ, ನಾರಾಯಣ ಎಂಬ ಶ್ರೀಭಗವಂತನ ನಾಮೋಚ್ಚಾರದಿಂದ ಪರಿಶುದ್ಧವಾಗಿದೆ. ಬದರಿ, ಕೇದಾರನಾಥ, ಹರಿದ್ವಾರ, ಹೃಷಿಕೇಶ, ಮಥುರಾ, ಬೃಂದಾವನ, ಪೂರಿ ಜಗನ್ನಾಥ, ಕಾಶಿ, ಪ್ರಯಾಗ, ರಾಮೇಶ್ವರ, ಅನಂತಶಯನ, ಶ್ರೀರಂಗ, ಕಂಚಿ ಮುಂತಾದ ಪುಣ್ಯಕ್ಷೇತ್ರಗಳ ಯಾತ್ರಾದಿಗಳಿಂದ ನಿನ್ನ ಪಾದಗಳು ಪಾವನವಾಗಿವೆ. ಇಂತಹ ಪರಿಶುದ್ಧವಾದ ನಿನ್ನ ಶರೀರದೊಡನೆ ಅತಿ ಅಪವಿತ್ರವಾದ ನನ್ನ ದೇಹದ ಮಿಲನವು ಅದೆಂತು ಯೋಗ್ಯವಾದೀತು?

ಅಯ್ಯಾ ಬ್ರಾಹ್ಮಣ ! ನೀನು ಈಗ ನನ್ನ ದೇಹದ ಮಹಿಮೆ (ಯೋಗ್ಯತೆ)ಯನ್ನು ಸ್ವಲ್ಪ ಕೇಳು. ಯಾವಾಗಲೂ ಆಡಬಾರದ ಕ್ರೂರ-ಬಿರುನುಡಿಗಳನ್ನಾಡುವುದರಿಂದಲೇ ನನ್ನ ರಸನೆಯು (ನಾಲಿಗೆಯು) ಸುಡುತ್ತಲಿದೆ. ಸರ್ವದಾ ಮದ್ಯ-ಮಾಂಸಗಳನ್ನು ಭಕ್ಷಿಸುವುದರಿಂದ ನನ್ನ ಹೊಟ್ಟೆ (ಗುಲ್ಮದಂತಾಗಿದೆ) ಉಬ್ಬಿಕೊಂಡಿದೆ. ನನ್ನ ಕರ್ಣಗಳು ಸತತವಾಗಿ ವ್ಯಭಿಚಾರಕ್ಕೆ ಸಂಬಂಧಿಸಿದ ಅಶ್ಲೀಲ ಮಾತುಗಳನ್ನು ಕೇಳಿ, ಕೇಳಿ ಶಿಥಿಲವಾಗಿ ಹೋಗಿದೆ. ನನ್ನೀ ಪಾದಗಳಾದರೋ ವಿಟಪುರುಷರ ಮನೆಗಳಿಗೆ ಹೋಗಿ ಹೋಗಿ ಪಾಷಾಣ ಸದೃಶ (ಕಲ್ಲಿನಂತಾಗಿದೆ)ವಾಗಿದೆ. ನನ್ನ ಕರಗಳು ಗೋವುಗಳನ್ನು ಪ್ರತಿದಿನ ಸಂಹರಿಸುವುದರಿಂದ ಅತಿಕ್ರೂರವೂ ಯಮನ ದಂಡದ ಸಮಾನವಾದ ಕಾಂತಿಯುಕ್ತವೂ ಆಗಿದೆ. ಇಂತಹ ಅಪವಿತ್ರಳೂ, ನೀಚಳೂ ಆದ, ಚಂಡಾಲಳಾದ ನನ್ನ ದೇಹಕ್ಕೆ, ಪರಮಪಾವನವಾದ ನಿನ್ನ ಶರೀರದೊಡನೆ ಸಂಬಂಧವು ಹೇಗೆ ಸಾಧ್ಯವಾದೀತು ? ಉತ್ತಮ ವರ್ಣಸಂಜಾತನು ನೀಚತನವನ್ನು ಹೊಂದಿದಮೇಲೆ ಸ್ವರ್ಗಲೋಕಕ್ಕೆ ಹೋಗುವ ಬಗೆಯೆಂತು? ಮತ್ತೊಬ್ಬನ ಮಡದಿಯ ಮಿಲನದಿಂದ ಮಾನವರನೇಕರು ಮರಣವನ್ನಪ್ಪಿರುವುದು ಪ್ರಸಿದ್ಧವಾಗಿದೆ. ಆದ್ದರಿಂದ ನಿನ್ನ ಕುಬುದ್ಧಿಯನ್ನು ಬಿಟ್ಟು ಎದ್ದೇಳು (ಜಾಗೃತನಾಗು). ನಿನಗೆ ಮಂಗಳವಾಗಲಿ. ನಾನು ನಿನ್ನ ಸೇವಕಳೆಂದು ತಿಳಿ. ಏಕೆಂದರೆ ಸೇವಕಳ ಸಂಗ ಕೂಡದಷ್ಟೇ? -ಮುಂತಾಗಿ ಕುಂತಳೆಯು ಮಾಧವನಿಗೆ ಬುದ್ಧಿ ಹೇಳಿದಳು. ॥ 166 ॥

ಕುಂತಳೆಯ ಮಾತನ್ನಾಲಿಸಿ ಬ್ರಾಹ್ಮಣ ಪುತ್ರನಾದ ಮಾಧವನು ಕುಂತಳೆಯನ್ನು ಕುರಿತು ''ಕುಂತಳೇ! ನಿನ್ನ ಅಂಗಸಂಗವು ಸಾಮಾನ್ಯವಾದುದಲ್ಲ ! ಅನೇಕ ವರ್ಷಗಳ ಕಾಲ ಮಾಡಿದ ಪುಣ್ಯದ (ಧರ್ಮದ) ಮಹಿಮೆಯಿಂದಲೂ,

ದೈವಯೋಗದಿಂದಲೂ, ಶ್ರೀಹರಿಯ ಅನುಗ್ರಹದಿಂದ ದೊರಕಿದ ಶುಭಪ್ರದವಾದ, ಶುಭಕರವಾದ ನಿನ್ನ ಸಂಗಮವು ಧರ್ಮ-ಅರ್ಥ-ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ವಿಧ ಪುರುಷಾರ್ಥಗಳಿಗೆ ಕಾರಣವಾಗಿದೆ ! ಆದ್ದರಿಂದ ಎಲೈ ಭಾಮಿನಿ ! ನನ್ನೊಡನೆ ಕ್ರೀಡಿಸು. ನಾನು ನಿನಗೆ ವಿಧೇಯನಾಗಿ, ಅನುಸರಿಸಿಕೊಂಡಿರುತ್ತೇನೆ ! ಆದ್ದರಿಂದ ನೀನೀಗ ನಾಚಿಕೆಯನ್ನು ಬಿಡು. ಮತ್ತು ನನ್ನ ಮನಸ್ಸಿನ ಕಾಮನೆಯನ್ನು ಪೂರ್ಣಮಾಡು. (ಬೇರೊಂದು ಪ್ರತಿಯ ಪಾಠಾಂತರ-ಸ್ವರ್ಗಲೋಕದಲ್ಲಿಯೂ ದುರ್ಲಭವಾದ ನಿನ್ನ ಸುಂದರಾಕೃತಿಗನುಗುಣವಾದ ನಿನ್ನ ಚೆಂದುಟಿಯ ಅಮೃತಪಾನಕ್ಕಿಂತಲೂ ಹೆಚ್ಚಿನದಾದ ಮತ್ತಾವ ಸುಖವನ್ನೂ ನಾನು ಬಯಸುವುದಿಲ್ಲ !)

ಕುಂತಳೇ! ನಿನ್ನ ಮಿಲನವಿನ್ನೂ ಆಗದಿರುವುದರಿಂದ ಈಗ ನನ್ನ ಪ್ರಾಣಗಳೇ ಹೋಗುತ್ತಿವೆ. ಆದುದರಿಂದ ಮಂಗಳಕರಳೇ, ಮರಣಸನ್ನಿಹಿತನಾಗಿರುವ ನನ್ನನ್ನು ನಿನ್ನ ಅಂಗಸಂಗದಿಂದ ಬದುಕಿಸು'' ಎಂದನು. ಮಾಧವನ ಮಾತುಕೇಳಿ ತುಂಬುನಿತಂಬಿನಿಯಾದ ಆ ಅಂತ್ಯಜಳಾದ ಕುಂತಳೆಯು ''ಇನ್ನು ಇಲ್ಲಿರುವುದು ಯೋಗ್ಯವಲ್ಲ, ಪಲಾಯನ ಮಾಡುವುದೇ ಸೂಕ್ತ'' ಎಂದಾಲೋಚಿಸಿ ಮೆಲ್ಲನೆ ಮೇಲೆದ್ದು ಓಡಹತ್ತಿದಳು. ಆಗ ಮಾಧವನು ಕುಂತಳೆಯನ್ನು ಬೆನ್ನಟ್ಟಿಹೋಗಿ ತಡೆದು ಸ್ಪರ್ಶಿಸಿದನು. ಆಗ ಕುಂತಳೆಯು ''ಬ್ರಾಹ್ಮಣ ಬೇಡ ಬೇಡ, ನನ್ನನ್ನು ಮುಟ್ಟಬೇಡ, ನಿನ್ನ ತಂದೆಯಾಣೆ, ತಾಯಿಯ ಆಣೆ, ಮಾತಾಮಹನ ಆಣೆ-ನನ್ನನ್ನು ಮುಟ್ಟಬೇಡ'' ಎಂದು ಕೂಗುತ್ತಿರುವ ಕುಂತಳೆಯ ಆಣೆ (ಪ್ರಮಾಣ)ವನ್ನು ಲೆಕ್ಕಿಸದೆ ಕಾಮಪೀಡಿತನಾದ ಬ್ರಾಹ್ಮಣನಾದ ಆ ಮಾಧವನು ಕುಂತಳೆಯನ್ನು ಬಲವಂತವಾಗಿ ಹಿಡಿದು ಸಂಭೋಗಿಸಿದನು.

ಸಂಭೋಗಾನಂತರ ಪತಿವ್ರತೆಯಾದ ಕುಂತಳೆಯು ಮಾಧವನನ್ನು ನೋಡಿ, ''ಎಲೈ ಭೂಸುರನೇ, ಇಂದಿನಿಂದ ನೀನು ನನಗೆ ಗಂಡನಾಗಿದ್ದೀಯೆ. ಆದ್ದರಿಂದ ನಿನ್ನ ಜನಿವಾರವನ್ನು ತ್ಯಜಿಸು, ನಿನ್ನ ತಲೆಯನ್ನು ಬೋಳಿಸಿಕೊಂಡು ಚಂಡಾಲನಾಗು! ಅಬ್ರಾಹ್ಮಣ್ಯವನ್ನು ಪಡೆದು ಚಂಡಾಲರಿಗೆ ಉತ್ತಮಾಹಾರವಾದ, ಗೋಮಾಂಸವನ್ನು ಭಕ್ಷಿಸು, ಮತ್ತು ಹೆಂಡವನ್ನು ಕುಡಿ'', ಎಂದು ಹೇಳಿದಳು. ಮಾಧವನು ಅವಳು ಹೇಳಿದಂತೆ ಚಂಡಾಲಾಚಾರವನ್ನನುಸರಿಸುತ್ತಾ ವಿಧಿಯಿಂದ ಪ್ರೇರಿತನಾಗಿ, ಸರ್ವಕಾರ್ಯವನ್ನೂ ಅಂದರೆ ಯಜ್ಞೋಪವೀತವನ್ನು ಕಿತ್ತೆಸೆದು, ತಲೆಯನ್ನು ಬೋಳಿಸಿಕೊಂಡು, ಗೋಮಾಂಸವನ್ನು ತಿಂದು ಮದ್ಯಪಾನ ಮಾಡಿದನು. ಆನಂತರ ಮಾಧವನು ಕುಂತಳೆಯಿಂದೊಡಗೂಡಿ, ಕಾಳಹಸ್ತಿ ಪಟ್ಟಣವನ್ನು ಬಿಟ್ಟು ಕೃಷ್ಣವೇಣಿ ನದಿಯ ತೀರದಲ್ಲಿರುವ ಒಂದು ಸ್ಥಳಕ್ಕೆ ಹೊರಟುಹೋದನು. ।। 176 ।।

(ಗ್ರಂಥಾಂತರ ಪದ್ಯಗಳ ಭಾವ-ಮಾಧವನು ಕುಂತಳೆಯ ನುಡಿ ಕೇಳಿ ಅವಳು ಹೇಳಿದಂತೆ ಮಾಡಿ, ಅವಳೊಡನೆ, ಕೃಷ್ಣವೇಣಿ ನದಿಯ ಸನಿಹದ ಪ್ರದೇಶಕ್ಕೆ ಹೋದನು. ಮತ್ತು ಮದ್ಯಪಾನ-ಮಾಂಸಭಕ್ಷಣ ಮಾಡುತ್ತಾ ಮೂಢ ಬುದ್ಧಿಯಾದ ಮಾಧವನು ಅವಳೊಡನೆ ಕ್ರೀಡಿಸುತ್ತಾ ಕಾಲಕಳೆದನು.)

ಮಾಧವನು ಕುಂತಳೆಯ ಅಂಗಸಂಗದ ಮೋಹದಿಂದ ಪರವಶನಾಗಿ ಅವಳೊಡನೆ ವಿಹರಿಸುತ್ತಾ ಹನ್ನೆರಡು ವರ್ಷಗಳವರೆಗೆ ಕಾಲಕಳೆದನು. ಜನಕ ಮಹಾರಾಜ! ಮಾನವ ಶರೀರವು ಅಶಾಶ್ವತವಾದ್ದರಿಂದ ಕಾಲನ ಕರಾಳಪಾಶಕ್ಕೆ ಸಿಲುಕಿದ, ಕರಿಗೂದಲಿನಿಂದ ಶೋಭಿಸುತ್ತಿದ್ದ ಕುಂತಳೆಯು ಒಂದು ದಿನ ಮರಣವನ್ನಪ್ಪಿದಳು. ಪ್ರಿಯಕರಳಾದ ಕುಂತಳೆಯು ಮೃತಳಾದ್ದರಿಂದ ಅವಳ ವಿಯೋಗ ದುಃಖದಿಂದ ಕಾತರನಾದ, ಪಾಪರೂಪ ವಿಷಪೂರಿತನಾದ ಮಾಧವನು ಹುಚ್ಚನಂತೆ ಅಲೆದಾಡುತ್ತಾ ಭೂಮಿಯಲ್ಲೆಲ್ಲಾ ತಿರುಗಹತ್ತಿದನು. ಅದೇ ಸಮಯಕ್ಕೆ ಸರಿಯಾಗಿ ದೇವೇಚ್ಛೆಯಿಂದ ಉತ್ತರದೇಶದ ಪ್ರಸಿದ್ಧರಾದ ರಾಜರ ಗುಂಪೊಂದು ತೀರ್ಥಕ್ಷೇತ್ರ ಯಾತ್ರೆಯನ್ನು ಕೈಗೊಂಡು ಶ್ರೀ ವರಾಹದೇವರ ಬೆಟ್ಟಕ್ಕೆ ಹೊರಟರು. ಮಾಧವನು ಮಾರ್ಗಮಧ್ಯದಲ್ಲಿ ಹುಚ್ಚನಂತೆ ಅಲೆಯುತ್ತಿರುವಾಗ ಅವರನ್ನು ಕಂಡನು. ಮಾಧವನೂ ಅವರನ್ನು ಅನುಸರಿಸಿ ಹೋಗುತ್ತಾ ಅವರು ಉಂಡುಳಿದ ಎಂಜಲನ್ನವನ್ನು ತಿನ್ನುತ್ತಾ ದೈವಯೋಗದಿಂದ ಅವರೊಡನೆ ಸಪ್ತಗಿರಿಗೆ (ಶೇಷಗಿರಿಗೆ)

ಬಂದನು. ಆ ಶೇಷಾಚಲದಲ್ಲಿ ಆ ಔತ್ತರೇಯ ರಾಜರು ಕಪಿಲತೀರ್ಥದಲ್ಲಿ ಸ್ನಾನಮಾಡಿ, ಭಕ್ತಿಯುಕ್ತರಾಗಿ, ತೀರ್ಥಕ್ಷೇತ್ರ ನಿಯಮದಂತೆ ಆದರದಿಂದ ಮುಂಡನ ಮಾಡಿಸಿಕೊಂಡರು. ಮತ್ತು ಆ ನರಪತಿಗಳು, ಹರ್ಷಭರಿತರಾಗಿ ಪಿಂಡಪ್ರದಾನ ಮಾಡಿದರು. ಮಾಧವನೂ ಸಹ ಮಂಗಳಕರವಾದ ಕಪಿಲತೀರ್ಥದಲ್ಲಿ ಶಿರೋಮುಂಡನಪೂರ್ವಕವಾಗಿ ಸ್ನಾನಮಾಡಿ, ಮಣ್ಣಿನಿಂದ ಪಿಂಡಗಳನ್ನು ಮಾಡಿ ಶ್ರದ್ಧೆಯಿಂದ ಪಿತೃಗಳಿಗೆ ಪಿಂಡಪ್ರದಾನ ಮಾಡಿದನು. ದೈವೇಚ್ಛೆಯಿಂದಲೋ ಅಥವಾ ಪೂರ್ವಜನ್ಮದಲ್ಲಿಮಾಡಿದ ಸುಕೃತ ಕರ್ಮಗಳ ಫಲದಿಂದಲೋ ಮಾಧವನ ಪಾಪಗಳೆಲ್ಲವೂ ಪರಿಹಾರವಾಯಿತು. ಮಾಧವನು ಪಾಪರಹಿತನಾದನು. ಆದುದರಿಂದ ಯಾವ ಮಾನವನೇ ಆಗಲಿ ಭಕ್ತಿಯಿಂದ ಕಪಿಲತೀರ್ಥದ ಪುಣ್ಯಜಲದಲ್ಲಿ ಅವಗಾಹನ ಸ್ನಾನ ಮಾಡಿದಲ್ಲಿ ಅಂಥವನು ಮೋಕ್ಷವನ್ನು ಪಡೆಯುವನು. ಅನಾದಿಯೂ ಪುಣ್ಯಪ್ರದವೂ ಆದ ವೇಂಕಟಗಿರಿಯಲ್ಲಿ ಮಾಧವನು ಮಣ್ಣಿನ ಪಿಂಡಮಾಡಿ ಪಿತೃಗಳಿಗೆ ನೀಡಿದನು. ಆಹಾ, ಪರಮಪುರುಷನಾದ ಶ್ರೀಹರಿಪರಮಾತ್ಮನ ವೇಂಕಟಗಿರಿ ಕ್ಷೇತ್ರದ ಪುಣ್ಯತೀರ್ಥದ ಪುಣ್ಯಪದ ಸಾಮರ್ಥ್ಯವನ್ನು ಏನೆಂದು ವರ್ಣಿಸೋಣ! ಕೇವಲ ಮಣ್ಣಿನ ಪಿಂಡದಾನ ಮಾತ್ರದಿಂದಲೇ, ಮಾಧವನ ತಂದೆ, ತಾತ, ಮುತ್ತಜ್ಜ ಮೊದಲಾದ ಪಿತೃಗಳು ಮುರಾಸುರನ ಶತ್ರುವಾದ ಶ್ರೀಹರಿಯ ಆಜ್ಞೆಯಿಂದ ಶಾಶ್ವತಸುಖವನ್ನು (ಮೋಕ್ಷವನ್ನು) ಪಡೆದು ಸುಖಿಸಿದರು !

ರಾಜೋತ್ತಮನಾದ ಜನಕರಾಯ ! ಆ ಮರುದಿನ ನಿರ್ಮಲ ಪ್ರಾತಃಕಾಲವಾಗುತ್ತಿರಲು ಪುತ್ರ, ಮಿತ್ರ, ಬಂಧುಗಳಿಂದ ಸಹಿತರಾದ ಆ ಎಲ್ಲ ರಾಜರೂ ಶ್ರೇಷ್ಠ ಪರ್ವತವಾದ ವೇಂಕಟಗಿರಿಯನ್ನು ಏರಿ, ಅಲ್ಲಲ್ಲಿ ಇಳಿದುಕೊಂಡು ವಿಶ್ರಾಂತಿ ಪಡೆದರು. ಆ ಮಾಧವನೂ ಆ ರಾಜರನ್ನನುಸರಿಸಿ ಶೇಷಾಚಲವನ್ನು ತಲುಪಿದನು. ಭೂಸುರವರನಾದ ಆ ಮಾಧವನೂ ಸಹ ಪರ್ವತದ ಶಿರೋಭಾಗದಲ್ಲಿ ಉಳಿದನು. ಏನಾಶ್ಚರ್ಯ! ವೇಂಕಟಗಿರಿಯ ಸ್ಪರ್ಶಮಾತ್ರದಿಂದ ಮಾಧವನಲ್ಲಿ ಮನೆಮಾಡಿದ್ದ ಪಾಪವು ಪರಿತಪಿಸಿತು (ಕುದಿಯಿತು). ನೊಣ ನುಂಗುವುದರಿಂದ ಹೇಗೆ ಹೊಟ್ಟೆ ತೊಳೆಸಿ ವಾಂತಿಯಾಗಿ ಸಂಕಟವಾಗುವುದೋ ಅದರಂತೆ ಮಾಧವನಿಗೂ ನೊಣ ನುಂಗಿದಂತೆ ಸಂಕಟವಾಗಿ ತನ್ನ ಪಾಪವನ್ನು ಅವನು ವಾಂತಿ ಮಾಡಿಕೊಂಡನು. ಹೊರಬಂದ ಪಾಪರೂಪವಾದ ವಾಂತಿಯು ಅವನನ್ನು ಸುತ್ತುವರೆದು (ಅವನ ಸುತ್ತಮುತ್ತಲೂ) ಹರಿಯಿತು. ಆಗ ವೇಂಕಟಗಿರಿಯ ಮಹಿಮೆಯಿಂದ ಅವನ ದೇಹದಿಂದ ಉದ್ಭವಿಸಿದ ಒಂದಾನೊಂದು ಬೆಂಕಿಯು ಪ್ರಜ್ವಲಿಸಿ, ಮದ್ಯಮಾಂಸ ಭಕ್ಷಣದಿಂದುಂಟಾದ ಪಾಪವನ್ನು ಸುಟ್ಟುಹಾಕಿತು !

ಆಗ ಮಾಧವನ ಪಾಪದಹನದಿಂದುಂಟಾದ ದುರ್ವಾಸನೆಯ ದಟ್ಟಹೊಗೆಯಿಂದ ಸಕಲ ದೇವತೆಗಳೂ ತೊಂದರೆಗೊಳಗಾಗಿ ಭಯಗೊಂಡರು. ಮಾಧವನು ತನ್ನ ಪಾಪವನ್ನು ಶಮನ ಮಾಡಿಕೊಂಡ ವಿಷಯವನ್ನು ತಿಳಿದ (ಅಥವಾ ಪಾಪರಹಿತನಾದ ತನ್ನ ಉದ್ಧಾರವಾಗಬೇಕೆಂದು ಬಯಸಿದ ಅವನ ಭಾವವನ್ನರಿತು) ಬ್ರಹ್ಮ-ರುದ್ರಾದಿ ದೇವತೆಗಳು ಚಿತ್ರವಿಚಿತ್ರ ವಿಮಾನಗಳನ್ನೇರಿ ಕುಳಿತು ದಿಕ್ಕುಗಳನ್ನು ತಮ್ಮ ಕಾಂತಿಯಿಂದ ಪ್ರಕಾಶಗೊಳಿಸುತ್ತಾ ಅಲ್ಲಿಗೆ ಆಗಮಿಸಿದರು. ಎಲೈ ಜನಕರಾಯ! ಆ ದೇವತೆಗಳೆಲ್ಲಾ ಗಗನ ಮಾರ್ಗದಲ್ಲಿ ನಿಂತು ಮಾಧವನ ಅದ್ಭುತಾಚರಣೆಗಳನ್ನು ಪರಿಕಿಸಿ (ನೋಡಿ), ಮಾಧವನ ಶಿರಸ್ಸಿನ ಮೇಲೆ ಹೂವಿನ ಮಳೆಗರೆದರು. ವೇದಪ್ರತಿಪಾದ್ಯನೂ, ಕಾಂತಿಸಂಪನ್ನನೂ, ಸರಸ್ವತಿದೇವಿಯಿಂದ ಸಹಿತನೂ ಆದ ಪಿತಾಮಹ ಬ್ರಹ್ಮದೇವನು ವಿಮಾನದಿಂದ ಕೆಳಗಿಳಿದು ಬಂದು ಮಾಧವನನ್ನು ಕರುಣಾರ್ದ್ರ ದೃಷ್ಟಿಯಿಂದ ಅವಲೋಕಿಸಿ; ದಯಾಮಯನಾದ, ಪಾಪ ಪರಿಹಾರಕನಾದ ಕೃಷ್ಣನೆಂದೇ ಖ್ಯಾತನಾದ ಶ್ರೀಹರಿಯು ಹೇಗೆ ಪಾಪಮುಕ್ತನಾದ ಅಜಾಮಿಳನೆಂಬ ಭಕ್ತನನ್ನು ಕರುಣೆಯಿಂದ ಉದ್ಧರಿಸಿದನೋ, ಅದರಂತೆಯೇ ತಾನೂ ಸಹ ಪಾಪ ವಿಮುಕ್ತನಾದ ದ್ವಿಜಶ್ರೇಷ್ಠನಾದ ಮಾಧವನನ್ನು ಉದ್ಧರಿಸಬೇಕೆಂದು ಯೋಚಿಸಿ, ಮಾಧವನ ಸಮೀಪಕ್ಕೆ ಬಂದನು. ಮತ್ತು ಪ್ರೀತ್ಯಾದರಗಳಿಂದ ಮಾಧವನ ಶಿರಸ್ಸನ್ನು ಆಘ್ರಾಣಿಸಿದನು.

ಅನಂತರ ಶ್ರೀ ಸರಸ್ವತಿ ಸಹಿತನಾದ ಬ್ರಹ್ಮದೇವನು ಮಾಧವನನ್ನು ಕುರಿತು– ''ಎಲೈ ಭೂಸುರವರನಾದ ಮಾಧವ ! ನೀನೀಗ ಸಂಪೂರ್ಣವಾಗಿ ಪಾಪಮುಕ್ತನಾಗಿದ್ದೀಯೆ. ಇನ್ನು ನಿನ್ನ ಕಷ್ಟಗಳೆಲ್ಲವೂ ಕಳೆದವೆಂದು ತಿಳಿ. ನೀನು ಸ್ವಾಮಿ ಪುಷ್ಕರಣಿ ಸರಸ್ಸಿನ ಬಳಿ ಸಾರಿ, ಆ ಪವಿತ್ರ ಜಲದಲ್ಲಿ ಸ್ನಾನಮಾಡಿ, ಶ್ರೀವರಾಹ ವದನನಾದ ಶ್ರೀಹರಿಯನ್ನು ವಂದಿಸಿ, ಶ್ರೀಹರಿಯನ್ನು ಧ್ಯಾನಿಸುತ್ತಾ ನಿನ್ನ ದೇಹವನ್ನು ತ್ಯಜಿಸು. ನಿನ್ನ ಮುಂದಿನ ಜನ್ಮಗಲ್ಲಿ ಪಾಂಡವರ ದೌಹಿತ್ರ ವಂಶದಲ್ಲಿ ನೀನು ಜನಿಸಿ ಅತ್ಯಂತ ಕೀರ್ತಿ ಸಂಪನ್ನನಾದ ಮಹಾರಾಜನಾಗಿ ಶತ್ರುಗಳ ಬಾಧೆಯಿಲ್ಲದ ರಾಜ್ಯವನ್ನು ಪರಿಪಾಲಿಸು. ಸುಧರ್ಮರಾಜನಿಗೆ ಮಗನಾಗಿ, ಆಕಾಶರಾಜನೆಂಬ ಹೆಸರಿನಿಂದ, ದಕ್ಷಿಣದೇಶದಲ್ಲಿ, ನಾರಾಯಣಪುರದಲ್ಲಿ ತೋಂಡದೇಶಕ್ಕೆ ಅಧಿಪತಿಯಾಗು. ಎಲೈ ವೀರವರ ! ನಿನ್ನ ಭಾಗ್ಯವೇನೆಂದು ಹೇಳಲಿ ! ಲೋಕ ಜನನಿಯಾದ ಸಾಕ್ಷಾತ್ ಮಹಾಲಕ್ಷ್ಮೀದೇವಿಯು ನಿನಗೆ ಮಗಳಾಗುತ್ತಾಳೆ ! ಸಕಲ ಜಗತ್ತಿಗೆ ಪ್ರಭುವಾದ, ದೇವದೇವನಾದ ಶ್ರೀಮನ್ನಾರಾಯಣನು ನಿನಗೆ ಅಳಿಯನಾಗುವನು ! ಭಾವಿ ರಾಜನಾಗುವ ನೀನು ಬಹುಕಾಲ ರಾಜ್ಯಭಾರಮಾಡಿ ಅನಂತರ ಶ್ರೀಹರಿಮಂದಿರವನ್ನು (ವೈಕುಂಠವನ್ನು) ಸೇರುವೆ. (ಮೋಕ್ಷವನ್ನು ಪಡೆಯುವೆ). ಚತುರನಾದ ನಾಲ್ಮೊಗನಾದ ಬ್ರಹ್ಮದೇವನು ಮಾಧವನಿಗೆ ಹೀಗೆ ವರವನ್ನು ಕರುಣಿಸಿ, ಆಗ ಆ ಪರ್ವತಕ್ಕೆ ಶ್ರೀವೇಂಕಟಾಚಲವೆಂದೂ ಹೆಸರಿಟ್ಟನು.

ಪಾಪವನ್ನು ಸುಡುವುದರಿಂದ, ಪಾಪದಹನ ಶಕ್ತಿಯುಕ್ತವಾದ್ದರಿಂದ ದೇವತೆಗಳು ಆಗ ಆ ಪರ್ವತವನ್ನು ವೇಂಕಟಾಚಲವೆಂದೇ ಹೇಳಿ ಕರೆದರು. ಆದ್ದರಿಂದ ಈ ವೇಂಕಟಶೈಲವು ಲೋಕದಲ್ಲಿ ಕೀರ್ತಿಯಿಂದ ವಿಖ್ಯಾತವಾಯಿತು.

ಎಲೈ ಜನಕರಾಯ ! ಪ್ರಾತಃಕಾಲದಲ್ಲಿ ಯಾರು ಈ ವೆಂಕಟಗಿರಿಯನ್ನು ಕೀರ್ತಿಸುವರೋ, ಅಂಥವರಿಗೆ ಖಂಡಿತವಾಗಿ ದೊರಕುವ ಸುಕೃತ ಫಲವನ್ನು ಹೇಳುವೆನು, ಕೇಳು. ಸಮಗ್ರ ಭೂಮಿ, ಗಂಗಾನದಿ, ರಾಮಸೇತುಗಳ ಯಾತ್ರೆ ಮಾಡಿದರೆ ದೊರಕುವ ಸಾವಿರಪಟ್ಟು ಅಧಿಕವಾಗಿ ಪುಣ್ಯಫಲವು ಉಂಟಾಗುವುದು. ನಾನು ಈವರೆವಿಗೆ ನಿನಗೆ ಹೇಳಿದ ಇತಿಹಾಸವನ್ನು ಗೌತಮ ಮಹರ್ಷಿಗಳು ಹೇಳಿದ್ದರು. ಅದನ್ನೇ ನಿನಗೀಗ ತಿಳಿಸಿದ್ದೇನೆ. ಪುಣ್ಯ ಹಾಗೂ ಮಂಗಳಕರವಾದ ಈ ಕಥೆಯನ್ನು ಶ್ರವಣ ಮಾಡುವುದು ಶುಭಪ್ರದವಾದುದು - ಎಂದು ಶತಾನಂದರು ಜನಕ ಮಹಾರಾಜನಿಗೆ ತಿಳಿಸಿದರು.

*ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೇಂಕಟೇಶಮಹಾತ್ಮೆಯಲ್ಲಿ*
*ಚತುರ್ಯುಗಗಳ ಮಹಿಮಾತಿಶಯ ವರ್ಣನೆಯೆಂಬ ಮೊದಲನೆಯ ಅಧ್ಯಾಯವು ಮುಗಿದುದು.*

*॥ ಶ್ರೀವೇಂಕಟೇಶನಿಗೆ ಅರ್ಪಿತವಾಗಲಿ ॥*

ଓଃ ଛଃ

# ಎರಡನೆಯ ಅಧ್ಯಾಯ

## ಶ್ರೀಶೇಷಗಿರಿ ವರ್ಣನೆ

*ಮೂಲ— ಜನಕ ಉವಾಚ -*

**ಮರುತ್ಪ್ರಾಹಾಹಿರಾಜಾನಂ ಭಗವಾನಾಗಮಿಷ್ಯತಿ ।**
**ಇತಿ ತ್ವಯೋದಿತಂ ಪೂರ್ವಂ ತನ್ಮಮಾಚಕ್ಷ್ವ ವಿಸ್ತರಾತ್ ॥ 1 ॥**

**ಕಥಂ ನಾರಾಯಣಃ ಪ್ರಾಪ್ತಃ ಕಸ್ಮಾದ್ವಾ ಕಾರಣಾನ್ಮುನೇ ।**
**ತತ್ರಾಗತ್ಯ ಕೃತಂ ಕರ್ಮ ತನ್ಮಮಾಚಕ್ಷ್ವ ಭೂಸುರ ॥ 2 ॥**

**ಕಥಂ ವೈಕುಂಠಲೋಕಂತು ತ್ಯಕ್ತವಾನ್ಪುರುಷೋತ್ತಮಃ ।**
**ಚರಿತಂ ತಸ್ಯ ಮಾಹಾತ್ಮ್ಯಂ ತೀರ್ಥಾನಾಂ ಪರ್ವತಸ್ಯ ಚ ॥ 3 ॥**

**ವರಾಹರೂಪಿಣೋ ವಿಷ್ಣೋಃ ಮಾಹಾತ್ಮ್ಯಂ ವದ ವಿಸ್ತರಾತ್ ।**
**ಆಕಾಶರಾಜಚರಿತಂ ಭ್ರಾತುಸ್ತಸ್ಯ ಮಹಾತ್ಮನಃ ॥ 4 ॥**

**ತಸ್ಯ ಪುತ್ರಿ ರಮಾದೇವೀ ಜಾಮಾತಾ ಚ ಜಗತ್ಪತಿಃ ।**
**ದೇವಾನಾಂ ಚ ಋಷೀಣಾಂ ಚ ದೇವಸ್ತ್ರೀನಾಂ ಸಮಾಗಮಃ ॥ 5 ॥**

*ಅನ್ವಯಾರ್ಥ:—* ಜನಕ ಉವಾಚ = ಜನಕರಾಯನು ಹೇಳಿದನು. ಮರುತ್ = ವಾಯುದೇವನು, ಅಹಿರಾಜಾನಂ = ಸರ್ಪರಾಜನಾದ ಶೇಷನನ್ನು ಕುರಿತು ಭಗವಾನ್ = ಶ್ರೀಹರಿಯು, ಆಗಮಿಷ್ಯತಿ = ಈ ಪರ್ವತಕ್ಕೆ ದಯಮಾಡಿಸುವನೆಂದು, ಪ್ರಾಹ = ಹೇಳಿದನು, ಇತಿ = ಈ ಪ್ರಕಾರವಾಗಿ, ತ್ವಯಾ = ನಿನ್ನಿಂದ, ಪೂರ್ವಂ = ಮೊದಲು, ಉದಿತಂ = ಹೇಳಲ್ಪಟ್ಟಿತು, ಮಮ = ನನಗೆ, ತತ್ = ಆ ವಿಚಾರವನ್ನು, ವಿಸ್ತರಾತ್ = ವಿಸ್ತಾರವಾಗಿ, ಮುನೇ = ಮನನಶೀಲನಾದ, ಭೂಸುರ = ಶತಾನಂದ ಋಷಿಯೇ - ಆಚಕ್ಷ್ವ = ಹೇಳು, ನಾರಾಯಣಃ = ಶ್ರೀವಿಷ್ಣುವು, ಕಥಂ = ಹೇಗೆ, ಕಸ್ಮಾತ್ = ಯಾವ, ಕಾರಣಾದ್ವಾ = ಕಾರಣದಿಂದಾಗಿ, ಪ್ರಾಪ್ತಃ = ಬಂದನು? ಶೇಷಾಚಲಕ್ಕೆ, ಆಗತ್ಯ = ಶ್ರೀಹರಿಯು ಆಗಮಿಸಿ, ಕೃತಂ = ಮಾಡಿದ, ತತ್ಕರ್ಮ ಕಿಂ = ಶ್ರೀಹರಿಯು ಮಾಡಿದ ಕಾರ್ಯವೇನು ? ಮಮ = ನನಗೆ, ಆಚಕ್ಷ್ವ = ಹೇಳು, ಪುರುಷೋತ್ತಮಃ = ಪರಮ ಪುರುಷನಾದ ಶ್ರೀಮನ್ನಾರಾಯಣನು, ವೈಕುಂಠಲೋಕಂ = ವೈಕುಂಠಪುರವನ್ನು, ಕಥಂ = ಹೇಗೆ? (ಏತಕ್ಕಾಗಿ), ತ್ಯಕ್ತವಾನ್ = ಬಿಟ್ಟನು? ತಸ್ಯ = ಶ್ರೀಹರಿಯ, ಚರಿತಂ = ಚರಿತ್ರೆಯನ್ನು, ಮಮ = ನನಗೆ, ಆಚಕ್ಷ್ವ = ನಿರೂಪಿಸು, ತೀರ್ಥಾನಾಂ = ಅಲ್ಲಿರುವ ಪುಣ್ಯತೀರ್ಥಗಳ, ಚ = ಮತ್ತು, ಪರ್ವತಸ್ಯ = ವೇಂಕಟಗಿರಿಯ, ಮಾಹಾತ್ಮ್ಯಂ = ಮಹಿಮೆಯನ್ನೂ, ವರಾಹರೂಪಿಣಃ = ವರಾಹಾವತಾರ ತಾಳಿದ, ವಿಷ್ಣೋಃ = ಶ್ರೀಹರಿಯ, ಮಾಹಾತ್ಮ್ಯ = ಮಹಿಮೆಯನ್ನು, ವಿಸ್ತರಾತ್ = ವಿಶದವಾಗಿ, ವದ = ಹೇಳು, ಆಕಾಶರಾಜ ಚರಿತಂ = ಆಕಾಶರಾಜನ ಚರಿತ್ರೆಯನ್ನೂ, ಮಹಾತ್ಮನಃ = ಮಹಾನುಭಾವನಾದ, ಭ್ರಾತುಃ = ಆಕಾಶರಾಜನ ಸಹೋದರನ, ಚರಿತಂ = ಚರಿತ್ರೆಯನ್ನೂ, ವದ =

ನಿರೂಪಿಸು, ಯಸ್ಯ = ಯಾವ ಆಕಾಶರಾಯನಿಗೆ, ರಮಾ = ಶ್ರೀಲಕ್ಷ್ಮೀದೇವಿಯು, ಪುತ್ರಿ = ಮಗಳು, ಬಭೂವ = ಆದಳು, ಜಗತ್ಪತಿಃ = ಜಗದೀಶನಾದ ಶ್ರೀಹರಿಯು, ಜಾಮಾತಾ = ಅಳಿಯನು, ಅಭವತ್ = ಆದನು? ಚ = ಮತ್ತು ದೇವಾನಾಂ = ದೇವತೆಗಳ, ಋಷೀಣಾಂ = ಋಷಿಗಳ, ಚ = ಮತ್ತು, ದೇವಸ್ತ್ರೀಣಾಂ = ದೇವತಾಸ್ತ್ರೀಯರ, ಸಮಾಗಮಃ = ಸಮಾಗಮವು (ಕಥಮಭವತ್) ಹೇಗಾಯಿತು? ಹೇಳುವವನಾಗು. ॥ 1-5 ॥

*ಶತಾನಂದ ಉವಾಚ -*

**ಪುರಾತು ಋಷಯಸ್ಸರ್ವೇ ಕಶ್ಯಪಾದ್ಯಾ ಮುನೀಶ್ವರಾಃ ।**
**ಸುಮುಖಂ ಜಾಹ್ನವೀತೀರೇ ಸಂತೋಷಾಚ್ಚಕ್ರಿರೇ ದ್ವಿಜಾಃ ॥ 6 ॥**

**ತಸ್ಮಿನ್ಕಾಲೇ ಮುನಿಶ್ರೇಷ್ಠೋ ನಾರದೋ ಮುನಿಸತ್ತಮಃ ।**
**ಉವಾಚ ವಚನಂ ವಿಪ್ರಾನ್ ಕಿಮರ್ಥಂ ಯಜ್ಞಮುತ್ತಮಮ್ ॥ 7 ॥**

**ಕೋ ಭುಂಕ್ತೇ ಯಜ್ಞಸುಫಲಂ ಕೋವಾಧ್ವರ್ಯುರ್ಶ್ಚ ದೇವತಾ ।**
**ಕೃತಂಯಜ್ಞಫಲಂ ಕಸ್ಯ ಚಾರ್ಪ್ಯತೇ ಮುನಿಪುಂಗವಾಃ ॥ 8 ॥**

ಶತಾನಂದ ಉವಾಚ = ಜನಕರಾಯನ ಪ್ರಶ್ನೆಗೆ ಶತಾನಂದರು ಹೀಗೆ ಹೇಳಿದರು. ಪುರಾ = ಪೂರ್ವದಲ್ಲಿ, ಮುನೀಶ್ವರಾಃ = ಮುನಿಗಳಲ್ಲಿ ಉತ್ತಮರಾದ, ಕಶ್ಯಪಾದ್ಯಾಃ = ಕಶ್ಯಪ ಋಷಿಗಳೇ ಮೊದಲಾದ, ಸರ್ವೇ = ಸಕಲ, ದ್ವಿಜಾಃ = ಬ್ರಾಹ್ಮಣರಾದ, ಋಷಯಃ = ಋಷಿಗಳು, ಜಾಹ್ನವೀತೀರೇ = ಗಂಗಾನದಿಯ ದಡದಲ್ಲಿ, ಸಂತೋಷಾತ್ = ಹರ್ಷದಿಂದ, ಸುಮುಖಂ = ಉತ್ತಮವಾದ ಯಜ್ಞವನ್ನು, ಚಕ್ರಿರೇ = ನೆರವೇರಿಸಿದರು. ॥ 6 ॥ ನೃಪಶ್ರೇಷ್ಠ = ರಾಜಶ್ರೇಷ್ಠನಾದ ಜನಕರಾಯ!, ತಸ್ಮಿನ್ಕಾಲೇ = ಆ ಯಾಗ ಸಮಯದಲ್ಲಿ, ಮುನಿಪುಂಗವಃ = ಮುನಿವರನಾದ, ನಾರದಃ = ದೇವರ್ಷಿ ನಾರದನು, ವಿಪ್ರಾನ್ = ಕಶ್ಯಪರೇ ಮೊದಲಾದ ಬ್ರಾಹ್ಮಣರನ್ನು ಉದ್ದೇಶಿಸಿ, ವಚನಮುವಾಚ = ಮಾತನಾಡಿದನು. ಉತ್ತಮಂ = ಉತ್ತಮವಾದ, ಯಜ್ಞಂ = ಯಾಗವನ್ನು, ಕಿಮರ್ಥಂ = ಯಾವ ಉದ್ದೇಶದಿಂದ (ಏತಕ್ಕಾಗಿ) ಮಾಡುವಿರಿ? ॥ 7 ॥ ಕಃ = ಯಾರು, ಯಜ್ಞಸುಫಲಂ = ಈ ಯಾಗದ ಫಲವನ್ನು, ಭುಂಕ್ತೇ = ಭುಜಿಸುವರು? (ಸ್ವೀಕರಿಸುವರು). ಅಧ್ವರ್ಯುಃ = ಯಾಗದ ಅಧ್ವರ್ಯುವು, ಕೋವಾ = ಯಾವನಾಗಿದ್ದಾನೆ? ದೇವತಾ = ಈ ಯಜ್ಞಕ್ಕೆ ದೇವತೆಯು, ಕಃ = ಯಾರು? ಮುನಿಪುಂಗವಾಃ = ಎಲೈ ಮುನಿವರ್ಯರೇ, ಕೃತಂ = ಆಚರಿಸಿದ, ಯಜ್ಞಫಲಂ = ಯಾಗದ ಪುಣ್ಯವು, ಕಸ್ಯಚ = ಯಾರಿಗೋಸ್ಕರ (ಯಾರಿಗೆ), ಅರ್ಪ್ಯತೇ = ಸಮರ್ಪಿಸಲಾಗುವುದು? ॥ 8 ॥

**ಇತಿ ನಾರದವಾಕ್ಯಂ ತು ಶ್ರುತ್ವಾ ತೇ ಮುನಿಪುಂಗವಾಃ ।**
**ಸಂಶಯಾರ್ಥಂ ಸಮಾಪನ್ನಾಃ ಕಥಮತ್ರ ವಿಚಾರ್ಯತಾಮ್ ॥ 9 ॥**

**ಸಂಮಿಲಿತ್ವಾ ತದಾ ಸರ್ವೇ ಭೃಗುಂ ಬ್ರಹ್ಮವಿದಾಂ ವರಮ್ ।**
**ತಮೂಚುರ್ಭಕ್ತಿನಮ್ರಾಂಗಾಃ ಕೃತಾಂಜಲಿಪುಟಾ ಸ್ಥಿತಾಃ ॥ 10 ॥**

**ಗಚ್ಛ ಶೀಘ್ರಂ ಮಹಾಬುದ್ಧೇ ಪರಂ ವೇತ್ತುಂ ಸುರೋತ್ತಮಮ್ ।**
**ಇತಿ ತೇಷಾಂ ವಚಃಶ್ರುತ್ವಾ ಭೃಗುಃ ಕಂಜಜಮಂದಿರಮ್ ॥ 11 ॥**

ತೇ ಮುನಿಪುಂಗವಾಃ = ಆ ಮುನಿಶ್ರೇಷ್ಠರು, ಇತಿ = ಇಂತು, ನಾರದವಾಕ್ಯಂ = ನಾರದರಾಡಿದ ಮಾತನ್ನು, ಶ್ರುತ್ವಾತು = ಕೇಳಿದವರಾಗಿ, ಸಂಶಯಾರ್ಥಂ ಸಮಾಪನ್ನಾಃ = ಸಂದೇಹಯುಕ್ತ ಅಭಿಪ್ರಾಯವುಳ್ಳವರಾಗಿ, ಅತ್ರ = ಈ ಯಜ್ಞಫಲವನ್ನು ಯಾರಿಗೆ ಅರ್ಪಿಸಬೇಕೆಂಬ ವಿಚಾರದಲ್ಲಿ, ಕಥಂ = ಹೇಗೆ ಮಾಡಬೇಕು, ವಿಚಾರ್ಯತಾಂ = ಆಲೋಚಿಸಲ್ಪಡಲಿ (ಎಂದು ಅಭಿಪ್ರಾಯಪಟ್ಟರು). ॥ 9 ॥ ತದಾ = ಆವಾಗ, ಸರ್ವೇ = ಸಕಲ ಋಷಿಗಳೂ, ಸಂಮಿಲಿತ್ವಾ = ಸಭೆ ಸೇರಿ, ವಿಮರ್ಶಿಸಿ, ಬ್ರಹ್ಮವಿದಾಂವರಂ = ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ, ತಂ = ಆ, ಭೃಗುಂ = ಭೃಗುಮುನಿಗಳನ್ನು ಕುರಿತು, ಭಕ್ತಿನಮ್ರಾಂಗಾಃ = ಭಕ್ತಿಯಿಂದ ಬಾಗಿದ ಅವಯವವುಳ್ಳವರಾಗಿ, ಕೃತಾಂಜಲಿಪುಟಾಃ = ಕೈಮುಗಿದುಕೊಂಡು, ಸ್ಥಿತಾಃ = ಇರುವವರಾಗಿ, ಊಚುಃ = ವಿಜ್ಞಾಪಿಸಿದರು (ನುಡಿದರು) ॥ 10 ॥ ಮಹಾಬುದ್ಧೇ = ಮಹಾಮತಿಯಾದ ಭೃಗುಮುನಿಯೇ, ಸುರೋತ್ತಮಂ = ದೇವತೆಗಳಲ್ಲಿ ಶ್ರೇಷ್ಠನಾದ, ಪರಂ = ಸರ್ವೋತ್ತಮ (ಪರಮಪುರುಷ) ನಾದವನನ್ನು, ವೇತ್ತುಂ = ತಿಳಿಯಲು, ಶೀಘ್ರಂ = ತ್ವರೆಯಿಂದ, (ತ್ವಂ) ಗಚ್ಛ = ನೀನು ಹೋಗು, ಇತಿ = ಈ ಪ್ರಕಾರವಾಗಿ, ತೇಷಾಂ = ಆ ಋಷಿಗಳ, ವಚಃ = ಮಾತನ್ನು, ಶ್ರುತ್ವಾ = ಆಲಿಸಿ, ಭೃಗುಃ = ಭೃಗುಮುನಿಯು, ಕಂಜಜಮಂದಿರಂ = ಕಮಲಸಂಭವನಾದ ಬ್ರಹ್ಮದೇವನ ಮನೆಯಾದ ಸತ್ಯಲೋಕಕ್ಕೆ (ಯಯೌ = ಹೋದನು). ॥ 11 ॥

**ತತ್ರ ದೃಷ್ಟ್ವಾ ಮಹಾಬಾಹುಂ ಸಾಕ್ಷಾದ್ಬ್ರಹ್ಮಾಣಮಗ್ರಜಮ್ ।**
**ಚತುರ್ಮುಖಮುದಾರಾಂಗಂ ಸರಸ್ವತ್ಯಾನುಸೇವಿತಮ್ ॥ 12 ॥**

**ಚತುರಾಸ್ಯಸಮುದ್ಭೂತ ವೇದಘೋಷವಿರಾಜಿತಮ್ ।**
**ದಿಕ್ಪಾಲಕಗಣೈಸ್ಸಾರ್ಧಂ ಕಿರೀಟಮುಕುಟೋಜ್ವಲಮ್ ॥ 13 ॥**

**ಸ್ತುವಂತಂ ಜಗದೀಶಾನಂ ನಾರಾಯಣಮನಾಮಯಮ್ ।**
**ತಂ ನತ್ವಾ ಭಕ್ತಿಭಾವೇನ ಮಹಾದೀಪ್ತ್ಯಾ ವಿರಾಜಿತಮ್ ॥ 14 ॥**

**ಪಾತಯಾಮಾಸ ಕಾಯಂ ಸ್ವಂ ಪುರತಃ ಕಂಜಜನ್ಮನಃ ।**
**ಪತಿತಂ ಸಭೃಗುಂ ದೃಷ್ಟ್ವಾ ನೋವಾಚ ವಚನಂ ವಿಧಿಃ ॥ 15 ॥**

**ತಂ ಮತ್ವಾ ಕಿಂಚಿದಜ್ಞಾನಮಾಶ್ರಿತಂ ಸ ಋಷಿರ್ಯಯೌ ।**
**ಅಲಬ್ಧ್ವಾ ಸ್ವಾತ್ಮನಃ ಕಾರ್ಯಂ ಕೈಲಾಸಂ ಸ ಋಷಿರ್ಯಯೌ ॥ 16 ॥**

ತತ್ರ = ಸತ್ಯಲೋಕದಲ್ಲಿ, ಮಹಾಬಾಹುಂ = ಆಜಾನುಬಾಹುವಾದ, ಅಗ್ರಜಂ = ಸೃಷ್ಟಿಕಾಲದಲ್ಲಿ ಶ್ರೀಹರಿಯ ನಾಭಿಕಮಲದಿಂದ ಮೊಟ್ಟಮೊದಲಿಗನಾಗಿ ಜನಿಸಿದ, (ಅಥವಾ ತಮಗೆ ಹಿರಿಯನಾದ) ಚತುರ್ಮುಖಂ = ನಾಲ್ಮೊಗನಾದ, ಉದಾರಾಂಗಂ = ದೀರ್ಘಾಂಗನಾದ, ಸರಸ್ವತ್ಯಾ = ವಾಗ್ದೇವಿಯಿಂದ, ಸಮನ್ವಿತಂ = ಸಹಿತನಾಗಿರುವ, ಬ್ರಹ್ಮಾಣಂ = ಬ್ರಹ್ಮದೇವನನ್ನು, ದೃಷ್ಟ್ವಾ = ನೋಡಿ (12), ಚತುರಾಸ್ಯಸಮುದ್ಭೂತ ವೇದಘೋಷವಿರಾಜಿತಂ - ಚತುರಾಸ್ಯ = ನಾಲ್ಕು ವದನಗಳಿಂದ, ಸಮುದ್ಭೂತ = ಹೊರಹೊಮ್ಮುತ್ತಿರುವ, ವೇದಘೋಷ = ನಾಲ್ಕು ವೇದ ಪಾರಾಯಣ ಧ್ವನಿಯಿಂದ, ವಿರಾಜಿತಂ = ಕಂಗೊಳಿಸುತ್ತಿರುವ, ದಿಕ್ಪಾಲಕಗಣೈಸ್ಸಾರ್ಧಂ = ದಿಕ್ಪಾಲಕರಾದ ಇಂದ್ರ ದೇವಾದಿಗಳ ಸಮೂಹದಿಂದಲೂ ಸಹ, ಕಿರೀಟಮುಕುಟೋಜ್ವಲಂ = ಶಿರೋಭೂಷಣವಾದ ಮುಕುಟದಿಂದ ಬೆಳಗುತ್ತಿರುವ, ॥ 13 ॥ ಅನಾಮಯಂ =

ಬಾಧಾರಹಿತನಾದ, ಜಗದೀಶಾನಂ = ಜಗದೊಡೆಯನಾದ, (ಸಕಲ ಜಗನ್ನಿಯಾಮಕನಾದ), ನಾರಾಯಣಂ = ಶ್ರೀಹರಿಪರಮಾತ್ಮನನ್ನು, ಸ್ತುವಂತಂ = ವೇದಮಂತ್ರಗಳಿಂದ ಸ್ತೋತ್ರ ಮಾಡುತ್ತಿರುವ, ಮಹಾದೀಪ್ತ್ಯಾ = ಅತ್ಯಂತ ತೇಜಸ್ಸಿನಿಂದ, ವಿರಾಜಿತಂ = ಪ್ರಕಾಶಿಸುತ್ತಿರುವ, ತಂ = ಆ ಬ್ರಹ್ಮದೇವನನ್ನು, ಭಕ್ತಿಭಾವೇನ = ಭಕ್ತಿಯುಳ್ಳವನಾಗಿ, ನತ್ವಾ = ನಮಸ್ಕರಿಸಿ || 14 || ಕಂಜಜಜನ್ಮನಃ = ಕಮಲದಿಂದುದಯಿಸಿದ ಬ್ರಹ್ಮದೇವನ, ಪುರತಃ = ಮುಂಭಾಗದಲ್ಲಿ, ಸ್ವಕಾಯಂ = ತನ್ನ ದೇಹವನ್ನು, ಪಾತಯಾಮಾಸ = ಕೆಳಗೆ ಬೀಳಿಸಿದನು (ಅಂದರೆ ನೆಲದಮೇಲೆ ಬಿದ್ದು ಸಾಷ್ಟಾಂಗವೆರಗಿದನೆಂದು ಭಾವ), ಸಃ ವಿಧಿಃ = ಆ ಬ್ರಹ್ಮನು, ಪತಿತಂ = ಸಾಷ್ಟಾಂಗವೆರಗಿದ, ಭೃಗುಂ = ಭೃಗುಮುನಿಯನ್ನು, ದೃಷ್ಟ್ವಾ = ನೋಡಿ, ವಚನಂ = ಮಾತನ್ನು, ನೋವಾಚ = ಆಡಲಿಲ್ಲ (ಮಾತನಾಡಲಿಲ್ಲ) || 15 || ಸಋುಷಿಃ = ಆ ಭೃಗುಮುನಿಯು, ತಂ = ಆ ಬ್ರಹ್ಮದೇವನನ್ನು, ಕಿಂಚಿತ್ = ಸ್ವಲ್ಪ ಅಜ್ಞಾನಮಾಶ್ರಿತಂ = ಅಜ್ಞಾನವುಳ್ಳವನನ್ನಾಗಿ, ಮತ್ವಾ = ತಿಳಿದು, ಯಯೌ = ಅಲ್ಲಿಂದ ಹೊರಟನು. ಸ್ವಾತ್ಮನಃ = ತನ್ನ ಮನದ, ಕಾರ್ಯಂ = ಸರ್ವೋತ್ತಮನಾರೆಂದು ತಿಳಿಯುವ ಕಾರ್ಯವನ್ನು, ಅಲಬ್ಧ್ವಾ = ಪಡೆಯದಲೇ (ಆ ಕಾರ್ಯದಲ್ಲಿ ಯಶಸ್ವಿಯಾಗದೇ) ಸಋುಷಿಃ = ಆ ಭೃಗು ಋುಷಿಯು, ಕೈಲಾಸಂ = ಕೈಲಾಸಪರ್ವತವನ್ನು ಕುರಿತು, ಯಯೌ = ಹೋದನು. || 12-16 ||

**ಕೈಲಾಸಗಿರಿಮಾಸಾಧ್ಯ ತತ್ರ ದೃಷ್ಟ್ವಾ ತ್ರಿಲೋಚನಮ್ ।**
**ಕಾಮುಕಂ ಪಾರ್ವತೀಸಾರ್ಧಂ ಕ್ರೀಡಂತಂ ನಿಜಮಂದಿರೇ || 17 ||**

**[1]ತಸ್ಮಿನ್ ಕಾಲೇ ತಮಾಯಾಂತಂ ನಾಜಾನಾತ್ಕಾಮುಕೋ ಹರಃ ।**
**ಆಗತಂ ಸಾ ಮುನಿಂ ದೃಷ್ಟ್ವಾ ಪಾರ್ವತೀ ಲಜ್ಜಯಾವದತ್ || 18 ||**

**ತ್ಯಜ ಶೀಘ್ರಂ ಮಹಾಬಾಹೋ ಆಗತೋ ಮುನಿಪುಂಗವಃ।**
**ಇತಿ ತಸ್ಯಾ ವಚಃ ಶ್ರುತ್ವಾ ಕ್ರೋಧತಾಮ್ರವಿಲೋಚನಃ || 19 ||**

**ಹಂತುಮಭ್ಯದ್ರವಚ್ಛೀಘ್ರಂ ಋುಷಿಃ ಶಾಪಾನ್ನಿರಾಕರೋತ್ ।**
**ಶಶಾಪ ಸಋುಷಿಃ ಶಂಭುಂ ಲೋಕೈಸ್ತ್ವಂ ನೈವ ಪೂಜ್ಯಸೇ || 20 ||**

**ತ್ವಚ್ಛಿಶ್ನಪೂಜನೇನೈವ ಲೋಕೇ ಖ್ಯಾತಿಂ ಗಮಿಷ್ಯಸಿ ।**
**ಇತ್ಯುಕ್ತ್ವಾ ಸ ಋುಷಿಶ್ಶಾಗಾತ್ ವೈಕುಂಠಂ ಹರಿಮಂದಿರಮ್ || 21 ||**

ಕೈಲಾಸಗಿರಿಂ = ಕೈಲಾಸಪರ್ವತವನ್ನು (ಶ್ರೀರುದ್ರದೇವರ ಆವಾಸಸ್ಥಾನವಾದ ರಜತಾದ್ರಿಯನ್ನು), ಆಸಾದ್ಯ = ಹೊಂದಿ, ತತ್ರ = ಅಲ್ಲಿ ನಿಜಮಂದಿರೇ = ತನ್ನ ಮನೆಯಲ್ಲಿ, ಪಾರ್ವತೀಸಾರ್ಧಂ = ಪಾರ್ವತಿಯೊಡನೆ, ಕ್ರೀಡಂತಂ = ಕ್ರೀಡಿಸುತ್ತಿರುವ, ಕಾಮುಕಂ = ಕಾಮಾಸಕ್ತನಾದ, ತ್ರಿಲೋಚನಂ = ಮುಕ್ಕಣ್ಣನಾದ ರುದ್ರದೇವನನ್ನು, ದೃಷ್ಟ್ವಾ = ನೋಡಿ, || 17 || (ಪಾಠಾಂತರ : ಬೇರೊಂದು ಗ್ರಂಥಪ್ರತಿಯಲ್ಲಿರುವಂತೆ - ತಸ್ಮಿನ್ಕಾಲೇ = ಆ ಸಮಯದಲ್ಲಿ, ಋುಷಿಶ್ಚ = ಭೃಗು ಋುಷಿಯು, ಆಗಾತ್ = ಬಂದನು, ಕಾಮುಕಃ = ಕಾಮಾಸಕ್ತನಾದ ರುದ್ರದೇವನು, ನೈವಜಾನತ = ಮುನಿಯು ಬಂದುದನ್ನು ತಿಳಿಯಲಿಲ್ಲ). ತಸ್ಮಿನಕಾಲೇ = ಆ ವೇಳೆಯಲ್ಲಿ, ಆಯಾಂತಂ = ಬಂದ, ತಂ = ಭೃಗುವನ್ನು, ಕಾಮುಕೋ = ಕಾಮಿಯಾದ, ಹರಃ = ಶಿವನು, ನಾಜಾನಾತ್ = ತಿಳಿಯಲಿಲ್ಲ, ಪಾರ್ವತಿ = ಪಾರ್ವತಿದೇವಿಯು, ಆಗತಂ = ಬಂದ,

[1]ಪಾ- ತಸ್ಮಿನ್ಕಾಲೇ ಋುಷಿಶ್ಚಾಗಾತ್ ಕಾಮುಕೋ ನೈವ ಜಾನಥ ||

ಋಷಿಂ = ಭೃಗುಮುನಿಯನ್ನು, ದೃಷ್ಟ್ವಾ = ನೋಡಿ, ಸಾ = ಆ ಗಿರಿಜೆಯು, ಲಜ್ಜಯಾ = ನಾಚಿಕೆಯಿಂದ, ಅವದತ = ಹೇಳಿದಳು, ॥ 18 ॥ ಮಹಾಬಾಹೋ = ನೀಳವಾದ ತೋಳುಳ್ಳ ರುದ್ರದೇವ, ಮುನಿಪುಂಗವಃ = ಮುನಿವರನಾದ ಭೃಗುವು, ಆಗತಃ = ಬಂದಿದ್ದಾನೆ, ಶೀಘ್ರಂ = ಬೇಗನೇ, ತ್ಯಜ = (ನನ್ನನ್ನು) ಬಿಡು, ಇತಿ = ಇಂತು, ತಸ್ಯಾಃ = ಗಿರಿಜೆಯ ವಚಃ = ನುಡಿಯನ್ನು, ಶ್ರುತ್ವಾ = ಕೇಳಿ, ಕ್ರೋಧತಾಮ್ರವಿಲೋಚನಃ = ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ॥ 19 ॥ ಹಂತುಂ = ಭೃಗುವನ್ನು ವಧಿಸಲು, ಶೀಘ್ರಂ = ಬೇಗನೆ, ಅಭ್ಯದ್ರವತ್ = ಅಟ್ಟಿಸಿಕೊಂಡು ಹೋದನು, ಋಷಿಃ = ಭೃಗುವು (ಆಗ) ಶಾಪಾತ್ = ಶಾಪದಿಂದ, ನಿರಾಕರೋತ್ = ಕೊಲ್ಲಲು ಬಂದ ಶಿವನ್ನು ತಡೆದನು (ತಿರಸ್ಕರಿಸಿದನು), ಸಋಷಿಃ = ಆ ಭೃಗು ಮುನಿಯು, ಲೋಕೈಃ = ಜನರಿಂದ, ತ್ವಂ = ನೀನು, ನೈವಪೂಜ್ಯಸೇ = ಪೂಜಿತನಾಗುವುದೇ ಇಲ್ಲ! (ಎಂದು) ಶಂಭುಂ = ರುದ್ರದೇವನನ್ನು, ಶಶಾಪ = ಶಪಿಸಿದನು ॥ 20 ॥ ತ್ವಚ್ಛಿಶ್ನಪೂಜನೇನೈವ = ನಿನ್ನ ಲಿಂಗಪೂಜೆಯಿಂದಲೇನೇ ಲೋಕೇ = ಜಗತ್ತಿನಲ್ಲಿ, ಖ್ಯಾತಿಂ = ಪ್ರಸಿದ್ಧಿಯನ್ನು, ಗಮಿಷ್ಯಸಿ = ಪಡೆಯುತ್ತೀಯೆ! ಇತ್ಯುಕ್ತ್ವಾ = ಇಂತು ನುಡಿದು ಸಋಷಿಃ = ಆ ಭೃಗುಮುನಿಯು, ಹರಿಮಂದಿರಂ = ಶ್ರೀಹರಿಯ ಮಂದಿರವಾದ, ವೈಕುಂಠಂ = ವೈಕುಂಠಲೋಕವನ್ನು ಕುರಿತು, ಆಗಾತ್ = ಬಂದನು. ॥ 21 ॥

**ಪ್ರಾಕಾರ ಗೋಪುರದ್ವಾರನವತೋರಣಭೂಷಿತಮ್ ।**
**ಚತುರ್ದಿಕ್ಷು ಚತುರ್ದ್ವಾರಪಾಲಕೈರುಪಶೋಭಿತಮ್ ॥ 22 ॥**

**ತತ್ರ ಶಯ್ಯಾಗೃಹೇ ದಿವ್ಯೇ ಶೇಷಮಂಚಕಶಾಯಿನಮ್ ।**
**ಲಕ್ಷ್ಮ್ಯಾ ಸಮೇತಂ ದೇವೇಶಂ ದದರ್ಶ ಸ ಭೃಗುಸ್ತದಾ ॥ 23 ॥**

**ತತಾಡೋರಸಿ ಗೋವಿಂದಂ ಭೃಗುಃ ಪಾದತಲೇನ ತಮ್ ।**
**ತಾಡ್ಯಮಾನೋ ಹರಿಃಸಾಕ್ಷಾದುತ್ಥಾಯ ವಿನಯಾನ್ವಿತಃ ॥ 24 ॥**

**ಪಪಾತ ಪರಯಾ ಭಕ್ತ್ಯಾ ಋಷಿಪಾದಸರೋರುಹೇ ।**
**ಆಲಿಲಿಂಗೇಽಥ ಭಕ್ತೈವ ಚೋವಾಚ ಋಷಿಪುಂಗವಮ್ ॥ 25 ॥**

ಪ್ರಾಕಾರಗೋಪುರದ್ವಾರನವತೋರಣಭೂಷಿತಂ - ಪ್ರಾಕಾರ = ಆವರಕ ಗೋಡೆಗಳಿಂದಾವೃತವಾದ ಕೋಟೆ, ಗೋಪುರ = ಗೋಪುರಗಳು, ದ್ವಾರ = ಬಾಗಿಲುಗಳಲ್ಲಿ ಕಟ್ಟಿರುವ, ನವ = ನೂತನವಾದ, ತೋರಣ = ತೋರಣಗಳಿಂದ, ಭೂಷಿತಂ = ಅಲಂಕೃತವಾದ, ಚತುರ್ದಿಕ್ಷು = ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ದಿಕ್ಕುಗಳಲ್ಲಿ, ಚತುರ್ದ್ವಾರಪಾಲಕೈಃ = ನಾಲ್ವರು ದ್ವಾರ ರಕ್ಷಕರುಗಳಿಂದ, ಉಪಶೋಭಿತಂ = ಬೆಡಗುಗೊಂಡಿರುವ, ಹರಿಮಂದಿರಂ = ಶ್ರೀಹರಿಮಂದಿರವನ್ನು ನೋಡಿ, ॥ 22 ॥ ತತ್ರ = ಅಲ್ಲಿ, ದಿವ್ಯೇ = ಶ್ರೇಷ್ಠವಾದ, ಶಯ್ಯಾಗೃಹೇ = ಅಂತಃಪುರದಲ್ಲಿ (ಮಲಗುವ ಮನೆಯಲ್ಲಿ) ಶೇಷಮಂಚಕಶಾಯಿನಂ = ಶೇಷಮಂಚದ ಸುಪ್ಪತ್ತಿಗೆಯಲ್ಲಿ ಪವಡಿಸಿರುವ, ಲಕ್ಷ್ಮ್ಯಾಸಮೇತಂ = ಲಕ್ಷ್ಮೀದೇವಿಯಿಂದ ಸಹಿತನಾದ, ದೇವೇಶಂ = ದೇವೋತ್ತಮನಾದ ಶ್ರೀವಿಷ್ಣುವನ್ನು, ಸಭೃಗುಃ = ಆ ಭೃಗುಮುನಿಯು, ದದರ್ಶ = ನೋಡಿದನು ॥ 23 ॥ ತದಾ = ಆವಾಗ, ಭೃಗುಃ = ಭೃಗುಋಷಿಯು, ಗೋವಿಂದಂ = ಆ ಶ್ರೀಹರಿಯನ್ನು, ಪಾದತಲೇನ = ತನ್ನ ಅಂಗಾಲಿನಿಂದ, ಉರಸಿ = ವಕ್ಷಃಸ್ಥಳದಲ್ಲಿ, ತತಾಡ = ಒದ್ದನು, ಹರಿಃ = ವಿಷ್ಣುವು, ಸಾಕ್ಷಾತ್ = ಪ್ರತ್ಯಕ್ಷವಾಗಿ, ತಾಡ್ಯಮಾನಃ = ಒದೆಯಿಸಿಕೊಳ್ಳುತ್ತಿರುವವನಾಗಿ, ಉತ್ಥಾಯ = ಹಾಸಿಗೆಯಿಂದ ಮೇಲೆದ್ದು, ವಿನಯಾನ್ವಿತಃ = ವಿಧೇಯನಾಗಿ (ವಿನಯಯುಕ್ತನಾಗಿ), ॥ 24 ॥ ಪರಮಾ ಭಕ್ತ್ಯಾ = ಪರಮಭಕುತಿಯಿಂದ, ಋಷಿಪಾದಸರೋರುಹೇ = ಭೃಗುಮುನಿಯ

ಚರಣ ಕಮಲಗಳ ಮೇಲೆ, ಪಪಾತ = ಬಿದ್ದನು (ಅಂದರೆ ಸಾಷ್ಟಾಂಗವೆರಗಿದನು), ಅಥ = ಆನಂತರ, ಭಕ್ತ್ಯೈವ = ಭಕ್ತಿಯಿಂದ, ಆಲಿಲಿಂಗೇ ಆಲಿಂಗಿಸಿದನು (ತಬ್ಬಿಕೊಂಡನು), ಅಥ = ತರುವಾಯ, ಋಷಿಪುಂಗವಂ = ಋಷಿವರನಾದ ಭೃಗುಮುನಿಯನ್ನು (ಕುರಿತು), ಉವಾಚ = ಹೇಳಿದನು ॥ 25 ॥

*ಶ್ರೀ ಭಗವಾನುವಾಚ-*

**ಕಿಮರ್ಥಂ ತ್ವಂ ಋಷಿಶ್ರೇಷ್ಠ ಮಚ್ಛರೀರಂ ಕಠೋರಕಮ್ ।**
**ಅಮೃತಂ ತ್ವಜರಾಯುಕ್ತಮಭೇದ್ಯಂ ದೇವದಾನವೈಃ ॥ 26 ॥**

**ವಜ್ರಾದ್ದೃಢತರಂ ವಿದ್ಧಿ ಮಚ್ಛರೀರಂ ದ್ವಿಜೋತ್ತಮ ।**
**ಕಿಮರ್ಥಂ ತಾಡಿತಂ ವಿಪ್ರ ಕೋಮಲಾಂಘ್ರಿತಲೇನ ತತ್ ॥ 27 ॥**

**ಪಾದೌ ತೇ ಕೋಮಲೌ ದಿವ್ಯೌ ಮಚ್ಛರೀರಸಮಾಗಮಾತ್ ।**
**ಕಿಯದ್ದುಃಖಂ ಸಮಾಪನ್ನೌ ನ ಜಾನಾಮಿ ದ್ವಿಜೋತ್ತಮ ॥ 28 ॥**

**ಇತ್ಯುಕ್ತ್ವಾ ದ್ವಿಜಪಾದೌ ತೌ ಪ್ರಕ್ಷಾಲ್ಯೋಷ್ಣೋದಕೇನ ವೈ ।**
**ದಧಾರ ಶಿರಸಾ ತೋಯಂ ವಿಪ್ರಪಾದೋದ್ಗತಂ ಶಿವಮ್ ॥ 29 ॥**

**ಸಗೃಹಂ ಸಕುಟುಂಬಂ ಚ ಸರ್ವಲೋಕಂ ವಿಡಂಬಯನ್।**
**ವಿಬುಧಾ ದರ್ಶನೇನೈವ ಪುನಂತಿ ಚ ಜಗತ್ತ್ರಯಮ್ ॥ 30 ॥**

**ಇತ್ಯುಕ್ತೋ ದೇವದೇವೇನ ಋಷಿಶ್ವಾಗ್ರಾದ್ಧರಾತಲಮ್ ।**
**ಋಷೀಣಾಮಗ್ರಜಾತೀನಾಂ ಸಭಾಯಾಂ ಸ ಋಷಿಸ್ತದಾ ॥ 31 ॥**

**ಬೋಧಯಾಮಾಸ ತಾನ್ಸರ್ವಾನ್ ಸ ತು ಸರ್ವೋತ್ತಮಃಸ್ವಯಮ್ ।**
**ಇತ್ಯೇವಂ ಚಕ್ರಿರೇ ಯಜ್ಞಮರ್ಪಣಂ ಜಗದೀಶಿತುಃ ॥ 32 ॥**

**ಹರಿಃ ಸರ್ವೋತ್ತಮಃ ಸಾಕ್ಷಾತ್ ರಮಾದೇವೀ ತದಂತರಮ್ ।**
**ವಿಧಿರ್ವಾಯುಸ್ತದಂತೇ ಚ ತದಂತೇ ಶರ್ವಪೂರ್ವಕಾಃ ॥ 33 ॥**

**ಏವಂ ತರತಮಾ ಜ್ಞೇಯಾಃ ಸುರದೈತ್ಯನರೇಷು ಚ ।**
**ಇತ್ಯೇವಂ ಬೋಧಿತಾ ವಿಪ್ರಾಃ ಭೃಗುಣಾ ತತ್ತ್ವವೇದಿನಾ॥**
**ಹರಿಂ ನಿಶ್ಚಿತ್ಯ ಸರ್ವೇಶಂ ಚಕ್ರು ಸ್ತಸ್ಮೈ ಮಖಾರ್ಪಣಮ್ ।**
**ತತಸ್ತು ಭಗವಾನ್ ದೇವಃ ಏಕಾಂತೇ ನಿಜಮಂದಿರೇ ॥ 34 ॥**

ಶ್ರೀಭಗವಾನುವಾಚ = ಷಡ್ಗುಣ್ಯೈಶ್ವರ್ಯಸಂಪನ್ನನಾದ ಶ್ರೀಹರಿಯು ಮಾತನಾಡಿದನು, ಋಷಿಶ್ರೇಷ್ಠ = ಭೃಗು-ಮುನಿಯೇ, ತ್ವಂ = ನೀನು, ಕಠೋರಕಂ = ಅತ್ಯಂತ ಕಠಿಣವಾದ, ಅಮೃತಂ = ನಾಶರಹಿತವಾದ, ಅಜರಾಯುಕ್ತಂ =

ಮುಪ್ಪಿಲ್ಲದಿರುವ, ದೇವದಾನವೈಃ = ಸುರರು ರಾಕ್ಷಸರುಗಳಿಂದ (ಸಹ), ಅಭೇದ್ಯಂ = ಅಭೇದ್ಯವಾದ (ಭೇದಿಸಲಸದಳವಲ್ಲದ), ಮಚ್ಛರೀರಂ = ನನ್ನ ದೇಹವನ್ನು, ಕಿಮರ್ಥಂ = ಏತಕ್ಕಾಗಿ (ಕಾಲಿನಿಂದ ಒದ್ದೆ?) ।। 26 ।। ದ್ವಿಜೋತ್ತಮ = ಭೂಸುರಶ್ರೇಷ್ಠನಾದ ಭೃಗುಮುನಿಯೇ, ಮಚ್ಛರೀರಂ = ನನ್ನ ಶರೀರವನ್ನು, ವಜ್ರಾದ್ದೃಢತರಂ = ವಜ್ರಕ್ಕಿಂತಲೂ ಗಟ್ಟಿಯಾದುದೆಂದು, ವಿದ್ಧಿ = ತಿಳಿ, ವಿಪ್ರ = ಎಲೈ ಬ್ರಾಹ್ಮಣನೇ, (ತ್ವಯಾ = ನಿನ್ನಿಂದ), ಕಿಮರ್ಥಂ = ಏತಕ್ಕಾಗಿ, ತತ್ = ಇಂತು ಕಠಿಣವಾದ ನನ್ನ ಶರೀರವು, ಕೋಮಲಾಂಘ್ರಿತಲೇನ = ಮೃದುವಾದ ಅಂಗಾಲಿನಿಂದ, ತಾಡಿತಂ = ಒದೆಯಲ್ಪಟ್ಟಿತು? ।। 27 ।। ತೇ = ನಿನ್ನ, ಕೋಮಲೌ = ಮೃದುವಾದ, ದಿವ್ಯೌ = ಶ್ರೇಷ್ಠವಾದ, ಪಾದೌ = ಎರಡು ಚರಣಗಳು, ಮಚ್ಛರೀರಸಮಾಗಮಾತ್-ಮಚ್ಛರೀಲ = ಕಠಿಣವಾದ ನನ್ನ ಶರೀರದ, ಸಮಾಗಮಾತ್ = ಸಂಬಂಧದಿಂದ, ಕಿಯದ್ದುಃಖಂ = ಅದೆಷ್ಟು ನೋವನ್ನು, ಸಮಾಪನ್ನೌ = ಪಡೆದವೋ, ದ್ವಿಜೋತ್ತಮ = ವಿಪ್ರೋತ್ತಮನಾದ ಭೃಗುಮುನಿಯೇ! ನ ಜಾನಾಮಿ = ತಿಳಿಯದವನಾಗಿದ್ದೇನೆ. ।। 28 ।। ಇತ್ಯುಕ್ತ್ವಾ = ಹೀಗೆಹೇಳಿ, ತೌ ದ್ವಿಜಪಾದೌ = ಆ ಋಷಿಯ ಪಾದದ್ವಯವನ್ನು, ಉಷ್ಣೋದಕೇನ ವೈ = ಹಿತಮಿತವಾದ ಬಿಸಿ ನೀರಿನಿಂದ, ಪ್ರಕ್ಷಾಲ್ಯ = ತೊಳೆದು,

ವಿಪ್ರಪಾದೋದ್ಗತಂ = ಭೃಗುಋಷಿಯ ಪಾದದಿಂದ ಬಂದ, ಶಿವಂ = ಮಂಗಳಕರವಾದ, ತೋಯಂ = (ನೀರನ್ನು) ಪಾದೋದಕವನ್ನು, ಶಿರಸಾ = ಶಿರಸ್ಸಿನಿಂದ, ದಧಾರ = ಧರಿಸಿದನು (ಅಂದರೆ ಭೃಗು ಋಷಿಯ ಪಾದೋದಕವನ್ನು ತಲೆಗೆ ಪ್ರೋಕ್ಷಿಸಿಕೊಂಡನೆಂದು ಭಾವ) ।। 29 ।। ವಿಬುಧಾಃ = ಜ್ಞಾನಿಗಳಾದ ಪಂಡಿತರು, ದರ್ಶನೇನೈವ = ದರ್ಶನಮಾತ್ರದಿಂದಲೇ, ಜಗತ್ತ್ರಯಂಚ = ಮೂರುಲೋಕಗಳನ್ನೂ ಸಹ, ಪುನಂತಿ = ಪಾವನ-ಗೊಳಿಸುತ್ತಾರೆ - ಎನ್ನುತ್ತಾ, ಸರ್ವಲೋಕಂ = ನಿಖಿಲಪ್ರಪಂಚವನ್ನು, ವಿಡಂಬಯನ್ = ವಿಡಂಬನಗೊಳಿಸುತ್ತಾ (ಅಚ್ಚರಿಯಿಂದ ನಂಬುವಂತೆ ಮಾಡುತ್ತಾ ಶ್ರೀಹರಿಯು) ಸ್ವಗೃಹಂ = ಮನೆಯಿಂದ ಸಹಿತವಾದ, ಸಕುಟುಂಬಂ ಚ = ತನ್ನ ಪತ್ನಿ, ಪುತ್ರಾದಿಗಳಾದಿಯಾಗಿ ಸಮಸ್ತವನ್ನೂ, (ಭೃಗುಮುನಿಯ ಪಾದ ಜಲದಿಂದ ಪ್ರೋಕ್ಷಿಸಿದನು). ।। 30 ।। ಇಂತು ಭಕ್ತಿಪ್ರದರ್ಶನ ಪೂರ್ವಕವಾಗಿ, ದೇವೋತ್ತಮನಾದ ಶ್ರೀಹರಿಯಿಂದ, ಉಕ್ತಃ = ಹೇಳಿಸಿಕೊಂಡ, ಋಷಿಃ = ಭೃಗುಮುನಿಯು, ಧರಾತಲಂ (ಪ್ರತಿ) = ಭೂತಲವನ್ನು ಕುರಿತು, ಅಗಾತ್ = ಬಂದನು, ಅಗ್ರಜಾತೀನಾಂ = ಬ್ರಾಹ್ಮಣರ, ಸಭಾಯಾಂ = ಸಭೆಯಲ್ಲಿ, ಸಋಷಿಃ = ಆ ಭೃಗುಮುನಿಯು, ತದಾ = ಆವಾಗ, ಸ ತು = ಆ ಶ್ರೀವಿಷ್ಣುವು, ಸ್ವಯಂ = ಸ್ವತಃ, ಸರ್ವೋತ್ತಮಃ = ಸಕಲದೇವತೆಗಳಿಗೂ ಪ್ರಭುವಾದ ಉತ್ತಮದೇವತೆಯು ಎಂದು, ಸರ್ವಾನ್‌ತಾನ್ = ಆ ಎಲ್ಲ ಋಷಿಮುನಿಗಳನ್ನು ಉದ್ದೇಶಿಸಿ, ಬೋಧಯಾಮಾಸ = ಉಪದೇಶಿಸಿದನು. ಆಗ ಆ ಎಲ್ಲ ಋಷಿಗಳು ಇತ್ಯೇವಂ = ಶ್ರೀಹರಿಯೇ ಸರ್ವೋತ್ತಮನೆಂದು, ಜಗದೀಶಿತುಃ = ಸಮಸ್ತ ಜಗನ್ನಿಯಾಮಕನಾದ ಶ್ರೀಹರಿಪರಮಾತ್ಮನಿಗೆ, ಯಜ್ಞಂ = ಯಜ್ಞವನ್ನು ಆಚರಿಸಿ, ಅರ್ಪಣಂ = ಯಜ್ಞಫಲ ಸಮರ್ಪಣೆಯನ್ನು, ಚಕ್ರಿರೇ = ಮಾಡಿದರು. ।। 31-32 ।।

ಹರಿಃ = ವಿಷ್ಣುವು, ಸಾಕ್ಷಾತ್ = ಪ್ರತ್ಯಕ್ಷವಾಗಿ, ಸರ್ವೋತ್ತಮಃ = ಸಕಲದೇವತಾ ಸಾರ್ವಭೌಮನು, ತದಂತರಂ = ತರುವಾಯ, ರಮಾದೇವಿ = ಶ್ರೀಲಕ್ಷ್ಮೀದೇವಿಯು ತಾರತಮ್ಯದಲ್ಲಿಕಿರಿಯಳು, ತದಂತೇ = ರಮಾದೇವಿಯ ತರುವಾಯ, ವಿಧಿರ್ವಾಯುಃ = ಬ್ರಹ್ಮದೇವರು, ವಾಯುದೇವರು ತಾರತಮ್ಯದಲ್ಲಿಕನಿಷ್ಠರು, ತದಂತೇ = ಬ್ರಹ್ಮ-ವಾಯುಗಳ ಆನಂತರ, ಶರ್ವಪೂರ್ವಕಾಃ = ರುದ್ರಾದಿದೇವತೆಗಳು (ಗಾಯತ್ರಿ, ಭಾರತಿ, ಗರುಡ, ಶೇಷ-ರುದ್ರಾದಿದೇವತೆಗಳು), ತಾರತಮ್ಯದಲ್ಲಿ ಒಬ್ಬರಿಗಿಂತ ಒಬ್ಬರು ಕನಿಷ್ಠರು. ಸುರದೈತ್ಯನರೇಷು ಚ = ದೇವತೆಗಳು, ದೈತ್ಯರು ಮತ್ತು ಮನುಷ್ಯರೊಳಗೆ, ಏವಂ = ಈ ಪ್ರಕಾರವಾಗಿ, ತರತಮಾಃ = ತಾರತಮ್ಯೋಪೇತರೆಂದು, ಜ್ಞೇಯಾಃ = ತಿಳಿಯಲ್ಪಡಬೇಕು, ಇತ್ಯೇವಂ = ಹೀಗೆ, ತತ್ತ್ವವೇದಿನಾ = ತತ್ತ್ವಜ್ಞಾನಿಯಾದ, ಭೃಗುಣಾ = ಭೃಗುಮಹರ್ಷಿಯಿಂದ, ಬೋಧಿತಾಃ = ಉಪದೇಶಿಸಲ್ಪಟ್ಟ, ವಿಪ್ರಾಃ = ಅಲ್ಲಿ ನೆರೆದ

ಬ್ರಾಹ್ಮಣರು, ಹರಿಂ = ಶ್ರೀಮನ್ನಾರಾಯಣನನ್ನು, ಸರ್ವೇಶಂ = ಸರ್ವೇಶ್ವರನೆಂದು (ಸರ್ವೋತ್ತಮ ದೇವತೆಯೆಂದು) ನಿಶ್ಚಿತ್ಯ = ಪ್ರಾಮಾಣಿಕವಾಗಿ ತೀರ್ಮಾನಿಸಿ (ನಿಶ್ಚಯಿಸಿ), ತಸ್ಮೈ = ಸರ್ವೋತ್ತಮನಾದ ಶ್ರೀಹರಿಪರಮಾತ್ಮನಿಗೆ, ಮಖಾರ್ಪಣಂ = ಯಜ್ಞಫಲ ಸಮರ್ಪಣೆಯನ್ನು, ಚಕ್ರುಃ = ಮಾಡಿದರು. ।। 33-34 ।।

**ರಮಾಸಾರ್ಧಂ ಯದಾ ತಿಷ್ಠಂಸ್ತದೋವಾಚ ರಮಾ ಹರಿಮ್ ।**

ಶ್ರೀರಮೋವಾಚ-

**ಗಚ್ಛಾಮಿ ದೇವದೇವೇಶ ತ್ಯಕ್ತ್ವಾ ತ್ವಾಂ ಜಗದೀಶ್ವರ ।। 35 ।।**

**ತಾಡಿತೋಽಸಿ ಜಗನ್ನಾಥ ಋಷಿಣಾಽವರ ಜನ್ಮನಾ ।**
**ಮದಾಲಿಂಗಸ್ಥಲೇ ದೇವ ಪಾದೇನೈವ ಜಗತ್ಪತೇ ।। 36 ।।**

**ಕರವೀರಪುರಂ ದಿವ್ಯಂ ಗಚ್ಛಾಮಿ ಗರುಡಧ್ವಜ ।**
**ಇತಿ ಪ್ರೇಮ್ಣಾ ಚ ಕಲಹಂ ಕೃತ್ವಾ ತು ಹರಿಣಾ ಸಹ ।। 37 ।।**

**ರಮಾ ಜಗಾಮ ತತ್ ಕ್ಷೇತ್ರಂ ಕರವೀರಪುರಂ ಪ್ರತಿ ।**
**ಯದಾ ಗತಾ ಮಹಾಲಕ್ಷ್ಮೀಃ ತದಾ ನಾರಾಯಣೋ ಹರಿಃ ।। 38 ।।**

ತತಸ್ತು = ಆನಂತರ, ಭಗವಾನ್ = ಷಡ್ಗುಣೈಶ್ವರ್ಯಪೂರ್ಣನಾದ, ದೇವಃ = ಪ್ರಭುವಾದ ಶ್ರೀಹರಿಯು, ನಿಜಮಂದಿರೇ = ವೈಕುಂಠಪುರದಲ್ಲಿ ।। 34 ।। ಏಕಾಂತೇ = ರಹಸ್ಯದಲ್ಲಿ, ರಮಾಸಾರ್ಧಂ = ಲಕ್ಷ್ಮೀದೇವಿಯಿಂದೊಡಗೂಡಿ, ಯದಾ = ಯಾವಾಗ, ಅತಿಷ್ಠತ್ = ಇದ್ದನೋ, ತದಾ = ಆಗ, ರಮಾ = ಲಕ್ಷ್ಮೀದೇವಿಯು, ಹರಿಂ(ಪ್ರತಿ) = ಶ್ರೀಹರಿಯನ್ನು ಕುರಿತು, ಉವಾಚ = ಮಾತನಾಡಿದಳು, ಶ್ರೀರಮೋವಾಚ = ಮಹಾಲಕ್ಷ್ಮಿಯು ಹೇಳಿದಳು - ದೇವದೇವೇಶ = ದೇವೋತ್ತಮನಾದ, ಜಗದೀಶ್ವರ = ಸಕಲ ಜಗನ್ನಿಯಾಮಕನಾದ ಪ್ರಭುವೇ, ತ್ವಾಂ = ನಿನ್ನನ್ನು, ತ್ಯಕ್ತ್ವಾ = ಬಿಟ್ಟು ।। 35 ।। ಗಚ್ಛಾಮಿ = ಹೋಗುತ್ತೇನೆ, ಜಗನ್ನಾಥ = ಶ್ರೀಹರಿಯೇ, ಅವರಜನ್ಮನಾ = ತಾರತಮ್ಯದಲ್ಲಿ ಕನಿಷ್ಠನಾದ (ಕಿಂಕರನೂ ಆದ), ಋಷಿಣಾ = ಭೃಗುಮುನಿಯಿಂದ, ಜಗತ್ಪತೇ = ಜಗತ್ತಿಗೆ ಸ್ವಾಮಿಯಾದ ಹರಿಯೇ, ಮದಾಲಿಂಗನಸ್ಥಲೇ = ನಾನು ಸರ್ವದಾ ಆಲಿಂಗಿಸುವ ವಕ್ಷಃಸ್ಥಳದ ಮೇಲೆ, ಪಾದೇನೈವ = ಅಂಗಾಲಿನಿಂದಲೇ, ತಾಡಿತೋಽಸಿ = ಒದೆಯಲ್ಪಟ್ಟಿರುವೆ, ಜಗನ್ನಾಥ = ಜಗತ್ತಿಗೆ ಪ್ರಭುವಾದ, ಗರುಡಧ್ವಜ = ಗರುಡಧ್ವಜನಾದ ವಿಷ್ಣುವೇ, (ಆದ್ದರಿಂದ) ದಿವ್ಯಂ = ಉತ್ತಮವಾದ, ಕರವೀರಪುರಂ = ನನ್ನ ತವರು ಮನೆಯಾದ ಕೊಲ್ಹಾಪುರಕ್ಕೆ, ಗಚ್ಛಾಮಿ = ಹೋಗುತ್ತೇನೆ, ಇತಿ = ಹೀಗೆ, ಹರಿಣಾ ಸಹ = ಶ್ರೀವಿಷ್ಣುವಿನೊಡನೆ, ಪ್ರೇಮ್ಣಾ = ಪ್ರೀತಿಯಿಂದ, ಕಲಹಂ = ಜಗಳವನ್ನು, ಕೃತ್ವಾತು = ಮಾಡಿ (ಮಾಡಿದಂತೆ ನಟಿಸಿ), ।। 36-37 ।। ರಮಾ = ಲಕ್ಷ್ಮೀದೇವಿಯು, ತತ್ ಕ್ಷೇತ್ರಂ = ಶ್ರೀವೈಕುಂಠವನ್ನು, ತ್ಯಕ್ತ್ವಾ = ಬಿಟ್ಟು, ಕರವೀರಪುರಂಪ್ರತಿ = ಕರವೀರಪುರವನ್ನು ಕುರಿತು, ಜಗಾಮ = ಹೊರಟುಹೋದಳು.

**ಅಷ್ಟಾವಿಂಶತಿಮೇ ಪ್ರಾಪ್ತೇ ದ್ವಾಪರಾಂತ್ಯೇ ಕಲೌ ಯುಗೇ ।**
**ಯಸ್ಮಿನ್ ದೇಶೇ ಯದಾ ಪ್ರೇಮಕಲಹೋಽಸ್ಯಾಃ ಪ್ರಶಮ್ಯತಿ ।**
**ಕರ್ಮಣಾ ಯೇನ ಚ ಯಥಾ ತತ್ತಥಾ ಚ ಕರೋಮ್ಯಹಮ್ ।। 39 ।।**

**ಇತಿ ಸಂಕಲ್ಪ್ಯ ಗೋವಿಂದೋ ಲೀಲಾಮಾನುಷವಿಗ್ರಹಃ ।**
**ಮಾಯಾವೀ ಪರಮಾನಂದಂ ತ್ಯಕ್ತ್ವಾ ವೈಕುಂಠಮುತ್ತಮಮ್ ॥ 40 ॥**

ಅಷ್ಟಾವಿಂಶತಿಮೇ = ಇಪ್ಪತ್ತೆಂಟನೆಯದಾದ; ದ್ವಾಪರಾಂತೇ = ದ್ವಾಪರಯುಗದ ಕೊನೆಯ ಭಾಗದಲ್ಲಿ ಕಲೌಯುಗೇ = ಕಲಿಯುಗದಲ್ಲಿ, ಯದಾ = ಯಾವಾಗ, ಮಹಾಲಕ್ಷ್ಮೀಃ = ಶ್ರೀಮಹಾಲಕ್ಷ್ಮಿಯು, ಆಗತಾ = ಕೊಲ್ಹಾಪುರಕ್ಕೆ ಬಂದಳೋ (ಗತಾ = ಕೊಲ್ಹಾಪುರಕ್ಕೆ ಹೋದಳೋ), ತದಾ = ಆಗ, ನಾರಾಯಣೋ ಹರಿಃ = ಕ್ಷೀರಾಬ್ಧಿಶಾಯಿಯಾದ ಶ್ರೀಮನ್ನಾರಾಯಣನು, ಯಸ್ಮಿನ್ ದೇಶೇ = ಯಾವದೇಶದಲ್ಲಿ, ಯದಾ = ಯಾವಾಗ, ಯೇನ ಕರ್ಮಣಾ = ಯಾವ ಕಾರ್ಯದಿಂದ, ಯಥಾ = ಹೇಗೆ, ಅಸ್ಯಾಃ = ಶ್ರೀಮಹಾಲಕ್ಷ್ಮಿಯು, ಪ್ರೇಮಕಲಹಃ = ಪ್ರೇಮಕಲಹವು, ಪ್ರಶಮ್ಯತಿ = ಶಾಂತವಾಗುವುದೋ, ತತ್ = ಅಂತಹ ಕಾರ್ಯವನ್ನು, ತಥಾ = ಹಾಗೆಯೇ, ಅಹಂ = ನಾನು, ಕರೋಮಿ = ಮಾಡುತ್ತೇನೆ ॥ 36 ॥ ಇತಿ = ಈ ರೀತಿಯಾಗಿ, ಸಂಕಲ್ಪ್ಯ = ಶ್ರೀಲಕ್ಷ್ಮಿಯೊಡನೆ ಮಾತನಾಡಿ ಸಂಕಲ್ಪಿಸಿ, ಲೀಲಾಮಾನುಷವಿಗ್ರಹಃ = ವಿಲಾಸಕ್ಕಾಗಿ ಸ್ವೀಕರಿಸಲ್ಪಟ್ಟ ಮಾನವಾಕೃತಿಯುಳ್ಳ, ಮಾಯಾವೀ = ಪ್ರಕೃತಿಯನ್ನು ಸ್ವಾಧೀನಪಡಿಸಿಕೊಂಡಿರುವ (ಸ್ವಾಧೀನ ಪ್ರಕೃತಿಕನಾದ), ಗೋವಿಂದಃ = ಶ್ರೀಹರಿಯು, ಪರಮಾನಂದಂ = ಶ್ರೇಷ್ಠವಾದ ಆನಂದವುಳ್ಳ (ಪರಮಾನಂದಪ್ರದವಾದ), ಉತ್ತಮಂ = ಶ್ರೇಷ್ಠವಾದ, ವೈಕುಂಠಂ = ವೈಕುಂಠಲೋಕವನ್ನು, ತ್ಯಕ್ತ್ವಾ = ಬಿಟ್ಟು ಹೊರಟನು ॥ 40 ॥

**ಗಂಗಾಯಾ ದಕ್ಷಿಣೇ ದೇಶೇ ಯೋಜನಾನಾಂ ಶತತ್ರಯೇ ।**
**ಸುವರ್ಣಮುಖರೀ ನಾಮ ನದೀನಾಂ ಪ್ರವರಾ ನದೀ ॥ 41 ॥**

**ಶುಕಸ್ಯ ವರದಾ ಪುಣ್ಯಾ ಅಗಸ್ತ್ಯಮುನಿಪೂಜಿತಾ ।**
**ತಸ್ಯಾ ಏವೋತ್ತರೇ ತೀರೇ ಕ್ರೋಶಾರ್ಧದ್ವಯಮಾತ್ರಕೇ ॥ 42 ॥**

**ಶ್ರೀವೇಂಕಟಗಿರಿರ್ನಾಮ ವರ್ತತೇ ಪುಣ್ಯಕಾನನಃ ।**
**ಸುವರ್ಣಗಿರಿಪುತ್ರಸ್ತು ಸರ್ವತೀರ್ಥಸಮನ್ವಿತಃ ॥ 43 ॥**

ಗಂಗಾಯಾಃ = ಗಂಗಾನದಿಯ, ದಕ್ಷಿಣೇದೇಶೇ = ದಕ್ಷಿಣದಿಕ್ಕಿನಲ್ಲಿ (ದೇಶದಲ್ಲಿ), ಯೋಜನಾನಾಂ ಶತತ್ರಯೇ = ಮೂರುನೂರುಯೋಜನ(ಗಾವುದ) ದೂರದಲ್ಲಿ ಸುವರ್ಣಮುಖರೀನಾಮ = ಸುವರ್ಣಮುಖರಿಯೆಂಬ ಹೆಸರಿನ, ನದೀನಾಂ = ಸಕಲ ನದಿಗಳಲ್ಲಿ ಪ್ರವರಾ = ಶ್ರೇಷ್ಠವಾದ, ನದೀ = ನದಿಯು (ಇದೆ). ಅದು ॥ 41 ॥ ಶುಕಸ್ಯ = ಶುಕಮುನಿಗಳಿಗೆ, ವರದಾ = ವರವನ್ನು ಕೊಟ್ಟುದುದಾಗಿದೆ. ಪುಣ್ಯಾ = ಧರ್ಮಸಂಪಾದಕವಾಗಿದೆ, ಅಗಸ್ತ್ಯ ಮುನಿಪೂಜಿತಾ = ಅದು ಅಗಸ್ತ್ಯಮುನಿಗಳಿಂದ ಪೂಜಿತವಾದುದು. (ಇಂತಹ) ತಸ್ಯಾಃ = ಆ ಸುವರ್ಣಮುಖರೀ ನದಿಯ, ಉತ್ತರೇ ತೀರೇ ಏವ = ಉತ್ತರದಿಕ್ಕಿನ ತೀರದಲ್ಲಿಯೇ, ಕ್ರೋಶಾರ್ಧಮಾತ್ರಕ್ಕೆ = ಎರಡೂವರೆ ಹರದಾರಿಯಲ್ಲಿರುವ ॥ 42 ॥ ಶ್ರೀವೇಂಕಟಗಿರಿರ್ನಾಮ – ಶ್ರೀ = ಸಂಪದ್ಯುಕ್ತವಾದ, ವೇದಪ್ರತಿಪಾದ್ಯ ಮಹಿಮೆಯುಳ್ಳ, ವೇಂಕಟಗಿರಿರ್ನಾಮ = ವೇಂಕಟಾಚಲವೆಂಬ ಹೆಸರಿನ, ಸುವರ್ಣಗಿರಿಪುತ್ರಸ್ತು = ಮೇರುಪರ್ವತದ ಮಗನಾದ; ಪುಣ್ಯಕಾನನಃ = ಸುಕೃತ ಸಂಪಾದಕವಾದ ಅರಣ್ಯವೂ, ಸರ್ವತೀರ್ಥಸಮನ್ವಿತಃ = ಸಕಲ ಪುಣ್ಯತೀರ್ಥಗಳಿಂದ (ಪುಷ್ಕರೋದಕಗಳಿಂದ) ಯುಕ್ತವಾದ, ಪರ್ವತಃ = ಬೆಟವು, ವರ್ತತೇ = ಇರುವುದು. ॥ 43 ॥

**ಸಾಕ್ಷಾಚ್ಛೇಷಾವತಾರೋಽಸೌ ಸರ್ವಧಾತುವಿರಾಜಿತಃ ।**
**ವೈಕುಂಠಸದೃಶೋ ದಿವ್ಯೋ ನಾರಾಯಣಸಮಾಶ್ರಯಃ ॥ 44 ॥**

**ಶೇಷಮಾರುತ ಸಂವಾದಾದಾಗತಃ ಪುಣ್ಯಕಾನನಃ ।**
**ಯೋಜನತ್ರಯವಿಸ್ತೀರ್ಣಃ ತ್ರಿಶಂದ್ಯೋಜನಮಾಯತಃ ॥ 45 ॥**

ಸರ್ವಧಾತುವಿರಾಜಿತಃ = ಸಕಲಧಾತುಗಳಿಂದ ಅಲಂಕೃತವಾದ, ವೈಕುಂಠಸದೃಶಃ = ವೈಕುಂಠಕ್ಕೆ ಸಮಾನವಾದ, ದಿವ್ಯಃ = ದೇವತೆಗಳಿಗೆ ಯೋಗ್ಯವಾದ, ನಾರಾಯಣ ಸಮಾಶ್ರಯಃ = ಶ್ರೀಹರಿಯ ಆವಾಸಸ್ಥಳವಾದ, ಅಸೌ = ಈ ವೇಂಕಟಾಚಲವು, ಸಾಕ್ಷಾತ್ ಶೇಷಾವತಾರಃ = ಪ್ರತ್ಯಕ್ಷವಾಗಿ ಆದಿಶೇಷನ ಅವತಾರವಾಗಿದೆ, ॥ 44 ॥ ಶೇಷಮಾರುತ ಸಂವಾದಾತ್ – ಶೇಷ = ಆದಿಶೇಷನು, ಮಾರುತ = ವಾಯುದೇವನು ಇವರ, ಸಂವಾದಾತ್ = ಪರಸ್ಪರ ವಾದಸಂವಾದ ಕಾರಣದಿಂದಾಗಿ, ಯೋಜನತ್ರಯವಿಸ್ತೀರ್ಣಃ = ಮೂರುಗಾವುದ ವಿಸ್ತಾರವಾದ, ತ್ರಿಂಶದ್ಯೋಜನಮಾಯತಃ = ಮೂವತ್ತು ಯೋಜನದಷ್ಟು ಅಗಲವಾದ, ಪುಣ್ಯಕಾನನಃ = ಪುಣ್ಯಕಾರಕವಾದ ಅರಣ್ಯವುಳ್ಳ, ಪರ್ವತಃ = ಬೆಟ್ಟವು, ಆಗತಃ = ಬಂದಿತು (ಶೇಷವಾಯುಗಳ ವಿವಾದದಿಂದ ಈ ಬೆಟ್ಟವು, ಇಲ್ಲಿಗೆ ಬಂದಿತು ಎಂದು ಭಾವ) ॥ 45 ॥

**ವದನಂ ವೇಂಕಟಗಿರಿಃ ನೃಸಿಂಹಾಚಲಮಧ್ಯಮಃ ।**
**ಶ್ರೀಶೈಲಃ ಪುಚ್ಛಭಾಗಸ್ತು ಸರ್ವಕ್ಷೇತ್ರಮಯೋ ಗಿರಿಃ ॥ 46 ॥**

**ಸರ್ವವೃಕ್ಷಸಮಾಕೀರ್ಣಃ ಸರ್ವಧಾತುವಿಭೂಷಿತಃ ।**
**ಕುಂದಮಂದಾರ ಪನಸ ಪ್ಲಕ್ಷೋದುಂಬುರ ಕಿಂಶುಕೈಃ ॥ 47 ॥**

**ಪಿಚುಮಂದೈಃ ಪಾರಿಜಾತೈಃ ತಿಂತ್ರಿಣೀ ಜಂಬುಮಂಡಲೈಃ ।**
**ಧವಲೈಶ್ಚಂದನೈಶ್ಚೂತೈಃ ಕೃಷ್ಣಾಗರುವಿರಾಜಿತಃ ॥ 48 ॥**

**ತಾಲಹಿಂತಾಲ ಪುನ್ನಾಗೈಃ ದೇವದಾರುವಿರಾಜಿತಃ ।**
**ಹಂಸಕಾರಂಡವಾಕೀರ್ಣೋ ಬಕಕೋಕ ಶುಕೈರ್ವೃತಃ ॥ 49 ॥**

**ಕಪೋತೈಃ ಕ್ಷೀರಹಂಸೈಶ್ಚ ಮೃಗಖಂಡ (ಷಂಡ) ವಿರಾಜಿತಃ ।**
**ಸಿಂಹಶಾರ್ದೂಲಶರಭ ಕ್ರೋಢಮಾತಂಗವಾನರೈಃ ॥ 50 ॥**

**ಜಂಬೂಕೈಶ್ಚೈವ ಭಲ್ಲೂಕೈಃ ಕಸ್ತೂರೀಮೃಗವಾಸಿತಃ ।**
**ತುರಗೈಶ್ಚ ಗವಾಂಖಂಡೈಃ ಮಹಿಷೀಗಣಸೇವಿತಃ (ಮಹರ್ಷಿಗಣಸೇವಿತಃ) ॥ 51 ॥**

**ಮಲ್ಲಿಕಾಮಾಲತೀಜಾತೀ ನಂದ್ಯಾವರ್ತ್ಯವಿರಾಜಿತಃ ।**
**ಚಂಪಕಾಶೋಕ ಪುನ್ನಾಗ ಕೇತಕೈಃ ಸ್ವರ್ಣಕೇತಕೈಃ ॥ 52 ॥**

ವೇಂಕಟಗಿರಿಃ = ಈ ವೇಂಕಟಾಚಲವು, ವದನಂ = ಮುಖಭಾಗವಾಗಿದೆ, ನೃಸಿಂಹಾಚಲಮಧ್ಯಮಃ = ನೃಸಿಂಹಾಚಲವೇ (ಅಹೋಬಲ ಪರ್ವತವೇ) ಮಧ್ಯಭಾಗವು, ಪುಚ್ಛಭಾಗಃ = (ಬಾಲದಂತಿರುವ) ಕೊನೆಯ ಭಾಗವೇ,

ಶ್ರೀಶೈಲಃ = ಶ್ರೀಶೈಲಪರ್ವತವಾಗಿದೆ. ಗಿರಿಃ = ಈ ಶೇಷಾಚಲವು, ಸರ್ವಕ್ಷೇತ್ರಮಯಃ = ಸಕಲ ಪುಣ್ಯಕ್ಷೇತ್ರಮಯವಾಗಿದೆ. ।। 46 ।। ಸರ್ವವೃಕ್ಷಸಮಾಕೀರ್ಣಃ = ಸಕಲ ಗಿಡಮರಗಳಿಂದ ನಿಬಿಡವಾದ, ಸರ್ವಧಾತುವಿಭೂಷಿತಃ = ಕೃಷ್ಣ - ರಕ್ತವರ್ಣೋಪೇತವಾದ ಗೈರಕಾದಿ ಸಮಸ್ತಧಾತುಗಳಿಂದ ಶೋಭಿತವಾದ, ಕುಂದಮಂದಾರಪನಸಪ್ಲಕ್ಷೋದುಂಬುರ ಕಿಂಶುಕೈಃ - ಕುಂದ = ಕುಂದಮಲ್ಲಿಗೆ ಮರ, ಮಂದಾರ = ಮಂದಾರ ಪುಷ್ಪ ಬಿಡುವ ಮರಗಳು, ಪನಸ = ಹಲಸಿನ ಮರಗಳು, ಪ್ಲಕ್ಷ = ಬಸರೀ-ಅರಳೀ ವೃಕ್ಷಗಳು, ಔದುಂಬುರ = ಅತ್ತಿಯ ಮರಗಳು, ಕಿಂಶುಕೈಃ = ಮುತ್ತುಗವೃಕ್ಷಗಳಿಂದಲೂ ।। 47 ।। ಪಿಚುಮಂದೈಃ = ಬೇವಿನ ವೃಕ್ಷಗಳು, ಪಾರಿಜಾತೈಃ = ಪಾರಿಜಾತ ವೃಕ್ಷಗಳಿಂದಲೂ, ತಿಂತ್ರಿಣೀಜಂಬುಮಂಡಲೈಃ - ತಿಂತ್ರಿಣೀ = ಹುಣಸೇ ಮರಗಳು, ಜಂಬು = ನೇರಳೆ ಮರಗಳು, ಮಂಡಲೈಃ = ಗುಂಪಿನಿಂದಲೂ (ಸಮೂಹದಿಂದಲೂ), ಧವಲೈಶ್ಚಂದನೈಃ = ಬಿಳಿಯ ಶ್ರೀಗಂಧದ ಮರಗಳಿಂದಲೂ, ಚೂತೈಃ = ಮಾವಿನಮರಗಳಿಂದಲೂ, ಕೃಷ್ಣಾಗರು ವಿರಾಜಿತಃ = ಕರಿಯ ಅಗರುವೃಕ್ಷಗಳಿಂದ ಬೆಡಗುಗೊಂಡಿರುವ ।। 48 ।। ತಾಲಹಿಂತಾಲಪುನ್ನಾಗೈಃ - ತಾಲ = ತಾಳೆಯಮರ, ಹಿಂತಾಲ = ಹಿಂತಾಳ ವೃಕ್ಷ, ಪುನ್ನಾಗೈಃ = ಪುನ್ನಾಗ ಮರಗಳಿಂದಲೂ, ದೇವದಾರುವಿರಾಜಿತಃ = ದೇವದಾರು ವೃಕ್ಷಗಳಿಂದ ಅಲಂಕೃತವಾದ, ಹಂಸಕಾರಂಡವಾಕೀರ್ಣಃ - ಹಂಸ = ಹಂಸ ಪಕ್ಷಿಗಳು, ಕಾರಂಡವ = ನೀರುಕೋಳಿಗಳು ಇವುಗಳಿಂದ, ಆಕೀರ್ಣಃ = ತುಂಬಿರುವ, ಬಕಕೋಕಶುಕೈಃ - ಬಕ = ಬಕಪಕ್ಷಿ (ಕೊಕ್ಕರೆ), ಕೋಕ = ಚಕ್ರವಾಕಪಕ್ಷಿ, ಶುಕೈಃ = ಗಿಳಿಗಳಿಂದ, ವೃತೈಃ = ಕೂಡಿರುವ ।। 49 ।। ಕಪೋತೈಃ = ಪಾರಿವಾಳಗಳಿಂದಲೂ, ಕ್ಷೀರಹಂಸಕೈಃ = ಹಾಲು ನೀರುಗಳನ್ನು ವಿಭಾಗಿಸಿ ಹಾಲನ್ನು ಮಾತ್ರ ಸ್ವೀಕರಿಸುವ ಹಂಸಗಳಿಂದ ಕೂಡಿರುವ; ಮೃಗಷಂಡ (ಖಂಡ) ವಿಭೂಷಿತಃ = ವಿವಿಧ ಮೃಗ ಸಮೂಹದಿಂದ ಅಲಂಕೃತವಾದ, ಸಿಂಹಶಾರ್ದೂಲಶರಭಕ್ರೋಡ ಮಾತಂಗವಾನರೈಃ - ಸಿಂಹ = ವನರಾಜನಾದ ಸಿಂಹ, ಶಾರ್ದೂಲ = ಹುಲಿ, ಶರಭ = ಶರಭ (ಪಕ್ಷಿ)ಗಳು, ಕ್ರೋಡ = ವರಾಹ (ಹಂದಿ)ಗಳು, ಮಾತಂಗ = ಆನೆಗಳು, ವಾನರೈಃ = ಕಪಿಗಳಿಂದಲೂ (ಕೋತಿಗಳಿಂದಲೂ),।। 50 ।। ಜಂಬುಕೈಃ = ನರಿಗಳು, ಚ = ಮತ್ತು, ಭಲ್ಲೂಕೈಃ = ಕರಡಿಗಳಿಂದಲೂ, ಕಸ್ತೂರೀಮೃಗವಾಸಿತೈಃ = ಕಸ್ತೂರೀಮೃಗ, ಚಮರೀ (ಚಾಮರ) ಮೃಗಗಳಿಂದಲೂ, ವಾಸಿಸಲ್ಪಟ್ಟಿರುವ, ತುರಗೈಃ = ಕುದುರೆಗಳಿಂದಲೂ, ಗವಾಂಖಂಡೈಶ್ಚ (ಷಂಡೈಶ್ಚ) = ಗೋವುಗಳ ಹಿಂಡುಗಳಿಂದಲೂ ಸಹ, ಮಹಿಷಿಗಣ ಸೇವಿತಃ = ಕಾಡುಎಮ್ಮೆ, ಕೋಣಗಳ ಸಮೂಹದಿಂದ ಸೇವಿತವಾದ (ಪಾಠಾಂತರ-ಮಹರ್ಷಿಗಣಸೇವಿತಃ = ಮಹಾಋಷಿ ಸಮೂಹದಿಂದ ಸೇವಿತವಾದ) ।। 51 ।। ಮಲ್ಲಿಕಾಮಾಲತೀಜಾತೀನಂದ್ಯಾವರ್ತ್ಯವಿರಾಜಿತಃ - ಮಲ್ಲಿಕಾ = ಮಲ್ಲಿಗೆಯ ಬಳ್ಳಿಗಳಿಂದಲೂ, ಮಾಲತೀ = (ಅಮೃತಬಳ್ಳಿ) ಮುಲ್ಲೇಗಿಡಗಳಿಂದಲೂ, ಜಾತೀ = ಜಾಜೀ ಹೂಬಳ್ಳಿಗಳಿಂದಲೂ, ನಂದ್ಯಾವರ್ತ್ಯ = ನಂದಬಟ್ಟಲು ಗಿಡಗಳಿಂದಲೂ, ವಿರಾಜಿತಃ = ಶೋಭಿತವಾದ; ಚಂಪಕಾಶೋಕಪುನ್ನಾಗಕೇತಕೈಃ - ಚಂಪಕ = ಸಂಪಿಗೆ ಮರಗಳು, ಅಶೋಕ = ಅಶೋಕ ವೃಕ್ಷಗಳು, ಪುನ್ನಾಗ = ಪುನ್ನಾಗ ವೃಕ್ಷಗಳು, ಕೇತಕೈಃ = ಬಿಳಿಯ ತಾಳೇಹೂಮರಗಳು, ಸ್ವರ್ಣಕೇತಕೈಃ = ಬಂಗಾರದ ಬಣ್ಣದ ತಾಳೇಹೂ ಮರಗಳಿಂದಲೂ ಪ್ರಕಾಶಿಸುತ್ತಿರುವ ।। 52 ।।

**ಏವಂ ಮನೋಹರಃ ಶ್ರೀಮಾನ್ ಪರ್ವತಃ ಪುಣ್ಯಕಾನನಃ ।**
**ತರವೋ ದೈವತಗಣಾಃ ಮೃಗಾಶ್ಚ ಋಷಿಪುಂಗವಾಃ ।**
**ಪಿತರಃ ಪಕ್ಷಿಣಃ ಸರ್ವೇ ಪಾಷಾಣಾ ಯಕ್ಷಕಿನ್ನರಾಃ ।। 53 ।।**

ಏವಂ = ಈ ಪರಿಯಾದ, ಮನೋಹರಃ = ಮನಸ್ಸನ್ನು ಅಪಹರಿಸುವ (ಆಕರ್ಷಿಸುವ), ಪುಣ್ಯಸಾಧನಃ = ಸುಕೃತದಾಯಕ ಅರಣ್ಯ (ಅಡವಿ)ದಿಂದ ಯುಕ್ತವಾದ, ಶ್ರೀಮಾನ್ = ಸಂಪದ್ಯುಕ್ತವಾದ, ಪರ್ವತಃ = ಶೇಷಗಿರಿಯು, (ವೇಂಕಟಾಚಲವು), ಪ್ರಕಾಶಿಸುತ್ತಿದೆ. ಇಲ್ಲಿರುವ, ತರವಃ = ವೃಕ್ಷಗಳೇ, ದೇವತಗಣಾಃ = ದೇವತೆಗಳಗುಂಪು

(ಅಥವಾ-ದೇವತಗಣಾಃ = ದೇವತೆಗಳಗುಂಪೇ ತರವಃ = ವೃಕ್ಷಗಳು), ಋಷಿ ಪುಂಗವಾ = ಮುನಿಶ್ರೇಷ್ಠರೇ, ಮೃಗಾಃ = ಮೃಗಗಳು, ಪಿತರಃ = ಪಿತೃದೇವತೆಗಳೇ, ಪಕ್ಷಿಣಃ = ಪಕ್ಷಿಗಳು, ಯಕ್ಷಕಿನ್ನರಾಸ್ಸರ್ವೇ = ಎಲ್ಲಯಕ್ಷ - ಕಿನ್ನರರೇ, ಪಾಷಾಣಾಃ = ಕಲ್ಲುಬಂಡೆಗಳು, (ಇಲ್ಲಿರುವ ವೃಕ್ಷಗಳೇ ದೇವತೆಗಳು, ಮೃಗಗಳೇ ಋಷಿಪುಂಗವರು, ಪಕ್ಷಿಗಳೇ ಪಿತೃದೇವತೆಗಳು, ಕಲ್ಲುಬಂಡೆ-ಗಳೇ ಯಕ್ಷಕಿನ್ನರರು ಎಂದು ಭಕ್ತಿಪೂರ್ವಕವಾಗಿ ಶ್ರೀಹರಿಯನ್ನು ಸೇವಿಸುವರು ಎಂದು ಭಾವ) ಅರ್ಥಮಾಡಬಹುದು.

**ಏವಂ ಪ್ರಭಾವೋಽಸ್ಯ ಗಿರೀಂದ್ರಜನ್ಮನಃ ಶ್ರೀವೇಂಕಟಾದ್ರೇಸ್ತು ಹರೇಸ್ತಥೈವ ।**
**ಜಾನಂತಿ ನ ಬ್ರಹ್ಮಶಿವೇಂದ್ರಪೂರ್ವಕಾಃ ಅತ್ಯಲ್ಪವೀರ್ಯಾ ಮನುಜಾಸ್ತು ಕಿಂ ಪುನಃ॥ 54 ॥**

ಗಿರೀಂದ್ರಜನ್ಮನಃ = ಮೇರುವಿನಿಂದ ಜನಿಸಿದ, ಅಸ್ಯ = ಈ ಶ್ರೀವೇಂಕಟಾದ್ರೇಃ = ಕಾಂತಿಸಂಪನ್ನವೂ, ಸಂಪದ್ಯುಕ್ತವೂ ಆದ ವೇಂಕಟಾಚಲದ, ತಥೈವ = ಹಾಗೆಯೇ, ಹರೇಃ = ಶ್ರೀಹರಿಪರಮಾತ್ಮನ, ಪ್ರಭಾವಃ = ಪ್ರಭಾವವು (ಮಹಿಮೆಯು), ಏವಂ = ಈ ವಿಧವಾದದ್ದು (ಇದನ್ನು) ಬ್ರಹ್ಮಶಿವೇಂದ್ರಪೂರ್ವಕಾಃ = ಚತುರ್ಮುಖ ಬ್ರಹ್ಮದೇವರು, ರುದ್ರದೇವರು, ಇಂದ್ರದೇವರೇ ಮೊದಲಾದವರು, ಜಾನಂತಿ = ತಿಳಿದಿದ್ದಾರೆ (ನ ಜಾನಂತಿ = ತಿಳಿಯಲಾರರು) ಅಂದಮೇಲೆ, ಕಿಂಪುನಃ = ಹೆಚ್ಚು ಹೇಳುವುದೇನಿದೆ?, ಅಲ್ಪ ವೀರ್ಯಾಃ = ಅಲ್ಪಶಕ್ತನಾದ (ಸ್ವಲ್ಪವೇ ಶಕ್ತಿಯುಳ್ಳ) ಮನುಜಾಸ್ತು = ಮನುಷ್ಯ ಮಾತ್ರರು, ಜಾನಂತಿಕಿಂ = ತಿಳಿಯುವರೇನು? (ಸಾಧ್ಯವಿಲ್ಲವೆಂದು ಭಾವ) ॥ 54 ॥

## ಎರಡನೇ ಅಧ್ಯಾಯದ ಶೇಷಗಿರಿ ವರ್ಣನೆಯ ಕಥಾಸಾರವು

ಶ್ರೀಶತಾನಂದರು ನಿರೂಪಿಸಿದ, ಚತುರ್ಯುಗಗಳಲ್ಲಿ ಪರ್ವತಕ್ಕೆ ಬಂದ ನಾಲ್ಕು ಹೆಸರುಗಳ ಕಾರಣ ಮುಂತಾದವನ್ನು ಕೇಳಿ ಸಂತುಷ್ಟನಾದ ಜನಕ ಮಹಾರಾಜನು ''ಸ್ವಾಮಿ, ಶತಾನಂದ ಮುನಿಗಳೇ ! ನೀವು ಮೊದಲು ಹಿಂದೆ ವಾಯುದೇವರು ಶೇಷನಿಗೆ ಈ ಪರ್ವತಕ್ಕೆ ಶ್ರೀಹರಿಯು ದಯಮಾಡಿಸುವನೆಂದು ಹೇಳಿದರು ಎಂದು ತಿಳಿಸಿದ್ದಿರಲ್ಲವೇ, ಋಷಿವರ್ಯರೇ! ತಾವೀಗ ನನಗೆ ಆ ವಿಚಾರವನ್ನು ವಿಸ್ತಾರವಾಗಿ ತಿಳಿಸಿರಿ. ಶ್ರೀಮನ್ನಾರಾಯಣನು ಹೇಗೆ, ಯಾವ ಕಾರಣದಿಂದಾಗಿ ಈ ಪರ್ವತಕ್ಕೆ ಆಗಮಿಸಿದನು. ಶ್ರೀಹರಿಯು ಶೇಷಾಚಲಕ್ಕೆ ಬಂದು ಮಾಡಿದ ಕಾರ್ಯವೇನು? ಹೇಳಿರಿ. ಪರಮಪುರುಷನಾದ ಶ್ರೀಹರಿಯು ವೈಕುಂಠಪುರಿಯನ್ನು ಏತಕ್ಕಾಗಿ ತ್ಯಜಿಸಿದನು? ಆ ಶ್ರೀವಿಷ್ಣುವಿನ ಚರಿತೆಯನ್ನು ನನಗೆ ನಿರೂಪಿಸಿರಿ. ಶೇಷಗಿರಿಯಲ್ಲಿರುವ ಪುಣ್ಯತೀರ್ಥಗಳ ಹಾಗೂ ವೇಂಕಟಗಿರಿಯ ಮಹಿಮೆಯನ್ನೂ, ಶ್ರೀವರಾಹರೂಪಿಯಾದ ಶ್ರೀಹರಿಯ ಮಹಿಮೆಯನ್ನೂ ವಿಶದವಾಗಿ ಹೇಳಿರಿ. ಅದರಂತೆ ಆಕಾಶರಾಜನ ಚರಿತ್ರೆ, ಅವನ ಸಹೋದರನಾದ ಕುಶಧ್ವಜನ ಚರಿತ್ರೆಯನ್ನೂ, ಸಾಕ್ಷಾತ್ ಶ್ರೀಮಹಾಲಕ್ಷ್ಮಿಯು ಆಕಾಶರಾಜನಿಗೆ ಪುತ್ರಿಯು ಹೇಗಾದಳು? ಶ್ರೀಮನ್ನಾರಾಯಣನೆಂತು ಅಳಿಯನಾದನು? ಮತ್ತು ದೇವತೆಗಳು, ಋಷಿಗಳು ಹಾಗೂ ಅಮರ ಸ್ತ್ರೀಯರ ಸಮಾಗಮವು ಅಲ್ಲಿ ಹೇಗೆ ಉಂಟಾಯಿತು? ಇವೆಲ್ಲವನ್ನೂ ದಯಮಾಡಿ ತಿಳಿಸಿರಿ'' ಎಂದು ವಿಜ್ಞಾಪಿಸಿದನು.

ಶತಾನಂದರು ಜನಕರಾಯನ ನುಡಿಯನ್ನಾಲಿಸಿ ಹೇಳಲಾರಂಭಿಸಿದರು- ''ರಾಜಶ್ರೇಷ್ಠನಾದ ಜನಕರಾಯ! ಕೇಳು - ಪೂರ್ವದಲ್ಲಿ ಮುನಿಶ್ರೇಷ್ಠರಾದ, ಬ್ರಾಹ್ಮಣರಾದ, ಕಶ್ಯಪರೇ ಮೊದಲಾದ ಸಕಲ ಋಷಿಗಳು ಗಂಗಾನದಿಯ ದಡದಲ್ಲಿ ಒಂದು ಶ್ರೇಷ್ಠವಾದ ಯಜ್ಞವನ್ನು ಸಂತೋಷದಿಂದ ಆಚರಿಸಿದರು. ಆ ಯಾಗ ಸಮಯದಲ್ಲಿ ಅಲ್ಲಿಗೆ ಆಗಮಿಸಿದ ಮುನಿಪುಂಗವರಾದ ದೇವರ್ಷಿ ನಾರದರು ಕಶ್ಯಪಾದಿ ಬ್ರಾಹ್ಮಣರನ್ನು ನೋಡಿ, ಮುನಿವರ್ಯರೇ, ಉತ್ತಮವಾದ ಈ ಯಜ್ಞವನ್ನು ಯಾವ ಉದ್ದಿಶ್ಯದಿಂದ ಮಾಡುವಿರಿ? ಯಾಗದ ಫಲವನ್ನು ಭುಜಿಸುವವರಾರು? ಯಾಗದ ಅಧ್ವರ್ಯು ಯಾರು? ಈ ಯಜ್ಞಕ್ಕೆ ದೇವತೆ ಯಾರು? ಆಚರಿಸಿದ ಯಜ್ಞಫಲ(ಪುಣ್ಯ)ವನ್ನು ಆದಾರಿಗರ್ಪಿಸುತ್ತೀರಿ?'' ಎಂದು ಪ್ರಶ್ನಿಸಿದರು.

ನಾರದರ ನುಡಿಯನ್ನಾಲಿಸಿ ಅಲ್ಲಿದ್ದ ಋಷಿಗಳು ಸಂಶಯಯುಕ್ತ ಅಭಿಪ್ರಾಯವುಳ್ಳವರಾಗಿ ಪರಸ್ಪರ ಮಾತನಾಡುತ್ತಾ ನಿಜ, ಈ ಯಜ್ಞಫಲವನ್ನು ಯಾರಿಗೆ ಸಮರ್ಪಿಸಬೇಕು? ಇದು ಮುಖ್ಯವಾದ ವಿಚಾರವಾಗಿದೆ. ಇದನ್ನು ಚೆನ್ನಾಗಿ ವಿವೇಚಿಸಬೇಕು ಎಂದು ಹೇಳುತ್ತಾ ಸಭೆಸೇರಿಸಿದರು. ಈ ಸಭೆಯಲ್ಲಿ ಪರಸ್ಪರ ವಿಚಾರ ವಿನಿಮಯ ಮಾಡಿದರೂ ಇದಮಿತ್ಥಂ ಎಂದು ನಿರ್ಧರಿಸಲು ಸಾಧ್ಯವಾಗದೆ ಕೊನೆಗೆ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಭೃಗುಮುನಿಗಳಿಗೆ ಭಕ್ತಿನಮ್ರಾಂಗರಾಗಿ ಕೃತಾಂಜಲಿ ಪುಟರಾಗಿ ''ಸ್ವಾಮಿ, ಮಹಾಮತಿಗಳಾದ ಭೃಗುಮುನಿಗಳೇ! ದೇವತೆಗಳಲ್ಲಿ ಉತ್ತಮನಾದ ಪರಮಪುರುಷನಾರೆಂದು ತಿಳಿದುಬರಲು ದಯಮಾಡಿ ಹೊರಡಿರಿ'' ಎಂದು ಕೋರಿದರು. ಆಗ ಭೃಗುಮುನಿಗಳು ಅವರ ಕೋರಿಕೆಯನ್ನು ಮನ್ನಿಸಿ ಸರ್ವೋತ್ತಮ ದೇವತೆ ಯಾರೆಂದು ತಿಳಿದುಬರಲು ಅಲ್ಲಿಂದ ಕಮಲಮಂದಿರನಾದ ಬ್ರಹ್ಮದೇವನ ಸತ್ಯಲೋಕಕ್ಕೆ ಪ್ರಯಾಣ ಬೆಳೆಸಿದರು.

ಭೃಗುಋಷಿಗಳು ಸತ್ಯಲೋಕದಲ್ಲಿ ಚತುರಾನನನ ಮನೆಯಲ್ಲಿ ಆಜಾನುಬಾಹುವಾದ, ಶ್ರೀಹರಿಯನಾಭಿಕಮಲದಿಂದ ಸೃಷ್ಟಿಕಾಲದಲ್ಲಿ ಪ್ರಪ್ರಥಮವಾಗಿ ಜನಿಸಿದ (ಅಥವಾ ತಮಗೆ ಹಿರಿಯನಾದ), ನಾಲ್ಮೊಗನೂ, ದೀರ್ಘಾಂಗನೂ, ಸರಸ್ವತಿದೇವಿಯಿಂದ ಸಹಿತನೂ ಆದ ಬ್ರಹ್ಮದೇವನನ್ನು ನೋಡಿದರು. ಆಗ ಬ್ರಹ್ಮದೇವರು ನಾಲ್ಕು ಮುಖಗಳಿಂದಲೂ ವೇದಘೋಷ ಮಾಡುತ್ತಿದ್ದರು. ಇಂತು ಬ್ರಹ್ಮದೇವರ ನಾಲ್ಕು ಮುಖಗಳಿಂದ ಹೊರಹೊಮ್ಮುತ್ತಿರುವ ಮಂದ್ರ – ಮಧ್ಯಮ ಉಚ್ಚಸ್ವರಗಳಿಂದ ಯುಕ್ತವಾದ ವೇದಘೋಷದಿಂದ ಕಂಗೊಳಿಸುತ್ತಿರುವ, ಇಂದ್ರಾದಿ ದಿಕ್ಪಾಲಕರಿಂದ ಕೂಡಿದ, ಶಿರಸ್ಸಿಗೆ ಭೂಷಣವಾದ ಕಿರೀಟದಿಂದ ಬೆಳಗುತ್ತಿರುವ; ಬಾಧಾದಿರಹಿತನಾದ; ಸಕಲ ಜಗನ್ನಿಯಾಮಕನಾದ ಶ್ರೀಮನ್ನಾರಾಯಣನನ್ನು ವೇದಮಂತ್ರಗಳಿಂದ ಸ್ತೋತ್ರ ಮಾಡುತ್ತಿರುವ, ಅತ್ಯಂತ ಕಾಂತಿಯಿಂದ ಪ್ರಕಾಶಿಸುತ್ತಿರುವ ಬ್ರಹ್ಮದೇವರನ್ನು ಕಂಡು ಭಕ್ತಿಯಿಂದ ನಮಸ್ಕರಿಸಿ, ಕಮಲಸಂಭವರಾದ ಬ್ರಹ್ಮದೇವರ ಮುಂಭಾಗದಲ್ಲಿ ಸಾಷ್ಟಾಂಗವೆರಗಿದರು. ಆದರೆ ಬ್ರಹ್ಮದೇವರು ತಮಗೆ ನಮಸ್ಕರಿಸಿದ ಭೃಗುಮುನಿಗಳನ್ನು ನೋಡಿದರೂ ಮಾತನಾಡಿಸದೆ ಮೌನವಹಿಸಿದರು. ಆಗ ಭೃಗುಋಷಿಗಳು ಬ್ರಹ್ಮದೇವನು ಸ್ವಲ್ಪ ಅಜ್ಞಾನವುಳ್ಳವನಾಗಿದ್ದಾನೆ. ಆದ್ದರಿಂದ ಇವನು ಸರ್ವೋತ್ತಮ ದೇವತೆಯಲ್ಲವೆಂದು ತೀರ್ಮಾನಿಸಿ ತಾವು ಬಂದ ಕಾರ್ಯವು ಯಶಸ್ವಿಯಾಗದಿದ್ದುದರಿಂದ ಕೈಲಾಸ ಪರ್ವತಕ್ಕೆ ಹೊರಟರು.

ಕೈಲಾಸಗಿರಿಗೆ ಬಂದ ಭೃಗುಮುನಿಗಳು ಅಲ್ಲಿ ರಜತಗಿರಿಯ ನಿಜಮಂದಿರದಲ್ಲಿ ಪಾರ್ವತಿಯೊಡನೆ ಕ್ರೀಡಿಸುತ್ತಿರುವ ಕಾಮಾಸಕ್ತರಾದ ಮುಕ್ಕಣ್ಣ ಶ್ರೀರುದ್ರದೇವರನ್ನು ಕಂಡರು. ಪಾರ್ವತಿಯೊಡನೆ ವಿಹರಿಸುತ್ತಿರುವ ರುದ್ರದೇವರು ಭೃಗುಮುನಿಗಳು ಬಂದುದನ್ನು ತಿಳಿಯಲಿಲ್ಲ. ಭೃಗುಮುನಿಗಳಾಗಮಿಸಿದ್ದನ್ನು ಪಾರ್ವತಿಯು ಗಮನಿಸಿ ನಾಚಿಕೆಯಿಂದ ''ಮಹಾಬಾಹೋ, ರುದ್ರದೇವ ! ಋಷಿ ಪುಂಗವರಾದ ಭೃಗುಋಷಿಗಳು ಬಂದಿದ್ದಾರೆ. ಬೇಗ ನನ್ನನ್ನು ಬಿಡು'' ಎಂದಳು. ಪತ್ನಿಯ ಮಾತು ಕೇಳಿ ರುದ್ರದೇವರು ಕೋಪದಿಂದ ಕಣ್ಣು ಕೆಂಪಗೆ ಮಾಡಿಕೊಂಡು ಭೃಗುಮುನಿಗಳನ್ನು ಕೊಲ್ಲಲು ಅಟ್ಟಿಸಿಕೊಂಡು ಹೋದರು. ತಮ್ಮನ್ನು ಕೊಲ್ಲಬಂದ ರುದ್ರದೇವರನ್ನು ಅವರು ಶಾಪಪ್ರದಾನ ಪೂರ್ವಕ ತಡೆದರು. ಮತ್ತು ರುದ್ರದೇವರನ್ನು ನೋಡಿ ''ತ್ರಿಲೋಚನ ! ಜಗತ್ತಿನಲ್ಲಿ ಜನರು ನಿನ್ನನ್ನು ಪೂಜಿಸುವುದಿಲ್ಲ, ನಿನ್ನ ಲಿಂಗಪೂಜೆಯಿಂದಲೇ ನೀನು ಪ್ರಸಿದ್ಧನಾಗುತ್ತೀಯೆ'' ಎಂದು ಶಾಪವಿತ್ತು, ಶ್ರೀರುದ್ರದೇವರೂ ಸರ್ವೋತ್ತಮ ದೇವತೆಯಲ್ಲವೆಂದು ನಿಶ್ಚಯಿಸಿ ಕೊನೆಗೆ ವೈಕುಂಠ ಲೋಕಕ್ಕೆ ಆಗಮಿಸಿದರು.

ವೈಕುಂಠದ ಸೊಬಗು ಬಹು ಚೆನ್ನ! ಅದು ರಮಣೀಯ ಪ್ರಾಕಾರ, ಕೋಟೆ ಕೊತ್ತಲು, ಉನ್ನತವೂ, ಸುಂದರವೂ ಆದ ಗೋಪುರಗಳು, ಎಲ್ಲೆಡೆ ಕಟ್ಟಿರುವ ನೂತನ ಮುತ್ತು ಮಾಣಿಕ್ಯ ರತ್ನಮಯ ತೋರಣಗಳಿಂದ ಅಲಂಕೃತವಾಗಿದ್ದ ಅದು ಮನಮೋಹಕವಾಗಿತ್ತು. ಪೂರ್ವ – ಪಶ್ಚಿಮ, ಉತ್ತರ – ದಕ್ಷಿಣ ಹೀಗೆ ನಾಲ್ಕು ದಿಕ್ಕುಗಳಲ್ಲಿಯೂ ಭವ್ಯವಾದ ದ್ವಾರಗಳು,

ಅದನ್ನು ರಕ್ಷಿಸುತ್ತಿರುವ ದ್ವಾರಪಾಲಕರುಗಳಿಂದ ಬೆಡಗುಗೊಂಡಿರುವ, ಶ್ರೀಹರಿಯ ಮಂದಿರವನ್ನು ಕಂಡು ಭೃಗುಋಷಿಗಳು ಪರವಶರಾದರು. ಆ ವೈಕುಂಠಮಂದಿರದಲ್ಲಿ ಶ್ರೇಷ್ಠವಾದ ಶಯ್ಯಾಗೃಹದಲ್ಲಿ ಶೇಷ ಮಂಚದಲ್ಲಿ ಸುಪ್ಪತ್ತಿಗೆಯ ಮೇಲೆ ಶ್ರೀಲಕ್ಷ್ಮೀದೇವಿಯಿಂದೊಡಗೂಡಿ ಶ್ರೀಮನ್ನಾರಾಯಣನು ಪವಡಿಸಿದ್ದನು. ಭೃಗುಮುನಿಯು ದೇವೋತ್ತಮನಾದ ಶ್ರೀಹರಿಪರಮಾತ್ಮನನ್ನು ನೋಡಿ, ತನ್ನ ಅಂಗಾಲಿನಿಂದ ಶ್ರೀಹರಿಯ ವಕ್ಷಃಸ್ಥಳವನ್ನು ಒದ್ದನು. ಹೀಗೆ ತಾಡಿತನಾದ ಶ್ರೀಹರಿಯು ತಟ್ಟನೆ ಮೇಲೆದ್ದು, ವಿನಯಾನ್ವಿತನಾಗಿ ಪರಮಭಕ್ತಿಯಿಂದ ಭೃಗುಮುನಿಯ ಚರಣಕಮಲಗಳಿಗೆ ಸಾಷ್ಟಾಂಗವೆರಗಿದನು. ಅನಂತರ ಪ್ರೇಮದಿಂದ ಮುನಿಯನ್ನು ಆಲಿಂಗಿಸಿ ಭೃಗು ಋಷಿಯನ್ನು ನೋಡಿ – ಷಡ್ಗುಣೈಶ್ವರ್ಯಪೂರ್ಣನಾದ ಶ್ರೀವಿಷ್ಣುವು ''ಮುನಿಕುಲತಿಲಕ! ಭೃಗುಮುನಿಯೇ, ಅತ್ಯಂತ ಕಠೋರವೂ, ನಾಶರಹಿತವೂ, ಮುಪ್ಪಿಲ್ಲದುದೂ ಆದ, ಸುರರು – ಅಸುರರುಗಳಿಂದಲೂ ಸಹ ಭೇದಿಸಲಸದಳವಾದ, ನನ್ನ ಶರೀರವನ್ನು ಏಕೆ ತಾಡನ ಮಾಡಿದೆ? ದ್ವಿಜೋತ್ತಮ! ನನ್ನ ಶರೀರವು ವಜ್ರಕ್ಕಿಂತಲೂ ದೃಢತರವಾದುದು ! ಇಂತಹ ಕಠಿಣವಾದ ನನ್ನ ದೇಹವನ್ನು ಮೃದುವಾದ ನಿನ್ನ ಅಂಗಾಲಿನಿಂದೇಕೆ ಒದ್ದೆ? ನಿನ್ನ ಕೋಮಲವಾದ ಪಾದಗಳು ಕಠಿಣವಾದ ನನ್ನ ಶರೀರವನ್ನು ತಾಡಿಸಿದ್ದರಿಂದ ಅದೆಷ್ಟು ನೊಂದಿತೋ ನಾನರಿಯೆ!''

ಹೀಗೆ ವಿಜ್ಞಾಪಿಸಿ ಶ್ರೀವಿಷ್ಣುವು ಹಿತಮಿತವಾದ ಬಿಸಿನೀರಿನಿಂದ ಭೃಗುಮುನಿಯ ಪಾದಗಳನ್ನು ತೊಳೆದು, ಭೃಗುಋಷಿಯ ಮಂಗಳಕರವಾದ ಆ ಪಾದೋದಕವನ್ನು ಶಿರಸಾಧಾರಣ ಮಾಡಿದನು. ಕಪಟನಾಟಕ ಸೂತ್ರಧಾರಿಯಾದ ಶ್ರೀಹರಿಯು ವಿಡಂಬನಗೊಳಿಸುತ್ತಾ ''ಜ್ಞಾನಿಗಳಾದ ವಿಬುಧರು ತಮ್ಮ ದರ್ಶನಮಾತ್ರದಿಂದ ಮೂರುಲೋಕಗಳನ್ನೂ ಪಾವನಗೊಳಿಸುವರು'' ಎಂದು ಹೇಳುತ್ತಾ, ತನ್ನ ಮನೆ ಮಡದಿ ಮಕ್ಕಳು ಆದಿಯಾಗಿ ಸಮಸ್ತವನ್ನೂ ಭೃಗುಮುನಿಯ ಪಾದಜಲದಿಂದ ಪ್ರೋಕ್ಷಿಸಿದನು! ಇಂತು ಭಕ್ತಿಪೂರ್ವಕವಾಗಿ ಶ್ರೀಹರಿಯಿಂದ ಗೌರವಿತನಾಗಿ, ಬಂದ ಕಾರ್ಯವು ಯಶಸ್ವಿಯಾಯಿತೆಂಬ ತೃಪ್ತಿಯಿಂದ ಭೃಗುಮುನಿಯು ಧರೆಗಿಳಿದು ಬಂದನು. ಆ ಭೂಸುರರ ಸಭೆಯಲ್ಲಿ ಭೃಗುಋಷಿಯು ತಾನು ಕಂಡ ಪರಮಸತ್ಯವನ್ನು ಇಂತು ಘೋಷಿಸಿದನು – ''ಋಷಿ, ಮುನಿಗಳೇ! ಸಾಕ್ಷಾತ್ ಶ್ರೀವಿಷ್ಣುವೇ ಸರ್ವೋತ್ತಮನಾದ ದೇವತೆಯು, ಇದು ಸತ್ಯ!'' ಎಂದು ಎಲ್ಲರಿಗೂ ಉಪದೇಶಿಸಿದನು. ಆಗ ಈ ಎಲ್ಲ ಮುನಿಗಳೂ ಶ್ರೀಹರಿಯೇ ಸರ್ವೋತ್ತಮನೆಂದು ಮನಗಂಡು, ಯಜ್ಞವನ್ನು ಆಚರಿಸಿ ಸಮಸ್ತಜಗನ್ನಿಯಾಮಕನಾದ ಶ್ರೀಹರಿಪರಮಾತ್ಮನಿಗೆ ಆ ಯಜ್ಞವನ್ನು ಅಂದರೆ ಯಜ್ಞಫಲವನ್ನು ಸಹರ್ಷದಿಂದ ಸಮರ್ಪಿಸಿ ಕೃತಕೃತ್ಯರಾದರು.

''ಶ್ರೀಹರಿಯೇ ಸಾಕ್ಷಾತ್ ಸಕಲದೇವತಾಸಾರ್ವಭೌಮನಾದ ಪರಬ್ರಹ್ಮನು, ಅವನ ತರುವಾಯ ಶ್ರೀಲಕ್ಷ್ಮೀದೇವಿಯು ತಾರತಮ್ಯದಲ್ಲಿ ಕಿರಿಯಳು. ಶ್ರೀರಮಾದೇವಿಯ ನಂತರ ಬ್ರಹ್ಮದೇವರು, ವಾಯುದೇವರು ತಾರತಮ್ಯದಲ್ಲಿ ಕನಿಷ್ಠರು, ಅವರ ತರುವಾಯ ರುದ್ರೇಂದ್ರಾದಿ ದೇವತೆಗಳು – ಅಂದರೆ ಬ್ರಹ್ಮ-ವಾಯುಗಳ ನಂತರ ಗಾಯತ್ರಿ, ಭಾರತಿ, ಗರುಡ, ಶೇಷ, ರುದ್ರಾದಿಗಳು ತಾರತಮ್ಯದಲ್ಲಿ ಕ್ರಮವಾಗಿ ಅವರು (ಅಥವಾ ರುದ್ರದೇವನಿಗಿಂತ ಶೇಷನೂ, ಅವನಿಗಿಂತ ಗರುಡನೂ ಶ್ರೇಷ್ಠನು, ಅವರಿಗಿಂತ ಗಾಯತ್ರೀ, ಅವಳಿಗಿಂತ ವಾಯು, ಅವನಿಗಿಂತ ಬ್ರಹ್ಮದೇವರು ತಾರತಮ್ಯದಲ್ಲಿ ಅಧಿಕರು, ಅವರಿಗಿಂತ ಲಕ್ಷ್ಮೀದೇವಿ ಶ್ರೇಷ್ಠಳು. ಅವಳಿಗಿಂತ (ಎಲ್ಲರಿಗಿಂತ) ಶ್ರೇಷ್ಠನು ಸಾಕ್ಷಾತ್ ಶ್ರೀಮನ್ನಾರಾಯಣನು ಎಂದು ತಿಳಿಯಬೇಕು. ದೇವತೆಗಳು, ದೈತ್ಯರು ಮತ್ತು ಮಾನವ, ಈ ಪ್ರಕಾರವಾಗಿ ತಾರತಮ್ಯವನ್ನು ತಿಳಿಯಬೇಕು'' – ಎಂಬುದಾಗಿ ಭೃಗುಮುನಿಗಳಿಂದ ಉಪದಿಷ್ಟರಾದ, ಅಲ್ಲಿ ಸಮ್ಮಿಲಿತರಾಗಿದ್ದ ಸಕಲ ಋಷಿಮುನಿಗಳು ಶ್ರೀಮನ್ನಾರಾಯಣನೇ ಸರ್ವೋತ್ತಮನೆಂದು ಪ್ರಾಮಾಣಿಕವಾಗಿ ತೀರ್ಮಾನಿಸಿ ಪರಮಪುರುಷನಾದ ಶ್ರೀಹರಿ ಪರಮಾತ್ಮನಿಗೆ ಯಜ್ಞಫಲ ಸಮರ್ಪಣೆ ಮಾಡಿದರು.

ಇತ್ತ ವೈಕುಂಠದಲ್ಲಿ ಷಡ್ಗುಣೈಶ್ವರ್ಯಪೂರ್ಣನಾದ, ಪ್ರಭುವಾದ ಶ್ರೀಹರಿಯು ಏಕಾಂತದಲ್ಲಿ ರಮಾದೇವಿಯಿಂದ ಸಹಿತನಾಗಿರುವಾಗ ಮಹಾಲಕ್ಷ್ಮಿಯು, ''ಜಗನ್ನಿಯಾಮಕನಾದ, ದೇವೋತ್ತಮನಾದ ಪ್ರಭುವೇ ! ನಾನು ನಿನ್ನನ್ನು ತೊರೆದು

ಹೋಗುವೆನು. ಸ್ವಾಮಿ, ತಾರತಮ್ಯದಲ್ಲಿ ಕನಿಷ್ಠನಾದ ಭೃಗುಮುನಿಯಿಂದ ನನ್ನ ಆಲಿಂಗನ ಸ್ಥಳವಾದ ವಕ್ಷಃಸ್ಥಳದಲ್ಲಿ ನೀನು ಋಷಿಯ ಪಾದತಲದಿಂದ ತಾಡಿತನಾಗಿದ್ದೀಯೆ. ಜಗನ್ನಾಥ, ಗರುಡಧ್ವಜ! ಇದರಿಂದ ನನಗೆ ಬಹಳ ಅಪಮಾನವೂ ದುಃಖವೂ ಉಂಟಾಗಿದೆ. ಆದುದರಿಂದ ಶ್ರೇಷ್ಠವಾದ, ನನ್ನ ತವರುಮನೆಯಾದ ಕರವೀರಪುರಕ್ಕೆ (ಕೊಲ್ಹಾಪುರಕ್ಕೆ) ಹೋಗುವೆನು'' ಹೀಗೆ ಹರಿಯೊಡನೆ ಪ್ರೇಮಕಲಹವಾಡಿ (ಕಲಹ ಮಾಡಿದಂತೆ ನಟಿಸಿ), ಲಕ್ಷ್ಮೀದೇವಿಯು ವೈಕುಂಠಪುರಿಯನ್ನು ಬಿಟ್ಟು ಕರವೀರಪುರಕ್ಕೆ ಪ್ರಯಾಣ ಬೆಳೆಸಿದಳು.

ಇಪ್ಪತ್ತೆಂಟನೆಯದಾದ, ದ್ವಾಪರಯುಗದ ಕೊನೆಯಭಾಗದಲ್ಲಿ ಕಲಿಯುಗದಲ್ಲಿ ಮಹಾಲಕ್ಷ್ಮಿಯು ಕೊಲ್ಹಾಪುರಕ್ಕೆ ತೆರಳಿದ ಮೇಲೆ, ಆಗ ಕ್ಷೀರಾಬ್ಧಿಶಾಯಿಯಾದ ಶ್ರೀಮನ್ನಾರಾಯಣನು 'ಯಾವ ದೇಶದಲ್ಲಿ, ಯಾವಾಗ, ಯಾವ ಕಾರ್ಯದಿಂದ ಮಹಾಲಕ್ಷ್ಮಿಯ ಪ್ರೇಮಕಲಹವು, ಹೇಗೆ ಶಾಂತವಾಗುವುದೋ, ಅದಕ್ಕನುಗುಣವಾದ ಕಾರ್ಯವನ್ನು, ಹಾಗೆಯೇ ನಾನು ಮಾಡುತ್ತೇನೆ' ಎಂದು ರಮಾದೇವಿಯೊಡನೆ ಮಾತನಾಡಿ ಸಂಕಲ್ಪಿಸಿ, ಲೀಲಾಮಾನುಷವಿಗ್ರಹನಾದ (ಅಂದರೆ ವಿಲಾಸಕ್ಕಾಗಿ ಮಾನವಾಕೃತಿಯನ್ನು ಸ್ವೀಕರಿಸಿದ), ಪ್ರಕೃತಿಯನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ ಶ್ರೀಹರಿಯು ಪರಮಾನಂದಪ್ರದವಾದ ಶ್ರೇಷ್ಠವಾದ ವೈಕುಂಠಲೋಕವನ್ನು ಬಿಟ್ಟು ಹೊರಟನು.

ಶ್ರೀಹರಿಯು ವೈಕುಂಠವನ್ನು ತ್ಯಜಿಸಿ ಎಲ್ಲಿಗೆ ಬಂದನೆಂಬುದನ್ನು ಶತಾನಂದರು ಜನಕಮಹಾರಾಜನಿಗೆ ನಿರೂಪಿಸ ಹತ್ತಿದರು-

''ಮಹಾರಾಜ! ಗಂಗಾನದಿಯ ದಕ್ಷಿಣ ದಿಕ್ಕಿನಲ್ಲಿ ಮೂರು ನೂರು ಯೋಜನ ದೂರದಲ್ಲಿ 'ಸುವರ್ಣಮುಖರೀ' ಎಂಬ ಹೆಸರಿನ ಸಕಲ ನದಿಗಳಲ್ಲಿ ಶ್ರೇಷ್ಠವಾದ ಒಂದು ನದಿಯು ಇದೆ. ಶುಕಮುನಿಗಳಿಗೆ ವರಪ್ರದಾನ ಮಾಡಿದ ನದಿಯದು. ಅಗಸ್ತ್ಯ ಮುನಿಗಳಿಂದ ಪೂಜಿತವಾದುದು. ಇಂತು ವಿಖ್ಯಾತವಾದ ಆ ಸುವರ್ಣಮುಖರೀ ನದಿಯ ಉತ್ತರದಿಕ್ಕಿನ ತೀರದಲ್ಲಿಯೇ ಎರಡೂವರೆ ಹರದಾರಿಯ ದೂರದಲ್ಲಿ ಸುಕೃತ ಸಂಪಾದಕವಾದ ಅರಣ್ಯದಿಂದ ಬೆಡಗುಗೊಂಡಿರುವ ಮೇರುಪರ್ವತದ ಪುತ್ರನಾದ, ಕಾಂತಿ ಸಂಪದ್ಯುಕ್ತವಾದ, ವೇದಪ್ರತಿಪಾದ್ಯ ಮಹಿಮೋಪೇತವಾದ ಸಕಲ ಪುಣ್ಯತೀರ್ಥಗಳಿಂದ ಅಲಂಕೃತವಾದ ವೇಂಕಟಗಿರಿಯೆಂಬ ಪರ್ವತವಿದೆ. ಅದು ಸಕಲಧಾತುಗಳಿಂದ ಅಲಂಕೃತವಾದುದು, ವೈಕುಂಠ ಸದೃಶವಾದುದು, ದೇವತಾಯೋಗ್ಯವಾದುದು. ಶ್ರೀಹರಿಗೆ ಆವಾಸ ಸ್ಥಳವಾದದ್ದು ಇಂತಹ ಆ ವೇಂಕಟಗಿರಿಯು ಸಾಮಾನ್ಯವಾದುದಲ್ಲ, ಅದು ಪ್ರತ್ಯಕ್ಷವಾಗಿ ಆದಿಶೇಷನ ಅವತಾರವಾಗಿದೆ. ಹಿಂದೆ ಆದಿಶೇಷ - ವಾಯುದೇವರ ಪರಸ್ಪರ ಸಂವಾದದ ಕಾರಣದಿಂದಾಗಿ, ಮೂರುಗಾವುದ ವಿಸ್ತಾರವೂ, ಮೂವತ್ತು ಯೋಜನದಷ್ಟು ಅಗಲವೂ ಆದ (ಅಥವಾ ಮೂವತ್ತು ಗಾವುದ ವಿಸ್ತಾರ, 10 ಗಾವುದ ಅಗಲವಾಗಿದೆ). ಪುಣ್ಯಕಾರಕವಾದ ಅರಣ್ಯದಿಂದೊಡಗೂಡಿದ ಆ ಪರ್ವತವು ಅಲ್ಲಿಗೆ ಬಂದಿತು.

ಈ ವೇಂಕಟಾಚಲವೇ ಶ್ರೀಶೇಷದೇವರ ಮುಖಭಾಗವು, ನೃಸಿಂಹಾಚಲವೇ(ಅಹೋಬಲ ಪರ್ವತವೇ) ಮಧ್ಯಭಾಗವು, ಬಾಲದಂತಿರುವ ಕೊನೆಯ ಭಾಗವೇ ಶ್ರೀಶೈಲಪರ್ವತವು, ಇಂತಹ ಶೇಷಾಚಲವು ಸಕಲ ಪುಣ್ಯಕ್ಷೇತ್ರಮಯವಾಗಿದೆ. ಅದರ ಅಂದಚಂದಗಳು ಅವರ್ಣನೀಯ! ಸಕಲವಿಧ ಗಿಡಮರಗಳಿಂದ ನಿಬಿಡವಾದ, ಕಪ್ಪು, ಕೆಂಪು ವರ್ಣೋಪೇತವಾದ ಗೈರಕಾದಿ ಸಮಸ್ತ ಧಾತುಗಳಿಂದ ಶೋಭಿತವಾದ ಅದು ಫಲಪುಷ್ಪ ವೃಕ್ಷಭರಿತವಾಗಿದೆ. ಕುಂದಮಲ್ಲಿಗೆ, ಮಂದಾರಪುಷ್ಪಗಳನ್ನು ಬಿಡುವ ಮರಗಳು, ಹಲಸಿನ ಮರಗಳು, ಬಸರೀ-ಅರಳೀವೃಕ್ಷಗಳು, ಅತ್ತಿಯ ಮರಗಳು, ಮುತ್ತುಗದ ವೃಕ್ಷಗಳಿಂದಲೂ; ಹುಣಸೇ, ನೇರಳೆ ಮರಗಳ ಗುಂಪಿನಿಂದಲೂ; ಬಿಳಿಯ ಗಂಧದ ಮರಗಳು, ಮಾವಿನ ಮರಗಳು, ಕರಿಯ ಅಗರು ವೃಕ್ಷಗಳಿಂದಲೂ ಅದು ಕಂಗೊಳಿಸುವುದು. ಮತ್ತು ತಾಳೆಯ ಮರ, ಹಿಂತಾಳವೃಕ್ಷ, ಪುನ್ನಾಗ ಮರಗಳಿಂದಲೂ; ದೇವದಾರುವೃಕ್ಷಗಳಿಂದ ಅಲಂಕೃತವಾಗಿದೆ.

ಆ ಅರಣ್ಯವು ಹಂಸಪಕ್ಷಿಗಳು, ನೀರುಕೋಳಿಗಳಿಂದಲೂ, ಬಕಪಕ್ಷಿ (ಕೊಕ್ಕರೆ), ಚಕ್ರವಾಕ ಪಕ್ಷಿ, ಗಿಳಿಗಳಿಂದಲೂ, ಪಾರಿವಾಳಗಳು, ಹಾಲುನೀರುಗಳನ್ನು ಬೇರ್ಪಡಿಸಿ ಹಾಲನ್ನು ಮಾತ್ರ ಸ್ವೀಕರಿಸುವ ಹಂಸ ಪಕ್ಷಿಗಳಿಂದಲೂ ಅದು ವಿರಾಜಿಸಿದೆ.

ಇಷ್ಟು ಮಾತ್ರವಲ್ಲ; ವಿವಿಧ ಮೃಗ ಸಮೂಹಗಳಿಂದ ಅಲಂಕೃತವಾಗಿದೆ. ಸಿಂಹ, ಹುಲಿ, ಶರಭ, ವರಾಹ, ಆನೆ, ಕಪಿಗಳು, ನರಿಗಳು ಮತ್ತು ಕರಡಿಗಳಿಂದಲೂ, ಕಸ್ತೂರಿ ಮೃಗ ಮತ್ತು ಚಮರೀ(ಚಾಮರ) ಮೃಗಗಳು ಅಲ್ಲಿ ವಾಸವಾಗಿವೆ. ಇದರಂತೆ ಅಶ್ವ(ಕುದುರೆ)ಗಳು, ಗೋವುಗಳ ಹಿಂಡುಗಳಿಂದಲೂ, ಕಾಡೆಮ್ಮೆ ಕೋಣಗಳ ಗುಂಪುಗಳಿಂದಲೂ, (ಮಹರ್ಷಿ ಸಮೂಹದಿಂದಲೂ-ಪಾಠಾಂತರ) ಸೇವಿತವಾಗಿದೆ. ಅಲ್ಲಿ ಅನೇಕ ಬಗೆಯ ಸುಮತರುಗಳುಂಟು. ಮಲ್ಲಿಗೆ ಬಳ್ಳಿಗಳು, ಅಮೃತಬಳ್ಳಿ ಗಿಡಗಳು, ಜಾಜೀಹೂಬಳ್ಳಿಗಳು, ನಂದಬಟ್ಟಲು ಗಿಡಗಳಿಂದ ಶೋಭಿತವಾಗಿದ್ದು, ಸಂಪಿಗೆ ಮರಗಳು, ಅಶೋಕ ವೃಕ್ಷಗಳು, ಪುನ್ನಾಗ ವೃಕ್ಷಗಳು, ಬಿಳಿಯ ತಾಳೆಹೂ ಮರಗಳು, ಬಂಗಾರವರ್ಣದ ತಾಳೆಹೂ ಮರಗಳಿಂದಲೂ ಅದು ಪ್ರಕಾಶಿಸುತ್ತಿದೆ.

ಇಂತು ಮನೋಹರವಾದ ಸುಕೃತದಾಯಕ ಅಡವಿಂದೊಡಗೂಡಿದ, ಸಂಪದ್ಯುಕ್ತವಾದ ಶೇಷಗಿರಿಯು (ವೇಂಕಟಾಚಲವು), ಅತ್ಯಂತ ರಮಣೀಯವಾಗಿ ಕಂಗೊಳಿಸುತ್ತಿರುವುದು. ಇಲ್ಲಿರುವ ವೃಕ್ಷಗಳೇ ದೇವತೆಗಳ ಸಮೂಹವು, ಮೃಗಗಳೇ ಮುನಿಶ್ರೇಷ್ಠರು, ಪಕ್ಷಿಗಳೇ ಪಿತೃದೇವತೆಗಳನ್ನು, ಅಲ್ಲಿರುವ ಕಲ್ಲು ಬಂಡೆಗಳೇ ಸಕಲ ಯಕ್ಷಕಿನ್ನರರೆಂದು ತಿಳಿಯಬೇಕು. (ಅಥವಾ ದೇವತೆಗಳೇ ವೃಕ್ಷಗಳು, ಮುನಿಗಳೇ ಮೃಗಗಳು, ಪಿತೃದೇವತೆಗಳೇ ಪಕ್ಷಿಗಳು. ಯಕ್ಷ ಕಿನ್ನರರೇ ಕಲ್ಲುಬಂಡೆಗಳೆಂದು ತಿಳಿಯಬೇಕು (ಈ ಕ್ರಮದಿಂದಲೂ ತಿಳಿಯಬಹುದು).

ಮೇರು ಕುಮಾರನಾದ, ಕಾಂತಿಸಂಪನ್ನವಾದ ಈ ವೇಂಕಟಾಚಲದ, ಮತ್ತು ಶ್ರೀಹರಿಪರಮಾತ್ಮನ ಪ್ರಭಾವವು ಇಷ್ಟೆಂದು ಚತುರಾನನ ಬ್ರಹ್ಮ, ರುದ್ರ, ಇಂದ್ರಾದಿದೇವತೆಗಳೇ ತಿಳಿಯಲಾರರೆಂದಮೇಲೆ, ಅಲ್ಪಶಕ್ತರಾದ ಮನುಷ್ಯ ಮಾತ್ರರು ತಿಳಿಯಲಾರರೆಂದು ಹೆಚ್ಚು ಹೇಳುವುದೇನಿದೆ ? (ಅಥವಾ ಈ ಪರ್ವತದ ಮತ್ತು ಶ್ರೀಹರಿಯ ಪ್ರಭಾವವನ್ನು ಬ್ರಹ್ಮರುದ್ರೇಂದ್ರಾದಿ ದೇವತೆಗಳು ಮಾತ್ರ ಬಲ್ಲರು. ಅಲ್ಪಶಕ್ತರಾದ ಮಾನವರು ಖಂಡಿತ ತಿಳಿಯಲಾರರು ಎಂದು ಭಾವ). ॥ 54 ॥

*ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೇಂಕಟೇಶಮಹಾತ್ಮೆಯಲ್ಲಿ*
*ಶೇಷಗಿರಿವರ್ಣನೆಯೆಂಬ ಎರಡನೆಯ ಅಧ್ಯಾಯವು ಮುಗಿದುದು.*

*॥ ಶ್ರೀವೇಂಕಟೇಶನಿಗೆ ಅರ್ಪಿತವಾಗಲಿ ॥*

# ಮೂರನೆಯ ಅಧ್ಯಾಯ

## ಅವತಾರ ಪ್ರಶಂಸನಂ

*ಮೂಲ— ಶತಾನಂದ ಉವಾಚ -*

**ತಸ್ಯೋಪರಿ ವರಾ ದಿವ್ಯಾ ಸ್ವಾಮಿಪುಷ್ಕರಣೀ ಶುಭಾ ।**
**ಮಚ್ಛಕಚ್ಛಪ ಸರ್ಪಾಢ್ಯಾ ಜಲಕುಕ್ಕುಟಭೂಷಿತಾ ॥ 1 ॥**

**ಶಿಂಶುಮಾರಗಣಾಕೀರ್ಣಾ ಮಂಡೂಕೈಶ್ಚಾಪ್ಯಲಂಕೃತಾ ।**
**ತೀರಜೈರ್ವೃಕ್ಷಸಂಘೈಶ್ಚ ಚುಂಬಿತಾಂಬರಕಾನನಾ ॥ 2 ॥**

**ಗಂಗಾದಿಸರ್ವತೀರ್ಥಾನಾಂ ಜನ್ಮಭೂಮಿರ್ವಿರಾಜತೇ ।**
**ತಸ್ಯಾಂಯೇ ಸ್ನಾಂತಿ ಮನುಜಾಃ ತೇ ಧನ್ಯಾಃ ಪುಣ್ಯಭಾಜನಾಃ ॥ 3 ॥**

**ಧನುರ್ಮಾಸಿ ಸಿತೇಪಕ್ಷೇ ದ್ವಾದಶ್ಯಾಮರುಣೋದಯೇ ।**
**ಕಾಂಕ್ಷಂತಿ ದೇವತಾಸ್ಸರ್ವಾಃ ಮಜ್ಜನಂ ತಜ್ಜಲೇ ಶುಭೇ ॥ 4 ॥**

**ಕಿಮತ್ರ ಮನುಜಾನಾಂಚ ಸ್ನಾನಕಾಲೋವಧಾರಿತಃ ।**
**ತತ್ರ ಶ್ರಾದ್ಧಾನಿ ಕರ್ಮಾಣಿ ಪಿತೄಣಾಂ ಪ್ರೀತಯೇ ದ್ವಿಜಾಃ ॥ 5 ॥**

**ತೇಷಾಂ ಪಿತೃಗಣಾಸ್ತುಷ್ಟಾಃ ನೃತ್ಯಂತಿ ಹರಿಮಂದಿರೇ ।**
**ಜನ್ಮನಾ ಕಿಮನೇನೈವ ದೈವೇನ ಭವತಾಮಹೋ ॥ 6 ॥**

**ಸ್ನಾನದಾನೇನ ತತ್ತೀರ್ಥೇ ಮನುಜಾ ಭಾಗ್ಯಶಾಲಿನಃ ।**
**ಶಂಖೋ ನಾಮ ನೃಪಃ ಕಶ್ಚಿತ್ ಸ್ನಾನಮಾತ್ರೇಣ ನಾಕಗಃ ॥ 7 ॥**

**ಪುರಾ ನಾರಾಯಣೋನಾಮ ಬ್ರಾಹ್ಮಣೋಽಂಗಿರಸಸ್ಸುತಃ ।**
**ಸ್ವಾಮಿಪುಷ್ಕರಣೀತೀರ್ಥಮಹಿಮ್ನಾ ಸ್ನಾನಜೇನ ಹಿ ॥ 8 ॥**

**ವರಂ ಲಬ್ಧ್ವಾ ಹರಿಂ ದೃಷ್ಟ್ವಾ ಜಗಾಮ ಹರಿಮಂದಿರಮ್ ।**
**ರಾಮೋಽಪಿ ತತ್ರ ಸ್ನಾನೇನ ನೀತಾಂ ಸೀತಾಮವಾಪ ಚ ॥ 9 ॥**

ಶತಾನಂದ ಉವಾಚ = ಶತಾನಂದರು ಮಾತನಾಡಿದರು, ತಸ್ಯ = ವೇಂಕಟಾಚಲದ, ಉಪರಿ = ಮೇಲ್ಭಾಗದಲ್ಲಿ, ವರಾ = ಉತ್ತಮವಾದ, ದಿವ್ಯಾ = ದೇವತೆಗಳಿಗೆ ಯೋಗ್ಯವಾದ, ಶುಭಾ = ಮಂಗಳಕರವಾದ; ಮಚ್ಛಕಚ್ಛಪಸರ್ಪಾಢ್ಯಾ = ಮೀನು, ಆಮೆಗಳು ಮತ್ತು ಸರ್ಪಗಳಿಂದ ಕೂಡಿರುವ, ಜಲಕುಕ್ಕುಟಶೋಭಿತಾ =

ನೀರುಕೋಳಿಗಳಿಂದ ಅಲಂಕೃತವಾದ, ಸ್ವಾಮಿಪುಷ್ಕರಣೀ = ಸ್ವಾಮಿಪುಷ್ಕರಣೀತೀರ್ಥವು ವಿರಾಜಿಸುತ್ತಿದೆ. ॥ 1 ॥ ಶಿಂಶುಮಾರಗಣಾಕೀರ್ಣಾ - ಶಿಂಶುಮಾರ = ಮೊಸಳೆಗಳ ಸಮೂಹದಿಂದ, ಆಕೀರ್ಣಾ = ವ್ಯಾಪ್ತವಾಗಿರುವ, ಮಂಡುಕೈಶ್ಚಾಪಿ = ಕಪ್ಪೆಗಳಿಂದಲೂ ಸಹ, ಅಲಂಕೃತಾ = ಅಲಂಕೃತವಾದ, ತೀರಜೈಃ = ದಡದಲ್ಲಿ ಬೆಳೆದಿರುವ, (ತೀರದಲ್ಲಿ ಹುಟ್ಟಿರುವ), ಚ = ಮತ್ತು ವೃಕ್ಷಸಂಘೈಃ = ಮರಗಳ ಗುಂಪಿನಿಂದ, ಚುಂಬಿತಾಂಬರಕಾನನಾ – ಚುಂಬಿತ = ಚುಂಬಿತವಾದ, ಅಂಬರ = ಆಕಾಶವುಳ್ಳ, ಕಾನನಾ = ಅರಣ್ಯವುಳ್ಳ, (ಆಕಾಶದೆತ್ತರದವರೆಗೂ ಮುಟ್ಟಿರುವ ಅರಣ್ಯವುಳ್ಳ) ॥ 2 ॥ ಗಂಗಾದಿ ಸರ್ವತೀರ್ಥಾನಾಂ = ಗಂಗಾನದಿ ಮೊದಲಾದ ಸಕಲ ತೀರ್ಥಗಳಿಗೂ, ಜನ್ಮಭೂಮಿಃ = ಉತ್ಪತ್ತಿ ಸ್ಥಳವಾಗಿರುವ, ಜನ್ಮಭೂಮಿಃ = ಸ್ವಾಮಿಪುಷ್ಕರಣಿಯು, ವಿರಾಜತೇ = ಪ್ರಕಾಶಿಸುತ್ತಿದೆ. ತಸ್ಯಾಂ = ಪುಷ್ಕರಣಿಯಲ್ಲಿ, ಯೇ = ಯಾರು, ಸ್ನಾಂತಿ = ಮಜ್ಜನ ಮಾಡುವರೋ, ತೇ = ಅಂಥವರು, ಧನ್ಯಾಃ = ಕೃತಾರ್ಥರು (ಕೃತಕೃತ್ಯರು), ಪುಣ್ಯಭಾಜನಾಃ = ಸುಕೃತಭಾಜನರು (ಪುಣ್ಯಕ್ಕೆ ಪಾತ್ರರಾಗುವರು) ॥ 3 ॥ ಧನುರ್ಮಾಸಿ = ಸೂರ್ಯನು ಧನುರಾಶಿಯಲ್ಲಿರುವಾಗ, ಸಿತೇಪಕ್ಷೇ = ಶುಕ್ಲಪಕ್ಷದಲ್ಲಿ, ದ್ವಾದಶ್ಯಾಂ = ದ್ವಾದಶೀ ತಿಥಿಯಂದು, ಅರುಣೋದಯೇ = ಅರುಣನುದಯಿಸುವ ಕಾಲದಲ್ಲಿ, ಸರ್ವಾಃ ದೇವತಾಃ = ಸಕಲ ದೇವತೆಗಳು, ಶುಭೇ = ಮಂಗಳಕರವಾದ, ತಜ್ಜಲೇ = ಶ್ರೀ ಸ್ವಾಮಿಪುಷ್ಕರಣೀ ಜಲದಲ್ಲಿ, ಮಜ್ಜನಂ = ಸ್ನಾನವನ್ನು (ಮಾಡಬೇಕೆಂದು), ಕಾಂಕ್ಷತಿ = ಅಪೇಕ್ಷಿಸುವರು ॥ 4 ॥ ಅತ್ರ = ಸ್ವಾಮಿ ಪುಷ್ಕರಣಿಯಲ್ಲಿ, ಮನುಜಾನಾಂ ಚ = ಮಾನವರಿಗೂ ಸಹ, ಸ್ನಾನಕಾಲಃ = ಸ್ನಾನಸಮಯವು, ಅವಧಾರಿತಃ = ನಿಶ್ಚಯಿಸಲ್ಪಟ್ಟಿದೆ ಎಂದು, ಕಿಂ = ಹೇಳುವುದೇನಿದೆ? ತತ್ರ = ಸ್ವಾಮಿ ಪುಷ್ಕರಣಿ ಕ್ಷೇತ್ರದಲ್ಲಿ, (ಯೇ) ದ್ವಿಜಾಃ = ಯಾವ ಬ್ರಾಹ್ಮಣರು, ಪಿತೃೃಣಾಂ – ಪಿತ್ರೂಣಾಂ = ಪಿತೃಗಳ, ತೃಪ್ತಯೇ = ತೃಪ್ತಿಗೋಸ್ಕರವಾಗಿ ॥ 5 ॥ ಶ್ರಾದ್ಧಾದಿ ಕರ್ಮಾಣಿ = ಶ್ರಾದ್ಧ - ತರ್ಪಣ ಮೊದಲಾದ ಕರ್ಮಗಳನ್ನು, ಕುರ್ವಂತಿ = ಮಾಡುವರೋ, ತೇಷಾಂ = ಅಂಥವರ, ಪಿತೃಗಣಾಃ = ಪಿತೃಸಮೂಹವು, ತುಷ್ಟಾಃ = (ಸಂತಃ) ಸಂತುಷ್ಟರಾಗಿ, ಹರಿಮಂದಿರೇ = ಶ್ರೀಹರಿಯ ವೈಕುಂಠಲೋಕದಲ್ಲಿ, ನೃತ್ಯಂತಿ = ನರ್ತಿಸುತ್ತಾರೆ. ಅಹೋ = ಆಶ್ಚರ್ಯವು, (ಹೀಗೆ ಮಾಡದಿದ್ದಲ್ಲಿ), ದೈವೇನ = ಭಗವಂತನ ಅನುಗ್ರಹದಿಂದ ಪ್ರಾಪ್ತವಾದ, ಭವತಾಂ = ಮಾನವರಾದ ನಿಮ್ಮ, ಕಿಮನೇನ ಜನ್ಮನಾ = ಮಾನವಜನ್ಮದಿಂದ ಪ್ರಯೋಜನವೇನು? ಅಹೋ = ಅಚ್ಚರಿಯು ॥ 6 ॥ ತತ್ತೀರ್ಥೇ = ಆ ಸ್ವಾಮಿಪುಷ್ಕರಣೀತೀರ್ಥದಲ್ಲಿ, ಸ್ನಾನದಾನೇನ = ಸ್ನಾನ ಮಾಡುವುದು, ದಾನಮಾಡುವುದರಿಂದ ಮನುಜಾಃ = ಮನುಷ್ಯರು, ಭಾಗ್ಯಶಾಲಿನಃ = ಭಾಗ್ಯಶಾಲಿಗಳು, ಶಂಖೋನಾಮ = ಶಂಖನೆಂಬುವ, ಕಶ್ಚಿತ್ = ಒಬ್ಬ, ನೃಪಃ = ರಾಜನು, ಸ್ನಾನಮಾತ್ರೇಣ = ಆ ಪುಷ್ಕರಣಿಯಲ್ಲಿ ಸ್ನಾನ ಮಾಡಿದ ಮಾತ್ರದಿಂದಲೇ, ನಾಕಗಃ = ಸ್ವರ್ಗಲೋಕವನ್ನು ಪಡೆದನು. ॥ 7 ॥ ಪುರಾ = ಪೂರ್ವದಲ್ಲಿ, ನಾರಾಯಣೋನಾಮ = ನಾರಾಯಣನಾಮಕನಾದ, ಅಂಗಿರಸಃ ಸುತಃ = ಅಂಗಿರಸರಿಗೆ ಪುತ್ರನಾದ, ಬ್ರಾಹ್ಮಣಃ = ಭೂಸುರನು, ಸ್ನಾನಜೇನ = ಸ್ನಾನಮಾಡಿದ್ದರಿಂದುಂಟಾದ ಪುಣ್ಯದಿಂದ, ಸ್ವಾಮಿಪುಷ್ಕರಣೀ ತೀರ್ಥಮಹಿಮ್ನಾ = ಸ್ವಾಮಿಪುಷ್ಕರಣೀತೀರ್ಥದ ಮಹಿಮೆಯಿಂದ, ಹರಿಂ ದೃಷ್ಟ್ವಾ = ಶ್ರೀಹರಿಯ ದರ್ಶನವನ್ನು ಪಡೆದು, ವರಂಲಬ್ಧ್ವಾ = ವರವನ್ನು ಸಂಪಾದಿಸಿಕೊಂಡು, ಹರಿಮಂದಿರಂ = ಶ್ರೀವೈಕುಂಠಕ್ಕೆ, ಜಗಾಮ = ತೆರಳಿದನು, ಹಿ = ಪ್ರಸಿದ್ಧವು, ರಾಮೋಽಪಿ = ಶ್ರೀರಾಮಚಂದ್ರನೂ ಸಹ, ತತ್ರ = ಆ ಸ್ವಾಮಿಪುಷ್ಕರಣಿಯಲ್ಲಿ, ಸ್ನಾನೇನ = ಸ್ನಾನ ಮಾಡಿದ್ದರ ಫಲದಿಂದ, ಸೀತಾಂ = ರಾವಣನಿಂದ ಅಪಹರಿಸಲ್ಪಟ್ಟು ಕೊಂಡೊಯ್ದಿದ್ದ, ಸೀತಾಂ = ಶ್ರೀಸೀತಾದೇವಿಯನ್ನು, (ಸೀತಾ ಕೃತಿಯನ್ನು) ಆವಾಪ = ಪಡೆದನು. ॥ 8-9 ॥

**ಏವಂ ತೀರ್ಥವರಾ ತತ್ರ ಸ್ವಾಮಿಪುಷ್ಕರಣೀ ಶುಭಾ ।**
**ತಸ್ಯಾಃ ಪಶ್ಚಿಮದಿಗ್ಭಾಗೇ ವರಾಹವದನೋ ಹರಿಃ ॥ 10 ॥**

**ಧರಣೀಮಾಲಿಂಗ್ಯ ತತ್ರೈವ ಆಸ್ತೇ ಪಿಪ್ಪಲರಾಜಿತೇ ।**
**ತ್ರಿಕೋಟಿತೀರ್ಥಜಾತೀನಾಂ ಜನ್ಮಸ್ಥಾನಂ ಸ ಭೂಧರಃ ॥ 11 ॥**

**ಏನಂ ಗಿರಿವರಂ ಪ್ರಾಪ್ಯ ಭಗವಾನ್ ವೇಂಕಟಾಚಲಮ್ ।**
**ವೈಕುಂಠಾದಧಿಕಂ ಮತ್ವಾ ವಿಚಚಾರ ಇತಸ್ತತಃ ॥ 12 ॥**

ಏವಂ = ಇಂತು, ಶುಭಾ = ಶುಭಕರವಾದ, ಸ್ವಾಮೀಪುಷ್ಕರಣೀ = ಸ್ವಾಮಿ ಪುಷ್ಕರಣಿಯು, ತತ್ರೈವ = ವೇಂಕಟಾಚಲದಲ್ಲಿಯೇ, ವರಾ = ಸರ್ವತೀರ್ಥಗಳಲ್ಲಿ ಶ್ರೇಷ್ಠವಾಗಿದೆ. ತಸ್ಯಾಃ = ಆ ಪುಷ್ಕರಣಿಯ, ಪಶ್ಚಿಮದಿಗ್ಭಾಗೇ = ಪಶ್ಚಿಮದಿಕ್ ಪ್ರದೇಶದಲ್ಲಿ, ಧರಾಮಾಲಿಂಗ್ಯ = ಭೂದೇವಿಯನ್ನು ಆಲಿಂಗಿಸಿಕೊಂಡು, ವರಾಹವದನಃ = ವರಾಹಮುಖದ ಶ್ರೀಹರಿಯು ॥ 10 ॥ ಪಿಪ್ಪಲರಾಜಿತೇ = ಅಶ್ವತ್ಥವೃಕ್ಷದಿಂದ ರಾಜಿಸುವ ಸ್ಥಳದಲ್ಲಿ, ಆಸ್ತೇ = ಇದ್ದಾನೆ. ತ್ರಿಕೋಟಿತೀರ್ಥಜಾತೀನಾಂ = ಮೂರುಕೋಟಿ ಸಂಖ್ಯಾಕವಾದ ವಿಧವಿಧ ತೀರ್ಥಗಳಿಗೆ, ಸ ಭೂಧರಃ = ಆ ವೇಂಕಟಗಿರಿಯು, ಜನ್ಮಸ್ಥಾನಂ = (ಮಾತೃಸ್ಥಾನ)ವಾಗಿದೆ ॥ 11 ॥ ಏನಂಗಿರಿವರಂ = ಈ ಪರ್ವತ ಶ್ರೇಷ್ಠವಾದ ವೇಂಕಟಾಚಲವನ್ನು, ಪ್ರಾಪ್ಯ = ಹೊಂದಿ (ವೇಂಕಟಾಚಲಕ್ಕೆ ಬಂದು), ಭಗವಾನ್ = ಷಡ್ಗುಣೈಶ್ವರ್ಯಪೂರ್ಣನಾದ ಶ್ರೀಹರಿಯು, ವೈಕುಂಠಾತ್ = ವೈಕುಂಠಕ್ಕಿಂತಲೂ, ಅಧಿಕಂ ಮತ್ವಾ = ಶ್ರೇಷ್ಠವೆಂದು ತಿಳಿದು, ಇತಸ್ತತಃ = ಪರ್ವತದ ಅತ್ತ - ಇತ್ತ, ವಿಚಚಾರ = ಓಡಾಡಿದನು ॥ 12 ॥

**ನ ಪ್ರಾಪ ಕಿಂಚಿದಾಸ್ಥಾನಂ ಗೂಹನಾರ್ಥಂ ರಮಾಪತಿಃ ।**
**ಇತ್ಥಂ ವಿಚಾರ್ಯಮಾಣೇ ತು ಸ್ವಾಮಿಪುಷ್ಕರಣೀ ತಟೇ ॥ 13 ॥**

**ದಕ್ಷಿಣೇ ವಿಮಲಂ ದಿವ್ಯಂ ವಲ್ಮೀಕಂ ದೃಷ್ಟ್ವಾನ್ ಮುದಾ ।**
**ತಿಂತ್ರಿಣೀವೃಕ್ಷಮೂಲಸ್ಥಂ ಭಗವಾನ್ ಜಗದೀಶ್ವರಃ ॥ 14 ॥**

**ಇದಮೇವ ವರಂ ಸ್ಥಾನಂ ತತ್ರ, ಲೀನೋ ಭವದ್ಧರಿಃ ।**
***ಏವಂ ದೇವೇ ಸ್ಥಿತೇ ತತ್ರ, ವಿಗತಂ ವತ್ಸರಾಯುತಮ್ ॥ 15 ॥**

ರಮಾಪತಿಃ = ಶ್ರೀಲಕ್ಷ್ಮೀಕಾಂತನಾದ ಹರಿಯು, ಗೂಹನಾರ್ಥಂ = ತಾನು ಮರೆಯಾಗಿರಲು, ಕಿಂಚಿದಾಸ್ಥಾನಂ = ಯಾವುದಾದರೊಂದು ಸ್ವಲ್ಪಸ್ಥಳವನ್ನೂ, ನ ಪ್ರಾಪ = ಪಡೆಯಲಿಲ್ಲ, ಇತ್ಥಂ = ಗುಪ್ತವಾಗಿರಲು ಸರಿಯಾದ ಸ್ಥಳವು ದೊರಕಲಿಲ್ಲವಲ್ಲ ಎಂದು, ವಿಚಾರ್ಯಮಾಣೇತು = ಆಲೋಚಿಸುತ್ತಿರುವಾಗ, ಸ್ವಾಮಿಪುಷ್ಕರಣೀ ತಟೇ = ಸ್ವಾಮಿಪುಷ್ಕರಣಿಯ ದಡದಲ್ಲಿ ॥ 13 ॥ ದಕ್ಷಿಣೇ = ದಕ್ಷಿಣದಿಕ್ಕಿನಲ್ಲಿ, ವಿಮಲಂ = ನಿರ್ಮಲವಾದ, ದಿವ್ಯಂ = ದೇವತಾಯೋಗ್ಯವಾದ ತಿಂತ್ರಿಣೀವೃಕ್ಷಮೂಲಸ್ಥಂ = ಹುಣಸೇಮರದ ಕೆಳಭಾಗದಲ್ಲಿರುವ, ವಲ್ಮೀಕಂ = ಹುತ್ತವನ್ನು, ಭಗವಾನ್ = ಪೂಜ್ಯನಾದ, ಜಗದೀಶ್ವರಃ = ಜಗತ್ತಿಗೆಲ್ಲಾ ಪ್ರಭುವಾದ ಶ್ರೀಹರಿಯು, ಮುದಾ = ಆನಂದದಿಂದ, ದೃಷ್ಟವಾನ್ = ನೋಡಿದನು ॥ 14 ॥ ಇದಮೇವ = ಈ ಹುತ್ತವೇ, ವರಂ = ನಾನು ಗುಪ್ತವಾಗಿರಲು ಉತ್ತಮವಾದ, ಸ್ಥಾನಂ = ಸ್ಥಳವು, (ಇತ್ಯಾಲೋಚ್ಯ = ಇಂತು ಚಿಂತಿಸಿ) ಹರಿಃ = ವಿಷ್ಣುವು, ತತ್ರ = ಆ ಹುತ್ತದಲ್ಲಿ, ಲೀನೋಭವತ್ = ಮರೆಯಾದನು, ಏವಂ = ಹೀಗೆ, ದೇವೇ = ಭಗವಂತನು, ತತ್ರ = ಆ ವಲ್ಮೀಕದಲ್ಲಿ, ಸ್ಥಿತೇ(ಸತಿ) = ಇರುತ್ತಿರಲಾಗಿ, ವಿಗತಂ ವತ್ಸರಾಯುತಂ = ಹತ್ತು ಸಹಸ್ರವರ್ಷಗಳು ಗತಿಸಿದವು (ಪಾಠಾಂತರ - ಏವಂ = ಹೀಗೆ, ತತ್ರ = ಅಲ್ಲಿ, ಕಾಲಂಗತೇ (ಸತಿ) = ಕಾಲ ಕಳೆಯುತ್ತಿರಲು, ವತ್ಸರಾಯುತಂ = ಹತ್ತುಸಾವಿರ ವರ್ಷಗಳು, ಆಗತಂ = ಬಂದವು- ಕಳೆದುಹೋದವು = ಬಂದುಹೋದವು) ॥ 15 ॥

---

*ಪಾಃ ಏವ ಕಾಲೇ ಗತೇ ತತ್ರ ವತ್ಸರಾಯು ತಮಾಗತಮ್ ॥

**ಅತೀತೇ ದ್ವಾಪರೇ ಚೈವ ಅಷ್ಟಾವಿಂಶತಿಮೇ ಕಲೌ ।**
**ಅತೀತೇ ವತ್ಸರೇ ಕಶ್ಚಿತ್ ಚೋಲರಾಜೋ ನೃಪೋತ್ತಮಃ ॥ 16 ॥**

**ಅವತಾರಂ ಸಮಾಪನ್ನೋ ನಾಗಕನ್ಯೋದರೇ ತಥಾ ।**
**ಪಾಲ್ಯಮಾನೇ ನೃಪೇ ತಸ್ಮಿನ್ ಭೂಖಂಡಂ ಬಹುಪುಣ್ಯದಮ್ ॥ 17 ॥**

**ಬಹುಕ್ಷೀರಪ್ರದಾ ಗಾವಃ ಪುತ್ರಾ ವೈ ಪಿತೃವತ್ಸಲಾಃ ।**
**ಕಾಲೇ ವರ್ಷತಿ ಪರ್ಜನ್ಯಃ ಸಸ್ಯಾ ವೈ ಬಹುಧಾನ್ಯದಾಃ ॥ 18 ॥**

**ನಾರ್ಯಃ ಪತಿವ್ರತಾಃ ಸರ್ವಾ ಪುರುಷಾ ನಿಯತಸ್ತ್ರಿಯಃ ।**
**ವಿಪ್ರಾಸ್ತೇನ ಕೃತೇ ರಾಜ್ಯೇ ಯಜನಾನಂದತತ್ಪರಾಃ ॥ 19 ॥**

ದ್ವಾಪರೇಚೈವ = ದ್ವಾಪರಯುಗವೂ ಕೂಡ, ಅತೀತೇ = ಗತಿಸಲು (ಉರುಳಿಹೋಗಲು), ಅಷ್ಟಾವಿಂಶತಿಮೇ = ಇಪ್ಪತ್ತೆಂಟನೆಯ, ಕಲೌ = ಕಲಿಯುಗದಲ್ಲಿ, ವತ್ಸರೇ = ಕೆಲವರ್ಷಗಳು, ಅತೀತೇ = ಕಳೆದಮೇಲೆ, ನಾಗಕನ್ಯೋದರೇ = ನಾಗಕನ್ನಿಕೆಯ ಉದರದಲ್ಲಿ, ಕಶ್ಚಿತ್ = ಒಬ್ಬ, ಚೋಲರಾಜನೃಪೋತ್ತಮಃ = ಚೋಳರಾಜನೆಂಬ ರಾಜಶ್ರೇಷ್ಠನು, ಅವತಾರಂ = ಜನ್ಮವನ್ನು, ಸಮಾಪನ್ನಃ = ಪಡೆದನು, ತಥಾ = ರಾಜ್ಯವನ್ನು ಹೇಗೆ ಆಳಬೇಕೋ ಅದರಂತೆ, ತಸ್ಮಿನ್ ನೃಪೇ = ಆ ಚೋಳನೃಪತಿಯು, ಬಹುಪುಣ್ಯದಂ = ಬಹಳ ಪುಣ್ಯಪ್ರದವಾದ, ಭೂಖಂಡಂ = ಭೂಭಾಗವನ್ನು, ಪಾಲ್ಯಮಾನೇಸತಿ = ಪರಿಪಾಲಿಸುತ್ತಿರಲು ॥ 16-17 ॥ ಗಾವಃ = ಗೋವುಗಳು, ಬಹುಕ್ಷೀರಪ್ರದಾಃ = ಹೆಚ್ಚು ಹಾಲನ್ನು ಕೊಡುತ್ತಿದ್ದವು, ಪುತ್ರಾ ವೈ = ಮಕ್ಕಳುಗಳಾದರೋ, ಪಿತೃವತ್ಸಲಾಃ = ತಂದೆತಾಯಿಗಳಲ್ಲಿ ವಾತ್ಸಲ್ಯವುಳ್ಳವರಾಗಿದ್ದರು, ಪರ್ಜನ್ಯಃ = ಪರ್ಜನ್ಯನು, ಕಾಲೇ = ಕಾಲಕಾಲಕ್ಕೆ ಸರಿಯಾಗಿ, ವರ್ಷತಿ = ಮಳೆಗರೆಯುವನು (ಕಾಲಕಾಲಕ್ಕೆ ಸರಿಯಾಗಿ ಮಳೆಯಾಗುತ್ತಿತ್ತು) ಸಸ್ಯಾವೈ = ಸಸ್ಯಗಳು (ಪೈರುಗಳು), ಬಹುಧಾನ್ಯದಾಃ = ಹೆಚ್ಚಾಗಿ ಧಾನ್ಯಗಳನ್ನು ಕೊಡುತ್ತಿದ್ದವು ॥ 18 ॥ ಸರ್ವಾಃ ನಾರ್ಯಃ = ಸಕಲ ಸ್ತ್ರೀಯರೂ, ಪತಿವ್ರತಾಃ = ಪತಿವ್ರತೆ (ಸಾಧ್ವಿ)ಯರಾಗಿದ್ದರು, ಪುರುಷಾಃ = ಗಂಡಸರು, ನಿಯತಸ್ತ್ರಿಯಃ = ನಿಯತಪತ್ನಿಯರುಳ್ಳವರಾಗಿದ್ದರು. (ತಮ್ಮ ಪತ್ನಿಯರ ವಿನಃ ಬೇರಾರಲ್ಲೂ ಆಸಕ್ತರಾಗುತ್ತಿರಲಿಲ್ಲ), ತೇನ = ಚೋಳರಾಜನಿಂದ ರಾಜ್ಯೇಕೃತೇ (ಸತಿ) = ರಾಜ್ಯಭಾರ ಮಾಡಲ್ಪಡುತ್ತಿರಲು, ವಿಪ್ರಾಃ = ಬ್ರಾಹ್ಮಣರು, ಯಜನಾನಂದ ತತ್ಪರಾಃ - ಯಜನಾನಂದ = ಯಜ್ಞಾಚರಣರೂಪ ಆನಂದದಲ್ಲಿ, ತತ್ಪರಾಃ = ಮಗ್ನರಾಗಿದ್ದರು ॥ 19 ॥

**ತಸ್ಮಿನ್ಕಾಲೇ ವಿಧಿಃ ಸಾಕ್ಷಾದ್ಧೇನುರೂಪೀ ಸಮಾಗತಃ ।**
**ಚೋಲರಾಜಗೃಹಂ ಪ್ರಾಪ್ಯ ದ್ರವ್ಯಮೂಲ್ಯಾತ್ಸವತ್ಸಕಾ ॥ 20 ॥**

**ಬ್ರಹ್ಮಾ ಧೇನುಃ ಶಿವೋ ವತ್ಸೋ ಗೋಪಾಲೀ ಕಮಲಾಲಯಾ ।**
**ಪಶ್ಯಂತೀ ಪತಿಮಾರ್ಗಂ ತು ಚೋಲರಾಜಾನಮಭ್ಯಗಾತ್ ॥ 21 ॥**

**ವಿಕ್ರೀತ್ವಾ ಗಾಂ ಮಹಾಲಕ್ಷ್ಮೀಃ ಜಗಾಮ ನಿಜಧಾಮ ಚ ।**
**ಬಹುಕ್ಷೀರಪ್ರದಾಂ ತಾಂ ಸಃ **ಪುತ್ರಾರ್ಥಮಕರೋತ್ತದಾ ॥ 22 ॥**

---

**(ಬಹುಕ್ಷೀರಪ್ರದಾಂ ಸಾಧ್ವೀಂ)

ತಸ್ಮಿನ್‌ಕಾಲೇ = ಇಂತು ರಾಜ್ಯವು ಸುಭಿಕ್ಷವಾಗಿದ್ದು, ಆಯಾ ವರ್ಣೀಯರು, ಆಶ್ರಮದವರು, ತಮತಮಗೆ ವಿಹಿತಾಚಾರ ಮಗ್ನರಾಗಿರುವಾಗ, ವಿಧಿಃ = ಬ್ರಹ್ಮದೇವರು, ಸಾಕ್ಷಾತ್ = ಪ್ರತ್ಯಕ್ಷವಾಗಿ, ಧೇನುರೂಪೀ = ಆಕಳುರೂಪಧರಿಸಿ, ಸಮಾಗತಃ = ಆಗಮಿಸಿದರು, ದ್ರವ್ಯಮೂಲ್ಯಾತ್ = ದ್ರವ್ಯರೂಪ ಮಾರಾಟದಿಂದ, ಸವತ್ಸಾ = ಕರುವಿನಿಂದೊಡಗೂಡಿ, ಚೋಲರಾಜಗೃಹಂ = ಚೋಳರಾಜನ ಅರಮನೆಯನ್ನು, ಪ್ರಾಪ್ಯ = ಹೊಂದಿ, (ಸ್ಥಿತಃ = ಇದ್ದರು). ॥ 20 ॥ ಬ್ರಹ್ಮಾ = ಬ್ರಹ್ಮದೇವರು, ಧೇನುಃ = ಹಸುವು, ಶಿವಃ = ರುದ್ರದೇವರು, ವತ್ಸಃ = ಕರುವು, ಕಮಲಾಲಯಾ = ಲಕ್ಷ್ಮೀದೇವಿಯು, ಗೋಪಾಲೀ = ಗೋಪಾಲಕಳಾಗಿಯೂ, ಪತಿಮಾರ್ಗಂ = ಶ್ರೀಹರಿಯಿರುವ ಸ್ಥಳದ ದಾರಿಯನ್ನು, ಪಶ್ಯಂತೀ = ಹುಡುಕಿ ನೋಡುತ್ತಾ, ಚೋಳರಾಜಾನಂ = ಚೋಳಭೂಪತಿಯ ಬಳಿಗೆ, ಅಭ್ಯಗಾತ್ = ಬಂದಳು ॥ 21 ॥ ತಾಂ = ಕರುವಿನಿಂದ ಯುಕ್ತವಾದ ಆಕಳನ್ನು, ವಿಕ್ರೀತ್ವಾ = ಬೆಲೆಗೆ ಮಾರಾಟಮಾಡಿ, ಮಹಾಲಕ್ಷ್ಮೀಃ = ಲಕ್ಷ್ಮೀದೇವಿಯು, ನಿಜಧಾಮ = ತನ್ನ ಮನೆಗೆ (ಕೊಲ್ಹಾಪುರಕ್ಕೆ), ಜಗಾಮ = ಹೋದಳು, ಸಃ = ಆ ಚೋಳನೃಪತಿಯು, ಬಹುಕ್ಷೀರಪ್ರದಾಂ = ಅತ್ಯಧಿಕ ಹಾಲನ್ನು ಕರೆಯುವ, ತಾಂ = ಆ ಗೋವನ್ನು, (ಪಾಠಾಂತರ – ತಾಂ ಸಾಧ್ವೀಂ = ಸಾಧುವಾದ ಆ ಹಸುವನ್ನು), ತದಾ = ಆವಾಗ, ಪುತ್ರಾರ್ಥಂ = ತನ್ನ ಮಗನಿಗೋಸ್ಕರವಾಗಿ, (ಕ್ಷೀರಕ್ಕಾಗಿ), ಅಕರೋತ್ = ವ್ಯವಸ್ಥೆ ಮಾಡಿದನು. ॥ 22 ॥

**ತತೋ ಧೇನುಸಹಸ್ರೇಣ ಸಾಕಂ ಶ್ರೀವೇಂಕಟಾಚಲಮ್ ।**
**ಸಾ ಗೌರ್ಗಚ್ಛತಿ ನಿತ್ಯಂ ವೈ ರಮಾನಾಥಂ ವಿಚಿನ್ವತೀ ॥ 23 ॥**

**ತತ್ರ ತತ್ರ ಸಮಾಜಿಘ್ನನ್ ಭೂಧರೇಂದ್ರೇ ವೃಷಾಕಪಿಮ್ ।**
**ವಿಚಿನೋತಿ ಸ್ಮ ಸರ್ವತ್ರ ಧೇನುರೂಪೀ ವಿಧಿಸ್ತದಾ ॥ 24 ॥**

**ತತಃ ಕಾಲೇನ ಮಹತಾ ಸ್ವಾಮಿಪುಷ್ಕರಣೀತಟೇ ।**
**ವಲ್ಮೀಕಸ್ಥಂ ಹರಿಂ ಜ್ಞಾತ್ವಾ ತುತೋಷ ಮನಸಾ ವಿಧಿಃ ॥ 25 ॥**

**ಸಮಸಿಂಚ್ಚಂಚ ವಲ್ಮೀಕಂ ಸಮಂತಾತ್ ಕ್ಷೀರಧಾರಯಾ ।**
**ತದಾ ಪ್ರಭೃತಿ ನಿತ್ಯಂತು ರಾಜಧೇನುಗಣೈಸ್ಸಹ ॥ 26 ॥**

**ತತ್ರ ಗತ್ವಾತಿಭಕ್ತ್ಯೈವ ವಲ್ಮೀಕೇ ಕ್ಷೀರಸೇಚನಮ್ ।**
**ಜಗನ್ನಾಥಸ್ಯ ಪ್ರೀತ್ಯರ್ಥಂ ಧೇನುರೂಪೀ ಪಿತಾಮಹಃ ॥ 27 ॥**

ತತಃ = ಅನಂತರ, ಧೇನುಸಹಸ್ರೇಣ = ಸಾವಿರಾರು ಗೋವುಗಳೊಡನೆ, ಸಹ = ಕೂಡಿಕೊಂಡು, ನಿತ್ಯಂ = ಪ್ರತಿದಿನವೂ, ಸಾ ಗೌಃ = ಆ ಆಕಳು, ರಮಾನಾಥಂ = ಕಮಲಾರಮಣನಾದ ನಾರಾಯಣನನ್ನು, ವಿಚಿನ್ವತೀ = ಹುಡುಕುತ್ತಾ, (ಚಿಂತಿಸುತ್ತಾ) ॥ 23 ॥ ಶ್ರೀವೇಂಕಟಾಚಲಂ ವೈ = ಸಂಪದ್ಭರಿತವಾದ ವೇಂಕಟಗಿರಿಯನ್ನು ಕುರಿತು, ಗಚ್ಛತಿ = ಹೋಗುವುದು, ಧೇನುರೂಪೀ = ಗೋರೂಪದಲ್ಲಿದ್ದ ವಿಧಿಃ = ಬ್ರಹ್ಮದೇವನು, ತದಾ = ಆವಾಗ, ಭೂಧರೇಂದ್ರೇ = ವೇಂಕಟಾಚಲದಲ್ಲಿ, ಸರ್ವತ್ರ = ಎಲ್ಲಕಡೆ, ಸಮಾಜಿಘ್ನನ್ = (ನೆಲವನ್ನು) ಮೂಸಿನೋಡುತ್ತಾ, ವೃಷಾಕಪಿಂ = ಶ್ರೀಹರಿಯನ್ನು, ವಿಚಿನೋತಿಸ್ಮ = ಹುಡುಕಾಡುತ್ತಿದ್ದನು; ॥ 24 ॥ ತತಃ = ಅನಂತರ, ಮಹತಾಕಾಲೇನ = ಬಹುಕಾಲವಾದ ಮೇಲೆ, ವಿಧಿಃ = ಬ್ರಹ್ಮದೇವನು, ಸ್ವಾಮಿಪುಷ್ಕರಣೀತಟೇ = ಸ್ವಾಮಿಪುಷ್ಕರಣಿಯ ತೀರಪ್ರದೇಶದಲ್ಲಿ, ಹರಿಂ = ಹರಿಯನ್ನು, ವಲ್ಮೀಕಸ್ಥಂ = ವಲ್ಮೀಕದಲ್ಲಿರುವನೆಂದು, ಜ್ಞಾತ್ವಾ = ತಿಳಿದು, ಮನಸಾ = ಮನದಲ್ಲಿ, ತುತೋಷ = ಸಂತೋಷಪಟ್ಟನು

॥ 25 ॥ ಚ = ಮತ್ತು, ಸಮಂತಾತ್ = ಎಲ್ಲಕಡೆ, ವಲ್ಮೀಕಂ = ಹುತ್ತವನ್ನು, ಕ್ಷೀರಧಾರಯಾ = ಹಾಲಿನಧಾರೆಯಿಂದ, ಸಮಸಿಂಚತ್ = ಕರೆದನು (ಹಾಲಿನಿಂದ ಹುತ್ತಕ್ಕೆ ಅಭಿಷೇಕ ಮಾಡಿದನೆಂದು ಭಾವ), ತದಾಪ್ರಭೃತಿ = ಆಗಾಲಾಯಿತು, ನಿತ್ಯಂತು = ಪ್ರತಿದಿನವೂ, ರಾಜಧೇನುಗಣ್ಯೈಃ ಸಹ = ರಾಜನ ಗೋಸಮೂಹಗಳೊಡನೆ, ॥ 26 ॥ ತತ್ರ = ವೇಂಕಟಗಿರಿಯ ಮೇಲೆ, ಗತ್ವಾ = ಹೋಗಿ, ಅತಿಭಕ್ತ್ಯೈವ = ಅತಿಶಯ ಭಕ್ತಿಪೂರ್ಣವಾಗಿಯೇ, ಜಗನ್ನಾಥಸ್ಯ = ಶ್ರೀಹರಿಯ, ಪ್ರೀತ್ಯರ್ಥಂ = ಪ್ರೀತಿಗಾಗಿ (ತೃಪ್ತಿಗಾಗಿ), ಧೇನುರೂಪೀ ಪಿತಾಮಹಃ = ಗೋರೂಪದ - ಬ್ರಹ್ಮದೇವನು, ವಲ್ಮೀಕೇ = ಹುತ್ತದಲ್ಲಿ ಕ್ಷೀರಸೇಚನಂ = ಕ್ಷೀರಾಭಿಷೇಕವನ್ನು, ಸತತಂ = ಯಾವಾಗಲೂ, ಕರೋತಿ = ಮಾಡುವನು, ಸಾ = ಆ ಧೇನುವು, ಗೇಹೇ = ರಾಜನರಮನೆಯ ಗೋಶಾಲೆಯಲ್ಲಿ, ಕ್ಷೀರಂ = ಹಾಲನ್ನು, ನೈವದದಾತಿ = ಕರೆಯುತ್ತಲೇ ಇರಲಿಲ್ಲ (ಕೊಡುತ್ತಿರಲಿಲ್ಲ)॥

**ಕರೋತಿ ಸತತಂ ಗೇಹೇ ನೈವ ಕ್ಷೀರಂ ದದಾತಿ ಸಾ ।**
**ಏವಂ ಕಾಲೇ ಗತೇ ತಸ್ಮಿನ್ ಚೋಲರಾಜಸತೀ ಸ್ವಯಮ್ ॥ 28 ॥**

**ಧೇನುಪಾಲಂ ಸಮಾಹೂಯ ಇದಂ ವಚನಮಬ್ರವೀತ್ ।**
**ಗವಾಂ ಪಾಲಕ ದುರ್ಬುದ್ಧೇ ಪಯೋಸ್ಯಾಃ ಕಿಂಕರೋಷಿ ರೇ ॥ 29 ॥**

**ತ್ವಂ ಕಿಂ ಭುಂಕ್ಷ್ಯೇಽಥವಾ ವತ್ಸೋ ಭುಂಕ್ತೇವಾ ವದ ಭೋ ಋತಮ್ ।**
**ಇತಿ ರಾಜ್ಞೀವಚಃ ಶ್ರುತ್ವಾ ಗೋಪಾಲೋ ಭಯವಿಹ್ವಲಃ ॥ 30 ॥**

**ಉವಾಚ ವಚನಂ ಮಂದಂ ರಾಜಭಾರ್ಯಾಂ ಸಗದ್ಗದಮ್ ।**

*ಗೋಪಾಲ ಉವಾಚ -*

**ನ ಜಾನೇಽಹಂ ಚ ತತ್ಕರ್ಮ ನ ಮಯಾ ಪಿಬತೇ ಪಯಃ ॥ 31 ॥**

**ಸ್ವಯಂ ಪಿಬತಿ ವಾ ಧೇನುಃ ವತ್ಸೋ ವೇತಿ ನ ವಿದ್ಮಹೇ ।**
**ಸತ್ಯಂ ವಚನಮೇತದ್ಧಿ ವಿಚಾರಂ ಕುರುತಾಮಿತಿ ॥ 32 ॥**

**ಇತಿ ಗೋಪವಚಃ ಶ್ರುತ್ವಾ ಸಾ ಸತೀ ವಿಹ್ವಲೇಕ್ಷಣಾ ।**
**ತಾಡಯಾಮಾಸ ತಂ ಗೋಪಂ ರಜ್ಜುಭಿಶ್ಚರ್ಮನಿರ್ಮಿತೈಃ ॥ 33 ॥**

ಏವಂ = ಹೀಗೆ ಕಾಲೇಗತೇ (ಸತಿ) = ಕಾಲಕಳೆಯುತ್ತಿರಲು, ತಸ್ಮಿನ್ = ಆ ಸಮಯದಲ್ಲಿ, ಚೋಲರಾಜಸತೀ = ಚೋಳಮಹಾರಾಜನ ಪತ್ನಿಯು, ಸ್ವಯಂಸ್ವತಃ (ತಾನಾಗಿ) ॥ 28 ॥ ಧೇನುಪಾಲಂ = ಆಕಳು ಕಾಯುವವನನ್ನು, ಸಮಾಹೂಯ = ಕರೆಸಿ, ಇದಂ ವಚನಂ = ಈ ಮಾತನ್ನು, ಅಬ್ರವೀತ್ = ಹೇಳಿದಳು, ರೇ ಗವಾಂಪಾಲಕ = ಎಲವೋ ಗೋಪಾಲನೇ, ದುರ್ಬುದ್ಧೇ = ದುಷ್ಟಬುದ್ಧಿಯುಳ್ಳವನೇ! ಅಸ್ಯಾಃ = ಆ ಗೋವಿನ, ಪಯಃ = ಕ್ಷೀರವನ್ನು, ಕಿಂ ಕರೋಷಿ? = ಏನು ಮಾಡುತ್ತಿದ್ದೀಯೆ? ॥ 26 ॥ ಭೋ = ಎಲವೋ, ತ್ವಂ = ನೀನು, ಭುಂಕ್ಷ್ಯೇ = ಕುಡಿಯುತ್ತಿರುವೆಯಾ? ಅಥವಾ = ಇಲ್ಲದಿದ್ದರೆ, ವತ್ಸಂ = ಕರುವು, ಭುಂಕ್ತೇ = ಕುಡಿಯುತ್ತಿರುವುದೇ? = ಋತಂ = ಸತ್ಯವಿಚಾರವನ್ನು, ವದ = ಹೇಳು, ಇತಿ = ಈ ಪ್ರಕಾರವಾಗಿ, ರಾಜ್ಞೀವಚಃ = ರಾಣಿಯ ಮಾತನ್ನು, ಶ್ರುತ್ವಾ = ಕೇಳಿ, ಭಯವಿಹ್ವಲಃ = ಭಯದಿಂದ ಕಂಪಿಸಿ ॥ 30 ॥ ಗೋಪಾಲಃ = ಗೋಪಾಲಕನು, ರಾಜ ಭಾರ್ಯಾಂ = ರಾಣಿಯನ್ನು ಕುರಿತು, ಗೋಪಾಲ ಉವಾಚ =

ಗೋರಕ್ಷಕನಾದ ಆ ಭೃತ್ಯನು ಹೇಳಿದನು. ತತ್ಕರ್ಮ = ಆ ಹಸುವು ಏನು ಮಾಡುವುದೆಂಬುದನ್ನು, ಅಹಂ = ನಾನು, ನ ಜಾನೇ = ತಿಳಿದಿಲ್ಲ, ಚ = ಮತ್ತು, ಮಯಾ = ನನ್ನಿಂದ, ಪಯಃ = ಹಾಲು, ನಪಿಬತೇ = ಕುಡಿಯಲ್ಪಡುವುದಿಲ್ಲ॥ 31 ॥ ಧೇನುಃ = ಆ ಗೋವು, ವತ್ಸೋವಾ = ಅಥವಾ ಕರುವು, ಪಿಬತಿ ವಾ = ಕುಡಿಯುವುದೋ ಎಂಬುದನ್ನು, ನ ವಿದ್ಮಹೇ = ನಾನು ಅರಿಯದವನಾಗಿದ್ದೇನೆ, ಏತತ್ = ನಾನೀಗ ಹೇಳಿದ, ವಚಂ ೬ = ಮಾತೇ, ಸತ್ಯಂ = ಸತ್ಯವು, ವಿಚಾರಂ ಕುರುತಾಂ = ಈ ವಿಚಾರವನ್ನು ಪರಿಶೀಲಿಸಿರಿ, ಇತಿ = ಹೀಗೆ (ಹೇಳಿದನು) ॥ 32 ॥ ಇತಿ = ಹೀಗೆ, ಗೋಪವಚಃ = ಗೋಪಾಲಕನ ಮಾತನ್ನು, ಶ್ರುತ್ವಾ = ಕೇಳಿ, ಸಾ ಸತೀ = ಆ ರಾಜಪತ್ನಿಯು, ವಿಹ್ವಲೇಕ್ಷಣಾ = ಕಣ್ಣು ಕೆಂಪಗೆ ಮಾಡಿಕೊಂಡು, ಚರ್ಮ ನಿರ್ಮಿತೈಃ = ತೊಗಲಿನಿಂದ ಮಾಡಲ್ಪಟ್ಟ, ರಜ್ಜುಭಿಃ = ಹಗ್ಗಗಳಿಂದ (ಚರ್ಮದಚಾವಟಿಯಿಂದ) ತಂ ಗೋಪಂ = ಆ ದನಗಾಹಿಯನ್ನು, ತಾಡಯಾಮಾಸ = ಹೊಡೆಯಿಸಿದಳು ॥ 33 ॥

**ತತಃ ಪರದಿನೇ ಪ್ರಾಪ್ತೇ ತಾಡಿತೋ ರಾಜಭಾರ್ಯಯಾ ।**
**ಕಂಠಾಂಘ್ರಿಬದ್ಧರಜ್ಜುಂ ತಾಂ ತ್ಯಕ್ತ್ವಾ ತತ್ಪೃಷ್ಠತೋ ಯಯೌ ॥ 34 ॥**

**ಧೇನುಃ ಶೇಷಾಚಲಂ ತತ್ರ ವಲ್ಮೀಕೇ ಹರಿಮಂದಿರೇ ।**
**ಅಭಿಷೇಕಂ ಚಕಾರಾಶು ಸ್ವಪಯೋಧರಧಾರಕೈಃ ॥ 35 ॥**

ತತಃ = ಮೇಲಿನ ಸಂದರ್ಭವು ಜರುಗಿದ ಮೇಲೆ, ಪರ ದಿನೇ = ಮರುದಿವಸವು, ಪ್ರಾಪ್ತೇ (ಸತಿ) = ಬರುತ್ತಿರಲಾಗಿ, ರಾಜಭಾರ್ಯಯಾ = ರಾಣಿಯಿಂದ, ತಾಡಿತಃ = ಏಟುತಿಂದ ಗೋಪಾಲನು, ಕಂಠಾಂಘ್ರಿಬದ್ಧರಜ್ಜುಂ = ಕೊರಳು - ಕಾಲುಗಳಲ್ಲಿ ಬಂಧಿತವಾದ ಹಗ್ಗವುಳ್ಳ (ಗೋವಿನ ಕುತ್ತಿಗೆ ಕಾಲುಗಳನ್ನು ಹಗ್ಗದಿಂದ ಬಿಗಿದು) ತಾಂ = ಆ ಗೋವನ್ನು, ತ್ಯಕ್ತ್ವಾ = ಬಿಟ್ಟು, ತತ್ಪೃಷ್ಠತಃ = ಆ ಗೋವನ್ನು ಅನುಸರಿಸಿ, ಯಯೌ = ಹೊರಟನು, ಧೇನುಃ = ಆ ಗೋವು, ಶೇಷಾಚಲಂ (ಪ್ರತಿ) = ವೆಂಕಟಗಿರಿಯನ್ನು, (ಗತ್ವಾ = ಹೋಗಿ), ತತ್ರ = ಅಲ್ಲಿ, ಹರಿಮಂದಿರೇ = ಶ್ರೀಹರಿಗೆ ಮನೆಯಾಗಿರುವ, ವಲ್ಮೀಕೇ = ಹುತ್ತದಲ್ಲಿ, ಸ್ವಪಯೋಧರಧಾರಕೈಃ = ತನ್ನ ಕೆಚ್ಚಲಿನಿಂದ ಹೊರಹೊಮ್ಮಿದ ಹಾಲಿನ ಧಾರೆಯಿಂದ, ಆಶು = ಶೀಘ್ರವಾಗಿ, ಅಭಿಷೇಕಂ = ಅಭಿಷೇಚನವನ್ನು, ಚಕಾರ = ಮಾಡಿತು ॥ 35 ॥

**ತಾಂ ದೃಷ್ಟ್ವಾ ಧೇನುಪಃ ಕೋಪಾತ್ ಕುಠಾರಂ ಹಸ್ತಮಾತ್ರಕಮ್ ।**
**ಉದ್ಧೃತ್ಯ ತರಸಾ ಗಾಂ ಚ ವಧೋದ್ಯೋಗಂ ಸಮಾಚರತ್ ॥ 36 ॥**

ತಾಂ = ಇಂತು ತನ್ನ ಹಾಲನ್ನು ಹುತ್ತಕ್ಕೆ ಅಭಿಷೇಕ ಮಾಡುತ್ತಿರುವ ಗೋವನ್ನು, ದೃಷ್ಟ್ವಾ = ನೋಡಿ, ಧೇನುಪಃ = ಆ ದನಗಾಹಿಯು, ಕೋಪಾತ್ = ಕ್ರೋಧದಿಂದ, ಹಸ್ತಮಾತ್ರಕಂ = ಕರದಲ್ಲಿರುವ ಕೈಗಾತ್ರದ, ಕುಠಾರಂ = ಕೊಡಲಿಯನ್ನು, ಉದ್ಧೃತ್ಯ = ಮೇಲೆತ್ತಿ, ತರಸಾ = ಬೇಗನೇ, ಗಾಂ = ಆಕಳಿನ, ವಧೋದ್ಯೋಗಂ = ಕೊಲ್ಲುವ ಕಾರ್ಯವನ್ನು, ಸಮಾಚರತ್ = ಮಾಡಿದನು. ॥ 36 ॥

**ತದಾ ವಲ್ಮೀಕಗಃ ಸ್ವಾಮೀ ವಾತ್ಸಲ್ಯಂ ದರ್ಶಯನ್ ಹರಿಃ ।**
**ಸ್ವಭಕ್ತಹನನಂ ಲೋಕೇ ಆತ್ಮಾರ್ಥಂ ಯಃ ಪುಮಾಂಶ್ಚರೇತ್ ॥ 37 ॥**

**ಸ ಏವ ನರಕಂ ಭುಂಕ್ತೇ ಯಾವದಾಚಂದ್ರತಾರಕಮ್ ।**
**ಮದರ್ಥಂ ಚ ಕುಠಾರೇಣ ಹನಿಷ್ಯತಿ ಚ ಗಾಂ ಖಲಃ ॥ 38 ॥**

**ಇತಿ ಮತ್ವಾ ರಮಾಕಾಂತಃ ಶ್ರೀನಿವಾಸೋ ನಿರಾಮಯಃ ।**
**ಏಕೇನ ತುಲಸೀಮಾತ್ರದಲೇನಾಪಿ ನರೋತ್ತಮಃ ॥ 39 ॥**

**ಪೂಜಯೇದ್ಭಕ್ತಿಭಾವೇನ ತಂ ರಕ್ಷಾಮೀತಿ ಮತ್ಪಣಃ ।**
**ಇತ್ಥಂ ವಿಚಾರ್ಯ ಗೋವಿಂದಃ ತತ್ಪ್ರಹಾರಂ ಪ್ರಗೃಹ್ಯ ಚ ॥ 40 ॥**

**ಸ್ವಯಂ ದಧಾರ ತದ್ಘಾತಂ ಮೌಲೌ ಸ್ವೇ ಚ ಜಗತ್ಪತಿಃ ।**
**ಕುಠಾರೇಣಾತಿತೀಕ್ಷ್ಣೇನ ತಾಡಿತೋ ವೇಂಕಟೇಶ್ವರಃ ॥ 41 ॥**

**ಶಿರಃಸ್ಫೋಟನಮಾಪನ್ನಃ ಕುಠಾರೇಣಾಸಿಧಾರಿಣಾ ।**
**ಸಪ್ತತಾಲಪ್ರಮಾಣೇನ ರಕ್ತಸ್ಫೂರ್ತಿರಭೂತ್ತದಾ ॥ 42 ॥**

ತದಾ = ಗೋಪಾಲನು ಗೋವನ್ನು ಕೊಲ್ಲಲುದ್ಯುಕ್ತನಾದಾಗ, ವಲ್ಮೀಕಗಃ = ಹುತ್ತದಲ್ಲಿರುವ, ಸ್ವಾಮೀ = ಪ್ರಭುವಾದ, ಹರಿಃ = ಶ್ರೀವಿಷ್ಣುವು, ವಾತ್ಸಲ್ಯಂ = ಭಕ್ತರಲ್ಲಿ ತನಗಿರುವ ಪ್ರೀತಿಯನ್ನು, ದರ್ಶಯನ್ = ತೋರಿಸುತ್ತಾ, ಲೋಕೇ = ಜಗತ್ತಿನಲ್ಲಿ, ಆತ್ಮಾರ್ಥಂ = ಸ್ವಾರ್ಥಕ್ಕಾಗಿ (ತನಗಾಗಿ), ಸ್ವಭಕ್ತಹನನಂ = ತನ್ನ ಭಕುತನ ಸಂಹಾರವನ್ನು, ಯಃಪುಮಾನ್ = ಯಾವ ಮನುಷ್ಯನು, ಚರೇತ್ = ಮಾಡುವನೋ, (ತನ್ನ ಸ್ವಾರ್ಥಕ್ಕಾಗಿ ಭಕ್ತನ ಹನನವಾಗುತ್ತಿದ್ದರೂ ನೋಡಿ ಸುಮ್ಮನಿರುವನೋ), ॥ 37 ॥ ಸ ಏವ = ಆ ಮಾನವನೇ, ಯಾವದಾಚಂದ್ರತಾರಕಂ = ಚಂದ್ರ ನಕ್ಷತ್ರಗಳಿರುವವರೆಗೆ, ನರಕಂ = ನರಕವನ್ನು, ಭುಂಕ್ತೇ = ಅನುಭವಿಸುವನು, ಖಲಃ = ನೀಚನಾದ ಗೋಪಾಲಕನು, ಮದರ್ಥಂಚ = ನನ್ನ ನಿಮಿತ್ತವಾಗಿಯೇ, ಕುಠಾರೇಣ = ಕೊಡಲಿಯಿಂದ, ಗಾಂ = ಗೋವನ್ನು, ಹನಿಷ್ಯತಿ = ಕೊಲ್ಲುವನು ॥ 38 ॥ ನಿರಾಮಯಃ = ರೋಗಾದ್ಯುಪದ್ರವವಿಲ್ಲದ, ರಮಾಕಾಂತಃ = ರಮೆಯರಸನಾದ, ಶ್ರೀನಿವಾಸಃ = ಶ್ರೀನಿವಾಸನು, ಇತಿ = ಹೀಗೆ, ಮತ್ವಾ = ತಿಳಿದು; ಏಕೇನ = ಒಂದೇ ಒಂದು, ತುಲಸೀ ಮಾತ್ರದಲೇನಾಪಿ = ತುಳಸೀದಳಮಾತ್ರದಿಂದಲೇ, ಯಃ = ಯಾವ, ನರೋತ್ತಮಃ = ಪುರುಷಶ್ರೇಷ್ಠನು ॥ 39 ॥ ಭಕ್ತಿಭಾವೇನ = ಭಕ್ತಿಪೂರ್ವಕವಾಗಿ, ಪೂಜಯೇತ್ = ಅರ್ಚಿಸಿದ್ದೇ ಆದಲ್ಲಿ, ತಂ = ಅಂತಹ ಭಕ್ತನನ್ನು, ರಕ್ಷಾಮಿ = ಕಾಪಾಡುತ್ತೇನೆ, ಇತಿ = ಹೀಗೆ, ಮತ್ಪಣಃ = ನನ್ನ ಪಣವಿದೆ (ನನ್ನ ಪ್ರತಿಜ್ಞೆಯಿದೆ), ಇತ್ಥಂ = ಈ ವಿಧವಾಗಿ, ವಿಚಾರ್ಯ = ಯೋಚಿಸಿ, ಜಗತ್ಪತಿಃ = ಸಕಲ ಪ್ರಪಂಚಕ್ಕೆ ಸ್ವಾಮಿಯಾದ, ಗೋವಿಂದಃ = ಗೋವರ್ಧನಗಿರಿಧಾರಿಯಾದ (ಶ್ರುತಿಪ್ರತಿಪಾದ್ಯನಾದ) ಶ್ರೀಹರಿಯು, ಸ್ವಯಂ = ತಾನೇ, ತದ್ಘಾತಂ = ಆ ಕೊಡಲಿಯ ಪೆಟ್ಟನ್ನು, ಪ್ರಗೃಹ್ಯ = ಸ್ವೀಕರಿಸಿ ॥ 40 ॥ ಚ = ಮತ್ತು (ಅದನ್ನು), ಸ್ವೇಮೌಲೌ = ತನ್ನ ತಲೆಯಲ್ಲಿ, ದಧಾರ = (ಸ್ವೀಕರಿಸಿದನು) ಧರಿಸಿದನು, ಅತಿ ತೀಕ್ಷ್ಣೇನ = ಅತಿ ಕಠಿಣವಾದ (ಚೂಪಾದ) ಕೊಡಲಿಯಿಂದ, ತಾಡಿತಃ = ಹೊಡೆಯಲ್ಪಟ್ಟ, ವೇಂಕಟೇಶ್ವರಃ = ಶ್ರೀನಿವಾಸನು ॥ 41 ॥ ಅಸಿಧಾರಿಣಾ = ತೀಕ್ಷ್ಣವಾದ ಕೊಡಲಿಯಿಂದ, ಶಿರಸ್ಫೋಟನಮಾಪನ್ನಃ = ತಲೆಯೊಡೆದು ಕೊಂಡವನಾದನು, ತದಾ = ಆವಾಗ, ಸಪ್ತತಾಲಪ್ರಮಾಣೇನ = ಏಳು ತಾಳೆಯ ಮರದಷ್ಟು ಉದ್ದವಾಗಿ (ಎತ್ತರವಾಗಿ), ರಕ್ತಸ್ಫೂರ್ತಿಃ = ರಕ್ತದ ಹರಿಯುವಿಕೆಯು, ಅಭೂತ್ = ಆಯಿತು ॥ 42 ॥

**ಏವಂ ಕೋಲಾಹಲಂ ದೃಷ್ಟ್ವಾ ಗೋಪಾಲೋ ಮರಣಂಯಯೌ ।**
**ಹತೇ ಗೋಪಾಲಕೇ ಸಾ ಗೌಃ ಅವರುಹ್ಯ ಗಿರೇಸ್ತದಾ ॥ 43 ॥**

**ರಾಜಾನಂ ಸಮನುಪ್ರಾಪ್ಯ ವಾಕ್ಯಹೀನಾತಿದುಃಖಿತಾ ।**
**ಲುಂಠನಂ ಪರಿಚಕ್ರೇಥ ರಾಜ್ಞೋ ವೈ ಶುಭಮಂದಿರೇ ॥ 44 ॥**

**ತಾಂ ದೃಷ್ಟ್ವಾ ವಿಹ್ವಲಾಂಗೀಂ (ಗಾಂ)ಚ ಲುಂಠಂತೀಂ ಮೃತವತ್ಸಕಾಃ ।**
**ಕಿಮರ್ಥಂ ಲುಂಠತೀತ್ಯೇವ ತ್ಯಕ್ತ್ವಾ ಗೋಸಂತತಿಂ ಮುಹುಃ ॥ 45 ॥**

**ಗವಾಸಾರ್ಧಂ ಗಚ್ಛ ಚಾರ ಸಂಮೇಲಯ ಗವಾಂಗಣಮ್ ।**
**ಇತಿ ರಾಜ್ಞಾ ಸಮಾಜ್ಞಪ್ತಃ ಚಾರಸ್ತತ್ಪೃಷ್ಠತೋ ಯಯೌ ॥ 46 ॥**

ಏವಂ = ಈ ಪ್ರಕಾರವಾದ, ಕೋಲಾಹಲಂ = ಕೋಲಾಹಲವನ್ನು, ದೃಷ್ಟ್ವಾ = ನೋಡಿ, ಗೋಪಾಲಃ = ದನಕಾಯುವವನು, ಮರಣಂಯಯೌ = ಮರಣ ಹೊಂದಿದನು (ಮೃತನಾದನು), ಗೋಪಾಲಕೇ = ಆ ಗೋಪಾಲಕನು, ಹತೇ (ಸತಿ) = ಮೃತನಾಗಲು, ಸಾ ಗೌಃ = ಆ ಗೋವು, ತದಾ = ಆವಾಗ, ಗಿರೇಃ = ಪರ್ವತದ ದಶೆಯಿಂದ, ಅವರುಹ್ಯ = ಇಳಿದು ॥ 43 ॥ ರಾಜಾನಂ (ಪ್ರತಿ) = ಚೋಳರಾಜನನ್ನು ಕುರಿತು, ಸುಮನುಪ್ರಾಪ್ಯ = ಬಂದು, ವಾಕ್ಯಹೀನಾ = ಮಾತಿಲ್ಲದ (ಮಾತನಾಡಲು ಬಾರದ ಆ ಗೋವು), ಅತಿದುಃಖಿತಾ = ಅತ್ಯಂತ ದುಃಖವುಳ್ಳದ್ದಾಗಿ, ಅಥ = ಆನಂತರ, ರಾಜ್ಞಃ = ಮಹಾರಾಜನ, ಶುಭಮಂದಿರೇ = ಶುಭಕರವಾದ ಅರಮನೆಯಲ್ಲಿ, ಲುಂಠನಂ = ಅತ್ತಿತ್ತ ಪರದಾಡುವುದನ್ನು (ಹೊರಳಾಡುವಿಕೆಯನ್ನು), ಪರಿಚಕ್ರೆ = ಮಾಡಿತು ॥ 44 ॥ ಲುಂಠಂತೀಂ = ಅತ್ತಿತ್ತ ಓಡಾಡುತ್ತಿರುವ (ಹೊರಳಾಡುತ್ತಿರುವ), ಚ = ಮತ್ತು, ವಿಹ್ವಲಾಂಗೀಂ = ಬಳಲಿರುವ, ತಾಂ = ಆ ಗೋವನ್ನು, ದೃಷ್ಟ್ವಾ = ಪರಿಕಿಸಿ, ಮೃತವತ್ಸಕಾ (ಕಿಂ) = ಇದರ ಕರುವು ಮೃತವಾಗಿರಬಹುದೆ? (ಇದು ಕರುವನ್ನು ಕಳೆದುಕೊಂಡಿರಬಹುದೇ?) ಗೋಸಂತತಿಂ = ದನಗಳ ಹಿಂಡನ್ನು, ತ್ಯಕ್ತ್ವಾ = ತ್ಯಜಿಸಿ (ಬಂದು), ಏವಂ = ಇಂತು, ಕಿಮರ್ಥಂ = ಏತಕ್ಕಾಗಿ, ಲುಂಠತಿ = ಹೊರಳಾಡುತ್ತಿದೆ? ಚಾರ = ಎಲೈ ಸೇವಕನೇ, ಗವಾಂಸಾರ್ಧಂ = ಆಕಳಿನೊಡನೆ, ಗಚ್ಛ = ಹೋಗು, ಮುಹುಃ = ಮತ್ತೆ, ಗವಾಂಗಣಂ = (ಇದನ್ನು) ಗೋವುಗಳ ಹಿಂಡಿನೊಡನೆ, ಸಂಮೇಲಯ = ಸೇರಿಸು, ಇತಿ = ಇಂತು, ರಾಜ್ಞಾ = ಚೋಳರಾಜನಿಂದ, ಸಮಾಜ್ಞಪ್ತಃ = ಅಪ್ಪಣೆ ಪಡೆದ, ಚಾರಃ = ಆ ಸೇವಕನು, ತತ್ಪೃಷ್ಠತಃ = ಆ ಹಸುವನ್ನು ಹೊಡೆದುಕೊಂಡು ಅದರ ಹಿಂದೆಯೇ, ಯಯೌ = ಹೊರಟನು ॥ 45–46 ॥

**ಆರುಹ್ಯ ವೇಂಕಟಗಿರಿಂ ವಲ್ಮೀಕಾಗ್ರಮುಪಾಶ್ರಿತಃ ।**
**ಪತಿತಂ ಧೇನುಪಂ ದೃಷ್ಟ್ವಾ ವಲ್ಮೀಕಾಗ್ರಾತ್ಸಮುತ್ಥಿತಾಮ್ ॥ 47 ॥**

**ರಕ್ತವೃಷ್ಟಿಂ ಘೋರತರಾಂ ಸಪ್ತತಾಲಪ್ರಮಾಣಕಾಮ್ ।**
**ಸಂವೀಕ್ಷ್ಯ ನೃಪಚಾರೋಽಥ ಜಗಾಮ ನೃಪಮಂದಿರಮ್ ॥ 48 ॥**

**ಉವಾಚ ತತ್ಪ್ರಭಾವಂ ಚ ವಲ್ಮೀಕಾಗ್ರಾತ್ಸಮುತ್ಥಿತಾಮ್ ।**
**ರಕ್ತವೃಷ್ಟಿಂ ತತಃ ಶ್ರುತ್ವಾ ರಾಜಾ ವಿಸ್ಮಿತಮಾನಸಃ ॥ 49 ॥**

**ಆರುಹ್ಯ ನರಯಾನಂ ಚ ಶೀಘ್ರೇಣಾಗಾದ್ವೃಷಾಚಲಮ್ ।**
**ಕಿಮಿದಂ ಭೋ ಮಹತ್ಕಷ್ಟಂ ಕೇನ ಪಾಪೇನ ವೈ ಕೃತಮ್ ॥ 50 ॥**

**ಧೇನುಪಾಲಸ್ಯ ಮರಣಂ ವಲ್ಮೀಕಂ ರಕ್ತಪೂರಿತಮ್ ।**
**ಗವಾ ವಾರ್ತಾಂ ಚ ಕಥನಂ ಕಿಮಿದಂ ವೇಂಕಟಾಚಲೇ ।**
**ಇತಿ ರಾಜ್ಞೋವಚಃ ಶ್ರುತ್ವಾ ವಲ್ಮೀಕಸ್ಥೋ ಜಗತ್ಪತಿಃ ॥ 51 ॥**

**ಉದ್ಭಿದ್ಯ ವಲ್ಮೀಕಮನಂತವೀರ್ಯೋ ಹ್ಯನಂತ ಶೈಲೇಂದ್ರತಲಂ ಸಮಾಶ್ರಿತಃ ।**
**ಶ್ರೀಸ್ವಾಮಿತೀರ್ಥಸ್ಯ ಚ ದಕ್ಷಿಣೇ ಶುಭೇ ವಲ್ಮೀಕಸಂಸ್ಥೋ ಭಗವಾನುವಾಚ ॥ 52 ॥**

ವೇಂಕಟಗಿರಿಂ = ವೇಂಕಟಾಚಲವನ್ನು, ಆರುಹ್ಯ = ಏರಿ, ವಲ್ಮೀಕಾಗ್ರಂ = ಹುತ್ತದ ಮೇಲ್ಭಾಗವನ್ನು, ಉಪಾಶ್ರಿತಃ = ಆಶ್ರಯಿಸಿ ನಿಂತನು, (ಅಲ್ಲಿ) ಪತಿತಂ = ಮೃತನಾಗಿ ಬಿದ್ದಿರುವ, ಧೇನುಪಂ = ಗೋಪಾಲಕನನ್ನು, ದೃಷ್ಟ್ವಾ = ನೋಡಿ, ವಲ್ಮೀಕಾಗ್ರಾತ್ = ಹುತ್ತದಮೇಲ್ಭಾಗದಿಂದ, ಸಮುತ್ಥಿತಾಂ = ಹೊರಟಿರುವ, ಸಪ್ತತಾಲಪ್ರಮಾಣಕಾಂ = ಏಳು ತಾಳೆಯ ಮರದಷ್ಟು ಮೇಲಕ್ಕೆ ಚಿಮ್ಮುತ್ತಿರುವ, ಘೋರತರಾಂ = ಅತಿ ಘೋರತರವಾದ, ರಕ್ತವೃಷ್ಟಿಂ = ರಕ್ತದ ಮಳೆಯನ್ನು, ಸಂವೀಕ್ಷ್ಯ = ನೋಡಿ, ಅಥ = ಆನಂತರ, ನೃಪಚಾರಃ = ಆ ರಾಜಸೇವಕನು, ನೃಪಮಂದಿರಂ = ರಾಜನ ಅರಮನೆಗೆ, ಜಗಾಮ = ಹೋದನು. ॥ 47-48 ॥ ಅರಮನೆಗೆ ಬಂದ ಚಾರನು, ವಲ್ಮೀಕಾಗ್ರಾತ್ಸಮುತ್ಥಿತಾಂ ಹುತ್ತದ ಮೇಲ್ಭಾಗದಿಂದ ಹೊರಟಿರುವ, ರಕ್ತವೃಷ್ಟಿಂ = ರಕ್ತದ ಮಳೆಯನ್ನೂ, ತತ್ಪ್ರಭಾವಂ = ಆ ರಕ್ತವೃಷ್ಟಿಯ ಪ್ರಭಾವದಿಂದ ಮೃತನಾದ ಗೋಪಾಲಕನ ವಿಷಯವನ್ನೂ, ಉವಾಚ = ಹೇಳಿದನು, ಶ್ರುತ್ವಾ = ಚಾರನು ಹೇಳಿದ ಸಮಾಚಾರವನ್ನು ಕೇಳಿ, ತತಃ = ಆ ತರುವಾಯ, ವಿಸ್ಮಿತಮಾನಸಃ = ಅಚ್ಚರಿಯ ಮನವುಳ್ಳವನಾದ (ವಿಸ್ಮಿತಚಿತ್ತನಾದ), ರಾಜಾ = ಚೋಳರಾಜನು ॥ 49 ॥ ನರಯಾನಂ = ಮೇನೆಯನ್ನು, ಆರುಹ್ಯ = ಏರಿಕೊಂಡು, ಶೀಘ್ರೇಣ = ಬೇಗನೆ, ವೃಷಾಚಲಂ = ವೃಷಭಪರ್ವತಕ್ಕೆ, ಆಗಾತ್ = ಬಂದನು, ಮಹತ್ಕಷ್ಟಂ = ಅತಿ ದುಃಖಕರವಾದ (ಕಷ್ಟಕರವಾದ), ಇದಂ = ಈ ಕೃತ್ಯವು, ಪಾಪೇನ = ಪಾಪಿಯಾದ, ಕೇನ ವೈ = ಯಾರಿಂದ, ಕಿಂ ಕೃತಂ = ಏತಕ್ಕಾಗಿ ಮಾಡಲ್ಪಟ್ಟಿತು? ॥ 50 ॥ ಧೇನುಪಾಲಸ್ಯ ಮರಣಂ = ಗೋಪಾಲಕನು ಮೃತನಾಗಿರುವುದು, ವಲ್ಮೀಕಂ = ಹುತ್ತವು, ರಕ್ತಪೂರಿತಂ = ರಕ್ತದಿಂದ ತುಂಬಿರುವುದು, ಚ = ಮತ್ತು, ಗವಾ = ಗೋವಿನಿಂದ, ವಾರ್ತಾಂ = ಈ ಸಮಾಚಾರವನ್ನು, ಕಥನಂ = ಹೇಳುವಿಕೆಯು, ವೇಂಕಟಾಚಲೇ = ವೇಂಕಟಾದ್ರಿಯಲ್ಲಿ, ಕಿಮಿದಂ = ಇದೇನಾಗಿದೆ? ಇತಿ = ಈ ವಿಧವಾದ, ರಾಜ್ಞಃ = ಮಹಾರಾಜನ, ವಚಃ = ವಚನವನ್ನು, ಶ್ರುತ್ವಾ = ಆಲಿಸಿ, ವಲ್ಮೀಕಸ್ಥಃ = ಹುತ್ತದೊಳಗಿರುವ, ಜಗತ್ಪತಿಃ = ಜಗದೀಶ್ವರನಾದ ಶ್ರೀಹರಿಯು. ॥ 51 ॥ ಅನಂತವೀರ್ಯಃ = ಅಪರಿಮಿತ ಸಾಮರ್ಥ್ಯವುಳ್ಳ, ಅನಂತಶೈಲೇಂದ್ರ ತಲಂ = ಶ್ರೇಷ್ಠವಾದ ಶೇಷಾಚಲಪ್ರದೇಶವನ್ನು, ಸಮಾಶ್ರಿತಃ = ಆಶ್ರಯಿಸಿಕೊಂಡಿರುವ, ಶ್ರೀಸ್ವಾಮಿತೀರ್ಥಸ್ಯ = ಕಾಂತಿಯುಕ್ತವಾದ ಸ್ವಾಮಿಪುಷ್ಕರಣೀ ತೀರ್ಥದ, ಶುಭೇ = ಮಂಗಳಕರವಾದ, ದಕ್ಷಿಣೇ = ದಕ್ಷಿಣ ಭಾಗದಲ್ಲಿರುವ, ವಲ್ಮೀಕಸಂಸ್ಥಃ = ಹುತ್ತದೊಳಗಿರುವ, ಭಗವಾನ್ = ಪೂಜ್ಯನಾದ ಶ್ರೀಹರಿಯು, ವಲ್ಮೀಕಂ = ಹುತ್ತವನ್ನು, ಉದ್ಭಿದ್ಯ = ಭೇದಿಸಿಕೊಂಡು ಮೇಲೆ ಬಂದು, ಉವಾಚ = ಮಾತನಾಡಿದನು ॥ 52 ॥

**ಸಗದ್ಗದೋತ್ಕಂಠ ಸಮಾಕುಲಾನನಃ ಸಂದಿಗ್ಧ ನೇತ್ರೋದ್ಭವ ವಾರಿಪೂರಿತಃ ।**
**ಚೋಲಂ ನೃಪೇಂದ್ರಂ ಬಹುಕಷ್ಟಯಾ ಗಿರಾ ಸಶಂಖಚಕ್ರಪ್ರತಿಮಾಂ ಸಮಾಶ್ರಿತಃ ॥ 53 ॥**

ಸಗದ್ಗದೋತ್ಕಂಠ ಸಮಾಕುಲಾನನಃ - ಸಗದ್ಗದ = ಗದ್ಗದಧ್ವನಿಯಿಂದ ಕೂಡಿದ, ಉತ್ಕಂಠ = ಮೇಲೆತ್ತಲ್ಪಟ್ಟ ಕೊರಳಿನಿಂದ, ಸಮಾಕುಲ = ವ್ಯಾಕುಲಗೊಂಡ, ಆನನಃ = ಮುಖವುಳ್ಳ, ಸಂದಿಗ್ಧನೇತ್ರೋದ್ಭವವಾರಿಪೂರಿತಃ - ಸಂದಿಗ್ಧ =

ಅರೆತೆರೆದ, ನೇತ್ರ = ನಯನಗಳಲ್ಲಿ, ಉದ್ಭವ = ಹೊರಹೊಮ್ಮಿದ, ವಾರಿಪೂರಿತಃ = ನಯನಜಲದಿಂದ ತುಂಬಿದ, ಸಶಂಖ ಚಕ್ರಪ್ರತಿಭಾಂ = ಶಂಖಚಕ್ರಗಳ ಕಾಂತಿಯನ್ನು, ಸಮಾಶ್ರಿತಃ = ಹೊಂದಿದವನಾದ, ಸಃ = ಶ್ರೀಹರಿಯು, ಚೋಲಂ ನೃಪೇಂದ್ರಂ (ಪ್ರತಿ) = ಚೋಳ ಮಹಾರಾಜನನ್ನು ಕುರಿತು, ಬಹುಕಷ್ಟಯಾಗಿರಾ – ಬಹುಕಷ್ಟಯಾ = ಅತಿಪ್ರಯಾಸ (ಕಷ್ಟ)ಯುಕ್ತವಾದ, ಗಿರಾ = ಮಾತಿನಿಂದ ॥ 53 ॥

*ಶ್ರೀ ಭಗವಾನುವಾಚ–*

**ಪಾಪಿಷ್ಠೋಽಸಿ ದುರಾಚಾರ ರಾಜ್ಯೈಶ್ವರ್ಯಮದೋದ್ಧತ ।**
**ಅನಾಥಂ ಭುಕ್ತಿಹೀನಂ ಮಾಂ ದರಿದ್ರಂ ವನಚಾರಿಣಮ್ ॥ 54 ॥**

**ಮಾತಾಪಿತೃವಿಹೀನಂ ಚ ಭಾರ್ಯಾಬಂಧುವಿವರ್ಜಿತಮ್ ।**
**ಸೌಭ್ರಾತೃಹೀನಂ ಕುಟಿಲಂ ಕುಠಾರೇಣಾಸಿಧಾರಿಣಾ ॥ 55 ॥**

**ತಾಡಿತೋಽಹಂ ನೃಪಶ್ರೇಷ್ಠ ತದ್ದುಃಖಮತುಲಂ ಹ್ಯಭೂತ್ ।**
**ಶಿರೋಭಿನ್ನಂ ಧೇನುಪೇನ ದಯಾಹೀನೇನ ದುರ್ಮತೇ ॥ 56 ॥**

**ಇತ್ಯುಕ್ತ್ವಾ ಭಗವಾನ್ ದೇವಃ ಶಶಾಪ ನೃಪಪುಂಗವಮ್ ।**
**ಪಿಶಾಚೋ ಭವ ದುರ್ಬುದ್ಧೇ ಮದ್ದುಃಖಾದಾನಕರ್ಮಣಾ ॥ 57 ॥**

**ಇತ್ಥಂ ಶಪ್ತೋ ನೃಪಶ್ರೇಷ್ಠಃ ಪಪಾತ ಭುವಿ ಮೂರ್ಛಿತಃ ।**
**ಮುಹೂರ್ತಾಂತೇ ಸಮುತ್ಥಾಯ ಪ್ರೋವಾಚ ಜಗದೀಶ್ವರಮ್ ॥ 58 ॥**

ಶ್ರೀಭಗವಾನುವಾಚ = ವೇದಪ್ರತಿಪಾದ್ಯನಾದ ಶ್ರೀಹರಿಯು ಮಾತನಾಡಿದನು. ದುರಾಚಾರ = ಕೆಟ್ಟನಡತೆಯುಳ್ಳವನೇ! ರಾಜ್ಯೈಶ್ವರ್ಯಮದೋದ್ಧತ – ರಾಜ್ಯ = ರಾಜ್ಯದ, ಐಶ್ವರ್ಯ = ಸಂಪತ್ತಿನಿಂದ ಉಂಟಾದ, ಮದ = ಮದದಿಂದ, ಉದ್ಧತ = ಉದ್ಧಟನಾದ ಚೋಳರಾಜನೇ (ತ್ವಂ = ನೀನು), ಪಾಪಿಷ್ಠೋಽಸಿ = ಪಾಪಿಯಾಗಿದ್ದೀಯೆ, ಅನಾಥಂ = ದಿಕ್ಕಿಲ್ಲದ, ಭುಕ್ತಿಹೀನಂ = ಉಣ್ಣಲು ಗತಿಯಿಲ್ಲದ, ದರಿದ್ರಂ = ಕಡುಬಡವನಾದ, ವನಚಾರಿಣಂ = ಕಾಡಿನಲ್ಲಿ ಅಲೆಯುತ್ತಿರುವ ॥ 54 ॥ ಮಾತಾಪಿತೃವಿಹೀನಂ = ತಾಯಿತಂದೆಗಳಿಲ್ಲದ, ಭಾರ್ಯಾಬಂಧು ವಿವರ್ಜಿತಂ – ಭಾರ್ಯಾ = ಹೆಂಡತಿ, ಬಂಧು = ಬಾಂಧವರು ಇವರಿಂದ, ವಿವರ್ಜಿತಂ = ಬಿಡಲ್ಪಟ್ಟಿರುವ, ಸೌಭ್ರಾತೃಹೀನಂ = ಅಣ್ಣತಮ್ಮಂದಿರಿಲ್ಲದಿರುವ, ಕುಟಿಲಂ = ಋಜುವಾಗಿಲ್ಲದಿರುವ, ಮಾಂ = ನನ್ನನ್ನು, ಅಸಿಧಾರಿಣಾ = ಕತ್ತಿಯಂತೆ ಚೂಪಾದ, ಕುಠಾರೇಣ = ಕೈಗೊಡಲಿಯಿಂದ ॥ 55 ॥ ದಯಾಹೀನೇನ = ಕರುಣೆಯಿಲ್ಲದ, ಧೇನುಪೇನ = ನಿನ್ನ ದನಕಾಯುವವನಿಂದ, ತಾಡಿತೋಽಹಂ – ಅಹಂ = ನಾನು, ತಾಡಿತಃ = ಹೊಡೆಯಲ್ಪಟ್ಟವನಾಗಿದ್ದೇನೆ, ಶಿರೋಭಿನ್ನಂ = ಆದರಿಂದ ನನ್ನ ತಲೆಯೊಡೆಯಿತು, ದುರ್ಮತೇ = ದುಷ್ಟಬುದ್ಧಿಯುಳ್ಳ, ನೃಪಶ್ರೇಷ್ಠ = ನೃಪೋತ್ತಮನೇ, ತದ್ದುಃಖಂ = ಗೋಪಾಲಕನ ಕುಠಾರಾಘಾತದಿಂದುಂಟಾದ ದುಃಖವು, ಅತುಲಂ = ತೂಗಲು ಅಸಾಧ್ಯವಾದಷ್ಟು (ಇಂತಿಷ್ಟೆಂದು ಹೇಳಲಾಗದಷ್ಟು) ಅಭೂತ್ = ಆಯಿತು. ॥ 56 ॥ ಇತ್ಯುಕ್ತ್ವಾ = ಇಂತು ನಿರೂಪಿಸಿ, ಭಗವಾನ್ = ಪೂಜ್ಯನಾದ, ದೇವಃ = ಶ್ರೀಹರಿಯು, ನೃಪಪುಂಗವಂ = ಚೋಳಮಹಾರಾಜನನ್ನು, ಶಶಾಪ = ಶಪಿಸಿದನು, ಮುದ್ದುಃಖಾದಾನ ಕರ್ಮಣಾ = ನನಗೆ ದುಃಖವಾಗುವಂತೆ ಮಾಡಿದ ಈ ಕಾರ್ಯದಿಂದ, ದುರ್ಬುದ್ಧೇ = ದುಷ್ಟಬುದ್ಧಿಯುಳ್ಳವನೇ!, ಪಿಶಾಚೋ ಭವ = (ನೀನು) ಪಿಶಾಚಿಯಾಗು! ॥ 57 ॥ ಇತ್ಥಂ = ಈ

ಪ್ರಕಾರವಾಗಿ, ಶಪ್ತಃ = ಶಪಿಸಲ್ಪಟ್ಟ, ನೃಪಶ್ರೇಷ್ಠಃ = ನೃಪೋತ್ತಮನಾದ ಚೋಳರಾಜನು, ಮೂರ್ಛಿತಃ = ಎಚ್ಚರತಪ್ಪಿ ಭುವಿ = ಭೂಮಿಯಲ್ಲಿ, ಪಪಾತ = ಬಿದ್ದನು, ಮುಹೂರ್ತಾಂತೇ = ಒಂದು ಮುಹೂರ್ತಕಾಲವು ಕಳೆದ ಮೇಲೆ, ಸಮುತ್ಥಾಯ = ಮೂರ್ಛೆ ತಿಳಿದೆದ್ದು (ಎಚ್ಚರಗೊಂಡು), ಜಗದೀಶ್ವರಂ = ಜಗತ್ತಿಗೆಲ್ಲಾ ಸ್ವಾಮಿಯಾದ ಶ್ರೀಹರಿಯನ್ನು ಕುರಿತು, ಪ್ರೋವಾಚ = ಹೇಳಿದನು ॥ 58 ॥

## ಮೂರನೇ ಅಧ್ಯಾಯದ ಶ್ರೀಭಗವಂತನ ಅವತಾರದ ಕಥಾಸಾರ

ಶತಾನಂದ ಮುನಿಗಳು ಜನಕಮಹಾರಾಜನ ಪ್ರಾರ್ಥನೆಯಂತೆ ಶ್ರೀಭಗವಂತನು ಧರೆಗಿಳಿದುಬಂದ ಬಗೆ, ಶ್ರೀವೇಂಕಟಗಿರಿಯ ಮಹಿಮಾದಿಗಳನ್ನು ಹೇಳಿ, ಈಗ ವೇಂಕಟಾಚಲದ ಮೇಲಿರುವ ತೀರ್ಥಾದಿಗಳ ವೈಶಿಷ್ಟ್ಯ, ಹಾಗೂ ಶ್ರೀನಿವಾಸನ ಮುಂದಿನ ಚರಿತೆಗಳನ್ನು ನಿರೂಪಿಸಲುದ್ಯುಕ್ತರಾಗಿ ಹೇಳಲಾರಂಭಿಸಿದರು -

''ಎಲೈ ಜನಕಮಹಾರಾಜ ! ಕೇಳು, ಶ್ರೀವೇಂಕಟಗಿರಿಯ ಮೇಲ್ಭಾಗದಲ್ಲಿ ಸ್ವಾಮಿಪುಷ್ಕರಣಿಯೆಂಬ ಪವಿತ್ರತೀರ್ಥವು ವಿರಾಜಿಸುತ್ತಿದೆ. ಅದು ಉತ್ತಮವಾದತೀರ್ಥವು. ದೇವತೆಗಳಿಗೆ ಯೋಗ್ಯವಾದ ಆ ತೀರ್ಥವು ಮಂಗಳಕರವಾದುದು. ಮೀನುಗಳು, ಆಮೆಗಳು, ಸರ್ಪಗಳು ಮತ್ತು ನೀರುಕೋಳಿಗಳಿಂದ ಅದು ಅಲಂಕೃತವಾಗಿದೆ. ಮೊಸಳೆಗಳಿಂದ ವ್ಯಾಪ್ತವಾಗಿ, ಕಪ್ಪೆಗಳಿಂದ ರಾಜಿಸುವ ಆ ಸ್ವಾಮಿಪುಷ್ಕರಣಿಯತೀರದಲ್ಲಿ ಬೆಳೆದಿರುವ, ಗಗನಚುಂಬಿಗಳಾದ ವೃಕ್ಷಗಳ ಸಮೂಹದಿಂದ ನಿಬಿಡವಾದ ಅರಣ್ಯವು ಅಲ್ಲಿ ಶೋಭಿಸುತ್ತಿದೆ. ಗಂಗಾನದಿ ಮುಂತಾದ ಸಕಲ ತೀರ್ಥಗಳಿಗೂ ಉತ್ಪತ್ತಿ ಸ್ಥಳವಾಗಿರುವ ಸ್ವಾಮಿಪುಷ್ಕರಣಿಯು ಅಲ್ಲಿ ವಿಶೇಷವಾಗಿ ಪ್ರಕಾಶಿಸುವುದು. ಆ ಪುಷ್ಕರಣಿಯಲ್ಲಿ ಸ್ನಾನಮಾಡುವವರು ಕೃತಾರ್ಥರು ಮತ್ತು ಸುಕೃತಭಾಗಿಗಳು, ಸೂರ್ಯನು ಧನುರಾಶಿಯಲ್ಲಿರುವಾಗ ಶುಕ್ಲಪಕ್ಷದ ದ್ವಾದಶಿ ದಿನದಂದು ಅರುಣೋದಯ ಕಾಲದಲ್ಲಿ ಸಮಸ್ತ ದೇವತೆಗಳೂ ಮಂಗಳಕರವಾದ ಸ್ವಾಮಿಪುಷ್ಕರಣಿಯ ಜಲದಲ್ಲಿ ಸ್ನಾನ ಮಾಡಲು ಅಪೇಕ್ಷಿಸುವರು. ಅಂದಮೇಲೆ ಆ ಸ್ವಾಮಿಪುಷ್ಕರಣಿಯಲ್ಲಿ ಆ ಶುಭದಿನದಂದು ಮಾನವರು ಸ್ನಾನಮಾಡುವುದು ಅತ್ಯವಶ್ಯವೆಂದು ಹೇಳಬೇಕಿಲ್ಲವಷ್ಟೆ! ಶ್ರೀ ಸ್ವಾಮಿಪುಷ್ಕರಣಿತೀರ್ಥದಲ್ಲಿ ಬ್ರಾಹ್ಮಣರು ಪಿತೃಗಳ ತೃಪ್ತಿಗಾಗಿ ಶ್ರಾದ್ಧ - ತರ್ಪಣಾದಿ ಕರ್ಮಗಳನ್ನು ನೆರವೇರಿಸಿದಲ್ಲಿ ಅಂತಹವರ ಪಿತೃಗಳು ಸಂತುಷ್ಟರಾಗಿ ಶ್ರೀಹರಿಯ ವೈಕುಂಠಲೋಕದಲ್ಲಿ ನರ್ತಿಸುವರು! ಒಂದು ವೇಳೆ ಈ ವಿಧಿಯನ್ನು ನೆರವೇರಿಸದಿದ್ದಲ್ಲಿ ಭಗವಂತನ ಅನುಗ್ರಹದಿಂದ ದೊರಕಿದ ಮಾನವ ಜನ್ಮದಿಂದ ಪ್ರಯೋಜನವೇನು?

ಆ ಪವಿತ್ರ ಸ್ವಾಮಿಪುಷ್ಕರಣೀ ತೀರ್ಥದಲ್ಲಿಸ್ನಾನಮಾಡಿ, ದಾನಮಾಡುವುದರಿಂದ ಮಾನವರು ಭಾಗ್ಯಶಾಲಿಗಳಾಗುವರು. ಹಿಂದೆ ಶಂಖನೆಂಬ ಒಬ್ಬ ಅರಸನು ಸ್ವಾಮಿಪುಷ್ಕರಣಿಯಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಸ್ವರ್ಗಲೋಕವನ್ನು ಪಡೆದನು! ಪೂರ್ವದಲ್ಲಿನಾರಾಯಣನೆಂಬ ಹೆಸರಿನ, ಅಂಗಿರಸರಿಗೆ ಪುತ್ರನಾದ ಭೂಸುರನು ಸ್ನಾನಮಾಡಿದ್ದರಿಂದುಂಟಾದ ಪುಣ್ಯದಿಂದ ಸ್ವಾಮಿಪುಷ್ಕರಣೀ ತೀರ್ಥದ ಪ್ರಭಾವದಿಂದ(ಮಹಿಮೆಯಿಂದ) ಶ್ರೀಹರಿಯದರ್ಶನವನ್ನು ಪಡೆದು, ಶ್ರೀಹರಿಯಿಂದ ವರವನ್ನು ಸಂಪಾದಿಸಿಕೊಂಡು ಶ್ರೀಹರಿಮಂದಿರಕ್ಕೆ ತೆರಳಿದನು (ಮೋಕ್ಷವನ್ನು ಪಡೆದನು). ಇದು ಸುಪ್ರಸಿದ್ಧ. ಶ್ರೀರಾಮಚಂದ್ರಪ್ರಭುವೂ ಕೂಡ ಸ್ವಾಮಿಪುಷ್ಕರಣಿಯಲ್ಲಿ ಸ್ನಾನಮಾಡಿದ ಫಲದಿಂದ ರಾವಣನು ಅಪಹರಿಸಿಕೊಂಡೊಯ್ದಿದ್ದ ಸೀತಾದೇವಿಯನ್ನು (ಸೀತಾದೇವಿಯ ಪ್ರತಿಕೃತಿಯನ್ನು) ಮತ್ತೆ ಪಡೆದನು!

ಇಂತು ಶುಭಕರವಾದ ಸ್ವಾಮಿಪುಷ್ಕರಣಿಯು ವೇಂಕಟಾಚಲದಲ್ಲಿ ಸಕಲತೀರ್ಥಗಳಲ್ಲಿ ಶ್ರೇಷ್ಠತೀರ್ಥವಾಗಿ ಕಂಗೊಳಿಸುತ್ತಿದೆ. ಆ ಸ್ವಾಮಿಪುಷ್ಕರಣಿಯ ಪಶ್ಚಿಮ ದಿಕ್‌ಭಾಗದಲ್ಲಿ ಭೂದೇವಿಯನ್ನು ಆಲಿಂಗಿಸಿಕೊಂಡು ವರಾಹವದನನಾದ ಶ್ರೀಹರಿಯು ಅಶ್ವತ್ಥವೃಕ್ಷದಿಂದ ಶೋಭಿಸುವ ಸ್ಥಳದಲ್ಲಿ ವಿರಾಜಿಸಿದ್ದಾನೆ. ಮೂರುಕೋಟಿ ಸಂಖ್ಯಾಕವಾದ ವಿವಿಧ ತೀರ್ಥಗಳಿಗೆ

ಆ ವೇಂಕಟಗಿರಿಯು ಮಾತೃಸ್ಥಾನವಾಗಿದೆ. ಇಂತಹ ಶ್ರೇಷ್ಠವಾದ ವೇಂಕಟಾಚಲಕ್ಕೆ ಬಂದು ಭಗವಾನ್ ಶ್ರೀವಿಷ್ಣುವು ಆ ಪರ್ವತವು ವೈಕುಂಠಕ್ಕಿಂತಲೂ ಹೆಚ್ಚಿನದೆಂದು ಭಾವಿಸಿ ಅಲ್ಲಿ ಅತ್ತಿತ್ತ ವಿಹರಿಸಿದನು.

ಇಂತು ತಿರುಗಾಡುತ್ತಿರುವ ಶ್ರೀಲಕ್ಷ್ಮೀಕಾಂತನಾದ ಶ್ರೀಹರಿಯು ರಹಸ್ಯವಾಗಿ ವಾಸಿಸಲು ಸರಿಯಾದ ಜಾಗವು ದೊರಕಲಿಲ್ಲವಲ್ಲಾ ಎಂದು ಯೋಚಿಸುತ್ತಿರುವಾಗ, ಸ್ವಾಮಿಪುಷ್ಕರಣಿಯ ದಕ್ಷಿಣಭಾಗದಲ್ಲಿ ನಿರ್ಮಲವೂ, ದೇವತಾಯೋಗ್ಯವೂ ಆದ, ಹುಣಸೇಮರದ ಅಡಿಯಲ್ಲಿರುವ, ಒಂದು ಹುತ್ತವನ್ನು ಕಂಡು, ಜಗತ್ಪ್ರಭುವಾದ ಭಗವಂತನು ಇದೇ ತಾನು ಗುಪ್ತವಾಗಿರಲು ಯೋಗ್ಯವಾದ ಸ್ಥಳವೆಂದಾಲೋಚಿಸಿ, ಆ ಹುತ್ತದಲ್ಲಿ ಮರೆಯಾದನು. ಇಂತು ಭಗವಾನ್ ಶ್ರೀಹರಿಯು ಆ ವಲ್ಮೀಕದಲ್ಲಿ ಇರುತ್ತಿರಲು ಹತ್ತು ಸಹಸ್ರ ವರ್ಷಗಳು ಗತಿಸಿದವು.

ದ್ವಾಪರಯುಗವೂ ಕಳೆದು ಇಪ್ಪತ್ತೆಂಟನೆಯ ಕಲಿಯುಗದಲ್ಲಿ ಕೆಲ ಸಂವತ್ಸರಗಳು ಗತಿಸಿದ ನಂತರ ನಾಗಕನ್ನಿಕೆಯ ಉದರದಲ್ಲಿ ಚೋಳರಾಜನೆಂಬ ಒಬ್ಬ ರಾಜೋತ್ತಮನು ಜನಿಸಿದನು. ಅವನು ಪುಣ್ಯಪ್ರದವಾದ ಆ ಭೂಭಾಗದಲ್ಲಿ ಸಕ್ರಮವಾಗಿ ರಾಜ್ಯಭಾರ ಮಾಡುತ್ತಿದ್ದನು. ಅವನು ರಾಜ್ಯವಾಳುತ್ತಿರುವಾಗ, ಗೋವುಗಳು ಹೆಚ್ಚಾಗಿ ಹಾಲು ಕೊಡುತ್ತಿದ್ದವು, ಮಕ್ಕಳುಗಳು ತಾಯಿ ತಂದೆಗಳಲ್ಲಿ ಬಹು ವಾತ್ಸಲ್ಯದಿಂದ ನಡೆದುಕೊಳ್ಳುತ್ತಿದ್ದರು. ಕಾಲಕಾಲಕ್ಕೆ ಸರಿಯಾಗಿ ಮಳೆಯಾಗುತ್ತಿತ್ತು. ಪೈರುಗಳು ಬಹುವಾಗಿ ಧಾನ್ಯಗಳನ್ನು ನೀಡುತ್ತಿದ್ದವು. ಸಕಲ ನಾರಿಯರು ಪತಿವ್ರತೆಯರಾಗಿದ್ದರು, ಅವರ ಪತಿಗಳು ಅನ್ಯಸ್ತ್ರೀಯರಲ್ಲಿ ಆಸಕ್ತರಾಗದೆ ನಿಯತಪತ್ನಿಯರೊಡನೆ ಸಂಸಾರ ಸಾಗಿಸುತ್ತಿದ್ದರು. ಚೋಳಮಹೀಪತಿಯ ಆಳ್ವಿಕೆಯಲ್ಲಿ, ಬ್ರಾಹ್ಮಣರು ಆನಂದದಿಂದ ಯಜ್ಞಾಚರಣರತರಾಗಿದ್ದರು.

ಹೀಗೆ ಚೋಳರಾಜನ ದೇಶವು ಸುಭಿಕ್ಷವಾಗಿದ್ದು ಸಕಲ ವರ್ಣೀಯರೂ ತಮ್ಮ ತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮಾನುಷ್ಠಾನ ನಿಷ್ಠರಾಗಿ ಜೀವನವನ್ನು ಸಾಗಿಸುತ್ತಿರುವಾಗ ಸಾಕ್ಷಾತ್ ಮಹಾಲಕ್ಷ್ಮಿಯು ಶ್ರೀಹರಿಯನ್ನು ಅರಸುತ್ತಾ ಗೋವು-ಕರುಗಳೊಡನೆ ಚೋಳರಾಜನ ಅರಮನೆಗೆ ಬಂದಳು. ಅವಳು ತಂದ ಹಸುಕರುಗಳು ಸಾಮಾನ್ಯವಲ್ಲ, ಬ್ರಹ್ಮದೇವರೇ ಗೋರೂಪ ಧರಿಸಿದ್ದರು, ರುದ್ರದೇವರು ಕರುವಿನ ರೂಪ ಧರಿಸಿದ್ದರು. ಶ್ರೀರಮಾದೇವಿಯು ಗೊಲ್ಲಳ ರೂಪ ಧರಿಸಿದ್ದಳು. ಹೀಗೆ ಕಮಲಮಂದಿರಳಾದ ಲಕ್ಷ್ಮೀದೇವಿಯು ಚೋಳರಾಜನಿಗೆ ಆಕಳು – ಕರುಗಳನ್ನು ಮಾರಿ ತನ್ನ ತವರುಮನೆಯಾದ ಕೊಲ್ಹಾಪುರಕ್ಕೆ ತೆರಳಿದಳು. ಚೋಳಭೂಪತಿಯು ಅಧಿಕ ಕ್ಷೀರವನ್ನು ಕೊಡುವ ಆ ಧೇನುವನ್ನು ತನ್ನ ಕುಮಾರನಿಗಾಗಿ ವ್ಯವಸ್ಥೆ ಮಾಡಿದನು.

ಆನಂತರ ಆ ಧೇನುವು ಅರಮನೆಯ ಸಾವಿರಾರು ಗೋವುಗಳ ಹಿಂಡಿನೊಡನೆ ಮೇಯುವ ನೆಪದಲ್ಲಿ ಕಮಲಾರಮಣನಾದ ಶ್ರೀಹರಿಯನ್ನು ಹುಡುಕುತ್ತ ವೇಂಕಟಗಿರಿಗೆ ಹೋಗುತ್ತಿತ್ತು. ಗೋರೂಪದಲ್ಲಿದ್ದ ಬ್ರಹ್ಮದೇವನು ವೇಂಕಟಾಚಲದಲ್ಲಿ ಎಲ್ಲೆಡೆ ನೆಲವನ್ನು ಮೂಸುತ್ತಾ ಶ್ರೀಹರಿಯನ್ನು ಹುಡುಕುತ್ತಿದ್ದನು. ಹೀಗೆ ಬಹುಕಾಲ ಕಳೆದ ಮೇಲೆ ಒಂದು ದಿನ ಧೇನುರೂಪೀ ಬ್ರಹ್ಮನು ಸ್ವಾಮಿಪುಷ್ಕರಣಿಯ ದಡದಲ್ಲಿರುವ ವಲ್ಮೀಕದಲ್ಲಿ ಶ್ರೀಹರಿಯು ಇರುವನೆಂದು ಮನಗಂಡು ಮುದಗೊಂಡನು ಮತ್ತು ಹುತ್ತದ ಮೇಲೆ ನಿಂತು ತನ್ನ ಕೆಚ್ಚಲಿನ ಹಾಲಿನಿಂದ ಹುತ್ತದ ಎಲ್ಲಕಡೆ ಅಭಿಷೇಕ ಮಾಡಿದನು. ಅಂದಿನಿಂದ ಆ ಗೋವು ಪ್ರತಿದಿನವೂ ಅರಮನೆಯ ಇತರ ಗೋವುಗಳೊಡನೆ ವೇಂಕಟಗಿರಿಗೆ ಹೋಗಿ ಅಲ್ಲಿ ಶ್ರೀಜಗನ್ನಾಥನ ಪ್ರೀತ್ಯರ್ಥವಾಗಿ ಅತಿ ಭಕ್ತಿಯಿಂದ ಹುತ್ತದಲ್ಲಿ ಕ್ಷೀರಾಭಿಷೇಕ ಮಾಡುತ್ತಿದ್ದಿತು. ತನ್ನ ಕೆಚ್ಚಲಿನ ಹಾಲನ್ನೆಲ್ಲಾ ದೇವನಿಗೆ ಅಭಿಷೇಕಮಾಡುತ್ತಿದ್ದ ಆ ಗೋವು ಅರಮನೆಯಲ್ಲಿ ಹಾಲನ್ನು ಕೊಡುತ್ತಲೇ ಇರಲಿಲ್ಲ.

ರಾಜಪುತ್ರನ ಹಾಲಿಗಾಗಿ ಖರೀದಿಸಿದ ಗೋವು ಎಷ್ಟು ದಿನವಾದರೂ ಹಾಲನ್ನು ಕೊಡದಿರುವುದನ್ನರಿತ ಮಹಾರಾಣಿಯು ಒಂದು ದಿನ ದನಕಾಯುವ ಗೊಲ್ಲನನ್ನು ಕರೆಯಿಸಿ ವಿಚಾರ ಮಾಡಿಸಿದಳು. ಅಸಮಾಧಾನದಿಂದ

ರಾಣಿ ಪ್ರಶ್ನಿಸಿದಳು- ''ಎಲವೋ ದುರ್ಬುದ್ಧಿಯ ಗೋಪಾಲಕ! ಹೊಸದಾಗಿ ಖರೀದಿಸಿದ ಈ ಗೋವಿನ ಹಾಲನ್ನು ಏನುಮಾಡುತ್ತಿರುವೆಯೋ? ಸತ್ಯವಿಚಾರವನ್ನು ಹೇಳು!'' ರಾಣಿಯ ಮಾತು ಹೇಳಿ ಭಯಕಂಪಿತನಾದ ಗೋಪಾಲಕನು ''ಮಹಾರಾಣಿಯವರೇ, ಹಸುವು ಹಾಲನ್ನೇನು ಮಾಡುತ್ತಿರುವುದೆಂಬುದನ್ನು ನಾನರಿಯೇ, ಅದು ಹಾಲನ್ನೇಕೆ ಕೊಡುತ್ತಿಲ್ಲವೋ ತಿಳಿಯದು. ನಾನಂತು ಹಾಲನ್ನು ಕುಡಿಯುತ್ತಿಲ್ಲ. ಆ ಗೋವು ಹಾಲನ್ನು ತಾನೇ ಕುಡಿಯುವುದೋ, ಅಥವಾ ಕರುವು ಕುಡಿಯುತ್ತದೆಯೋ ನನಗೆ ಗೊತ್ತಿಲ್ಲ, ಇದು ಸತ್ಯ ವಿಚಾರ. ಇದನ್ನು ನೀವು ಸರಿಯಾಗಿ ಪರಾಮರ್ಶಿಸಬೇಕು'' ಎಂದನು. ಅವನ ವಚನವನ್ನಾಲಿಸಿ ರಾಣಿಯ ಕಣ್ಣು ಕೆಂಪಗೆ ಮಾಡಿಕೊಂಡು ಚರ್ಮದ ಚಾವಟಿಯಿಂದ ಗೋಪಾಲಕನನ್ನು ಚೆನ್ನಾಗಿ ಥಳಿಸಿದಳು.

ಇದಾದ ಮರುದಿನ ರಾಣಿಯಿಂದ ಏಟು ತಿಂದ ಗೋಪಾಲಕನು ತನಗಾದ ಅಪಮಾನಕ್ಕಾಗಿ ದುಃಖಿಸಿ, ಆ ಗೋವಿನ ಕೊರಳು ಮತ್ತು ಕಾಲುಗಳನ್ನು ಹಗ್ಗದಿಂದ ಬಿಗಿದು, ಗೋವನ್ನು ಮುಂದೆ ಬಿಟ್ಟು ಅದನ್ನು ಹಿಂಬಾಲಿಸಿದನು. ಆ ಗೋವು ಎಂದಿನಂತೆ ಶ್ರೀವೇಂಕಟಾಚಲಕ್ಕೆ ತೆರಳಿ ಅಲ್ಲಿ ಶ್ರೀಹರಿಗೆ ಆವಾಸಸ್ಥಾನರಾಗಿರುವ ಹುತ್ತದಲ್ಲಿ ತನ್ನ ಕೆಚ್ಚಲಿನಿಂದ ಹೊರಹೊಮ್ಮಿದ ಕ್ಷೀರಧಾರೆಯಿಂದ ಬೇಗ ಅಭಿಷೇಕ ಮಾಡಿತು. ಅದನ್ನು ಕಂಡು ಖತಿಗೊಂಡ ಗೊಲ್ಲನು ಕೋಪದಿಂದ ತನ್ನ ಕರದಲ್ಲಿದ್ದ ಕೈಗಾತ್ರದ ಕೊಡಲಿಯನ್ನು ಮೇಲೆತ್ತಿ ಆ ಗೋವನ್ನು ಸಂಹರಿಸಲು ಉದ್ಯುಕ್ತನಾದನು. ಗೋಪಾಲಕನು ಧೇನುವನ್ನು ಸಂಹರಿಸಲು ಉದ್ಯುಕ್ತನಾದಾಗ, ಹುತ್ತದಲ್ಲಿರುವ ಪ್ರಭುವಾದ ಶ್ರೀಹರಿಯು ತನಗೆ ಭಕ್ತರಲ್ಲಿರುವ ವಾತ್ಸಲ್ಯ - ಪ್ರೀತಿಗಳನ್ನು ತೋರುತ್ತಾ - ''ತನ್ನ ಸ್ವಾರ್ಥದಿಂದ ಯಾವ ಮನುಷ್ಯನು ನನ್ನ ಭಕ್ತನ ಹನನವಾಗುತ್ತಿದ್ದರೂ ನೋಡಿ ಸುಮ್ಮನಿರುವನೋ ಅಂಥವನು ಚಂದ್ರ - ಸೂರ್ಯ - ನಕ್ಷತ್ರಗಳಿರುವವರೆಗೆ ನರಕವನ್ನು ಅನುಭವಿಸುವನು. ನೀಚನಾದ ಈ ದನಗಾಹಿಯು ನನ್ನ ಕಾರಣದಿಂದಾಗಿ ಅನ್ಯಾಯವಾಗಿ ಈ ಗೋವನ್ನು ಕೊಲ್ಲುವನಲ್ಲ! ಒಂದೇ ಒಂದು ತುಳಸೀದಳದಿಂದ ನನ್ನನ್ನು ಭಕ್ತಿ ಪೂರ್ವಕವಾಗಿ ಪೂಜಿಸಿದರೂ ಸಾಕು; ಅಂತಹ ಭಕ್ತನನ್ನು ಕಾಪಾಡುವೆನು ಎಂದು ನನ್ನ ಪ್ರತಿಜ್ಞೆ ಇದೆ! ಆದ್ದರಿಂದ ಈ ಗೋವನ್ನು ನಾನು ಕಾಪಾಡಲೇಬೇಕು'' ಎಂದು ನಿರಾಮಯನಾದ, ರಮಾರಮಣನಾದ, ಸಕಲ ಜಗತ್ತಿಗೂ ಸ್ವಾಮಿಯಾದ ಶ್ರೀಗೋವಿಂದನು ಆ ಕೊಡಲಿಯ ಪೆಟ್ಟಿಗೆ ತನ್ನ ಶಿರವೊಡ್ಡಿ ಆ ಆಘಾತವನ್ನು ತಾನೇ ಸ್ವೀಕರಿಸಿದನು! ಕಠಿಣವಾದ ಕುಠಾರದಿಂದ ಹೊಡೆಯಿಸಿಕೊಂಡ ಶ್ರೀನಿವಾಸನ ತಲೆಯು ತೀಕ್ಷ್ಣವಾದ ಆ ಕೊಡಲಿಯ ಹೊಡೆತದಿಂದ ಭಿನ್ನವಾಯಿತು. ಶ್ರೀನಿವಾಸನ ತಲೆಯೊಡೆದು ಏಳು ತಾಳೆಯ ಮರದಷ್ಟು ಎತ್ತರಕ್ಕೆ ರಕ್ತವು ಚಿಮ್ಮಿತು.

ಈ ಅಚ್ಚರಿಯ ಕೋಲಾಹಲ, ರಕ್ತಹರಿಯುವಿಕೆ, ಇವುಗಳನ್ನು ಕಂಡು ಗೋಪಾಲಕನು ಕೂಡಲೇ ಎದೆಯೊಡೆದು ಮೃತನಾದನು. ಗೋಪಾಲನು ಮೃತನಾದುದನ್ನು ಕಂಡು ಆ ಗೋವು ಬೆಟ್ಟದಿಂದ ಕೆಳಗಿಳಿದು, ಚೋಳರಾಜನ ಬಳಿಗೆ ಬಂದು, ಮಾತನಾಡಲು ಬಾರದ ಆ ಗೋವು ಅರಸನ ಮಂದಿರದಲ್ಲಿ ಅತಿದುಃಖದಿಂದ ಅತ್ತಿತ್ತ ಪರದಾಡುತ್ತಾ, ಕೆಳಗೆ ಬಿದ್ದು ಹೊರಳಾಡಹತ್ತಿತು. ಇಂತು ಪರಿತಪಿಸುತ್ತಿರುವ ಆಕಳನ್ನು ಕಂಡು ಚೋಳರಾಜನು 'ಇದೇಕಿಂತು ದುಃಖಿಸುತ್ತಿರುವುದು? ಇದರ ಕರುವು ಮೃತವಾಯಿತೇ? ಅಥವಾ ಉಳಿದ ಗೋವುಗಳ ಹಿಂಡಿನಿಂದ ತಪ್ಪಿಸಿಕೊಂಡಿರಬಹುದೇ? ಏತಕ್ಕಿಂತು ಹೊರಳಾಡುತ್ತಿದೆ? ಎಲವೋ ಸೇವಕನೇ, ಈ ಹಸುವನ್ನು ಹೊಡೆದುಕೊಂಡು ಹೋಗಿ ಮತ್ತೆ ಗೋವುಗಳ ಹಿಂಡಿನೊಡನೆ ಸೇರಿಸು'' ಎಂದು ಆಜ್ಞಾಪಿಸಿದನು. ಆ ಚಾರನು ದೊರೆಯ ಆಣತಿಯಂತೆ ಗೋವನ್ನು ಹೊಡೆದುಕೊಂಡು ಅದನ್ನು ಅನುಸರಿಸಿ ಹೊರಟನು. ಮತ್ತು ಗೋವಿನೊಡನೆ ಶ್ರೀವೇಂಕಟಗಿರಿಯನ್ನೇರಿ ಹುತ್ತದ ಮೇಲ್ಭಾಗದಲ್ಲಿ ನಿಂತು ಪರಿಕಿಸಿದನು. ದನಕಾಯುವ ಗೊಲ್ಲನು ಹುತ್ತದ ಬಳಿ ಮೃತನಾಗಿ ಬಿದ್ದಿದ್ದಾನೆ! ಹುತ್ತದಿಂದ ಏಳು ತಾಳೆಯ ಮರದವರೆಗೆ ಘೋರವಾಗಿ ರಕ್ತವು ಚಿಮ್ಮಿ ಹರಿಯುತ್ತಿದೆ! ಆ ರಕ್ತದ ಹೊಳೆಯನ್ನು ನೋಡಿ ಗಾಬರಿಯಿಂದ ಆ ರಾಜಸೇವಕನು ಬೇಗ ರಾಜನ ಅರಮನೆಗೆ

ಬಂದು ಗೋಪಾಲಕನು ಮೃತನಾಗಿರುವುದು, ಹುತ್ತದಿಂದ ರಕ್ತದ ಹೊಳೆ ಹರಿಯುತ್ತಿರುವುದು ಮುಂತಾಗಿ ತಾನು ಕಂಡ ಎಲ್ಲ ವಿಚಾರವನ್ನೂ, ರಾಜನಲ್ಲಿ ಅರಿಕೆ ಮಾಡಿದನು.

ಚಾರನು ನಿರೂಪಿಸಿದ ವೃತ್ತಾಂತವನ್ನಾಲಿಸಿ ಅತಿವಿಸ್ಮಿತನಾದ ಚೋಳರಾಜನು ಮೇನೆಯಲ್ಲಿ ಕುಳಿತು ಬೇಗನೆ ವೃಷಭಾಚಲಕ್ಕೆ ಆಗಮಿಸಿದನು. ''ಇದೆಂತಹ ದುಃಖಕರ ಪ್ರಸಂಗ! ಯಾವ ಪಾಪಿಯು ಹೀಗೆ ಮಾಡಿರಬಹುದು? ಏತಕ್ಕಾಗಿ ಹೀಗಾಗಿರಬಹುದು? ಎಲ್ಲವೂ ವಿಚಿತ್ರವಾಗಿದೆ! ಗೋಪಾಲನು ಮರಣ ಹೊಂದಿರುವುದು! ಹುತ್ತವು ರಕ್ತಪೂರ್ಣವಾಗಿರುವುದು, ಗೋವು ಬಂದು ಈ ಸಮಾಚಾರವನ್ನು ತಿಳಿಸುವುದು! ಆಶ್ಚರ್ಯ! ಈ ವೇಂಕಟಾಚಲದಲ್ಲಿ ಇದೇನಾಗಿದೆ?'' ಎಂದು ಮುಂತಾಗಿ ರಾಜನು ತನ್ನಷ್ಟಕ್ಕೆ ತಾನೇ ಮಾತನಾಡಿಕೊಂಡನು. ಇಂತು ಚೋಳರಾಜನು ಬಡಬಡಿಸುತ್ತಿರಲು; ಜಗದೀಶ್ವರನಾದ, ಅಪರಿಮಿತ ಸಾಮರ್ಥ್ಯಶಾಲಿಯಾದ, ಶೇಷಾಚಲವನ್ನು ಆಶ್ರಯಿಸಿಕೊಂಡಿರುವ, ಸ್ವಾಮಿಪುಷ್ಕರಣಿಯ ಮಂಗಳಕರ ದಕ್ಷಿಣದಿಕ್ಕಿನಲ್ಲಿರುವ ವಲ್ಮೀಕದಲ್ಲಿರುವ ಭಗವಾನ್ ಶ್ರೀಹರಿಯು ಹುತ್ತವನ್ನು ಭೇದಿಸಿಕೊಂಡು ಮೇಲೆ ಬಂದು ಗದ್ಗದ ಸ್ವರದಿಂದ, ಕತ್ತನ್ನು ಸ್ವಲ್ಪ ಮೇಲೆತ್ತಿ, ಅರೆದೆರೆದ ಜಲಪೂರ್ಣ ನೇತ್ರಗಳಿಂದಯುಕ್ತನಾಗಿ, ಶಂಖ ಚಕ್ರಗಳ ಕಾಂತಿಯಿಂದೊಡಗೂಡಿ ಬಹುಕಷ್ಟದಿಂದ ಮಾತನಾಡಿದನು.

''ಎಲವೋ ಕೆಟ್ಟ ನಡತೆಯುಳ್ಳವನೇ! ರಾಜ್ಯದ ಸಂಪತ್ತಿನ ಮದದಿಂದ ಉದ್ಧಟವಾದ ಚೋಳರಾಜ! ನೀನು ಬಹು ಪಾಪಿಷ್ಠನಾಗಿದ್ದೀಯೆ, ದಿಕ್ಕಿಲ್ಲದ, ಉಣ್ಣಲು ಗತಿಯಿಲ್ಲದ, ಕಡುಬಡವನಾದ, ಕಾಡುಮೇಡುಗಳಲ್ಲಿ ಅಲೆದಾಡುತ್ತಿರುವ, ತಾಯಿ ತಂದೆಗಳಿಲ್ಲದ, ಪತ್ನಿ - ಪುತ್ರಬಾಂಧವರಿಂದ ಬಿಡಲ್ಪಟ್ಟಿರುವ, ಅಣ್ಣ ತಮ್ಮಂದಿರಿಲ್ಲದ, ಕುಟಿಲನಾದ ನನ್ನನ್ನು ತೀಕ್ಷ್ಣವಾದ ಕುಠಾರದಿಂದ ದಯಾಹೀನನಾದ ನಿನ್ನ ಚಾರನಾದ ಗೋಪಾಲಕನು ಹೊಡೆದಿದ್ದಾನೆ! ಅದರಿಂದ ನನ್ನ ತಲೆಯೊಡೆದು ಹೋಯಿತು. ದುರ್ಬುದ್ಧಿಯ ರಾಜನೇ, ಆ ಕುಠಾರಾಘಾತದಿಂದ ನನಗೆ ಆಗಿರುವ ದುಃಖವು ಇಷ್ಟೆಂದು ಹೇಳಲು ಸಾಧ್ಯವಿಲ್ಲ! ಆದ್ದರಿಂದ ನನಗಿಂತು ದುಃಖವಾಗುವಂತೆ ಮಾಡಿದ ದುಷ್ಕರ್ಮಕ್ಕೆ ಶಾಸ್ತಿಯಾಗಿ ನೀನು ಪಿಶಾಚಿಯಾಗು!'' ಎಂದು ಶ್ರೀಹರಿಯು ಶಾಪ ನೀಡಿದನು.

ಇಂತು ಶ್ರೀಹರಿಯಿಂದ ಶಾಪವನ್ನು ಪಡೆದ ಚೋಳರಾಜನು ಮೂರ್ಛಿತನಾಗಿ ಧರಾಶಾಯಿಯಾದನು. ಒಂದು ಮುಹೂರ್ತಕಾಲ ಕಳೆದ ಮೇಲೆ ಮೂರ್ಛೆ ತಿಳಿದೆದ್ದು ಚೋಳರಾಜನು ಸಕಲ ಪ್ರಪಂಚಕ್ಕೂ ಸ್ವಾಮಿಯಾದ ಶ್ರೀಹರಿ ಪರಮಾತ್ಮನನ್ನು ಕುರಿತು ಮಾತನಾಡಿದನು. ।। 58 ।।

*ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೇಂಕಟೇಶಮಹಾತ್ಮೆಯಲ್ಲಿ*
*ಶ್ರೀಹರಿಯ ಅವತಾರ ಪ್ರಶಂಸೆಯೆಂಬ ಮೂರನೆಯ ಅಧ್ಯಾಯವು ಮುಗಿದುದು.*

*।। ಶ್ರೀವೇಂಕಟೇಶನಿಗೆ ಅರ್ಪಿತವಾಗಲಿ ।।*

ರಾಣಿ ಪ್ರಶ್ನಿಸಿದಳು- ''ಎಲವೋ ದುರ್ಬುದ್ಧಿಯ ಗೋಪಾಲಕ! ಹೊಸದಾಗಿ ಖರೀದಿಸಿದ ಈ ಗೋವಿನ ಹಾಲನ್ನು ಏನುಮಾಡುತ್ತಿರುವೆಯೋ? ಸತ್ಯವಿಚಾರವನ್ನು ಹೇಳು!'' ರಾಣಿಯ ಮಾತು ಹೇಳಿ ಭಯಕಂಪಿತನಾದ ಗೋಪಾಲಕನು ''ಮಹಾರಾಣಿಯವರೇ, ಹಸುವು ಹಾಲನ್ನೇನು ಮಾಡುತ್ತಿರುವುದೆಂಬುದನ್ನು ನಾನರಿಯೇ, ಅದು ಹಾಲನ್ನೇಕೆ ಕೊಡುತ್ತಿಲ್ಲವೋ ತಿಳಿಯದು. ನಾನಂತು ಹಾಲನ್ನು ಕುಡಿಯುತ್ತಿಲ್ಲ. ಆ ಗೋವು ಹಾಲನ್ನು ತಾನೇ ಕುಡಿಯುವುದೋ, ಅಥವಾ ಕರುವು ಕುಡಿಯುತ್ತದೆಯೋ ನನಗೆ ಗೊತ್ತಿಲ್ಲ. ಇದು ಸತ್ಯ ವಿಚಾರ. ಇದನ್ನು ನೀವು ಸರಿಯಾಗಿ ಪರಾಮರ್ಶಿಸಬೇಕು'' ಎಂದನು. ಅವನ ವಚನವನ್ನಾಲಿಸಿ ರಾಣಿಯ ಕಣ್ಣು ಕೆಂಪಗೆ ಮಾಡಿಕೊಂಡು ಚರ್ಮದ ಚಾವಟಿಯಿಂದ ಗೋಪಾಲಕನನ್ನು ಚೆನ್ನಾಗಿ ಥಳಿಸಿದಳು.

ಇದಾದ ಮರುದಿನ ರಾಣಿಯಿಂದ ಏಟು ತಿಂದ ಗೋಪಾಲಕನು ತನಗಾದ ಅಪಮಾನಕ್ಕಾಗಿ ದುಃಖಿಸಿ, ಆ ಗೋವಿನ ಕೊರಳು ಮತ್ತು ಕಾಲುಗಳನ್ನು ಹಗ್ಗದಿಂದ ಬಿಗಿದು, ಗೋವನ್ನು ಮುಂದೆ ಬಿಟ್ಟು ಅದನ್ನು ಹಿಂಬಾಲಿಸಿದನು. ಆ ಗೋವು ಎಂದಿನಂತೆ ಶ್ರೀವೇಂಕಟಾಚಲಕ್ಕೆ ತೆರಳಿ ಅಲ್ಲಿ ಶ್ರೀಹರಿಗೆ ಆವಾಸಸ್ಥಾನರಾಗಿರುವ ಹುತ್ತದಲ್ಲಿ ತನ್ನ ಕೆಚ್ಚಲಿನಿಂದ ಹೊರಹೊಮ್ಮಿದ ಕ್ಷೀರಧಾರೆಯಿಂದ ಬೇಗ ಅಭಿಷೇಕ ಮಾಡಿತು. ಅದನ್ನು ಕಂಡು ಖತಿಗೊಂಡ ಗೊಲ್ಲನು ಕೋಪದಿಂದ ತನ್ನ ಕರದಲ್ಲಿದ್ದ ಕೈಗಾತ್ರದ ಕೊಡಲಿಯನ್ನು ಮೇಲೆತ್ತಿ ಆ ಗೋವನ್ನು ಸಂಹರಿಸಲು ಉದ್ಯುಕ್ತನಾದನು. ಗೋಪಾಲಕನು ಧೇನುವನ್ನು ಸಂಹರಿಸಲು ಉದ್ಯುಕ್ತನಾದಾಗ, ಹುತ್ತದಲ್ಲಿರುವ ಪ್ರಭುವಾದ ಶ್ರೀಹರಿಯು ತನಗೆ ಭಕ್ತರಲ್ಲಿರುವ ವಾತ್ಸಲ್ಯ - ಪ್ರೀತಿಗಳನ್ನು ತೋರುತ್ತಾ - ''ತನ್ನ ಸ್ವಾರ್ಥದಿಂದ ಯಾವ ಮನುಷ್ಯನು ನನ್ನ ಭಕ್ತನ ಹನನವಾಗುತ್ತಿದ್ದರೂ ನೋಡಿ ಸುಮ್ಮನಿರುವನೋ ಅಂಥವನು ಚಂದ್ರ - ಸೂರ್ಯ - ನಕ್ಷತ್ರಗಳಿರುವವರೆಗೆ ನರಕವನ್ನು ಅನುಭವಿಸುವನು. ನೀಚನಾದ ಈ ದನಗಾಹಿಯು ನನ್ನ ಕಾರಣದಿಂದಾಗಿ ಅನ್ಯಾಯವಾಗಿ ಈ ಗೋವನ್ನು ಕೊಲ್ಲುವನಲ್ಲ! ಒಂದೇ ಒಂದು ತುಳಸೀದಳದಿಂದ ನನ್ನನ್ನು ಭಕ್ತಿ ಪೂರ್ವಕವಾಗಿ ಪೂಜಿಸಿದರೂ ಸಾಕು; ಅಂತಹ ಭಕ್ತನನ್ನು ಕಾಪಾಡುವೆನು ಎಂದು ನನ್ನ ಪ್ರತಿಜ್ಞೆ ಇದೆ! ಆದ್ದರಿಂದ ಈ ಗೋವನ್ನು ನಾನು ಕಾಪಾಡಲೇಬೇಕು'' ಎಂದು ನಿರಾಮಯನಾದ, ರಮಾರಮಣನಾದ, ಸಕಲ ಜಗತ್ತಿಗೂ ಸ್ವಾಮಿಯಾದ ಶ್ರೀಗೋವಿಂದನು ಆ ಕೊಡಲಿಯ ಪೆಟ್ಟಿಗೆ ತನ್ನ ಶಿರವೊಡ್ಡಿ ಆ ಆಘಾತವನ್ನು ತಾನೇ ಸ್ವೀಕರಿಸಿದನು! ಕಠಿಣವಾದ ಕುಠಾರದಿಂದ ಹೊಡೆಯಿಸಿಕೊಂಡ ಶ್ರೀನಿವಾಸನ ತಲೆಯು ತೀಕ್ಷ್ಣವಾದ ಆ ಕೊಡಲಿಯ ಹೊಡೆತದಿಂದ ಭಿನ್ನವಾಯಿತು. ಶ್ರೀನಿವಾಸನ ತಲೆಯೊಡೆದು ಏಳು ತಾಳೆಯ ಮರದಷ್ಟು ಎತ್ತರಕ್ಕೆ ರಕ್ತವು ಚಿಮ್ಮಿತು.

ಈ ಅಚ್ಚರಿಯ ಕೋಲಾಹಲ, ರಕ್ತಹರಿಯುವಿಕೆ, ಇವುಗಳನ್ನು ಕಂಡು ಗೋಪಾಲಕನು ಕೂಡಲೇ ಎದೆಯೊಡೆದು ಮೃತನಾದನು. ಗೋಪಾಲನು ಮೃತನಾದುದನ್ನು ಕಂಡು ಆ ಗೋವು ಬೆಟ್ಟದಿಂದ ಕೆಳಗಿಳಿದು, ಚೋಳರಾಜನ ಬಳಿಗೆ ಬಂದು, ಮಾತನಾಡಲು ಬಾರದ ಆ ಗೋವು ಅರಸನ ಮಂದಿರದಲ್ಲಿ ಅತಿದುಃಖದಿಂದ ಅತ್ತಿತ್ತ ಪರದಾಡುತ್ತಾ, ಕೆಳಗೆ ಬಿದ್ದು ಹೊರಳಾಡಹತ್ತಿತು. ಇಂತು ಪರಿತಪಿಸುತ್ತಿರುವ ಆಕಳನ್ನು ಕಂಡು ಚೋಳರಾಜನು 'ಇದೇಕಿಂತು ದುಃಖಿಸುತ್ತಿರುವುದು? ಇದರ ಕರುವು ಮೃತವಾಯಿತೇ? ಅಥವಾ ಉಳಿದ ಗೋವುಗಳ ಹಿಂಡಿನಿಂದ ತಪ್ಪಿಸಿಕೊಂಡಿರಬಹುದೇ? ಏತಕ್ಕಿಂತು ಹೊರಳಾಡುತ್ತಿದೆ? ಎಲವೋ ಸೇವಕನೇ, ಈ ಹಸುವನ್ನು ಹೊಡೆದುಕೊಂಡು ಹೋಗಿ ಮತ್ತೆ ಗೋವುಗಳ ಹಿಂಡಿನೊಡನೆ ಸೇರಿಸು'' ಎಂದು ಆಜ್ಞಾಪಿಸಿದನು. ಆ ಚಾರನು ದೊರೆಯ ಆಣತಿಯಂತೆ ಗೋವನ್ನು ಹೊಡೆದುಕೊಂಡು ಅದನ್ನು ಅನುಸರಿಸಿ ಹೊರಟನು. ಮತ್ತು ಗೋವಿನೊಡನೆ ಶ್ರೀವೇಂಕಟಗಿರಿಯನ್ನೇರಿ ಹುತ್ತದ ಮೇಲ್ಭಾಗದಲ್ಲಿ ನಿಂತು ಪರಿಕಿಸಿದನು. ದನಕಾಯುವ ಗೊಲ್ಲನು ಹುತ್ತದ ಬಳಿ ಮೃತನಾಗಿ ಬಿದ್ದಿದ್ದಾನೆ! ಹುತ್ತದಿಂದ ಏಳು ತಾಳೆಯ ಮರದವರೆಗೆ ಘೋರವಾಗಿ ರಕ್ತವು ಚಿಮ್ಮಿ ಹರಿಯುತ್ತಿದೆ! ಆ ರಕ್ತದ ಹೊಳೆಯನ್ನು ನೋಡಿ ಗಾಬರಿಯಿಂದ ಆ ರಾಜಸೇವಕನು ಬೇಗ ರಾಜನ ಅರಮನೆಗೆ

ಬಂದು ಗೋಪಾಲಕನು ಮೃತನಾಗಿರುವುದು, ಹುತ್ತದಿಂದ ರಕ್ತದ ಹೊಳೆ ಹರಿಯುತ್ತಿರುವುದು ಮುಂತಾಗಿ ತಾನು ಕಂಡ ಎಲ್ಲ ವಿಚಾರವನ್ನೂ, ರಾಜನಲ್ಲಿ ಅರಿಕೆ ಮಾಡಿದನು.

ಚಾರನು ನಿರೂಪಿಸಿದ ವೃತ್ತಾಂತವನ್ನಾಲಿಸಿ ಅತಿವಿಸ್ಮಿತನಾದ ಚೋಳರಾಜನು ಮೇನೆಯಲ್ಲಿ ಕುಳಿತು ಬೇಗನೆ ವೃಷಭಾಚಲಕ್ಕೆ ಆಗಮಿಸಿದನು. ''ಇದೆಂತಹ ದುಃಖಕರ ಪ್ರಸಂಗ! ಯಾವ ಪಾಪಿಯು ಹೀಗೆ ಮಾಡಿರಬಹುದು? ಏತಕ್ಕಾಗಿ ಹೀಗಾಗಿರಬಹುದು? ಎಲ್ಲವೂ ವಿಚಿತ್ರವಾಗಿದೆ! ಗೋಪಾಲನು ಮರಣ ಹೊಂದಿರುವುದು! ಹುತ್ತವು ರಕ್ತಪೂರ್ಣವಾಗಿರುವುದು, ಗೋವು ಬಂದು ಈ ಸಮಾಚಾರವನ್ನು ತಿಳಿಸುವುದು! ಆಶ್ಚರ್ಯ! ಈ ವೇಂಕಟಾಚಲದಲ್ಲಿ ಇದೇನಾಗಿದೆ?'' ಎಂದು ಮುಂತಾಗಿ ರಾಜನು ತನ್ನಷ್ಟಕ್ಕೆ ತಾನೇ ಮಾತನಾಡಿಕೊಂಡನು. ಇಂತು ಚೋಳರಾಜನು ಬಡಬಡಿಸುತ್ತಿರಲು; ಜಗದೀಶ್ವರನಾದ, ಅಪರಿಮಿತ ಸಾಮರ್ಥ್ಯಶಾಲಿಯಾದ, ಶೇಷಾಚಲವನ್ನು ಆಶ್ರಯಿಸಿಕೊಂಡಿರುವ, ಸ್ವಾಮಿಪುಷ್ಕರಣಿಯ ಮಂಗಳಕರ ದಕ್ಷಿಣದಿಕ್ಕಿನಲ್ಲಿರುವ ವಲ್ಮೀಕದಲ್ಲಿರುವ ಭಗವಾನ್ ಶ್ರೀಹರಿಯು ಹುತ್ತವನ್ನು ಭೇದಿಸಿಕೊಂಡು ಮೇಲೆ ಬಂದು ಗದ್ಗದ ಸ್ವರದಿಂದ, ಕತ್ತನ್ನು ಸ್ವಲ್ಪ ಮೇಲೆತ್ತಿ, ಅರೆದೆರೆದ ಜಲಪೂರ್ಣ ನೇತ್ರಗಳಿಂದಯುಕ್ತನಾಗಿ, ಶಂಖ ಚಕ್ರಗಳ ಕಾಂತಿಯಿಂದೊಡಗೂಡಿ ಬಹುಕಷ್ಟದಿಂದ ಮಾತನಾಡಿದನು.

''ಎಲವೋ ಕೆಟ್ಟ ನಡತೆಯುಳ್ಳವನೇ! ರಾಜ್ಯದ ಸಂಪತ್ತಿನ ಮದದಿಂದ ಉದ್ಧಟವಾದ ಚೋಳರಾಜ! ನೀನು ಬಹು ಪಾಪಿಷ್ಟನಾಗಿದ್ದೀಯೆ, ದಿಕ್ಕಿಲ್ಲದ, ಉಣ್ಣಲು ಗತಿಯಿಲ್ಲದ, ಕಡುಬಡವನಾದ, ಕಾಡುಮೇಡುಗಳಲ್ಲಿ ಅಲೆದಾಡುತ್ತಿರುವ, ತಾಯಿ ತಂದೆಗಳಿಲ್ಲದ, ಪತ್ನಿ – ಪುತ್ರಬಾಂಧವರಿಂದ ಬಿಡಲ್ಪಟ್ಟಿರುವ, ಅಣ್ಣ ತಮ್ಮಂದಿರಿಲ್ಲದ, ಕುಟಿಲನಾದ ನನ್ನನ್ನು ತೀಕ್ಷ್ಣವಾದ ಕುಠಾರದಿಂದ ದಯಾಹೀನನಾದ ನಿನ್ನ ಚಾರನಾದ ಗೋಪಾಲಕನು ಹೊಡೆದಿದ್ದಾನೆ! ಅದರಿಂದ ನನ್ನ ತಲೆಯೊಡೆದು ಹೋಯಿತು. ದುರ್ಬುದ್ಧಿಯ ರಾಜನೇ, ಆ ಕುಠಾರಾಘಾತದಿಂದ ನನಗೆ ಆಗಿರುವ ದುಃಖವು ಇಷ್ಟೆಂದು ಹೇಳಲು ಸಾಧ್ಯವಿಲ್ಲ! ಆದ್ದರಿಂದ ನನಗಿಂತು ದುಃಖವಾಗುವಂತೆ ಮಾಡಿದ ದುಷ್ಕರ್ಮಕ್ಕೆ ಶಾಸ್ತಿಯಾಗಿ ನೀನು ಪಿಶಾಚಿಯಾಗು!'' ಎಂದು ಶ್ರೀಹರಿಯು ಶಾಪ ನೀಡಿದನು.

ಇಂತು ಶ್ರೀಹರಿಯಿಂದ ಶಾಪವನ್ನು ಪಡೆದ ಚೋಳರಾಜನು ಮೂರ್ಛಿತನಾಗಿ ಧರಾಶಾಯಿಯಾದನು. ಒಂದು ಮುಹೂರ್ತಕಾಲ ಕಳೆದ ಮೇಲೆ ಮೂರ್ಛೆ ತಿಳಿದೆದ್ದು ಚೋಳರಾಜನು ಸಕಲ ಪ್ರಪಂಚಕ್ಕೂ ಸ್ವಾಮಿಯಾದ ಶ್ರೀಹರಿ ಪರಮಾತ್ಮನನ್ನು ಕುರಿತು ಮಾತನಾಡಿದನು. ॥ 58 ॥

*ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೇಂಕಟೇಶಮಹಾತ್ಮೆಯಲ್ಲಿ*
*ಶ್ರೀಹರಿಯ ಅವತಾರ ಪ್ರಶಂಸೆಯೆಂಬ ಮೂರನೆಯ ಅಧ್ಯಾಯವು ಮುಗಿದುದು.*

*॥ ಶ್ರೀವೇಂಕಟೇಶನಿಗೆ ಅರ್ಪಿತವಾಗಲಿ ॥*

# ನಾಲ್ಕನೆಯ ಅಧ್ಯಾಯ

*ಮೂಲ— ರಾಜೋವಾಚ-*

**ಕಿಮರ್ಥಂ ಶಪ್ತವಾನ್ ದೇವ ಅಪರಾಧವಿವರ್ಜಿತಮ್ ।**
**ಅವಿಚಾರ್ಯ ಜಗನ್ನಾಥ ಕಿಂಮಯಾಚರಿತಂ ಪುರಾ ॥ 1 ॥**

**ನಜಾನೇಽಹಂ ಕಿಂಚಿದಪಿ ತವ ದುಃಖಕರಂ ಹರೇ ।**
**ಹಾ ದುಃಖಮತುಲಂ ಪ್ರಾಪ್ತಂ ಕಥಮತ್ರ ಜಗತ್ಪತೇ ॥ 2 ॥**

**ಇತಿ ತೇನ ಸಮಾಜ್ಞಪ್ತಃ ಶ್ರೀನಿವಾಸೋಽಥ *ದುಃಖಿತಃ ।**
**ಉವಾಚ ವಚನಂ ಮಂದಂ ರಾಜಾನಂ ಶಾಪಮೂರ್ಛಿತಮ್ ॥ 3 ॥**

ರಾಜೋವಾಚ = ಶ್ರೀನಿವಾಸನಿಂದ ಶಾಪಪಡೆದ ಚೋಳರಾಜನು ಮಾತನಾಡಿದನು, ದೇವ = ಪ್ರಭುವೇ, ಜಗನ್ನಾಥ = ಜಗದೊಡೆಯನಾದ ಶ್ರೀಹರಿಯೇ, ಅವಿಚಾರ್ಯ = ವಿಚಾರಮಾಡದಲೇ, ಅಪರಾಧವಿವರ್ಜಿತಂ = ಯಾವ ಅಪರಾಧವನ್ನೂ ಮಾಡಿದಿರುವ, ಮಾಂ = ನನ್ನನ್ನು (ನನಗೆ) ಕಿಮರ್ಥಂ = ಏತಕ್ಕಾಗಿ, ಶಪ್ತವಾನ್ = (ಶಪಿಸಿದೆ?) ಶಾಪಪ್ರದಾನ ಮಾಡಿದಿ? ಮಯಾ = ನನ್ನಿಂದ, ಪುರಾ = ಹಿಂದೆ, ಕಿಂ = ಯಾವ ಅಪರಾಧ ಕಾರ್ಯವು, ಕೃತಂ = ಮಾಡಲ್ಪಟ್ಟಿತು? ॥ 1 ॥ ಹರೇ = ಶ್ರೀಹರಿಯೇ, ಅಹಂ = ನಾನು, ತವ = ನಿನಗೆ, ದುಃಖಕರಂ = ದುಃಖವನ್ನುಂಟು ಮಾಡಿದ ವಿಚಾರವನ್ನು, ನ ಜಾನೇ = ತಿಳಿಯೆನು, ಜಗತ್ಪತೇ = ಜಗದೊಡೆಯನೇ, ಅತುಲಂ = ಎಣೆಯಿಲ್ಲದ, ದುಃಖಂ = ವ್ಯಥೆಯನ್ನು, ಅತ್ರ = ಇಲ್ಲಿ (ಅಹಂ = ನಾನು), ಕಥಂಪ್ರಾಪ್ತಃ = ಎಂತು ಪಡೆದವನಾದೆನಲ್ಲ, ಹಾ = ಕಷ್ಟವು ॥ 2 ॥ ಇತಿ = ಈ ಪ್ರಕಾರವಾಗಿ, ತೇನ = ಚೋಳರಾಜನಿಂದ, ಸಮಾಜ್ಞಪ್ತಃ = ಹೇಳಿಸಿಕೊಂಡಂಥ, ಶ್ರೀನಿವಾಸಃ = ಶ್ರೀವೇಂಕಟೇಶ್ವರನು, ಅಥ = ತರುವಾಯ, (ಅತಿ) ದುಃಖಿತಃ = ಅತಿದುಃಖಿತನಾಗಿ, ಶಾಪಮೂರ್ಛಿತಂ = ತಾನಿತ್ತ ಶಾಪದಿಂದ ಎಚ್ಚರತಪ್ಪಿದ, ರಾಜಾನಂ = ಚೋಳಭೂಪತಿಯನ್ನು ಕುರಿತು, ಮಂದಂ = ಮೆಲ್ಲನೆ, ವಚನಂ = ಮಾತನ್ನು, ಉವಾಚ = ಹೇಳಿದನು ॥ 3 ॥

*ಶ್ರೀನಿವಾಸ ಉವಾಚ -*

**ಪಾಪಿಷ್ಠೋಽಹಂ ದುರಾಚಾರಃ ಅವಿಚಾರ್ಯ ನರೋತ್ತಮ।**
**ಅಜ್ಞಾನೇನಾತಿ ದುಃಖೇನ ವೃಥಾ ಶಾಪೋ ಮಯಾರ್ಪಿತಃ ॥ 4 ॥**

**ಮಚ್ಛಾಪೋ ನಾನೃತೋ ಭೂಯಾದಿತಿ ವೇದವಿದೋ ವಿದುಃ ।**
**ಭಕ್ತವಾತ್ಸಲ್ಯ ದೋಷೇಣ ದುಃಖಿತೋಽಸ್ಮಿ ಭೃಶಂ ನೃಪ ॥ 5 ॥**

---

*ಪಾ:- ಶ್ರೀನಿವಾಸೋಽತಿ ದುಃಖಿತಃ

**ಯಾವತ್ಕಲಿಯುಗಂ ತಿಷ್ಠೇತ್ ತಾವದ್ದುಃಖೀಭವ ಪ್ರಭೋ ।**
**ಉಭೌ ದುಃಖಸಮಾಪನ್ನೌ ಸತ್ಯಸಂಕಲ್ಪದೋಷತಃ ॥ 6 ॥**

**ಭವಿಷ್ಯತಿ ನೃಪಶ್ರೇಷ್ಠ ಆಕಾಶ ಇತಿ ನಾಮವಾನ್ ।**
**ಸೋಽಪಿ ದಾಸ್ಯತಿ ಮೇ ಕನ್ಯಾಂ ನಾಮ್ನಾ ಪದ್ಮಾವತೀಂ ಶುಭಾಮ್ ॥ 7 ॥**

**ಕನ್ಯಾಪ್ರದಾನಕಾಲೇ ತು ದದಾತಿ ವರದಕ್ಷಿಣಾಮ್ ।**
**ಕಿರೀಟಂ ಶತಭಾರಂತು ರತ್ನವಜ್ರಸಮಾಕುಲಮ್ ॥ 8 ॥**

**ಶುಕ್ರವಾರೇ ತು ಸಾಯಾಹ್ನೇ ಕಿರೀಟಂ ಧಾರಯಾಮ್ಯಹಮ್ ।**
**ಕಿರೀಟಧಾರಣೇಕಾಲೇ ನೇತ್ರೇ ಮೇ ಜಲಪೂರಿತೇ ॥ 9 ॥**

**ಘಟಿಕಾಷಟ್ಕಮಾತ್ರಂ ತೇ ಸುಖಂ ತತ್ರ ಭವಿಷ್ಯತಿ ।**
**ಇತಿ ಕಾಲಾವಧಿಂ ಕೃತ್ವಾ ರಾಜ್ಞಃ ಸ್ವಸ್ಯ ಚ ಮಾಧವಃ ।**
**ಸುಖಸ್ಯ ಕಾಲಂ ಸಂಸೂಚ್ಯ ಸ್ವಾವತಾರಪ್ರಯೋಜನಮ್ ॥ 10 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನು ಇಂತೆಂದನು, ನೃಪೋತ್ತಮ = ಎಲೈ ರಾಜಶ್ರೇಷ್ಠನೇ, ದುರಾಚಾರಃ = ನೀನು ಕೆಟ್ಟ ಆಚಾರವುಳ್ಳ, ಪಾಪಿಷ್ಠಃ = ಪಾಪಿಷ್ಠನೆಂಬುದನನ್ನು, ಅವಿಚಾರ್ಯ = ಸರಿಯಾಗಿ ವಿಮರ್ಶಿಸದೆ, (ಯೋಚಿಸದೆ) ಅಹಂ = ನಾನು, ಅಜ್ಞಾನೇನ = ತಿಳುವಳಿಕೆಯಿಲ್ಲದಲೆ, ಅತಿದುಃಖೇನ = ಕೊಡಲಿಯ ಹೊಡೆತದಿಂದುಂಟಾದ ಗಾಯದ ವ್ಯಥೆಯಿಂದ ಬಳಲುತ್ತಿರುವುದರಿಂದ, ಮಯಾ = ನನ್ನಿಂದ, ವೃಥಾ = ವ್ಯರ್ಥವಾಗಿ, ಶಾಪಃ = ಶಾಪವು, ಅರ್ಪಿತಃ = ಕೊಡಲ್ಪಟ್ಟಿತು ॥ 4 ॥ ಮಚ್ಛಾಪಃ = ನಾನಿತ್ತ ಶಾಪವು, ಅನೃತಃ = ಸುಳ್ಳಾದುದು, ನ ಭೂಯಾತ್ = ಆಗಲಾರದು (ಆಗುವುದಿಲ್ಲ), ಇತಿ = ಹೀಗೆ, ವೇದವಿದಃ = ವೇದಶಾಸ್ತ್ರಜ್ಞರು, ವಿದುಃ = ತಿಳಿಯುವರು, ನೃಪ = ಚೋಳರಾಜನೇ, ಭಕ್ತವಾತ್ಸಲ್ಯದೋಷೇಣ = ಭಕ್ತರಲ್ಲಿ ನನಗಿರುವ ವಿಶ್ವಾಸವೆಂಬ ದೋಷದಿಂದ, ಭೃಶಂ = ಹೆಚ್ಚಾಗಿ, ದುಃಖಿತೋಽಸ್ಮಿ = ವ್ಯಥೆಯುಳ್ಳವನಾಗಿದ್ದೇನೆ ॥ 5 ॥ ಪ್ರಭೋ = ರಾಜನೇ, ಯಾವತ್ = ಎಲ್ಲಿಯವರೆಗೆ, ಕಲಿಯುಗಂ = ಕಲಿಯುಗವು, ತಿಷ್ಠೇತ್ = ಇರುವುದೋ, ತಾವತ್ = ಅಲ್ಲಿಯವರೆಗೆ, ದುಃಖೀಭವ = ಪಿಶಾಚಜನ್ಮಪಡೆದು ದುಃಖಿಯಾಗಿರು. ಸತ್ಯಸಂಕಲ್ಪದೋಷತಃ = ಸತ್ಯಸಂಕಲ್ಪವುಳ್ಳವನೆಂಬ ಕಾರಣದಿಂದುಂಟಾದ ದೋಷದಿಂದ, ಉಭೌ = ನಾನು ಮತ್ತು ನೀನು – ಇಬ್ಬರೂ, ದುಃಖಸಮಾಪನ್ನೌ = ದುಃಖಿತರಾಗಿ ದುಃಖಕ್ಕೆ ಗುರಿಯಾದವರಾಗಿ (ಇರೋಣ). ॥ 6 ॥ ಆಕಾಶ ಇತಿ = ಆಕಾಶನೆಂಬ, ನಾಮವಾನ್ = ಹೆಸರುಳ್ಳ, ನೃಪಶ್ರೇಷ್ಠಃ = ರಾಜಶ್ರೇಷ್ಠನು, ಭವಿಷ್ಯತಿ = ಮುಂದೆ ಆಗುವನು, ಸೋಽಪಿ = ಆಕಾಶರಾಜನು, ಶುಭಾಂ = ಮಂಗಳಕರಳಾದ, ನಾಮ್ನಾ = ಹೆಸರಿನಿಂದ, ಪದ್ಮಾವತೀಂ = ಪದ್ಮಾವತಿಯೆಂಬ, ಕನ್ಯಾಂ = ತನ್ನ ಕನ್ಯೆಯನ್ನು (ಪುತ್ರಿಯನ್ನು), ಮೇ = ನನಗೆ, ದಾಸ್ಯತಿ = ಮದುವೆಮಾಡಿಕೊಡುವನು ॥ 7 ॥ ಕನ್ಯಾಪ್ರದಾನಕಾಲೇ ತು = ಕನ್ಯೆಯಾದ ಮಗಳನ್ನು ಸಂಕಲ್ಪ ಪೂರ್ವಕವಾಗಿ ನನಗೆ ಪ್ರದಾನಮಾಡುವ ಸಮಯದಲ್ಲಿ, ರತ್ನವಜ್ರಸಮಾಕುಲಂ = ನವರತ್ನ – ವಜ್ರಖಚಿತವಾದ, ಶತಭಾರಂ = ಎರಡು ಸಾವಿರ ತೊಲೆಗಳಷ್ಟು ತೂಕವಿರುವ, ಕಿರೀಟಂ = ಕಿರೀಟವನ್ನು, ವರದಕ್ಷಿಣಾಂ = ವರದಕ್ಷಿಣೆಯಾಗಿ, ದದಾತಿ = ಕೊಡುತ್ತಾನೆ. ॥ 8 ॥ ಅಹಂ = ನಾನು, ಶುಕ್ರವಾರೇ = ಭೃಗುವಾಸರದಂದು, ಸಾಯಾನ್ಹೆ = ಸಂಧ್ಯಾಸಮಯದಲ್ಲಿ (ಸಾಯಂಕಾಲದ ವೇಳೆಯಲ್ಲಿ), ಕಿರೀಟಂ = ಆ ಮುಕುಟವನ್ನು, ಧಾರಯಾಮಿ = ಧರಿಸುವೆನು, ಕಿರೀಟಧಾರಣೇ ಕಾಲೇ = ಕಿರೀಟವನ್ನು

ಧಃರುವ ಸಮಯದಲ್ಲಿ, ಮೇ = ನನ್ನ, ನೇತ್ರೆ = ಎರಡು ಕಣ್ಣುಗಳು, ಜಲಪೂರಿತೇ = ಆನಂದಾಶ್ರುಪೂರ್ಣವಾಗುವುವು. ॥ 9 ॥ ತತ್ರ = ಅಲ್ಲಿ (ಆ ಕಾಲದಲ್ಲಿ), ಘಟಿಕಾಷಟ್ಕ ಮಾತ್ರಂ = ಆರು ಘಳಿಗೆಯವರೆಗೆ ಮಾತ್ರ, ತೇ = ನಿನಗೆ, ಸುಖಂ = ಆನಂದವು, ಭವಿಷ್ಯತಿ = ಉಂಟಾಗುತ್ತದೆ, ಇತಿ = ಹೀಗೆ, ಕಾಲಾವಧಿಂ = ಸುಖವಾಗುವ ಕಾಲಾವಧಿಯನ್ನು, ಕೃತ್ವಾ = (ಸೂಚನೆ - ನಿಗದಿ) ಮಾಡಿ, ಮಾಧವಃ = ರಮಾನಾಯಕನಾದ ಶ್ರೀಹರಿಯು, ಸ್ವಸ್ಯ = ತನ್ನ, ಚ = ಮತ್ತು, ರಾಜ್ಞಃ = ಚೋಳ ರಾಜನ, ಸುಖಸ್ಯ = ಸುಖದ, ಕಾಲಂ = ಸಮಯವನ್ನೂ, ಸ್ವಾವತಾರ ಪ್ರಯೋಜನಂ - ಸ್ವ = ತನ್ನ, ಅವತಾರ = ಅವತಾರದ (ಆವಿರ್ಭಾವದ), ಪ್ರಯೋಜನಂ = ಫಲವನ್ನೂ, ಸಂಸೂಚ್ಯ = ಸೂಚನೆ ಮಾಡಿ, ॥ 10 ॥ ರಾಜಾನಂ = ರಾಜನನ್ನು ಕುರಿತು, ಇತಿ = ಹೀಗೆ, ಸಂಭಾಷ್ಯ = ಮಾತನಾಡಿ, ಭಗವಾನ್ ಹರಿಃ = ಭಗವಂತನಾದ ಶ್ರೀಹರಿಯು, ತತ್ರ = ಆ ವೇಂಕಟಾಚಲದಲ್ಲಿ, ಆಸ್ತೇ = ಇರುವವನಾದನು (ಇದ್ದನು).

**ಇತಿ ಸಂಭಾಷ್ಯ ರಾಜಾನಂ ತತ್ರಾಸ್ತೇ ಭಗವಾನ್ ಹರಿಃ ।**
**ಕ್ಷತಶಾಂತಿಂ ಸಮಾಕಾಂಕ್ಷನ್ ವೈದ್ಯಶಾಸ್ತ್ರವಿಶಾರದಮ್ ॥ 11 ॥**

**ಗುರುಂ ಸುರಪತೀನಾಂ ಚ ಸಂಸ್ಮಾರ ಜಗದೀಶ್ವರಃ ।**
**ಆಗತಂ ಸ್ವಗುರುಂ [1]ದೃಷ್ಟ್ವಾ ಔಷಧಂ ವದ ಮೇದ್ರುತಮ್ ॥ 12 ॥**

**ಇತಿ ತೇನ ಸಮಾಜ್ಞಪ್ತೋ ಜೀವೋ ಜೀವವತಾಂ ವರಃ ।**

*ಗುರುರುವಾಚ-*

**ಕ್ಷೀರಮೌದುಂಬುರಂ ದೇವ ತಥಾ ಕಾರ್ಪಾಸಮರ್ಕಜಮ್ ॥ 13 ॥**

**ಸಂಮಿಲಿತ್ವಾ ರಮಾಕಾಂತ ತತ್ ಕ್ಷತೋಪರಿ ಧಾರ್ಯತಾಮ್ ।**
**ಇತ್ಯೇವಂ ಗುರುಣಾಜ್ಞಪ್ತಃ ತಚ್ಚಕಾರ ಯಥಾತಥಮ್ ॥ 14 ॥**

**ಏವಂ ಕುರ್ವನ್ ರಮಾನಾಥಃ ತತ್ರಾಸ್ತೇ ಭಗವಾನ್ ಹರಿಃ ।**
**ಕೌಸಲ್ಯಾಕೀಟಕಗೃಹಂ ತಿಂತ್ರಿಣೀ ದಶದಿಗ್ರಥಃ ॥ 15 ॥**

**ಗಿರಿರೂಪೋಽನುಜಸಾಕ್ಷಾತ್ ಅಯೋಧ್ಯಾಭೂದ್ಧರಾಧಿಪಃ ।**
**ಇತ್ಥಂ ರಾಮಾವತಾರೇಣ ಅವತಾರಮಚೀಕ್ಲ್‌ಪನ್ ॥ 16 ॥**

**ವಲ್ಮೀಕೋ ದೇವಕೀ ಸಾಕ್ಷಾತ್ ವಸುದೇವೋಽಥ ತಿಂತ್ರಿಣೀ ।**
**ಬಲಭದ್ರಃ ಶೇಷಶೈಲೋ ಮಥುರಾ[2] ವೇಂಕಟಾಚಲಃ ॥ 17 ॥**

**ಸ್ವಾಮಿಪುಷ್ಕರಣೀನಾಮ ಯಮುನಾ ಚ ವಿರಾಜತೇ ।**
**ಯಾದವಾಶ್ಚ ಮೃಗಾಸ್ಸರ್ವೇ ಖಗಾ ವೈ ಗೋಪಿಕಾದಯಃ ॥ 18 ॥**

---

[1] ಪಾ:- ಸ್ವರ್ಗುರುಂ । [2] ಮಥುರಾ ಭೂದಧಿತ್ಯಕಾ

**ಏವಂ ಶ್ರೀಕೃಷ್ಣರೂಪೇಣ ಕ್ರೀಡತೇ ವೇಂಕಟಾಚಲೇ ।**
**''ಅರಾಯಕಾಣೇ ವಿಕಟೇ ಗಿರಿಂ ಗಚ್ಛ ಸದಾನ್ವೇ'' ॥ 19 ॥**

**ಏವಂ ವೇದಮಯಃ ಸಾಕ್ಷಾತ್ ಗಿರೀಂದ್ರಃ ಪನ್ನಗಾಚಲಃ ।**
**ಸ್ವದೇಹಚ್ಛನ್ನ ವಲ್ಮೀಕೋ ವೈಕುಂಠಾದಧಿಕೋ ಹ್ಯಭೂತ್ ॥ 20 ॥**

ಕ್ಷತಶಾಂತಿಂ = ಕೊಡಲಿಯ ಪೆಟ್ಟಿನಿಂದಾದ ಗಾಯಕ್ಕೆ ಶಾಂತಿಯನ್ನು (ಔಷಧವನ್ನು), ಸಮಾಕಾಂಕ್ಷನ್ = ಮಾಡಲಾಶಿಸಿ, ಜಗದೀಶ್ವರಃ = ಜಗತ್ತಿಗೆ ಪ್ರಭುವಾದ ಶ್ರೀಹರಿಯು, ವೈದ್ಯಶಾಸ್ತ್ರವಿಶಾರದಂ = ಆಯುರ್ವೇದ ಶಾಸ್ತ್ರದಲ್ಲಿ ಪಾರಂಗತನಾದ, ॥ 11 ॥ ಸುರಪತೀನಾಂಚ = (ಸುರಪತೇಶ್ಚೈವ) ದೇವತೆಗಳಿಗೂ ಸಹ (ಇಂದ್ರನಿಗೂ ಸಹ), ಗುರುಂ = ಉಪದೇಶಕನಾದ ಬೃಹಸ್ಪತ್ಯಾಚಾರ್ಯನನ್ನು ಸಸ್ಮಾರ = ನೆನೆದನು, ಆಗತಂ = ಹರಿಯು ಸ್ಮರಿಸಿದೊಡನೆ ಅಲ್ಲಿಗೆ ಬಂದ, ಸ್ವಗುರುಂ = ತನಗೆ ಗುರುವಾದ (ಪಾ:- ಸ್ವರ್ಗುರುಂ = ಅಮರ ಲೋಕದ ಗುರುವಾದ) ಬೃಹಸ್ಪತ್ಯಾಚಾರ್ಯನನ್ನು, ದೃಷ್ಟ್ವಾ = ನೋಡಿ, ಮೇ = ನನಗೆ, ಔಷಧಂ = ಗಾಯಪರಿಹಾರಕ್ಕೆ ಔಷಧವನ್ನು, ದ್ರುತಂ = ಬೇಗ, ವದ = ಹೇಳು ॥ 12 ॥ ಇತಿ = ಈ ಪ್ರಕಾರವಾಗಿ, ತೇನ = ಶ್ರೀಹರಿಯಿಂದ, ಸಮಾಜ್ಞಪ್ತಃ = ನಿವೇದಿಸಿಕೊಂಡಂಥ, ಜೀವವತಾಂ = ಜೀವಿಸುವ ಸಮಸ್ತ ಪ್ರಾಣಿಗಳಿಗೂ, ವರಃ = ಶ್ರೇಷ್ಠನಾದ, ಜೀವಃ = ಬೃಹಸ್ಪತ್ಯಾಚಾರ್ಯನು, (ಉವಾಚ = ಹೇಳಿದನು), ಗುರುರುವಾಚ = ಬೃಹಸ್ಪತ್ಯಾಚಾರ್ಯನು ಇಂತೆಂದನು, - ರಮಾಕಾಂತ = ಮಾಧವನಾದ, ದೇವ = ಹರಿಯೇ! ಔದುಂಬುರಂ = ಅಶ್ವತ್ಥಮರದ, ಕ್ಷೀರಂ = ಹಾಲನ್ನು, ಅರ್ಕಜಂ = ಎಕ್ಕ ಗಿಡದ, ಕಾರ್ಪಾಸಂ = ಹತ್ತಿಯೊಡನೆ ॥ 13 ॥ ಸಮ್ಮಿಲಿತಾ = ಸೇರಿಸಿ (ಎಕ್ಕೇಗಿಡದ ಹತ್ತಿಗೆ ಅಶ್ವತ್ಥಮರದ ಹಾಲನ್ನು ಬೆರೆಸಿ), ತತ್ ಕ್ಷತೋಪರಿ = ಆ ಗಾಯದ ಮೇಲೆ, ಧಾರ್ಯತಾಂ = ಧರಿಸಲ್ಪಡಲಿ (ಪಟ್ಟುಹಾಕು), ಇತ್ಯೇವಂ = ಈ ಪರಿಯಾಗಿ, ಗುರುಣಾ = ಬೃಹಸ್ಪತ್ಯಾಚಾರ್ಯನಿಂದ, ಆಜ್ಞಪ್ತಃ = ಹೇಳಲ್ಪಟ್ಟ ಶ್ರೀಹರಿಯು, ತತ್ = ಗುರುವು ಹೇಳಿದಂತೆ ಔಷಧವನ್ನು, ಯಥಾತಥಂ = ಆ ಪ್ರಕಾರವಾಗಿಯೇ, ಚಕಾರ = ಮಾಡಿದನು. ॥ 14 ॥ ಏವಂ = ಈ ಪ್ರಕಾರವಾಗಿ, ಭಗವಾನ್ = ಷಡ್ಗುಣೈಶ್ವರ್ಯ ಸಂಪನ್ನನಾದ, ರಮಾನಾಥಃ = ಕಮಲಾವಲ್ಲಭನಾದ, ಹರಿ = ಶ್ರೀವಿಷ್ಣುವು, ಕುರ್ವನ್ = ಮಾಡುತ್ತಾ, ತತ್ರ = ಆ ವೇಂಕಟಗಿರಿಯಲ್ಲಿ, ಆಸ್ತೇ = (ಇದ್ದನು), ವಿಹರಿಸುತ್ತಿದ್ದಾನೆ.

ಶ್ರೀಹರಿಯ ಆ ಲೀಲಾವಿಲಾಸವನ್ನು ಈಗ ಬಣ್ಣಿಸುವರು. ಕೀಟಕಗೃಹಂ = ವಲ್ಮೀಕವು, ಕೌಸಲ್ಯಾ = ಕೌಸಲ್ಯಾದೇವಿಯು, ತಿಂತ್ರಿಣೀ = ಹುಣಸೇ ಮರವು, ದಶದಿಗ್ರಥಃ = ದಶರಥಮಹಾರಾಜನು, ॥ 15 ॥ ಗಿರಿರೂಪಃ = ಶೇಷಾಚಲವೇ (ಶೇಷಾಚಲರೂಪಿಯೇ), ಸಾಕ್ಷಾತ್ = ಪ್ರತ್ಯಕ್ಷನಾದ, ಅನುಜಃ = ಲಕ್ಷ್ಮಣನು, ಅಧಿತ್ಯಕಾ (ಧರಾಧಿಪಃ) = ವೈಕುಂಠಗಿರಿಯು, ಅಯೋಧ್ಯಾ = ಅಯೋಧ್ಯೆಯು, ಇತ್ಥಂ = ಹೀಗೆ, ರಾಮಾವತಾರೇಣ = ಶ್ರೀರಾಮಾವತಾರ ರೀತಿಯಿಂದ, ಅವತಾರಂ = ತನ್ನ ಶ್ರೀನಿವಾಸಾವತಾರವನ್ನು, ಅಚೀಕ್ಲಪನ್ = ಮಾಡಿದನು (ಅಂದರೆ ತಾನೇ ರಾಮ ರೂಪದಿಂದ ವಿಹರಿಸಿದನೆಂದು ಭಾವ) ॥ 16 ॥ ಅಥ = ಅನಂತರ, ವಲ್ಮೀಕಃ = ಹುತ್ತವು, ಸಾಕ್ಷಾತ್ ದೇವಕೀ = ಮೈತಳೆದು ಬಂದ ದೇವಕಿಯು, ತಿಂತ್ರೀಣೀ = ಹುಣಸೇಮರವು, ವಸುದೇವಃ = ವಸುದೇವನು, ಶೇಷಶೈಲಃ = ಶೇಷಾಚಲವು, ಬಲಭದ್ರಃ = ಬಲರಾಮನು, ಅಧಿತ್ಯಕಾ (ವೇಂಕಟಾಚಲಃ) = ವೈಕುಂಠಗಿರಿಯು, ಮಥುರಾ = ಮಥುರಾಪಟ್ಟಣವು ಅಭೂತ್ = ಆಯಿತು, ಚ = ಮತ್ತು, ಸ್ವಾಮಿಪುಷ್ಕರಣೀ = ಸ್ವಾಮಿಪುಷ್ಕರಣಿಯು, ಯಮುನಾ ನಾಮ = ಯಮುನಾ ನದಿಯಾಗಿ, ವಿರಾಜತೇ = ಪ್ರಕಾಶಿಸುತ್ತಿದೆ, ಸರ್ವೇಮೃಗಾಃ = ಅಲ್ಲಿನ ಎಲ್ಲ ಮೃಗಗಳೂ, ಯಾದವಾಃ = ಯಾದವರು, ಚ = ಮತ್ತು, ಖಗಾ ವೈ = ಪಕ್ಷಿಗಳಾದರೋ, ಗೋಪಿಕಾದಯಃ = ಗೋಪಸ್ತ್ರೀಯರು (ಎಂದು), ॥ 17-18 ॥ ವೇಂಕಟಾಚಲೇ = ವೇಂಕಟಶೈಲದಲ್ಲಿ, ಕೃಷ್ಣರೂಪೇಣ = ಶ್ರೀಕೃಷ್ಣಾವತಾರ ರೂಪದಿಂದ, ಕ್ರೀಡತೇ = ಕ್ರೀಡಿಸುತ್ತಿದ್ದಾನೆ.

ಅರಾಯಕಾಣೇ - ಅ = ಬ್ರಹ್ಮಾ, ವಿಷ್ಣು ಮಹೇಶ್ವರರು, ರಾಯಕಾ = ಆಕಾಶಗಂಗೆ - ಇವರುಗಳ, ಣಂ = ಆಗಮನವುಳ್ಳದ್ದಾದ, ವಿಕಟೇ - ವಿ = ಪರಮಾತ್ಮನಾದ ಶ್ರೀನಿವಾಸನಿಗೆ, ಕಟೇ = ಆವಾಸಸ್ಥಾನವಾದ (ಅವಲಂಬನವಾದ ಈ ಪುಣ್ಯಕ್ಷೇತ್ರದಲ್ಲಿರುವ) ಗಿರಿಂ = ಶ್ರೀವೇಂಕಟಗಿರಿಯನ್ನು ಕುರಿತು, ಸದಾನ್ವ್ವ - ಸದಾ = ಯಾವಾಗಲೂ, ಅನ್ವ್ವ = ಅನುಸರಿಸಿ, ಗಚ್ಛ = ಗಮನಶೀಲನಾಗು (ಹೋಗು - ಯಾತ್ರೆಮಾಡು)* ॥ 19 ॥ ಗಿರೀಂದ್ರಃ = ಪರ್ವತಶ್ರೇಷ್ಠವಾದ, ಪನ್ನಗಾಚಲ = ಶೇಷಾಚಲವು (ವೇಂಕಟಗಿರಿಯು), ಏವಂ = ಈ ರೀತಿಯಾಗಿ, ಸಾಕ್ಷಾತ್ = ಮೈವೆತ್ತಿಬಂದ (ಪ್ರತ್ಯಕ್ಷವಾದ) ವೇದಮಯಃ = ವೇದಮಯವಾಗಿರುವುದು, ಸ್ವದೇಹಚ್ಛನ್ನವಲ್ಮೀಕೋ - ಸ್ವ = ತನ್ನ, ದೇಹ = ದೇಹವನ್ನು, ಛನ್ನ = ಮರೆಮಾಡಿರುವ, ವಲ್ಮೀಕಃ = ಹುತ್ತವು, ವೈಕುಂಠಾತ್ = ವೈಕುಂಠದಕಿಂತಲೂ, ಅಧಿಕಃ = ಹೆಚ್ಚಾದುದು, ಅಭೂತ್ = ಆಯಿತು, ಹಿ = ಪ್ರಸಿದ್ಧವು ॥ 20 ॥

**ಸುವರ್ಣಮುಖರೀನಾಮ ನದೀ ಸಾ ವಿರಜಾನದೀ ।**
**ವೈಕುಂಠೋ ವೇಂಕಟಗಿರಿಃ ವಾಸುದೇವೋ ರಮಾಪತಿಃ ॥ 21 ॥**

**ಮುಕ್ತಬ್ರಹ್ಮಾ ಪಕ್ಷಿಗಣಾಃ ಮುಕ್ತರುದ್ರಾ ಮೃಗೋತ್ತಮಾಃ ।**
**ಸನತ್ಕುಮಾರಪ್ರಮುಖಾ ವಾನರಾದ್ಯಾ ದ್ವಿಜೋತ್ತಮಾಃ ॥ 22 ॥**

**ಮಾನುಷಂ ದೇಹಮಾಸಾದ್ಯ ಯಃಪುಮಾನ್ ವೇಂಕಟಾಚಲಮ್ ।**
**ಗಂತುಮಿಚ್ಛತಿ ಧರ್ಮಿಷ್ಠಃ ತೇನ ಸರ್ವಮನುಷ್ಠಿತಮ್ ॥ 23 ॥**

**ಶ್ರೀವೇಂಕಟಾದ್ರೇಃ ಮಹಿಮಾನಮುತ್ತಮಮ್**
**ಜಾನಂತಿ (ನ) ತೇ ಬ್ರಹ್ಮಶಿವೇಂದ್ರಪೂರ್ವಕಾಃ ।**
**ಕಿಮಲ್ಪವೀರ್ಯಾ ಮನುಜಾ ಮೃತಿಸ್ಥಾಃ ಜಾನಂತಿ ವಿಷ್ಣೋಃ ಸ್ಥಲಮದ್ಭುತಂ ಚ ॥ 24 ॥**

ಇನ್ನೊಂದು ರೀತಿಯ ಅರ್ಥಮಾಡಬಹುದು - ಹೇ ಅರಾಯಿ = ಧನಬಲವಿಲ್ಲದ ದರಿದ್ರನೇ, ಕಾಣೆ = ಕಣ್ಣುಕಾಣದ ಕುರುಡನೇ! ಹೇವಿಕಟ = ಕೈಕಾಲು ಮುಂತಾದ ಅವಯವಿಲ್ಲದವನೇ, ಗಿರಿಂ = ವೆಂಕಟಾಚಲವನ್ನು ಕುರಿತು, ಸದಾ = ಯಾವಾಗಲೂ, ಅನ್ವೇ (ಅನ್ವಯೇ = ಕುಟುಂಬ ಸಹಿತನಾಗಿ) ಗಚ್ಛ = ಹೋಗು. ನಿನ್ನ ಅಪೇಕ್ಷೆಯನ್ನು ಗಿರಿಯು ಪೂರ್ಣಮಾಡುವುದು.

ಸುವರ್ಣಮುಖರೀನಾಮ = ಸುವರ್ಣಮುಖರೀ ಎಂಬ ಹೆಸರುಳ್ಳ, ನದಿ = ನದಿಯು, ಸಾ = ವಿಖ್ಯಾತವಾದ, ವಿರಜಾನದಿ = ವಿರಜಾನದಿಯು, ವೈಕುಂಠಃ = ವೈಕುಂಠವು, ವೇಂಕಟಗಿರಿಃ = ವೇಂಕಟಾಚಲವು, ವಾಸುದೇವಃ = ಶ್ರೀಮನ್ನಾರಾಯಣನು, ರಮಾಪತಿಃ = ಶ್ರೀನಿವಾಸನು, ಮುಕ್ತಬ್ರಹ್ಮಾಣಃ = ಮುಕ್ತರಾದ ಬ್ರಹ್ಮರುಗಳು, ಪಕ್ಷಿಗಣಾಃ = ಪಕ್ಷಿಗಳ ಸಮೂಹಗಳು, ಮುಕ್ತರುದ್ರಾಃ = ಮುಕ್ತರಾದ ರುದ್ರರುಗಳು, ಮೃಗೋತ್ತಮಾಃ = ಸಿಂಹ, ಹುಲಿ ಮೊದಲಾದ ಶ್ರೇಷ್ಠ ಮೃಗಗಳು, ಭೂಧರೇ = ಆ ವೇಂಕಟಗಿರಿಯಲ್ಲಿ ಸನತ್ಕುಮಾರ ಪ್ರಮುಖಾಃ = ಸನಕ-ಸನಂದನ-ಸನತ್ಕುಮಾರ -ಸನತ್ಸುಜಾತ ಪ್ರಮುಖರಾದ, ದ್ವಿಜೋತ್ತಮಾಃ = ಬ್ರಾಹ್ಮಣಶ್ರೇಷ್ಠರು, ವಾನಾರಾದ್ಯಾ = ಕಪಿಗಳೇ ಮೊದಲಾದವರು ॥ 21-22 ॥

---

*ಅರಾಯಕಾಣೇ ವಿಕಟೇ ಗಿರಿಂಗಚ್ಛ ಸದಾನ್ವ್ವ (ಸದಾನ್ವಯೇ)॥ ಇದು ವೇಂಕಟಾಚಲವನ್ನು ಸ್ತುತಿಸುವ ಶ್ರುತಿ (ವೇದ).

ಧರ್ಮಿಷ್ಠಃ = ಧರ್ಮಾಚರಣನಿರತನಾದ, ಯಃ = ಯಾವ, ಪುಮಾನ್ = ಪುರುಷನು, ಮಾನುಷಂ = ಮನುಷ್ಯ ಸಂಬಂಧಿಯಾದ, ದೇಹಂ = ಶರೀರವನ್ನು, ಆಸಾದ್ಯ = ಪಡೆದು, ವೇಂಕಟಾಚಲಂ = ವೇಂಕಟಗಿರಿಯನ್ನು ಕುರಿತು, ಗಂತುಂ = ಹೋಗಲು (ಯಾತ್ರೆಮಾಡಲು), ಇಚ್ಛತಿ = ಆಶಿಸುವನೋ, ತೇನ = ಅಂಥವನಿಂದ, ಸರ್ವಂ = ಸಕಲಪುಣ್ಯಕರ್ಮಗಳೂ, ಅನುಷ್ಠಿತಂ = ಆಚರಿಸಲ್ಪಟ್ಟಿತು (ಅಂದರೆ ಆಚರಿಸಿದಂತಾಯಿತು) ।। 23 ।।

ತೇ = ಪ್ರಖ್ಯಾತರಾದ, ಬ್ರಹ್ಮಶಿವೇಂದ್ರಪೂರ್ವಕಾಃ – ಬ್ರಹ್ಮಾ = ಚತುರ್ಮುಖ ಬ್ರಹ್ಮದೇವರು, ರುದ್ರ = ಮಹಾರುದ್ರದೇವರು, ಇಂದ್ರ = ದೇವೇಂದ್ರನು, ಪೂರ್ವಕಾಃ = ಇವರೇ ಮೊದಲಾದ ದೇವತೆಗಳು, ವೇಂಕಟಾದ್ರೇಃ = ಶ್ರೀವೇಂಕಟಾಚಲದ, ಉತ್ತಮಂ = ಶ್ರೇಷ್ಠವಾದ, ಮಹಿಮಾನಂ = ಮಹಾತ್ಮ್ಯೆಯನ್ನು, ಜಾನಂತಿ = ತಿಳಿಯುವರು (ತಿಳಿದಿದ್ದಾರೆ), (ಪಾ:- ನಜಾನಂತಿ = ತಿಳಿಯಲಾರರು,) ಅಲ್ಪವೀರ್ಯಾಃ = ಅತ್ಯಲ್ಪ ಸಾಮರ್ಥ್ಯವುಳ್ಳ, (ಸ್ವಲ್ಪ ಶಕ್ತಿಯುಳ್ಳ), ಮೃತಿಸ್ಥಾಃ = ಮರಣವನ್ನು ಹೊಂದುವವರಾದ, ಮನುಜಾಃ = ಮಾನವರು, ಅದ್ಭುತಂ = ಆಶ್ಚರ್ಯಕರವಾದ, ವಿಷ್ಣೋಃ = ಶ್ರೀಹರಿಯ, ಚ = ಮತ್ತು, ಸ್ಥಲಂ = ವೇಂಕಟಗಿರಿಯ, (ವಿಷ್ಣೋಃ = ಶ್ರೀಹರಿಯ, ಸ್ಥಲಂಚ = ಆವಾಸಸ್ಥಾನವಾದ ವೇಂಕಟಾಚಲದ ಮಹತ್ವವನ್ನೂ) ಜಾನಂತಿ (ಕಿಂ?) = ತಿಳಿಯುವರೇನು? (ಅಂದರೆ ಮಾನವರಿಂದ ತಿಳಿಯಲಸದಳವೆಂದು ಭಾವ) ।। 24 ।।

# ನಾಲ್ಕನೆಯ ಅಧ್ಯಾಯದ ಪರ್ವತ ವರ್ಣನೆಯ ಕಥಾಸಾರವು

ಆನಂತರ ಶ್ರೀನಿವಾಸನಿಂದ ಶಾಪವನ್ನು ಪಡೆದ ಮೇಲೆ ಚೋಳರಾಜನು ''ಪ್ರಭು ! ಜಗದೊಡೆಯನಾದ ಶ್ರೀಹರಿಯೇ! ಸರಿಯಾಗಿ ವಿಮರ್ಶಿಸದೆ ಯಾವ ಅಪರಾಧವನ್ನೂ ಮಾಡದಿರುವ ನನಗೆ ಏಕೆ ಶಾಪವನ್ನು ಕೊಟ್ಟೆ? ನಾನು ಹಿಂದೆ ಯಾವ ಅಪರಾಧವನ್ನು ಮಾಡಿದ್ದೆ? ಸ್ವಾಮಿ ಶ್ರೀಹರಿ! ನಿನಗೆ ದುಃಖವನ್ನುಂಟುಮಾಡುವ ಯಾವ ಕಾರ್ಯವನ್ನು ಮಾಡಿದ್ದೇನೆಂಬುದನ್ನೂ ನಾನು ತಿಳಿದಿಲ್ಲ, ಜಗತ್ಪ್ರಭುವೇ! ನಾನೀಗ ಎಣೆಯಿಲ್ಲದ ವ್ಯಥೆಯನ್ನು ಪಡೆಯುವಂತಾದೆನಲ್ಲ! ಹಾ ಅತಿ ಕಷ್ಟವು'' ಎಂದು ವಿಜ್ಞಾಪಿಸಿದನು.

ಇಂತು ಚೋಳರಾಜನು ದುಃಖತಪ್ತನಾಗಿ ನುಡಿಯಲು, ಶ್ರೀನಿವಾಸನೂ, ಅತಿ ದುಃಖಿತನಾಗಿ ಮೂರ್ಛಿತನಾದ ಚೋಳರಾಜನಿಗೆ ಮೆಲ್ಲನೆ ಹೀಗೆ ಹೇಳಿದನು – ''ಹೇ ರಾಜೇಂದ್ರ! ನೀನು ನಿಜವಾಗಿಯೂ ದುರಾಚಾರಿಯೇ ಅಲ್ಲವೇ?, ನೀನು ಪಾಪಿಷ್ಠನಹುದೋ ಅಲ್ಲವೋ ಎಂಬುದನ್ನು ಸರಿಯಾಗಿ ಪರಾಮರ್ಶಿಸದೆ, ತಿಳುವಳಿಕೆಯಿಲ್ಲದೆ, ಕೊಡಲಿಯ ಪೆಟ್ಟಿನಿಂದಾದ ಗಾಯದ ವ್ಯಥೆಯಿಂದ ಬಳಲುತ್ತಾ ನಾನು ನಿನಗೆ ವ್ಯರ್ಥವಾಗಿ, ಶಾಪವನ್ನು ಕೊಟ್ಟೆನು. ನನ್ನ ಶಾಪವು ಸುಳ್ಳಾಗದು ಎಂದು ವೇದಶಾಸ್ತ್ರಕೋವಿದರಾದ ಜ್ಞಾನಿಗಳು ತಿಳಿಯುವರು. ಎಲೈ ಚೋಳಮಹೀಶ! ಭಕ್ತರಲ್ಲಿ ನನಗೆ ವಿಶೇಷ ವಾತ್ಸಲ್ಯವಿರುವುದರಿಂದ, ಅದೇ ಒಂದು ತಪ್ಪಾಗಿ ಅಂದರೆ ನನ್ನಲ್ಲಿರುವ ಭಕ್ತಿಯಿಂದ ತನ್ನ ಕೆಚ್ಚಲಿನ ಹಾಲಿನಿಂದ ನನಗೆ ಕ್ಷೀರಾಭಿಷೇಕ ಮಾಡುತ್ತಿದ್ದ ಗೋವನ್ನು ನಿತ್ಯ ಭೃತ್ಯನಾದ ಗೋಪಾಲಕನು ಕೊಲ್ಲಲೆತ್ನಿಸಿದ್ದರಿಂದ ಆ ಗೋವನ್ನು ರಕ್ಷಿಸಲು ನಾನು ನನ್ನ ಶಿರವನ್ನೇ ಗೋಪಾಲಕನ ಕುಠಾರಕ್ಕೆ ಒಡ್ಡಿ, ಆ ಆಘಾತದಿಂದ ದುಃಖಿತನಾಗಿ ಕೋಪದಿಂದ ವಿಚಾರಮಾಡದಲೇ ನಿನಗೆ ಶಾಪಕೊಟ್ಟುಬಿಟ್ಟೆ! ನನ್ನ ಶಾಪವು ವ್ಯರ್ಥವಾಗದು. ಆದ್ದರಿಂದ ಕಲಿಯುಗವು ಇರುವವರೆಗೆ, ನೀನು ಪಿಶಾಚಜನ್ಮ ಪಡೆದು ದುಃಖಿಯಾಗಿರು. ಸತ್ಯಸಂಕಲ್ಪವೆಂಬ ನನ್ನ ಬಿರುದಿಗೆ ಕುಂದುಂಟಾಗಬಾರದೆಂದು ನಾನು ಮಾಡಿದ ಈ ಕೃತಿಯಿಂದ ನಾನು ನೀನು ಇಬ್ಬರೂ ಸಹ ದುಃಖವನ್ನು ಅನುಭವಿಸೋಣ.

ಹಾಗಾದರೆ ನನ್ನ ಗತಿಯೇನು? ಎಂದು ನೀನು ಪರಿತಪಿಸಬೇಡ, ಕೇಳು – ಮುಂದೆ ಇಲ್ಲಿ ಆಕಾಶರಾಜನೆಂಬ ರಾಜಶ್ರೇಷ್ಠನು ಜನಿಸಿ ಪ್ರಖ್ಯಾತನಾಗುವನು. ಅವನು ಶುಭಕರಳಾದ ಪದ್ಮಾವತಿ ಎಂಬ ಹೆಸರಿನ ತನ್ನ ಕನ್ಯೆಯನ್ನು ನನಗೆ

ಮದುವೆ ಮಾಡಿಕೊಡುವನು. ಸಂಕಲ್ಪಪೂರ್ವಕವಾಗಿ ಕನ್ಯಾದಾನ ಮಾಡುವಾಗ ಆಕಾಶರಾಜನು ಅಳಿಯನಾದ ನನಗೆ ವರದಕ್ಷಿಣಾರೂಪವಾಗಿ ಎರಡು ಸಾವಿರ ತೊಲೆಗಳಷ್ಟು ತೂಕವಿರುವ ನವರತ್ನಖಚಿತವಾದ ಕಿರೀಟವನ್ನು ಕೊಡುವನು. ನಾನದನ್ನು ಶುಕ್ರವಾರದಂದು ಸಾಯಂಕಾಲ ಧರಿಸುತ್ತೇನೆ. ಆಗ ನನ್ನ ಎರಡು ಕಣ್ಣುಗಳಿಂದಲೂ ಆನಂದಾಶ್ರು ಹರಿಯುವುದು. ಆ ಸಂದರ್ಭದಲ್ಲಿ ನಿನಗೆ ಆರುಘಳಿಗೆಗಳವರೆಗೆ ಮಾತ್ರ ಸುಖವಾಗುವುದು (ಸಂತೋಷವಾಗುವುದು)'' ಹೀಗೆ ರಮಾನಾಯಕನಾದ ಶ್ರೀಹರಿಯು ಸುಖವಾಗುವ ಕಾಲ ನಿಯಮವನ್ನು ಮಾಡಿ, ಶ್ರೀಹರಿಪರಮಾತ್ಮನು ತನಗೆ ಮತ್ತು ಚೋಳರಾಜನಿಗೆ ಸುಖವಾಗುವ ಸಮಯವನ್ನೂ, ತನ್ನ ಅವತಾರದ ಪ್ರಯೋಜನವನ್ನೂ ಸೂಚಿಸಿ, ಚೋಳರಾಜನನ್ನು ಸಮಾಧಾನಪಡಿಸಿ, ಭಗವಾನ್ ಶ್ರೀವಿಷ್ಣುವು ಶ್ರೀವೇಂಕಟಾಚಲದಲ್ಲಿ ವಾಸಮಾಡಿದನು.

ಒಂದು ದಿನ ಶ್ರೀಹರಿಯು ತನಗೆ ಕೊಡಲಿಯ ಪೆಟ್ಟಿನಿಂದಾದ ಗಾಯ ಪರಿಹಾರಕ್ಕೆ ಔಷಧೋಪಚಾರ ಮಾಡಿಕೊಳ್ಳಬಯಸಿ, ಆಯುರ್ವೇದಶಾಸ್ತ್ರ ಪಾರಂಗತನಾದ ಇಂದ್ರಾದಿ ದೇವತೆಗಳಿಗೆ ಉಪದೇಶಕನಾದ ಬೃಹಸ್ಪತ್ಯಾಚಾರ್ಯನನ್ನು ಸ್ಮರಿಸಿದನು. ಅಮರಲೋಕದವರಿಗೆ ಗುರುವಾದ ಬೃಹಸ್ಪತ್ಯಾಚಾರ್ಯನು ಹರಿಯು ನೆನೆದೊಡನೆ ಅಲ್ಲಿಗೆ ಬಂದನು. ಆತನನ್ನು ಕಂಡು ಶ್ರೀಹರಿಯು ''ನನ್ನ ಗಾಯ ಪರಿಹಾರಕ್ಕೆ ಸೂಕ್ತವಾದ ಔಷಧವೇನೆಂದು ಬೇಗ ತಿಳಿಸು'' ಎನಲು, ಜೀವಂತ ಪ್ರಾಣಗಳಿಗೆಲ್ಲಾ ಶ್ರೇಷ್ಠನಾದ ಬೃಹಸ್ಪತಿಯು, ''ರಮಾಕಾಂತ! ಅಶ್ವತ್ಥ ವೃಕ್ಷದ ಹಾಲನ್ನು ಎಕ್ಕೆ ಗಿಡದ ಹತ್ತಿಯೊಡನೆ ಬೆರೆಸಿ ಗಾಯಕ್ಕೆ ಪಟ್ಟುಹಾಕು. ಅದರಿಂದ ಬೇಗ ಗಾಯವು ಮಾಯುವುದು'' ಎಂದು ಹೇಳಿ ತೆರಳಿದನು. ಅನಂತರ ಶ್ರೀಹರಿಯು ಬೃಹಸ್ಪತ್ಯಾಚಾರ್ಯನು ಹೇಳಿದಂತೆ ಔಷಧವನ್ನು ಮಾಡಿದನು. ಹೀಗೆ ಷಡ್ಗುಣೈಶ್ವರ್ಯ ಸಂಪನ್ನನಾದ, ಕಮಲಾವಲ್ಲಭನಾದ ಶ್ರೀವಿಷ್ಣುವು ಆ ವೇಂಕಟಾಚಲದಲ್ಲಿ ವಿಹರಿಸುತ್ತಿದ್ದನು.

ವೇಂಕಟಗಿರಿಯಲ್ಲಿ ಶ್ರೀಹರಿಯು ನೆರವೇರಿಸುತ್ತಿದ್ದ ಲೀಲಾವಿಲಾಸಗಳನ್ನೀಗ ಶತಾನಂದರು ಜನಕರಾಜನಿಗೆ ನಿರೂಪಿಸುವರು.

ಶ್ರೀ ಶ್ರೀನಿವಾಸನು ರಾಮಾವತಾರ - ಕೃಷ್ಣಾವತಾರಗಳಿಂದ ಅಲ್ಲಿ ಕ್ರೀಡಿಸಿದನು. ಅಲ್ಲಿರುವ ವಲ್ಮೀಕವೇ ಕೌಸಲ್ಯಾದೇವಿಯು, ಹುಣಸೇಮರವೇ ದಶರಥ ಮಹಾರಾಜ, ಶೇಷಾಚಲ(ರೂಪಿಯೇ)ವೇ ಸಾಕ್ಷಾತ್ ಲಕ್ಷ್ಮಣನು, ವೈಕುಂಠಗಿರಿಯೇ ಅಯೋಧ್ಯೆಯು, (ಅಥವಾ ತಾಯಿಯಾದ ಕೌಸಲ್ಯಾದೇವಿಯೇ ವಲ್ಮೀಕ, ತಂದೆಯಾದ ದಶರಥನೆ ಹುಣಸೇ ವೃಕ್ಷ, ಲಕ್ಷ್ಮಣನೇ ಸಾಕ್ಷಾತ್ ಶೇಷಾಚಲವು, ಅಯೋಧ್ಯೆಯೇ ವೇಂಕಟಾಚಲವು) ಹೀಗೆ ರಾಮಾವತಾರಿಯೇ ತಾನೆಂದು (ಶ್ರೀನಿವಾಸ) ಕಲ್ಪಿಸಿಕೊಂಡು ಕ್ರೀಡಿಸಿದನು. ಹುತ್ತವೇ ದೇವಕಿಯು, ಹುಣಸೇವೃಕ್ಷವೇ ವಸುದೇವನು, ಶೇಷಾಚಲವೇ ಬಲರಾಮನು, ವೇಂಕಟಗಿರಿಯೇ ಮಥುರಾ ಪಟ್ಟಣ, ಮತ್ತು ಸ್ವಾಮಿಪುಷ್ಕರಣಿಯೇ ಯಮುನಾ ನದಿಯಾಗಿ ವಿರಾಜಿಸಿತು. ಅಲ್ಲಿರುವ ಎಲ್ಲ ಮೃಗಗಳೂ ಯಾದವರು, ಪಕ್ಷಿಗಳೇ ಗೋಪಸ್ತ್ರೀಯರು, ಹೀಗೆ ವೇಂಕಟಾಚಲದಲ್ಲಿ ಶ್ರೀನಿವಾಸನು ಕೃಷ್ಣಾವತಾರ ಲೀಲೆಯನ್ನಾಡುತ್ತಿದ್ದನು.

ಬ್ರಹ್ಮ - ವಿಷ್ಣು - ಮಹೇಶ್ವರರು ಹಾಗೂ ಆಕಾಶಗಂಗೆ ಇವರುಗಳ ಆಗಮನವುಳ್ಳ ಪರಮಾತ್ಮನಾದ ಶ್ರೀನಿವಾಸನಿಗೆ ಅವಲಂಬನವಾದ ಪುಣ್ಯಕ್ಷೇತ್ರದಲ್ಲಿರುವ ಶ್ರೀವೇಂಕಟಾಚಲವನ್ನು ಕುರಿತು ಸರ್ವದಾ ಅನುಸರಿಸಿ ಗಮನಶೀಲರಾಗಿರಿ (ಅಂದರೆ ಬ್ರಹ್ಮ - ವಿಷ್ಣು - ಮಹೇಶ್ವರ - ಆಕಾಶಗಂಗೆಗಳು ಬಂದು ವಾಸವಾಗಿರುವುದರಿಂದ ಪುಣ್ಯಕ್ಷೇತ್ರವಾಗಿರುವ ಶ್ರೀವೇಂಕಟಗಿರಿಯ ಯಾತ್ರೆಯನ್ನು ಸರ್ವದಾ ಮಾಡುತ್ತಿರಿ - ಎಂದು ವೇದಪುರುಷನು ಸುಜನರಿಗೆ ಬೋಧಿಸಿರುವನು) ಪರ್ವತಶ್ರೇಷ್ಠವಾದ ಶೇಷಗಿರಿಯು (ವೇಂಕಟಾಚಲವು), ಇಂತು ಸಾಕ್ಷಾತ್ ವೇದಮಯವಾಗಿರುವುದು. ಹೀಗೆ ಶ್ರೀಹರಿಯ ದೇಹವನ್ನು ಮರೆಮಾಡಿರುವ ವಲ್ಮೀಕವು ವೈಕುಂಠದಕಿಂತಲೂ ಶ್ರೇಷ್ಠವಾಯಿತು.

ಸುವರ್ಣಮುಖರೀ ಎಂಬ ಹೆಸರಿನ ನದಿಯೇ ವಿಖ್ಯಾತವಾದ ವಿರಜಾನದಿಯು! ವೇಂಕಟಾಚಲವೇ ವೈಕುಂಠವು, ಶ್ರೀಮನ್ನಾರಾಯಣನೇ ಶ್ರೀವಾಸುದೇವನು, ಮುಕ್ತಬ್ರಹ್ಮರುಗಳೇ ಪಕ್ಷಿಸಮೂಹವು, ಮುಕ್ತರುದ್ರರೇ ಸಿಂಹ - ಹುಲಿ ಮುಂತಾದ ಶ್ರೇಷ್ಠ ಮೃಗಗಳು!, ಸನಕಾದಿ ಬ್ರಾಹ್ಮಣೋತ್ತಮರೇ ವೇಂಕಟಗಿರಿಯಲ್ಲಿರುವ ವಾನರ ಮುಂತಾದವುಗಳು. ಮಾನವ ದೇಹವನ್ನು ಪಡೆದ, ಧರ್ಮಾಚರಣನಾದ ಯಾವ ಪುರುಷನು ವೇಂಕಟಗಿರಿಯ ಯಾತ್ರೆ ಮಾಡಲು ಬಯಸುವನೋ ಅಂಥವನು ಸಕಲ ಪುಣ್ಯಕರ್ಮಗಳನ್ನೂ ಮಾಡಿದಂತೆಯೇ ಸರಿ !

ಪ್ರಖ್ಯಾತರಾದ ಬ್ರಹ್ಮ - ರುದ್ರ - ಇಂದ್ರಾದಿ ದೇವತೆಗಳು ಶ್ರೀವೇಂಕಟಾಚಲದ ಶ್ರೇಷ್ಠ ಮಹಿಮಾತಿಶಯವನ್ನು ತಿಳಿಯುವರು (ತಿಳಿದಿಲ್ಲ - ಅಂದಮೇಲೆ), ಅಲ್ಪಶಕ್ತರಾದ, ಮರಣಹೊಂದುವರಾದ ಮಾನವರು ಆಶ್ಚರ್ಯಕರವಾದ ಶ್ರೀಹರಿಯ ಮತ್ತು ಅವನಿಗೆ ಆವಾಸಸ್ಥಾನವಾದ ವೇಂಕಟಗಿರಿಯ ಮಹಿಮಾತಿಶಯವನ್ನು ತಿಳಿಯುವರೇನು? ಅಂದರೆ ಖಂಡಿತ ತಿಳಿಯಲು ಸಾಧ್ಯವಿಲ್ಲ ಎಂದು ಭಾವ. ॥ 24 ॥

*ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೇಂಕಟೇಶಮಹಾತ್ಮೆಯಲ್ಲಿ ಶ್ರೀವೇಂಕಟಗಿರಿಯ ವರ್ಣನೆಯೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.*

*॥ ಶ್ರೀವೇಂಕಟೇಶನಿಗೆ ಅರ್ಪಿತವಾಗಲಿ ॥*

# ಐದನೆಯ ಅಧ್ಯಾಯ

ಮೂಲ— ಋಷಯ ಊಚುಃ

**ಸೂತ ಸೂತ ಮಹಾಭಾಗ ಸರ್ವಶಾಸ್ತ್ರ ವಿಶಾರದ ।**
**ಶ್ರುತಂ ಶ್ರೀವೇಂಕಟೇಶಸ್ಯ ಮಾಹಾತ್ಮ್ಯಂ ಪಾಪನಾಶನಮ್ ॥ 1 ॥**

**ಅವತಾರ ಪ್ರಭಾವಂ ಚ ಚೋಳರಾಜ ನಿಬಂಧನಮ್ ।**
**ವೈಕುಂಠಾದ್ಗಮನಂ ದೇವಚರಿತಂ ಲೌಕಿಕಂಪರಮ್ ॥ 2 ॥**

**ಕೃಪಾಲೋಽಸಿ ದಯಾಸಾರ ಶಿಷ್ಯಪ್ರೀತಿಪರಾಯಣ ।**
**ತತ್ಕಲ್ಯಾಣವಿಧಿಂ ಬ್ರೂಹಿ ಕೋವಾಽಕಾಶ ನೃಪೋತ್ತಮಃ ॥ 3 ॥**

**ಕಥಂ ಪುತ್ರ್ಯಭವತ್ಪೂರ್ವಂ ಕಥಂ ಜಾಮಾತೃತಾಂ ಗತಃ ।**
**ಯೋಗಿನಾಂ ಮನಸಾಚಿಂತ್ಯಃ ಶ್ರೀನಿವಾಸಸ್ತಾಂಗತಿಃ ॥ 4 ॥**

**ತತ್ಸ್ವೇನ ಬ್ರೂಹಿ ಭಗವನ್ ಸಾಂಗಂ ವೈವಾಹಿಕಂ ಶುಭಮ್ ।**
**ಯೇನ ಸಂವರ್ಣ್ಯತೇ ತಸ್ಯ ಮಹಿಮಾ ಕ್ಷೀರಸಾಗರೇ ॥ 5 ॥**

**ಸ್ನಾನಾಚಾರಪರೋ ನಿತ್ಯಂ ಸ ಧನ್ಯಃ ಪುಣ್ಯವರ್ಧನಃ ।**
**ಏವಂ ಮುನೀನಾಂ ವಚನಂ ನಿಶಮ್ಯ ಸೂತೋ ನಿತಾಂತಂ ನಿಜಶಿಷ್ಯಸಂಘಾನ್ ।**
**ಉವಾಚ ಭಕ್ತ್ಯನ್ವಿತ ನಮ್ರದೇಹಃ ಸಾಧೂಚಿತಂ ವಾಕ್ಯಮುದೀರಯನ್ ಸನ್ ॥ 6 ॥**

ಶತಾನಂದರು ಜನಕರಾಯನಿಗೆ ಸೂತರು ಹೇಳಿದ ಕಥೆಯನ್ನು ಹೇಳುತ್ತಿದ್ದಾರೆ.

ಋಷಯ ಊಚುಃ = ಶೌನಕಾದಿ ಋಷಿಗಳು ಮಾತನಾಡಿದರು; ಮಹಾಭಾಗ = ಮಹಾನುಭಾವನಾದ, ಸರ್ವಶಾಸ್ತ್ರವಿಶಾರದ = ಸಕಲಶಾಸ್ತ್ರಗಳಲ್ಲಿ ಪಾರಂಗತನಾದ, ಸೂತಸೂತ = ಸೂತ ಮುನಿಯೇ, ಸೂತ ಮುನಿಯೇ! (ಆದರಾತ್ ದ್ವಿರಾವೃತ್ತಿಃ - ಅಂದರೆ ದೊಡ್ಡವರನ್ನು ಆದರದಿಂದ ಎರಡುಬಾರಿ ಹೇಳುವುದು ಸಂಪ್ರದಾಯ). ವೇಂಕಟೇಶಸ್ಯ = ಶ್ರೀನಿವಾಸನ, ಪಾಪನಾಶನಂ = ಪಾಪಪರಿಹಾರಕವಾದ, ಮಾಹಾತ್ಮ್ಯಂ = ಚರಿತೆಯು (ಮಹಿಮೆಯು), ॥ 1 ॥ ಶ್ರುತಂ = (ನಮ್ಮಿಂದ) ಕೇಳಲ್ಪಟ್ಟಿತು. ಅವತಾರ ಪ್ರಭಾವಂ = ಶ್ರೀನಿವಾಸನ ಪ್ರಾದುರ್ಭಾವದ ಮಹಿಮಾತಿಶಯವೂ, ಚೋಲರಾಜ ನಿಬಂಧನಂ = ಚೋಳರಾಜನಿಗೆ ಶಾಪಮೋಚನಕಾಲ ನಿಬಂಧನೆಯು, ವೈಕುಂಠಾದ್ಗಮನಂ = ವೈಕುಂಠದಿಂದ ಧರೆಗೆ ಬಂದುದು, ಪರಂ = ಶ್ರೇಷ್ಠವಾದ, ಲೌಕಿಕಂ = ಮಾನವರಂತೆ ದುಃಖಾದಿ ಪ್ರದರ್ಶನಪೂರ್ವಕವಾದ, ದೇವಚರಿತಂ = ಶ್ರೀನಿವಾಸನಿಂದ ಮಾಡಲ್ಪಟ್ಟ ಔಷಧೋಪಚಾರ ರೂಪವಾದ ಚರಿತೆಯು, (ಶ್ರುತಂ = ನಮ್ಮಿಂದ ಕೇಳಲ್ಪಟ್ಟಿತು). ॥ 2 ॥ ದಯಾಸಾರ = ಕಾರುಣ್ಯಕ್ಕೆ ಆಧಾರಭೂತನಾದ, ಶಿಷ್ಯ ಪ್ರೀತಿಪರಾಯಣ = ಶಿಷ್ಯರನ್ನು ಪ್ರೀತಿಗೊಳಿಸುವುದರಲ್ಲಿ ಆಸಕ್ತನಾದ, ಕೃಪಾಲೋಽಸಿ = ನೀನು ಕೃಪಾಳುವಾಗಿದ್ದೀಯೆ. ತತ್ = ಆ ಶ್ರೀನಿವಾಸನ, ಕಲ್ಯಾಣವಿಧಿಂ = ವಿವಾಹ ಮಹೋತ್ಸವದ ವಿಧಾನವನ್ನು, ಬ್ರೂಹಿ = ಹೇಳು, ಆಕಾಶ ನೃಪೋತ್ತಮಃ

= ಆಕಾಶನಾಮಕನಾದ ರಾಜಶ್ರೇಷ್ಠನು, ಕೋವಾ = ಯಾರು? ।। 3 ।। ಪೂರ್ವಂ = ಮೊದಲು, (ಲಕ್ಷ್ಮಿಯು) ಪುತ್ರೀ = ಆಕಾಶರಾಯನಿಗೆ ಮಗಳು, ಕಥಂ = ಹೇಗೆ, ಅಭವತ್ = ಆದಳು? ಯೋಗಿನಾಂ = ಯೋಗಿಗಳ, ಮನಸಾ = ಮನಸ್ಸಿನಿಂದ, ಅಚಿಂತ್ಯಃ = ಚಿಂತಿಸಲಾಗದವನಾದ, ಸತಾಂಗತಿಃ = ಸಜ್ಜನರಿಗೆ ರಕ್ಷಕನಾದ, ಶ್ರೀನಿವಾಸಃ = ಶ್ರೀಹರಿಯು, ಜಾಮಾತೃತಾಂ = ಅಳಿಯತನವನ್ನು, ಕಥಂ = ಹೇಗೆ, ಗತಃ = ಹೊಂದಿದನು? ।। 4 ।। ತತ್ತ್ವೇನ = ತಾತ್ವಿಕದೃಷ್ಟಿಯಿಂದ, ಬ್ರೂಹಿ = ಹೇಳು, ಭಗವನ್ = ಪೂಜ್ಯನಾದ ಸೂತಾಚಾರ್ಯನೇ! ಸಾಂಗಂ = ಅಂಗಸಹಿತವಾದ, ವೈವಾಹಿಕಂ = ವಿವಾಹಮಹೋತ್ಸವ ಸಂಬಂಧವಾದ, ತತ್ = ಆ, ಶುಭಂ = ಕಲ್ಯಾಣವನ್ನು, ಬ್ರೂಹಿ = ಹೇಳು, ಯೇನ = ಯಾರಿಂದ, ತಸ್ಯ = ಶ್ರೀವೇಂಕಟೇಶನ, ಮಹಿಮಾ = ಮಹಿಮೆಯು, ಸಂವರ್ಣ್ಯತೇ = ವರ್ಣಿಸಲ್ಪಡುವುದೋ ಅಂಥವರು, ಕ್ಷೀರಸಾಗರೇ = ಕ್ಷೀರಸಮುದ್ರದಲ್ಲಿ ।। 5 ।। ನಿತ್ಯಂ = ಪ್ರತಿದಿನವೂ, ಸ್ನಾನಾಚಾರಪರಃ = ಸ್ನಾನರೂಪ ಆಚಾರಉಳ್ಳವರೇ ಆಗುತ್ತಾನಾದ್ದರಿಂದ, ಸಃ = ಅಂಥವನು, (ಪಾ:- ಕಃ ಪುಮಾನ್ ವೇಂಕಟೇಶಸ್ಯ ಮಹಿಮಾಕ್ಷೀರಸಾಗರೇ - ಕಃ ಪುಮಾನ್ = ಯಾವ ಮನುಷ್ಯನು, ವೇಂಕಟೇಶಸ್ಯ = ಶ್ರೀನಿವಾಸ, ಮಹಿಮಾ ಕ್ಷೀರಸಾಗರೇ = ಮಹಿಮೆಯೆಂಬ ಕ್ಷೀರಸಮುದ್ರದಲ್ಲಿ, ನಿತ್ಯಂ = ಪ್ರತಿದಿನವೂ, ಸ್ನಾನಾಚಾರಪರೋ = ಸ್ನಾನ ರೂಪಾಚಾರಪರನಾಗುವನೋ, ಸಃ = ಅಂಥವನು, ಪುಣ್ಯವರ್ಧನಃ = ಪುಣ್ಯವನ್ನು ಬೆಳೆಸಿಕೊಂಡ, ಧನ್ಯಃ = ಕೃತಾರ್ಥನು. ಪುಣ್ಯವರ್ಧನಃ = ಪುಣ್ಯಾಭಿವೃದ್ಧಿಯುಳ್ಳವನಾಗುತ್ತಾನಾದ್ದರಿಂದ, ಸಃ = ಅಂಥವನು,) ಧನ್ಯಃ = ಕೃತಾರ್ಥನಾಗುವನು, ಸೂತಃ = ಸೂತಾಚಾರ್ಯನು, ಏವ = ಈ ರೀತಿಯಾಗಿ, ಮುನೀನಾಂ = ಮುನಿಗಳ, ವಚನಂ = ಮಾತನ್ನು, ನಿಶಮ್ಯ = ಕೇಳಿ, ನಿತಾಂತಂ = ಅತ್ಯಂತವಾಗಿ (ಹೆಚ್ಚಾಗಿ), ನಿಜಶಿಷ್ಯ ಸಂಘಾನ್ = ತನ್ನ ಶಿಷ್ಯ ಸಮೂಹವನ್ನು ಕುರಿತು, ಭಕ್ತ್ಯನ್ವಿತ ನಮ್ರದೇಹಃ - ಭಕ್ತ್ಯನ್ವಿತ = ಭಕ್ತಿಸಹಕೃತವಾದ, ನಮ್ರದೇಹಃ = ನಮ್ರಾಂಗನಾಗಿ, (ಬಾಗಿದ ಶರೀರವುಳ್ಳವನಾಗಿ), ಸಾಧೂಚಿತಂ = ಸಜ್ಜನರಿಗೆ ಉಚಿತವಾದ, ವಾಕ್ಯಂ = ಮಾತನ್ನು, ಉದೀರಯನ್‌ಸನ್ = ಹೇಳುತ್ತಿರುವವನಾಗಿ, ಉವಾಚ = ಮಾತನಾಡಿದನು ।। 6 ।।

*ಸೂತ ಉವಾಚ -*

**ಶೃಣ್ವಂತು ಮುನಯಸ್ಸರ್ವೇ ಭಕ್ತಿಭಾವೇನ ಸಂಯುತಾಃ ।**
**ಪನ್ನಗಾಚಲನಾಥಸ್ಯ ಕನ್ಯಾಸಂಗ್ರಹಣಂ ಶುಭಮ್ ।। 7 ।।**

ಸೂತ ಉವಾಚ = ಸೂತಾಚಾರ್ಯನು ಹೇಳಿದನು - ಸರ್ವೇ = ಸಮಸ್ತರಾದ, ಮುನಯಃ = ಋಷಿಗಳೇ, ಭಕ್ತಿಭಾವೇನ = ಭಕ್ತಿಭಾವದಿಂದ, ಸಂಯುತಾಃ = ಯುಕ್ತರಾಗಿ, ಪನ್ನಗಾಚಲನಾಥಸ್ಯ = ಶೇಷಾಚಲಾಧಿಪತಿಯಾದ ಶ್ರೀನಿವಾಸನ, ಕನ್ಯಾ ಸಂಗ್ರಹಣಂ = ಕನ್ಯಾಪರಿಗ್ರಹಣರೂಪವಾದ, ಶುಭಂ = ಕಲ್ಯಾಣಮಹೋತ್ಸವವನ್ನು (ವಿವಾಹ ಮಹೋತ್ಸವ ಚರಿತೆಯನ್ನು) ಶೃಣ್ವಂತು = ಕೇಳಿರಿ, (ಕೇಳುವವರಾಗಿರಿ). ।। 7 ।।

**ಕದಾಚಿದ್ವೇಂಕಟೇಶಸ್ತು ಔಷಧಾರ್ಥಂ ಸ್ವಯಂ ಹರಿಃ ।**
**ಗಮನಾಭಿಮುಖೋ ಭೂತ್ವಾ ನಿರ್ಜಗಾಮಾರುಣೋದಯೇ ।। 8 ।।**

**ತಸ್ಮಿನ್ ಕಾಲೇ ವರಾಹಸ್ತು ಮೃಗಯಾರ್ಥಂ ಸಸೂಕರಃ ।**
**ಶ್ಯಾಮಾಕಹಾರಿಣಂ ಜಿತ್ವಾ ದೈತ್ಯಂ ವೃಷಭನಾಮಕಮ್ ।। 9 ।।**

**ಯದಾ ಗತಸ್ತದಾ ದೇವ್ಯೋ ದದೃಶೇ ವೇಂಕಟೇಶ್ವರಮ್ ।**
**ಗರ್ಜಂತಃ ಕೋಽಸಿ ಕೋಽಸೀತಿ ಸೂಕರಾಸ್ತತ್ರ ಚಾಯಯುಃ ।। 10 ।।**

**ತಾನ್ ದೃಷ್ಟ್ವಾ ಜಗದೀಶಸ್ತು ತತ್ರ ಲೀನೋ ಭವದ್ಧರಿಃ ।**
**ಲೀನಂ ತಂ ವೇಂಕಟಂ ದೃಷ್ಟ್ವಾ ವರಾಹವದನೋ ಹರಿಃ ॥ 11 ॥**

**ವೈಕುಂಠಾದಾಗತಂ ಮತ್ವಾ ವೇಂಕಟೇಶಂ ಶ್ರಿಯಃಪತಿಮ್ ।**
**ಉವಾಚ ವಚನಂ ದೇವಂ ಧೈರ್ಯಮಾಲಂಬ್ಯ ಬುದ್ಧಿಮಾನ್ ॥**
**ಸೋಽಪಿ ಶ್ವೇತವರಾಹಂ ತಂ ಜಾನನ್ವಲ್ಮೀಕತಸ್ತದಾ ।**
**ನಿರೀಕ್ಷ್ಯಮಾಣ ಸೋತ್ಕಂಠಂ ನಿರ್ಗತ್ಯೋಂತರಮಭ್ಯಧಾತ್ ॥**
**ತತೋನ್ಯೋನ್ಯವಿಲೋಕೋತ್ಥ ಅಶ್ರುಸಂದಿಗ್ಧಲೋಚನೌ ॥ 12 ॥**

ಕದಾಚಿತ್ = ಒಮ್ಮೆ, ಸ್ವಯಂ = ಸ್ವತಃ ಶ್ರೀಹರಿಯು, ಔಷಧಾರ್ಥಂ = ತಲೆಯ ಗಾಯದ ಔಷಧ ತರಲು, ಗಮನಾಭಿಮುಖಃ = ಪ್ರಯಾಣೋದ್ಯುಕ್ತನು, ಭೂತ್ವಾ = ಆಗಿ, ಅರುಣೋದಯೇ = ಅರುಣನು ಉದಯಿಸುವ ಸಮಯದಲ್ಲಿ, ನಿರ್ಜಗಾಮ = ಹೊರಟನು ॥ 8 ॥ ತಸ್ಮಿನ್ಕಾಲೇ = ಆ ಕಾಲದಲ್ಲಿ, ವರಾಹಃ = ಶ್ರೀವರಾಹದೇವನು, ಮೃಗಯಾರ್ಥಂ = ಬೇಟೆಗಾಗಿ, ಸಸೂಕರಃ = ತನ್ನ ಪರಿವಾರವಾದ ಸೂಕರಗಳಿಂದೊಡಗೂಡಿ, ವೃಷಭನಾಮಕಂ = ವೃಷಭ ಎಂಬ ಹೆಸರಿನ; ಶ್ಯಾಮಾಕಹಾರಿಣಂ = ಹೊಲದಲ್ಲಿದ್ದ ಸಾಮೇಧಾನ್ಯವನ್ನು ಕದಿಯುತ್ತಿದ್ದ, ದೈತ್ಯಂ = ರಾಕ್ಷಸನನ್ನು, ಜಿತ್ವಾ = ಜಯಿಸಿ, ॥ 9 ॥ ಯದಾ ಆಗತಃ = ಯಾವಾಗ ಬಂದನೋ(ಬರುತ್ತಿರುವಾಗ), ದೇವಃ = ಶ್ರೀವರಾಹಸ್ವಾಮಿಯು, ಶ್ರೀವೇಂಕಟೇಶ್ವರಂ = ಶ್ರೀನಿವಾಸನನ್ನು, ದದೃಶೇ = ನೋಡಿದನು. ಸೂಕರಾಃ = ವರಾಹದೇವನ ಪರಿವಾರದ ಸೂಕರಗಳು, ಕೋಽಸಿ ಕೋಽಸೀತಿ = ನೀನು ಯಾರು? ನೀನು ಯಾರು ಎಂದು, ಗರ್ಜಂತಃ = ಗರ್ಜಿಸುತ್ತಾ, ತತ್ರ = ಶ್ರೀನಿವಾಸನಿದ್ದೆಡೆಗೆ, ಆಯಯುಃ = ಬಂದವು. ॥ 10 ॥ ಜಗದೀಶಃ = ಜಗತ್ಪ್ರಭುವಾದ, ಹರಿಃ = ಶ್ರೀನಿವಾಸನು, ತಾನ್‌ದೃಷ್ಟ್ವಾ = ಅವರನ್ನು ಕಂಡು, ತತ್ರ = ಹುತ್ತದಲ್ಲಿ, ಲೀನೋಭವತ್ = ಮರೆಯಾದನು. ವರಾಹವದನಃ = ವರಾಹವದನವುಳ್ಳ, ಹರಿಃ = ಹರಿಯು, ॥ 11 ॥ ಲೀನ = ಮರೆಯಾದ, ವೇಂಕಟಂ = ಶ್ರೀನಿವಾಸನನ್ನು, ದೃಷ್ಟ್ವಾ = ನೋಡಿ, ವೈಕುಂಠಾದಾಗತಂ = ವೈಕುಂಠ ಲೋಕದಿಂದ ಬಂದಿರುವ, ಶ್ರಿಯಃಪತಿ = ರಮೆಯ ಅರಸನಾದ, ವೇಂಕಟಂ = ಶ್ರೀನಿವಾಸನನ್ನಾಗಿ (ಶ್ರೀನಿವಾಸನೆಂದು), ಮತ್ವಾ = ತಿಳಿದು, ಬುದ್ಧಿಮಾನ್ = ಬುದ್ಧಿಶಾಲಿಯಾದ ಶ್ರೀವರಾಹಸ್ವಾಮಿಯು, ಧೈರ್ಯಂ = ಧೈರ್ಯವನ್ನು, ಆಲಂಬ್ಯ = ಆಶ್ರಯಿಸಿ, ದೇವಂ = ಶ್ರೀನಿವಾಸನನ್ನು ಕುರಿತು, ವಚನಂ ಉವಾಚ = ಮಾತನಾಡಿದನು ॥ 7-12 ॥

**ಕ್ರೋಡನಾರಾಯಣೌ ಸಾಕ್ಷಾದ್ರೂಪದ್ವಂದ್ವವಿರಾಜಿತೌ ।**
**ಊಚತುರ್ಭಾಷಣಂ ಚೋಭೌ ದರ್ಶಯಂತೌ ವಿಡಂಬನಮ್ ॥ 13 ॥**

**ತಯೋಸ್ತದದ್ಭುತಂ ಕರ್ಮ ದೃಷ್ಟ್ವಾ ಬ್ರಹ್ಮಪುರೋಗಮಾಃ ।**
**ವವರ್ಷುಃ ಪುಷ್ಪವರ್ಷಾಣಿ ಕ್ರೋಡನಾರಾಯಣೋಪರಿ ॥ 14 ॥**

**ಯಥಾಯುಗಂ ಯಥಾದೇಶಂ ಯಥಾಕಾಲಂ ಯಥಾವಯಃ ।**
**ತಥಾವತಾರಮಾಕಾಂಕ್ಷನ್ ರಮತೇ ಪ್ರಾಕೃತೋ ಯಥಾ ॥ 15 ॥**

ಸೋಽಪಿ = ಶ್ರೀನಿವಾಸನೂ ಸಹ, ತಂ = ಅವನನ್ನು, ಶ್ವೇತವರಾಹಂ = ಶ್ರೀಶ್ವೇತವರಾಹಸ್ವಾಮಿಯೆಂದು, ಜಾನನ್ = ತಿಳಿದವನಾಗಿ, ತದಾ = ಆವಾಗ, ಸೋತ್ಕಂಠಂ = ಉತ್ಕಂಠಯುತನಾಗಿ (ಕೌತುಕದಿಂದ), ನಿರೀಕ್ಷ್ಯ = ವರಾಹಮೂರ್ತಿಯನ್ನು

ಪರಿಕಿಸಿ, ವಲ್ಮೀಕತಃ = ಹುತ್ತದಿಂದ, ನಿರ್ಗತ್ಯ = ಹೊರಬಂದು, ಅಂತರಮಭ್ಯಗಾತ್ = ಹತ್ತಿರಬಂದನು, ತತಃ = ಅನಂತರ, ಅನ್ಯೋನ್ಯವಿಲೋಕೋತ್ಥ = ಪರಸ್ಪರ ನೋಡುವುದರಿಂದ ಹೊರಹೊಮ್ಮಿದ, ಅಶ್ರುಸಂದಿಗ್ಧ ಲೋಚನೌ = ನೀರುತುಂಬಿದ ಕಣ್ಣುಳ್ಳವರಾದ, ಸಾಕ್ಷಾತ್ = ಪ್ರತ್ಯಕ್ಷವಾಗಿ, ರೂಪದ್ವಂದ್ವವಿರಾಜಿತೌ = ಎರಡುರೂಪಗಳಿಂದ ಬೆಳಗುತ್ತಿರುವ, ಕ್ರೋಢನಾರಾಯಣೌ = ಶ್ರೀವರಾಹ - ಶ್ರೀನಿವಾಸರಾದ, ಉಭೌ = ಅವರಿಬ್ಬರೂ, ವಿಡಂಬನಂ = ವಿಡಂಬನವನ್ನು, ದರ್ಶಯಂತೌ = ತೋರಿಸುತ್ತಿರುವವರಾಗಿ, ಚ = ಮತ್ತು, ಭಾಷಣ ಮೂಚತುಃ = ಮಾತನಾಡಿದರು. ॥ 13 ॥ ತಯೋಃ = ವರಾಹಶ್ರೀನಿವಾಸರ, ಅದ್ಭುತಂ = ಆಶ್ಚರ್ಯಕರವಾದ, ಕರ್ಮ = ಕಾರ್ಯವನ್ನು (ನಟರೂಪ ಕರ್ಮವನ್ನು) ದೃಷ್ಟ್ವಾ = ನೋಡಿ, ಬ್ರಹ್ಮಪುರೋಗಮಾಃ = ಬ್ರಹ್ಮಾದಿ ದೇವತೆಗಳು, ಕ್ರೋಡನಾರಾಯಣೋಪರಿ = ವರಾಹಮೂರ್ತಿ-ನಾರಾಯಣರ ಮೇಲೆ, ಪುಷ್ಪವರ್ಷಾಣಿ ವವರ್ಷುಃ = ಹೂವಿನ ಮಳೆಗರೆದರು ॥ 14 ॥ ಯಥಾಯುಗಂ = ಆಯಾ ಯುಗಗಳಿಗೆ ತಕ್ಕಂತೆ, ಯಥಾದೇಶಂ = ಆಯಾ ದೇಶಕ್ಕೆ ತಕ್ಕಂತೆ, ಯಥಾಕಾಲಂ = ಕಾಲಕ್ಕೆ ತಕ್ಕ ರೀತಿಯಲ್ಲಿ, ಯಥಾವಯಃ = ಆಯಾವಯಸ್ಸಿಗೆ ತಕ್ಕಂತೆ, ತಥಾ = ಅವುಗಳಿಗೆ, ಸರಿಹೊಂದುವರೀತಿಯಲ್ಲಿ ಅವತಾರಂ = ಆವಿರ್ಭಾವವನ್ನು, ಆಕಾಂಕ್ಷನ್ = ಮಾಡಲಪೇಕ್ಷಿಸು-ವವನಾಗಿ, ಪ್ರಾಕೃತೋ ಯಥಾ = ಪ್ರಕೃತಿಸಂಬಂಧವುಳ್ಳ ಮಾನವರಂತೆ, ರಮತೇ = ಶ್ರೀಹರಿಯು ಕ್ರೀಡಿಸುತ್ತಾನೆ ॥15॥

**ಏವಂ ವದಂತಃ ಸುರಪುಂಗವಾಸ್ತೇ ವಿಚಿತ್ರಮಾಯಾಂ ಜಗದೀಶಚೇಷ್ಟಿತಮ್ ।**
**ಸ್ತುವಂತ ಊಚುಃ ಪರಮಸ್ಯ ವಿಷ್ಣೋರನಂತಶೈಲಸ್ಯ ರಮಾಪತೇಶ್ಚ ॥ 16 ॥**

ತೇ = ಆಕಾಶಮಾರ್ಗದಲ್ಲಿ ಮಿಲಿತರಾಗಿದ್ದ ಸುರಪುಂಗವಾಃ = ದೇವತಾ ಶ್ರೇಷ್ಠರು, ಜಗದೀಶಚೇಷ್ಟಿತಂ = ಶ್ರೀಹರಿಯು ಎಸಗಿದ ಕಾರ್ಯವನ್ನು (ಅಥವಾ ವಿಡಂಬನ ಮಾಡುತ್ತಿರುವ ಶ್ರೀಹರಿಯ ಚರಿತೆಯನ್ನು), ಏವಂವದಂತಃ = ಪೂರ್ವೋಕ್ತ ಪ್ರಕಾರವಾಗಿ ಹೇಳುತ್ತಾ, ಸ್ತುವಂತಃ = ಸ್ತೋತ್ರಮಾಡುತ್ತಾ, ಅನಂತಶೈಲಸ್ಯ = ಶೇಷಾಚಲದ, ಚ = ಮತ್ತು, ರಮಾಪತೇಃ = ಲಕ್ಷ್ಮೀರಮಣನಾದ, ಪರಮಸ್ಯ = ಸರ್ವೋತ್ತಮನಾದ, ವಿಷ್ಣೋಃ = ಶ್ರೀಮನ್ನಾರಾಯಣನ, ವಿಚಿತ್ರ ಪೂರ್ಣಾಂ = ವೈಚಿತ್ರ್ಯ-ಪೂರ್ಣವಾದ, ಮಾಯಾಂ = ಮಾಯೆಯನ್ನು ಕುರಿತು, ಊಚುಃ = ಪರಸ್ಪರ ಮಾತನಾಡಿಕೊಂಡರು. ॥ 16 ॥

**ಇತ್ಯನ್ಯೋನ್ಯಂ ಭಾಷಮಾಣೌ ಸಾಕ್ಷಾನ್ನಾರಾಯಣಾವುಭೌ ।**
**ಸಕೌತುಕಂ ಚ ಸಂವೀಕ್ಷ್ಯ ಸ್ತುತ್ವಾ ಸ್ವಂ ಸ್ವಂ ಪದಂತತಃ ॥**
**ಗತೇ ದೇವಗಣೇ ತತ್ರ ವರಾಹೋ ಹರಿಮಬ್ರವೀತ್ ।**

*ವರಾಹ ಉವಾಚ -*

**ತ್ಯಕ್ತ್ವಾ ವೈಕುಂಠಲೋಕಂತು ಕಿಮರ್ಥಂ ತ್ವಮಿಹಾಗತಃ ॥ 17 ॥**

**ತದ್ವದಸ್ವ ಮಹಾಭಾಗ ಶ್ರೀನಿವಾಸ ವರಾನನ ।**
**ಇತಿ ತೇನ ಸಮಾಜ್ಞಪ್ತ ಉವಾಚ ಕ್ರೋಡರೂಪಿಣಮ್ ॥ 18 ॥**

*ಶ್ರೀನಿವಾಸ ಉವಾಚ -*

**ಭೃಗೋರಂಘ್ರಿಪ್ರಹಾರಾಚ್ಚ ರಮಾ ಕೊಲ್ಲಾಪುರಂ ಗತಾ ।**
**ತೇನ ದುಃಖೇನ ಸಂತಪ್ತಃ ತ್ಯಕ್ತ್ವಾ ವೈಕುಂಠಮುತ್ತಮಮ್ ॥ 19 ॥**

**ಇಹಾಗತೋ ಧರಾಕಾಂತ ವಲ್ಮೀಕೇ ತವ ದಕ್ಷಿಣೇ ।**
**ನಿವಸಂತಂ ಚ ಮಾಂ ದೇವ ಧೇನುಪಾಲೋಽಹ್ಯತಾಡಯತ್ ॥ 20 ॥**

**ಕುಠಾರೇಣಾಸಿಧಾರೇಣ ತತ್ ಕ್ಷತಂ ಮಾಂತು ಬಾಧತೇ ।**
**ಔಷಧಾರ್ಥಂ ವರಾಹಾಸ್ಮಿನ್ ಗಚ್ಛಾಮಿ ಚ ನಿರಂತರಮ್ ॥ 21 ॥**

**ದೈವೇನ ದೃಷ್ಟವಾನಸ್ಮಿ ತ್ವಾಮದ್ಯೇಹ ಧರಾಧರಂ ।**
**ಅತ್ರೈವ ನಿವಸಾಮೀತಿ ಸಂಕಲ್ಪೋ ಮಮ ವರ್ತತೇ ॥ 22 ॥**

ಇತಿ = ಇಂತು, ಅನ್ಯೋನ್ಯಂ = ಒಬ್ಬರಿಗೊಬ್ಬರು, ಭಾಷಮಾಣೌ = ಮಾತನಾಡುತ್ತಿರುವ, ಕ್ರೋಡ - ನಾರಾಯಣೌ = ಶ್ರೀವರಾಹ - ಶ್ರೀನಾರಾಯಣರಿಬ್ಬರನ್ನೂ, ಸಕೌತುಕಂ = ವಿಸ್ಮಿತರಾಗಿ, ಸಂವೀಕ್ಷ್ಯ = ಅವಲೋಕಿಸಿ, ಚ = ಮತ್ತು, ಸ್ತುತ್ವಾ = ಸ್ತೋತ್ರಮಾಡಿ, ತತಃ = ಆ ಬಳಿಕ, ತೇ = ಆ ಯಾವ, ದೇವಗಣೇ = ದೇವತೆಗಳ ಗುಂಪು, ಸ್ವಂಸ್ವಂ = ತಮ್ಮ ತಮ್ಮ, ಪದಂ = ಸ್ಥಾನವನ್ನು ಕುರಿತು, ಗತೇಸತಿ = ಪಯಣಿಸಿದಮೇಲೆ (ಪ್ರಯಾಣ ಬೆಳೆಸುತ್ತಿರಲು), ತತ್ರ = ವೇಂಕಟಾಚಲದಲ್ಲಿ, ವರಾಹಃ = ವರಾಹಸ್ವಾಮಿಯು, ಹರಿಂ = ಶ್ರೀಹರಿಯನ್ನು ಕುರಿತು, ಅಬ್ರವೀತ್ = ಹೇಳಿದನು, ವರಾಹ ಉವಾಚ = ಶ್ರೀವರಾಹದೇವನು ಮಾತನಾಡಿದನು - ಮಹಾಭಾಗ = ಮಹಾನುಭಾವನಾದ, ವರಾನನ = ಪರಮ ಸುಂದರಮುಖಿಯಾದ, ಶ್ರೀನಿವಾಸ = ಹೇ ಶ್ರೀನಿವಾಸ! ತ್ವಂ = ನೀನು, ವೈಕುಂಠಂ ತು = ವೈಕುಂಠಲೋಕವನ್ನು, ತ್ಯಕ್ತ್ವಾ = ಬಿಟ್ಟು, ಇಹ = ಇಲ್ಲಿಗೆ, ಕಿಮರ್ಥಂ = ಏತಕ್ಕಾಗಿ, ಆಗತಃ = ಬಂದವನಾದೆ? ॥ 17 ॥ ಇತಿ = ಈ ಪ್ರಕಾರವಾಗಿ, ತೇನ = ವರಾಹಮೂರ್ತಿಯಿಂದ, ಆಜ್ಞಪ್ತಃ = ಪ್ರಶ್ನಿಸಲ್ಪಟ್ಟವನಾಗಿ (ಹೇಳಲ್ಪಟ್ಟವನಾಗಿ), ಕ್ರೋಡರೂಪಿಣಂ = ವರಾಹರೂಪಿಯನ್ನು ಕುರಿತು, ಉವಾಚ = ಮಾತನಾಡಿದನು ॥ 18 ॥ ಶ್ರೀನಿವಾಸ ಉವಾಚ = ವೇಂಕಟೇಶ್ವರನು ನುಡಿದನು, ಧರಾಕಾಂತ = ಧರಣೀರಮಣನಾದ ಹೇ ವರಾಹಸ್ವಾಮಿಯೇ! ಭೃಗೋಃ = ಭೃಗುಮುನಿಯ, ಅಂಘ್ರಿಪ್ರಹಾರಾಚ್ಚ = ಪಾದಾಘಾತದಿಂದಲೂ, ರಮಾ = ಲಕ್ಷ್ಮಿಯು, ಕೋಲಾಪುರಂ = ಕೊಲ್ಲಾಪುರವನ್ನು ಕುರಿತು, ಗತಾ = ಹೊರಟುಹೋದಳು, ತೇನ ದುಃಖೇನ = ಲಕ್ಷ್ಮೀಯು ಹೊರಟಿದ್ದರಿಂದ ಉಂಟಾದ ವಿರಹದುಃಖದಿಂದ, ಸಂತಪ್ತಃ = ಪೀಡಿತನಾಗಿ, ಉತ್ತಮಂ = ಶ್ರೇಷ್ಠವಾದ, ವೈಕುಂಠಂ = ವೈಕುಂಠಲೋಕವನ್ನು, ತ್ಯಕ್ತ್ವಾ = ಬಿಟ್ಟು, ಇಹಾಗತಃ = ಇಲ್ಲಿಗೆ ಬಂದೆನು. ॥ 19 ॥ ದೇವ = ಸ್ವಾಮಿಯೇ! ತವ = ನಿನ್ನ, ದಕ್ಷಿಣೇ = ದಕ್ಷಿಣಭಾಗದಲ್ಲಿರುವ, ವಲ್ಮೀಕೆ = ಹುತ್ತದೊಳಗೆ, ನಿವಸಂತಂ = ವಾಸಮಾಡುತ್ತಿರುವ, ಮಾಂ = ನನ್ನನ್ನು, ಧೇನುಪಾಲಃ = ಗೋಪಾಲಕನು, ಅಸಿಧಾರೇಣ = ತೀಕ್ಷ್ಣವಾದ, ಕುಠಾರೇಣ = ಕೊಡಲಿಯಿಂದ, ಅತಾಡಯತ್ = ಹೊಡೆದನು, ಹಿ = ಪ್ರಸಿದ್ಧವು. ॥ 20 ॥ ತತ್‌ಕ್ಷತಂ ತು = ಆ ಹೊಡೆತದಿಂದುಂಟಾದ ಗಾಯವಾದರೋ, ಮಾಂ = ನನ್ನನ್ನು, ಬಾಧತೇ = ಬಾಧಿಸುತ್ತಿದೆ, ವರಾಹ = ಎಲೈ ವರಾಹಮೂರ್ತಿಯೇ! ನಿರಂತರಂ ಚ = ಪ್ರತಿದಿನವೂ ಕೂಡ, ಔಷಧಾರ್ಥಂ = ವ್ರಣಪರಿಹಾರದ ಔಷಧಿಗಾಗಿ, ಅಸ್ಮಿನ್ = ಈ ಬೆಟ್ಟದಲ್ಲಿ, ಗಚ್ಛಾಮಿ = ತಿರುಗಾಡುವೆನು ॥ 21 ॥ ದೈವೇನ = ದೈವಯೋಗದಿಂದ, ಇಹಧರಾಧರೇ = ಈ ಪರ್ವತದಲ್ಲಿ (ತ್ವಾಂ = ನಿನ್ನನ್ನು) ದೃಷ್ಟವಾನಸ್ಮಿ = ನೋಡಿದವನಾಗಿದ್ದೇನೆ, ಅತ್ರೈವ = ಈ ಬೆಟ್ಟದಲ್ಲಿಯೇ, ನಿವಸಾಮೀತಿ = ವಾಸಮಾಡಬೇಕೆಂದು, ಮಮ = ನನ್ನ, ಸಂಕಲ್ಪಃ = ಸಂಕಲ್ಪವು, ವರ್ತತೇ = ಇರುವುದು ॥ 22 ॥

**ಸ್ಥಲಂ ದೇಹ್ಯವನೀಕಾಂತ ಯಾವತ್ಕಲಿಯುಗಂ ಭವೇತ್ ।**
**ಇತಿ ತೇನ ಸಮಾಜ್ಞಪ್ತೋ ವರಾಹವದನೋ ಹರಿಃ ॥ 23 ॥**

ಉವಾಚ ವಚನಂ ದೇವಂ ಸ್ಥಲಂ ಮೌಲ್ಯೇನ ಗೃಹ್ಯತಾಮ್ ।
ಇತಿ ವಾಕ್ಯಂ ತತಃ ಶ್ರುತ್ವಾ ಪ್ರೋವಾಚ ಮಧುರಂ ವಚಃ ॥ 24 ॥

ಪ್ರಥಮಂ ದರ್ಶನಂ ಚ ಸ್ಯಾ ನ್ನೈವೇದ್ಯಂ ಕ್ಷೀರಸೇಚನಮ್ ।
ಇದಮೇವ ವರಂ ದ್ರವ್ಯಂ ದದಾಮಿ ಕರುಣಾನಿಧೇ ॥ 25 ॥

ದಾಸ್ಯಾಮಿ ಯತ್ತೇ ಭೂಕಾಂತ ತದಂಗೀಕುರು ಮಾಧವ ।
ವರಂ ದ್ರವ್ಯಮಿದಂ ತಾತ ಕೃಪಾಂ ಕುರು ದಯಾನಿಧೇ ॥
ಇತ್ಯುಕ್ತೋ ಹರಿಣಾ ಕ್ರೋಡೋ ಹರಯೇ ಸ್ಥಾನಕಾಂಕ್ಷಿಣೇ ।
ತದಾ ದದೌ ಹರೇಃಪಾದಶತಮಾತ್ರಂ ರಮಾಪತೇಃ ॥

ಅವನೀಕಾಂತ = ಎಲೈ ಭೂರಮಣನೇ! ಯಾವತ್ = ಎಲ್ಲಿಯವರೆಗೆ, ಕಲಿಯುಗಂ = ಕಲಿಯುಗವು, ಭವೇತ್ = ಆಗುವುದೋ (ಇರುವುದೋ), (ತಾವತ್ಪರ್ಯಂತಂ = ಅಲ್ಲಿಯವರೆಗೆ ವಾಸಮಾಡಲು), ಸ್ಥಲಂ = ಸ್ಥಳವನ್ನು, ದೇಹಿ = ಕೊಡು, ಇತಿ = ಹೀಗೆ, ತೇನ = ಶ್ರೀನಿವಾಸನಿಂದ, ಸಮಾಜ್ಞಪ್ತಃ = ಹೇಳಿಸಿಕೊಂಡಂಥ, ವರಾಹವದನೋಹರಿಃ = ವರಾಹಮುಖದ ಶ್ರೀಹರಿಯು ॥ 23 ॥ ದೇವಂ (ಪ್ರತಿ) = ಶ್ರೀನಿವಾಸನನ್ನು ಕುರಿತು, ವಚನಮುವಾಚ = ಮಾತು ಹೇಳಿದನು, ಸ್ಥಲಂ = ಜಾಗವನ್ನು, ಮೌಲ್ಯೇನ = ಕ್ರಯದ ಹಣವನ್ನು ನೀಡಿ, ಗೃಹ್ಯತಾಂ = (ನಿನ್ನಿಂದ) ತೆಗೆದುಕೊಳ್ಳಲ್ಪಡಲಿ, ತತಃ = ಆ ತರುವಾಯ, ಇತಿವಾಕ್ಯಂ = ಈಪರಿಯ ಮಾತನ್ನು, ಶ್ರುತ್ವಾ = ಕೇಳಿ, ಮಧುರಂ ವಚಃ = ಮಧುರ ನುಡಿಯನ್ನು, ಪ್ರೋವಾಚ = ಶ್ರೀನಿವಾಸನು ಹೇಳಿದನು ॥ 24 ॥ ಪ್ರಥಮಂ ದರ್ಶನಂಸ್ಯಾತ್ = ಇಲ್ಲಿಗೆ ನನ್ನ ಭಕ್ತರು ಬಂದಾಗ ಮೊದಲು ನಿನ್ನ ದರ್ಶನವನ್ನೇ ಮಾಡುವಂತಾಗಲಿ, (ಪಾ:- ತೀರ್ಥಂ = ತೀರ್ಥವನ್ನು ಸ್ವೀಕರಿಸಲಿ), ಚ = ಮತ್ತು, ಕ್ಷೀರ ಸೇಚನಂಸ್ಯಾತ್ = ಕ್ಷೀರಾಭಿಷೇಕವನ್ನು ಮಾಡಿಸುವವರಾಗಲಿ, ನೈವೇದ್ಯಂಸ್ಯಾತ್ = ನಿನಗೇ ಮೊದಲು ನೈವೇದ್ಯವಾಗಲಿ! ಕರುಣಾನಿಧೇ! = ಕಾರುಣ್ಯನಿಧಿಯೇ, ಇದಮೇವ = ಇದನ್ನೇ, ವರಂ = ಶ್ರೇಷ್ಠವಾದ, ದ್ರವ್ಯಂಯತ್ = ಈ ಬಗೆಯಾದ ಕ್ರಯದ ಹಣವನ್ನು, ತೇ = ನಿನಗೆ, ದಾಸ್ಯಾಮಿ = ಕೊಡುತ್ತೇನೆ. ಮಾಧವ = ರಮಾಪತಿಯಾದ, ಭೂಕಾಂತ = ಭೂರಮಣನಾದ ವರಾಹ ಸ್ವಾಮಿಯೇ, ತತ್ = ಅದನ್ನು, ಅಂಗೀಕುರು = ಸ್ವೀಕರಿಸು, ಹರಿಣಾ = ಶ್ರೀನಿವಾಸನಿಂದ, ಇತ್ಯುಕ್ತಃ = ಹೀಗೆ ಹೇಳಿಸಿಕೊಂಡ, ಕ್ರೋಡಃ = ವರಾಹಮೂರ್ತಿಯು, ಸ್ಥಾನಕಾಂಕ್ಷಿಣೇ = ಸ್ಥಳವನ್ನು ಬಯಸುತ್ತಿರುವ, ಹರಯೇ = ಶ್ರೀನಿವಾಸನಿಗೆ, ರಮಾಪತೇಃ = ಲಕ್ಷ್ಮೀಶನಾದ, ಹರೇಃ = ಶ್ರೀಹರಿಯ, ಪಾದಶತ ಮಾತ್ರಂ = ನೂರು ಹೆಜ್ಜೆಯಷ್ಟು ಸ್ಥಳವನ್ನು ಮಾತ್ರ, ತದಾ = ಆಗ, ದದೌ = ಕೊಟ್ಟನು.

ಪರಸ್ಪರಂ ವಿನೋದಂ ತೌ ಕುರ್ವಾಣಾವೇಕರೂಪಿಣೌ ।
ಮೋಹನಾರ್ಥಂ ಹ್ಯಭಕ್ತಾನಾಂ ಭಕ್ತಾನಾಂ ಭಕ್ತಿಸಿದ್ಧಯೇ ॥ 26 ॥

ಏವಂ ಹಿ ಕ್ರೀಡತೇ ತತ್ರ ವಾರಾಹೇ ವೇಂಕಟೇಶ್ವರಃ ।
ತದಾರಭ್ಯ ಧರಾಕಾಂತೋ ಬಕುಲಾಂ ಪಾಕಕಾರಿಣೇಮ್ ॥ 27 ॥

ಅರ್ಪಯಾಮಾಸ ದೇವಾಯ ಸೇವಾರ್ಥಂ ತಾಂ ಧರಾಪತಿಃ ।
ಭೋಜನಾರ್ಥಂ ರಮೇಶಸ್ಯ ಶ್ಯಾಮಾಕಾನ್ನಂ ನಿರಂತರಮ್ ॥ 28 ॥

**ಸಮಧು ಪ್ರೇಷಯತ್ಯನ್ನಂ ತಯಾ ಬಕುಲಮಾಲಯಾ ।**
**ಸಾ ಬಾಲಾ ಭಕ್ತಿನಿರತಾ ಶ್ರೀನಿವಾಸಸ್ಯ ಸನ್ನಿಧೌ** ॥ 29 ॥

**ಅನ್ನಪಾನೌಷಧಾದ್ಯೈಶ್ಚ ಪಾದಸಂವಹನಾದಿಭಿಃ ।**
**ಪೂಜಯಾಮಾಸ ಗೋವಿಂದಂ ಶ್ರೀನಿವಾಸಂ ನಿರಾಮಯಮ್** ॥ 30 ॥

ಏಕರೂಪಿಣೌ = ಒಬ್ಬನೇ ಆದ ಶ್ರೀನಾರಾಯಣನ ಎರಡು ರೂಪವುಳ್ಳವರಾದ, ತೌ = ಆ ವರಾಹ - ಶ್ರೀನಿವಾಸರು, ಪರಸ್ಪರ = ಹೀಗೆ ಒಬ್ಬರಿಗೊಬ್ಬರು, ವಿನೋದಂ = ವಿನೋದವನ್ನು, ಕುರ್ವಾಣೌ = ಮಾಡುತ್ತಾ, ಅಭಕ್ತಾನಾಂ = ಭಕ್ತರಲ್ಲದ (ದೈತ್ಯರ), ಮೋಹನಾರ್ಥಂ = ತಮ್ಮ ವಿಷಯದಲ್ಲಿ ಮೋಹಗೊಳ್ಳುವಂತೆ ಮಾಡಲೋಸುಗವೂ, ಭಕ್ತಾನಾಂ = ಪ್ರಿಯಭಕ್ತರಿಗೆ, ಭಕ್ತಿಸಿದ್ಧಯೇ = ಭಕ್ತಿಯುಂಟಾಗುವ ಹಾಗೆ ಮಾಡಿದರು ॥ 26 ॥ ಏವಂ = ಈ ಬಗೆಯಾಗಿ, ತತ್ರ ವರಾಹೇ = ಆ ವರಾಹ ಪರ್ವತದಲ್ಲಿ, ವೇಂಕಟೇಶ್ವರಃ = ಶ್ರೀನಿವಾಸನು, ಕ್ರೀಡತೇ = ಕ್ರೀಡಿಸುತ್ತಿರುವನು, ಹಿ = ಪ್ರಸಿದ್ಧವು, ಧರಾಕಾಂತಃ = ಧರಣೀವಲ್ಲಭನಾದ ವರಾಹಸ್ವಾಮಿಯು, ತದಾರಭ್ಯ = ಅಲಾಗಾಯಿತು, ಪಾಕಕಾರಿಣೀಂ = ಅಡಿಗೆ ಮಾಡುವವಳಾದ, ತಾಂ = ಆ ಬಕುಳಮಾಲಿಕೆಯನ್ನು ॥ 27 ॥ ಸೇವಾರ್ಥಂ = ಪರಿಚಾರಿಕೆಗಾಗಿ ದೇವಾಯ = ಶ್ರೀನಿವಾಸನಿಗೋಸ್ಕರವಾಗಿ, ಧರಾಪತಿಃ = ಭೂಕಾಂತನು, ಅರ್ಪಯಾಮಾಸ = ಸಮರ್ಪಿಸಿದನು. ರಮೇಶಸ್ಯ = ಲಕ್ಷ್ಮೀರಮಣನಿಗೆ, ಭೋಜನಾರ್ಥಂ = ಆಹಾರಕ್ಕಾಗಿ (ಭೋಜನಕ್ಕಾಗಿ), ಶ್ಯಾಮಾಕಾನ್ನಂ = ಸ್ಯಾಮೇ ಅನ್ನವನ್ನು, ಸಮಧು = ಜೇನುತುಪ್ಪದೊಡನೆ, ಅನ್ನಂ = ಆಹಾರವನ್ನು, ತಯಾ ಬಕುಲಮಾಲೆಯಾ = ಆ ಬಕುಳಮಾಲಿಕೆಯೊಡನೆ, ಪ್ರೇಷಯತಿ = ಕಳುಹಿಸುವನು, ಶ್ರೀನಿವಾಸಸ್ಯ ಸನ್ನಿಧೌ= ಶ್ರೀವೇಂಕಟೇಶ್ವರನ ಸನ್ನಿಧಿಯಲ್ಲಿ, ಸಾಬಾಲಾ = ಬಕುಳಾದೇವಿಯು, ಭಕ್ತಿನಿರತಾ = ಭಕ್ತಿಯುಕ್ತಳಾಗಿ ॥ 29 ॥ ಅನ್ನಪಾನೌಷಧಾದ್ಯೈಃ = ಕಾಲಕಾಲಕ್ಕೆ ಸರಿಯಾಗಿ ಆಹಾರವನ್ನು ತಯಾರಿಸಿ ಭೋಜನ ಮಾಡಿಸುವುದು, (ಸ್ನಾನಕ್ಕೆ, ಕೈಕಾಲಿಗೆ) ಕುಡಿಯಲು, ನೀರು ಕೊಡುವುದು, ಗಾಯಕ್ಕೆ ಔಷಧೋಪಚಾರ ಮಾಡುವುದು, ಚ = ಮತ್ತು, ಪಾದಸಂವಹನಾದಿಭಿಃ- ಪಾದಸೇವೆ (ಕಾಲುಗಳನ್ನು ಒತ್ತುವುದು) ಮೊದಲಾದ ಕೈಂಕರ್ಯಗಳಿಂದ, ನಿರಾಮಯಂ = ರೋಗರಹಿತನಾದ, ಗೋವಿಂದಂ = ಗೋವರ್ಧನ ಗಿರಿಧಾರಿಯಾದ, ಶ್ರೀನಿವಾಸಂ = ವೇಂಕಟೇಶ್ವರನನ್ನು, ಪೂಜಯಾಮಾಸ = ಸೇವಿಸಿದಳು(ಪೂಜಿಸುತ್ತಿದ್ದಳು) ॥30॥

***ಋಷಯ ಊಚುಃ***

**ಶ್ರುತಂ ಸೂತ ಮಹಾಭಾಗ ದೇವಾಗಮನಮುತ್ತಮಮ್ ।**
**ವರಾಹದರ್ಶನಂ ನಿತ್ಯಂ ವಾಸಂ ವೇಂಕಟಭೂಧರೇ** ॥ 31 ॥

ಋಷಯಊಚುಃ = ಶೌನಕಾದಿ ಋಷಿಗಳು ಸೂತರನ್ನು ಕುರಿತು ಇಂತೆಂದರು. ಮಹಾಭಾಗ = ಮಹನೀಯನಾದ, ಸೂತ = ಸೂತಾಚಾರ್ಯನೇ!, ಉತ್ತಮಂ = ಶ್ರೇಷ್ಠವಾದ, ದೇವಾಗಮನಂ = ಶ್ರೀಹರಿಯು ಬಂದುದು, ಅಥವಾ ಶ್ರೀವರಾಹಸ್ವಾಮಿಯ ಆಗಮನ, ವರಾಹದರ್ಶನಂ = ಶ್ರೀನಿವಾಸನು ವರಾಹಮೂರ್ತಿಯನ್ನು ಕಂಡದ್ದು ವೇಂಕಟಭೂದರೇ = ವೇಂಕಟಾಚಲದಲ್ಲಿ, ನಿತ್ಯಂ = ಸದಾ, ವಾಸಃ = ವಾಸಿಸುತ್ತಿರುವುದು, ಇದೇ ಮುಂತಾದ ವಿಚಾರಗಳು, ಶ್ರುತಂ = ನಮ್ಮಿಂದ ಕೇಳಲ್ಪಟ್ಟಿತು. ॥ 31 ॥

**ಬಕುಲಾ ಸೇವಕಾ ಪ್ರೋಕ್ತಾ ಕಾ ಸಾ ಪೂರ್ವಂ ವದಸ್ವ ನಃ ।**

*ಸೂತ ಉವಾಚ -*

ಪುರಾ ಯಶೋದಾ ಬಕುಲಾ ಕೃಷ್ಣಸ್ಯ ಜನನೀಹ್ಯಭೂತ್ ।
ಅದೃಷ್ಟ್ವಾನಂತರೂಪಸ್ಯ ಕೃಷ್ಣಸ್ಯ ತನಯಸ್ಯ ಸಾ ॥ 32 ॥
ಕಲ್ಯಾಣಂ ಸುಖದಂ ಸ್ವಸ್ಯ ತದಯಾಚತ ತಂ ಹರಿಮ್ ।

*ಯಶೋದೋವಾಚ-*

ಮನಸ್ಸೀದತಿ ಮೇ ಕೃಷ್ಣ! ತವ ಕಲ್ಯಾಣವೀಕ್ಷಣೇ ॥
ದರ್ಶಯಸ್ವ ರಮಾನಾಥ ಯಶೋದಾನಂದವರ್ಧನ ।
ಕಲ್ಯಾಣಾದಿ ಮಹಾಪುಣ್ಯಂ ಪಾವನಂ ಚರಿತಂ ತವ ॥
ತಥೇತ್ಯುಕ್ತೋ ರಮಾನಾಥಃ ಸೋವದನ್ಮಧುರಂ ವಚಃ ।

*ಶ್ರೀಭಗವಾನುವಾಚ-*

ಜನ್ಮನ್ಯನಂತರೇ ದೇವಿ ತಾವಕೀನಂ ಮನೋರಥಮ್ ।
ಶ್ರೀಶೈಲೇ ಪೂರಯಿಷ್ಯಾಮಿ ಕಿಂಚಿತ್ಕಾಲಾದನಂತರಮ್ ॥
ದೇವೇನೇತ್ಥಂ ದತ್ತವರಾ ಸಾತ್ಯಜತ್ತೇನ ಹೇತುನಾ ।
ಕಲೇವರಂ ತು ಕಲ್ಯಾಣೇ ಯಶೋದಾನಂದವಲ್ಲಭಾ ॥ 33 ॥

ತಸ್ಯಾಃ ಪ್ರೀತ್ಯೈ ವಾಸುದೇವೋ ಅಷ್ಟಾವಿಂಶತಿಮೇ ಕಲೌ ।
ಆವಿರ್ಭೂಯ ಯಶೋದಾಯಾಸ್ತೋಷಕೈರ್ಗುಣಕರ್ಮಭಿಃ ॥ 34 ॥

ಕ್ರೀಡನ್ನಾಸ್ತೇ ಜಗದ್ಯೋನಿಃ ನಿರ್ದೋಷೋಽಪೀಶ್ವರೋಽವಸನ್ ।
ಕಲೌ ಕಲ್ಮಷಚಿತ್ತಾನಾಂ ಪಾಪಚಾರಪರಾತ್ಮನಾಮ್ ॥ 35 ॥

ರಕ್ಷಣಾರ್ಥಂ ರಮಾಕಾಂತೋ ರಮತೇ ಪ್ರಾಕೃತೋ ಯಥಾ ।
ದೈತ್ಯಾನಾಂ ಮೋಹನಾರ್ಥಾಯ ಸುರಾಣಾಂ ಮುಕ್ತಿಕಾರಣಾತ್ ॥ 36 ॥

ಸ್ವಭಕ್ತಾನಾಂ ಹಿತಾಯೈವ ವಿರಕ್ತಾನಾಂ ವಿಶೇಷತಃ ।
ಮುಕ್ತಿಮಾಪಾದಯನ್ ದೇವಃ ಕ್ರೀಡತೇ ಪ್ರಾಕೃತಾಕೃತಿಃ ॥ 37 ॥

ಬಕುಲಾ = ಬಕುಳಮಾಲಿಕೆಯು, ಸೇವಿಕಾ ಪ್ರೋಕ್ತಾ = ಶ್ರೀಹರಿಯ ಭೃತ್ಯಳಾಗಿ ಸೇವಿಸಿದಳೆಂದು (ನಿನ್ನಿಂದ) ಹೇಳಲ್ಪಟ್ಟಿತು. ಪೂರ್ವಂ = ಹಿಂದೆ, ಸಾಕಾ = ಆ ಬಕುಳಾದೇವಿಯು ಯಾರು (ಎಂಬುದನ್ನು), ನಃ = ನಮಗೆ, ವದಸ್ವ = ಹೇಳುವವನಾಗು, ಸೂತ ಉವಾಚ = ಸೂತಾಚಾರ್ಯನು ಹೇಳಲಾರಂಭಿಸಿದನು, ಪುರಾ = ಪೂರ್ವದಲ್ಲಿ, ಬಕುಲಾ = ಬಕುಳಮಾಲಿಕೆಯು, ಕೃಷ್ಣಸ್ಯ = ಶ್ರೀಕೃಷ್ಣನ, ಜನನೀ = ತಾಯಿಯಾದ, ಯಶೋದಾ = ಯಶೋದಾದೇವಿಯು,

ಅಭೂತ್ = ಆದಳು, (ಆಗಿದ್ದಳು), ಹಿ = ಇದು ಪ್ರಸಿದ್ಧವು, ಸಾ = ಆ ಯಶೋದೆಯು, ಸ್ವಸ್ಯ = ತನ್ನ (ತನಗೆ), ಸುಖದಂ = ಸಂತೋಷಪ್ರದನಾದ, ಅನಂತರೂಪಸ್ಯ = ಅನಂತಾವತಾರ ರೂಪಗಳುಳ್ಳ, ತನಯಸ್ಯ = ಮಗನಾದ, ಕೃಷ್ಣಸ್ಯ = ಶ್ರೀಕೃಷ್ಣನ, ।। 32 ।। ಕಲ್ಯಾಣಂ = ವಿವಾಹಮಹೋತ್ಸವಾದಿ ಮಂಗಳ ಕಾರ್ಯಗಳನ್ನು, ಅದೃಷ್ಟ್ವಾ = ನೋಡದಲೇ (ನೋಡಲಿಲ್ಲವಾದ್ದರಿಂದ), ತಂ ಹರಿಂ = ಆ ಶ್ರೀಕೃಷ್ಣನನ್ನು, ತತ್ = ಕೃಷ್ಣನ ಲಗ್ನ ಮಹೋತ್ಸವಾದಿಗಳನ್ನು ನೋಡಲಾಶಿಸಿ ಅದನ್ನು ತೋರಿಸುವಂತೆ, ಅಯಾಚತ = ಬೇಡಿದಳು.

ಯಶೋದೋವಾಚ = ಯಶೋದಾದೇವಿಯು ಹೇಳಿದಳು – ಕೃಷ್ಣ = ಹೇ ಕೃಷ್ಣ! ತವ = ನಿನ್ನ, ಕಲ್ಯಾಣವೀಕ್ಷಣೇ = ಮದುವೆಯನ್ನು ನೋಡಲು, ಮೇ ಮನಃ = ನನ್ನ ಮನಸ್ಸು, ಸೀದತಿ = ವಿಷಾದ ಹೊಂದಿದೆ (ಅಂದರೆ ಈವರೆಗೆ ನಿನ್ನ ವಿವಾಹವನ್ನು ನೋಡಲಾಗಲಿಲ್ಲವಲ್ಲಾ ಎಂದು ನನ್ನ ಮನಸ್ಸು ವಿಷಾದಿಸುತ್ತಿದೆ ಎಂದು ಭಾವ), ಯಶೋದಾನಂದವರ್ಧನ = ಯಶೋದೆಯಾದ ನನ್ನ ಸಂತೋಷವನ್ನು ಉಕ್ಕೇರಿಸುವವನೇ, ರಮಾಕಾಂತ = ಕಮಲಾಪತಿಯೇ!, ತವ = ನಿನ್ನ, ಕಲ್ಯಾಣಾದಿ ಮಹಾಪುಣ್ಯಂ = ವಿವಾಹಮಹೋತ್ಸವ ಮೊದಲಾದ ಮಹಾಪುಣ್ಯಕರವಾದ, ಪಾವನಂ = ಪವಿತ್ರವಾದ, ಚರಿತಂ = ಚರಿತೆಯನ್ನು, ದರ್ಶಯಸ್ವ = (ನನಗೆ) ತೋರಿಸುವವನಾಗು (ಎಂದು ಕೋರಿದಳು), ತಥೇತ್ಯುಕ್ತಃ = ಹಾಗೆಯೇ ಆಗಲಿ ಎಂದ, ಸಃ = ಆ, ರಮಾನಾಥಃ = ರಮೆಯರಸನಾದ ಕೃಷ್ಣನು, ಮಧುರಂ = ಸಕ್ಕರೆಯಂತೆ ಮಧುರವಾದ, ವಚಃ = ಮಾತನ್ನು, ಅವದನ್ = ಹೇಳಿದನು.

ಶ್ರೀಭಗವಾನುವಾಚ = ಪೂಜ್ಯನಾದ ಕೃಷ್ಣನು ಮಾತನಾಡಿದನು. ದೇವಿ = ತಾಯಿಯಾದ ಯಶೋದೆಯೇ! ಕಿಂಚಿತ್ಕಾಲಾನಂತರಂ = ಕೆಲಕಾಲಕಳೆದ ಮೇಲೆ, ಜನ್ಮನ್ಯನಂತರೇ = ನಿನ್ನ ಮುಂದಿನ ಜನ್ಮದಲ್ಲಿ, ಶ್ರೀಶೈಲೇ = ಶ್ರೀಶೈಲದಲ್ಲಿ, ತಾವಕೀನಂ = ನಿನ್ನ, ಮನೋರಥಂ = ಮನೋಕಾಮನೆಯನ್ನು, ಪೂರಯಿಷ್ಯಾಮಿ = ಪೂರ್ಣಗೊಳಿಸುತ್ತೇನೆ, ಇತ್ಥಂ = ಈ ಪ್ರಕಾರವಾಗಿ, ದೇವೇನ = ಕೃಷ್ಣನಿಂದ, ದತ್ತವರಾ = ಕೊಡಲ್ಪಟ್ಟ ವರವುಳ್ಳವಳಾದ (ವರವನ್ನು ಪಡೆದು), ಸಾ = ಆ ಯಾವ, ಕಲ್ಯಾಣೀ = ಮಂಗಳಾಂಗಿಯಾದ, ಯಶೋದಾನಂದವಲ್ಲಭಾ = ಸಂತೋಷಕ್ಕೆ ಒಡೆಯಳಾದ ಯಶೋದೆಯು (ಯಶೋದೆಯು ಆನಂದಕ್ಕೆ ಸ್ವಾಮಿನಿಯಾಗಿ), ತೇನಹೇತುನಾ = ಮಗನಾದ ಕೃಷ್ಣನ ಕಲ್ಯಾಣೋತ್ಸವವನ್ನು ನೋಡಬೇಕೆಂಬ ನಿಮಿತ್ತದಿಂದ, ಕಲೇವರಂ ತು = ತನ್ನ ದೇಹವನ್ನು, ತ್ಯಜತ್ = ತ್ಯಜಿಸಿದಳು ।। 33 ।। ವಾಸುದೇವಃ = ವಸುದೇವನ ಮಗನಾದ ಶ್ರೀಕೃಷ್ಣನು, ಅಷ್ಟಾವಿಂಶತಿಮೇ = ಇಪ್ಪತ್ತೆಂಟನೆಯದಾದ, ಕಲೌ = ಕಲಿಯುಗದಲ್ಲಿ, ತಸ್ಯಾಃ = ತಾಯಿಯಾದ ಯಶೋದಾದೇವಿಯ, (ಅಥವಾ ತಾಯಿಯಾದ ಯಶೋದಾದೇವಿಯ ಅವತಾರಳಾದ ಬಕುಳಮಾಲಿಕೆಯ) ಪ್ರೀತ್ಯೈ = ಪ್ರೀತಿಗಾಗಿ (ಸಂತೋಷಕ್ಕಾಗಿ), ಯಶೋದಾಯಾಃ = ಯಶೋದಾದೇವಿಗೆ, ತೋಷಕ್ಕೆ = ಆನಂದವನ್ನುಂಟುಮಾಡುವ, ಗುಣಕರ್ಮಭಿಃ = ತನ್ನ ಅವತಾರ ಗುಣಗಳು ಮತ್ತು ಕೃತಿ (ಕಾರ್ಯ)ಗಳಿಂದ ।। 34 ।। ಜಗದ್ಯೋನಿಃ = ಜಗತ್ಕಾರಣನಾದ, ನಿರ್ದೋಷೋಽಪಿ = ದೋಷರಹಿತನಾದಾಗ್ಯೂ, ಈಶ್ವರಃ = ಚೇತನಾಚೇತನ ಪ್ರಪಂಚದ ಸೃಷ್ಟ್ಯಾದ್ಯಾದಿಗಳಿಗೆ ನಿಯಾಮಕನಾದ ಅವನು, ಅವಸನ್ = ಇರುವವನಾಗಿ, ಕ್ರೀಡನ್ನಾಸ್ತೇ = ಕ್ರೀಡಿಸುತ್ತಿದ್ದಾನೆ.

ಕಲೌ = ಕಲಿಯುಗದಲ್ಲಿ, ಕಲ್ಮಷ ಚಿತ್ತಾನಾಂ = ಪಾಪಚಿತ್ತರಾದ, ಪಾಪಾಚಾರ ಪರಾತ್ಮನಾಂ – ಪಾಪಾಚಾರ = ಪಾಪಕರವಾದ ಆಚಾರದಲ್ಲಿ (ನಡತೆಯಲ್ಲಿ), ಪರಾ = ಆಸಕ್ತವಾದ, ಆತ್ಮನಾಂ = ಮನಸ್ಸುಳ್ಳವರ ।। 35 ।। ರಕ್ಷಣಾರ್ಥಂ = ಸಂರಕ್ಷಣೆಗಾಗಿ, ರಮಾಕಾಂತಃ = ಶ್ರೀಪತಿಯಾದ ವೇಂಕಟೇಶ್ವರನು, ಪ್ರಾಕೃತೋ ಯಥಾ = (ಅಪ್ರಾಕೃತಾನಂದ ಶರೀರನಾಗಿದ್ದರೂ) ಪ್ರಕೃತಿ ಸಂಬಂಧವುಳ್ಳ ಸಾಮಾನ್ಯ ಮಾನವರಂತೆ (ಹುಲುಮಾನವರಂತೆ), ರಮತೇ = ಕ್ರೀಡಿಸುವನು, ದೈತ್ಯಾನಾಂ = ಅಸುರಜನರಿಗೆ, ಮೋಹನಾರ್ಥಾಯ = ಮೋಹನವನ್ನುಂಟು ಮಾಡಲು, (ಭಗವದ್ವಿಷಯದಲ್ಲಿ

ಅಜ್ಞಾನವನ್ನುಂಟು ಮಾಡಲು), ಸುರಾಣಾಂ = ದೇವತೆಗಳಿಗೆ, ಮುಕ್ತಿಕಾರಣಾತ್ = ಮೋಕ್ಷವಾಗಬೇಕೆಂಬ ಕಾರಣದಿಂದ (ಮೋಕ್ಷವಾಗಲೆಂದು) ॥ 36 ॥ ಸ್ವಭಕ್ತಾನಾಂ = ತನ್ನ ಭಕ್ತರಿಗೆ, ಹಿತಾಯೈವ = ಹಿತಕ್ಕಾಗಿಯೇ, ವಿಶೇಷತಃ = ಹೆಚ್ಚಾಗಿ, ವಿರಕ್ತಾನಾಂ = ವೈರಾಗ್ಯಶಾಲಿಗಳಾದ (ಸ್ವ ಭಕ್ತಾನಾಂ = ತನ್ನ ಭಕ್ತರಿಗೆ) ದೇವಃ = ಪ್ರಭುವಾದ ಶ್ರೀಹರಿಯು, ಮುಕ್ತಿ ಮಾಪಾದಯನ್ = ಮೋಕ್ಷ (ಸುಖವನ್ನು) ತಂದುಕೊಡುತ್ತಾ, ಪ್ರಾಕೃತಾಕೃತಿಃ = ಸಾಮಾನ್ಯ ಮಾನವ ರೂಪವುಳ್ಳವನಾಗಿ, ಕ್ರೀಡತೇ = ಕ್ರೀಡಿಸುತ್ತಿದ್ದಾನೆ. ॥ 37 ॥

**ಕ್ರೀಡತೇಽತ್ರಾತ್ಮಕೈವಲ್ಯೋ ಜಗತ್ಪಾಲಕಬಾಲಕಃ ।**
**ಜಗನ್ಮೋಹನ ಸೌಂದರ್ಯ ಲೀಲಾಮಾನುಷಮೂರ್ತಿಮಾನ್ ॥ 38 ॥**

**ನ ಕೃತಂ ದೇವಸಂಘೈಶ್ಚ ನ ಕೃತಂ ವಿಶ್ವಕರ್ಮಣಾ ।**
**ಸ್ವೇಚ್ಛಯಾ ಕ್ರೀಡತೇ ತತ್ರ ಇಚ್ಛಾರೂಪವಿರಾಜಿತಃ ॥ 39 ॥**

ಆತ್ಮಕೈವಲ್ಯಃ = ಮೋಕ್ಷಸ್ವರೂಪನಾದ, ಜಗದ್ಬಾಲಕ ಬಾಲಕಃ - ಜಗತ್ = ಜಗದ್ರೂಪನಾದ, ಬಾಲಕಃ = ಬಾಲಕನೇ ಬಾಲಕಃ = ಮಗುವಾಗುಳ್ಳ ಶ್ರೀನಿವಾಸನು (ಅಥವಾ ಪ್ರಳಯಕಾಲದಲ್ಲಿ ತನ್ನ ಉದರದಲ್ಲಿ ಸಮಸ್ತ ಪ್ರಪಂಚವನ್ನೂ ಇಟ್ಟುಕೊಂಡಿರುವುದರಿಂದ ಅದೊಂದು ಮಗುವಿದ್ದಂತೆ, ಸೃಷ್ಟಿಕಾಲದಲ್ಲಿ ಅದನ್ನು ಹೊರತರುವುದರಿಂದ ಅದಕ್ಕೆ ತಾನು ತಾಯಿಯಿದ್ದಂತೆ, ಇಂತಹ ಮಹಾಮಹಿಮನಾದ ವಟಪತ್ರಶಾಯಿಯಾದ ಶ್ರೀಹರಿಯೆಂಬ ಬಾಲಕನು) ಜಗನ್ಮೋಹನ ಸೌಂದರ್ಯ ಲೀಲಾಮಾನುಷವಿಗ್ರಹಃ - ಜಗನ್ಮೋಹನ = ಇಂತು ಜಗತ್ತನ್ನು ಮೋಹಗೊಳಿಸುವ, ಸೌಂದರ್ಯ = ಅತಿಶಯ ಸೌಂದರ್ಯದಿಂದ ಕಂಗೊಳಿಸುವ, ಲೀಲಾ = ಕೇವಲ ಕ್ರೀಡೆಗಾಗಿ (ಲೀಲೆಗಾಗಿ), ಮಾನುಷ ಮೂರ್ತಿಮಾನ್ = ಮಾನವಾಕಾರ ಧರಿಸಿರುವ ವೇಂಕಟೇಶ್ವರನು, ಕ್ರೀಡತೇ = ವೇಂಕಟಗಿರಿಯಲ್ಲಿ ಆಟವಾಡುತ್ತಿರುವವನು ॥ 38 ॥ ದೇವಸಂಘೈಃ = ಈ ರೂಪವು ದೇವತೆಗಳ ಸಮೂಹದಿಂದ, ನಕೃತಂ = ನಿರ್ಮಿಸಲ್ಪಡಲಿಲ್ಲ, ಚ = ಮತ್ತು, ವಿಶ್ವಕರ್ಮಣಾ = ಜಗತ್ಸೃಷ್ಟಿಕರ್ತನಾದ ಬ್ರಹ್ಮನಿಂದ, (ಅಥವಾ ವಿಶ್ವಕರ್ಮಣಾ = ದೇವಬಡಗಿಯಾದ ವಿಶ್ವಕರ್ಮನಿಂದ) ನಕೃತಂ = ಮಾಡಲ್ಪಡಲಿಲ್ಲ; ಸ್ವೇಚ್ಛಯಾ = ಶ್ರೀಹರಿಯು ತನ್ನ ಇಚ್ಛೆಯಿಂದಲೇ, ಇಚ್ಛಾರೂಪವಿರಾಜಿತಃ = ತನಗಿಷ್ಟವಾದ ರೂಪದಿಂದ ಕಂಗೊಳಿಸುತ್ತಾ, ತತ್ರ = ವೇಂಕಟಾಚಲದಲ್ಲಿ, ಕ್ರೀಡತೇ = ವಿಹಾರಮಾಡುತ್ತಿದ್ದಾನೆ ॥ 39 ॥

**ಇತ್ಯೇವಂ ಕಾರಣಾದೇವ ಯಶೋದಾ ಬಕುಲಾಭವತ್ ।**
**ಸಾ ಕರಿಷ್ಯತಿ ಕಲ್ಯಾಣಂ ಹರೇರ್ವೈಕುಂಠವಾಸಿನಃ ॥ 40 ॥**

**ಕಿಮಲಭ್ಯಂ ಹರೌ ತುಷ್ಟೇ ಜ್ಞಾನವಿಜ್ಞಾನಸಂಪದಃ ।**
**ಕಶ್ಚಿದ್ದೇವಂ ಪೂಜಯಂತಿ ಕಶ್ಚಿದ್ದೇವೇನ ಪೂಜ್ಯತೇ ॥ 41 ॥**

**ಹನೂಮತಾ ಪೂಜಿತೋಽಪಿ ಸ್ವಯಮರ್ಜುನಮರ್ಚತಿ ।**
**ಕೋ ವರ್ಣಯೇದ್ಧರೇಃ ಕ್ರೀಡಾಂ ವಿಚಿತ್ರಾಂ ಜನಪಾವನೀಮ್ ॥ 42 ॥**

*ವಿಶೇಷಾಂಶ:-* ತಿರುಪತಿಯ ಬೆಟ್ಟದ ಮೇಲೆ ವಿರಾಜಿಸುತ್ತಿರುವ ಶ್ರೀನಿವಾಸನು ಒಂದು ವಿಗ್ರಹ(ಪ್ರತಿಮೆ) ಮಾತ್ರವಲ್ಲ, ಶ್ರೀಹರಿಯೇ ಅಲ್ಲಿ ಸಾಕ್ಷಾತ್ತಾಗಿ ಕಂಗೊಳಿಸುತ್ತಿದ್ದಾನೆ. ಬ್ರಹ್ಮ, ವಿಶ್ವಕರ್ಮ ಅಥವಾ ದೇವತೆಗಳು ಯಾರೂ ಇತರ

ದೇವತಾ ಪ್ರತಿಮೆಗಳಂತೆ ಅದನ್ನು ಮಾಡಿದ್ದಲ್ಲ, ಯೋಗ್ಯತೆಯಿಲ್ಲದ ಸಾಮಾನ್ಯ ಮಾನವರಿಗೆ ಹರಿಯು ಶಿಲಾರೂಪದಿಂದ ಗೋಚರಿಸಿದರೂ ಏಕಾಂತ ಭಕ್ತರಾದ ಜ್ಞಾನಿಗಳಿಗೆ ಸಾಕ್ಷಾತ್ ತನ್ನ ಸ್ವರೂಪವನ್ನೇ ದರ್ಶನ ಮಾಡಿಸುವನು. ಆದ್ದರಿಂದ ಶ್ರೀನಿವಾಸನು ಅಲ್ಲಿ ಪ್ರತ್ಯಕ್ಷವಾಗಿದ್ದಾನೆಂದು ತಿಳಿಯಬೇಕು.

ಇತ್ಯೇವಂ ಕಾರಣಾದೇವ = ಹಿಂದೆ ಹೇಳಿದಂತೆ ಶ್ರೀಕೃಷ್ಣನ ವಿವಾಹೋತ್ಸವವನ್ನು ಕಾಣಬೇಕೆಂಬ ಕಾರಣದಿಂದಲೇ, ಯಶೋದಾ = ಯಶೋದಾದೇವಿಯು, ಬಕುಲಾ ಅಭವತ್ = ಬಕುಳಾದೇವಿಯಾಗಿ ಜನಿಸಿದಳು, ವೈಕುಂಠವಾಸಿನಃ = ಸಿರಿವೈಕುಂಠ ವಾಸಿಯಾದ, ಹರೇಃ = ಶ್ರೀನಿವಾಸನಿಗೆ, ಸಾ = ಆ ಬಕುಳಮಾಲಿಕೆಯು, ಕಲ್ಯಾಣಂ = ಲಗ್ನ ಮಹೋತ್ಸವವನ್ನು, ಕರಿಷ್ಯತಿ = ಮಾಡಿಸುವಳು. || 40 || ಹರೌ ತುಷ್ಟೇ = ಶ್ರೀಹರಿ ಪರಮಾತ್ಮನು ಸಂತೋಷಗೊಂಡರೆ, ಕಿಮಲಭ್ಯಂ = ಯಾವುದು ತಾನೆ ದೊರಕದಿದ್ದೀತು? ಜ್ಞಾನವಿಜ್ಞಾನ ಸಂಪದಃ = ತತ್ವಜ್ಞಾನ ವಿಶೇಷಜ್ಞಾನ (ವಿಜ್ಞಾನ), ಸಂಪದಃ = ಸಿರಿಸಂಪತ್ತುಗಳು ದೊರಕುವುವು, ಕಶ್ಚಿತ್ = ಓರ್ವ ಭಕ್ತನು, ದೇವಂ = ಭಗವಂತನನ್ನು, ಪೂಜಯತೇ = ಪೂಜಿಸುವನು, ಕಶ್ಚಿತ್ = ಮತ್ತೊಬ್ಬ ಭಕ್ತನು, ದೇವೇನ = ಶ್ರೀಹರಿಯಿಂದ, ಪೂಜ್ಯತೇ = ಪೂಜೆಗೊಳ್ಳುತ್ತಾನೆ. || 41 || ಹನೂಮತಾ = ಹನೂಮಂತನಿಂದ, ಪೂಜಿತೋಽಪಿ = ರಾಮಾವತಾರ ಕಾಲದಲ್ಲಿ ಪೂಜಿತನಾಗಿದ್ದರೂ, ಸ್ವಯಂ = ಕೃಷ್ಣಾವತಾರದಲ್ಲಿ ತಾನೇ, ಅರ್ಜುನಂ = ಭಕ್ತನಾದ ಅರ್ಜುನನನ್ನು, ಅರ್ಚತಿ = ಆರಾಧಿಸುವನು! ಹರೇಃ = ಶ್ರೀಹರಿಪರಮಾತ್ಮನ, ವಿಚಿತ್ರಾಂ = ವಿಚಿತ್ರವಾದ (ಅದ್ಭುತಾಶ್ಚರ್ಯಕರವಾದ) ಜನಪಾವನೀಂ = ಭಕ್ತಜನರನ್ನು ಪಾವನಗೊಳಿಸುವ, ಕ್ರೀಡಾಂ = ಆಟವನ್ನು, ಕೋ ವರ್ಣಯೇತ್ = ಯಾರು ವರ್ಣಿಸಲು ಸಾಧ್ಯ? || 42 ||

**ನಿತ್ಯಶುದ್ಧಸ್ಯ ವೈ ವಿಷ್ಣೋಃ ಕಿಮನ್ಯಸ್ಯಾಭಿವಂದನೇ |**
**ಕೃತೇ ಪುಣ್ಯಂ ಋಷೀಣಾಂ ತು ನ ಕೃತೇ ದೋಷಸಂಗ್ರಹಃ || 43 ||**

**ತಸ್ಮಾತ್ಪೂಜ್ಯಸ್ಸುರೈರ್ಯಜ್ಞೇ ಋಷಿಭಿಸ್ತತ್ತ್ವಕೋವಿದೈಃ |**
**ಪಿತೃಭಿರ್ಭೂಮಿಪೈರ್ವಿಪ್ರೈಃ ಮಾನವೈ ರಾಕ್ಷಸೈರ್ಜನೈಃ || 44 ||**

ನಿತ್ಯಶುದ್ಧಸ್ಯ = ನಿತ್ಯವೂ ಶುದ್ಧವಾಗಿರುವ (ದೋಷವೇ ಇಲ್ಲದಿರುವ) ವಿಷ್ಣೋಃ = ಶ್ರೀಹರಿಪರಮಾತ್ಮನಿಗೆ, ಅನ್ಯಸ್ಯ = ಬೇರೊಬ್ಬರಿಗೆ, ಅಭಿವಂದನೆ = ನಮಸ್ಕಾರ ಮಾಡಿದರೂ ಸಹ, ಕಿಂ = ಪ್ರಯೋಜನವೇನು? ಕಿಂ = ಅದರಿಂದ ದೋಷವೇನು? ಋಷೀಣಾಂತು = ಋಷಿಮುನಿಗಳಿಗಾದರೂ, ಕೃತೇ = (ಲೋಕಶಿಕ್ಷಣಕ್ಕಾಗಿ) ಪೂಜಾ ನಮಸ್ಕಾರಾದಿಗಳನ್ನು ಮಾಡಿದರೆ, ಪುಣ್ಯಂ = ಪುಣ್ಯವು, ಅದರಿಂದ, ದೋಷ ಸಂಗ್ರಹಃ = ಪಾಪಗಳಿಕೆಯು, ನಕೃತಃ = ಮಾಡಿದಂತಾಗಲಿಲ್ಲ. || 43 || ತತ್ತ್ವಕೋವಿದೈಃ = ತತ್ತ್ವಜ್ಞಾನ ಕೋವಿದರಾದ, ಋಷಿಭಿಃ = ಋಷಿಮುನಿಗಳಿಂದ, ಸುರೈಃ = ದೇವತೆಗಳಿಂದ ಪಿತೃಭಿಃ = ಪಿತೃದೇವತೆಗಳಿಂದ ಭೂಮಿಪೈಃ = ರಾಜರಿಂದ, ವಿಪ್ರೈಃ = ಬ್ರಾಹ್ಮಣರಿಂದ, ಮಾನವೈಃ = ಚಾತುರ್ವರ್ಣ್ಯದ ಉಳಿದ ವೈಶ್ಯ ಶೂದ್ರಾದಿಗಳಿಂದಲೂ, ರಾಕ್ಷಸೈರ್ಜನೈಃ = ರಾಕ್ಷಸಜನರಿಂದಲೂ (ರಾಕ್ಷಸೈರ್ಜಡೈಃ = ರಾಕ್ಷಸರಿಂದಲೂ, ಅಚೇತನ ವಸ್ತುಗಳಿಂದಲೂ) ತಸ್ಮಾತ್ = ಆದ ಕಾರಣದಿಂದ, ಯಜ್ಞೈಃ = ಯಜ್ಞಯಾಗಾದಿಗಳಿಂದ, ಪೂಜ್ಯಃ = ಶ್ರೀಹರಿಯು ಪೂಜ್ಯನಾಗಿದ್ದಾನೆ || 44 ||

**ಕಲೌ ಕಲುಷಚಿತ್ತಾನಾಂ ಪಾಪಾಚಾರತಾತ್ಮನಾಮ್ |**
**ರಕ್ಷಣಾರ್ಥಂ ರಮಾಕಾಂತೋ ರಮತೇ ಪ್ರಾಕೃತೋ ಯಥಾ ||**

ಅಜ್ಞಾನವನ್ನುಂಟು ಮಾಡಲು), ಸುರಾಣಾಂ = ದೇವತೆಗಳಿಗೆ, ಮುಕ್ತಿಕಾರಣಾತ್ = ಮೋಕ್ಷವಾಗಬೇಕೆಂಬ ಕಾರಣದಿಂದ (ಮೋಕ್ಷವಾಗಲೆಂದು) ॥ 36 ॥ ಸ್ವಭಕ್ತಾನಾಂ = ತನ್ನ ಭಕ್ತರಿಗೆ, ಹಿತಾಯೈವ = ಹಿತಕ್ಕಾಗಿಯೇ, ವಿಶೇಷತಃ = ಹೆಚ್ಚಾಗಿ, ವಿರಕ್ತಾನಾಂ = ವೈರಾಗ್ಯಶಾಲಿಗಳಾದ (ಸ್ವ ಭಕ್ತಾನಾಂ = ತನ್ನ ಭಕ್ತರಿಗೆ) ದೇವಃ = ಪ್ರಭುವಾದ ಶ್ರೀಹರಿಯು, ಮುಕ್ತಿ ಮಾಪಾದಯನ್ = ಮೋಕ್ಷ (ಸುಖವನ್ನು) ತಂದುಕೊಡುತ್ತಾ, ಪ್ರಾಕೃತಾಕೃತಿಃ = ಸಾಮಾನ್ಯ ಮಾನವ ರೂಪವುಳ್ಳವನಾಗಿ, ಕ್ರೀಡತೇ = ಕ್ರೀಡಿಸುತ್ತಿದ್ದಾನೆ. ॥ 37 ॥

**ಕ್ರೀಡತೇಽಽತ್ಮಕೈವಲ್ಯೇ ಜಗತ್ಪಾಲಕಬಾಲಕಃ ।**
**ಜಗನ್ಮೋಹನ ಸೌಂದರ್ಯ ಲೀಲಾಮಾನುಷಮೂರ್ತಿಮಾನ್ ॥ 38 ॥**

**ನ ಕೃತಂ ದೇವಸಂಘೈಶ್ಚ ನ ಕೃತಂ ವಿಶ್ವಕರ್ಮಣಾ ।**
**ಸ್ವೇಚ್ಛಯಾ ಕ್ರೀಡತೇ ತತ್ರ ಇಚ್ಛಾರೂಪವಿರಾಜಿತಃ ॥ 39 ॥**

ಆತ್ಮಕೈವಲ್ಯಃ = ಮೋಕ್ಷಸ್ವರೂಪನಾದ, ಜಗದ್ಪಾಲಕ ಬಾಲಕಃ - ಜಗತ್ = ಜಗದ್ರೂಪನಾದ, ಬಾಲಕಃ = ಬಾಲಕನೇ ಬಾಲಕಃ = ಮಗುವಾಗುಳ್ಳ ಶ್ರೀನಿವಾಸನು (ಅಥವಾ ಪ್ರಳಯಕಾಲದಲ್ಲಿ ತನ್ನ ಉದರದಲ್ಲಿ ಸಮಸ್ತ ಪ್ರಪಂಚವನ್ನೂ ಇಟ್ಟುಕೊಂಡಿರುವುದರಿಂದ ಅದೊಂದು ಮಗುವಿದ್ದಂತೆ, ಸೃಷ್ಟಿಕಾಲದಲ್ಲಿ ಅದನ್ನು ಹೊರತರುವುದರಿಂದ ಅದಕ್ಕೆ ತಾನು ತಾಯಿಯಿದ್ದಂತೆ, ಇಂತಹ ಮಹಾಮಹಿಮನಾದ ವಟಪತ್ರಶಾಯಿಯಾದ ಶ್ರೀಹರಿಯೆಂಬ ಬಾಲಕನು) ಜಗನ್ಮೋಹನ ಸೌಂದರ್ಯ ಲೀಲಾಮಾನುಷವಿಗ್ರಹಃ - ಜಗನ್ಮೋಹನ = ಇಂತು ಜಗತ್ತನ್ನು ಮೋಹಗೊಳಿಸುವ, ಸೌಂದರ್ಯ = ಅತಿಶಯ ಸೌಂದರ್ಯದಿಂದ ಕಂಗೊಳಿಸುವ, ಲೀಲಾ = ಕೇವಲ ಕ್ರೀಡೆಗಾಗಿ (ಲೀಲೆಗಾಗಿ), ಮಾನುಷ ಮೂರ್ತಿಮಾನ್ = ಮಾನವಾಕಾರ ಧರಿಸಿರುವ ವೇಂಕಟೇಶ್ವರನು, ಕ್ರೀಡತೇ = ವೇಂಕಟಗಿರಿಯಲ್ಲಿ ಆಟವಾಡುತ್ತಿರುವವನು ॥ 38 ॥ ದೇವಸಂಘೈಃ = ಈ ರೂಪವು ದೇವತೆಗಳ ಸಮೂಹದಿಂದ, ನಕೃತಂ = ನಿರ್ಮಿಸಲ್ಪಡಲಿಲ್ಲ, ಚ = ಮತ್ತು, ವಿಶ್ವಕರ್ಮಣಾ = ಜಗತ್ಸೃಷ್ಟಿಕರ್ತನಾದ ಬ್ರಹ್ಮನಿಂದ, (ಅಥವಾ ವಿಶ್ವಕರ್ಮಣಾ = ದೇವಬಡಗಿಯಾದ ವಿಶ್ವಕರ್ಮನಿಂದ) ನಕೃತಂ = ಮಾಡಲ್ಪಡಲಿಲ್ಲ; ಸ್ವೇಚ್ಛಯಾ = ಶ್ರೀಹರಿಯು ತನ್ನ ಇಚ್ಛೆಯಿಂದಲೇ, ಇಚ್ಛಾರೂಪವಿರಾಜಿತಃ = ತನಗಿಷ್ಟವಾದ ರೂಪದಿಂದ ಕಂಗೊಳಿಸುತ್ತಾ, ತತ್ರ = ವೇಂಕಟಾಚಲದಲ್ಲಿ, ಕ್ರೀಡತೇ = ವಿಹಾರಮಾಡುತ್ತಿದ್ದಾನೆ ॥ 39 ॥

**ಇತ್ಯೇವಂ ಕಾರಣಾದೇವ ಯಶೋದಾ ಬಕುಲಾಭವತ್ ।**
**ಸಾ ಕರಿಷ್ಯತಿ ಕಲ್ಯಾಣಂ ಹರೇರ್ವೈಕುಂಠವಾಸಿನಃ ॥ 40 ॥**

**ಕಿಮಲಭ್ಯಂ ಹರೌ ತುಷ್ಟೇ ಜ್ಞಾನವಿಜ್ಞಾನಸಂಪದಃ ।**
**ಕಶ್ಚಿದ್ದೇವಂ ಪೂಜಯಂತಿ ಕಶ್ಚಿದ್ದೇವೇನ ಪೂಜ್ಯತೇ ॥ 41 ॥**

**ಹನೂಮತಾ ಪೂಜಿತೋಽಪಿ ಸ್ವಯಮರ್ಜುನಮರ್ಚತಿ ।**
**ಕೋ ವರ್ಣಯೇದ್ಧರೇಃ ಕ್ರೀಡಾಂ ವಿಚಿತ್ರಾಂ ಜನಪಾವನೀಮ್ ॥ 42 ॥**

*ವಿಶೇಷಾಂಶ:*- ತಿರುಪತಿಯ ಬೆಟ್ಟದ ಮೇಲೆ ವಿರಾಜಿಸುತ್ತಿರುವ ಶ್ರೀನಿವಾಸನು ಒಂದು ವಿಗ್ರಹ(ಪ್ರತಿಮೆ) ಮಾತ್ರವಲ್ಲ, ಶ್ರೀಹರಿಯೇ ಅಲ್ಲಿ ಸಾಕ್ಷಾತ್ತಾಗಿ ಕಂಗೊಳಿಸುತ್ತಿದ್ದಾನೆ. ಬ್ರಹ್ಮ, ವಿಶ್ವಕರ್ಮ ಅಥವಾ ದೇವತೆಗಳು ಯಾರೂ ಇತರ

ದೇವತಾ ಪ್ರತಿಮೆಗಳಂತೆ ಅದನ್ನು ಮಾಡಿದ್ದಲ್ಲ, ಯೋಗ್ಯತೆಯಿಲ್ಲದ ಸಾಮಾನ್ಯ ಮಾನವರಿಗೆ ಹರಿಯು ಶಿಲಾರೂಪದಿಂದ ಗೋಚರಿಸಿದರೂ ಏಕಾಂತ ಭಕ್ತರಾದ ಜ್ಞಾನಿಗಳಿಗೆ ಸಾಕ್ಷಾತ್ ತನ್ನ ಸ್ವರೂಪವನ್ನೇ ದರ್ಶನ ಮಾಡಿಸುವನು. ಆದ್ದರಿಂದ ಶ್ರೀನಿವಾಸನು ಅಲ್ಲಿ ಪ್ರತ್ಯಕ್ಷವಾಗಿದ್ದಾನೆಂದು ತಿಳಿಯಬೇಕು.

ಇತ್ಯೇವಂ ಕಾರಣಾದೇವ = ಹಿಂದೆ ಹೇಳಿದಂತೆ ಶ್ರೀಕೃಷ್ಣನ ವಿವಾಹೋತ್ಸವವನ್ನು ಕಾಣಬೇಕೆಂಬ ಕಾರಣದಿಂದಲೇ, ಯಶೋದಾ = ಯಶೋದಾದೇವಿಯು, ಬಕುಲಾ ಅಭವತ್ = ಬಕುಳಾದೇವಿಯಾಗಿ ಜನಿಸಿದಳು, ವೈಕುಂಠವಾಸಿನಃ = ಸಿರಿವೈಕುಂಠ ವಾಸಿಯಾದ, ಹರೇಃ = ಶ್ರೀನಿವಾಸನಿಗೆ, ಸಾ = ಆ ಬಕುಳಮಾಲಿಕೆಯು, ಕಲ್ಯಾಣಂ = ಲಗ್ನ ಮಹೋತ್ಸವವನ್ನು, ಕರಿಷ್ಯತಿ = ಮಾಡಿಸುವಳು. ।। 40 ।। ಹರೌ ತುಷ್ಟೇ = ಶ್ರೀಹರಿ ಪರಮಾತ್ಮನು ಸಂತೋಷಗೊಂಡರೆ, ಕಿಮಲಭ್ಯಂ = ಯಾವುದು ತಾನೆ ದೊರಕದಿದ್ದೀತು? ಜ್ಞಾನವಿಜ್ಞಾನ ಸಂಪದಃ = ತತ್ವಜ್ಞಾನ ವಿಶೇಷಜ್ಞಾನ (ವಿಜ್ಞಾನ), ಸಂಪದಃ = ಸಿರಿಸಂಪತ್ತುಗಳು ದೊರಕುವುವು, ಕಶ್ಚಿತ್ = ಓರ್ವ ಭಕ್ತನು, ದೇವಂ = ಭಗವಂತನನ್ನು, ಪೂಜಯತೇ = ಪೂಜಿಸುವನು, ಕಶ್ಚಿತ್ = ಮತ್ತೊಬ್ಬ ಭಕ್ತನು, ದೇವೇನ = ಶ್ರೀಹರಿಯಿಂದ, ಪೂಜ್ಯತೇ = ಪೂಜೆಗೊಳ್ಳುತ್ತಾನೆ. ।। 41 ।। ಹನೂಮತಾ = ಹನೂಮಂತನಿಂದ, ಪೂಜಿತೋಽಪಿ = ರಾಮಾವತಾರ ಕಾಲದಲ್ಲಿ ಪೂಜಿತನಾಗಿದ್ದರೂ, ಸ್ವಯಂ = ಕೃಷ್ಣಾವತಾರದಲ್ಲಿ ತಾನೇ, ಅರ್ಜುನಂ = ಭಕ್ತನಾದ ಅರ್ಜುನನನ್ನು, ಅರ್ಚತಿ = ಆರಾಧಿಸುವನು! ಹರೇಃ = ಶ್ರೀಹರಿಪರಮಾತ್ಮನ, ವಿಚಿತ್ರಾಂ = ವಿಚಿತ್ರವಾದ (ಅದ್ಭುತಾಶ್ಚರ್ಯಕರವಾದ) ಜನಪಾವನೀಂ = ಭಕ್ತಜನರನ್ನು ಪಾವನಗೊಳಿಸುವ, ಕ್ರೀಡಾಂ = ಆಟವನ್ನು, ಕೋ ವರ್ಣಯೇತ್ = ಯಾರು ವರ್ಣಿಸಲು ಸಾಧ್ಯ ? ।। 42 ।।

**ನಿತ್ಯಶುದ್ಧಸ್ಯ ವೈ ವಿಷ್ಣೋಃ ಕಿಮನ್ಯಸ್ಯಾಭಿವಂದನೇ ।**
**ಕೃತೇ ಪುಣ್ಯಂ ಋಷೀಣಾಂ ತು ನ ಕೃತೇ ದೋಷಸಂಗ್ರಹಃ ।। 43 ।।**

**ತಸ್ಮಾತ್ಪೂಜ್ಯಸ್ಸುರೈರ್ಯಜ್ಞೇ ಋಷಿಭಿಸ್ತತ್ತ್ವಕೋವಿದೈಃ ।**
**ಪಿತೃಭಿರ್ಭೂಮಿಪೈರ್ವಿಪ್ರೈಃ ಮಾನವೈ ರಾಕ್ಷಸೈರ್ಜನೈಃ ।। 44 ।।**

ನಿತ್ಯಶುದ್ಧಸ್ಯ = ನಿತ್ಯವೂ ಶುದ್ಧವಾಗಿರುವ (ದೋಷವೇ ಇಲ್ಲದಿರುವ) ವಿಷ್ಣೋಃ = ಶ್ರೀಹರಿಪರಮಾತ್ಮನಿಗೆ, ಅನ್ಯಸ್ಯ = ಬೇರೊಬ್ಬರಿಗೆ, ಅಭಿವಂದನೆ = ನಮಸ್ಕಾರ ಮಾಡಿದರೂ ಸಹ, ಕಿಂ = ಪ್ರಯೋಜನವೇನು? ಕಿಂ = ಅದರಿಂದ ದೋಷವೇನು? ಋಷೀಣಾಂತು = ಋಷಿಮುನಿಗಳಿಗಾದರೂ, ಕೃತೇ = (ಲೋಕಶಿಕ್ಷಣಕ್ಕಾಗಿ) ಪೂಜಾ ನಮಸ್ಕಾರಾದಿಗಳನ್ನು ಮಾಡಿದರೆ, ಪುಣ್ಯಂ = ಪುಣ್ಯವು, ಅದರಿಂದ, ದೋಷ ಸಂಗ್ರಹಃ = ಪಾಪಗಳಿಕೆಯು, ನಕೃತಃ = ಮಾಡಿದಂತಾಗಲಿಲ್ಲ. ।। 43 ।। ತತ್ತ್ವಕೋವಿದೈಃ = ತತ್ತ್ವಜ್ಞಾನ ಕೋವಿದರಾದ, ಋಷಿಭಿಃ = ಋಷಿಮುನಿಗಳಿಂದ, ಸುರೈಃ = ದೇವತೆಗಳಿಂದ ಪಿತೃಭಿಃ = ಪಿತೃದೇವತೆಗಳಿಂದ ಭೂಮಿಪೈಃ = ರಾಜರಿಂದ, ವಿಪ್ರೈಃ = ಬ್ರಾಹ್ಮಣರಿಂದ, ಮಾನವೈಃ = ಚಾತುರ್ವರ್ಣ್ಯದ ಉಳಿದ ವೈಶ್ಯ ಶೂದ್ರಾದಿಗಳಿಂದಲೂ, ರಾಕ್ಷಸೈರ್ಜನೈಃ = ರಾಕ್ಷಸಜನರಿಂದಲೂ (ರಾಕ್ಷಸೈರ್ಜಡೈಃ = ರಾಕ್ಷಸರಿಂದಲೂ, ಅಚೇತನ ವಸ್ತುಗಳಿಂದಲೂ) ತಸ್ಮಾತ್ = ಆದ ಕಾರಣದಿಂದ, ಯಜ್ಞೈಃ = ಯಜ್ಞಯಾಗಾದಿಗಳಿಂದ, ಪೂಜ್ಯಃ = ಶ್ರೀಹರಿಯು ಪೂಜ್ಯನಾಗಿದ್ದಾನೆ ।। 44 ।।

**ಕಲೌ ಕಲುಷಚಿತ್ತಾನಾಂ ಪಾಪಾಚಾರತಾತ್ಮನಾಮ್ ।**
**ರಕ್ಷಣಾರ್ಥಂ ರಮಾಕಾಂತೋ ರಮತೇ ಪ್ರಾಕೃತೋ ಯಥಾ ।।**

**ದೈತ್ಯಾನಾಂ ಮೋಹನಾರ್ಥಾಯ ಸುರಾಣಾಂ ಮೋದನಾಯ ಚ ।**
**ಕ್ರೀಡತೇ ಬಾಲಕೈರ್ಬಾಲೋ ಜಗತ್ಪಾಲಕಬಾಲಕಃ ।**
**ಜಗನ್ಮೋಹನಸೌಂದರ್ಯ ಲೀಲಾಮಾನುಷವಿಗ್ರಹಃ ।**
**ನೈತದ್ರೂಪಂ ಕೃತಂ ದೇವೈಃ ನ ಕೃತಂ ವಿಶ್ವಕರ್ಮಣಾ ॥**
**ಸ್ವೇಚ್ಛಯಾ ಕ್ರೀಡತೇ ತತ್ರ ಸ್ವೇಚ್ಛಾರೂಪ ವಿರಾಜಿತಃ ।**
**ಕ್ಷೇತ್ರಸ್ಯ ಮಹಿಮಾ ದಿವ್ಯಾ ತತ್ತೀರ್ಥಸ್ಯ ಚ ವೈಭವಮ್ ॥**
**ತತ್ರ ಸಾಕ್ಷಾದ್ರಮಾಕಾಂತಃ ಕಿಂ ತತ್ರ ಸುಕೃತಂ ಫಲಮ್ ॥ 45 ॥**

ಕಲೌ = ಕಲಿಯುಗದಲ್ಲಿ, ಕಲುಷಚಿತ್ತಾನಾಂ = ಕಲ್ಮಷಚಿತ್ತರಾದ, ಪಾಪಾಚಾರರ ತಾತ್ಮನಾಂ = ಪಾಪಕಾರ್ಯ ಮಾಡುವುದರಲ್ಲಿಯೇ ಆಸಕ್ತವಾದ ಮನಸ್ಸುಳ್ಳವರ, ರಕ್ಷಣಾರ್ಥಂ = ಸಂರಕ್ಷಣೆ ಮಾಡುವುದಕ್ಕಾಗಿ, ರಮಾಕಾಂತಃ = ಕಮಲಾನಾಯಕನಾದ ಶ್ರೀನಿವಾಸನು, ಪ್ರಾಕೃತೋ ಯಥಾ = ಪ್ರಕೃತಿ ಸಂಬಂಧವುಳ್ಳ ಮನುಷ್ಯನಂತೆ, ರಮತೇ = ಆಟವಾಡುವನು, ದೈತ್ಯಾನಾಂ = ಅಸುರ ಜನರಿಗೆ, ಮೋಹನಾರ್ಥಾಯ = ಮೋಹಗೊಳಿಸುವುದಕ್ಕಾಗಿ, ಚ = ಮತ್ತು ಸುರಾಣಾಂ = ದೇವತೆಗಳ, ಮೋದನಾಯ = ಸಂತೋಷಕ್ಕಾಗಿಯೂ, ಬಾಲಕೈಃ = ಇತರ ಬಾಲಕರೊಡನೆ (ತಾನೂ ಒಬ್ಬ), ಬಾಲಃ = ಬಾಲಕನಾಗಿ (ಬಾಲಕನೆಂಬಂತೆ), ಜಗತ್ಪಾಲಕಬಾಲಕಃ = ಸಮಸ್ತ ಪ್ರಪಂಚವನ್ನು ಕಾಪಾಡುವ ಬಾಲಕನಾದ ಶ್ರೀಹರಿಯು, ಕ್ರೀಡತೇ = ಕ್ರೀಡಿಸುವನು, ಜಗನ್ಮೋಹನಸೌಂದರ್ಯಲೀಲಾಮಾನುಷವಿಗ್ರಹಃ - ಜಗನ್ಮೋಹನ = ಹದಿನಾಲ್ಕು ಲೋಕಗಳನ್ನೂ ಪರವಶಗೊಳಿಸುವ, ಸೌಂದರ್ಯ = ಅಪೂರ್ವ ಸೌಂದರ್ಯದಿಂದ ಪ್ರಕಾಶಿಸುವ, ಲೀಲಾ = ವಿಹಾರಕ್ಕಾಗಿ (ಲೀಲೆಗಾಗಿ), ಮಾನುಷ ವಿಗ್ರಹಃ = ಮಾನವ ಶರೀರವನ್ನು ಧರಿಸಿರುವನು.

ಏತದ್ರೂಪಂ = ಶ್ರೀಭಗವಂತನ ಈ ರೂಪವನ್ನು, ದೇವೈಃ = ದೇವತೆಗಳಿಂದ, ನಕೃತಂ = ಮಾಡಲ್ಪಡಲಿಲ್ಲ, ವಿಶ್ವಕರ್ಮಣಾ = ಬ್ರಹ್ಮನಿಂದ, ನಕೃತಂ = ಮಾಡಲ್ಪಡಲಿಲ್ಲ (ವಿಶ್ವಕರ್ಮಣಾ = ದೇವಬಡಗಿಯಾದ ವಿಶ್ವಕರ್ಮನಾಮಕನಿಂದ, ನಕೃತಂ = ಮಾಡಲ್ಪಡಲಿಲ್ಲ), ಸ್ವೇಚ್ಛಾರೂಪ ವಿರಾಜಿತಃ = ತನಗಭಿಮತವಾದ ರೂಪದಿಂದ ವಿರಾಜಿಸಿ, ತತ್ರ = ಶ್ರೀವೇಂಕಟಾಚಲದಲ್ಲಿ ಸ್ವೇಚ್ಛಯಾ = ಸ್ವಸಂಕಲ್ಪದಿಂದಲೇ (ತನ್ನಿಚ್ಛೆಯಿಂದಲೇ), ಕ್ರೀಡತೇ = ಕ್ರೀಡಿಸುತ್ತಿರುವನು; ಕ್ಷೇತ್ರಸ್ಯ = ವೇಂಕಟಗಿರಿ ಕ್ಷೇತ್ರದ, ಮಹಿಮಾ = ಮಹಿಮೆಯು, ದಿವ್ಯಾ = ದೇವತಾಯೋಗ್ಯವಾದುದು, ಚ = ಮತ್ತು, ತತ್ತೀರ್ಥಸ್ಯ = ಬೆಟ್ಟದಲ್ಲಿರುವ ಸ್ವಾಮಿಪುಷ್ಕರಣೀ ತೀರ್ಥದ, ವೈಭವಂ = ವೈಭವವು, ದಿವ್ಯಾ = ದೇವತೆಗಳಿಂದ ಸೇವನೀಯವಾದುದು, ತತ್ರ = ವೇಂಕಟಾಚಲದಲ್ಲಿ ಸಾಕ್ಷಾತ್ = ಪ್ರತ್ಯಕ್ಷನಾಗಿ, ರಮಾಕಾಂತಃ = ಲಕ್ಷ್ಮೀಪತಿಯಾದ ಶ್ರೀಹರಿಯು (ಇರುವನೆಂದಮೇಲೆ), ತತ್ರ = ಆ ಕ್ಷೇತ್ರದಲ್ಲಿ ಲಭಿಸುವ, ಸುಕೃತಂಫಲಂ = ಪುಣ್ಯಫಲವು, ಕಿಂ = ಎಷ್ಟಿರಬಹುದು ॥ 45 ॥

**ಬಹುಜನ್ಮಾರ್ಜಿತೈಃ ಪುಣ್ಯೈಃ ಲಭ್ಯತೇ ಕ್ಷೇತ್ರದರ್ಶನಮ್ ।**
**ತತ್ರಾಪಿ ವೇಂಕಟಗಿರೇಃ ದರ್ಶನಂ ಮುಕ್ತಿದಂ ಪರಮ್ ।**
**ದುರ್ಲಭಂ ದೇವಸಂಘಾನಾಂ ಮನುಷ್ಯಾಣಾಂ ತು ಕಾ ಕಥಾ ॥ 46 ॥**

ಬಹುಜನ್ಮಾರ್ಜಿತೈಃ = ಅನೇಕ ಜನ್ಮಗಳಲ್ಲಿ ಸಂಪಾದಿಸಿದ, ಪುಣ್ಯೈಃ = ಸುಕೃತಗಳಿಂದ, ಕ್ಷೇತ್ರದರ್ಶನಂ = ಶ್ರೀಹರಿಯ ಕ್ಷೇತ್ರಗಳ ದರ್ಶನವು, ಲಭ್ಯತೇ = ದೊರಕುವುದು, ತತ್ರಾಪಿ = ಶ್ರೀಹರಿಯ ಕ್ಷೇತ್ರಗಳಲ್ಲಿಯೂ, ವೇಂಕಟಗಿರೇಃ = ಶ್ರೀವೇಂಕಟಾಚಲ ಕ್ಷೇತ್ರದ, ದರ್ಶನಂ = ದರ್ಶನವು, ಪರಂ = ಶ್ರೇಷ್ಠವಾದುದು, ಮುಕ್ತಿದಂ = ಮೋಕ್ಷವನ್ನು

ಕೊಡುವಂತಹುದು, ದೇವಸಂಘಾನಾಂ = ದೇವತೆಗಳ ಸಮೂಹಕ್ಕೂ, ದರ್ಶನಂ = ಈ ವೇಂಕಟಗಿರಿ ಕ್ಷೇತ್ರದ ದರ್ಶನವು, ದುರ್ಲಭಂ = ಪಡೆಯಲಸದಳವಾದದ್ದು, ಮನುಷ್ಯಾಣಾಂತು = ಇನ್ನು ಮನುಷ್ಯರ ವಿಚಾರವಂತೂ, ಕಾಕಥಾ = ಹೇಳುವುದೇನಿದೆ? ॥ 46 ॥

# ಐದನೆಯ ಅಧ್ಯಾಯದ ಕಥಾಸಾರ

ಶತಾನಂದರು ಜನಕ ಮಹಾರಾಜನಿಗೆ; ನೈಮಿಷಾರಣ್ಯದಲ್ಲಿ ಸೂತರು ಶೌನಕಾದಿಗಳಿಗೆ ಹೇಳಿದ, ಶ್ರೀಭಗವಂತನ ಚರಿತಾಮೃತವನ್ನೇ ತಾವೂ ಹೇಳುತ್ತಾ ಮುಂದುವರೆದು ಹೀಗೆ ನಿರೂಪಿಸಿದರು:-

''ಶೌನಕಾದಿ ಋಷಿಗಳು ಸೂತಾಚಾರ್ಯರಲ್ಲಿ ವಿಜ್ಞಾಪಿಸಿದರು - ಮಹಾನುಭಾವರಾದ, ಸಕಲಶಾಸ್ತ್ರಪಾರಂಗತರಾದ ಸೂತಾಚಾರ್ಯರೇ! ಸೂತ ಮುನಿಗಳೇ, ಸೂತ ಮುನಿಗಳೇ ! (ಸೂತ ಸೂತ - ಎಂದು ಎರಡು ಬಾರಿ ಹೇಳಿರುವುದು ''ಆದರಾದ್ವಿರುಕ್ತಿಃ'' ಎಂಬ ಪ್ರಮಾಣದಂತೆ ಆದರ ಸೂಚಕವೆಂದು ತಿಳಿಯಬೇಕು). ಶ್ರೀನಿವಾಸನ ಪಾಪಪರಿಹಾರಕವಾದ ಮಹಿಮೆ(ಚರಿತೆ)ಯನ್ನು ಕೇಳಿದೆವು, ಭಗವಂತನ ಅವತಾರದ ಮಹಿಮಾತಿಶಯವನ್ನೂ, ಚೋಳರಾಜನಿಗೆ ಶ್ರೀಹರಿಯು ನೀಡಿದ ಶಾಪ, ಮತ್ತು ಅದರ ಪರಿಹಾರಕಾಲ ನಿಬಂಧನೆಯನ್ನೂ, ವೈಕುಂಠದಿಂದ ಧರೆಗಿಳಿದು ಬಂದು ಶ್ರೀಪರಮಾತ್ಮನು ಸಾಮಾನ್ಯಮಾನವನಂತೆ ದುಃಖಾದಿಗಳನ್ನು ತೋರಿಸಿದ ಚರಿತೆಯನ್ನೂ, ಶ್ರೀನಿವಾಸನು ಕೈಗೊಂಡ ಔಷಧೋಪಚಾರ ವಿಚಾರಗಳನ್ನೂ ಕೇಳಿ ಆನಂದಿಸಿದೆವು. ದಯೆಗೆ ತಾಯ್ಮನೆಯೆನಿಸಿದ, ಶಿಷ್ಯರಿಗೆ ಆನಂದವನ್ನುಂಟು ಮಾಡುವುದರಲ್ಲಿ ಆಸಕ್ತರಾದ ನೀವು ಕೃಪಾಳುಗಳಾಗಿದ್ದೀರಿ. ಸ್ವಾಮಿ, ಈಗ ನೀವು ನಮಗೆ ಶ್ರೀನಿವಾಸನ ಕಲ್ಯಾಣೋತ್ಸವ ಪ್ರಕಾರವನ್ನೂ, ಆ ಆಕಾಶರಾಜನೆಂಬುವ ನರಪತಿ ಯಾರು? ಹಿಂದೆ ಶ್ರೀರಮಾದೇವಿಯು ಅವನಿಗೆ ಹೇಗೆ ಮಗಳಾದಳು? ಯೋಗಿಗಳ ಮನಸ್ಸಿನಿಂದಲೂ ಯೋಚಿಸಲು ಸಾಧ್ಯವಾಗದ, ಸಜ್ಜನ ರಕ್ಷಕನಾದ, ಶ್ರೀನಿವಾಸನು ಆಕಾಶರಾಯನಿಗೆ ಅಳಿಯನಾದ ಬಗೆಯೆಂತು? ಇವೆಲ್ಲ ವಿಷಯಗಳನ್ನು ತಾತ್ವಿಕವಾಗಿ ನಿರೂಪಿಸಿರಿ. ಪೂಜ್ಯರಾದ ಸೂತಾಚಾರ್ಯರೇ! ಸಾಂಗವಾದ ಶ್ರೀನಿವಾಸನ ಕಲ್ಯಾಣಮಹೋತ್ಸವ ಪ್ರಕಾರವನ್ನು ವಿವರವಾಗಿ ತಿಳಿಸಿರಿ. ಸ್ವಾಮಿ, ಶ್ರೀನಿವಾಸನ ಮಹಿಮೆಯನ್ನು ಯಾರು ಬಣ್ಣಿಸುವರೋ ಅಂಥವರು, ಕ್ಷೀರಸಾಗರದಲ್ಲಿ ಪ್ರತಿನಿತ್ಯವೂ ಸ್ನಾನಮಾಡಿದರೆ, ಅದಾವ ಪುಣ್ಯಫಲವು ಲಭಿಸುವುದೋ ಅಂತಹ ಸುಕೃತವರ್ಧಕವಾದ ಫಲವನ್ನು ಪಡೆದು ಕೃತಾರ್ಥರಾಗುವರು.''

(ಪಾಠಾಂತರ:- ಯಾವ ಮಾನವನು ಶ್ರೀವೇಂಕಟೇಶ್ವರನ ಮಹಿಮೆಯೆಂಬ ಕ್ಷೀರಸಾಗರದಲ್ಲಿ ಪ್ರತಿನಿತ್ಯವೂ ಸ್ನಾನಾದ್ಯನುಷ್ಠಾನಗಳನ್ನೆಸಗುವವನೋ, ಅಂಥವನು ತನ್ನ ಪುಣ್ಯವನ್ನು ವರ್ಧಿಸಿಕೊಂಡು ಕೃತಾರ್ಥನಾಗುವನು.)

ಸೂತಚಾರ್ಯರು ಶಿಷ್ಯರ ವಿಜ್ಞಾಪನೆಯನ್ನು ಮನ್ನಿಸಿ, ತಮ್ಮ ಶಿಷ್ಯಸಮೂಹಕ್ಕೆ, ಅತಿಶಯ ಭಕ್ತಿನಮ್ರಾಂಗರಾಗಿ, ಸಜ್ಜನರಿಗೆ ಉಚಿತವಾದ ರೀತಿಯಲ್ಲಿ ಹೇಳಲಾರಂಭಿಸಿದರು. ''ಪ್ರಿಯ ಶಿಷ್ಯರೇ! ಭಕ್ತಿಯುಕ್ತವಾಗಿ ಶೇಷಾಚಲಾಧಿಪತಿಯಾದ ಶ್ರೀಹರಿಪರಮಾತ್ಮನ ಕನ್ಯಾಪರಿಗ್ರಹರೂಪವಾದ ಕಲ್ಯಾಣಮಹೋತ್ಸವವನ್ನು ಕೇಳಿರಿ. ಒಂದಾನೊಂದು ದಿನ ಶ್ರೀನಿವಾಸನು ಸ್ವತಃ ತನ್ನ ತಲೆಯ ಗಾಯಕ್ಕೆ ಔಷಧವನ್ನು ತರಲು ಬಯಸಿ ಅರುಣೋದಯ ಸಮಯದಲ್ಲಿ ಪ್ರಯಾಣ ಬೆಳೆಸಿದನು. ಅದೇ ಕಾಲಕ್ಕೆ ಸರಿಯಾಗಿ ಶ್ರೀವರಾಹಸ್ವಾಮಿಯು ಪರಿವಾರದೊಡನೆ ಹೊರಟು, ತಮ್ಮ ಜಮೀನಿನಲ್ಲಿ ಬೆಳೆದಿದ್ದ ಸ್ವಾಮೇಧಾನ್ಯವನ್ನು ಕದಿಯುತ್ತಿದ್ದ ವೃಷಭನೆಂಬ ರಾಕ್ಷಸನನ್ನು ಜಯಿಸಿ, ಪರಿವಾರದವರಾದ ವರಾಹಗಳೊಡನೆ ಅಲ್ಲಿಗೆ ಬಂದರು, ಮತ್ತು ಶ್ರೀನಿವಾಸನನ್ನು ಕಂಡರು. ಶ್ರೀನಿವಾಸನನ್ನು ಕಂಡು, ಜೊತೆಗಿದ್ದ ವರಾಹಗಳು, ''ಎಲವೋ ನೀನಾರು? ಯಾರು ನೀನು?'' ಎಂದು ಗರ್ಜಿಸುತ್ತಾ ಶ್ರೀನಿವಾಸನಿದ್ದೆಡೆಗೆ ಧಾವಿಸಿದವು. ಜಗತ್ಪ್ರಭುವಾದ ಶ್ರೀನಿವಾಸನು ಅವರನ್ನು

ಕಂಡು ಭಯಗೊಂಡವನಂತೆ ನಟಿಸುತ್ತಾ ಕೂಡಲೇ ಹುತ್ತದಲ್ಲಿ ಕಣ್ಮರೆಯಾದನು. ವರಾಹರೂಪಿಯಾದ ಶ್ರೀಹರಿಯು ಆಗ ಶ್ರೀನಿವಾಸನು ವಲ್ಮೀಕದಲ್ಲಿ ಅಡಗಿದ್ದನ್ನು ಕಂಡು ''ಓಹೋ, ವೈಕುಂಠದಿಂದ ಸಾಕ್ಷಾತ್ ಲಕ್ಷ್ಮೀಪತಿಯಾದ ಶ್ರೀವಿಷ್ಣುವೇ ಇಲ್ಲಿಗೆ ಬಂದಿದ್ದಾನೆ!'' ಎಂದು ತಿಳಿದು ಬುದ್ಧಿವಂತನಾದ ವರಾಹಸ್ವಾಮಿಯು ಧೈರ್ಯವನ್ನು ತಂದುಕೊಂಡು ಶ್ರೀನಿವಾಸನೊಡನೆ ಮಾತನಾಡಿದನು. ಶ್ರೀನಿವಾಸನೂ ಸಹ ''ಇವನು ಸಾಕ್ಷಾತ್ ಶ್ರೀಶ್ವೇತವರಾಹಮೂರ್ತಿಯು'' ಎಂದು ಅರಿತು ಕೌತುಕದಿಂದ ಅವನನ್ನು ನೋಡಿ ವಲ್ಮೀಕದಿಂದ ಹೊರಬಂದನು. ಆಗ ವರಾಹ - ಶ್ರೀನಿವಾಸರಿಬ್ಬರೂ ಪರಸ್ಪರ ಅವಲೋಕಿಸಿದರು. ಅವರಿಬ್ಬರ ಕಣ್ಣುಗಳಿಂದಲೂ ಆನಂದಾಶ್ರು ಮಿಡಿಯಿತು. ಶ್ರೀಮನ್ನಾರಾಯಣನ ಸಾಕ್ಷಾತ್ ಎರಡು ರೂಪಗಳಿಂದ ವಿರಾಜಿತರಾದ ಶ್ರೀವರಾಹ - ಶ್ರೀನಿವಾಸರಿಬ್ಬರೂ ವಿಡಂಬನ (ಪ್ರತಾರಣ) ಮಾಡುತ್ತಾ ಸಲ್ಲಾಪಗೈದರು. ಶ್ರೀಹರಿಯ ರೂಪದ್ವಂದ್ವವಿರಾಜಿತರಾದ ಅವರ ಆಶ್ಚರ್ಯಕರವಾದ ನಡವಳಿಕೆಯನ್ನು ಕಂಡು ಬ್ರಹ್ಮಾದಿ ದೇವತೆಗಳು ವರಾಹ - ಶ್ರೀನಿವಾಸನ ಮೇಲೆ ಹೂವಿನಮಳೆಗರೆದರು.

''ಆಯಾ ಯುಗಗಳಿಗೆ ತಕ್ಕಂತೆ; ಆಯಾ ದೇಶ, ಆಯಾ ಕಾಲ, ಮತ್ತು ಆಯಾ ವಯಸ್ಸಿಗೆ ಅನುಗುಣವಾಗಿ ವರ್ತಿಸುತ್ತಾ ಆವಿರ್ಭವಿಸಿ, ಅಪ್ರಾಕೃತಸ್ವರೂಪನಾಗಿದ್ದರೂ ಪ್ರಭುವು ಪ್ರಾಕೃತ ಮಾನವರಂತೆ ನಟಿಸುತ್ತಾ ಕ್ರೀಡಿಸುವನು'' ಇಂತು ಆ ದೇವತಾಶ್ರೇಷ್ಠರು ಜಗದೀಶನಾದ ಶ್ರೀಹರಿಯ ಲೀಲಾವಿಲಾಸ ಚರಿತೆಯನ್ನು ಸ್ತುತಿಸುತ್ತಾ ಶೇಷಾಚಲ ಹಾಗೂ ಸರ್ವೋತ್ತಮನಾದ ಶ್ರೀಲಕ್ಷ್ಮೀಕಾಂತನ ವೈಚಿತ್ರಪೂರ್ಣ ಮಾಯೆಯನ್ನು ಮನದಣಿ ಕೊಂಡಾಡುತ್ತಾ ಪರಸ್ಪರ ಮಾತನಾಡಿಕೊಂಡರು. ಒಬ್ಬರಿಗೊಬ್ಬರು ಮಾತನಾಡುತ್ತಿರುವ ವರಾಹ - ನಾರಾಯಣರಿಬ್ಬರನ್ನೂ, ವಿಸ್ಮಯಚಿತ್ತರಾಗಿ ನೋಡಿ, ಅವರನ್ನು ಸ್ತೋತ್ರ ಮಾಡಿ ದೇವತೆಗಳೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

ಆ ಬಳಿಕ ಶ್ರೀವರಾಹದೇವನು ಶ್ರೀನಿವಾಸನನ್ನು ಉದ್ದೇಶಿಸಿ - ''ಪರಮಸುಂದರವದನ! ಮಹಾನುಭಾವ! ಹೇ ಶ್ರೀನಿವಾಸ! ನೀನು ವೈಕುಂಠಲೋಕವನ್ನು ಬಿಟ್ಟು ಇಲ್ಲಿಗೆ ಏತಕ್ಕಾಗಿ ಬಂದೇ?'' ಎಂದೆನಲು, ಶ್ರೀನಿವಾಸನು ''ಧರಣೀರಮಣ! ಎಲೈ ವರಾಹಸ್ವಾಮಿಯೇ! ನಾನು ವೈಕುಂಠದಲ್ಲಿ ಲಕ್ಷ್ಮಿಯೊಡನಿರುವಾಗ, ಅಲ್ಲಿಗೆ ಬಂದ ಭೃಗುಮುನಿಯು ತನ್ನ ಪಾದದಿಂದ ನನ್ನನ್ನು ತಾಡನ ಮಾಡಿದನು. ಅಮರನಾದ ಋಷಿಯು ತನ್ನ ವಾಸಸ್ಥಾನವಾದ ನನ್ನೆದೆಯನ್ನು ಒದ್ದನೆಂಬ ಅಸಮಾಧಾನ ಮತ್ತು ಕೋಪದಿಂದ ರಮಾದೇವಿಯು ನನ್ನೊಡನೆ ಪ್ರೇಮಕಲಹ ಮಾಡಿ ಕರವೀರಪುರಕ್ಕೆ ಹೊರಟುಹೋದಳು! ಅವಳ ವಿರಹದುಃಖದಿಂದ ಪೀಡಿತನಾದ ನಾನು ಅಲ್ಲಿರಲು ಮನಸ್ಸಾಗದೆ ಇಲ್ಲಿಗೆ ಬಂದುಬಿಟ್ಟೆನು. ಇಲ್ಲಿ ನಿನ್ನಾಲಯದ ದಕ್ಷಿಣದಿಕ್ಕಿನಲ್ಲಿರುವ ವಲ್ಮೀಕದಲ್ಲಿ ವಾಸಮಾಡುತ್ತಿದ್ದೆನು. ಹೀಗಿರಲೊಂದು ದಿನ ಓರ್ವ ಗೋಪಾಲಕನು ತನ್ನ ಹದವಾದ ಕೈಗೊಡಲಿಯಿಂದ ನನ್ನ ತಲೆಗೆ ಹೊಡೆದನು. ಅದರಿಂದ ದೊಡ್ಡ ಗಾಯವಾಗಿ ಅದು ನನ್ನನ್ನು ಪೀಡಿಸುತ್ತಿದೆ. ದೇವ! ಆ ಗಾಯ ಪರಿಹಾರಕ್ಕಾಗಿ ಔಷಧವನ್ನು ಅರಸುತ್ತಾ ನಾನೀ ಪರ್ವತದಲ್ಲಿ ಅಲೆದಾಡುತ್ತಿದ್ದೇನೆ. ಇಂದು ದೈವಯೋಗದಿಂದ ಈ ಬೆಟ್ಟದಲ್ಲಿ ನಿನ್ನನ್ನು ಕಂಡೆನು. ನಾನು ಇಲ್ಲಿಯೇ ವಾಸಮಾಡಬೇಕೆಂದು ಸಂಕಲ್ಪಿಸಿದ್ದೇನೆ. ಧರಾಕಾಂತ! ನೀನು ದಯಮಾಡಿ ಕಲಿಯುಗವು ಮುಗಿಯುವವರೆಗೂ ಇಲ್ಲಿ ವಾಸಮಾಡಲು ನನಗೆ ನಿವೇಶನವನ್ನು ದಯಪಾಲಿಸು'' ಎಂದನು.

ಶ್ರೀನಿವಾಸನ ನುಡಿಯನ್ನಾಲಿಸಿ ಶ್ರೀವರಾಹಮೂರ್ತಿಯು ''ಶ್ರೀನಿವಾಸ! ನಿನ್ನಿಚ್ಛೆಯಂತೆಯೇ ಆಗಲಿ, ನೀನು ಸ್ಥಳಕ್ಕೆ ಕ್ರಯದ್ರವ್ಯವನ್ನು ಕೊಟ್ಟು ಸ್ಥಳವನ್ನು ತೆಗೆದುಕೋ'' ಎಂದನು. ಆಗ ಶ್ರೀವೇಂಕಟೇಶ್ವರನು ಸುಮಧುರ ಸ್ವರದಿಂದ ''ದೇವ! ಇಲ್ಲಿಗೆ ಬರುವ ನನ್ನ ಭಕ್ತರು ಮೊದಲು ನಿನ್ನ ದರ್ಶನ ಮಾಡಲಿ, ನಿನಗೇ ಮೊದಲು ಕ್ಷೀರಾಭಿಷೇಕ, ನೈವೇದ್ಯಗಳನ್ನು ಅರ್ಪಿಸಲಿ. ಇದೇ ನಾನು ಕೊಡುವ ಕ್ರಮದ್ರವ್ಯವೆಂದು ಭಾವಿಸಿ ಸಂತುಷ್ಟನಾಗು, ಮತ್ತು ನನಗೆ ಸ್ಥಳವನ್ನು ಕರುಣಿಸು'' ಎಂದರುಹಿದನು.

ಆಗ ವರಾಹಸ್ವಾಮಿಯು ಶ್ರೀನಿವಾಸನ ಮಾತಿಗೆ ಒಪ್ಪಿ ನಿವೇಶನವನ್ನು ಬಯಸಿದ ಶ್ರೀಹರಿಗೆ, ಅವನ ನೂರು ಹೆಜ್ಜೆಯಷ್ಟು ಜಾಗವನ್ನು ಕೊಟ್ಟನು. ಮೂಲನಾರಾಯಣನ ಎರಡು ರೂಪವುಳ್ಳ ವರಾಹ – ಶ್ರೀನಿವಾಸರು ಹೀಗೆ ವಿನೋದವಾಡಿದರು. ಅವರ ಈ ಲೀಲೆಯು ಭಕ್ತರಲ್ಲದ, ದೈತ್ಯಜನರನ್ನು ಮೋಹಗೊಳಿಸಲೂ; ಪ್ರಿಯಭಕ್ತರಿಗೆ ಅಧಿಕ ಭಕ್ತಿಯುಂಟಾಗಲೂ ಆಗಿದ್ದಿತು. ಇಂತು ಆ ವರಾಹಪರ್ವತದಲ್ಲಿ ಶ್ರೀನಿವಾಸನು ವಿಹರಿಸಿದನು. ಶ್ರೀಭೂರಮಣನಾದ ವರಾಹಸ್ವಾಮಿಯು ಆಲಾಗಾಯಿತು ಶ್ರೀನಿವಾಸನಿಗೆ, ಅಡಿಗೆ ಮುಂತಾದ ಸೇವೆ ಮಾಡಲು ಬಕುಳಮಾಲಿಕಾ ಎಂಬುವವಳನ್ನು ವೇಂಕಟೇಶನಿಗೆ ಅರ್ಪಿಸಿದನು, ಮತ್ತು ಅಂದಿನಿಂದ ಶ್ರೀಹರಿಗೆ ಪ್ರತಿನಿತ್ಯವೂ ಭೋಜನಕ್ಕಾಗಿ ಸ್ಯಾಮೇಧಾನ್ಯದ ಅನ್ನ, ಜೇನುತುಪ್ಪದೊಡನೆ ವರಾಹಸ್ವಾಮಿಯು ಕಳುಹಿಸುತ್ತಿದ್ದನು. ಶ್ರೀನಿವಾಸನ ಬಳಿಗೆ ಬಂದ ಬಕುಳಮಾಲಿಕೆಯು ಭಕ್ತಿಪೂರ್ವಕವಾಗಿ ಕಾಲಕಾಲಕ್ಕೆ ಸರಿಯಾಗಿ ಭೋಜನಕ್ಕಾಗಿ ಅಡಿಗೆಯನ್ನು ತಯಾರಿಸುವುದು, ಆದರದಿಂದ ಬಡಿಸಿ ಉಪಚರಿಸುವುದು, ಸ್ನಾನಾದಿಗಳಿಗೂ, ಕುಡಿಯಲೂ ನೀರನ್ನು ಕೊಡುವುದು, ಪಾದಸಂವಹನ(ಕಾಲುಗಳನ್ನು ಒತ್ತುವುದು) ಮುಂತಾದ ಸೇವೆಗಳನ್ನು ನೆರವೇರಿಸುತ್ತಾ, ರೋಗರಹಿತನಾದ, ಗೋವರ್ಧನ ಗಿರಿಧಾರಿಯಾದ ಶ್ರೀವೇಂಕಟೇಶನ ಕೈಂಕರ್ಯವನ್ನು ಸಂತೋಷದಿಂದ ಮಾಡುತ್ತಾ ಪೂಜಿಸುತ್ತಿದ್ದಳು''.

ಸೂತರ ಮಾತು ಕೇಳಿ ಅಲ್ಲಿನ ಋಷಿಮುನಿಗಳು ''ಮಹಾನುಭಾವರಾದ ಸೂತಾಚಾರ್ಯರೇ! ಶ್ರೀನಿವಾಸನ ಆಗಮನ, ಶ್ರೀವರಾಹಸ್ವಾಮಿಯ ಆಗಮನ, ಅವರೀರ್ವರ ಸಮ್ಮಿಲನ, ವೇಂಕಟಾಚಲದಲ್ಲಿ ವಾಸಮಾಡುವುದೇ ಮುಂತಾದ ಸಮಾಚಾರಗಳನ್ನು ಕೇಳಿ ಹರ್ಷಿಸಿದೆವು. ಸ್ವಾಮಿ! ನೀವು, ಬಕುಳಾದೇವಿಯು ಶ್ರೀಹರಿಯ ಪರಿಚಾರಕಳಾಗಿ ಅವನನ್ನು ಸೇವಿಸುತ್ತಿದ್ದಳೆಂದು ಹೇಳಿದಿರಲ್ಲವೇ? ಪೂರ್ವದಲ್ಲಿ ಆ ಬಕುಳಮಾಲಿಕೆಯು ಯಾರೆಂಬುದನ್ನು ನಮಗೆ ಹೇಳಿರಿ'' ಎಂದು ಬಿನ್ನವಿಸಿದರು.

ಸೂತಾಚಾರ್ಯರು ಹೇಳಹತ್ತಿದರು – ''ಮುನಿಗಳೇ, ಶಾಂತಚಿತ್ತರಾಗಿ ಕೇಳಿರಿ. ಹಿಂದೆ ಈ ಬಕುಳಮಾಲಿಕೆಯೇ ದ್ವಾಪರಯುಗದಲ್ಲಿ ಶ್ರೀಕೃಷ್ಣಪರಮಾತ್ಮನ ತಾಯಿಯಾದ ಯಶೋದಾದೇವಿಯಾಗಿದ್ದಳು! ಆ ಯಶೋದೆಯು ತನಗತಿಪ್ರಿಯವೂ, ಸಂತೋಷಪ್ರದವೂ ಆಗಿದ್ದ; ಅನಂತಾವತಾರಗಳುಳ್ಳ, ತನ್ನ ಕುಮಾರನಾದ ಶ್ರೀಕೃಷ್ಣನ ಯಾವುದೊಂದು ವಿವಾಹ ಮಹೋತ್ಸವವನ್ನೂ ಕಣ್ಣಾರೆ ಕಂಡಿರಲಿಲ್ಲ. ಅಂತೆಯೇ ಯಶೋದೆಯು ಒಮ್ಮೆ, ಶ್ರೀಕೃಷ್ಣನ ಕಲ್ಯಾಣಮಹೋತ್ಸವವನ್ನು ನೋಡಬಯಸಿ ಶ್ರೀಕೃಷ್ಣನನ್ನು ಕುರಿತು – ''ಮಗು! ಶ್ರೀಕೃಷ್ಣ! ನೀನು ಅನೇಕ ವಿವಾಹಗಳನ್ನು ಮಾಡಿಕೊಂಡಿರುವೆ, ಆದರೆ ನಾನು ನಿನ್ನ ಒಂದು ಕಲ್ಯಾಣಮಹೋತ್ಸವವನ್ನು ನೋಡಲಿಲ್ಲ! ನಿನ್ನ ವಿವಾಹ ಮಂಗಳೋತ್ಸವವನ್ನು ನೋಡಲಾಗಲಿಲ್ಲವಲ್ಲಾ ಎಂದು ನನ್ನ ಮನಸ್ಸಿನಲ್ಲಿ ವಿಷಾದವಾಗಿದೆ. ನನ್ನ ಆನಂದವನ್ನು ಉಕ್ಕೇರಿಸುವ ಹೇ ಕಮಲಾಕಾಂತ! ನಿನ್ನ ಕಲ್ಯಾಣ ಮಹೋತ್ಸವ ಮುಂತಾದ ಬಹು ಪುಣ್ಯಕರವಾದ ಪಾವನ ಚರಿತ್ರೆಯನ್ನು ನಾನು ಕಣ್ಣಾರೆ ಕಂಡಾನಂದಿಸುವಂತೆ ಮಾಡು'' ಎಂದು ಕೇಳಿಕೊಂಡಳು.

ಆಗ ಶ್ರೀಕೃಷ್ಣಪರಮಾತ್ಮನು ಮಂದಹಾಸರಂಜಿತವದನಾರವಿಂದನಾಗಿ ''ಮಾತೆ ! ಹಾಗೆಯೇ ಆಗಲಮ್ಮಾ'' ಎಂದು ರಮೆಯರಸನಾದ ಆ ಮಾಧವನು ಸಕ್ಕರೆಯಂತಹ ನುಡಿಗಳನ್ನಾಡುತ್ತಾ ''ತಾಯಿ! ನಿನ್ನ ಇಷ್ಟವನ್ನು ನೆರವೇರಿಸುವೆನು. ಆದರದು ಈಗಲೇ ಅಲ್ಲ! ಕೆಲಕಾಲವಾದ ಮೇಲೆ ನಿನ್ನ ಮುಂದಿನ ಜನ್ಮದಲ್ಲಿ ನಿನ್ನ ಮನೋರಥವನ್ನು ಶ್ರೀಶೈಲದಲ್ಲಿ ಪೂರ್ಣ ಮಾಡುವೆನು'' ಎಂದು ಹೇಳಿದನು. ಹೀಗೆ ಕೃಷ್ಣನಿಂದ ವರವನ್ನು ಪಡೆದ ಮಂಗಳಾಂಗಿಯಾದ, ಆನಂದಸ್ವಾಮಿನಿಯಾದ ಆ ಮಹಾತಾಯಿ ಯಶೋದಾದೇವಿಯು ತನ್ನ ಪ್ರಿಯ ಕುವರನಾದ ಶ್ರೀಕೃಷ್ಣನ ವಿವಾಹ ಮಂಗಳೋತ್ಸವವನ್ನು ನೋಡುವ ಕಾರಣದಿಂದ ತನ್ನ ದೇಹವನ್ನು ತ್ಯಜಿಸಿದಳು.

ಶ್ರೀವಾಸುದೇವನು ಇಪ್ಪತ್ತೆಂಟನೆಯ ಕಲಿಯುಗದಲ್ಲಿ ತನ್ನ ತಾಯಿಯಾಗಿದ್ದ ಈಗ ಬಕುಳಮಾಲಿಕೆಯಾಗಿ ಜನಿಸಿರುವ ಪ್ರೀತಿಯ ಜನನಿಯ ಸಂತೋಷಕ್ಕಾಗಿ, ಯಶೋದೇವಿಗೆ ಆನಂದಪ್ರದವಾದ; ಚರಿತ್ರೆಯನ್ನು ತನ್ನ ಅವತಾರ, ಗುಣ, ಕರ್ಮಗಳಿಂದ; ಜಗತ್ಕಾರಣನೂ ನಿರ್ದೋಷನೂ, ಚೇತನಾಚೇತನಾತ್ಮಕ ಪ್ರಪಂಚ ನಿಯಾಮಕನೂ ಆದ ಶ್ರೀಹರಿಪರಮಾತ್ಮನು ಇಂತು ಕ್ರೀಡಿಸುತ್ತಿದ್ದಾನೆ ! ಕಲಿಯುಗದಲ್ಲಿ ಪಾಪಚಿತ್ತರಾದ, ಸರ್ವದಾ ಪಾಪಕರವಾದ ನಡತೆಯಲ್ಲಿಯೇ ಮಗ್ನರಾದವರನ್ನು ಸಂರಕ್ಷಿಸಲು ಕಮಲಾವಲ್ಲಭನಾದ ಶ್ರೀನಿವಾಸನು ಸ್ವಯಂ ಅಪ್ರಾಕೃತನಂದ ಸ್ವರೂಪನಾಗಿದ್ದರೂ, ಪ್ರಕೃತಿ ಸಂಬಂಧವುಳ್ಳ ಮಾನವನಂತೆ ನಟಿಸುತ್ತಿರುವನು. ದೈತ್ಯರಿಗೆ ತನ್ನ ವಿಷಯಕ ಅಜ್ಞಾನವನ್ನು ಹೆಚ್ಚಿಸಲೂ, ದೇವತೆಗಳಿಗೆ ಮೋಕ್ಷವಾಗಲೂ, ತನ್ನ ಭಕ್ತರ ಹಿತಕ್ಕಾಗಿಯೇ, ಅದರಲ್ಲಿಯೂ ವಿರಕ್ತರಾದ ತನ್ನ ಭಕ್ತರುಗಳಿಗೆ ಮೋಕ್ಷಸುಖವನ್ನು ಕರುಣಿಸುತ್ತಾ ಸ್ವಾಮಿಯಾದ ಶ್ರೀ ಹರಿಯು ಸಾಮಾನ್ಯ ಮಾನವಾಕಾರವನ್ನು ಧರಿಸಿ ಆಟವಾಡುತ್ತಿದ್ದಾನೆ.

ಸ್ವತಃ ಮೋಕ್ಷಸ್ವರೂಪನಾದ(ಆತ್ಮಕೈವಲ್ಯಃ) ಜಗತ್ತೆಂಬ ಬಾಲಕನೇ ಶಿಶುವಾಗುಳ್ಳ, ಅಥವಾ ಪ್ರಳಯ ಕಾಲದಲ್ಲಿ ಪ್ರಪಂಚವೆಂಬ ಬಾಲಕನನ್ನು ತನ್ನುದರದಲ್ಲಿಟ್ಟುಕೊಂಡು ಆಲದೆಲೆಯ ಮೇಲೆ ಶಿಶುರೂಪದಿಂದ ಪವಡಿಸಿದ, ಸಾಕ್ಷಾನ್ನಾರಾಯಣನೇ ಶ್ರೀನಿವಾಸನಾಗಿ ಧರೆಗಿಳಿದು ಬಂದಿರುವ ಅನಂತಶಕ್ತಿ ಸಂಪನ್ನ ಬಾಲಕನು, ಜಗತ್ತನ್ನು ಪರವಶಗೊಳಿಸುವ ಅನುಪಮ ಸೌಂದರ್ಯ ವಿಶೋಭಿತನಾಗಿ, ಕೇವಲ ಲೀಲೆಗಾಗಿ ಮಾನವಾಕಾರವನ್ನು ಧರಿಸಿ ವೇಂಕಟಗಿರಿಯಲ್ಲಿ ಕ್ರೀಡಿಸುತ್ತಿದ್ದಾನೆ. ಈ ದೇವನನ್ನು ದೇವತೆಗಳು ಮಾಡಲಿಲ್ಲ, ಸೃಷ್ಟಿಕರ್ತನಾದ ಬ್ರಹ್ಮದೇವನು ಸೃಜಿಸಲಿಲ್ಲ, ಅಥವಾ ದೇವ ಬಡಗಿಯಾದ ವಿಶ್ವಕರ್ಮನು ನಿರ್ಮಿಸಲಿಲ್ಲ. ಆ ಮಹಾಪ್ರಭುವು ತನ್ನ ಇಚ್ಛೆ - ಸಂಕಲ್ಪದಿಂದಲೇ ತನಗೆ ಇಷ್ಟವಾದ ಆಕಾರದಿಂದ ಬೆಡಗುಗೊಂಡು ವೇಂಕಟಾಚಲದಲ್ಲಿ ವಿಹರಿಸುತ್ತಿದ್ದಾನೆ!''

ವಿಶೇಷಾಂಶ:- ಅಂದರೆ; ತಿರುಪತಿಯ ಬೆಟ್ಟದ ಮೇಲೆ ಕಂಗೊಳಿಸುತ್ತಿರುವ ಶ್ರೀನಿವಾಸನು, ಬ್ರಹ್ಮದೇವ, ದೇವತೆಗಳು, ದೇವಬಡಗಿ ವಿಶ್ವಕರ್ಮ - ಇವರಾರಿಂದಲೂ ನಿರ್ಮಿಸಲ್ಪಟ್ಟ ವಿಗ್ರಹ (ಪ್ರತಿಮೆ) ಮಾತ್ರ ಎಂದು ತಿಳಿಯಬಾರದು, ವೈಕುಂಠದಿಂದ ಧರೆಗಿಳಿದು ಬಂದ, ಶ್ರೀಹರಿಯು, ಸಚ್ಚಿದಾನಂದ ಸ್ವರೂಪದಿಂದ ಸಾಕ್ಷತ್ತಾಗಿ ಅಲ್ಲಿ ವಿರಾಜಿಸುತ್ತಿದ್ದಾನೆ! ಶ್ರೀಪರಮಾತ್ಮನು ಇತರ ಕ್ಷೇತ್ರದಲ್ಲಿ ಶೋಭಿಸುವ ಪ್ರತಿಮೆಗಳಂತೆ ಅಲ್ಲಿಲ್ಲ, ಪ್ರತ್ಯಕ್ಷವಾಗಿ ತಾನೇ ಸ್ವಸ್ವರೂಪದಿಂದ ನಿಂತಿದ್ದಾನೆ. ಆದರೆ ಅಜ್ಞಜನಗಳಿಗೆ ಆ ಭಗವಂತನು ಶಿಲೆಯಂತೆ ಕಾಣುವನು (ಶಿಲಾವದ್ದೃಶ್ಯತೇಹರಿಃ). ಅರ್ಹತೆಯಿಲ್ಲದ, ಸಾಮಾನ್ಯ ಮಾನವರಿಗೆ ಆ ಸ್ವಾಮಿಯು ಶಿಲಾರೂಪನಾಗಿ ಕಂಡರೂ, ಸಾಧನ ಮಾಡಿಕೊಂಡಿರುವ ಜ್ಞಾನಿಗಳಿಗೆ ನಿಜರೂಪದಿಂದಲೇ ದರ್ಶನವಿತ್ತು ಅನುಗ್ರಹಿಸುವನು! ಇದಕ್ಕೆ ಅನೇಕ ಅಪರೋಕ್ಷಜ್ಞಾನಿಗಳೂ ದೃಷ್ಟಾಂತವಾಗಿದ್ದಾರೆ.

ಶ್ರೀಸೂತಾಚಾರ್ಯರು ಮುಂದುವರೆದು ಹೇಳಲಾರಂಭಿಸಿದರು- ''ಶ್ರೀಕೃಷ್ಣನ ವಿವಾಹಮಹೋತ್ಸವವನ್ನು ಕಣ್ಣಾರೆ ಕಂಡು ಆನಂದಿಸಬೇಕೆಂಬ ಮಹದಾಶೆಯಿಂದ ಯಶೋದಾದೇವಿಯು ಆಗ ಬಕುಳಮಾಲಿಕೆಯಾಗಿ ಜನಿಸಿರುವಳು. ಆ ಬಕುಳಾದೇವಿಯು ವೈಕುಂಠವಾಸಿಯಾದ ಶ್ರೀನಿವಾಸನ ಕಲ್ಯಾಣಮಹೋತ್ಸವವನ್ನು ನೆರವೇರಿಸುತ್ತಾಳೆ! ಶ್ರೀಹರಿಯು ಸಂತೋಷಗೊಂಡರೆ ಯಾವುದು ತಾನೇ ದುರ್ಲಭವಾದೀತು? ತತ್ವಜ್ಞಾನ - ವಿಶೇಷಜ್ಞಾನ(ವಿಜ್ಞಾನ) ಸಿರಿ - ಸಂಪತ್ತುಗಳೆಲ್ಲವೂ ಲಭಿಸುವುವು. ಓರ್ವ ಭಕ್ತನು ಭಗವಂತನನ್ನು ಪೂಜಿಸುವನು; ಇನ್ನೊಬ್ಬ ಭಕ್ತನು ಪರಮಾತ್ಮನಿಂದಲೇ ಪೂಜೆಗೊಳ್ಳುವನು! ರಾಮಾವತಾರ ಕಾಲದಲ್ಲಿ ಶ್ರೀಹರಿಯು ಹನೂಮಂತನಿಂದ ಪೂಜಿತನಾಗಿದ್ದರೂ, ಕೃಷ್ಣಾವತಾರದಲ್ಲಿ ಸ್ವತಃ ಪ್ರಿಯಭಕ್ತನಾದ ಅರ್ಜುನನನ್ನು ಪೂಜಿಸಿದನು! ಶ್ರೀಹರಿಯ ಈ ಅದ್ಭುತ (ವಿಚಿತ್ರ)ವಾದ; ಜನರನ್ನು ಪಾವನಗೊಳಿಸುವ ಲೀಲೆಯನ್ನು ಅದಾರುತಾನೆ ವರ್ಣಿಸಲು ಸಾಧ್ಯವಾದೀತು? ಅಚಿಂತ್ಯಾದ್ಭುತ ಮಹಿಮನೂ, ನಿತ್ಯಶುದ್ಧನೂ ಆದ ಶ್ರೀಹರಿಪರಮಾತ್ಮನು ಬೇರೊಬ್ಬರನ್ನು (ಲೋಕಶಿಕ್ಷಣಕ್ಕಾಗಿ) ಅಭಿವಂದಿಸುವನು. ಅದರೆ ಅದರಿಂದ ಆ ಸ್ವಾಮಿಗೆ ಯಾವ

ಪ್ರಯೋಜನವೂ ಇಲ್ಲ, ಮತ್ತು ಅದರಿಂದ ಯಾವ ದೋಷವೂ, ಹಾನಿಯೂ ಇಲ್ಲ. ಪ್ರತ್ಯುತ ಋಷಿಮುನಿಗಳಿಗೆ ಮಾಡಿದ ನಮಸ್ಕಾರಾದಿಗಳು ಪೂಜ್ಯರಾದ ಗುರುಹಿರಿಯರಿಗೆ ನಮಸ್ಕಾರ ಮಾಡಬೇಕೆಂಬ ಲೋಕಶಿಕ್ಷಣಕ್ಕಾಗಿಯೇ ಆಗಿದ್ದು ಅವು ಪುಣ್ಯಕರವೇ ಆಗಿವೆ. ಅದರಿಂದ ಪ್ರಭುವು ಪಾಪಮಾಡಿದಂತೇನೂ ಆಗುವುದಿಲ್ಲ. ಇದು ನಿತ್ಯಸತ್ಯ ವಿಚಾರವಾದ್ದರಿಂದಲೇ ತತ್ತ್ವಜ್ಞಾನ ವಿಶಾರದವಾದ ಋಷಿಮುನಿಗಳು; ದೇವತೆಗಳು, ಪಿತೃ ದೇವತೆಗಳು, ರಾಜಮಹಾರಾಜರು, ಬ್ರಾಹ್ಮಣರು – ಮೊದಲಾದವರಿಂದಲೂ; ಚಾತುರ್ವರ್ಣ್ಯದ ಉಳಿದ ವೈಶ್ಯ - ಶೂದ್ರಾದಿಗಳಿಂದಲೂ, ರಾಕ್ಷಸರಿಂದಲೂ ಅಚೇತನ ವಸ್ತುಗಳಿಂದಲೂ ಸಹ, ಯಜ್ಞಯಾಗಾದಿಗಳಲ್ಲಿ ಶ್ರೀಹರಿಪರಮಾತ್ಮನು ಪೂಜ್ಯನಾಗಿದ್ದಾನೆ.

ಕಲಿಯುಗದಲ್ಲಿ ಕಲ್ಮಷಚಿತ್ತರಾದ ಸರ್ವದಾ ಪಾಪಕಾರ್ಯಗಳನ್ನೆಸಗುವುದರಲ್ಲೇ ಮಗ್ನವಾದ ಮನಸ್ಸುಳ್ಳವರನ್ನು ಕಾಪಾಡಲೋಸುಗ ಶ್ರೀಲಕ್ಷ್ಮೀಪತಿಯಾದ ಶ್ರೀನಿವಾಸನು ಪ್ರಕೃತಿಸಂಬಂಧವುಳ್ಳ ಮಾನವರಂತೆ ರಮಿಸುತ್ತಿರುವನು. ದೈತ್ಯರನ್ನು, ಮೋಹಗೊಳಿಸಲೂ, ಅಮರನಿಕರರ ಸಂತೋಷಕ್ಕಾಗಿಯೂ, ಇತರ ಬಾಲಕರೊಡನೆ ತಾನೂ ಒಬ್ಬ ಬಾಲಕನೆಂಬಂತೆ, ಚೇತನಾಚೇತನಾತ್ಮಕ ಸಮಸ್ತ ಪ್ರಪಂಚವನ್ನೂ ಪರಿಪಾಲಿಸುವ ಬಾಲಕನಾದ ಶ್ರೀವೇಂಕಟೇಶ್ವರನು ಕ್ರೀಡಿಸುವನು, ಜಗನ್ಮೋಹಕ ಸೌಂದರ್ಯಶಾಲಿಯಾದ ಭಗವಾನ್ ಶ್ರೀಹರಿಯು ಕೇವಲ ಲೀಲೆಗಾಗಿ ಮಾನವಾಕಾರದಿಂದ ವಿಹರಿಸುತ್ತಿದ್ದಾನೆ. ಶ್ರೀಹರಿಯ ಈ ರೂಪವನ್ನು ದೇವತೆಗಳು, ಬ್ರಹ್ಮ, ವಿಶ್ವಕರ್ಮ, ಇವರ್‍ಯಾರೂ ನಿರ್ಮಿಸಿದ್ದಲ್ಲ! ತನಗಭಿಮತವಾದ ರೂಪದಿಂದ ವಿಹರಿಸಲು ಸ್ವತಂತ್ರನಾದ ಆ ಪ್ರಭುವು ಸ್ವಸಂಕಲ್ಪ - ಇಚ್ಛೆಗಳಿಂದಲೇ ವೇಂಕಟಗಿರಿಯಲ್ಲಿ ವಿಹಾರಮಾಡುತ್ತಿದ್ದಾನೆ. ವೇಂಕಟಗಿರಿಯ ಮಹಿಮೆಯು ದೇವತೆಗಳಿಂದ ಮಾತ್ರ ತಿಳಿಯಲು ಯೋಗ್ಯವಾದುದು. ಆ ಪರ್ವತದಲ್ಲಿರುವ ಸ್ವಾಮಿಪುಷ್ಕರಣೀ ತೀರ್ಥದ ವೈಭವವು ವೈಶಿಷ್ಟ್ಯಪೂರ್ಣವೂ; ಅನಿತರ ಸಾಧಾರಣವೂ ಆಗಿರುವುದು. ಆ ವೇಂಕಟಾಚಲದಲ್ಲಿ ಶ್ರೀರಮಾಕಾಂತನು ಪ್ರತ್ಯಕ್ಷವಾಗಿ ರಾರಾಜಿಸುತ್ತಿರುವನೆಂದಮೇಲೆ, ಆ ಕ್ಷೇತ್ರದಲ್ಲಿ ಲಭಿಸುವ ಪುಣ್ಯಫಲವದೆಷ್ಟಿರಬಹುದು? ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯಫಲದಿಂದ ಶ್ರೀಹರಿಕ್ಷೇತ್ರದರ್ಶನವು ದೊರಕುವುದು. ಅದರಲ್ಲಿಯೂ ಶ್ರೀಹರಿಯ ಕ್ಷೇತ್ರಗಳಲ್ಲೆಲ್ಲಾ ವೇಂಕಟಾಚಲ ಕ್ಷೇತ್ರದ ದರ್ಶನವು ಅತಿಶ್ರೇಷ್ಠವೂ, ಮೋಕ್ಷಪ್ರದವೂ ಆಗಿರುವುದು. ದೇವತೆಗಳಿಗೂ ಈ ಕ್ಷೇತ್ರ ದರ್ಶನವು ದೊರಕಲಸದಳವೆಂದಮೇಲೆ, ಇನ್ನು ಮಾನವರ ವಿಚಾರವನ್ನು ಹೇಳುವುದೇನಿದೆ'' ಎಂದು ಸೂತಾಚಾರ್ಯರು ಶೌನಕಾದಿ ಮುನಿಗಳಿಗೆ ನಿರೂಪಿಸಿದರು.

*ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೇಂಕಟೇಶಮಹಾತ್ಮೆಯಲ್ಲಿ*
*ಐದನೆಯ ಅಧ್ಯಾಯವು ಮುಗಿದುದು.*

*॥ ಶ್ರೀವೇಂಕಟೇಶನಿಗೆ ಅರ್ಪಿತವಾಗಲಿ ॥*

# ಆರನೆಯ ಅಧ್ಯಾಯ

ಮೂಲ— ಸೂತ ಉವಾಚ -

ಕದಾಚಿದ್ವೇಂಕಟೇಶಸ್ತು ಚಿಂತಯಾಮಾಸ ವೈ ಹಯಮ್ ।
ಮನಸಾ ಚಿಂತ್ಯಮಾನೇ ತು ಹಯಃಪ್ರತ್ಯಕ್ಷತಾಂ ಗತಃ ॥ 1 ॥

ವಾಯುರಶ್ವತ್ವಮಾಪನ್ನೋ ರಜ್ಜುಸ್ತತ್ರಾಭಿಮಾನಿನೀ ।
ಉಪಾಸರ್ಪತ್ಸ್ವಯಂ ಲಕ್ಷ್ಮೀ ತತೋಽಶ್ವಂ ತಂ ಸಪೂಜಯನ್ ॥
ತಸ್ಯೋಪರಿ ಸಮಾತಿಷ್ಠತ್ಸರ್ವಾಭರಣಭೂಷಿತಃ ।
ಶುಭ್ರವಸ್ತ್ರಂ ಪಂಚದಶಹಸ್ತಂ ಬಿಭ್ರತ್ತಥೋಪರಿ ।
ಕಾಂಚೀಂ ಬಧ್ವಾ ರಮಾಕಾಂತಃ ಕಾಂಚಿದಾಮವಿರಾಜಿತಃ ॥ 2 ॥

ಶುಭ್ರವಸ್ತ್ರಂ ಪರೀಧಾಯ ಪಂಚಹಸ್ತಂ ತಥಾ ದಧತ್ ।
ಆದರ್ಶಾಲೋಕಿತಂ[1] ಕೃತ್ವಾ ಧೃತ್ವಾ ಶುಭ್ರಾಂ ಚ ಮೃತ್ತಿಕಾಮ್ ॥ 3 ॥

ತನ್ಮಧ್ಯೇ ಕುಂಕುಮಸ್ಯಾಪಿ ತಿಲಕಂ ಸುಮನೋಹರಮ್ ।
ಪೂಗೀಫಲಂ ಸತಾಂಬೂಲಂ ಚೂರ್ಣನಿಕ್ಷಿಪ್ತಪಾತ್ರಕಮ್ ॥ 4 ॥

ಆದರ್ಶಂ ಮೃತ್ತಿಕಾಂ ಶುಭ್ರಾಂ ತಥಾ ಕುಂಕುಮಭಾಜನಮ್ ।
ಸ್ವರ್ಣನಿರ್ಮಿತ ವಸ್ತ್ರೇಣ ಬಧ್ವಾ ತು ಕಟಿಮಧ್ಯತಃ ॥ 5 ॥

ಸ್ವರ್ಣಯಜ್ಞೋಪವೀತಾಂಗಃ ಕಂಠಾಭರಣಭೂಷಿತಃ ।
ಕಂಕಣಾಂಕಿತದೋರ್ಭ್ಯಾಂ ವೈ ಸಂಪೂರ್ಣವರಗಾತ್ರಕಃ ॥ 6 ॥

ಭುಜಕೀರ್ತ್ಯಾ ರತ್ನಮಯ್ಯಾ ರಾಜಮಾನಾಂಗುಲೀಯಕೈಃ ।
ಕುಂಕುಮಾಕ್ತಸುಗಂಧೇನ ಲಿಪ್ತಾಂಗವರರಾಜಿತಃ ।
ಕಬರೀಕೃತಕೇಶೇಷು ರಕ್ತವಸ್ತ್ರಂ ಸುವೇಷ್ಟ್ಯ ಚ ॥ 7 ॥

ಲಂಬಿತೈಃ ಪುಷ್ಪಜಾಲೈಶ್ಚ ಸ್ಕಂಧಗೈಃ[2] ಪರಿಭೂಷಿತಃ ।
ಸುವರ್ಣರತ್ನಸಂಬದ್ಧ ಪಾದುಕಾಗೂಹಿತಾಂಘ್ರಿಕಃ ।
ಧನುರ್ಬಾಣಧರಶ್ರೀಮಾನ್ ಸಾಕ್ಷಾನ್ಮನ್ಮಥಮನ್ಮಥಃ ।
ಏವಂ ಮನೋಹರಂ ರೂಪಂ ಧೃತ್ವಾ ಶ್ರೀವೇಂಕಟೇಶ್ವರಃ ॥ 8 ॥

---

1. ಪಾ: ಆದರ್ಶಾಲೋಕನಂ, 2. ಸ್ಕಂದಗೋಪರಿ ಭೂಷಿತಃ

**ಹಯಂ ರತ್ನಸಮಾಕೀರ್ಣಮುಪಬರ್ಹಣಭೂಷಿತಮ್ ।**
**ಸುವರ್ಣತಿಲಕೋಲ್ಲಾಸಿವಕ್ತ್ರಂ ವಾಯುಮನೋಜವಮ್ ॥ 9 ॥**

**ನೀಲವರ್ಣಂ ಪಾಂಡುಪಾದಂ ಹಸ್ತಪಂಚದಶೋನ್ನತಮ್ ।**
**ಆರುಹ್ಯ ದೇವಮಣ್ಯಾದಿ ಸರ್ವಲಕ್ಷಣಸಂಯುತಮ್ ॥ 10 ॥**

ವೇಂಕಟೇಶಸ್ತು = ಶ್ರೀನಿವಾಸನು, ಕದಾಚಿತ್ = ಒಂದುದಿನ, ಮನಸಾ = ಮನದಲ್ಲಿ, ಹಯಂ = (ಒಂದು) ಅಶ್ವವನ್ನು, ಚಿಂತಯಾಮಾಸ = ನೆನೆದನು. ಚಿಂತ್ಯಮಾನೇತು = ಮನಸ್ಸಿನಲ್ಲಿ ಸ್ಮರಿಸಿದ ಕೂಡಲೇ, ಹಯಃ = ಕುದುರೆಯು, ಪ್ರತ್ಯಕ್ಷತಾಂಗತಃ = ಕಣ್ಣೆದುರು ಬಂದು ನಿಂತಿತು ॥ 1 ॥ ವಾಯುಃ = ವಾಯುದೇವನು, ಅಶ್ವತ್ವಮಾಪನ್ನಃ = ಕುದುರೆಯಾಗಿ; ಸ್ವಯಂ = ಸ್ವತಃ, ತತ್ತ್ವಾಭಿಮಾನಿನೀ = ತತ್ತ್ವಾಭಿಮಾನಿನಿಯಾದ, ಲಕ್ಷ್ಮೀ = ರಮಾದೇವಿಯು, ರಜ್ಜುಃ = ಲಗಾಮು (ಹಗ್ಗ) (ಆಗಿ), ಉಪಾಸರ್ಪತ್ = ಅಲ್ಲಿಗಾಗಮಿಸಿ(ತು)ದಳು. ತತಃ = ಕುದುರೆಯು ಬಂದ ಮೇಲೆ, ಸಃ = ಶ್ರೀನಿವಾಸನು, ತಂ ಅಶ್ವಂ = ಆ ಕುದುರೆಯನ್ನು, ಪೂಜಯನ್ = ಪೂಜಿಸಿ(ದನು), ತಸ್ಯೋಪರಿ = ಆ ಕುದುರೆಯ ಮೇಲೆ, ಉಪಾತಿಷ್ಠತ್ = ಕುಳಿತನು. ಸರ್ವಾಭರಣಭೂಷಿತಃ = ಸಕಲವಿಧ ಒಡವೆಗಳಿಂದ ಅಲಂಕೃತನಾಗಿ, ಪಂಚದಶ ಹಸ್ತಂ = ಹದಿನೈದು ಮೊಳ ಉದ್ದವಾದ, ಶುಭ್ರವಸ್ತ್ರಂ = ಬಿಳಿಯ ಪಂಚೆಯನ್ನು (ಉಟ್ಟು), ತಥೋಪರಿ = ಅದರ ಮೇಲೆ, ಪಂಚಹಸ್ತಂ = ಐದುಮೊಳದ, ಶುಭ್ರವಸ್ತ್ರಂ = ಬಿಳುಪಾದ ಪಂಚೆಯನ್ನು, ಪರೀಧಾಯ = ಹೊದ್ದು ಬಿಭ್ರತ್ = ಬೆಳಗುವ, ಕಾಂಚೀಂ = ನಡುಕಟ್ಟ(ಪಟ್ಟಿ)ನ್ನು, ಬಧ್ವಾ = ಬಿಗಿದು ॥ 2 ॥ ರಮಾಕಾಂತಃ = ಲಕ್ಷ್ಮೀರಮಣನಾದ ಶ್ರೀನಿವಾಸನು, ಕಾಂಚೀದಾಮವಿರಾಜಿತಃ = ಬಂಗಾರದ ಉಡುದಾರದಿಂದ ವಿರಾಜಿತನಾಗಿ, ಚ = ಮತ್ತು, ಆದರ್ಶಾಲೋಕಿತಂ (ಲೋಕನಂ) ಕೃತ್ವಾ = ಕನ್ನಡಿಯಲ್ಲಿ ನೋಡಿಕೊಂಡು, ಶುಭ್ರಾಂ = ಬಿಳುಪಾದ, ಮೃತ್ತಿಕಾಂ = ಗೋಪೀಚಂದನವನ್ನು, ಧೃತ್ವಾ = ಊರ್ಧ್ವಪುಂಡ್ರವಾಗಿ ಧರಿಸಿ (ಹಚ್ಚಿಕೊಂಡು) ॥ 3 ॥ ತನ್ಮಧ್ಯೇ = ಊರ್ಧ್ವಪುಂಡ್ರದ ಮಧ್ಯಭಾಗದಲ್ಲಿ, ಸುಮನೋಹರಂ = ಅತಿ ಮನೋಹರವಾದ, ಕುಂಕುಮಸ್ಯಾಪಿ = ಕಸ್ತೂರಿ ಮಿಶ್ರಿತ ಕುಂಕುಮದ, ತಿಲಕಂ = ತಿಲಕವನ್ನು, ಧೃತ್ವಾ = ಧರಿಸಿ (ಹಚ್ಚಿಕೊಂಡು), ಸತಾಂಬೂಲಂ = ತಾಂಬೂಲ (ವೀಳೇದೆಲೆ) ಸಹಿತವಾದ, ಪೂಗೀಫಲಂ = ಅಡಿಕೆಯನ್ನು, ಚೂರ್ಣನಿಕ್ಷಿಪ್ತಪಾತ್ರಕಂ = ಸುಣ್ಣವನ್ನಿಟ್ಟಿರುವ ಸಂಪುಟವನ್ನೂ, ॥ 4 ॥ ಆದರ್ಶಂ = ಕನ್ನಡಿ, ಶುಭ್ರಾಂ ಮೃತ್ತಿಕಾಂ = ಬಿಳಿಯಗೋಪೀಚಂದನದ ಗಡ್ಡೆಯನ್ನೂ, ತಥಾ = ಮತ್ತು, ಕುಂಕುಮ ಭಾಜನಂ = ಕಸ್ತೂರೀ ಕುಂಕುಮದ ಭರಣಿಯನ್ನೂ, ಸ್ವರ್ಣನಿರ್ಮಿತವಸ್ತ್ರೇಣ- ಸ್ವರ್ಣ = ಬಂಗಾರದಿಂದ ತಯಾರಿಸಿದ ನೂಲಿನಿಂದ (ಜರಿಯಿಂದ), ನಿರ್ಮಿತ = ನಿರ್ಮಿಸಿದ, ವಸ್ತ್ರೇಣ ತು = ಕೈವಸ್ತ್ರದಲ್ಲಿರಿಸಿ, ಕಟಿಮಧ್ಯತಃ = ಟೊಂಕದ ನಡುವೆ, ಬಧ್ವಾ = ಕಟ್ಟಿಕೊಂಡು ॥ 5 ॥ ಸ್ವರ್ಣಯಜ್ಞೋಪವೀತಾಂಗಃ- ಬಂಗಾರದಿಂದ ಮಾಡಿದ, ಯಜ್ಞೋಪವೀತದಿಂದ ಶೋಭಿಸುವ, ಅಂಗಃ = ದೇಹವುಳ್ಳ; ಕಂಠಾಭರಣಭೂಷಿತಃ - ಕಂಠಾಭರಣ = ಕೊರಳಲ್ಲಿ ಧರಿಸುವ ಅನೇಕ ಹಾರಾದಿಗಳಿಂದ, ಭೂಷಿತಃ = ಅಲಂಕೃತನಾದ; ಕಂಕಣಾಂಕಿತದೋರ್ಭ್ಯಾಂ = ಕಂಕಣಗಳಿಂದಯುಕ್ತವಾದ ಎರಡುಕರಗಳುಳ್ಳ; ಸಂಪೂರ್ಣವರಗಾತ್ರಕಃ = ಕಾಂತಿಪೂರ್ಣವಾದ ಉತ್ಕೃಷ್ಟ ದೇಹವುಳ್ಳ; ದೋರ್ಭ್ಯಾಂ = ಎರಡು ಭುಜಗಳಲ್ಲಿ ರತ್ನಮಯ್ಯಾ = ನವರತ್ನಮಯವಾದ (ರತ್ನಖಚಿತವಾದ), ಭುಜಕೀರ್ತ್ಯಾ = ನಾಗಮುರಿಗೆ (ಭುಜಕೀರ್ತಿ ಎಂಬ ಒಡವೆಯಿಂದ)ಗಳಿಂದಲೂ, ರಾಜಮಾನ = ರಾಜಿಸುವ, ಅಂಗುಲೀಯಕೈಃ = ರತ್ನಮುಂಗುರಗಳಿಂದಲೂ, ಕುಂಕುಮಾಕ್ತಸುಗಂಧೇನ - ಕುಂಕುಮ = ಕಸ್ತೂರೀ ಪುನಗು-ಕೇಸರಗಳನ್ನು ಬೆರೆಸಿ ತಯಾರಿಸಿದ, ಸುಗಂಧೇನ = ಸುವಾಸನೆಯ ಚಂದನದಿಂದ, ಲಿಪ್ತಾಂಗ ವರರಾಜಿತಃ - ಲಿಪ್ತಾಂಗ = ಪೂಸಲ್ಪಟ್ಟ, ಅಂಗವರ = ಶ್ರೇಷ್ಠಶರೀರದಿಂದ, ವಿರಾಜಿತಃ = ವಿರಾಜಿತನಾಗಿ; ಕಬರೀಕೃತಕೇಶೇಷು = ಸಿರಿಮುಡಿಯಾಗಿ ಕಟ್ಟಿದ, ಕೇಶೇಷುಃ = ಕೂದಲುಗಳ ಮೇಲೆ, ಅಥವಾ, ಕಬರೀಕೃತ = ತುದಿಗಂಟು ಹಾಕಿದ, ಕೇಶೇಷು

= ಕೇಶಗಳ ಮೇಲೆ, ರಕ್ತವಸ್ತ್ರಂ = ಅಚ್ಚ ಕೆಂಪು ವಸ್ತ್ರವನ್ನು, ವೇಷ್ಟ್ಯ = ಪೇಟ ಕಟ್ಟಿಕೊಂಡಿರುವ, ಚ = ಮತ್ತು, ಸ್ಕಂಧಗೈಃ = ಭುಜಗಳಲ್ಲಿ (ಪಾ:- ಸ್ಕಂಧಗೋಪರಿ = ಭುಜಗಳ ಮೇಲೆ), ಲಂಭಿತೈಃ = ಉದ್ದವಾಗಿರುವ (ಜಾರುತ್ತಿರುವ), ಪುಷ್ಪಜಾಲೈಶ್ಚ = ಕುಸುಮಮಾಲೆಗಳಿಂದ, ಪರಿಭೂಷಿತಃ = ಅಲಂಕೃತನಾದ; ಸುವರ್ಣರತ್ನಸಂಬದ್ಧಪಾದುಕಾ ಗೂಹಿತಾಂಘ್ರಿಕಃ – ಸುವರ್ಣ = ಬಂಗಾರವೇನು, ರತ್ನ = ರತ್ನಗಳೇನು – ಇವುಗಳಿಂದ ಸಂಬದ್ಧ = ಖಚಿತವಾದ (ಕೂಡಿಸಲ್ಪಟ್ಟ), ಪಾದುಕಾ = ಪಾದರಕ್ಷೆಗಳಲ್ಲಿ (ಪಾದುಕೆಗಳಲ್ಲಿ), ಗೂಹಿತ = ಮುಚ್ಚಲ್ಪಟ್ಟಿರುವ (ಮರೆ ಮಾಡಲ್ಪಟ್ಟಿರುವ), ಅಂಘ್ರಿಕಃ = ಪಾದಗಳುಳ್ಳ; (ಅಂದರೆ ಪಾದಗಳಲ್ಲಿ ಕನಕರತ್ನ ಖಚಿತ ಪಾದುಕೆಗಳನ್ನು ಮೆಟ್ಟಿರುವ); ಧನುರ್ಬಾಣಧರಃ = ಕೈಯಲ್ಲಿ ಬಿಲ್ಲು-ಬಾಣಗಳನ್ನು ಹಿಡಿದಿರುವ; ಶ್ರೀಮಾನ್ = ಕಾಂತಿ ಸಂಪನ್ನನಾದ, ಶ್ರೀಮಾನ್ = ಸಂಪದ್ಯುಕ್ತನಾದ, ಶ್ರೀಮಾನ್ = ವೇದಪ್ರತಿಪಾದ್ಯ ಮಹಿಮನಾದ, ಸಾಕ್ಷಾತ್ = ಪ್ರತ್ಯಕ್ಷವಾಗಿ, ಮನ್ಮಥ ಮನ್ಮಥಃ = ಮನ್ಮಥನಿಗೂ ಮನ್ಮಥನಾದ (ಮನ್ಮಥನಿಗೆ ತಂದೆಯಾದ), ಶ್ರೀವೇಂಕಟೇಶ್ವರಃ = ಶ್ರೀ ಶ್ರೀನಿವಾಸನು, ಏವಂ = ಈ ವಿಧವಾದ, ಮನೋಹರಂ = ಎಲ್ಲರ ಮನಸ್ಸನ್ನು ಅಪಹರಿಸುವ, ರೂಪಂ = ಆಕಾರವನ್ನು, ಧೃತ್ವಾ = ಧರಿಸಿ (ವಸ್ತ್ರಾಭರಣಗಳಿಂದ ಶೃಂಗರಿಸಿಕೊಂಡು), ರತ್ನಸಮಾಕೀರ್ಣಂ = ರತ್ನಖಚಿತವಾದ, ಉಪಬರ್ಹಣ ಭೂಷಿತಂ – ಉಪಬರ್ಹಣ = ಕುದುರೆಯ ಮೇಲೆ ಸವಾರಿಗನುಕೂಲವಾಗುವಂತೆ ಹಾಕುವ ಮೆತ್ತನೆಯ ಆಸನದಿಂದ (ಜೀನ್‌ನಿಂದ), ಭೂಷಿತಂ = ಅಲಂಕೃತವಾದ; ಸುವರ್ಣತಿಲಕೋಲ್ಲಾಸಿ ವಕ್ತ್ರಂ = ಬಂಗಾರದ ತಿಲಕದಿಂದ ಉಲ್ಲಸಿತ (ಅರಳಿದ) ಮುಖವುಳ್ಳ; ವಾಯು ಮನೋಜವಂ = ವಾಯುವಿಗೆ ಮತ್ತು ಮನಸ್ಸಿಗೆ ಸಮಾನವಾದ ವೇಗವುಳ್ಳ; ಪಾಂಡು ಪಾದಂ = ಬಿಳಿವರ್ಣದ ನಾಲ್ಕು ಪಾದಗಳುಳ್ಳ; ನೀಲವರ್ಣಂ = ನೀಲಿಬಣ್ಣವುಳ್ಳ; ಹಸ್ತ ಪಂಚದಶೋನ್ನತಂ = ಹದಿನೈದು ಅಡಿ (ಮೊಳ) ಎತ್ತರವಿರುವ; ದೇವಮಣ್ಯಾದಿ ಸರ್ವ ಲಕ್ಷಣ ಸಂಯುತಂ – ದೇವಮಣ್ಯಾದಿ = ದೇವಮಣಿಯೆಂಬ ಸುಳಿಯೇ ಮೊದಲಾದ, ಸರ್ವಲಕ್ಷಣ = ಸಮಸ್ತ ಶ್ರೇಷ್ಠ ಅಶ್ವಲಕ್ಷಣಗಳಿಂದ ಕೂಡಿರುವ, ಹಯಂ = ದಿವ್ಯ ತುರಗಳನ್ನು (ಕುದುರೆಯನ್ನು), ಆರುಹ್ಯ = ಏರಿಕೊಂಡು, ಗಿರಿಶ್ರೇಷ್ಠಂ ಅವರುಹ್ಯ = ಶೇಷಗಿರಿಯಿಂದ ಕೆಳಗಿಳಿದು, ಸಃ = ಶ್ರೀನಿವಾಸನು, ಮೃಗಯಾರ್ಥಂ = ಬೇಟೆಗಾಗಿ (ಬೇಟೆಯಾಡಲು), ಜಗಾಮ = ಹೊರಟನು.

**ಅವರುಹ್ಯ ಗಿರಿಶ್ರೇಷ್ಠಂ ಮೃಗಯಾರ್ಥಂ ಜಗಾಮ ಸಃ ।**
**ಮೃಗಾನ್ ಬಹುವಿಧಾಕಾರಾನ್ ಸಿಂಹಶಾರ್ದೂಲಜಂಬುಕಾನ್ ॥ 11 ॥**

**ಮಾತಂಗಾನ್ ಶರಭಾನ್ಘೋರಾನ್ ಏಣಾನ್ವೈ ಮಹಿಷಾನಪಿ ।**
**ಜಘಾನ ವಿಪನೇ ದೇವಃ ಸಂಚರನ್ ಸ ಇತಸ್ತತಃ ॥ 12 ॥**

**ತತ್ರೈಕಂ ಹಸ್ತಿಪಂ ದೃಷ್ಟ್ವಾ ಮದಮತ್ತಂ ವನೇಚರಮ್ ।**
**ತಂ ಹಂತುಮಗಮತ್ಪೃಷ್ಠಮನುಸೃತ್ಯ ರಮಾಪತಿಃ ॥ 13 ॥**

**ಸ ಜಗಾಮ ವನೇ ದೂರಂ ಭಯಾದ್ಭೀತೋ ವೃಷಾಕಪೇಃ ।**
**ಯೋಜನಂ ಸಾರ್ಧಕಂ ಗತ್ವಾ ತತ್ರ ದೇವಂ ಜನಾರ್ದನಮ್ ॥ 14 ॥**

**ದಂಡವತ್ಪತಿತೋ ಭೂತ್ವಾ ಶುಂಡಾಮುದ್ಗಮ್ಯ[3] ಗರ್ಜಯನ್ ।**
**ಯದಾ ನತಸ್ತದಾ ಕನ್ಯಾ ದೃಷ್ಟಿಮಾರ್ಗಮುಪಾಗತಾ ॥ 15 ॥**

---

3. ಶುಂಡಮುದ್ಯಮ್ಯ

ಬಹುವಿಧಾಕಾರಾನ್ = ದೊಡ್ಡದು - ಸಣ್ಣದು, ಹೀಗೆ ಬಹುವಿಧಾಕಾರಗಳುಳ್ಳ, ಸಿಂಹಶಾರ್ದೂಲಜಂಬುಕಾನ್ = ಸಿಂಹ, ಹುಲಿ, ನರಿಗಳನ್ನೂ ।। 11 ।। ಮಾತಂಗಾನ್ = ಆನೆಗಳನ್ನೂ, ಘೋರಾನ್ = ಘೋರವಾದ, ಶರಭಾನ್ = ಶರಭಗಳನ್ನೂ, ಏಣಾನ್ ವೈ = ಜಿಂಕೆಗಳನ್ನೂ, ಮಹಿಷಾನಪಿ = ಕೋಣಗಳನ್ನೂ ಸಹ, ವಿಪನೇ = ಅರಣ್ಯದಲ್ಲಿ, ಇತಸ್ತಃ = ಅತ್ತ - ಇತ್ತಲೂ, ಸಂಚರನ್ ಸನ್ = ಅಟ್ಟಿಸಿಕೊಂಡು ಸಂಚರಿಸುವವನಾಗಿ, ಸಃ ದೇವಃ = ಆ ಸ್ವಾಮಿಯಾದ ಶ್ರೀನಿವಾಸನು, ಜಘಾನ = ಸಂಹರಿಸಿದನು ।। 12 ।। ತತ್ರ = ಆ ಕಾಡಿನಲ್ಲಿ, ಮದಮತ್ತಂ = ಮದದಿಂದಮತ್ತವಾದ, ವನೇಚರಂ = ಅರಣ್ಯದಲ್ಲಿ ಸುತ್ತುತ್ತಿರುವ, ಏಕಂ = ಒಂದು, ಹಸ್ತಿಪಂ = ಒಂಟಿಸಲಗವನ್ನು (ಒಂದು ಗಂಡಾನೆಯನ್ನು) ದೃಷ್ಟ್ವಾ = ಕಂಡು, ರಮಾಪತಿಃ = ಶ್ರೀನಿವಾಸನು, ತಂ = ಆ ಒಂಟಿ ಸಲಗವನ್ನು, ಹಂತುಂ = ಕೊಲ್ಲಲು, ಪೃಷ್ಠ ಮನುಸೃತ್ಯ = ಆ ಗಜವನ್ನು ಬೆನ್ನಟ್ಟಿ, ಅಗಮತ್ = ಹೋದನು ।। 13 ।। ಸಃ = ಆ ಗಂಡಾನೆಯು, ವೃಷಾಕಪೇಃ = ಶ್ರೀನಿವಾಸನ, ಭಯಾತ್ = ಭಯದಿಂದ, ಭೀತಃ = ಹೆದರಿ, ವನೇ = ಅರಣ್ಯದಲ್ಲಿ, ದೂರಂ = ಬಹುದೂರ, ಜಗಾಮ = ಹೋಯಿತು. ಸಾರ್ಧಕಂಯೋಜನಂ = ಒಂದೂವರೆಗಾವುದದವರೆಗೂ, ಗತ್ವಾ = ಹೋಗಿ, ತತ್ರ = ಅಲ್ಲಿ, ದೇವಂ = ಪ್ರಭುವಾದ, ಜನಾರ್ದನಂ = ಶ್ರೀವೇಂಕಟೇಶ್ವರನನ್ನು, ದಂಡವತ್ ಪತಿತೋಭೂತ್ವಾ = ನೆಲದಮೇಲೆ ಕಟ್ಟಿಗೆಯಂತೆ ಬಿದ್ದುದಾಗಿ, ಶುಂಡಾಂ (ಶುಂಡಂ) = ಸೊಂಡಿಲನ್ನು, ಉದ್ಯಮ್ಯ = ಮೇಲೆತ್ತಿ, ಘರ್ಜಯನ್ = ನಿಷಾದಧ್ವನಿ ಮಾಡುತ್ತಾ, ಯದಾ = ಯಾವಾಗ, ನತಃ = ನಮಸ್ಕರಿಸಿತೋ, ತದಾ = ಆವಾಗ, ಕನ್ಯಾ = ಓರ್ವ ಕನ್ಯೆಯು, ದೃಷ್ಟಿಮಾರ್ಗಮುಪಾಗತಾ = ಕಣ್ಣಿಗೆ ಕಾಣಿಸಿದಳು ।। 15 ।।

***ಋಷಯ ಊಚುಃ -***

**ಸಾ ಕನ್ಯಾ ಕಸ್ಯ ಸಂಬದ್ಧಾ ಕಿಮರ್ಥಂ ವನಮಾಗತಾ ।**
**ಕಸ್ಯೇಯಂ ತನಯಾ ಸರ್ವಂ ತದ್ವದಸ್ವ ಮಹಾಮತೇ ।। 16 ।।**

**ಇತಿ ತೈಶ್ಚ ಸಮಾಜ್ಞಪ್ತಃ ಸೂತಃ ಪರಮಧಾರ್ಮಿಕಃ ।**
**ಉವಾಚ ವಚನಂ ಭಕ್ತ್ಯಾ ಸಂತೋಷೋದ್ರಿಕ್ತಮಾನಸಃ ।। 17 ।।**

ಋಷಯ ಊಚುಃ = ಋಷಿಮುನಿಗಳು ಮಾತನಾಡಿದರು. ಮಹಾಮತೇ = ಮಹಾಮತಿವಂತನಾದ ಸೂತಮುನಿಯೇ; ಸಾ = ನೀನು ಹೇಳಿದ ಆ, ಕನ್ಯಾ = ಕನ್ನಿಕೆಯು, ಕಸ್ಯ = ಯಾರಿಗೆ, ಸಂಬದ್ಧಾ = ಸಂಬಂಧಿಸಿದವಳು?, ಕಿಮರ್ಥಂ = ಯಾವ ಉದ್ದಿಶ್ಯದಿಂದ, ವನಂ = ವನವನ್ನು ಕುರಿತು, ಆಗತಾ = ಬಂದಳು?, ಕಸ್ಯೈವ = ಯಾರ, ತನಯಾ = ಪುತ್ರಿಯು?, ತತ್ಸರ್ವಂ = ಅವೆಲ್ಲ ವಿಷಯಗಳನ್ನು, ವದಸ್ವ = ಹೇಳುವವನಾಗು ।। 16 ।। ಇತಿ = ಈ ಪ್ರಕಾರವಾಗಿ, ತೈಶ್ಚ = ಋಷಿ ಮುನಿಗಳಿಂದ, ಸಮಾಜ್ಞಪ್ತಃ = ಕೇಳಲ್ಪಟ್ಟವನಾದ, ಪರಮಧಾರ್ಮಿಕಃ = ಅತ್ಯಂತ ಧರ್ಮಿಷ್ಠನಾದ, ಸೂತಃ = ಸೂತಾಚಾರ್ಯನು, ಸಂತೋಷೋದ್ರಿಕ್ತ ಮಾನಸಃ = ಆನಂದದಿಂದ ಉದ್ರಿಕ್ತವಾದ ಮನಸ್ಸುಳ್ಳವನಾಗಿ, ಭಕ್ತ್ಯಾ = ಭಕ್ತಿ (ಪ್ರೇಮದಿಂದ)ಯಿಂದ, ವಚನಂ ಉವಾಚ = ಮಾತನಾಡಿದನು ।। 17 ।।

***ಸೂತ ಉವಾಚ –***

**ಶೃಣ್ವಂತು ಮುನಯಸ್ಸರ್ವೇ ಕನ್ಯಾಯಾ ಜನ್ಮ ಪಾವನಮ್ ।**
**ಪುರಾತು ದ್ವಾಪರಸ್ಯಾಂತೇ ಪಾಂಡವಾನಾಂ ಮಹಾತ್ಮನಾಮ್ ।। 18 ।।**

ಯುದ್ಧೇ ತು ಭಾರತೇऽತೀತೇ ಅಷ್ಟಾವಿಂಶತಿಮೇ ಕಲೌ ।
ವಿಕ್ರಮಾರ್ಕಾದಯೋ ಭೂಪಾಃ ಸ್ವರ್ಗಲೋಕಂ ಯದಾ ಯಯುಃ ॥ 19 ॥

ತತ್ಕಾಲಾಂತೇ ವತ್ಸರಾಣಾಂ ಸಹಸ್ರೇ ಚ ಸಮಾಗತೇ ।
ಚಂದ್ರವಂಶೇ ನೃಪಃ ಕಶ್ಚಿತ್ಸುವೀರ ಇತಿ ನಾಮಕಃ ॥ 20 ॥

ಜಜ್ಞೇ ಸುಧರ್ಮಸ್ತತ್ಪುತ್ರಃ ತತ್ಸುತೌ ನೃಪಪುಂಗವೌ ।
ಆಕಾಶತೋಂಡಮಾನಾಖ್ಯೌ ಸರ್ವಲೋಕಯಶಸ್ಕರೌ ॥ 21 ॥

ಧರ್ಮಿಷ್ಠೌ ದೃಢಭಕ್ತೌ ತೌ ನಾರಾಯಣಪರಾಯಣೌ ।
ಜ್ಯೇಷ್ಠೋ ವಿಯನ್ನೃಪಸ್ಸಾಧುಃ ಕನಿಷ್ಠಸ್ತೋಂಡಮಾನ್ನೃಪಃ ॥ 22 ॥

ತೋಂಡದೇಶಾಧಿಪೋ ಭೂತ್ವಾ ಶಶಾಸ ಪೃಥಿವೀಮಿಮಾಮ್ ।
ರಕ್ಷಮಾಣೇ ನೃಪೇ ತಸ್ಮಿನ್ ಜನಾ ಧರ್ಮಪರಾಯಣಾಃ ॥ 23 ॥

ನಿರಾತಂಕಂ ಭವತ್ಸರ್ವಂ ಜಗತ್ ಸ್ಥಾವರಜಂಗಮಮ್ ।
ಗಾವೋ ಬಹುಪಯೋದಾಶ್ಚ ನಾರ್ಯಃ ಪತಿಪರಾಯಣಾಃ ॥ 24 ॥

ಕದಾಚಿತ್ಪುತ್ರಕಾಂಕ್ಷೀ ಸ ಏಕಾಂತೇ ಭವನೇ ಸ್ಥಿತಃ ।
ಅಪುತ್ರೋ ನೃಪತಿರ್ದುಃಖಾದ್ಗುರುಂ ಪ್ರೋವಾಚ ಭಕ್ತಿತಃ ॥ 25 ॥

ಸೂತ ಉವಾಚ = ಸೂತಾಚಾರ್ಯನಿಂತೆಂದನು – ಸರ್ವೇಮುನಯಃ = ಸಮಸ್ತ ಋಷಿಗಳೂ, ಕನ್ಯಾಯಾಃ = ಆ ಕನ್ನಿಕೆಯ, ಪಾವನಂ = ಪರಿಶುದ್ಧವಾದ, ಜನ್ಮ = ಅವತಾರ ವಿಚಾರವನ್ನು, ಶೃಣ್ವಂತು = ಕೇಳುವವರಾಗಲಿ, ಪುರಾತು = ಪೂರ್ವದಲ್ಲಿ, ದ್ವಾಪರಸ್ಯಾಂತೇ = ದ್ವಾಪರಯುಗದ ಕೊನೆಯ ಭಾಗದಲ್ಲಿ, ಮಹಾತ್ಮನಾಂ = ಮಹಾತ್ಮರಾದ, ಪಾಂಡವಾನಾಂ = ಪಾಂಡವರ ॥ 18 ॥ ಭಾರತೇ = ಭರತ ವಂಶೀಕರ ಸಂಬಂಧವಾದ, ಯುದ್ಧೇ = ಯುದ್ಧವು, ಅತೀತೇತು = ಮುಗಿದ ಮೇಲೆ (ಕೊನೆಗೊಂಡ ಮೇಲೆ), ಅಷ್ಟಾವಿಂಶತಿಮೇ = ಇಪ್ಪತ್ತೆಂಟನೆಯ, ಕಲೌ = ಕಲಿಯುಗದಲ್ಲಿ, ವಿಕ್ರಮಾರ್ಕಾದಯಃ = ವಿಕ್ರಮಾರ್ಕಾದಿಗಳಾದ, ಭೂಪಾಃ = ನೃಪತಿಗಳು, ಯದಾ = ಯಾವಾಗ, ಸ್ವರ್ಗಲೋಕಂ = ದೇವತೆಗಳ ಲೋಕವಾದ ಸ್ವರ್ಗವನ್ನು ಕುರಿತು, ಯಯುಃ = ಹೋದಂಥವರಾದರೋ ॥ 19 ॥ ತತ್ಕಾಲಾಂತೇ = ಆ ಕಾಲದ ಕೊನೆಯ ಭಾಗದಲ್ಲಿ, ವತ್ಸರಾಣಾಂ ಸಹಸ್ರೇ = ಸಾವಿರ ವರ್ಷಗಳು, ಸಮಾಗತೇ = ಕಳೆಯಲು (ಆಗಲು), ಚಂದ್ರವಂಶೇ = ಚಂದ್ರವಂಶದಲ್ಲಿ, ಸುವೀರ ಇತಿ = ಸುವೀರನೆಂಬ, ನಾಮಕಃ = ಹೆಸರುಳ್ಳ, ಕಶ್ಚಿತ್ = ಒಬ್ಬ, ನೃಪಃ = ಮಹಾರಾಜನು ॥ 20 ॥ ಜಜ್ಞೇ = ಜನಿಸಿದನು. ಸುಧರ್ಮಃ = ಸುಧರ್ಮನೆಂಬ ನರಪತಿಯು, ತತ್ಪುತ್ರಃ = ಸುವೀರರಾಜನ ಮಗನಾಗಿ, ಜಜ್ಞೆ = ಹುಟ್ಟಿದನು, ತತ್ಸುತೌ = ಸುಧರ್ಮ ರಾಜನ ಈರ್ವರು ಸುತರಾದ, ಆಕಾಶ ತೋಂಡಮಾನಾಖ್ಯೌ = ಆಕಾಶರಾಯ ತೋಂಡ ಮಾನರಾಯ ಎಂಬುವವರು, ಸರ್ವ ಲೋಕ ಯಶಸ್ಕರೌ – ಸರ್ವಲೋಕ = ಸಮಸ್ತ ಲೋಕಗಳಲ್ಲಿ, ಯಶಸ್ಕರು = ಕೀರ್ತಿಗಳಿಸಿದರು. ॥ 21 ॥ ತೌ = ಆಕಾಶ – ತೋಂಡಮಾನರು, ಧರ್ಮಿಷ್ಠೌ = ಧರ್ಮ ಪರಾಯಣರೂ, ದೃಢಭಕ್ತೌ = ಭಗವಂತನ ದೃಢಭಕ್ತರೂ, ನಾರಾಯಣ ಪರಾಯಣೌ = ಶ್ರೀಹರಿ ಪರಮಾತ್ಮನ ಧ್ಯಾನದಲ್ಲಿ ನಿರತರೂ(ಆಗಿದ್ದರು).

ಜ್ಯೇಷ್ಠಃ = ಹಿರಿಯನಾದ, ವಿಯನ್ನೃಪಃ = ಆಕಾಶರಾಜನು, ಸಾಧುಃ = ಸಜ್ಜನನಾಗಿದ್ದನು, ತೋಂಡಮಾನ್ನೃಪಃ = ತೋಂಡಮಾನ ಭೂಪತಿಯು, ಕನಿಷ್ಠಃ = ಕಿರಿಯನು ।। 22 ।। ತೊಂಡದೇಶಾಧಿಪೋ ಭೂತ್ವಾ = (ಅವನು) ತೋಂಡದೇಶಕ್ಕೆ ಅಧಿಪತಿಯಾಗಿ, ಇಮಾಂ ಪೃಥಿವೀಂ = ಈ ಭೂಮಿಯನ್ನು (ರಾಜ್ಯವನ್ನು), ಶಶಾಸ = ಪಾಲಿಸಿದನು, ತಸ್ಮಿನ್ನೃಪೇ = ಆ ತೋಂಡಮಾನರಾಜನು, ರಕ್ಷಮಾಣೇ = ದೇಶವನ್ನು ಪಾಲಿಸುತ್ತಿರುವಾಗ, ಜನಾಃ = ಪ್ರಜಾಜನರು, ಧರ್ಮಪರಾಯಣಾಃ = ಧಾರ್ಮಿಕರಾಗಿದ್ದರು ।। 23 ।। ಸರ್ವಂ = ಸಮಸ್ತವಾದ, ಸ್ಥಾವರಜಂಗಮಂ = ಜಡಚೇತನಗಳೆಲ್ಲವೂ, (ಚರಾಚರಾತ್ಮಕ ಪ್ರಪಂಚವು) ನಿರಾತಂಕಂ = ಯಾವ ರೀತಿ ಬಾಧೆಗಳಿಲ್ಲದಂತಾಯಿತು. ಗಾವಃ = ಗೋವುಗಳು, ಬಹುಪಯೋದಾಃ = ಅಧಿಕಹಾಲನ್ನು ಕರೆಯುತ್ತಿದ್ದವು (ಕೊಡುತ್ತಿದ್ದವು), ಚ = ಮತ್ತು, ನಾರ್ಯಃ = ನಾರಿಯರು, ಪತಿಪರಾಯಣಾಃ = ಪತಿವ್ರತೆಯರಾಗಿದ್ದರು. ।। 24 ।। ಕದಾಚಿತ್ = ಒಂದಾನೊಂದು ದಿವಸ, ಸಃ = ಆಕಾಶರಾಜನು, ಪುತ್ರಕಾಂಕ್ಷೀ = ಪುತ್ರೋತ್ಪತ್ತಿಯನ್ನು ಬಯಸುವವನಾಗಿ, ಭವನೇ = ಅರಮನೆಯಲ್ಲಿ, ಏಕಾಂತೇ = ಏಕಾಂತದಲ್ಲಿ, ಸ್ಥಿತಃ = ಇರುವವನಾಗಿ, ಗುರುಂ = ತನಗೆ ಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಕುರಿತು, ಭಕ್ತಿತಃ = ಭಕ್ತಿಯಿಂದ, ಅಪುತ್ರಃ = ಗಂಡು ಮಕ್ಕಳಿಲ್ಲದ, ನೃಪತಿಃ = ಆಕಾಶರಾಜನು, ದುಃಖಾತ್ = ದುಃಖದಿಂದ, ಪ್ರೋವಾಚ = ಹೇಳಿದನು ।। 25 ।।

*ಆಕಾಶರಾಜ ಉವಾಚ –*

**ಅನುಭೂತಮಿದಂ ರಾಜ್ಯಂ ಹಸ್ತ್ಯಶ್ವ ರಥಸಂಕುಲಮ್ ।**
**ನಾನಾದಾನಂ ಕೃತಂ ಚೈವ ತೀರ್ಥಯಾತ್ರಾ ವಿಶೇಷತಃ ।। 26 ।।**

**ನಾನುಭೂತಂ ಪುತ್ರಸೌಖ್ಯಂ ಪಿತೄಣಾಂ ಮುಕ್ತಿದಂ ದ್ವಿಜ ।**
**ಕಿಂ ಮಯಾಚರಿತಂ ಪಾಪಂ ಕಸ್ಯ ಪುತ್ರೋ ಹತಃ ಪುರಾ ।। 27 ।।**

**ತೇನಪಾಪೇನ ವಿಪೇಂದ್ರ ನ ಪ್ರಾಪ್ತಂ ಪುತ್ರ ಜನ್ಮ ಮೇ ।**
**ನೇತ್ರಾಭ್ಯಾಂ ನೈವ ದೃಷ್ಟಂ ಚ ಪುತ್ರಸ್ಯ ಮುಖಪಂಕಜಮ್ ।। 28 ।।**

**ಕರ್ಣಾಭ್ಯಾಂ ನ ಶ್ರುತಶ್ಶಬ್ದಃ ಪುತ್ರೇಣ ರುದತಾ ಕೃತಃ ।**
**ದ್ವಿಜೇಂದ್ರ ಪಿತೃಬಂಧೂನಾಂ ದುರ್ಗತಿಶ್ಚ ಭವೇತ್ತತಃ ।। 29 ।।**

**ಅಪುತ್ರಸ್ಯ ಗತಿರ್ನಾಸ್ತಿ ಇತಿ ವೇದವಿದೋ ವಿದುಃ ।**
**ಪುತ್ರೇಣ ರುಕ್ಮಪಾತ್ರೇ ತು ನ ಭುಕ್ತಂ ಹಿ ಮಯಾ ಸಹ ।। 30 ।।**

ಆಕಾಶರಾಜ ಉವಾಚ = ಆಕಾಶರಾಯ ಮಹೀಪತಿಯು ನುಡಿದನು – ಹಸ್ತ್ಯಶ್ವ ರಥಸಂಕುಲಂ = ಗಜ – ತುರಗ-ರಥಗಳಿಂದಯುಕ್ತವಾದ, ಇದಂರಾಜ್ಯಂ = ಈ ರಾಜ್ಯವು, ಅನುಭೂತಂ = ನನ್ನಿಂದ ಅನುಭವಿಸಲ್ಪಟ್ಟಿತು, ಚ = ಮತ್ತು, ನಾನಾ ದಾನಂ = ವಿಧವಿಧವಾದ ದಾನವು, ಕೃತಂ = ಮಾಡಲ್ಪಟ್ಟಿತು; ವಿಶೇಷತಃ = ವಿಶೇಷಾಕಾರವಾಗಿ, ತೀರ್ಥಯಾತ್ರಾ = ಪುಣ್ಯಕ್ಷೇತ್ರತೀರ್ಥಗಳ ಯಾತ್ರೆಯೂ ಸಹ (ನೆರವೇರಿಸಲ್ಪಟ್ಟಿತು) ।। 26 ।। ದ್ವಿಜ = ಎಲೈ ವಿಪ್ರನೇ, ಪಿರ್ತೃಣಾಂ = ಪಿತೃಗಳಿಗೆ, ಮುಕ್ತಿದಂ = ಶಾಶ್ವತ ಸುಖವನ್ನು (ಮೋಕ್ಷವನ್ನು) ನೀಡುವ, ಪುತ್ರಸೌಖ್ಯಂ = ಪುತ್ರಸುಖವು, ಮಯಾ = ನನ್ನಿಂದ, ನಾನುಭೂತಂ = ಅನುಭವಿಸಲ್ಪಡಲಿಲ್ಲ, ಮಯಾ = ನನ್ನಿಂದ, ಕಿಂಪಾಪಂ = ಪೂರ್ವದಲ್ಲಿ ಯಾವ ಪಾಪ(ಕಾರ್ಯ)ವು, ಆಚರಿತಂ = ಆಚರಿಸಲ್ಪಟ್ಟಿತು? ಕಸ್ಯ = ಯಾರ, ಪುತ್ರಃ = ಮಗನು, ಪುರಾ = ಪೂರ್ವ(ಜನ್ಮ)ದಲ್ಲಿ

ಹತಃ = ಹತನಾದನು (ಕೊಲ್ಲಲ್ಪಟ್ಟನು?) ॥ 27 ॥ ವಿಪ್ರೇಂದ್ರ = ಬ್ರಾಹ್ಮಣೋತ್ತಮನೇ! ಕೇನ ಪಾಪೇನ = ಯಾವ ಪಾಪ (ಕೆಲಸ)ದಿಂದ, ಪುತ್ರಜನ್ಮ = ಪುತ್ರೋತ್ಪತ್ತಿಯು, ಮೇ = ನನಗೆ, ನ ಪ್ರಾಪ್ತಂ = ಆಗಲಿಲ್ಲ (ಉಂಟಾಗಲಿಲ್ಲ?) ಪುತ್ರಸ್ಯ = ಕುಮಾರನ, ಮುಖ ಪಂಕಜಂ = ವದನಕಮಲವು, ನೇತ್ರಾಭ್ಯಾಂ = (ನನ್ನೀ ಎರಡು) ಕಣ್ಣುಗಳಿಂದ, ನೈವದೃಷ್ಟಂ = ಅವಲೋಕಿಸಲ್ಪಡಲೇ ಇಲ್ಲ ॥ 28 ॥ ದ್ವಿಜೇಂದ್ರ = ಭೂಸುರಶ್ರೇಷ್ಠನೇ! ರುದತಾ = ಅಳುತ್ತಿರುವ, ಪುತ್ರೇಣ = ಮಗನಿಂದ, ಕೃತಃ = ಮಾಡಲ್ಪಟ್ಟ, ಶಬ್ದಃ = ರೋದನಧ್ವನಿಯು, ಕರ್ಣಾಭ್ಯಾಂ = ಕಿವಿಗಳಿಂದ, ನಶ್ರುತಃ = ಶ್ರವಣ ಮಾಡಲ್ಪಡಲಿಲ್ಲ, ತತಃ = ಪುತ್ರಸಂತಾನವಿಲ್ಲದಿರುವುದರಿಂದ, ಪಿತೃಬಂಧೂನಾಂ = ನಮ್ಮ ಕುಲದ ಪಿತೃಗಳಿಗೆ, ದುರ್ಗತಿ = ಕೆಟ್ಟಗತಿಯು (ಅಂದರೆ ನರಕವು), ಭವೇತ್ = ಉಂಟಾದೀತು! ॥ 29 ॥ ಅಪುತ್ರಸ್ಯ = ವಂಶದೀಪಕನಾದ ಪುತ್ರನಿಲ್ಲದಿರುವವನಿಗೆ, ಗತಿಃ = ಸದ್ಗತಿಯು, ನಾಸ್ತಿ = ಇಲ್ಲ, ಇತಿ = ಹೀಗೆ, ವೇದವಿದಃ = ವೇದಶಾಸ್ತ್ರಾಭಿಜ್ಞರು, ವಿದುಃ = ತಿಳಿಯುವರು (ಹೇಳುವರು); ರುಕ್ಮಪಾತ್ರೇ = ಬಂಗಾರದ ತಟ್ಟೆಯಲ್ಲಿ, ಪುತ್ರೇಣಸಹ = ಕುಮಾರನೊಡನೆ, ಮಯಾ = ನನ್ನಿಂದ, ನಭುಕ್ತಂ = ಭೋಜನ ಮಾಡಲ್ಪಡಲಿಲ್ಲ, ಹಿ = ಪ್ರಸಿದ್ಧವು ॥ 30 ॥

**ಮದಂಕೇ ಕೃತಭೂಷಶ್ಚ ಲಾಲಿತೋ ನ ಮಯಾ ಸುತಃ ।**
**ಪಾಪಿಷ್ಠೋಽಹಂ ದುರಾಚಾರೀ ಹ್ಯಪುತ್ರೋಽಹಂ ದರಿದ್ರವಾನ್ ॥ 31 ॥**

**ಭೂಷಣಾನಿ ಕೃತಾನ್ಯದ್ಯ ಪುತ್ರಾರ್ಥಂ ಯತ್ನತೋ ಮಯಾ ।**
**ತೇಷಾಂ ಪ್ರಾಪ್ತೋ[4] ನ ಮೇ ಜನ್ಮ[5] ಪುತ್ರಃ ಪಿತೃಹಿತೇ ರತಃ ॥ 32 ॥**

**ಪುತ್ರಾರ್ಥಂ ಕವಚಂ ಕೃತ್ವಾ ಇತ ಏಹೀತಿ ನೋದಿತಮ್ ।**
**ಪುತ್ರಹೀನಂ ಚ ಮಾಂ ದೃಷ್ಟ್ವಾ ಕರ್ಷಂತಿ ಯಮಕಿಂಕರಾಃ ॥ 33 ॥**

**ಗಚ್ಛ ರಾಜನ್ ತ್ವರೇಣೈವ ಯಮಸ್ಯ ಭವನಂ ಪ್ರತಿ ।**
**ಪಾಶಕಂಠಿತ[6] ಸರ್ವಾಂಗಃ ಕಿಮುವಕ್ಷ್ಯಾಮ್ಯಪುತ್ರವಾನ್ ॥ 34 ॥**

**ಲಿಖಿತಂ ಚಿತ್ರಗುಪ್ತೇನ ಹ್ಯಪುತ್ರತ್ವಂ ಮಹಾಮತೇ ।**
**ಮದ್ಗರ್ಭಜಾತಪುತ್ರೇಣ ಮಾರ್ಜನಂ ತು ಕದಾ ಭವೇತ್ ॥ 35 ॥**

**ದುರಾಚಾರಾತಿದುರ್ಬುದ್ಧೇ ಹ್ಯಪುತ್ರೇತಿ ಯಮೇನ ಚ ।**
**ಭಾಷಿತಂ ವಚನಂ ಶ್ರುತ್ವಾ ಕಃ ಪುಮಾಂಸ್ಥಾತುಮುತ್ಸಹೇತ್ ॥ 36 ॥**

**ನಷ್ಟದೀಪೋತಿ ನೈಷ್ಠುರ್ಯಾಃ ಕಷ್ಟೋದ್ಭೂತ ಕಲೇವರಃ ।**
**ವೃಥಾ ಜಾತೋತಿಪಾಪಾತ್ಮಾ ಆತ್ಮಾನಂ ನರಕಾವಹಮ್ ॥ 37 ॥**

**ಪುತ್ರಹೀನಂ ಕುಲಂಚಾಪಿ ಹ್ಯನೀರಂ ಕೂಪಗಹ್ವರಮ್ ।**
**ಭರ್ತೃಹೀನಾಂ ಯಥಾ ಲೋಕಾ ನಿಂದಂತಿ ಜನಸಂಸದಿ ॥ 38 ॥**

---

4. ಪ್ರಾಪ್ತೌ, 5. ಜಾತಃ, 6. ಪಾಶಕುಂಠಿತ

ಕೃತಭೂಷಃ = ಒಡವೆಗಳಿಂದ ಅಲಂಕೃತನಾದ, ಸುತಃ = ಪುತ್ರನು, ಮದಂಕೇ = ನನ್ನ ತೊಡೆಯಮೇಲೆ, (ಕೂಡಿಸಿಕೊಳ್ಳಲ್ಪಟ್ಟವನಾದ) ಕುಳಿತಿರುವಾಗ, ಮಯಾ = ನನ್ನಿಂದ, ನ ಲಾಲಿತಃ = ಪಾಲನೆ ಮಾಡಲ್ಪಡಲಿಲ್ಲ (ಲಾಲಿಸಲ್ಪಡಲಿಲ್ಲ), ಅಹಂ = ನಾನು, ಪಾಪಿಷ್ಠಃ = ಪಾಪಿಯು, ದುರಾಚಾರೀ = ಕೆಟ್ಟನಡವಳಿಕೆಯುಳ್ಳವನು, ಅಹಂ = ನಾನು, ಅಪುತ್ರಃ = ಮಗನಿಲ್ಲದವನು (ಪುತ್ರಸಂತಾನಹೀನನು), ದರಿದ್ರವಾನ್ = ಕಡುಬಡವನು (ಅಂದರೆ ಪುತ್ರಸಂಪತ್ತಿಲ್ಲದ ದರಿದ್ರನು ಅಂತೆಯೇ ನನಗೆ ಮಕ್ಕಳಿಲ್ಲ) ।। 31 ।। ಅದ್ಯ = ಈಗ, ಪುತ್ರಾರ್ಥಂ = ಮಗನಿಗಾಗಿ, ಪ್ರಯತ್ನತಃ = ಪ್ರಯತ್ನ ಪೂರ್ವಕವಾಗಿ, ಮಯಾ = ನನ್ನಿಂದ, ಭೂಷಣಾನಿ = ವಿಧ ವಿಧವಾದ ಸುವರ್ಣ - ರತ್ನಮಯಗಳಾದ ಆಭರಣಗಳು, ಕೃತಾನಿ = ತಯಾರುಮಾಡಿಸಲ್ಪಟ್ಟಿದೆ (ನಿರ್ಮಿಸಲ್ಪಟ್ಟಿವೆ). ತೇಷಾಂ = ಆ ಆಭರಣಗಳನ್ನು, ಪ್ರಾಪ್ತೌ = ಪಡೆದು ಧರಿಸಿಕೊಳ್ಳಲು, ಪಿತೃಹಿತೇರತಃ = ತಂದೆತಾಯಿಯರ ಹಿತದಲ್ಲಿಯೇ ಆಸಕ್ತನಾದ, ಪುತ್ರಃ = ಸುತನು, ಮೇ = ನನಗೆ, ನ ಜನ್ಮ = ಜನ್ಮವನ್ನು ಪಡೆಯಲಿಲ್ಲ, (ನಜಾತಃ = ಜನಿಸಲಿಲ್ಲ). ।। 33 ।। ಪುತ್ರಾರ್ಥಂ = ಕುಮಾರನಿಗಾಗಿ, ಕವಚಂ = ಬಂಗಾರದ ಕವಚವನ್ನು (ಜರಿಯ ಅಂಗಿಯನ್ನು), ಕೃತ್ವಾ = ನಿರ್ಮಾಣಮಾಡಿಸಿ (ಹೊಲಿಸಿ), ಇತ ಏಹೀತಿ = ಇಲ್ಲಿ ಬಾ ಕುಮಾರ ಎಂದು, ನೋದಿತಂ = (ನನ್ನಿಂದ) ಹೇಳಲ್ಪಡಲಿಲ್ಲ, ಪುತ್ರಹೀನಂಚ = ಮಗನಿಲ್ಲದವನಾದ, ಮಾಂ = ನನ್ನನ್ನು, ದೃಷ್ಟ್ವಾ = ನೋಡಿ, ಯಮಕಿಂಕರಾಃ = ಯಮನ ದೂತರು (ಯಮಭಟರು), ರಾಜನ್ = ಎಲೈ ದೊರೆಯೇ, ತ್ವರೇಣೈವ = ಶೀಘ್ರವಾಗಿ, ಯಮಸ್ಯ = ಯಮಧರ್ಮರಾಜನ, ಭವನಂಪ್ರತಿ = ಮನೆಯನ್ನು ಕುರಿತು, ಗಚ್ಛ = ಹೊರಡು (ಇತಿ = ಹೀಗೆ), ಕರ್ಷಂತಿ = ಎಳೆಯುವರು, ಪಾಶಕಂಠಿತ (ಕುಂಠಿತ)ಸರ್ವಾಂಗಃ = ಯಮನ ಪಾಶದಿಂದ ಬಿಗಿಯಲ್ಪಟ್ಟ(ಕಟ್ಟಲ್ಪಟ್ಟ) ಸಕಲಾಂಗವುಳ್ಳವನಾದ, ಅಪುತ್ರವಾನ್ = ಪುತ್ರನಿಲ್ಲದ (ಪುತ್ರಹೀನನಾದ) ನಾನು, ಕಿಮುವಕ್ಷ್ಯಾಮಿ = ಏನನ್ನು ಹೇಳಲಿ? ।। 34 ।। ಮಹಾಮತೇ = ಅತಿಬುದ್ಧಿಶಾಲಿಯಾದ ಗುರುಗಳೇ, ಚಿತ್ರಗುಪ್ತೇನ = ಚಿತ್ರಗುಪ್ತನಿಂದ ಅಪುತ್ರತ್ವಂ = ಮಕ್ಕಳಿಲ್ಲದಿರುವಿಕೆಯು, ಲಿಖಿತಂ = (ನನ್ನ ಹಣೆಯಲ್ಲಿ) ಬರೆಯಲ್ಪಟ್ಟಿತ್ತು. ಮದ್ಗರ್ಭಜಾತಪುತ್ರೇಣ = ನನ್ನ ಹೊಟ್ಟೆಯಲ್ಲಿ ಹುಟ್ಟಿದ ಪುತ್ರನಿಂದ, ಮಾರ್ಜನಂ = ಪ್ರೋಕ್ಷಣವು (ಮಾರ್ಜನೆಯು), ಕದಾತು = ಯಾವಾಗ, ಭವೇತ್ = ಆದೀತು? ।। 35 ।। ಯಮೇನಚ = ಯಮರಾಜನಿಂದಲೂ, ದುರಾಚಾರ = ದುಷ್ಟನಡತೆಯುಳ್ಳವನೇ, ದುರ್ಬುದ್ಧೇ = ದುಷ್ಟಬುದ್ಧಿಯುಳ್ಳವನೇ, ಅಪುತ್ರ = ಸುತನಿಲ್ಲದವನೇ! ಇತಿ = ಈ ಪ್ರಕಾರವಾಗಿ, ಭಾಷಿತಂ = ನುಡಿಯಲ್ಪಟ್ಟ ವಚನಂ = ಮಾತನ್ನು, ಶ್ರುತ್ವಾ = ಕಿವಿಯಾರ ಕೇಳಿ, ಕಃಪುಮಾನ್ = ಯಾವ ಪುರುಷನು ತಾನೆ, ಸ್ಥಾತುಂ = ಯಮನೆದುರಿಗೆ ನಿಲ್ಲಲು (ಅಥವಾ, ಸ್ಥಾತುಂ = ಬದುಕಿರಲು) ಉತ್ಸಹೇತ್ = ಉತ್ಸುಕನಾದಾನು? ।। 36 ।। ನಷ್ಟದೀಪಃ = ನಂದಿಹೋದದೀಪವುಳ್ಳ, ನಷ್ಟದೀಪಃ = ನಷ್ಟವಾದ ಮಗನೆಂಬದೀಪವುಳ್ಳವನು, ನೈಷ್ಠುರ್ಯಃ = ನಿಷ್ಠೂರಿಯೂ, (ಅತಿಕಠಿಣನಾದವನೂ), ಕಷ್ಟೋದ್ಭೂತಕಲೇವರಃ - ಕಷ್ಟ = ಕಷ್ಟಪಡಲೋಸುಗವೇ (ಶ್ರಮಿಸಲೆಂದೇ), ಉದ್ಭೂತ = ಹುಟ್ಟಿದ, ಕಲೇವರಃ = ದೇಹವುಳ್ಳವನೂ ಆದ, ಅತಿ ಪಾಪಾತ್ಮಾ = ಅತ್ಯಂತ ಪಾಪಮಯವಾದ, (ಬಹುಪಾಪಿಷ್ಟನಾದ), ನರಕಾವಹರ = ನರಕಕ್ಕೆ ಯೋಗ್ಯವಾದ, ಆತ್ಮಾನಂ = ಶರೀರವುಳ್ಳವನಾಗಿ, ವೃಥಾ = ವ್ಯರ್ಥವಾದ (ಪ್ರಯೋಜನಕ್ಕ ಬಾರದವನಾಗಿ), ಜಾತಃ = ಹುಟ್ಟಿರುವೆನು ।। 37 ।। ಲೋಕಾಃ = ಜನರು, ಭರ್ತೃಹೀನಾಂ = ಪತಿಯನ್ನು ಕಳೆದುಕೊಂಡಿರುವ ಹೆಂಗಸನ್ನು (ವಿಧವೆಯನ್ನು), ಸಂಸದಿ = ಜನರಗುಂಪಿನಲ್ಲಿ (ಸಭೆಯಲ್ಲಿ), ಯಥಾ = ಹೇಗೆ, ನಿಂದಂತಿ = ದೂಷಿಸುವರೋ, ತಥಾ = ಹಾಗೆಯೇ, ಪುತ್ರಹೀನಮಪಿ = ಮಗನಿಲ್ಲದವನನ್ನೂ ಕೂಡ, ಕುಲಂಚ = ವಂಶವನ್ನೂ ಸಹ, ಅನೀರಂ = ನೀರಿಲ್ಲದ, ಕೂಪಗಹ್ವರಂ = ಹಾಳು ಗುಂಡಿಗೆ ಸಮನಾದ ಭೂಮಿಯೆಂದು, ನಿಂದಂತಿ = ನಿಂದಿಸುವರು ।। 38 ।।

**ಕಿಂಕರೋಮಿ ಮಹೀದೇವ ಕ್ವ ಗಚ್ಛಾಮ್ಯದ್ಯ ಕಾ ಗತಿಃ ।**
**ಕಂ ದೇವಂ ಶರಣಂ ಗತ್ವಾ ಭವಾಬ್ಧಿಂ ಪ್ರತರಾಮ್ಯಹಮ್ ।। 39 ।।**

ರುದಂತಂ ಪುತ್ರಮಾಲೋಕ್ಯ ವಾಚಂ ಪ್ರೇಮ್ಣಾಥ ವಾ ಮಯಾ ।
ನೋದಿತಾ ಮಾರುದಸ್ವೇತಿ ವಿನಿಂದ್ಯಾತ್ಮಸತೀಂ ರುಷಾ ॥ 40 ॥

ಪಯಃ ಸಂಪಾಯಯೇತ್ಯಾಶು ನೋಚೇತ್ತ್ವಾಂ ತಾಡಯಾಮ್ಯಹಮ್ ।
ಘಂಟಾಂ ಚ ಪ್ರತಿಮಾಂ ದೇಹಿ ಪುತ್ರಸ್ಯ ಫಲಕಂದುಕೇ ॥ 41 ॥

ಗಜಮಾರೋಪ್ಯ ತನಯಂ ಕುರು ಗ್ರಾಮಪ್ರದಕ್ಷಿಣಮ್ ।
ಸಭಾಂ ಗಚ್ಛಾಮ್ಯಹಂ ರಾಜ್ಞಿ ತಥಾ ತಾಲಸ್ವನೇನ ಚ ॥ 42 ॥

ಬಾಲ್ಯೇ ನ ಜಾತಕರ್ಮಾಣಿ ತಥಾ ಪುತ್ರಾಭಿದಂ[7] ದ್ವಿಜ ।
ಕವಚಂ ಕಾರಯಿತ್ವಾತು ಶಿರೋಭೂಷಣಮದ್ಭುತಮ್ ॥ 43 ॥

ಕೇಶಭೂಷಣಮತ್ಯಂತಂ[8] ರತ್ನವಜ್ರಸಮಾಕುಲಮ್ ।
ಭೂಷಯಿತ್ವಾ ಶಿಶುಂ ನಾಹಮಾಲೋಕ್ಯ ಪ್ರೀತಿಮಾಪ್ತವಾನ್ ॥ 44 ॥

ಅಂಕಮಾರೋಪ್ಯ ತನಯಂ ನ ಮಯಾ ಲಾಲಿತ ಸ್ಸುತಃ ।
ನೋಪನೀತೋತಿಪ್ರೀತ್ಯೈವ ಸುತೋ ಮೇ ಪಂಚವಾರ್ಷಿಕಃ ॥ 45 ॥

ಅಷ್ಟಮೇವಾಥ ದಶಮೇ ನ ಕೃತೋ ದಾರಸಂಗ್ರಹಃ ।
ತೇನಾರ್ಜಿತಂ ಧನಂ ಬ್ರಹ್ಮನ್ನೋಪಜೀವಿತಮದ್ಯ ಮೇ ॥ 46 ॥

ಅಭಿಷಿಚ್ಯ ಸುತಂ ರಾಜ್ಯೇ ಭಾರ್ಯಯಾಕೃತ ಭೋಜನಮ್ ।
ನ ಗತಂ ಚ ವನಂ ಬ್ರಹ್ಮನ್ ಪಾರಂಪರ್ಯಾಗತಂ ಮಮ ॥ 47 ॥

ಮಹೀದೇವ = ಎಲೈ ಬ್ರಾಹ್ಮಣಶ್ರೇಷ್ಠನೇ! ಕಿಂ ಕರೋಮಿ = ಏನು ಮಾಡಲಿ? ಕ್ವ ಗಚ್ಛಾಮಿ = ಎಲ್ಲಿಗೆ ಹೋಗಲಿ? ಅದ್ಯ = ಈಗ, ಕಾ ಗತಿಃ = ನನಗೇನು ಗತಿ? ಕಂ ದೇವಂ = ಯಾವ ದೇವತೆಯನ್ನು, ಶರಣಂಗತ್ವಾ = ರಕ್ಷಕನನ್ನಾಗಿ ಪಡೆದು, ಅಹಂ = ನಾನು, ಭವಾಬ್ಧಿಂ = ಸಂಸಾರಸಾಗರವನ್ನು, ಪ್ರತರಾಮಿ = ದಾಟಲಿ? (ದಾಟುವವನಾಗಲಿ?) ॥ 39 ॥ ರುದಂತಂ = ಅಳುತ್ತಿರುವ, ಪುತ್ರಂ = ಕುಮಾರನನ್ನು, ಆಲೋಕ್ಯ = ನೋಡಿ, ಮಾಯಾ = ನನ್ನಿಂದ, ಪ್ರೇಮ್ಣಾ = ಪ್ರೀತಿಯಿಂದ, ವಾಚಂ = ಮಾತು, ನೋದಿತಾ = ಹೇಳಲ್ಪಡಲಿಲ್ಲ, ಅಥವಾ = ಹಾಗಲ್ಲದಿದ್ದರೆ, ಮಾರುದಸ್ವೇತಿ = ಅಳಬೇಡವೆಂದು, ರುಷಾ = ಕೋಪದಿಂದ, ನೋದಿತಾ = ಹೇಳಲ್ಪಡಲಿಲ್ಲ, ಆತ್ಮಸತೀಂ = ನಿಜಪತ್ನಿಯನ್ನು, ರುಷಾ = ಕೋಪದಿಂದ, ವಿನಿಂದ್ಯ = ಮಗನನ್ನು ಅಳಿಸುತ್ತಿರುವೆಯಾ ಎಂದು ನಿಂದಿಸಿ(ಬೈದು), ವಾಚಂ = ಮಾತನ್ನು, ನೋದಿತಾ = ಹೇಳಲ್ಪಡಲಿಲ್ಲ ॥ 40 ॥ ಆಶು = ಶೀಘ್ರವಾಗಿ, ಪಯಃ = ಹಾಲನ್ನು (ಎದೆಯ ಹಾಲನ್ನು) ಪಾಯಯ = ಕುಡಿಸು, ನೋಚೇತ್ = ಇಲ್ಲದೊಡೆ, ತ್ವಾಂ = ನಿನ್ನನ್ನು, ಅಹಂ = ನಾನು, ತಾಡಯಾಮಿ = ಹೊಡೆಯುತ್ತೇನೆ, ಘಂಟಾಂ = ಘಂಟೆಯನ್ನು, ಪ್ರತಿಮಾಂ = ಆಟದಬೊಂಬೆಯನ್ನು (ವಿಗ್ರಹವನ್ನು), ಚ = ಮತ್ತು, ಫಲಕಂದುಕೇ = ಹಣ್ಣು – ಚೆಂಡುಗಳನ್ನು, ಪುತ್ರಸ್ಯ = ಮಗನಿಗೆ,

7. (ಪಾ: ಪುತ್ರಾಭಿದಾಂ)

ದೇಹಿ = ಕೊಡು ।। 41 ।। ತನಯಂ = ಕುಮಾರನನ್ನು, ಗಜಮಾರೋಪ್ಯ = ಆನೆಯಮೇಲೆ ಕೂಡಿಸಿ, ಗ್ರಾಮಪ್ರದಕ್ಷಿಣಂ = ನಗರಪ್ರದಕ್ಷಿಣೆಯನ್ನು (ರಾಜಧಾನಿಯಲ್ಲಿ ಮೆರವಣಿಗೆಯನ್ನು), ಕುರು = ಮಾಡಿಸು, ರಾಜ್ಞಿ = ಎಲೈ ರಾಣಿಯೇ! ಅಹಂ = ನಾನು, ತಾಲಸ್ವರೇಣ = ತಾಳವಾದ್ಯಸ್ವರದೊಡನೆ (ಬಾಜಾ ಭಜಂತ್ರಿಯೊಡನೆ) ಸಭಾಂ (ಪ್ರತಿ) = ರಾಜಸಭೆಯನ್ನು ಕುರಿತು, ಗಚ್ಛಾಮಿ = ಹೋಗುತ್ತಿರುವೆನು (ಎಂದು ಹೇಳಲಿಲ್ಲ) ।। 42 ।। ದ್ವಿಜ = ಎಲೈ ಭೂಸುರನೇ ! ತಥಾ = ಇದರಂತೆಯೇ, ಬಾಲ್ಯೇ = ಬಾಲ್ಯದಲ್ಲಿ, ಪುತ್ರಾಬಿಧಂ = ಮಗನಿಗೆ ನಾಮಕರಣವನ್ನೂ (ಪುತ್ರಾಭಿಧಾಂ = ನಾಮಕರಣವನ್ನೂ), ಜಾತಕರ್ಮಾಣಿ = ಜನನ ಮಹೋತ್ಸವಾದಿ ಕಾರ್ಯಗಳನ್ನು, ನ = ಮಾಡಲಿಲ್ಲ, ತಥಾ = ಹಾಗೆಯೇ (ಮತ್ತು), ಕವಚಂ = ಬಂಗಾರದ ಕವಚವನ್ನು, (ಜರಿಯಅಂಗಿಯನ್ನು), ಕಾರಯಿತ್ವಾತು = ನಿರ್ಮಾಣ ಮಾಡಿಸಿ (ಹೊಲಿಸಿ), ಅದ್ಭುತಂ = ವಿಚಿತ್ರವಾದ, ಶಿರೋಭೂಷಣಂ = ಕಿರೀಟವನ್ನು (ಪೇಟವನ್ನು), ಕಾರಯಿತ್ವಾತು = ಮಾಡಿಸುವವನಾಗಿ ।। 43 ।। ಅತ್ಯಂತಂ = ಅತಿಶಯವಾಗಿ, ರತ್ನವಜ್ರ ಸಮಾಕುಲಂ = ರತ್ನವಜ್ರಮಯವಾದ, ಕೇಶಭೂಷಣಂ = ಕೇಶಾಲಂಕಾರವಾದ ಆಭರಣವನ್ನು, ಕಾರಯಿತ್ವಾ = ಮಾಡಿಸಿ, ಭೂಷಯಿತ್ವಾ = ಅವುಗಳಿಂದ ಮಗನಿಗೆ ಅಲಂಕಾರಮಾಡಿ, ಅಹಂ = ನಾನು, ಶಿಶುಂ = ಮಗುವನ್ನು, ಆಲೋಕ್ಯ = ನೋಡಿ, ನಪ್ರೀತಿಮಾಪ್ತವಾನ್ = ಸಂತೋಷಪಡಲಿಲ್ಲ ।। 44 ।। ತನಯಂ = ಪುತ್ರನನ್ನು, ಅಂಕಮಾರೋಪ್ಯ = ತೊಡೆಯಮೇಲೆ ಕೂಡಿಸಿಕೊಂಡು, ಮಯಾ = ನನ್ನಿಂದ, ಸುತಃ = ಕುಮಾರನು, ನಲಾಲಿತಃ = ಮುದ್ದಿಸಲ್ಪಡಲಿಲ್ಲ (ಪಾಲನೆ ಮಾಡಲ್ಪಡಲಿಲ್ಲ). ಪಂಚವಾರ್ಷಿಕ = ಐದು ವರ್ಷವಯಸ್ಸಿನವನಾದ, ಮೇ = ನನ್ನ, ಸುತಃ = ಪುತ್ರನು, ಅತಿಪ್ರೀತ್ಯೈವ = ಅತಿಶಯ ಪ್ರೀತಿಯಿಂದ, ನೋಪನೀತಃ = ಉಪನೀತನಾಗಲಿಲ್ಲ ।। 45 ।। ಅಷ್ಟಮೇ = ಎಂಟನೆಯ ವರ್ಷದಲ್ಲಿ, ದಶಮೇ ವಾ = ಹತ್ತನೆಯ ವಯಸ್ಸಿನಲ್ಲಾಗಲಿ, ದಾರಸಂಗ್ರಹಃ = ವಿವಾಹವು ನಕೃತಃ = ನೆರವೇರಿಸಲ್ಪಡಲಿಲ್ಲ; ಬ್ರಹ್ಮನ್ = ಬ್ರಹ್ಮಜ್ಞಾನಿಯಾದ ಗುರುಗಳೇ (ಬ್ರಾಹ್ಮಣನೇ), ತೇನ = ಆ ನನ್ನ ಮಗನಿಂದ ಆರ್ಜಿತಂ = ಸಂಪಾದಿಸಲ್ಪಟ್ಟ, ಧನಂ = ಧನವು (ದ್ರವ್ಯವು), ಅದ್ಯ = ಈಗ, ಮೇ = ನನ್ನಿಂದ, ನೋಪಜೀವಿತಂ = ಅನುಭವಿಸಲ್ಪಡಲಿಲ್ಲ ।। 46 ।। ಬ್ರಹ್ಮನ್ = ಬ್ರಾಹ್ಮಣನೇ, ಭಾರ್ಯಯಾ = ಪತ್ನಿಯಿಂದ, ಕೃತಭೋಜನಂ = ಮಾಡಿಸಲ್ಪಟ್ಟ ಭೋಜನವುಳ್ಳ, ಸುತಂ = ಆ ನನ್ನ ಕುಮಾರನನ್ನು, ರಾಜ್ಯೇ = ರಾಜ್ಯದ ಸಿಂಹಾಸನದಲ್ಲಿ (ಕೂಡಿಸಿ), ಅಭಿಷಿಚ್ಯ = ನನ್ನ ಉತ್ತರಾಧಿಕಾರಿಯೆಂದು ಘೋಷಿಸಿ ಪಟ್ಟಕಟ್ಟಿ, ಮಮ = ನನ್ನ, ಪರಂಪರಾಗತಂ = ವಂಶ ಪರಂಪರೆಯಿಂದ ಬಂದ (ಕ್ರಮದಂತೆ), ವನಂ ನ ಗತಂ = ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ವನಕ್ಕೆ ತೆರಳಲಿಲ್ಲ ।। 47 ।।

**ಅಹೋ ದರಿದ್ರಸ್ಯ ಮಹಾನುಭಾವ ಸತ್ಪುತ್ರ ಹೀನಸ್ಯ ಗತಿರ್ಭವೇತ್ಕಾ ।**
**ವೃಥಾ ಶರೀರಂ ಘಟಕುಡ್ಯಸನ್ನಿಭಮ್ ಜಾತಂ ಸುಧರ್ಮಸ್ಯ ಕುಲೇ ಸುಪುಣ್ಯೇ ।। 48 ।।**

**ಮನುಷ್ಯಾಣಾಮನಾಥಾನಾಂ ದುರ್ಲಭಂ ಪುತ್ರಜನ್ಮ ಚ ।**
**ಬಹುಪುಣ್ಯವಶಾತ್ಪುತ್ರೋ ಜಾಯತೇ ಮಾನವೋದರೇ ।। 49 ।।**

**ಅಸ್ಮಾಕಮತಿಪಾಪಾನಾಂ ಕನ್ಯಕಾ ನೈವಚಾಭವತ್ ।**
**ಸತ್ಪುತ್ರೀ ನೈವ ಸಂಜಾತಾ ಧರ್ಮಸಂತಾನಸಂಜ್ಞಿಕಾ ।। 50 ।।**

ಮಹಾನುಭಾವ = ಎಲೈ ಮಹನೀಯನೇ! ದರಿದ್ರಸ್ಯ = ಪುತ್ರನೆಂಬ ಸಂಪತ್ತಿಲ್ಲದೆ ಕಡುಬಡವನಾದ, ಸತ್ಪುತ್ರಹೀನಸ್ಯ = ವಂಶೋದ್ಧಾರಕನಾದ ಪುತ್ರನನ್ನು ಪಡೆದಿಲ್ಲದ, (ಮಮ = ನನಗೆ), ಕಾ ಗತಿಃ = ಯಾವ ಗತಿಯು, ಭವೇತ್ = ಉಂಟಾದೀತು? ಅತಿ ಪುಣ್ಯೇ = ಅತ್ಯಂತ ಸುಕೃತಮಯವಾದ, ಸುಧರ್ಮಸ್ಯ = ಸುಧರ್ಮ ಮಹಾರಾಜನ, ಕುಲೇ =

ವಂಶದಲ್ಲಿ, ವೃಥಾ = ವ್ಯರ್ಥವಾಗಿ, ಘಟಕುಡ್ಯಸನ್ನಿಭಂ = ಮಡಕೆ - ಗೋಡೆಗಳಿಗೆ ಸಮಾನವಾದ, ಶರೀರಂ = (ನನ್ನ) ದೇಹವು, ಜಾತಂ = ಹುಟ್ಟಿದಂತಾಯಿತು ॥ 48 ॥ ಅನಾಥಾನಾಂ = ದಿಕ್ಕಿಲ್ಲದ (ರಕ್ಷಕರಿಲ್ಲದ), ಮನುಷ್ಯಾಣಾಂ = ಮಾನವರಿಗೆ, ಪುತ್ರಜನ್ಮ = ಪುತ್ರೋತ್ಪತ್ತಿಯು, ದುರ್ಲಭಂ = ಪಡೆಯಲಸದಳವು, ಚ = ಮತ್ತು, ಮಾನವೋದರೇ = ಮನುಷ್ಯನ ಹೊಟ್ಟೆಯಲ್ಲಿ, ಬಹುಪುಣ್ಯವಶಾತ್ = ಮಾಡಿದ ಬಹಳ ಪುಣ್ಯದಿಂದ, ಪುತ್ರಃ = ಸುತನು, ಜಾಯತೇ = ಜನಿಸುವನು ॥ 49 ॥ ಅತಿ ಪಾಪಾನಾಂ = ಅತ್ಯಂತ ಪಾಪಿಗಳಾದ, ಅಸ್ಮಾಕಂ = ನಮಗೆ, ಕನ್ಯಕಾ = ಹೆಣ್ಣುಮಗಳಾದರೂ, ನೈವಚಾಭವತ್ = ಆಗಲಿಲ್ಲ (ಜನಿಸಲಿಲ್ಲ), ಧರ್ಮಸಂತಾನಸಂಜ್ಞಿಕಾ = ಧರ್ಮಸಂತಾನವೆಂಬ ಸಂಜ್ಞೆಯುಳ್ಳ (ಧರ್ಮ ಸಂತಾನರೂಪಳಾದ), ಸತ್ಪುತ್ರೀ = ಉತ್ತಮ ಪುತ್ರಿಯೂ, ನೈವ ಸಂಜಾತಾ = ಜನಿಸಲೂ ಇಲ್ಲ ॥ 50 ॥

**ವರದಾಚ್ಯುತ ರಂಗೇಶ ಜಗನ್ನಾಥ ಜಗದ್ಗುರೋ ।**
**ಸುಬ್ರಹ್ಮಣ್ಯ ಸುರಾಧೀಶ ಕೃಪಾಂ ಕುರು ಕೃಪಾನಿಧೇ ॥ 51 ॥**

**ವೇಂಕಟೇಶ ರಮಾಕಾಂತ ವರಾಹವದನಾಚ್ಯುತ ।**
**ನಾರಾಯಣ ನಗಾಧೀಶ ರಾಮಕೃಷ್ಣ ನಮೋಸ್ತು ತೇ ॥ 52 ॥**

ವರದ = ವರಪ್ರದನಾದ, ಅಚ್ಯುತ = ಚ್ಯುತಿಯಿಲ್ಲದ (ಶಾಶ್ವತನಾದ), ಜಗನ್ನಾಥ = ಜಗತ್ಪ್ರಭುವಾದ, ಜಗದ್ಗುರೋ = ಪ್ರಪಂಚಕ್ಕೆ ಗುರುವಾದ, ರಂಗೇಶ = ಶ್ರೀರಂಗನಾಥನೇ! ಸುಬ್ರಹ್ಮಣ್ಯ = ಷಣ್ಮುಖಾಂತರ್ಗತನಾದ, ಸುರಾಧೀಶ = ದಿವಿಜರೊಡೆಯನಾದ, ಕೃಪಾನಿಧೇ = ಕರುಣಾನಿಧಿಯಾದ ಶ್ರೀಹರಿಯೇ!, ಕೃಪಾಂಕುರು = ದಯೆತೋರು ॥ 51 ॥ ರಮಾನಾಥ = ಲಕ್ಷ್ಮೀಪತಿಯಾದ, ವೇಂಕಟೇಶ = ವೇಂಕಟಗಿರಿಗೆ ಸ್ವಾಮಿಯಾದ, ವರಾಹವದನ = ವರಾಹಮುಖವುಳ್ಳ ನಾರಾಯಣ = ಶ್ರೀವಿಷ್ಣುವೇ!, ನಗಾಧೀಶ = ವೇಂಕಟಗಿರಿಗೆ ಅಧಿಪತಿಯಾದ, ಅಥವಾ ನಗಾಧೀಶ = ಅಶ್ವತ್ಥವೃಕ್ಷಾಧಿ ಪನಾದ, ರಾಮ = ಶ್ರೀರಾಮಚಂದ್ರ, ಕೃಷ್ಣ = ಶ್ರೀಯಾದವ ಕೃಷ್ಣ, ಅಚ್ಯುತ = ಚ್ಯುತಿ ರಹಿತನಾದ ಶ್ರೀನಿವಾಸ, ತೇ = ನಿನಗೆ, ನಮಃ = ನಮಸ್ಕಾರವು ॥ 52 ॥

**ಸುಪುತ್ರವಂತಃಖಲು ಭಾಗ್ಯವಂತೋ ಹ್ಯಪುತ್ರವಂತಃ ಖಲು ಭಾಗ್ಯಹೀನಾಃ ।**
**ಸಂಸಾರಸಾಗರಸಮುತ್ತರಣೇ ಹ್ಯಶಕ್ತಾಃ ಕಾ ನೋ ಗತಿಃ**
**ಕರ್ಮಫಲಾನುಭೋಗಿನಾಮ್ ॥ 53 ॥**

**ಏವಮುಕ್ತ್ವಾ ಮಹೀದೇವಂ ವಿರರಾಮ ಮಹೀಪತಿಃ ।**
**ಕಾನ್ಲೋಕಾನ್ ಹಾ ಗಮಿಷ್ಯಾಮಿ ಕ್ರೂರಂ ವಾ ನರಕಂ ಗುರೋ ॥ 54 ॥**

**ಕ ಉಪಾಯೋ ಮಹಾಪ್ರಾಜ್ಞ ಪುತ್ರಲಾಭೇ ದ್ವಿಜೋತ್ತಮ ।**
**ಇತಿ ರಾಜವಚಃ ಶ್ರುತ್ವಾ ಗುರುರ್ವಾಕ್ಯಮುವಾಚ ತತ್ ॥ 55 ॥**

ಸುಪುತ್ರವಂತಃ = ಉತ್ತಮ ಪುತ್ರನನ್ನು ಪಡೆದವರು, ಭಾಗ್ಯವಂತಃ = ಪುಣ್ಯವಂತರು (ಭಾಗ್ಯಶಾಲಿಗಳು), ಅಪುತ್ರವಂತಃ = ಪುತ್ರಸಂತಾನವಿಲ್ಲದವರು, ಭಾಗ್ಯಹೀನಾಃ ಖಲು = ಸುಕೃತಹೀನರು ಅಲ್ಲವೇ? ಹಿ = ಇದು ಪ್ರಸಿದ್ಧವು, ಸಂಸಾರಸಾಗರ ಸಮುತ್ತರಣೇ = ಸಂಸಾರವೆಂಬ ಸಾಗರವನ್ನು ಸುಲಲಿತವಾಗಿ ದಾಟಲು, ಅಶಕ್ತಾಃ = ಶಕ್ತಿ

ಇಲ್ಲದವರಾಗಿದ್ದೇವೆ. ಕರ್ಮಫಲಾನುಭೋಗಿನಾಂ = ಮಾಡಿದ ಕರ್ಮಕ್ಕೆ ತಕ್ಕ ಫಲವನ್ನು ಅನುಭವಿಸುತ್ತಿರುವ, ನಃ = ಮಕ್ಕಳಿಲ್ಲದ ನಮ್ಮಂಥವರಿಗೆ, ಕಾ ಗತಿಃ = ಗತಿಯೇನು? (ಉದ್ಧಾರದ ಮಾರ್ಗವಾವುದು?), II 53 II ಕಾನ್ ಲೋಕಾನ್ = ಮಕ್ಕಳಿಲ್ಲದ ನಾನು ಯಾವಲೋಕಗಳನ್ನು ಕುರಿತು, ಗಮಿಷ್ಯಾಮಿ = ಹೋಗುವೆನು? ವಾ = ಅಥವಾ, ಹಾ = ಅಯ್ಯೋ, ಕ್ರೂರಂ = ಕಠಿಣವಾದ, ನರಕಂ = ನರಕವನ್ನು ಕುರಿತು, ಗಮಿಷ್ಯಾಮಿ = ಹೋಗುವೆನೋ (ನಾನರಿಯೆನು), ಮಹಾಪ್ರಾಜ್ಞ = ಯುಕ್ತಾಯುಕ್ತ ವಿವೇಕವುಳ್ಳ, ದ್ವಿಜೋತ್ತಮ = ಬ್ರಾಹ್ಮಣಶ್ರೇಷ್ಠನೇ ! ಪುತ್ರಲಾಭೇ = ಪುತ್ರನನ್ನು ಪಡೆಯುವ ವಿಚಾರದಲ್ಲಿ, ಉಪಾಯಃ ಕಃ = ಉಪಾಯವೇನು? (ಹೀಗೆ ಹೇಳುತ್ತಾ) ವಿರರಾಮ = ವಿರಮಿಸಿದನು; ಇತಿ = ಇಂತು ನಿರೂಪಿಸಿದ, ರಾಜವಚಃ = ರಾಜನಮಾತನ್ನು, ಶ್ರುತ್ವಾ = ಕೇಳಿ, ಗುರುಃ = ಗುರುವು (ಬೃಹಸ್ಪತಿಯು), ತತ್ = ಮಗನನ್ನು ಪಡೆಯುವ ಉಪಾಯವನ್ನು, ಉವಾಚ = ಹೇಳಿದನು. II 54-55 II

*ಗುರುರುವಾಚ -*

**ಯಜ್ಞಂ ಕುರು ನೃಪಶ್ರೇಷ್ಠ ಪುತ್ರಸ್ತೇನ ಭವಿಷ್ಯತಿ I**
**ಗುರೋರ್ವಾಕ್ಯಂ ಸಮಾಕರ್ಣ್ಯ ಯಜ್ಞಾರ್ಥಂ ಶೋಧಯದ್ಧರಾಮ್ II 56 II**

ಗುರುರುವಾಚ = ಬೃಹಸ್ಪತ್ಯಾಚಾರ್ಯರು ಮಾತನಾಡಿದರು - ನೃಪಶ್ರೇಷ್ಠ = ರಾಜಶ್ರೇಷ್ಠನೇ ! ಯಜ್ಞಂ = ಯಾಗವನ್ನು (ಪುತ್ರಕಾಮೇಷ್ಟಿಯಾಗವನ್ನು), ಕುರು = ಮಾಡು, ತೇನ = ಆ ಯಜ್ಞದ ಪುಣ್ಯಫಲದಿಂದ, ತೇ = ನಿನಗೆ, ಪುತ್ರಃ = ಮಗನು, ಭವಿಷ್ಯತಿ = ಆಗುವನು (ಜನಿಸುವನು), ಗುರೋಃ = ಬೃಹಸ್ಪತ್ಯಾಚಾರ್ಯರ, ವಾಕ್ಯಂ = ವಚನವನ್ನು, ಸಮಾಕರ್ಣ್ಯ = ಚೆನ್ನಾಗಿ ಆಲಿಸಿ, (ಆಕಾಶರಾಜನು), ಯಜ್ಞಾರ್ಥಂ = ಯಾಗಕ್ಕಾಗಿ, ಧರಾಂ = ಭೂಮಿಯನ್ನು, ಶೋಧಯಾಮಾಸ = ಶೋಧನೆ ಮಾಡಿಸಿದನು. (ಯಜ್ಞಮಾಡುವವರರು ಯಾಗಶಾಲೆ, ಯಜ್ಞಕುಂಡಗಳನ್ನು ನಿರ್ಮಿಸುವ ಮೊದಲು ಭೂಮಿಯನ್ನು ಶುದ್ಧಿಗೊಳಿಸಿ ಅಣಿಮಾಡಲು ನೇಗಿಲಿನಿಂದ ಭೂಮಿಯನ್ನು ಉಳಿಸುವುದು ಸಂಪ್ರದಾಯ. ಆದರಂತೆ ಆಕಾಶರಾಯನು ಭೂಶೋಧನ ಮಾಡಿಸಿದನೆಂದು ತಿಳಿಯಬೇಕು) II 56 II

**ಸ್ವರ್ಣಲಾಂಗಲಸಂಘೈಶ್ಚ ದ್ವಿಜಮಂತ್ರಗಣೈಸ್ತಥಾ I**
**ಶೋಧ್ಯಮಾನೇ ಧರಾಪೃಷ್ಠೇ ತತ್ರ ಪದ್ಮಂ ದದರ್ಶ ಸಃ II 57 II**

**ಸಹಸ್ರಪತ್ರಂ ರಾಜೇಂದ್ರಃ ಕಿಮಿದಂ ವಿಸ್ಮಯಾಕುಲಃ I**
**ವಿಸ್ತೀರ್ಣಪತ್ರೇಷು ರಮಾಕೃತಿಂ ಶುಭಾಮ್ ದೃಷ್ಟ್ವಾ ಚ ಸಂತೋಷಮನಾ ಬಭೂವ I**
**ದೈವೇನ ದತ್ತಾಂ ಭಗವತ್ಪ್ರಚೋದಿತಾಮ್ ಕನ್ಯಾಂ ಕುಮಾರೀಂ**
**ಕುಸುಮಾಭನೇತ್ರಾಮ್II 58 II**

ಸ್ವರ್ಣಲಾಂಗಲ ಸಂಘೈಶ್ಚ = ಬಂಗಾರದ ನೇಗಿಲುಗಳ ಸಮೂಹದಿಂದಲೂ, ತಥಾ = ಮತ್ತು, ದ್ವಿಜಮಂತ್ರಗಣೈಃ - ದ್ವಿಜ = ಭೂಸುರರ, ಮಂತ್ರ = ಭೂ ಶೋಧನ ಕಾಲದಲ್ಲಿ ಪಠಿಸಬೇಕಾದ ಮಂತ್ರಗಳ, ಗಣೈಃ = ಸಮೂಹದಿಂದಲೂ, ಧರಾಪೃಷ್ಠೇ = ಭೂಮಿಯಲ್ಲಿ, ಶೋಧ್ಯಮಾನೇ ಸತಿ = ಶೋಧನೆ ಮಾಡುತ್ತಿರುವಾಗ (ಉಳುತ್ತಿರುವಾಗ), ಸಃ = ಆಕಾಶರಾಜನು, ತತ್ರ = ಆ ಭೂಮಿಯೊಳಗೆ, ಸಹಸ್ರಪತ್ರಂ = ಸಾವಿರದಳಗಳುಳ್ಳ, ಪದ್ಮ = ದೊಡ್ಡ ಕಮಲವನ್ನು, ದದರ್ಶ

= ನೋಡಿದನು (ಕಂಡನು), ॥ 57 ॥ ರಾಜೇಂದ್ರಃ = ರಾಜೋತ್ತಮನಾದ ಆಕಾಶರಾಜನು, ಕಿಮಿದಂ (ಇತಿ) = ಇದೇನೆಂದು, ವಿಸ್ಮಯಾಕುಲಃ (ಅಭೂತ್) = ಆಶ್ಚರ್ಯಭರಿತನಾದನು.

ವಿಸ್ತೀರ್ಣಪತ್ರೇಷು = ವಿಸ್ತಾರವಾದ ದಳಗಳಲ್ಲಿ (ಎಲೆಗಳ ಮಧ್ಯದಲ್ಲಿ), ಶುಭಾಂ = ಮಂಗಳಕರಳಾದ, ರಮಾಕೃತಿಂ = ಲಕ್ಷ್ಮೀದೇವಿಯ ಆಕಾರವನ್ನು (ಲಕ್ಷ್ಮೀದೇವಿಯಂತೆ ಆಕಾರವುಳ್ಳ ಸ್ತ್ರೀಶಿಶುವನ್ನು), ದೃಷ್ಟ್ವಾಚ = ನೋಡಿದವನಾಗಿ, ಕುಸುಮಾಭನೇತ್ರಾಂ = ಪುಷ್ಪಕಾಂತಿಯಂತೆ ಬೆಳಗುವ ಕಣ್ಣುಗಳುಳ್ಳ; ದೈವೇನದತ್ತಾಂ = ದೇವರಿಂದ ಅನುಗ್ರಹಿಸಲ್ಪಟ್ಟ, ಭಗವತ್ಪ್ರಚೋದಿತಾಂ = ಪರಮಾತ್ಮನ ಪ್ರೇರಣೆಯಿಂದ ಬಂದಿರುವ, ಕುಮಾರೀಂ = ಶಿಶುವಾಗಿರುವ, ಕನ್ಯಾಂ = ಹೆಣ್ಣು ಮಗುವನ್ನು, ದೃಷ್ಟ್ವಾ = ನೋಡಿ, ಸಂತೋಷಮನಾಃ = ಹರ್ಷಪೂರ್ಣ ಮನಸ್ಸುಳ್ಳವನು, ಬಭೂವ = ಆದನು. ॥ 58॥

ಇತ್ಥಂ ಸಮಾಭಾಷ್ಯ ನೃಪೋತ್ತಮಶ್ಶಿಶುಂ
ಹಸ್ತೇ ಪ್ರಗೃಹ್ಯಾಶು ಮುಮೋದ ದೀನಃ ।
ಮಾಯಾ ಮಹೇಶಸ್ಯ ದುರತ್ಯಯಾ ಹರೇಃ
ಕಸ್ಯೈ[9] ಪ್ರದೇಯಾ ಪ್ರತಿಗೃಹ್ಯತಾ ಮಯಾ ॥ 59 ॥

ಉವಾಚಾಕಾಶಗಾ ವಾಣೀ ಪುತ್ರೀಯಂ ತವ ಪುಣ್ಯದಾ ।
ಸಂರಕ್ಷಸ್ವ ಮಹಾಭಾಗ ಬಹುಕೀರ್ತಿಫಲಪ್ರದಾಮ್ ॥ 60 ॥

ಇತ್ಯನಂತಗತಾಂ ವಾಣೀಂ ಶ್ರುತ್ವಾ ರಾಜಾಥ ಹರ್ಷಿತಃ ।
ತಾಂ ಕನ್ಯಾಂ ಪ್ರತಿಗೃಹ್ಯಾಶು ಸ್ವಭಾರ್ಯಾಂ ಪ್ರತ್ಯುವಾಚ ಸಃ ॥ 61 ॥

ಶ್ರುಣು ಭದ್ರೇ ಮಹಾಪ್ರಾಜ್ಞೆ[10] ದೇವದತ್ತಾಮಿಮಾಂ ಶುಭಾಮ್ ।
ಸಂವರ್ಧಸ್ವ ವರಾಂ ಪುತ್ರೀಂ ಯಥಾಗರ್ಭಗತಾಂ ತವ ॥ 62 ॥

ಇತ್ಯುಕ್ತ್ವಾ ತತ್ಕರೇ ದತ್ವಾ ಬಹುದಾನಮಥಾಕರೋತ್ ।
ಕನ್ಯಾಗಮನಪುಣ್ಯೇನ ಸಾ ದೇವೀ ಗರ್ಭಮಾದಧೇ ॥ 63 ॥

ಗರ್ಭಿಣೀಂ ಸ್ವಸತೀಂ ದೃಷ್ಟ್ವಾ ಗರ್ಭಚಿನ್ಹಂ ಚಕಾರ ಸಃ ।
ಪಂಚಮೇ ಮಾಸಿ ಸಂಪ್ರಾಪ್ತೇ ಸೀಮಂತಂ ನೃಪಪುಂಗವಃ ॥ 64 ॥

ಕಾರಯಾಮಾಸ ವಿಧಿವದ್ಬ್ರಾಹ್ಮಣೈರ್ಯಾಜುಷಾಂಗಣೈಃ ।
ತತಃ ಕಾಲಾಂತರೇ ಬಾಲಾ ನವಮಾಸೇ ಸಮಾಗತೇ ॥ 65 ॥

ಮಾಸೇ ತು ದಶಮೇ ಪ್ರಾಪ್ತೇ ಸುಷುವೇ ಪುತ್ರಮುತ್ತಮಮ್ ।
ಮಾಸೇ ಕನ್ಯಾಗತೇ ಭಾನೌ ದಶಮ್ಯಾಂ ರೋಹಿಣೀಯುತೇ ॥ 66 ॥

9. ಕಸ್ಯೈ 10 ರಾಜ್ಞಿ.

**ಪಕ್ಷೇತು ಪ್ರಥಮಂ ವೀರಂ ಸಾಯಂಕಾಲೇ ಗುರೋರ್ದಿನೇ ।**
**ಪುತ್ರೋತ್ಪತ್ತಿ ಪ್ರವಕ್ಷ್ಯಣಾಂ ಸರ್ವಸ್ವಂ ದಾನಮಾಚರತ್ ॥ 67 ॥**

**ಗವಾಂ ಕೋಟಿಸಹಸ್ರಾಣಿ ಅಶ್ವಾನಾಮಯುತಂ ತಥಾ ।**
**ನವಧಾನ್ಯಾದಿಕಂ ದಾನಂ ವಿನಾ ತೌ ಛತ್ರಚಾಮರೌ ॥ 68 ॥**

ದೀನಃ = ಸಂತಾನವಿಲ್ಲದೆ ದೀನನಾಗಿದ್ದ ನೃಪೋತ್ತಮಃ = ರಾಜಶ್ರೇಷ್ಠನಾದ ಆಕಾಶರಾಜನು, ಶಿಶುಂ = ಆ ಮಗುವನ್ನು, ಆಶು = ಬೇಗನೆ, ಹಸ್ತೇ = ಕರದಲ್ಲಿ, ಪ್ರಗೃಹ್ಯ = ಎತ್ತಿಕೊಂಡು (ಸ್ವೀಕರಿಸಿ), ಮುಮೋದ = ಸಂತೋಷಿಸಿದನು, ಮಹೇಶಸ್ಯ = ಮಹಾಪ್ರಭುವಾದ, ಹರೇಃ = ಶ್ರೀಹರಿಯ, ಮಾಯಾ = ಮಾಯೆಯು (ಮಾಯಾಶಕ್ತಿಯು). ದುರತ್ಯಯಾ = ಅಡೆತಡೆಯಿಲ್ಲದ್ದು (ಮೀರಲಾಗದ್ದು), ಮಯಾ = ನನ್ನಿಂದ, ಪ್ರತಿಗೃಹ್ಯತಾ = ಸ್ವೀಕರಿಸಲ್ಪಟ್ಟಿರುವ (ಎತ್ತಿಕೊಳ್ಳಲ್ಪಟ್ಟ), ಇಯಂ = ಈ ಕನ್ಯೆಯು, ಕಸ್ಮೈ = ಯಾರಿಗೆ, (ಪಾ:- ಕಸ್ಯೈ = ಸಾಕಲು ಯಾರಿಗೆ), ಪ್ರದೇಯಾ? = ಕೊಡಬೇಕು?, (ಕೊಡಲಿ?), ಇತ್ಥಂ = ಹೀಗೆ, ಸಂಭಾಷ್ಯ = ತನ್ನಲ್ಲೇ ಮಾತನಾಡಿಕೊಂಡು (ಚಿಂತಿಸಿದನು) ॥ 59 ॥ ಆವಾಗ, ಆಕಾಶಗಾ = ಆಕಾಶದಲ್ಲಿರುವ, ವಾಣೀ = ವಾಣಿಯು, ಉವಾಚ = ಹೇಳಿತು (ಆಗ ಆಕಾಶವಾಣಿಯಾಯಿತು), ''ಮಹಾಭಾಗ! = ಎಲೈ ಮಹನೀಯನಾದ ಆಕಾಶರಾಜ!, ಇಯಂ = ಈ ಕನ್ಯೆಯು, ತವ = ನಿನಗೆ, ಪುಣ್ಯದಾ = ಪುಣ್ಯವನ್ನು ತಂದೀಯುವವಳಾದ, ಪುತ್ರಿ = ಮಗಳು, ಬಹುಕೀರ್ತಿ ಫಲದಾಂ = ಅತಿಶಯಕೀರ್ತಿ ಮತ್ತು ಈ ಲೋಕದಲ್ಲಿ ಪುಣ್ಯಫಲಗಳನ್ನು ಕೊಡಲಿರುವ ಇವಳನ್ನು, ಸಂರಕ್ಷಸ್ವ = ಚೆನ್ನಾಗಿ ಕಾಪಾಡು ॥ 60 ॥ ಇತಿ = ಇಂತು, ಅನಂತಗತಾಂ = ಆಕಾಶದಲ್ಲಿ ಉತ್ಪನ್ನವಾದ, ವಾಣೀಂ = ವಚನವನ್ನು, ಶ್ರುತ್ವಾ = ಕೇಳಿ, ಅಥ = ತರುವಾಯ, ಹರ್ಷಿತಃ = ಮುದಗೊಂಡ, ರಾಜಾ = ಆಕಾಶರಾಜನು, ಆಶು = ಶೀಘ್ರವಾಗಿ, ತಾಂ = ಕಮಲದಲ್ಲಿ ದೊರಕಿದ, ಕನ್ಯಾಂ = ಸ್ತ್ರೀ ಶಿಶುವನ್ನು, ಪ್ರತಿಗೃಹ್ಯ = ಸ್ವೀಕರಿಸಿ (ಎತ್ತಿಕೊಂಡು) ಅರಮನೆಗೆ ಬಂದು, ಸಃ = ಆಕಾಶರಾಜನು, ಸ್ವಭಾರ್ಯಾಂಪ್ರತಿ = ತನ್ನ ಪತ್ನಿಯಾದ ಧರಣೀದೇವಿಯನ್ನು ಕುರಿತು, ಉವಾಚ = ಹೇಳಿದನು ॥ 61 ॥ ಮಹಾರಾಜ್ಞಿ = ಎಲೈ ಮಹಾರಾಣಿ! (ಪಾ: - ಮಹಾಪ್ರಾಜ್ಞೆ = ಅತಿಮತಿವಂತಳೇ) ಭದ್ರೆ = ಮಂಗಳಕರಳೇ! ಶೃಣು = (ನಾನು ಹೇಳುವುದನ್ನು) ಕೇಳು, ದೇವದತ್ತಾಂ = ಪರಮಾತ್ಮನಿಂದ ಕೊಡಲ್ಪಟ್ಟ, ಶುಭಾಂ = ಶುಭಕರಳಾದ, ಇಮಾಂ = ಈ ಹೆಣ್ಣುಮಗುವನ್ನು, ತವ = ನಿನ್ನ, ಗರ್ಭಗತಾಂ = ಗರ್ಭದಲ್ಲಿದ್ದ, ವರಾಂ = ಶ್ರೇಷ್ಠಳಾದ, ಪುತ್ರೀಂ ಯಥಾ = ಮಗಳೆಂಬಂತೆ (ಮಗಳು ಹೇಗೋ ಹಾಗೆ), ಸಂವರ್ಧಸ್ವ = ಚೆನ್ನಾಗಿ ಸಂರಕ್ಷಿಸು ॥ 62 ॥ ಇತ್ಯುಕ್ತ್ವಾ = ಹೀಗೆ ಹೇಳಿ, ತತ್ಕರೇ = ಧರಣಿ ದೇವಿಯ ಕರದಲ್ಲಿ, ದತ್ವಾ = ಆ ಸ್ತ್ರೀಶಿಶುವನ್ನು ಕೊಟ್ಟು, ಅಥ = ಅನಂತರ, ಬಹುದಾನಂ = ಅನೇಕ ಬಗೆಯ ದಾನವನ್ನು, ಅಕರೋತ್ = ಮಾಡಿದನು.

ಕನ್ಯಾಗಮನ ಪುಣ್ಯೇನ = ಆ ಹೆಣ್ಣು ಮಗುವು ಮನೆಗೆ ಆಗಮಿಸಿದ ಪುಣ್ಯಫಲದಿಂದ, ಸಾ ದೇವೀ = ರಾಣಿಯಾದ ಆ ಧರಣಿ ದೇವಿಯು, ಗರ್ಭಮಾದಧೇ = ಗರ್ಭವನ್ನು ಧರಿಸಿದಳು (ಗರ್ಭಿಣಿಯಾದಳು), ॥ 63 ॥ ಸಃ = ಆಕಾಶರಾಯನು, ಗರ್ಭಿಣೀಂ = ಗರ್ಭವತಿಯಾದ, ಸ್ವಪತ್ನೀಂ = ತನ್ನ ಮಡದಿಯನ್ನು, ದೃಷ್ಟ್ವಾ = ನೋಡಿ, ಗರ್ಭಚಿಹ್ನಂ = ಗರ್ಭಿಣೀ ಸ್ತ್ರೀಗೆ ಮಾಡಿಸಬೇಕಾದ ರಕ್ಷೆ ಮತ್ತು ಹೂಮುಡಿಸುವುದು, ಬಳೆ ತೊಡಿಸುವುದು ಮೊದಲಾದ ಗರ್ಭಚಿಹ್ನೆಯ ಸಮಾರಂಭವನ್ನು, ಚಕಾರ = ಮಾಡಿಸಿದನು. ನೃಪಪುಂಗವಃ = ನೃಪಶ್ರೇಷ್ಠನಾದ ಆಕಾಶರಾಜನು, ಪಂಚಮೇಮಾಸಿ = ಐದನೆಯ ತಿಂಗಳು, ಸಂಪ್ರಾಪ್ತೇ (ಸತಿ) = ಬರುತ್ತಿರಲು, ಸೀಮಂತಂ = ಸೀಮಂತವೆಂಬ ಸಂಸ್ಕಾರವನ್ನು ॥ 64 ॥ ಯಾಜುಷಾಂ ಗಣೈಃ = ಯಜುರ್ವೇದಮಂತ್ರಗಳಿಂದ, ಬ್ರಾಹ್ಮಣೈಃ = ಬ್ರಾಹ್ಮಣರಿಂದ, ವಿಧಿವತ್ = ವೇದೋಕ್ತಷೋಡಶ ಸಂಸ್ಕಾರಗಳಲ್ಲೊಂದಾದ

ಕ್ರಮದಂತೆ ಸೀಮಂತವನ್ನು, ಕಾರಯಾಮಾಸ = ಮಾಡಿಸಿದನು, ತತಃ = ಅನಂತರ, ಕಾಲಾಂತರೇ = ಕೆಲ ಸಮಯವಾದ ತರುವಾಯ, ನವಮಾಸೇ ಸಮಾಗತೇ = ಒಂಭತ್ತನೆಯ ತಿಂಗಳಾದ ಮೇಲೆ, ।। 65 ।। ದಶಮೇ ಮಾಸೇ ತು = ಹತ್ತನೆಯ ತಿಂಗಳು, ಪ್ರಾಪ್ತೇ (ಸತಿ) = ಬರುತ್ತಿರಲು; ಭಾನೌ = ಸೂರ್ಯನು, ಕನ್ಯಾಗತೇ ಮಾಸೇ = ಕನ್ಯಾರಾಶಿಯಲ್ಲಿರುವ ತಿಂಗಳು, ರೋಹಿಣೀಯುತೇ = ರೋಹಿಣಿ ನಕ್ಷತ್ರಯುಕ್ತವಾದ, ।। 66 ।। ಪ್ರಥಮೇತುಪಕ್ಷೇ = ಶುಕ್ಲಪಕ್ಷದ, ದಶಮ್ಯಾಂ = ದಶಮಿ ತಿಥಿಯ ದಿನ, ಗುರೋರ್ದಿನೇ = ಗುರುವಾರದಂದು (ಗುರುವಾಸರದಂದು), ಸಾಯಂಕಾಲೇ = ಸಂಧ್ಯಾಕಾಲದಲ್ಲಿ, ವೀರಂ = ಶೂರನಾದ, ಉತ್ತಮಂ = ಶ್ರೇಷ್ಠನಾದ, ಪುತ್ರಂ = ಕುಮಾರನನ್ನು, ಸುಷುವೇ = ಪ್ರಸವಿಸಿದಳು. ಪುತ್ರೋತ್ಪತ್ತಿಪ್ರವಕ್ತೄಣಾಂ = ಪುತ್ರೋತ್ಪತ್ತಿಯ ವಿಚಾರವನ್ನು (ಪುತ್ರನು ಜನಿಸಿದ ಕಾಲ, ನಕ್ಷತ್ರ, ಗ್ರಹಬಲ ಮುಂತಾದವುಗಳನ್ನು) ಹೇಳಿದವರಿಗೆ, ಸರ್ವಸ್ವಂ = ಸಮಸ್ತವನ್ನೂ, ದಾನಮಾಚರತ್ = ದಾನಮಾಡಿದನು ।। 67 ।। ಗವಾಂಕೋಟಿ ಸಹಸ್ರಾಣಿ = ಒಂದು ಸಾವಿರ ಕೋಟಿ ಗೋವುಗಳನ್ನೂ, ಅಶ್ವಾನಾಮಯುತಂ = ಹತ್ತುಸಾವಿರ ಕುದುರೆಗಳನ್ನೂ, ತಥಾ = ಮತ್ತು, ನವಧಾನ್ಯಾದಿಕಂ = ನವವಿಧಧಾನ್ಯಗಳನ್ನೂ, ತೌ = ರಾಜಚಿನ್ಹೆಗಳಾದ, ವಿನಾಛತ್ರಚಾಮರೌ = ಶ್ವೇತ ಛತ್ರ - ಚಾಮರಗಳನ್ನು ಬಿಟ್ಟು, ನೃಪಶ್ರೇಷ್ಠಃ = ರಾಜೋತ್ತಮನಾದ ಆಕಾಶರಾಜನು, ದಾನಂ = ದಾನವನ್ನು, ಆಚರತ್ = ಮಾಡಿದನು ।। 68 ।।

**ಸ್ನಾನಂ ಕೃತ್ವಾ ನೃಪಶ್ರೇಷ್ಠಃ ಸ್ವಸ್ತಿವಾಚನಮಾಚರತ್ ।**
**ಜಾತಕರ್ಮಾದಿಕಂ ಕರ್ಮ ಕೃತವಾನ್ ತತ್ ಕ್ಷಣೇ ನೃಪಃ ।। 69 ।।**

**ದಿವಸೇ ದ್ವಾದಶೀಪ್ರಾಪ್ತೇ ಕೃತಾ ಪುತ್ರಾಭಿಧಾ ತಥಾ ।**
**ತದ್ದಿನೇ ಬಹುವಿಪ್ರಾಣಾಂ ಭೋಜನಂ ಕೃತವಾನ್ ನೃಪಃ ।। 70 ।।**

**ನಾಮ್ನಾ ತು ವಸುಧಾನೇತಿ ಲೋಕೇಖ್ಯಾತಿಂ ಗಮಿಷ್ಯತಿ ।**

*ಋಷಯ ಊಚುಃ -*

**ಶ್ರುತಂ ಪುತ್ರಪ್ರಭಾವಂ ಚ ನ ಶ್ರುತಂ ಮುನಿಪುಂಗವ ।। 71 ।।**
**ಅಯೋನಿಜಾಯಾ ಸ್ತತ್ಪುತ್ರ್ಯಾಃ ಕಿಂ ನಾಮ ಕೃತವಾನ್ನೃಪಃ ।**

*ಸೂತ ಉವಾಚ -*

**ಪದ್ಮೋದರಾಂ ಪದ್ಮಗರ್ಭಾಂ ಪದ್ಮಜಾತಾಂ ವರಾನನಾಮ್ ।। 72 ।।**
**ಪದ್ಮಾಯಾ ಅವತಾರತ್ವಾದ್ರಾಜಾ ಪದ್ಮಾವತೀತಿ ಚ ।**
**ಕೃತ್ವಾ ತು ನಾಮಕರಣಂ ನಿಜಪುತ್ರ್ಯಾ ನೃಪೋತ್ತಮಃ ।। 73 ।।**
**ವರ್ಧಮಾನೌ ಸುತೌ ದೃಷ್ಟ್ವಾ ರಾಜಾ ಸಂತೋಷಮಾಗತಃ ।**
**ಅಕಲಂಕೇಂದುಸದೃಶೌ ರಮಾಚಂದ್ರಸಮಾವುಭೌ ।। 74 ।।**

ಸ ನೃಪಶ್ರೇಷ್ಠಃ = ರಾಜಶ್ರೇಷ್ಠನಾದ ಆಕಾಶರಾಯನು, ಸ್ನಾನಂಕೃತ್ವಾ = ಮಂಗಳಸ್ನಾನವನ್ನು ಮಾಡಿ, ಸ್ವಸ್ತಿವಾಚನಂ = ಪುಣ್ಯಾಹ ಮುಂತಾದವುಗಳನ್ನೂ, ತತ್‌ಕ್ಷಣೇ = ಕೂಡಲೇ, ನೃಪಃ = ರಾಜನು, ಜಾತಕರ್ಮಾದಿಕಂ = ಜಾತಕರ್ಮ ಮೊದಲಾದ ವಿಧ್ಯುಕ್ತವಾದ, ಕರ್ಮ = ಕರ್ಮಗಳನ್ನು, ಕೃತವಾನ್ = ನೆರವೇರಿಸಿದನು ।। 69 ।। ದ್ವಾದಶೇ = ಹನ್ನೆರಡನೆಯ,

ದಿವಸೇ = ದಿನವು, ಪ್ರಾಪ್ತೇ (ಸತಿ) = ಬರುತ್ತಿರಲು, ಪುತ್ರಾಭಿಧಾಕೃತಾ = ಮಗನಿಗೆ ಹೆಸರಿಡುವ ಕಾರ್ಯವು ಮಾಡಲ್ಪಟ್ಟಿತು (ಮಗನ ನಾಮಕರಣವು ನೆರವೇರಿಸಲ್ಪಟ್ಟಿತು). ತಥಾ = ಮತ್ತು, ತದ್ದಿನೇ = ನಾಮಕರಣೋತ್ಸವದ ದಿನ, ಬಹುವಿಪ್ರಾಣಾಂ = ಅನೇಕ ಜನ ಭೂಸುರಾದಿಗಳಿಗೆ, ಭೋಜನಂ = ಮೃಷ್ಟಾನ್ನ ಭೋಜವನ್ನು, ನೃಪಃ = ಆಕಾಶರಾಜನು, ಕೃತವಾನ್ = ಮಾಡಿಸಿದನು, ।। 70 ।। ಆ ರಾಜಕುಮಾರನು, ವಸುಧಾನೇತಿ = ವಸುಧಾನ ಎಂಬ, ನಾಮ್ನಾತು = ಹೆಸರಿನಿಂದ, ಲೋಕೇ = ಪ್ರಪಂಚದಲ್ಲಿ, ಖ್ಯಾತಿಂ = ಪ್ರಸಿದ್ಧಿಯನ್ನು, ಗಮಿಷ್ಯತಿ = ಪಡೆಯುತ್ತಾನೆ.

ಋಷಯ ಊಚುಃ = ಋಷಿಮುನಿಗಳು ಮಾತನಾಡಿದರು - ಮುನಿಪುಂಗವ! = ಋಷಿವರ್ಯನಾದ ಸೂತಾಚಾರ್ಯನೇ! ಪುತ್ರಪ್ರಭಾವಂ ಚ = ಕುಮಾರನ ಜನನ ನಾಮಕರಣಾದಿ ಮಹತ್ವವಿಚಾರಗಳು, ಶ್ರುತಂ = ನಮ್ಮಿಂದ ಕೇಳಲ್ಪಟ್ಟಿತು, ।। 71 ।। ಅಯೋನಿಜಾಯಾಃ = ಅಯೋನಿಜೆಯಾದ (ಗರ್ಭದಿಂದ ಜನಿಸದಿರುವ), ತತ್ = ಕಮಲದಲ್ಲಿ ದೊರಕಿದ ತನ್ನ, ಪುತ್ರ್ಯಾಃ = ಮಗಳಿಗೆ, ನೃಪಃ = ಆಕಾಶರಾಜನು, ಕಿಂ ನಾಮ ಕೃತವಾನ್ = ಏನು ಹೆಸರಿಟ್ಟನು? ತತ್ = ಆ ವಿಚಾರವು, ನ ಶ್ರುತಂ = ನಮ್ಮಿಂದ ಕೇಳಲ್ಪಡಲಿಲ್ಲ, ಸೂತ ಉವಾಚ = ಸೂತಾಚಾರ್ಯನು ಹೇಳಿದನು - ಪದ್ಮೋದರಾಂ = ಕಮಲದಂತೆ ಮೃದುವಾದ ಉದರವುಳ್ಳ, ಪದ್ಮಗರ್ಭಾಂ = ಪದ್ಮದಲ್ಲಿ ಗರ್ಭವಾಗಿರುವ (ಪದ್ಮವೇ ಗರ್ಭವಾಗುಳ್ಳ), ಅಥವಾ ಪದ್ಮಗರ್ಭಾಂ - ಪದ್ಮ = ಪದ್ಮಯೋನಿಯೆಂದು ಖ್ಯಾತನಾದ ಬ್ರಹ್ಮನನ್ನೇ, ಗರ್ಭಾಂ = ಗರ್ಭದಲ್ಲಿಟ್ಟುಕೊಂಡಿರುವ, (ಪದ್ಮನೆಂಬ ಬ್ರಹ್ಮನನ್ನು ಉದರದಲ್ಲಿಟ್ಟುಕೊಂಡಿರುವ), ಪದ್ಮಜಾತಾಂ = ಕಮಲದಲ್ಲಿ ಜನಿಸಿದ, ವರಾನನಾಂ = ಶ್ರೇಷ್ಠವಾದ ಮುಖದಿಂದ ವಿರಾಜಿತಳಾದ, ।। 72 ।। ಚ = ಮತ್ತು, ಪದ್ಮಾಯಾಃ = ಲಕ್ಷ್ಮೀದೇವಿಯ, ಅವತಾರತ್ವಾತ್ = ಅವತಾರಳಾದುದರಿಂದ, ರಾಜಾ = ಆಕಾಶರಾಜನು, ಪದ್ಮಾವತೀತಿ = ಪದ್ಮಾವತಿ ಎಂದು, ನೃಪೋತ್ತಮಃ = ರಾಜೋತ್ತಮನಾದ ಆಕಾಶರಾಜನು, ನಿಜಪುತ್ರ್ಯಾಃ = ತನ್ನ ಮಗಳಿಗೆ, ನಾಮಕರಣಂ = ನಾಮಕರಣವನ್ನು, ಕೃತ್ವಾತು = ಮಾಡಿದವನಾಗಿ ।। 73 ।। ವರ್ಧಮಾನೌ = ಬೆಳೆಯುತ್ತಿರುವ, ಉಭೌ = ಅವರಿಬ್ಬರೂ, ಅಕಲಂಕೇಂದು ಸದೃಶೌ = ಕಳಂಕವಿಲ್ಲದ ಚಂದ್ರಮನಿಗೆ ಸಮಾನರಾದ, ರಮಾಚಂದ್ರಸಮೌ = ರಮಾದೇವಿ ಚಂದ್ರರಿಗೆ ಸದೃಶರಾದ, ತೌ = ಪದ್ಮಾವತಿ - ವಸುಧಾನರನ್ನು, ದೃಷ್ಟ್ವಾ = ನೋಡಿ, ರಾಜಾ = ಮಹೀಪತಿಯು, ಸಂತೋಷಮಾಗತಃ = ಸಂತೋಷವುಳ್ಳವನಾದನು.

**ಕಿಂ ತೇನ ಸುಕೃತಂ ರಾಜ್ಞಾ ಬಹುಜನ್ಮಾರ್ಜಿತಂ ಫಲಮ್ ।**
**ಅಗ್ರಜಾಂ ಪುತ್ರಿಕಾಂ ದೃಷ್ಟ್ವಾ ತದಂತೇ ಪುತ್ರಮುತ್ತಮಮ್ ।। 75 ।।**

**ದೃಷ್ಟ್ವಾ ತುತೋಷ ಮನಸಾ ಸಂಪೂರ್ಣಾನಂದಸಾಗರಃ ।**
**ಏವಂ ಕಾಲೇ ಗತೇ ತಸ್ಮಿನ್ ಸಾ ಬಾಲಾ ಯೌವನಂಗತಾ ।। 76 ।।**

**ಯೌವನಾಢ್ಯಾಂ ವಿಶಾಲಾಕ್ಷೀಂ ದೃಷ್ಟ್ವಾ ರಾಜಾ ವ್ಯಚಿಂತಯತ್ ।**
**ವಿಚಾರಯಾಮಾಸ ನೃಪಃ ಪುತ್ರ್ಯರ್ಥಂ ವರಮುತ್ತಮಮ್ ।। 77 ।।**

**ನ ಪ್ರಾಪ ದುಃಖಸಂತಪ್ತಃ ಕಸ್ಮೈ ದೇಯಾ ಮಯಾ ಸುತಾ ।**
**ಇತಿ ಚಿಂತಾಗ್ನಿಮಗ್ನೋಽಭೂತ್ ಪುತ್ರೀಂ ಯೌವನಮಾಗತಾಮ್ ।। 78 ।।**

**ದೃಷ್ಟ್ವಾ ರಾಜಾ ಸುತಂ ಬಾಲಂ ಬ್ರಾಹ್ಮಣಂ ಕೃತವಾನ್ ದ್ವಿಜೈಃ ।**
**ಸಾ ಕದಾಚಿದ್ವನಂ ದೇವೀ ಸಖೀಭಿಃ ಪರಿವಾರಿತಾ ।। 79 ।।**

**ವನಂ ಜಗಾಮ ಪುಷ್ಪಾರ್ಥಂ ಕನ್ಯಾ ಕಮಲಲೋಚನಾ ।**
**ವಸಂತಮಾಗತಂ ವೀಕ್ಷ್ಯ ವನೇ ತಾಭಿರ್ಭಯಾಕುಲೇ ॥ 80 ॥**

**ಪುಷ್ಪಾಣ್ಯಾಹಾರಯಾಮಾಸ ತರುಮೂಲಮುಪಾಶ್ರಿತಾ ।**
**ತದಾಗತೋ ನಾರದಸ್ತು ವೃದ್ಧೋ ಭೂತ್ವಾ ಜಟಾಧರಃ ॥ 81 ॥**

**ಧೂಲೀಧೂಸರಿತಾಂಗಶ್ಚ ಕರ್ಪೂರಸದೃಶದ್ಯುತಿಃ ।**
**ಆಗತಂ ತಂ ಮುನಿಂ ದೃಷ್ಟ್ವಾ ವಿಸ್ಮಯಾಕುಲಮಾನಸಾ ॥ 82 ॥**

**ಕೋಽಸೌ ಭಯಂಕರೋ ಬಾಲಾಃ ಕಥಮತ್ರ ವಿಚಾರ್ಯತಾಮ್ ।**

ತೇನ ರಾಜ್ಞಾ = ಆ ಆಕಾಶರಾಜನಿಂದ, ಕಿಂ ಸುಕೃತಂ = ಏನು ಪುಣ್ಯವು (ಕೃತಂ = ಮಾಡಲ್ಪಟ್ಟಿತು?), ಬಹುಜನ್ಮಾರ್ಜಿತಂ = ಅನೇಕ ಜನ್ಮಗಳಲ್ಲಿ ಸಂಪಾದಿಸಿದ, ಫಲಂ = ಫಲವು!, ಅಗ್ರಜಾಂ = ಮೊದಲು ಜನಿಸಿದ, ಪುತ್ರಿಕಾಂ = ಮಗಳನ್ನೂ, ತದಂತೇ = ಅವಳು ಜನಿಸಿದ ಕೂಡಲೇ ಜನಿಸಿದ, ಉತ್ತಮಂ = ಶ್ರೇಷ್ಠನಾದ, ಪುತ್ರಂ = ಮಗನನ್ನು ॥ 75 ॥ ದೃಷ್ಟ್ವಾ = ನೋಡಿ, ಪೂರ್ಣಾನಂದ ಸಾಗರಃ = ಸಾಗರದಂತೆ ಸಂಪೂರ್ಣಾನಂದವುಳ್ಳವನಾದ ಆಕಾಶರಾಜನು, ಮನಸಾ = ಮನದಲ್ಲೇ, ತುತೋಷ = ಸಂತೋಷಭರಿತನಾದನು. ಏವಂ = ಹೀಗೆ, ತಸ್ಮಿನ್ = ಅಲ್ಲಿ, ಕಾಲೇಗತೇ(ಸತಿ) = ಕಾಲವು ಕಳೆಯುತ್ತಿರಲಾಗಿ, ಸಾ ಬಾಲಾ = ಬಾಲಿಕೆಯಾದ ಪದ್ಮಾವತಿಯು, ಯೌವನಾಢ್ಯಾಂ = ತಾರುಣ್ಯದಿಂದ ಬೆಳಗುವ, ವಿಶಾಲಾಕ್ಷೀಂ = ವಿಸ್ತಾರವಾದ ನಯನಗಳುಳ್ಳ ಮಗಳನ್ನು, ದೃಷ್ಟ್ವಾ = ನೋಡಿ, ರಾಜಾ = ಆಕಾಶರಾಜನು, ವ್ಯಚಿಂತಯತ್ = ಚಿಂತಿಸಹತ್ತಿದನು. ನೃಪಃ = ರಾಜನು, ಪುತ್ರ್ಯರ್ಥಂ = ಮಗಳಿಗಾಗಿ, ಉತ್ತಮಂ = ಶ್ರೇಷ್ಠನಾದ, ವರಂ = ವರನನ್ನು, ವಿಚಾರಯಾಮಾಸ = ಅನೇಕ ಕಡೆ ಮಗಳಿಗಾಗಿ ವಿಚಾರಿಸಿದನು. ॥ 77 ॥ ಆದರೆ, ನ ಪ್ರಾಪ = ಅಂತಹ ಉತ್ತಮ ವರನನ್ನು ಹೊಂದಲಿಲ್ಲ, ದುಃಖಸಂತಪ್ತಃ = ಆ ದುಃಖ ಸಂತಾಪಗೊಂಡು, ಮಯಾ = ನನ್ನಿಂದ, ಸುತಾ = ಪುತ್ರಿಯು, ಕಸ್ಮೈ = ಯಾರಿಗೆ, ದೇಯಾ = ಮದುವೆ ಮಾಡಿಕೊಡಬೇಕು? ಇತಿ = ಇಂತು, ಯೌವನಮಾಗತಾಂ = ಪ್ರಾಯಕ್ಕೆ ಬಂದ, ಪುತ್ರೀಂ = ಮಗಳನ್ನು, ದೃಷ್ಟ್ವಾ = ನೋಡಿ, ಚಿಂತಾಬ್ಧಿಮಗ್ನಃ = ಚಿಂತೆಯೆಂಬ ಸಮುದ್ರದಲ್ಲಿ(ಮುಳುಗಿದವನು) ಮಗ್ನನು, ಅಭೂತ್ = ಆದನು ॥ 78 ॥ ರಾಜಾ = ಆಕಾಶರಾಜನು, ಬಾಲಕಂ = ಬಾಲಕನಾದ, ಸುತಂ = ವಸುಧಾನನನ್ನು, ದ್ವಿಜೈಃ = ಬ್ರಾಹ್ಮಣರಿಂದ, ಬ್ರಾಹ್ಮಣಂ = ಉಪನೀತನನ್ನಾಗಿ (ವೇದಾಧ್ಯಯನಾಧಿಕಾರಿಯನ್ನಾಗಿ), ಕೃತವಾನ್ = ಮಾಡಿಸಿದನು.

ಸಾ ದೇವೀ = ಆ ತಾರುಣ್ಯವತಿಯಾದ ಪದ್ಮಾವತಿಯು, ಕದಾಚಿತ್ = ಒಂದಾನೊಂದು ದಿವಸ, ಸಖೀಭಿಃ = ಸಖಿಯರಿಂದ, ಪರಿವಾರಿತಾ = ಸುತ್ತುಗಟ್ಟಲ್ಪಟ್ಟವಳಾಗಿ ॥ 79 ॥ ಪುಷ್ಪಾರ್ಥಂ = ಹೂವಿಗಾಗಿ, ವನಂ = ವನವನ್ನು ಕುರಿತು, ಜಗಾಮ = ಹೋದಳು. ಕಮಲಲೋಚನಾ = ಕಮಲನಯನಳಾದ ಪದ್ಮಾವತಿಯು, ವಸಂತಮಾಗತಂ = ವಸಂತಋತುವು ಬಂದಿರುವುದನ್ನು, ವೀಕ್ಷ್ಯ = ನೋಡಿ, ಭಯಾಕುಲೇ = ಭಯಜನಕವಾದ ॥ 80 ॥ ವನೇ = ಅರಣ್ಯದಲ್ಲಿ, ತರುಮೂಲಮುಪಾಶ್ರಿತಾ = ಮರದ ಕೆಳಗೆ ಆಶ್ರಯಪಡೆದು, ಪುಷ್ಪಾಣ್ಯಾಹಾರಯಾಮಾಸ = ವಿವಿಧ ಹೂವುಗಳನ್ನು ಬಿಡಿಸಹತ್ತಿದಳು; ತದಾ = ಅದೇ ಸಮಯಕ್ಕೆ, ಜಟಾಧರಃ = ಜಟೆಯನ್ನು ಕಟ್ಟಿರುವ, ಧೂಲೀಧೂಸರಿತಾಂಗಶ್ಚ = ಧೂಳಿನಿಂದ ಹಚ್ಚಲ್ಪಟ್ಟ ದೇಹವುಳ್ಳವನಾದ, ಕರ್ಪೂರಸದೃಶದ್ಯುತಿಃ = ಕರ್ಪೂರದಂತಿರುವ ಕಾಂತಿಯುಕ್ತನಾದ, ವೃದ್ಧೋ ಭೂತ್ವಾ = ಮುದುಕನಂತಾಗಿ, ನಾರದಸ್ತು = ದೇವರ್ಷಿ ನಾರದನು, ಆಗತಃ = ಬಂದನು, ಆಗತಂ = ಬಂದ, ತಂ ಮುನಿಂ = ಆ ನಾರದ ಮುನಿಯನ್ನು, ದೃಷ್ಟ್ವಾ = ನೋಡಿ,(ಪದ್ಮಾವತಿಯು) ವಿಸ್ಮಯಾಕುಲಮಾನಸಾ = ವಿಸ್ಮಯದಿಂದ ಯುಕ್ತವಾದ

ಮನಸ್ಸಿನಿಂದ ॥ 81–82 ॥ ಬಾಲಾಃ = ಕನ್ನಿಕೆಯರಾದ ಸಖಿಯರೇ, ಭಯಂಕರಃ = ಭಯವನ್ನುಂಟುಮಾಡುವ, ಅಸೌ ಕಃ = ಇವನ್ಯಾರು? ಅತ್ರ = ಈ ವಿಷಯವಾಗಿ, ವಿಚಾರ್ಯತಾಂ = (ನಿಮ್ಮಿಂದ) ವಿಚಾರ ಮಾಡಲ್ಪಡಲಿ.

*ಕನ್ಯಾ ಊಚುಃ –*

**ಕೋಽಸಿ ವಿಪ್ರ ಮಹಾಪ್ರಾಜ್ಞ ಕಿಮರ್ಥಂ ತ್ವಮಿಹಾಗತಃ ॥ 83 ॥**

**ವಾಕ್ಯಂ ತಾಸಾಂ ಸಮಾಕರ್ಣ್ಯ ಗುರುಃ ಪ್ರೋವಾಚ ಸದ್ವಚಃ ।**

*ನಾರದ ಉವಾಚಃ –*

**ಅಹಂ ಕುಲಗುರುಸ್ಸಾಕ್ಷಾದ್ಯುಷ್ಮಾಕಂ ವರಯೋಷಿತಾಮ್ ॥ 84 ॥**

**ಹಸ್ತಂ ದರ್ಶಯ ಬಾಲೇ ತ್ವಂ ಲಕ್ಷಣಂ ಪ್ರವದಾಮಿ ತೇ ।**

**ಉವಾಚ ಲಜ್ಜಯಾ ದೇವೀ ಕಿಂ ವದಿಷ್ಯಸಿ ಹೇ ದ್ವಿಜ ॥ 85 ॥**

ಕನ್ಯಾ ಊಚುಃ = ಆ ಕನ್ಯೆಯರು ಮಾತನಾಡಿದರು – ಮಹಾಪ್ರಾಜ್ಞ = ಅತಿಶಯವಾಗಿ ತಿಳಿದಿರುವ, ವಿಪ್ರ = ಬ್ರಾಹ್ಮಣನೇ! ತ್ವಂ = ನೀನು, ಕೋಽಸಿ = ಯಾರು? ಇಹ = ಇಲ್ಲಿಗೆ, ಕಿಮರ್ಥಂ = ಯಾವ ಉದ್ದಿಶ್ಯದಿಂದ, ಆಗತಃ = ಬಂದಿರುವೆ? ॥ 83 ॥ ತಾಸಾಂ = ಆ ಕನ್ನಿಕೆಯರ, ವಾಕ್ಯಂ = ವಚನವನ್ನು, ಸಮಾಕರ್ಣ್ಯ = ಕೇಳಿದವನಾಗಿ, ಗುರುಃ = ಗುರುವಾದ ನಾರದಮುನಿಯು, ಸದ್ವಚಃ = ಸಮೀಚೀನವಾದ ಮಾತನ್ನು, ಪ್ರೋವಾಚ = ನುಡಿದನು, ನಾರದ ಉವಾಚ = ನಾರದನು ಇಂತು ಮಾತನಾಡಿದನು – ವರಯೋಷಿತಾಂ = ಶ್ರೇಷ್ಠರಾದ ಸ್ತ್ರೀಯರಾದ, ಯುಷ್ಮಾಕಂ = ನಿಮ್ಮಂಥ ಕನ್ನಿಕೆಯರಿಗೆ, ಅಹಂ = ನಾನು, ಸಾಕ್ಷಾತ್ = ಪ್ರತ್ಯಕ್ಷವಾಗಿ, ಕುಲಗುರುಃ = ವಂಶಪರಂಪರೆಯಿಂದ ಬಂದ ಗುರು (ಉಪದೇಶಕರು)ವಾಗಿದ್ದೇನೆ. ॥ 84 ॥ ಬಾಲೇ = ಬಾಲಿಕೆಯಾದ ಪದ್ಮಾವತಿಯೇ! ತವ = ನಿನ್ನ, ಹಸ್ತಂ = ಕರವನ್ನು, ದರ್ಶಯ = ತೋರಿಸು, ತೇ = ನಿನಗೆ, ಲಕ್ಷಣಂ = ಉತ್ತಮ = ಉತ್ತಮ ಸ್ತ್ರೀಲಕ್ಷಣವನ್ನು (ಅಥವಾ ಸಾಮುದ್ರಿಕಾಶಾಸ್ತ್ರದಲ್ಲಿ ಹೇಳಿರುವ ಲಕ್ಷಣಗಳನ್ನು), ಪ್ರವದಾಮಿ = ಬಿಡಿಸಿ ಬಿಡಿಸಿ ಹೇಳುವೆನು. ನಾರದನ ಮಾತನ್ನು ಕೇಳಿ, ದೇವೀ = ಪದ್ಮಾವತಿಯು, ಲಜ್ಜಯಾ = ನಾಚಿಕೆಯಿಂದ, ಹೇ ದ್ವಿಜ = ಎಲೈ ಬ್ರಾಹ್ಮಣನೇ, ಕಿಂ ವದಿಷ್ಯಸಿ = ನೀನೇನು ಹೇಳುತ್ತೀಯೆ? ಎಂದಳು. ॥ 85 ॥

*ನಾರದ ಉವಾಚ –*

**ವಿದ್ಧಿ ತ್ವಂ ಪಿತೃತುಲ್ಯಂ ಮಾಂ ಮನಸಾ ನಿರ್ಮಲೇನ ಚ ।**
**ಇತ್ಯುಕ್ತಾ ಋಷಿಣಾ ತೇನ ದತ್ವಾ ಹಸ್ತಂ ವರಾಂಗನಾ ॥ 86 ॥**

**ಸತ್ಯಂ ವದ ಮಹಾಪ್ರಾಜ್ಞ ಲಕ್ಷಣಾನಿ ವರಾಣಿ ಮೇ ।**
**ದೃಷ್ಟ್ವಾ ಪಾಣಿತಲಂ ಪ್ರಾಹ ಹಸನ್ವಿಧಿತನೂಭವಃ ॥ 87 ॥**

ನಾರದ ಉವಾಚ = ಆಗ ನಾರದರು ಹೇಳಿದರು, ತ್ವಂ = ನೀನು, ನಿರ್ಮಲೇ = ನಿರ್ಮಲವಾದ (ಪರಿಶುದ್ಧವಾದ), ಮನಸಾ = ಮನಸ್ಸಿನಿಂದ, ಮಾಂ = ನನ್ನನ್ನು, ಪಿತೃತುಲ್ಯಂ = ತಂದೆಗೆ ಸಮಾನನೆಂದು, ವಿದ್ಧಿ= ತಿಳಿ, ಋಷಿಣಾ ತೇನ = ನಾರದ ಮುನಿಯಿಂದ, ಇತ್ಯುಕ್ತಾ = ಇಂತು ಹೇಳಿಸಿಕೊಂಡ, ವರಾಂಗನಾ = ಶ್ರೇಷ್ಠಳಾದ ಪದ್ಮಾವತಿಯು, ಹಸ್ತಂ = ತನ್ನ

ಕರವನ್ನು, ದತ್ವಾ = ನಾರದಮುನಿಗೆ ಕೊಟ್ಟು (ತೋರಿಸಿ), ।। 86 ।। ಮಹಾಪ್ರಾಜ್ಞ = ಅತಿಶಯ ಪ್ರಾಜ್ಞನಾದ ಮುನಿಯೇ! ಮೇ = ನನ್ನ (ಹಸ್ತದಲ್ಲಿರುವ), ವರಾಣಿ = ಉತ್ತಮಗಳಾದ, ಲಕ್ಷಣಾನಿ = ಲಕ್ಷಣಗಳನ್ನು, ಸತ್ಯಂ = ದಿಟವಾಗಿ, ವದ = ಹೇಳುವವನಾಗು, ವಿಧಿತನೂಭವಃ = ಬ್ರಹ್ಮದೇವನ ದೇಹದಿಂದ ಉದ್ಭವಿಸಿದ (ಹುಟ್ಟಿದ) ನಾರದಮುನಿಯು, ಹಸನ್ = ನಸುನಗುತ್ತಾ, ಪಾಣಿತಲಂ = ಪದ್ಮಾವತಿಯ ಅಂಗೈಯನ್ನು, ದೃಷ್ಟ್ವಾ = ಪರಿಶೀಲಿಸಿ, ಪ್ರಾಹ = ಹೇಳಿದನು ।। 87 ।।

*ನಾರದ ಉವಾಚ -*

**ಪತಿರ್ಭವತಿ ಧರ್ಮಜ್ಞೇ ತ್ರಿಲೋಕೇಶೋ ರಮಾಪತಿಃ ।**
**ಪಾಣೀ ಪದ್ಮದಲೋಪೇತೌ ಪಾದೌ ತೇ ಸ್ವಸ್ತಿಕಾಯುತೌ ।। 88 ।।**

**ಮುಖಂ ಚಂದ್ರಸಮಾಕಾರಂ ಚಕ್ಷುಃ ಕಮಲಕುಡ್ಮಲಮ್ ।**
**ತಿಲಪುಷ್ಪಸಮಾಕಾರಾ ನಾಸಿಕಾ ತೇ ವಿರಾಜತೇ ।। 89 ।।**

**ಮುಕುರಾಭೌ ಕಪೋಲೌ ತೌ ಭ್ರುವೌ ತೇ ಧನುಷಾ ಸಮೇ ।**
**ಅಸ್ಯಂ ಕರ್ಪೂರಪಾತ್ರಂ ಚ ದಂತಾ ದಾಡಿಮಬೀಜವತ್ ।। 90 ।।**

**ಅಧರಂ ರಕ್ತಪದ್ಮಾಭಂ ಜಿಹ್ವಾ ಮೃದುತರಾ ಶುಭೇ ।**
**ಅರಾಲಾಲಕಸಂಬದ್ಧಾ ಅಸಿತಾ ಭಾತಿ ವೇಣಿಕಾ ।। 91 ।।**

**ಲಲಾಟಂ ರತ್ನಪೀಠಾಭಂ ಶ್ರೋತ್ರೇಶಷ್ಕುಲಿಕಾ ಸಮೇ[11] ।**
**ಸಮಭ್ರೂ[12] ರ್ಮನ್ಮಥಾಕಾರ ಪ್ರತಿಮಾಽಪ್ರತಿಮಪ್ರಭಾ ।। 92 ।।**

**ಕಂಠ ಸ್ಸೂರ್ಯಾಂಶುಸದೃಶಸ್ತಾಂಬೂಲರಸದರ್ಶಕಃ ।**
**ಸ್ತನೌ ಪೀನೌ ಘನೌ ಕುಬ್ಜೌ ಬ್ರಹ್ಮಣಾ ಸ್ವಾದಿತಾವುಭೌ ।। 93 ।।**

ನಾರದ ಉವಾಚ = ನಾರದ ಮಹರ್ಷಿಯು ಹೇಳಲಾರಂಭಿಸಿದನು, ಧರ್ಮಜ್ಞೆ = ಧರ್ಮರಹಸ್ಯಗಳನ್ನು ಅರಿತಿರುವ ಪದ್ಮಾವತಿಯೇ! ತ್ರಿಲೋಕೇಶಃ = ಮೂರು ಲೋಕಗಳಿಗೆ ಸ್ವಾಮಿಯಾದ, ರಮಾಪತಿಃ = ಶ್ರೀಕಮಲಾಕಾಂತನಾದ ಶ್ರೀಹರಿಯು, ಪತಿಃ = ನಿನಗೆ ಪತಿಯು (ಗಂಡನು), ಭವತಿ = ಆಗುವನು; ಪಾಣೀ = ನಿನ್ನ ಕರಗಳು, ಪದ್ಮತಲೋಪೇತಾ = ಕಮಲದ (ಗದ್ದಿಗೆ) ವೇದಿಕೆಯಂತಿದೆ, ತೇ = ನಿನ್ನ, ಪಾದೌ = ಎರಡು ಕಾಲುಗಳು, ಸ್ವಸ್ತಿಕಾಯುತೌ = ಸ್ವಸ್ತಿಕಾಂಕಿತವಾಗಿವೆ (ಸ್ವಸ್ತಿಕಾಚಿನ್ಹೆಯಿಂದೊಡಗೂಡಿದೆ - ಅಥವಾ ಸ್ವಸ್ತಿಕೆಯಂತೆ ವಿಶಾಲವಾಗಿವೆ) ।। 88 ।। ಮುಖಂ = ನಿನ್ನ ವದನವು, ಚಂದ್ರಸಮಾಕಾರಂ = ಚಂದ್ರನಿಗೆ ಸದೃಶವಾಗಿ ಗುಂಡಾಗಿದೆ; (ಆಹ್ಲಾದಜನಕವಾಗಿದೆ), ಚಕ್ಷುಃ = ನಿನ್ನ ನೇತ್ರಗಳು, ಕಮಲ ಕುಡ್ಮಲಂ = ಕಮಲದಂತೆ ವಿಸ್ತಾರವಾಗಿದೆ, ತೇ = ನಿನ್ನ, ನಾಸಿಕಾ = ನಾಸಿಕವು (ಮೂಗು), ತಿಲಪುಷ್ಪಸಮಾಕಾರಾ = ತಿಲ (ಎಳ್ಳು) ಪುಷ್ಪಕ್ಕೆ ಸಮಾನವಾದ ಆಕಾರವುಳ್ಳದ್ದಾಗಿ, ವಿರಾಜತೇ = ಪ್ರಕಾಶಿಸುತ್ತಿದೆ ।। 86 ।। ತೇ = ನಿನ್ನ, ತೌ ಕಪೋಲೌ = ಎರಡು ಗಲ್ಲಗಳು (ಕೆನ್ನೆಗಳು), ಮುಕುರಾಭೌ = ಎರಡು ಕನ್ನಡಿಗಳಂತಿವೆ. ಭ್ರುವೌ = ನಿನ್ನ ಎರಡು ಹುಬ್ಬುಗಳು, ಧನುಷಾ ಸಮೇ =

---

11. ಶ್ರವಣೇ ಪ್ರವಿರಾಜತೇ, 12. ಸಮಾಭು

ಬಿಲ್ಲಿಗೆ ಸದೃಶವಾಗಿವೆ, ಆಸ್ಯಂ = ನಿನ್ನ ಮುಖವು, ಕರ್ಪೂರಪಾತ್ರಂ = ಕರ್ಪೂರದಿಂದ ನಿರ್ಮಿಸಿದ ಪಾತ್ರೆಯಂತಿದೆ, ಚ = ಮತ್ತು, ದಂತಾಃ = ನಿನ್ನ ಹಲ್ಲುಗಳು, ದಾಡಿಮಬೀಜವತ್ = ದಾಳಿಂಬೆಯ ಬೀಜಗಳಂತೆ ಇವೆ ॥ 90 ॥ ಅಧರಂ = ತುಟಿಯು, ರಕ್ತಪದ್ಮಾಭಂ = ಕೆಂಪುಕಮಲದಂತಿದೆ, ಶುಭೇ = ಮಂಗಳಕರಳಾದ ಹೇ ಪದ್ಮಾವತಿ! ಜಿಹ್ವಾ = ನಿನ್ನ ನಾಲಿಗೆಯು, ಮೃದುತರಾ = ಅತಿಶಯ ಕೋಮಲವಾಗಿದೆ, ವೇಣಿಕಾ = ನಿನ್ನ ಹೆರಳು (ಜಡೆಯು), ಅಸಿತಾ = ಕಪ್ಪಾಗಿಯೂ, ಅರಾಲಾಲಕಸಂಬದ್ಧಾ = ಮುಂಗುರುಳುಗಳಿಂದೊಡಗೂಡಿ, ಭಾತಿ = ಕಂಗೊಳಿಸುತ್ತಿದೆ ॥ 91 ॥ ಲಲಾಟಂ = ಹಣೆಯು, ರತ್ನಪೀಠಾಭಂ = ರತ್ನಮಯ ಪೀಠದ ಕಾಂತಿಯುಕ್ತವಾಗಿದೆ, ಶ್ರೋತ್ರೇ = ನಿನ್ನೆರಡು ಕರ್ಣಗಳು, ಚಷ್ಕುಲಿಕಾ ಸಮೇ = ಚಕ್ಕುಲಿಗೆ ಸಮಾನವಾಗಿವೆ, (ಪಾ: – ಶ್ರವಣೇ = ಕಿವಿಗಳು, ಪ್ರವಿರಾಜತೇ = ಅತಿಯಾಗಿ ಹೊಳೆಯುತ್ತಿವೆ), ಭ್ರೂ = ನಿನ್ನ ಕಣ್ಣಿನ ಹುಬ್ಬುಗಳು, ಸಮಾ = ಒಂದೇ ವಿಧವಾಗಿವೆ, ಅಪ್ರತಿಮಪ್ರಭಾ = ಅಸದೃಶಕಾಂತಿಯುಳ್ಳ, ಮನ್ಮಥಾಕಾರ ಪ್ರತಿಮಾ – ಮನ್ಮಥ = ಮನ್ಮಥನ ಆಕಾರ = ರೂಪಲಾವಣ್ಯಯುಕ್ತವಾದ, ಪ್ರತಿಮಾ = ಪುತ್ಥಳಿಯಂತೆ (ಬೊಂಬೆಯಂತೆ) ನೀನು ಬೆಳಗುತ್ತಿದ್ದೀಯೆ ॥ 92 ॥ ಕಂಠಃ = ನಿನ್ನ ಕುತ್ತಿಗೆಯು, ಸೂರ್ಯಾಂಶು ಸದೃಶಃ = ಸೂರ್ಯನ ಕಿರಣಗಳಿಗೆ ಸಮಾನವಾದ, ತಾಂಬೂಲರಸ ದರ್ಶಕಃ = ತಾಂಬೂಲದ ರಸವನ್ನು ತೋರಿಸುವಂತೆ ಸುಂದರವಾಗಿದೆ, ಸ್ತನೌ = ಎರಡು ಸ್ತನಗಳು, ಪೀನೌ = ಪುಷ್ಟವಾಗಿವೆ, ಘನೌ = ನಿಬಿಡವಾಗಿವೆ. (ದಟ್ಟವಾಗಿವೆ), ಕುಬ್ಜೌ = ಪುಟ್ಟದಾಗಿವೆ (ಮಾಟವಾಗಿವೆ), ಬ್ರಹ್ಮಣಾ = ಬ್ರಹ್ಮದೇವನಿಂದ, ಉಭೌ= ನಿನ್ನೆರಡು ಕುಚಗಳೂ, ಆಸ್ವಾದಿತೌ = ಆಸ್ವಾದಿತವಾಗಿವೆ (ಅಂದರೆ ಸ್ತನ್ಯಪಾನ ಮಾಡಿದ್ದಾಗಿವೆ) ॥ 93 ॥

**ಉದರಂ ಕದಲೀಪರ್ಣಸದೃಶಂ ನಿಮ್ನನಾಭಿಕಮ್ ।**
**ಕಟಿಸ್ತವ ಕರಿಧ್ವಂಸಿಕಟಿಸಾಮ್ಯಮನಾಕುಲಮ್ ॥ 94 ॥**

ಉದರಂ = ನಿನ್ನ ಉದರವು (ಹೊಟ್ಟೆಯು), ಕದಲೀಪರ್ಣಸದೃಶಂ = ಬಾಳೆಎಲೆಯಂತೆ ತೆಳುವಾಗಿದೆ, ನಿಮ್ನನಾಭಿಕಂ = ಹೊಕ್ಕಳು ಆಳವಾಗಿದೆ, ತವ = ನಿನ್ನ, ಕಟಿಃ = ನಡುವು (ಟೊಂಕವು), ಕರಿಧ್ವಂಸಿಕಟಿಸಾಮ್ಯಂ – ಕರಿಧ್ವಂಸಿಕಟಿ = ಆನೆಯನ್ನು ನಾಶಪಡಿಸುವ ಸಿಂಹದ ಕಟಿಯಂತಿದೆ, (ಅಂದರೆ ಸಿಂಹಕಟಿಸಾಮ್ಯವು), ಅನಾಕುಲಂ = ಸರಿಹೊಂದುವುದಿಲ್ಲ – (ಅಂದರೆ ನಿನ್ನ ಕಟಿಯು ಸಿಂಹದ ಕಟಿಗಿಂತಲೂ ಶ್ರೇಷ್ಠವೂ ಮನೋಹರವೂ ಆದುದು ಎಂದು ಭಾವ) ॥ 94 ॥

**ರಂಭಾಸ್ತಂಭಸಮಾಕಾರಂ ತವೋರುಯುಗಲಂ ರಮೇ ।**
**ಪೃಷ್ಠಂ ತೇ ವೇದಿವದ್ಭಾತಿ ಕಿಂ ತ್ವಯಾ ಸುಕೃತಂ ಕೃತಮ್ ॥ 95 ॥**

**ಗಮನಂ ಕರಿರಾಜಸ್ಯ ಸದೃಶಂ ತೇ ವರಾನನೇ ।**
**ಪೂರ್ವಾರ್ಜಿತೇನ ಪುಣ್ಯೇನ ಲಭ್ಯತೇ ಸಕಲಂ ಶುಭೇ ॥ 96 ॥**

**ಇತಿ ಸಂಭಾಷ್ಯ ತಾಂ ದೇವೀಂ ದೇವರ್ಷಿಃ ಪದ್ಮಸಂಭವಾಮ್ ।**
**ಅಂತರ್ದಧೇ ನಾರದಸ್ತು ಸರ್ವಾಸಾಂ ಪುರತೋ ಮುನಿಃ ॥ 97 ॥**

**ಸಂಸ್ತುತ್ಯ ಕಮಲಾಂ ದೇವೀಂ ಮನಸಾ ಚಿಂತಯನ್ ರಮಾಮ್ ।**
**ಮನಸಾ ವಂದನಂ ಕೃತ್ವಾ ಜಗಾಮಾಥ ಋಷಿಸ್ತದಾ ॥ 98 ॥**

ರಮೇ = ಎಲೈ ಲಕ್ಷ್ಮೀದೇವಿ, ತವ = ನಿನ್ನ, ಊರುಯುಗಲಂ = ಎರಡು ತೊಡೆಗಳು, ರಂಭಾಸ್ತಂಭ ಸಮಾಕಾರಂ = ಬಾಳೆಯಕಂಬಕ್ಕೆ ಸದೃಶವಾಗಿದೆ, ತೇ = ನಿನ್ನ, ಪೃಷ್ಠಂ = ನಿತಂಬವು, ವೇದಿವತ್ = ಗದ್ದುಗೆ (ವೇದಿಕೆ)ಯಂತೆ, ಭಾತಿ = ಪ್ರಕಾಶಿಸುವುದು, ತ್ವಯಾ = ನಿನ್ನಿಂದ, ಕಿಂ ಸುಕೃತಂ = ಏನು ಪುಣ್ಯವು, ಕೃತಂ = ಮಾಡಲ್ಪಟ್ಟಿತು? ।। 95 ।। ವರಾನನೇ = ಶ್ರೇಷ್ಠವದನವಿರಾಜಿತಳಾದ ಪದ್ಮಾವತಿಯೇ, ತೇ = ನಿನ್ನ; ಗಮನಂ = ನಡಿಗೆಯು, ಕರಿರಾಜಸ್ಯ = ಗಜರಾಜನಿಗೆ, ಸದೃಶಂ = ಸಮಾನವಾದುದು; ಶುಭೇ = ಮಂಗಳಕರಳೇ, ಸಕಲಂ = ಈ ರೂಪಲಾವಣ್ಯಾದಿಗಳು ಎಲ್ಲವೂ, ಪೂರ್ವಾರ್ಜಿತೇನ = ಹಿಂದೆ ಸಂಪಾದಿಸಿದ, ಪುಣ್ಯೇನ = ಸುಕೃತದಿಂದ, ಲಭ್ಯತೇ = ಲಭಿಸುವುದು ।। 96 ।। ದೇವರ್ಷಿಃ = ನಾರದನು, ಪದ್ಮಸಂಭವಾಂ = ಕಮಲದಲ್ಲಿ ಹುಟ್ಟಿದ, ತಾಂ ದೇವೀಂ = ಆ ಪದ್ಮಾವತಿಯನ್ನು, ಇತಿ = ಈ ಪ್ರಕಾರವಾಗಿ, ಸಂಭಾಷ್ಯ = ಮಾತನಾಡಿ, ನಾರದಸ್ತು = ನಾರದಮಹರ್ಷಿಯು, ಸರ್ವಾಸಾಂ = ಆ ಎಲ್ಲ ಕನ್ಯೆಯರ, ಪುರತಃ = ಕಣ್ಣಮುಂದಿನಿಂದ ಮುನಿ = ನಾರದನು, ಅಂತರ್ದಧೇ = ಅಂತರ್ಧಾನ ಹೊಂದಿದನು (ಅದೃಶ್ಯನಾದನು) ।। 97 ।। ತದಾ = ಆಗ, ಋಷಿಃ = ನಾರದಮುನಿಯು, ಕಮಲಾಂದೇವೀಂ = ಲಕ್ಷ್ಮೀದೇವಿಯನ್ನು, ಮನಸಾ = ಮನಸ್ಸಿನಲ್ಲೇ, ಸಂಸ್ತುತ್ಯ = ಸ್ತೋತ್ರಮಾಡಿ, ಚಿಂತಯನ್ = ಲಕ್ಷ್ಮೀದೇವಿಯನ್ನು ಧ್ಯಾನಿಸುತ್ತಾ, ಮನಸಾ = ಮನದಿಂದಲೇ, ವಂದನಂ = ನಮಸ್ಕಾರವನ್ನು, ಕೃತ್ವಾ = ಮಾಡಿ, ಜಗಾಮ = ತೆರಳಿದನು. ।। 98 ।।

**ಸ್ತುತಿಂ ರಮಾಯಾಃ ಕಮಲೋದ್ಭವಾಯಾಃ**
**ಋಷಿಶ್ಚ ಕೃತ್ವಾ ಕಮಲೋದ್ಭವಾತ್ಮಜಃ ।**
**ಜಗಾಮ ಸುಸ್ಥಾನಮನಂತಶೈಲಮ್**
**ನಾರಾಯಣಸ್ಯೈವ ಮನೋಹರಂ ಶುಭಮ್ ।। 99 ।।**

ಕಮಲೋದ್ಭವಾತ್ಮಜಃ - ಕಮಲ = ಪರಮಾತ್ಮನ ನಾಭಿಕಮಲದಿಂದ, ಉದ್ಭವ = ಜನಿಸಿದ ಬ್ರಹ್ಮದೇವರ, ಆತ್ಮಜಃ = ಪುತ್ರನಾದ, ಋಷಿಶ್ಚ = ನಾರದಮಹರ್ಷಿಯು; ಕಮಲೋದ್ಭವಾಯಾಃ = ಕಮಲದಲ್ಲಿ ಆವಿರ್ಭೂತಳಾದ, ರಮಾಯಾಃ = ಲಕ್ಷ್ಮೀದೇವಿಯ (ಲಕ್ಷ್ಮೀದೇವಿಯ ಅವತಾರಳಾದ ಪದ್ಮಾವತಿಯ), ಸ್ತುತಿಂ = ಸ್ತೋತ್ರವನ್ನು, ಕೃತ್ವಾ = ಮಾಡಿ, ನಾರಾಯಣಸ್ಯ = ಶ್ರೀಮನ್ನಾರಾಯಣನ, ಸುಸ್ಥಾನಂ = ಆವಾಸಸ್ಥಾನವಾದ, ಮನೋಹರಂ = ರಮಣೀಯವಾದ, ಶುಭಂ = ಮಂಗಳಕರವಾದ, ಅನಂತ ಶೈಲಂ (ಪ್ರತಿ) = ಶೇಷಶೈಲವನ್ನು ಕುರಿತು, ಜಗಾಮ = ತೆರಳಿದನು ।। 99 ।।

## ಕಥಾಸಾರ

ಶತಾನಂದ ಋಷಿಗಳು ಜನಕಮಹಾರಾಜನಿಗೆ ಹೇಳುತ್ತಿದ್ದಾರೆ:-

''ಒಂದಾನೊಂದು ದಿನ ಶ್ರೀನಿವಾಸನು ಬೇಟೆಯಾಡ ಬಯಸಿ ಮನದಲ್ಲಿ ಕುದುರೆಯನ್ನು ಸ್ಮರಿಸಿದನು. ನೆನೆದ ಕೂಡಲೆ ಒಂದು ದಿವ್ಯವಾದ ಅಶ್ವವು ಕಣ್ಣೆದುರು ಬಂದು ನಿಂತಿತು. ಆ ಕುದುರೆಯು ಸಾಮಾನ್ಯವಾದುದಲ್ಲ, ಸಾಕ್ಷಾತ್ ವಾಯುದೇವನೇ ಕುದುರೆಯಾಗಿ ಬಂದನು. ಸಾಕ್ಷಾತ್ ತತ್ವಾಭಿಮಾನಿನಿಯಾದ ರಮಾದೇವಿಯೇ ಕುದುರೆಯ ಲಗಾಮಾಗಿ ಅಲ್ಲಿಗೆ ಆಗಮಿಸಿದಳು! ಶ್ರೀನಿವಾಸನು ಆ ಅಶ್ವವನ್ನು ಪೂಜಿಸಿ, ಅದರ ಮೇಲೇರಿ ಕುಳಿತನು. ಶ್ರೀನಿವಾಸನು ಸರ್ವಾಭರಣಭೂಷಿತನಾಗಿ ಹದಿನೈದು ಮೊಳದ ಶುಭ್ರವಸ್ತ್ರವನ್ನುಟ್ಟು, ಐದು ಮೊಳದ ಬಿಳುಪಾದ ಪಂಚೆಯನ್ನು

ಹೊದ್ದುಕೊಂಡು, ಬೆಳಗುವ ನಡುಪಟ್ಟಿಯನ್ನು ಟೊಂಕಕ್ಕೆ ಬಿಗಿದುಕೊಂಡು ರಮಾರಮಣನಾದ ಶ್ರೀನಿವಾಸನು ಬಂಗಾರದ ಉಡಿದಾರದಿಂದ ವಿರಾಜಿತನಾಗಿ, ಕನ್ನಡಿಯನ್ನು ನೋಡಿಕೊಂಡು, ಶುಭ್ರವಾದ ಗೋಪೀಚಂದನದಿಂದ ಊರ್ಧ್ವಪುಂಡ್ರಧಾರಿಯಾಗಿ, ಅದರ ಮೇಲೆ ಮಧ್ಯಭಾಗದಲ್ಲಿ ಅತಿ ಮನೋಹರವಾದ ಕಸ್ತೂರಿಯಿಂದ ಮಿಶ್ರಿತವಾದ ಕುಂಕುಮದ ತಿಲಕವನ್ನು ಧರಿಸಿದನು, ಮತ್ತು ಅಡಿಕೆ-ವಿಳ್ಳೇದೆಲೆ, ಸುಣ್ಣದ ಸಂಪುಟ, ಕನ್ನಡಿ, ಬಿಳಿಯ ಗೋಪೀಚಂದನದ ಗೆಡ್ಡೆ, ಕಸ್ತೂರೀ ಕುಂಕುಮದ ಭರಣಿ - ಇವುಗಳನ್ನು ಜರಿಯ ವಸ್ತ್ರದಲ್ಲಿ ಕಟ್ಟಿ, ಅದನ್ನು ನಡುಪಟ್ಟಿಗೆ ಸಿಕ್ಕಿಸಿಕೊಂಡನು. ಶ್ರೀನಿವಾಸನು ಸುವರ್ಣಮಯ ಯಜ್ಞೋಪವೀತವನ್ನು ಧರಿಸಿದ್ದನು, ಮತ್ತು ಕಂಠದಲ್ಲಿ ಧರಿಸುವ ವಿಧವಿಧಗಳಾದ ಸುವರ್ಣ - ರತ್ನ - ಮುತ್ತುಗಳ ಹಾರಗಳಿಂದ ಭೂಷಿತನಾಗಿ, ಮುಂಗೈಗಳಿಗೆ ರತ್ನಮಯ ಕಂಕಣಗಳನ್ನೂ, ಎರಡು ಭುಜಗಳಲ್ಲಿ ನವರತ್ನಮಯವಾದ ನಾಗಮುರುಗೆಗಳನ್ನು (ಭುಜಕೀರ್ತಿಗಳು), ಬೆರಳುಗಳಿಗೆ ಶೋಭಿಸುವ ರತ್ನದುಂಗುರಗಳನ್ನೂ ಧರಿಸಿದ್ದನು. ಕಸ್ತೂರಿ, ಪುನಗು, ಜವ್ವಾಜಿ, ಕೇಸರಗಳಿಂದ ತಯಾರಿಸಿದ ಶ್ರೀಗಂಧವನ್ನು ದೇಹಕ್ಕೆ ಪೂಸಿಕೊಂಡು ಸರ್ವಾಂಗಸುಂದರನಾಗಿ ಕಂಗೊಳಿಸುತ್ತಿದ್ದನು. ತಲೆಯ ಕೂದಲನ್ನು ಸಿರಿಮುಡಿಯಾಗಿ ಕಟ್ಟಿ, ಅಥವಾ ತುದಿಗಂಟು ಹಾಕಿಕೊಂಡು, ಅದರ ಮೇಲೆ ಸುಂದರವಾದ ಅಚ್ಚಕೆಂಪುವರ್ಣದ ಜರಿಯ ಮಡಿಯಿಂದ ಪೇಟ ಕಟ್ಟಿಕೊಂಡಿದ್ದನು. ಉದ್ದವಾದ ಪುಷ್ಪಮಾಲೆಗಳನ್ನು ಭುಜದ ಮೇಲಿಂದ ಜಾರುತ್ತಿರುವಂತೆ ಧರಿಸಿದನು. ಮತ್ತು ಶ್ರೀಹರಿಯು ಬಂಗಾರ ರತ್ನಗಳಿಂದ ಖಚಿತವಾದ ಪಾದುಕೆಗಳನ್ನು ಹಾಕಿಕೊಂಡು ಬಿಲ್ಲು-ಬಾಣಗಳನ್ನು ಹಿಡಿದನು. ಆಗ ಕಾಂತಿಸಂಪನ್ನನೂ, ಸಂಪದ್ಯುಕ್ತನೂ, ವೇದಪ್ರತಿಪಾದ್ಯಮಹಾಮಹಿಮನೂ ಆದ ಜಗನ್ಮೋಹನಾಕಾರನಾದ ಸಾಕ್ಷಾತ್ ಮನ್ಮಥನಿಗೂ ಮನ್ಮಥನಾದ (ತಂದೆಯಾದ) ವೇಂಕಟೇಶ್ವರನು ಇಂತು ಸಕಲರ ಮನಸ್ಸುಗಳನ್ನೂ ಅಪಹರಿಸುವ ಸುಂದರ ರೂಪವನ್ನು ಧರಿಸಿ ರಾರಾಜಿಸಿದನು. ಅನಂತರ ಶ್ರೀನಿವಾಸನು, ರತ್ನಖಚಿತವಾದ; ಕುದುರೆ ಸವಾರಿಗೆ ಅನುಕೂಲವಾಗುವಂತೆ ಕುದುರೆಯ ಬೆನ್ನಿನ ಮೇಲೆ ಹಾಕುವ ಮೆತ್ತನೆಯ ಆಸನದಿಂದ (ಜೀನಿನಿಂದ) ಅಲಂಕೃತವಾದ ಕುದುರೆಯ ಮೇಲೆ ಕುಳಿತನು. ಆ ಅಶ್ವವು ಬಂಗಾರದ ತಿಲಕದಿಂದ ಉಲ್ಲಾಸಿತವಾದ ಮುಖದಿಂದ ಶೋಭಿಸುತ್ತಿತ್ತು. ಅದು ವಾಯುವೇಗ - ಮನೋವೇಗಕ್ಕೆ ಸಮಾನವಾದ ವೇಗವುಳ್ಳದ್ದಾಗಿತ್ತು, ಅದರ ನಾಲ್ಕು ಪಾದಗಳೂ ಬಿಳುಪಾಗಿತ್ತು, ದೇಹವು ನೀಲಿಯ ವರ್ಣದಿಂದ ಬೆಳಗುತ್ತಿತ್ತು. ಹದಿನೈದು ಅಡಿ (ಮೊಳ) ಎತ್ತರವಾಗಿದ್ದ ಆ ಕುದುರೆಯು ''ದೇವಮಣಿ'' ಎಂಬ ಸುಳಿ ಮುಂತಾಗಿ ಸಮಸ್ತಶ್ರೇಷ್ಠ ಅಶ್ವಲಕ್ಷಣಗಳಿಂದ ಪರಿಶೋಭಿಸುತ್ತಿತ್ತು. ಇಂತಹ ದಿವ್ಯ ತುರುಗವನ್ನೇರಿ ಶೇಷಗಿರಿಯಿಂದ ಕೆಳಗಿಳಿದು, ಶ್ರೀನಿವಾಸನು ಬೇಟೆಗಾಗಿ ಹೊರಟನು.

ಪ್ರಭುವಾದ ಶ್ರೀನಿವಾಸನು ಅರಣ್ಯದಲ್ಲಿ ಎಲ್ಲ ಕಡೆ ಸಂಚರಿಸುತ್ತ, ಸಣ್ಣದು, ದೊಡ್ಡದು - ಹೀಗೆ ವಿವಿಧ ಆಕಾರವುಳ್ಳ ಸಿಂಹ, ಹುಲಿ, ನರಿಗಳನ್ನೂ; ಆನೆಗಳು, ಘೋರವಾದ ಶರಭಗಳನ್ನೂ; ಜಿಂಕೆಗಳು ಮತ್ತು ಕಾಡುಕೋಣಗಳನ್ನು ಬೆನ್ನಟ್ಟಿ ಹೋಗಿ ಸಂಹರಿಸಿದನು, ಆಗ ಆ ಕಾಡಿನಲ್ಲಿ ಸುತ್ತುತ್ತಿರುವ ಮದವೇರಿದ ಒಂಟಿಸಲಗವನ್ನು, (ಗಂಡಾನೆಯನ್ನು) ಕಂಡು ಶ್ರೀನಿವಾಸನು ಅದನ್ನು ಸಂಹರಿಸಲು ಬೆನ್ನಟ್ಟಿ ಹೋದನು. ಆ ಒಂಟಿಸಲಗವು ವೇಂಕಟೇಶ್ವರನ ಭಯದಿಂದ ಅರಣ್ಯದಲ್ಲಿ ಬಹುದೂರ ಒಂದೂವರೆ ಗಾವುದದವರೆಗೆ ಓಡಿಹೋಗಿ, ಮುಂದೆ ಓಡಲಾಗದೆ, ಅಲ್ಲಿ ಕಟ್ಟಿಗೆಯಂತೆ ನೆಲಕ್ಕೆ ಬಿದ್ದು ಸೊಂಡಿಲನ್ನು ಮೇಲೆತ್ತಿ ನಿಷಾಧಸ್ವರದಿಂದ ಗರ್ಜಿಸಿ ನಮಸ್ಕರಿಸಿತು. ಅದೇ ಸಮಯದಲ್ಲಿ ಶ್ರೀನಿವಾಸನ ಕಣ್ಣಿಗೆ ಓರ್ವ ಕನ್ಯೆಯು ಕಾಣಿಸಿದಳು.''

ಆಗ ನೈಮಿಷಾರಣ್ಯದಲ್ಲಿ ಋಷಿಮುನಿಗಳು ತಮಗೆ ಭಗವಂತನ ಚರಿತಾಮೃತವನ್ನು ಪಾನಮಾಡಿಸುತ್ತಿದ್ದ ಸೂತಾಚಾರ್ಯರನ್ನು ಕುರಿತು ''ಬಹು ಬುದ್ಧಿವಂತರಾದ ಸೂತ ಮುನಿಗಳೇ! ಶ್ರೀನಿವಾಸನಿಗೆ ಕನ್ಯೆಯೊಬ್ಬಳು ಗೋಚರಿಸಿದಳು

- ಎಂದು ಹೇಳಿದಿರಷ್ಟೇ? ಸ್ವಾಮಿ ! ನೀವು ಹೇಳಿದ ಆ ಕನ್ಯೆಯು ಯಾರು? ಇವೆಲ್ಲ ವಿಚಾರಗಳನ್ನು ನಮಗೆ ದಯಮಾಡಿ ತಿಳಿಸಿರಿ'' ಎಂದು ಕೋರಿದರು. ಹೀಗೆ ಋಷಿಮುನಿಗಳಿಂದ ಪ್ರಾರ್ಥಿತರಾದ, ಪರಮಧರ್ಮಿಷ್ಠರಾದ ಸೂತಮುನಿಗಳು ಆನಂದಾತಿರೇಕದಿಂದ ಭಕ್ತಿಯಿಂದ ಹೇಳಲಾರಂಭಿಸಿದರು-

''ಎಲೈ ಮುನಿಗಳೇ! ಆ ಕನ್ನಿಕೆಯ ಪರಿಶುದ್ಧವಾದ ಅವತಾರ ವಿಚಾರವನ್ನು ನೀವೆಲ್ಲರೂ ಕೇಳಿರಿ:- ಪೂರ್ವದಲ್ಲಿ ದ್ವಾಪರಯುಗದ ಕೊನೆಯ ಭಾಗದಲ್ಲಿ ಭರತ ವಂಶೀಯರಾದ, ಮಹಾತ್ಮರಾದ ಪಾಂಡವರು ಹಾಗೂ ಕೌರವರ ಮಧ್ಯೆ ಜರುಗಿದ ಯುದ್ಧವು ಮುಗಿದ ಬಳಿಕ, ಇಪ್ಪತ್ತೆಂಟನೆಯ ಕಲಿಯುಗದಲ್ಲಿ ಪ್ರಖ್ಯಾತರಾದ ವಿಕ್ರಮಾದಿತ್ಯ ಮೊದಲಾದ ರಾಜರು ಸ್ವರ್ಗಸ್ಥರಾದ ಮೇಲೆ, ಸಾವಿರ ವರ್ಷಗಳು ಕಳೆದ ನಂತರ; ಚಂದ್ರವಂಶದಲ್ಲಿ ಸುವೀರ ಎಂಬ ಮಹಾರಾಜನು ಹುಟ್ಟಿದನು. ಸುವೀರ ರಾಜನಿಗೆ ಸುಧರ್ಮರಾಜನೆಂಬುವವನು ಮಗನಾಗಿ ಜನಿಸಿದನು. ಸುಧರ್ಮರಾಜನಿಗೆ ಇಬ್ಬರು ಗಂಡು ಮಕ್ಕಳಾದರು. ಆ ಇಬ್ಬರು ಪುತ್ರರಲ್ಲಿ ಆಕಾಶರಾಜನು ಹಿರಿಯನು, ತೋಂಡಮಾನ ರಾಜನು ಕಿರಿಯನು. ಅವರೀರ್ವರೂ ಸಕಲ ಲೋಕದಲ್ಲಿ ಬಹುಕೀರ್ತಿಗಳಿಸಿದರು. ಅವರಿಬ್ಬರು ಧರ್ಮಪರಾಯಣರೂ, ಭಗವಂತನಲ್ಲಿ ದೃಢಭಕ್ತಿಯುಳ್ಳವರೂ, ಶ್ರೀಹರಿ ಪರಮಾತ್ಮನ ಧ್ಯಾನದಲ್ಲಿನಿರತರೂ ಆಗಿದ್ದರು. ದೊಡ್ಡವನಾದ ಆಕಾಶರಾಯನು ಬಹುಸಾಧುವಾಗಿದ್ದನು. ಕಿರಿಯನಾದ ತೋಂಡಮಾನ ಮಹಾರಾಜನೇ ಅಣ್ಣನ ಆಣತಿಯಂತೆ ತೋಂಡಮಾನದೇಶಕ್ಕೆ ಅಧಿಪತಿಯಾಗಿ, ಭೂಮಂಡಲವನ್ನು ಪಾಲಿಸುತ್ತಿದ್ದನು. ಅವನ ಆಳ್ವಿಕೆಯಲ್ಲಿ ಪ್ರಜೆಗಳು ಧರ್ಮಪರಾಯಣರಾಗಿದ್ದರು, ಚರಾಚರಾತ್ಮಕ ಪ್ರಪಂಚವು ಯಾವ ಬಗೆಯ ಈತಿಬಾಧೆಗಳಿಲ್ಲದಂತಾಯಿತು. ಗೋವುಗಳು ಹೆಚ್ಚು ಹಾಲನ್ನು ಕರೆಯುತ್ತಿದ್ದವು, ನಾರಿಯರೆಲ್ಲರೂ ಪತಿವ್ರತೆಯರಾಗಿದ್ದರು. ಒಂದುದಿನ ಮಕ್ಕಳಿಲ್ಲದ ಆಕಾಶರಾಜನು ತನಗೆ ಮಗನಾಗಲಿಲ್ಲವೆಂಬ ಚಿಂತೆಯಿಂದ ದುಃಖಿತನಾಗಿ ಅರಮನೆಯಲ್ಲಿ ಏಕಾಂತವಾಗಿರುವಾಗ, ಗುರುಗಳಾದ ಬೃಹಸ್ಪತ್ಯಾಚಾರ್ಯನನ್ನು ಕುರಿತು ಭಕ್ತಿಯಿಂದ ಇಂತು ವಿಜ್ಞಾಪಿಸಿದನು:-

ಗುರುವರ್ಯ ! ಸಿರಿಸಂಪತ್ತು, ಗಜ - ತುರುಗ - ರಥಗಳಿಂದ ಸಹಿತವಾದ ಈ ರಾಜ್ಯವನ್ನು ನಾನು ಅನುಭವಿಸಿದನು, ಅನೇಕ ವಿಧವಾದ ದಾನಗಳನ್ನು ಮಾಡಿದೆನು, ಅನೇಕ ತೀರ್ಥಕ್ಷೇತ್ರಗಳ ಯಾತ್ರೆ ಮಾಡಿದೆನು, ಆದರೆ, ದ್ವಿಜೋತ್ತಮರೇ! ಪಿತೃಗಳಿಗೆ ಮೋಕ್ಷವನ್ನು ಕೊಡಿಸುವ ಪುತ್ರಸೌಖ್ಯವನ್ನು ಮಾತ್ರ ನಾನು ಅನುಭವಿಸಲಿಲ್ಲ, ಪೂರ್ವದಲ್ಲಿ ನಾನೇನು ಪಾಪ ಮಾಡಿದ್ದೆನು? ಹಿಂದಿನ ಜನ್ಮದಲ್ಲಿ ಅದಾರ ಮಗನನ್ನು ಕೊಂದಿದ್ದೆನು? ಯಾವ ಪಾಪಫಲದಿಂದ ನನಗೆ ಪುತ್ರನು ಹುಟ್ಟಲಿಲ್ಲವೋ ನಾನರಿಯೆ. ಸ್ವಾಮಿ, ನನ್ನ ಕಣ್ಣುಗಳಿಂದ ನಾನು ಮಗನ ಮುಖಕಮಲವನ್ನು ನೋಡಲಿಲ್ಲ! ನನ್ನ ಕಿವಿಗಳಿಂದ ಮಗನ ಅಳುವಿನ ಧ್ವನಿ ಕೇಳಲಿಲ್ಲ, ಪುತ್ರಸಂತಾನವಿಲ್ಲದಿರುವುದರಿಂದ ನಮ್ಮ ಕುಲದ ಪಿತೃಗಳಿಗೆ ದುರ್ಗತಿಯಾಗಬಹುದಲ್ಲವೇ? ವಂಶದೀಪಕನಾದ ಪುತ್ರನಿಲ್ಲದವರಿಗೆ ಸದ್ಗತಿಯಿಲ್ಲವೆಂದು ವೇದಶಾಸ್ತ್ರಾಭಿಜ್ಞರು ಹೇಳುವರು! ನಾನು ಮಗನೊಡನೆ ಬಂಗಾರದ ತಟ್ಟೆಯಲ್ಲಿ ಊಟಮಾಡಲಿಲ್ಲ, ಗುರುವರ್ಯ! ಆಭರಣಗಳಿಂದ ಮಗನನ್ನು ಅಲಂಕರಿಸಿ, ತೊಡೆಯ ಮೇಲೆ ಕೂಡಿಸಿಕೊಂಡು ಮಗನನ್ನು ಲಾಲಿಸಲಿಲ್ಲ, ನಾನು ಪಾಪಿಷ್ಠನು, ದುರಾಚಾರಿಯು, ಪುತ್ರಹೀನನು, ಪುತ್ರನೆಂಬ ಸಂಪತ್ತಿನಿಂದ ವಂಚಿತನಾದ ನಾನು ಕಡುಬಡವನು, ನಾನು ಈಗ ಮಗನಿಗಾಗಿ ಪ್ರಯತ್ನಪಟ್ಟು ಸುವರ್ಣರತ್ನಮಯವಾದ ಆಭರಣಗಳನ್ನು ಮಾಡಿಸಿಟ್ಟಿದ್ದೇನೆ, ಅದಕ್ಕಾಗಿಯೋ ಏನೋ, ಆ ಒಡವೆಗಳಿಂದ ಅಲಂಕೃತನಾಗಿ ತಂದೆ-ತಾಯಿಯರ ಹಿತದಲ್ಲಿ ಆಸಕ್ತನಾದ ಪುತ್ರನು ನನಗೆ ಹುಟ್ಟಲಿಲ್ಲ! ಕುಮಾರನಿಗಾಗಿ ಬಂಗಾರದ ಕವಚವನ್ನು (ಜರಿಯ ಅಂಗಿಯನ್ನು) ಸಿದ್ಧಪಡಿಸಿ, ಕುಮಾರ! ಇಲ್ಲಿ ಬಾ, ಇದನ್ನು ಧರಿಸು ಎಂದು ನಾನು ಹೇಳುವ ಪುಣ್ಯ ಪಡೆಯಲಿಲ್ಲ, ಪುತ್ರನಿಲ್ಲದ ನನ್ನನ್ನು ನೋಡಿ ಯಮಕಿಂಕರರು ಎಲೈ ದೊರೆಯೇ, ಬೇಗ ಯಮನ ಮನೆಗೆ ಹೊರಡು ಎಂದು ನನ್ನನ್ನು ಎಳೆಯುವರಲ್ಲವೇ? ಯಮಪಾಶದಿಂದ ಬಿಗಿದ ಸರ್ವಾಂಗವುಳ್ಳ, ಮಗನಿಲ್ಲದ ನಾನು ಅವರಿಗೆ ಏನು ಹೇಳಲಿ? ಚಿತ್ರಗುಪ್ತನು ನನಗೆ ಮಕ್ಕಳಿಲ್ಲವೆಂದು ಬರೆದುದನ್ನು

ಅಳಿಸಲಾಗದಲ್ಲವೇ? ನನಗೆ ಮಕ್ಕಳಾಗಬಾರದೆಂದು ನನ್ನ ಹಣೆಯಲ್ಲಿ (ಬರೆದಿರುವನೆಂದು ತೋರುವುದು). ನನ್ನ ಹೊಟ್ಟೆಯಲ್ಲಿ ಜನಿಸಿದ ಮಗನಿಂದ ಈ ನನ್ನ ಹಣೆಯ ಬರಹವು ಎಂದು ಯಾವಾಗ ಮಾರ್ಜನವಾದೀತು! ಯಮಧರ್ಮರಾಜನು ನನ್ನನ್ನು ನೋಡಿ, ಎಲವೋ ದುರಾಚಾರಿಯೆ, ದುರ್ಬುದ್ಧಿಯುಳ್ಳವನೆ, ಪುತ್ರಹೀನನೇ ಎಂದು ಹಂಗಿಸಿ ಕರೆದರೆ ಅದನ್ನು ಕೇಳಿ ಯಾವ ಪುರುಷನು ತಾನೆ ಯಮನ ಮುಂದೆ ನಿಲ್ಲಲು, ಇಲ್ಲವೇ ಜೀವಿಸಿರಲು ಉತ್ಸಾಹಪಡುವನು? ಗುರುಗಳೇ, ಆರಿಹೋದ ದೀಪವುಳ್ಳ, ಅಥವಾ ಪುತ್ರರೂಪ ದೀಪಹೀನನಾದ ಅತಿ ನಿಷ್ಠುರಿಯೂ, ಕಷ್ಟಪಡಲೆಂದೇ ದೇಹ ಧರಿಸಿರುವ ಅತಿ ಪಾಪಮಯವಾದ, ನರಕಯೋಗ್ಯವಾದ ಶರೀರದಿಂದ ಕೆಲಸಕ್ಕೆ ಬಾರದವನಾಗಿ ಹುಟ್ಟಿದ್ದೇನೆ! ಸಜ್ಜನರ ಸಭೆಯಲ್ಲಿ ಗಂಡನಿಲ್ಲದ ಹೆಂಗಸನ್ನು (ವಿಧವೆಯನ್ನು) ಜನರು ಹೇಗೆ ನಿಂದಿಸುವರೋ ಅದರಂತೆಯೇ ಪುತ್ರಹೀನನನ್ನೂ ಅವನ ವಂಶವನ್ನೂ ನೀರಿಲ್ಲದ ಭಾವಿಯೆಂದು – ನಿಂದಿಸುವರು. ದ್ವಿಜೋತ್ತಮ! ನಾನೀಗ ಏನುಮಾಡಲಿ? ಎಲ್ಲಿಗೆ ಹೋಗಲಿ? ನನಗೀಗೇನು ಗತಿ? ಯಾವ ದೇವರಿಗೆ ಮೊರೆ ಹೊಕ್ಕು ಈ ಸಂಸಾರಸಾಗರವನ್ನು ದಾಟಲಿ? ಅಳುತ್ತಿರುವ ಕುಮಾರನನ್ನು ಕಂಡು ಪ್ರೀತಿಯಿಂದ, ಅಥವಾ ಸಿಟ್ಟಿನಿಂದ ಅಳಬೇಡ ಎಂದು ಹೇಳಲಿಲ್ಲ, ನನ್ನ ಪತ್ನಿಯನ್ನು ಕರೆದು ಸಿಟ್ಟಿನಿಂದ ಏಕೆ ಮಗನನ್ನು ಅಳಿಸುತ್ತಿರುವೆ? ಎಂದು ನಿಂದಿಸಲಿಲ್ಲ, ಮಗುವಿಗೆ ಬೇಗ ಎದೆಯ ಹಾಲನ್ನು ಕುಡಿಸಿ ಸಮಾಧಾನಪಡಿಸು, ಇಲ್ಲದಿದ್ದರೆ ನಿನ್ನನ್ನು ಹೊಡೆಯುವೆನು ಎಂದು ಜಬರಿಸಲಿಲ್ಲ, ರಾಣಿ! ಮಗನಿಗೆ ಘಂಟೆಯನ್ನು ಕೊಡು, ಆಟದ ಪ್ರತಿಮೆಯನ್ನು ಕೊಡು, ಹಣ್ಣು – ಚಂಡುಗಳನ್ನು ಕೊಡು, ಕುಮಾರನನ್ನು ಆನೆಯ ಮೇಲೆ ಕೂಡಿಸಿ ಪಟ್ಟಣದಲ್ಲಿ ಪ್ರದಕ್ಷಿಣೆ ಮಾಡಿಸು, ನಾನು ತಾಳವಾದ್ಯ ಧ್ವನಿಯೊಡನೆ ರಾಜಸಭೆಗೆ ಹೋಗುತ್ತಿರುವೆನು ಎಂದು ಹೇಳಲಿಲ್ಲ.

ಎಲೈ ಭೂಸುರನೇ! ಬಾಲ್ಯದಲ್ಲಿ ಪುತ್ರನಿಗೆ ಜಾತಕರ್ಮಾದಿ ಉತ್ಸವವನ್ನೂ, ನಾಮಕರಣವನ್ನೂ ಮಾಡಲಿಲ್ಲ, ಮತ್ತು ಜರಿಯ ಅಂಗಿಯನ್ನು ಹೊಲಿಸಿ, ವಿಚಿತ್ರವಾದ ಕಿರೀಟವನ್ನು ಮಾಡಿಸಿ ರತ್ನವಜ್ರಮಯವಾದ ಉತ್ತಮ ಕೇಶಾಲಂಕಾರವಾದ ಆಭರಣಗಳನ್ನು ಮಾಡಿಸಿ ಮಗನನ್ನು ಶೃಂಗರಿಸಿ ನೋಡಿ ತೃಪ್ತಿಪಡೆಯಲಿಲ್ಲ, ಕುಮಾರನನ್ನು ತೊಡೆಯಮೇಲೆ ಕೂಡಿಸಿಕೊಂಡು ಮುದ್ದು ಮಾಡಲಿಲ್ಲ. ಎಂಟು ಅಥವಾ ಹತ್ತನೆಯ ವಯಸ್ಸಿನಲ್ಲಿ ವಿವಾಹ ಮಾಡಲಿಲ್ಲ. ಎಲೈ ಬ್ರಹ್ಮಜ್ಞಾನಿಯೇ! ನನ್ನ ಮಗನು ಸಂಪಾದಿಸಿದ ಸಿರಿಸಂಪತ್ತನ್ನು ನಾನು ಅನುಭವಿಸಲಿಲ್ಲ. ನನ್ನ ಸೊಸೆಯು ಗಂಡನಿಗೆ ಭೋಜನ ಮಾಡಿಸಿದ್ದನ್ನು ಕಾಣಲಿಲ್ಲ. ನನ್ನ ಕುಮಾರನನ್ನು ಸಿಂಹಾಸನದಲ್ಲಿ ಕೂಡಿಸಿ ರಾಜ್ಯಾಭಿಷೇಕ ಮಾಡಿ, ವಂಶಪರಂಪರೆಯಿಂದ ಬಂದ ಕ್ರಮದಂತೆ ನಾನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ, ಕಾಡಿಗೆ ತೆರಳಲಿಲ್ಲ ಸ್ವಾಮಿ, ಅಪುತ್ರವಂತನಾದ ನನಗೆ ಗತಿಯೇನು? ಅತಿ ಸುಕೃತಮಯವಾದ ಸುಧರ್ಮರಾಜನ ವಂಶದಲ್ಲಿ ಮಡಕೆ – ಮೋಟುಗೋಡೆಯಂತೆ ವ್ಯರ್ಥವಾಗಿ ನಾನು ಹುಟ್ಟಿದಂತಾಯಿತು. ಅನಾಥರಾದ ಮಾನವರಿಗೆ ಪುತ್ರನುದಯಿಸುವುದು ದುರ್ಲಭವು. ಮಾನವನಿಗೆ ಅತಿ ಪುಣ್ಯದಿಂದ ಪುತ್ರನು ಜನಿಸುವನು. ಅತಿ ಪಾಪಿಷ್ಠರಾದ ನಮಗೆ ಒಬ್ಬ ಮಗಳಾದರೂ ಹುಟ್ಟಲಿಲ್ಲವಲ್ಲಾ! ಧರ್ಮಸಂತಾನ ಸಂಜ್ಞೆಯುಳ್ಳ ಓರ್ವ ಸತ್ಪುತ್ರಿಯೂ ನನಗೆ ಜನಿಸಲಿಲ್ಲ.

ಹೇ ವರಪ್ರದನಾದ ಅಚ್ಯುತ, ಜಗನ್ನಾಥ, ಜಗದ್ಗುರುವೇ! ಸುಬ್ರಹ್ಮಣ್ಯಾಂತರ್ಗತನಾದ, ದ್ವಿಜರೊಡೆಯನಾದ, ಕರುಣಾಕರನಾದ ಶ್ರೀಹರಿ! ನನ್ನಲ್ಲಿ ದಯೆತೋರು, ಲಕ್ಷ್ಮೀಪತಿಯಾದ, ವೇಂಕಟೇಶ, ವರಾಹವದನನಾದ, ಶ್ರೀನಾರಾಯಣ! ವೇಂಕಟಗಿರಿಗೆ ಪ್ರಭುವಾದ, ಚ್ಯುತಿರಹಿತನಾದ ಶ್ರೀನಿವಾಸ! ನಿನಗೆ ನಮಸ್ಕಾರ! ಉತ್ತಮ ಪುತ್ರರನ್ನು ಪಡೆದವರೇ ಭಾಗ್ಯಶಾಲಿಗಳು! ಪುತ್ರನಿಲ್ಲದವರು ಭಾಗ್ಯಹೀನರು! ದೇವ! ಸಂಸಾರವೆಂಬ ಮಹಾಸಮುದ್ರವನ್ನು ಸುಲಭವಾಗಿ ದಾಟಲು ಅಸಮರ್ಥರಾದ, ಹಿಂದೆ ಮಾಡಿದ ಕರ್ಮಕ್ಕೆ ತಕ್ಕ ಫಲವನ್ನು ಅನುಭವಿಸುತ್ತಿರುವ ನಮ್ಮಂಥವರಿಗೆ ಗತಿಯೇನು? ಮಕ್ಕಳಿಲ್ಲದ ನಾನು ಯಾವ ಲೋಕಕ್ಕೆ ಹೋಗುವೆನೋ, ಅಥವಾ ಕ್ರೂರವಾದ ನರಕಕ್ಕೆ ಹೋಗುವೆನೋ!

ಅಯ್ಯೋ ನಾನರಿಯೇ! ಮಹಾಪ್ರಾಜ್ಞ! ಪುತ್ರನನ್ನು ಪಡೆಯುವ ಉಪಾಯವೇನು? ದಯಮಾಡಿ ತಿಳಿಸಿರಿ'' ಎಂದು ವಿಜ್ಞಾಪಿಸಿ ಆಕಾಶರಾಜನು ಸುಮ್ಮನಾದನು. ರಾಜನ ಮಾತನ್ನಾಲಿಸಿ ಬೃಹಸ್ಪತ್ಯಾಚಾರ್ಯರು ಮಗನನ್ನು ಪಡೆಯುವ ಉಪಾಯವನ್ನು ಹೇಳಿದರು.

''ರಾಜಶ್ರೇಷ್ಠ! ಮಕ್ಕಳನ್ನು ಅಪೇಕ್ಷಿಸುವವರು ''ಪುತ್ರಕಾಮೇಷ್ಟಿ'' ಎಂಬ ಯಾಗವನ್ನು ಮಾಡುವರು. ಆದ್ದರಿಂದ ನೀನು ಆ ಯಾಗವನ್ನು ಮಾಡು. ಆ ಯಜ್ಞದ ಪುಣ್ಯಫಲದಿಂದ ನಿನಗೆ ಖಂಡಿತವಾಗಿ ಪುತ್ರನು ಜನಿಸುವನು''. ಅವರ ವಚನವನ್ನಾಲಿಸಿ ಆಕಾಶರಾಜನು ಯಜ್ಞಕ್ಕಾಗಿ ಭೂಶೋಧನ ಮಾಡಿಸಿದನು. (ಯಜ್ಞ ಮಾಡುವವರು ಯಾಗಶಾಲೆ, ಯಜ್ಞಕುಂಡಗಳನ್ನು ನಿರ್ಮಿಸುವ ಮೊದಲು ಭೂಮಿಯನ್ನು ಶುದ್ಧಿಗೊಳಿಸಿ ಅಣಿಮಾಡಲು ನೇಗಲಿನಿಂದ ಭೂಮಿಯನ್ನು ಶೋಧನೆ (ಉಳುವುದು) ಮಾಡಿಸುವುದು ಸಂಪ್ರದಾಯ. ಅದರಂತೆ ಆಕಾಶರಾಜನು ಭೂಶೋಧನೆ ಮಾಡಿಸಿದನು).

ಬಂಗಾರದ ನೇಗಿಲುಗಳ ಸಮೂಹದಿಂದಲೂ, ಭೂಸುರರು ಭೂಮಿಯನ್ನು ಶೋಧಿಸುವ ಕಾಲದಲ್ಲಿ ಪಠಿಸಬೇಕಾದ ''ಭೂಮಿರ್ಧೇನುರ್ಧರಣೀ ಲೋಕಧಾರಿಣಿ! ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ, ಮೃತ್ತಿಕೇ ಹನ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ'' ಮುಂತಾದ ವೇದಮಂತ್ರಗಳಿಂದಲೂ, ಭೂಮಿಯನ್ನು ಊಳಿಸುತ್ತಿರುವಾಗ, ಆಕಾಶರಾಜನು ಆ ಭೂಮಿಯೊಳಗೆ ಸಾವಿರದಳಗಳುಳ್ಳ ದೊಡ್ಡಕಮಲವೊಂದನ್ನು ಕಂಡು ಇದೇನೆಂದು ಅಚ್ಚರಿಗೊಂಡನು! ವಿಸ್ತಾರವಾದ ಕಮಲದಳಗಳ ಮಧ್ಯದಲ್ಲಿ, ಮಂಗಳಕರಳಾದ, ಲಕ್ಷ್ಮೀದೇವಿಯಂತೆ ಆಕಾರವುಳ್ಳ ಸ್ತ್ರೀಶಿಶುವನ್ನು ಕಂಡು, ದೇವರಿಂದ ಕೊಡಲ್ಪಟ್ಟ, ಭಗವಂತನ ಪ್ರೇರಣೆಯಿಂದ ಬಂದಿರುವ, ಪುಷ್ಪಕಾಂತಿಯಂತೆ ಬೆಳಗುವ ನೇತ್ರಗಳುಳ್ಳ ಸ್ತ್ರೀಶಿಶುವನ್ನು ಕಂಡು ರಾಜನು ಸಂತೋಷಭರಿತನಾದನು. ಸಂತಾನವಿಲ್ಲದೆ ದೀನನಾಗಿದ್ದ ಆಕಾಶರಾಜನು ಆ ಮಗುವನ್ನು ಬೇಗ ಎತ್ತಿಕೊಂಡು ಸಂತೋಷಿಸುತ್ತಾ ''ಆಹಾ, ಮಹಾಪ್ರಭುವಾದ ಶ್ರೀಹರಿಯ ಮಾಯೆಯು ಮೀರಲಾಗದ್ದಲ್ಲವೇ! ಈಗ ನಾನು ಎತ್ತಿಕೊಂಡ ಈ ಶಿಶುವನ್ನು ಸಾಕಲು ಯಾರಿಗೆ ಒಪ್ಪಿಸಲಿ? ಮುಂದೆ ಇವಳನ್ನು ಯಾರಿಗೆ ಮದುವೆ ಮಾಡಿಕೊಡಲಿ?'' ಎಂದು ತನ್ನಲ್ಲಿ ತಾನೆ ಉದ್ಗಾರ ತೆಗೆದನು. ಆಗ ಆಕಾಶವಾಣಿಯಾಯಿತು - ''ಮಹನೀಯನಾದ ಆಕಾಶರಾಜ! ಈ ಕನ್ಯೆಯು ನಿನಗೆ ಪುಣ್ಯವನ್ನು ತಂದೀಯುವಳು! ಇವಳು ನಿನ್ನ ಪುತ್ರಿಯು! ಇಹಪರಗಳಲ್ಲಿ ಬಹುಕೀರ್ತಿ ಮತ್ತು ಪುಣ್ಯಪ್ರದವಾದ ಈ ಶಿಶುವನ್ನು ನೀನು ಚೆನ್ನಾಗಿ ಕಾಪಾಡು!'' ಹೀಗೆ ಆಕಾಶವಾಣಿಯಾದುದನ್ನು ಕೇಳಿ, ಬಹುಹರ್ಷಿತನಾದನು. ಆಕಾಶರಾಜನು ಪರಮಾನಂದಭರಿತನಾಗಿ ಕಮಲದಲ್ಲಿ ಭಗವದನುಗ್ರಹದಿಂದ ದೊರೆತ ಕಮಲೆಯ ಅವತಾರವಾದ ಆ ಶಿಶುವನ್ನು ಪ್ರೇಮದಿಂದ ಎತ್ತಿಕೊಂಡು ಬೇಗನೆ ಅರಮನೆಗೆ ಬಂದು ಪ್ರಿಯಸತಿಯಾದ ಧರಣೀದೇವಿಯನ್ನು ಕರೆದು ''ಮಹಾರಾಣಿ! ಮಂಗಳಕರಳೇ! ನಾನು ಹೇಳುವುದನ್ನು ಕೇಳು. ಪರಮಾತ್ಮನು ಕರುಣಿಸಿದ ಈ ಮಗುವನ್ನು ನೀನು ನಿನ್ನ ಹೊಟ್ಟೆಯಲ್ಲಿ ಜನಿಸಿದ ಸ್ವಂತ ಮಗಳಂತೆ ಚೆನ್ನಾಗಿ ಕಾಪಾಡು'' ಎಂದು ಹೇಳಿ ಮಗುವನ್ನು ಧರಣೀದೇವಿಯ ಕರದಲ್ಲಿತ್ತು, ಮಗುವು ದೊರೆತಿದ್ದಕ್ಕಾಗಿ ಅನೇಕ ಬಗೆಯ ದಾನಧರ್ಮಗಳನ್ನು ಮಾಡಿದನು.

ಆ ಮಗುವು ಮನೆಗೆ ಬಂದ ಪುಣ್ಯಫಲದಿಂದ ರಾಣಿಯಾದ ಧರಣೀದೇವಿಯು ಗರ್ಭ ಧರಿಸಿದಳು. ಆಕಾಶರಾಜನು ತನ್ನ ಮಡದಿಯು ಗರ್ಭಿಣಿಯಾದ ವಿಚಾರವರಿತು ಆನಂದದಿಂದ ಗರ್ಭಿಣಿಯಾದ ಸ್ತ್ರೀಗೆ ನೆರವೇರಿಸಬೇಕಾದ ಗರ್ಭರಕ್ಷಾದಿ ಉತ್ಸವಗಳನ್ನು ಮುಂದೆ ಬಳೆತೊಡಿಸುವುದು, ಹೂಮುಡಿಸುವುದೇ ಮೊದಲಾದ ಸಮಾರಂಭಗಳನ್ನು ವೈಭವದಿಂದ ನೆರವೇರಿಸಿದನು. ಐದನೆಯ ತಿಂಗಳಿನಲ್ಲಿ ಬ್ರಾಹ್ಮಣರಿಂದ ಗರ್ಭಿಣಿಯಾದ ಧರಣೀದೇವಿಗೆ ಯಜುರ್ವೇದ ಮಂತ್ರಗಳಿಂದ ವೇದೋಕ್ತ ಷೋಡಶಸಂಸ್ಕಾರ ಕ್ರಮದಂತೆ ''ಸೀಮಂತ'' ಮಹೋತ್ಸವವನ್ನು ಜರುಗಿಸಿದನು.

ಕೆಲಕಾಲವಾಗಿ ಒಂಭತ್ತನೆಯ ತಿಂಗಳು ಕಳೆದು ಹತ್ತನೆಯ ತಿಂಗಳು ಬರುತ್ತಿರಲು ಮಹಾರಾಣಿಯು; ಸೂರ್ಯನು ಕನ್ಯಾರಾಶಿಗೆ ಬಂದಾಗ, ರೋಹಿಣೀ ನಕ್ಷತ್ರಯುಕ್ತವಾದ, ಶುಕ್ಲಪಕ್ಷದ ದಶಮಿ ತಿಥಿಯಂದು ಗುರುವಾರ ಸಾಯಂಕಾಲ ಶೂರನಾದ ಪುತ್ರನನ್ನು ಪ್ರಸವಿಸಿದಳು. ತನಗೆ ಕುಮಾರನು ಜನಿಸಿದ ಕಾಲ, ನಕ್ಷತ್ರ, ಗ್ರಹಬಲಾದಿಗಳನ್ನು ತಿಳಿಸಿದವರಿಗೆ ಸಮಸ್ತವನ್ನೂ ದಾನ ಮಾಡಿದನು. ಆಕಾಶರಾಜನು ಒಂದು ಸಾವಿರ ಕೋಟಿ ಗೋವುಗಳನ್ನೂ, ಹತ್ತುಸಾವಿರ ಕುದುರೆಗಳನ್ನೂ, ಮತ್ತು ನವವಿಧ ಧಾನ್ಯಗಳನ್ನು; ರಾಜಚಿಹ್ನೆಗಳಾದ ಶ್ವೇತಛತ್ರ, ಚಾಮರಗಳನ್ನು ಹೊರತುಪಡಿಸಿ ಎಲ್ಲವನ್ನೂ ದಾನಮಾಡಿದನು. ಪುತ್ರನುದಯಿಸಿದ ವಿಚಾರ ತಿಳಿದು ಮುದಿಸಿದ ಆಕಾಶರಾಜನು ಮಂಗಳಸ್ನಾನ ಮಾಡಿ, ಪುಣ್ಯಾಹ, ಸ್ವಸ್ತಿವಾಚನ, ಜಾತಕರ್ಮಾದಿ ವೇದೋಕ್ತ ಮಂಗಳ ವಿಧಿಗಳನ್ನು ನೆರವೇರಿಸಿದನು. ಹನ್ನೆರಡನೆಯ ದಿವಸ ಕುಮಾರನಿಗೆ ನಾಮಕರಣವನ್ನು ನೆರವೇರಿಸಿ ಅನೇಕ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ ಮಾಡಿಸಿ ದಕ್ಷಿಣಾಪ್ರದಾನ ಮಾಡಿದನು. ಆ ರಾಜಕುಮಾರನು ವಸುಧಾನ ಎಂಬ ಹೆಸರಿನಿಂದ ಜಗತ್ತಿನಲ್ಲಿ ವಿಖ್ಯಾತನಾಗುವನು''.

ಋಷಿಗಳು ಸೂತಾಚಾರ್ಯರನ್ನು ಪ್ರಶ್ನಿಸಿದರು. 'ಸೂತಾಚಾರ್ಯರೇ, ಆಕಾಶರಾಜನಿಗೆ ಪುತ್ರನು ಜನಿಸಿದ್ದು ನಾಮಕರಣ ಮಾಡಿದ್ದು ಮುಂತಾದ ವಿಚಾರಗಳನ್ನು ಕೇಳಿದೆವು. ಆದರೆ ತಾವು ಅಯೋನಿಜೆಯಾದ ಕಮಲದಲ್ಲಿ ದೊರಕಿದ ತನ್ನ ಕುಮಾರಿಗೆ ರಾಜನು ಏನೆಂದು ಹೆಸರಿಟ್ಟನೆಂಬುದನ್ನು ಹೇಳಲಿಲ್ಲ. ಅದನ್ನು ದಯಮಾಡಿ ನಿರೂಪಿಸಿ''. ಆಗ ಸೂತಮುನಿಗಳು ಹೇಳಿದರು - ''ಕಮಲದಂತೆ ಮೃದುವಾದ ಉದರವುಳ್ಳ, ಪದ್ಮದಲ್ಲಿ ಗರ್ಭವಾಗಿ ಉಳ್ಳ, (ಪದ್ಮವೇ ಗರ್ಭವಾಗಿರುವ); ಅಥವಾ ಪದ್ಮಗರ್ಭಳಾದ, ಅಂದರೆ 'ಪದ್ಮಯೋನಿ'ಯೆಂದು ಖ್ಯಾತನಾದ ಬ್ರಹ್ಮದೇವನನ್ನು ಉದರದಲ್ಲಿಟ್ಟುಕೊಂಡಿರುವ (ಪದ್ಮನೆಂಬ ಬ್ರಹ್ಮನನ್ನು ಉದರದಲ್ಲಿಟ್ಟುಕೊಂಡಿರುವ), ಮತ್ತು ನವನಿಧಿಗಳಲ್ಲಿ ಪದ್ಮನಿಧಿ ಯನ್ನು ಗರ್ಭದಲ್ಲಿರಿಸಿಕೊಂಡಿರುವ, (ಪದ್ಮಂ ಅಸ್ಯಾಮಸ್ತೀತಿ ಪದ್ಮಾವತಿ) ಸುಂದರ ಮುಖವುಳ್ಳ, ಮತ್ತು ಲಕ್ಷ್ಮೀದೇವಿಯ ಅವತಾರಳಾದ್ದರಿಂದ ಆಕಾಶರಾಜನು ತನ್ನ ಪುತ್ರಿಗೆ ''ಪದ್ಮಾವತಿ'' ಎಂದು ನಾಮಕರಣ ಮಾಡಿದನು. ಮತ್ತು ಕಳಂಕವಿಲ್ಲದ ಚಂದ್ರನಂತಿರುವ ಪದ್ಮಾವತಿ - ವಸುಧಾನರು, ರಮಾದೇವಿ - ಚಂದ್ರರಂತೆ ಅಭಿವೃದ್ಧಿಸುತ್ತಿರುವುದನ್ನು ಕಂಡು ಪರಮಾನಂದ ತುಂದಿಲನಾದನು. ಆಹಾ, ಆಕಾಶರಾಜನು ಅದೆಷ್ಟು ಪುಣ್ಯ ಮಾಡಿರಬಹುದು, ಬಹು ಜನ್ಮಗಳಲ್ಲಿ ಸಂಪಾದಿಸಿದ ಸುಕೃತ ಫಲದ ಪ್ರಭಾವದಿಂದ, ಮೊದಲು ಕುಮಾರಿಯ ಜನನ, ನಂತರ ಕೂಡಲೇ ಶ್ರೇಷ್ಠಪುತ್ರನ ಜನನ, ಇವನ್ನು ಕಂಡು ಆ ರಾಜನು ಸಮುದ್ರದಂತೆ ಪೂರ್ಣಾನಂದಭರಿತನಾಗಿ ಮನದಲ್ಲೇ ನಲಿದನು. ಹೀಗೆ ಕೆಲಕಾಲ ಕಳೆಯಿತು. ಪದ್ಮಾವತಿಯು ಪ್ರಾಯಕ್ಕೆ ಬಂದು ಸರ್ವಾಂಗ ಸುಂದರಿಯಾಗಿ ಶೋಭಿಸಿದಳು. ವಿಸ್ತಾರವಾದ ನಯನವಿರಾಜಿತಳಾಗಿ ತಾರುಣ್ಯದಿಂದ ಕಂಗೊಳಿಸುವ ಮಗಳನ್ನು ಕಂಡು ರಾಜನು ಮನದಲ್ಲಿ ಚಿಂತಿಸಿದನು. ಮಗಳಿಗೋಸ್ಕರ ಉತ್ತಮ ವರಗಳಿಗಾಗಿ ದೂತರ, ಮಂತ್ರಿ - ಪುರೋಹಿತರ ದ್ವಾರಾ ಅನೇಕ ಕಡೆ ಹುಡುಕಿಸಿದನು. ಆದರೆ ಪದ್ಮಾವತಿಗೆ ಅನುರೂಪನಾದ ಶ್ರೇಷ್ಠವರನು ದೊರಕಲಿಲ್ಲ. ಅದರಿಂದ ದುಃಖಿತನಾದ ಆಕಾಶರಾಜನು - ತಾರುಣ್ಯವತಿಯಾದ ನನ್ನೀಪುತ್ರಿಗೆ ಸರಿಯಾದ ವರನು ದೊರಕಲಿಲ್ಲವಲ್ಲಾ, ನಾನಿವಳನ್ನು ಯಾರಿಗೆ ಮದುವೆ ಮಾಡಿಕೊಡಲಿ? ಎಂದು ಚಿಂತಾಂಬುಧಿ ಮಗ್ನನಾದನು. ಕೆಲದಿನ ಕಳೆದ ಮೇಲೆ ಆಕಾಶರಾಜನು ಉಪನಯನಯೋಗ್ಯ ವಯಸ್ಕನಾದ ಕುಮಾರ ವಸುಧಾನನಿಗೆ ಭೂಸುರರಿಂದ ಉಪನಯನ ಮಹೋತ್ಸವವನ್ನು ನೆರವೇರಿಸಿ ಆನಂದಿಸಿದನು.

ತಾರುಣ್ಯ ರೂಪಲಾವಣ್ಯಗಳಿಂದ ಪ್ರಕಾಶಿಸುವ ಪದ್ಮಾವತಿಯು ಒಂದಾನೊಂದು ದಿನ ಪರಿವಾರರಾದ ಸಮಾನ ವಯಸ್ಸಿನ ಸಖಿಯರಿಂದೊಡಗೂಡಿ ಪುಷ್ಪಗಳನ್ನು ಸಂಗ್ರಹಿಸಲು ವನಕ್ಕೆ ತೆರಳಿದಳು. ಕಮಲಲೋಚನೆಯಾದ ಪದ್ಮಾವತಿಯು ವಸಂತಋತುವು ಬಂದಿರುವುದನ್ನು ಕಂಡು, ಭಯಜನಕವಾದ ಆ ಅರಣ್ಯದಲ್ಲಿ ಮರದ ಕೆಳಗೆ ನಿಂತು

ವಿವಿಧ ಕುಸುಮಗಳನ್ನು ಬಿಡಿಸಲಾರಂಭಿಸಿದಳು. ಅದೇ ವೇಳೆಗೆ ಜಟೆಯನ್ನು ಧರಿಸಿ, ಧೂಳಿನಿಂದಾವೃತವಾದ ಶರೀರವುಳ್ಳ, ಕರ್ಪೂರದಂತೆ ಕಾಂತಿಯುಕ್ತನಾದ ವೃದ್ಧನಂತಿರುವ ದೇವರ್ಷಿ ನಾರದ ಮುನಿಯು ಅಲ್ಲಿಗೆ ಆಗಮಿಸಿದನು. ನಾರದ ಮುನಿಯನ್ನು ಕಂಡ ಪದ್ಮಾವತಿಯು ವಿಸ್ಮಿತಳಾಗಿ - ''ಸಖೀಯರೇ, ನೋಡಲು ಭಯವನ್ನುಂಟುಮಾಡುವ ಈತನಾರು, ವಿಚಾರಿಸಿರಿ'' - ಎಂದಳು, ಆಗ ಆ ಕನ್ನಿಕೆಯರು - ''ಪ್ರಾಜ್ಞನಾದ ಬ್ರಾಹ್ಮಣನೇ! ನೀನಾರು? ಇಲ್ಲಿಗೇಕೆ ಬಂದಿರುವೇ?'' ಎಂದು ಪ್ರಶ್ನಿಸಿದರು. ಆಗ ನಾರದಮಹರ್ಷಿಯು ''ಶ್ರೇಷ್ಠರಾದ ನಿಮ್ಮಂತಹ ಕನ್ನಿಕೆಯರಿಗೆ ನಾನು ಸಾಕ್ಷಾತ್ ಕುಲಗುರುವು'' ಎಂದು ನುಡಿದು, ಪದ್ಮಾವತಿಯತ್ತ ತಿರುಗಿ ''ಎಲೈ ಪದ್ಮಾವತಿ! ನಿನ್ನ ಹಸ್ತವನ್ನು ತೋರಿಸಮ್ಮ, ನಿನ್ನ ಹಸ್ತವನ್ನು ಪರಿಶೀಲಿಸಿ, ಸಾಮುದ್ರಿಕಾಶಾಸ್ತ್ರದಲ್ಲಿ ಹೇಳಿರುವಂತೆ ನಿನಗೆ ಲಕ್ಷಣಗಳನ್ನು ಚೆನ್ನಾಗಿ ಹೇಳುವೆನು'' ಎಂದನು. ಪದ್ಮಾವತಿಯು 'ಹೇ ಭೂಸುರ! ನೀನೇನು ಹೇಳುವೆ' ಎಂದು ನಾಚಿ ನಿಂತಳು. ಆಗ ನಾರದ ಮುನಿಯು ''ಕುಮಾರಿ! ಪರಿಶುದ್ಧ ಮನಸ್ಸಿನಿಂದ ನನ್ನನ್ನು ನಿನ್ನ ತಂದೆಗೆ ಸಮಾನನೆಂದು ತಿಳಿದು ನಿನ್ನ ಕೈತೋರಿಸಮ್ಮಾ'' ಎನಲು, ಪದ್ಮಾವತಿಯು - ತನ್ನ ಹಸ್ತವನ್ನು ನಾರದಮುನಿಗೆ ತೋರಿಸಿ, ''ಅತಿಶಯ ಪ್ರಜ್ಞಾಶಾಲಿಯಾದ ಮುನಿವರ! ನನ್ನ ಹಸ್ತದಲ್ಲಿರುವ ಉತ್ತಮವಾದ ಲಕ್ಷಣಗಳನ್ನು ಸತ್ಯವಾಗಿ ನಿರೂಪಿಸು'' ಎಂದೆನಲು, ಬ್ರಹ್ಮದೇವನ ಕುಮಾರನಾದ ನಾರದಮುನಿಯು ನಸುನಗುತ್ತಾ ಪದ್ಮಾವತಿಯ ಅಂಗೈಯನ್ನು ಪರಿಶೀಲಿಸಿ ಹೇಳಲಾರಂಭಿಸಿದನು.

ನಾರದ:- ಧರ್ಮರಹಸ್ಯಗಳನ್ನು ಅರಿತಿರುವ ಪದ್ಮಾವತಿಯೇ! ಮೂರು ಲೋಕಗಳಿಗೆ ಪ್ರಭುವಾದ ಕಮಲಾಕಾಂತನಾದ ಶ್ರೀಹರಿಯು ನಿನಗೆ ಪತಿಯಾಗುವನು! ದೇವಿ, ನಿನ್ನ ಕರಗಳು ಕಮಲದ ಗದ್ದುಗೆಯಂತಿವೆ. ನಿನ್ನ ಪಾದಗಳು ಸ್ವಸ್ತಿಕಾ ಚಿನ್ಹೆಯಿಂದೊಡಗೂಡಿವೆ. ಅಥವಾ ಸ್ವಸ್ತಿಕೆಯಂತೆ ವಿಶಾಲವಾಗಿವೆ. ನಿನ್ನ ಮುಖವು ಚಂದ್ರನಿಗೆ ಸದೃಶವಾಗಿದೆ (ದುಂಡಾಗಿ ಆಹ್ಲಾದಜನಕವಾಗಿದೆ), ನಿನ್ನ ನೇತ್ರಗಳು ಕಮಲದಂತೆ ವಿಸ್ತಾರವಾಗಿವೆ, ನಿನ್ನ ನಾಸಿಕವು ತಿಲಪುಷ್ಪದ ಆಕಾರದಿಂದಿದ್ದು ಪ್ರಕಾಶಿಸುತ್ತಿದೆ. ನಿನ್ನ ಎರಡು ಕಪೋಲಗಳು ಫಳಫಳನೆ ಹೊಳೆಯುವ ಎರಡು ಕನ್ನಡಿಗಳಂತಿವೆ. ನಿನ್ನ ಎರಡು ಹುಬ್ಬುಗಳು ಧನುಸ್ಸಿಗೆ ಸಮಾನವಾಗಿವೆ. ನಿನ್ನ ಮುಖವು ಕರ್ಪೂರದ ಪಾತ್ರೆಯಂತಿದೆ. ನಿನ್ನ ದಂತಗಳು ದಾಳಿಂಬೆಯ ಬೀಜಗಳಂತಿವೆ. ಅಧರವು (ತುಟಿಯು) ಕೆಂಪು ಕಮಲದಂತಿದೆ. ಮಂಗಳಕರಳಾದ ದೇವಿ! ನಿನ್ನ ನಾಲಿಗೆಯು ಅತಿಶಯ ಕೋಮಲವಾಗಿದೆ. ನಿನ್ನ ಜಡೆಯು ಕಪ್ಪಾಗಿಯೂ, ಉದ್ದವೂ ಆಗಿದ್ದು ಮುಂಗುರುಳುಗಳಿಂದ ಕಂಗೊಳಿಸುತ್ತಿದೆ. ನಿನ್ನ ಹಣೆಯು ರತ್ನಪೀಠದ ಕಾಂತಿಯಿಂದ ಬೆಳಗುತ್ತಿದೆ. ಕರ್ಣಗಳಾದರೋ ಚಕ್ಕುಲಿಯಂತೆ ಹೊಳೆಯುತ್ತಿವೆ, ಹುಬ್ಬುಗಳು ಎರಡೂ ಒಂದೇ ಸಮನಾಗಿವೆ. ಮನ್ಮಥನ ರೂಪ-ಲಾಣಮ್ಯಗಳಿಂದ ಕೂಡಿದ ಪುತ್ಥಳಿ (ಬೊಂಬೆ)ಯಂತೆ ಅತಿಶಯ ಕಾಂತಿಯಿಂದ ನೀನು ಬೆಳಗುತ್ತಿದ್ದೀಯೆ! ನಿನ್ನ ಕೊರಳು ಸೂರ್ಯನ ಕಿರಣಗಳಿಗೆ ಸದೃಶವಾಗಿದ್ದು, ತಾಂಬೂಲ ರಸವನ್ನು ತೋರಿಸುವಂತೆ ಸುಂದರವಾಗಿದೆ. ನಿನ್ನ ಸ್ತನಗಳು ಪುಷ್ಟವೂ, ನಿಬಿಡವೂ ಆಗಿದ್ದು ಪುಟ್ಟದಾಗಿವೆ (ಮಾಟವಾಗಿವೆ), ಅವು ಸಾಮಾನ್ಯವಲ್ಲ, ಸಾಕ್ಷತ್ ಪಿತಾಮಹ ಬ್ರಹ್ಮದೇವನಿಂದ ಆಸ್ವಾದಿತವಾಗಿವೆ (ಅಂದರೆ ಬ್ರಹ್ಮದೇವನು ನಿನ್ನ ಸ್ತನ್ಯಪಾನ ಮಾಡಿದ್ದಾನೆ ಎಂದು ಭಾವ). ದೇವಿ! ನಿನ್ನ ಉದರವು ಎಳೆಯ ಬಾಳೆಯ ಎಲೆಯಂತೆ ತೆಳುವಾಗಿದೆ. ಹೊಕ್ಕಳು ಆಳವಾಗಿದೆ. ನಿನ್ನ ನಡುವು (ಸೊಂಟವು) ಸಿಂಹದ ಕಟಿಯಂತಿದೆ. ಹೇ ಲಕ್ಷ್ಮೀದೇವಿ! ನಿನ್ನೆರಡು ತೊಡೆಗಳು ಬಾಳೆಯ ಕಂಬದಂತೆ ಸುಂದರವಾಗಿದೆ. ನಿನ್ನ ಬೆನ್ನು ಯಜ್ಞವೇದಿಕೆಯಂತೆ ವಿಸ್ತಾರವಾಗಿದೆ. ನಿನ್ನ ನಿತಂಬವು ದುಂಡಗಿದೆ. ನೀನೆಷ್ಟು ಪುಣ್ಯ ಮಾಡಿರುವೆಯಮ್ಮಾ! ಶ್ರೇಷ್ಠವಾದ ಮುಖದಿಂದ ಪರಿಶೋಭಿಸುತ್ತಿರುವ ಪದ್ಮಾವತಿ! ನಿನ್ನ ನಡಿಗೆಯು ಗಜರಾಜನ ನಡಿಗೆಯಂತಿದೆ. ಮಂಗಳಕರಳಾದ ಹೇ ದೇವಿ! ಹೆಚ್ಚೇನು ಹೇಳುವುದಿದೆ? ಇಂತು ಲೋಕಮೋಹಕ ರೂಪಲಾವಣ್ಯಗಳು ಹಿಂದೆ ಸಂಪಾದಿಸಿದ ಅತಿಶಯ ಪುಣ್ಯಫಲದಿಂದ ಮಾತ್ರ ಲಭಿಸುವಂತಹವು!

ಹೀಗೆ ಪದ್ಮಾವತಿಗೆ ನಿರೂಪಿಸಿ ನಾರದ ಮಹರ್ಷಿಯು ಆ ಎಲ್ಲ ಕನ್ಯೆಯರು ನೋಡುತ್ತಿರುವಂತೆಯೇ ಅದೃಶ್ಯನಾದನು. ನಾರದಮುನಿಯು ಮನದಲ್ಲಿಯೇ ಲಕ್ಷ್ಮೀದೇವಿಯನ್ನು ಸ್ತೋತ್ರಮಾಡಿ, ರಮಾದೇವಿಯನ್ನು ಧ್ಯಾನಮಾಡುತ್ತಾ ಮನದಲ್ಲಿಯೇ ವಂದಿಸಿ ತೆರಳಿದನು. ಪರಮಾತ್ಮನ ನಾಭಿಕಮಲದಿಂದ ಉದ್ಭವಿಸಿದ ಬ್ರಹ್ಮದೇವನ ಪುತ್ರನಾದ ನಾರದಮಹರ್ಷಿಯು ಕಮಲದಲ್ಲಿ ಆವಿರ್ಭೂತಳಾದ ಕಮಲೆಯ ಅವತಾರಳಾದ ಪದ್ಮಾವತಿಯನ್ನು ಸ್ತುತಿಸಿ, ಶ್ರೀನಾರಾಯಣನಿಗೆ ಆವಾಸಸ್ಥಾನವಾದ, ರಮಣೀಯವಾದ, ಮಂಗಳಕರವಾದ ಶೇಷಶೈಲಕ್ಕೆ ತೆರಳಿದನು.

*ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೇಂಕಟೇಶಮಹಾತ್ಮ್ಯೆಯಲ್ಲಿ*
*ಆರನೆಯ ಅಧ್ಯಾಯವು ಮುಗಿದುದು.*

*॥ ಶ್ರೀವೇಂಕಟೇಶನಿಗೆ ಅರ್ಪಿತವಾಗಲಿ ॥*

ଔଷ

# ಏಳನೆಯ ಅಧ್ಯಾಯ

*ಮೂಲ— ಸೂತ ಉವಾಚ -*

**ಕನ್ಯಾಯಾ ಜನನಂ ಪ್ರೋಕ್ತಂ ಕುಮಾರಸ್ಯ ವಿಶೇಷತಃ ।**
**ಸಾಂಗಂ ವದಾಮಿ ಚಾರಿತ್ರ್ಯಂ ವೈವಾಹಂ ಪುಣ್ಯವರ್ಧನಮ್ ॥ 1 ॥**

ಸೂತ ಉವಾಚ = ಸೂತರು ಹೇಳುತ್ತಿದ್ದಾರೆ - ಕನ್ಯಾಯಾಃ = ಪದ್ಮಾವತಿಯ, ಜನನಂ = ಜನನವು, ಪ್ರೋಕ್ತಂ = ನಿರೂಪಿಸಲ್ಪಟ್ಟಿತು, ವಿಶೇಷತಃ = ವಿಶೇಷಾಕಾರವಾಗಿ, ಕುಮಾರಸ್ಯ = ವಸುಧಾನನ, ಜನನಂ = ಉತ್ಪತ್ತಿಯು, ಪ್ರೋಕ್ತಂ = ಹೇಳಲ್ಪಟ್ಟಿತು. ಪುಣ್ಯವರ್ಧನಂ = ಪುಣ್ಯಕರವಾದ (ಪುಣ್ಯವನ್ನು ಹೆಚ್ಚಿಸುವ), ವೈವಾಹಂ = ಪದ್ಮಾವತಿಯ ವಿವಾಹಸಂಬಂಧವಾದ, ಚಾರಿತ್ರ್ಯಂ = ಮಂಗಳಕಥೆಯನ್ನು, ಸಾಂಗಂ = ಅಂಗಸಹಿತವಾಗಿ (ಪೂರ್ಣವಾಗಿ), ವದಾಮಿ = ಹೇಳುವೆನು ॥ 1 ॥

**ಕರೀಂದ್ರಸಂಗೇನ ಸಮಾಗತೋಽಹರಿಃ ತುರಂಗಮಾಸ್ಥಾಯ ವರಾಂಗನಾನಾಮ್ ।**
**ಶ್ರೀಗಂಧಲೇಪಾರುಣಚಾರುವಕ್ಷಾ ಬಾಲಾರ್ಕಭಾಃ ಸೋಽಥ ಸಮೀಪಮಾಶು ॥ 2 ॥**

**ಗರ್ಜಂತಂ ಗಜರಾಜಾನಂ ದೃಷ್ಟ್ವಾ ಪದ್ಮಾವತೀಮುಖಾಃ ।**
**ವನಸ್ಪತಿಮುಪಾಶ್ರಿತ್ಯ ತತ್ರ ಲೀನಾ ಬಭೂವಿರೇ ॥ 3 ॥**

**ನಿಮೀಲ್ಯ ನೇತ್ರವರ್ತ್ಮಾನಿ ವ್ಯೂಹಂ ಕೃತ್ವಾ ವರಾಂಗನಾಃ ।**
**ಪಶ್ಯಂತಿ ಚ ತರುಚ್ಛನ್ನಾಃ ಪುನರ್ದೃಷ್ಟ್ವಾ ಪುನಶ್ಚ ತಾಃ ॥ 4 ॥**

**ತದಂತರೇಬಲಾ ಸ್ಸರ್ವಾ ದದೃಶುರ್ಹಯಮುತ್ತಮಮ್ ।**
**ಬಾಲಾರ್ಕಸದೃಶಾಕಾರಂ ರತ್ನಾಭರಣಭೂಷಿತಮ್ ॥ 5 ॥**

**ಪುರುಷೇಣ ಸಮಾಯುಕ್ತಂ ಮನ್ಮಥಾಕಾರತೇಜಸಾ ।**
**ತಂ ದೃಷ್ಟ್ವಾ ಗಜರಾಜೋಽಪಿ ಹಯಸ್ಥಂ ಪುರುಷೋತ್ತಮಮ್ ॥ 6 ॥**

**ನಮಸ್ಕೃತ್ವಾ ಯಥಾನ್ಯಾಯಂ ಜಗಾಮ ವಿಪಿನಂ ನದನ್ ।**
**ತಂ ದೃಷ್ಟ್ವಾ ಯೋಷಿತಾಸ್ಸರ್ವಾಃ ವಿಸ್ಮಯಾಕುಲಮಾನಸಾಃ ॥ 7 ॥**

**ಕರಸಂಪುಟಮಾಪನ್ನಾಃ ಚಲಿತಾಸ್ತು ಭಯಾತುರಾಃ ।**
**ವೃಕ್ಷಮೂಲಂ ಗತಾ ಬಾಲಾ ಹ್ಯನ್ಯೋನ್ಯಂ ವಾಕ್ಯಮಬ್ರುವನ್ ॥ 8 ॥**

**ಕೋಽಯಮತ್ರ ವರಾರೋಹೇ ಸಖೇ ಕಮಲಲೋಚನೇ ।**
**ಕೋಽಸೌ ಕಿರಾತರೂಪೀ ಚ ನ ದೃಷ್ಟೋ ಭವಿತಾ ಪುರಾ ॥ 9 ॥**

**ತುರಗೋಪರಿ ಸಂಸ್ಥಾಯ ಯ ಆಗಚ್ಛತಿ ಹೇ ಸಖೇ ।**
**ಏವಂ ವದಂತ್ಯಸ್ತತ್ಸಖ್ಯಃ ಸಾ ಚ ಪದ್ಮಾವತೀ ಶುಭಾ ॥ 10 ॥**

**ಉವಾಚ ಮಂದಂ ವಚನಂ ಸಖೀನಾಮಗ್ರತೋ ದ್ವಿಜಾಃ ।**

ಪದ್ಮಾವತ್ಯುವಾಚ-

**ಪೃಚ್ಛಂತು ತಸ್ಯ ವೃತ್ತಾಂತಂ ಪಿತೃಮಾತ್ರೋಂಶ್ಚ ಬಾಂಧವಾನ್ ॥ 11 ॥**
**ದೇಶಂ ವೃತ್ತಂ ಕುಲಂ ಶೀಲಂ ನಾಮ ಗೋತ್ರಾದಿಕಂ ತಥಾ ।**
**ಇತಿ ಸಖ್ಯಾ ಸಮಾಜ್ಞಪ್ತಾಸ್ತಾ ಊಚುರ್ವಚನಂ ಸ್ತ್ರಿಯಃ ॥ 12 ॥**

ಅಥ = ಅನಂತರ, ಕರೀಂದ್ರ ಸಂಗೇನ = ಗಜರಾಜನ ಕಾರಣವಾಗಿ (ಕರೀಂದ್ರನನ್ನು ಬೆನ್ನಟ್ಟಿ), ಸಮಾಗತಃ = ಬಂದವನಾದ, ಶ್ರೀಗಂಧಲೇಪಾರುಣಚಾರುವಕ್ಷಾಃ - ಶ್ರೀಗಂಧ = ಸುಗಂಧ ದ್ರವ್ಯಸಹಿತವಾದ ಚಂದನದ, ಲೇಪ = ಲೇಪನ (ಹಚ್ಚುವಿಕೆಯಿಂದ)ದಿಂದ, ಅರುಣ = ಕೆಂಪಾದ, ಚಾರು = ಮನೋಹರವಾದ, ವಕ್ಷಾಃ = ವಕ್ಷಃ ಸ್ಥಳವುಳ್ಳ, ಬಾಲಾರ್ಕಭಾಃ = ಆಗತಾನೆ ಉದಯಿಸಿದ ಸೂರ್ಯನಂತೆ ಕಾಂತಿಯುಳ್ಳ, ಸಃ ಹರಿಃ = ಆ ಶ್ರೀನಿವಾಸನು, ತುರಂಗಮಾಸ್ಥಾಯ = ಕುದುರೆಯನ್ನು ಏರಿ ಕುಳಿತುಕೊಂಡು, ವರಾಂಗ ನಾನಾಂ = ಶ್ರೇಷ್ಠಸ್ತ್ರೀಯರುಗಳ (ಕನ್ನಿಕೆಯರ), ಸಮೀಪಂ = ಹತ್ತಿರಕ್ಕೆ, ಆಶು = ಶೀಘ್ರವಾಗಿ, ಸಮಾಗತಃ = ಬಂದನು ॥ 2 ॥ ಪದ್ಮಾವತೀಮುಖಾಃ = ಪದ್ಮಾವತಿಯೇ ಮೊದಲಾದ ಕನ್ನಿಕೆಯರು, ಗರ್ಜಂತಂ = ಕೂಗುತ್ತಿರುವ (ಗರ್ಜಿಸುತ್ತಿರುವ), ಗಜರಾಜಾನಂ = ಕರಿರಾಜನನ್ನು, ದೃಷ್ಟ್ವಾ = ನೋಡಿ, ವನಸ್ಪತಿಂ = ಗಿಡಬಳ್ಳಿಗಳನ್ನು, ಉಪಾಶ್ರಿತ್ಯ = ಆಶ್ರಯಿಸಿ, ತತ್ರ = ಆ ಗಿಡ-ಮರ-ಬಳ್ಳಿಗಳ ಮರೆಯಲ್ಲಿ, ಲೀನಾ ಬಭೂವಿರೇ = ಮರೆಯಾದರು (ಅಡಗಿನಿಂತರು) ॥ 3 ॥ ವರಾಂಗನಾಃ = ಉತ್ತಮ ಸ್ತ್ರೀಯರಾದ ಆ ಕನ್ನಿಕೆಯರು, ನೇತ್ರವರ್ತ್ಮಾನಿ = ಕಣ್ಣಿನರೆಪ್ಪೆಗಳನ್ನು, ನಿಮೀಲ್ಯ = ಮುಚ್ಚಿಕೊಂಡು, ವ್ಯೂಹಂಕೃತ್ವಾ = ಗುಂಪುಮಾಡಿಕೊಂಡು (ಗುಂಪಾಗಿ ಸೇರಿ), ತರುಛನ್ನಾಃ = ಮರಗಳ ಹಿಂದೆ ಕಣ್ಣಿಗೆ ಕಾಣದಂತೆ ಮರೆಯಾದವರಾಗಿ, ಪಶ್ಯಂತಿ = ನೋಡುತ್ತಿದ್ದರು, ಪುನಃ ಪುನಃ = ಮತ್ತೆಮತ್ತೆ, ತಾಃ = ಆ ಕನ್ನಿಕೆಯರು, ದೃಷ್ಟ್ವಾ = ಗಿಡಮರಬಳ್ಳಿಗಳ ಸಂದಿನಿಂದ ನೋಡಿ, ಪುನಶ್ಚ = ಮತ್ತೆ, ಛನ್ನಾಃ = ಮರೆಯಾಗಿ (ಇರುತ್ತಿದ್ದರು) ॥ 4 ॥ ಸರ್ವಾಃ = ಸಕಲರಾದ, ಅಬಲಾಃ = ಸ್ತ್ರೀಯರು, ತದಂತರೇ = ಅನಂತರದಲ್ಲಿ (ಅಥವಾ ಗಿಡಮರ ಬಳ್ಳಿಗಳ ಸಂದಿನಿಂದಲೇ), ಉತ್ತಮಂ = ಶ್ರೇಷ್ಠವಾದ, ಬಾಲಾರ್ಕಸದೃಶಾಕಾರಂ ಬಾಲಾರ್ಕ = ಉದಯಿಸುತ್ತಿರುವ ಸೂರ್ಯನಿಗೆ, ಸದೃಶ = ಸಮಾನವಾದ, ಆಕಾರಂ = ರೂಪವುಳ್ಳ (ಶರೀರವುಳ್ಳ), ರತ್ನಾಭರಣಭೂಷಿತಂ = ರತ್ನಮಯ (ಒಡವೆ) ಆಭರಣಗಳಿಂದ ಅಲಂಕೃತನಾದ, ಮನ್ಮಥಾಕಾರತೇಜಸಾ - ಮನ್ಮಥ = ರತಿಪತಿಯಾದ ಕಾಮನ, ಆಕಾರಂ = ಸುಂದರ ಶರೀರದಂತೆ, ತೇಜಸಾ = ಕಾಂತಿಯಿಂದ (ಯುಕ್ತನಾದ), ಪುರುಷೇಣ = ಪುರುಷನಿಂದ, ಸಮಾಯುಕ್ತಂ = ಸಹಿತವಾದ, ಉತ್ತಮಂ ಹಯಂ = ಶ್ರೇಷ್ಠ ಅಶ್ವವನ್ನು, ದದೃಶುಃ = ನೋಡಿದವರಾದರು, ಗಜರಾಜೋಽಪಿ = ಆ ಗಜರಾಜನೂ ಸಹ, ಹಯಸ್ಥಂ = ಕುದುರೆಯ ಮೇಲೆ ಕುಳಿತಿರುವ, ತಂ = ಆ, ಪುರುಷೋತ್ತಮಂ = ಪರಮಪುರುಷನಾದ ಶ್ರೀನಿವಾಸನನ್ನು, ದೃಷ್ಟ್ವಾ = ನೋಡಿ, ॥ 5-6 ॥ ಯಥಾನ್ಯಾಯಂ = ತನಗೆ ಯುಕ್ತವಾದ ರೀತಿಯಲ್ಲಿ, ನಮಸ್ಕೃತ್ಯ = ನಮಸ್ಕಾರಮಾಡಿ (ವಂದಿಸಿ), ನದನ್ = ಕೂಗುತ್ತಾ, ವಿಪಿನಂ = ಅರಣ್ಯವನ್ನು ಕುರಿತು, ಜಗಾಮ = ಹೊರಟುಹೋದನು. ಸರ್ವಾಯೋಷಿತಃ = ಸಮಸ್ತ ಹೆಂಗಸರು, ತಂ = ಅಶ್ವಾವಾಹಿಯಾದ ಶ್ರೀನಿವಾಸನನ್ನು, ದೃಷ್ಟ್ವಾ = ನೋಡಿ, ವಿಸ್ಮಯಾಕುಲಮಾನಸಾಃ = ಆಶ್ಚರ್ಯ

ಮತ್ತು ಹೆದರಿಕೆಯಿಂದ ವ್ಯಾಕುಲವಾದ ಮನಸ್ಸುಳ್ಳವರು (ಆದರು). ।। 7 ।। ಕರಸಂಪುಟಮಾಪನ್ನಾಃ = ಹಸ್ತಗಳನ್ನು ಸಂಪುಟಾಕಾರವಾಗಿ ಮಾಡಿಕೊಂಡು, ಚಲಿತಾಸ್ತು = ಅತ್ತಿತ್ತ ಓಡಾಡುತ್ತಿರುವ, ಭಯಾತುರಾಃ = ಭಯದಿಂದ ಆತುರಗೊಂಡಿರುವ, ವೃಕ್ಷಮೂಲಂಗತಾಃ = ಮರದ ಕೆಳಗೆ ನಿಂತವರಾಗಿ, ಬಾಲಾಃ = ಆ ಕನ್ಯೆಯರು, ಅನ್ಯೋನ್ಯಂ = ಒಬ್ಬರಿಗೊಬ್ಬರು, ವಾಕ್ಯಂ = ಮಾತನ್ನು, ಅಬ್ರುವನ್ = ಹೇಳಿಕೊಂಡರು, ಹಿ = ಪ್ರಸಿದ್ಧವು ।। 8 ।। ವರಾರೋಹೇ = ಉತ್ತಮ ಆರೋಹ ಪ್ರದೇಶವುಳ್ಳ, ಕಮಲಲೋಚನೆ = ಕಮಲದಂತಿರುವ ಕಣ್ಣುಳ್ಳವಳೇ! ಸಖೇ = ಹೇ ಗೆಳತಿಯೇ, ಅತ್ರ = ಇಲ್ಲಿ, ಕೋಽಯಂ = ಬಂದಿರುವವನಾರು? ಕಿರಾತರೂಪೀ = ಬೇಡನ ರೂಪದಲ್ಲಿರುವ, ಅಸೌ = ಇವನು, ಕಃ = ಯಾರು? ಪುರಾ = ಹಿಂದೆ, ದೃಷ್ಟಃ ನ ಭವಿತಾ = ಕಣ್ಣಿಗೆ ಕಾಣಿಸಿರಲಿಲ್ಲವಲ್ಲ ।। 9 ।। ಹೇ ಸಖೆ = ಎಲೈಮಿತ್ರಳೇ, ತುರಗೋಪರಿ = ಕುದುರೆಯ ಮೇಲೆ, ಸಂಸ್ಥಾನ = ಕುಳಿತುಕೊಂಡು, ಯ ಆಗಚ್ಛತಿ = ಬರುತ್ತಿರುವವನಿವನಾರು? ಏವಂ = ಈ ಪ್ರಕಾರವಾಗಿ, ತತ್ಸಖ್ಯಃ = ಪದ್ಮಾವತಿಯ ಸಖಿಯರು, ವದಂತ್ಯಃ = ಹೇಳುತ್ತಿರಲು ಶುಭಾ = ಮಂಗಳಕರಳಾದ, ಸಾ = ರಾಜಕುಮಾರಿಯಾದ, ಪದ್ಮಾವತೀಚ = ಪದ್ಮಾವತಿಯೂ ಕೂಡ ।। 10 ।। ದ್ವಿಜಾಃ = ಎಲೈ ಋಷಿಮುನಿಗಳೇ! (ಸೂತರು ಹೇಳುತ್ತಿದ್ದಾರೆ), ಸಖೀನಾಮಗ್ರತಃ = ಸಖಿಯರ ಮುಂಭಾಗದಲ್ಲಿ (ನಿಂತು), ಮಂದಂ = ಮೆಲ್ಲಗೆ, ವಚನಂ = ಮಾತನ್ನು, ಉವಾಚ = ಹೇಳಿದಳು. ಪದ್ಮಾವತ್ಯುವಾಚ = ಪದ್ಮಾವತಿಯು ಹೇಳಲಾರಂಭಿಸಿದಳು - ತಸ್ಯ = ಆ ಪುರುಷನ, ಪಿತೃಮಾತೄಂಶ್ಚ = ತಂದೆ - ತಾಯಿಗಳ ಬಗ್ಗೆ, ಬಾಂಧವಾನ್ = ಬಂಧುಗಳನ್ನು ಕುರಿತು, ।। 11 ।। ಕುಲಂ = ವಂಶ, ದೇಶ = ವಾಸಿಸುವ ದೇಶ, ವೃತ್ತಂ = ನಡತೆ, ಶೀಲಂ = ಸ್ವಭಾವ, ತಥಾ = ಹಾಗೆಯೇ, ನಾಮ = ಆತನ ಹೆಸರು, ಗೋತ್ರಾದಿಕಂ = ಆತನ ಗೋತ್ರಾದಿಗಳು, ವೃತ್ತಾಂತಂ = ಸಮಾಚಾರವನ್ನು, ಪೃಚ್ಛಂತು = ಕೇಳಿರಿ. ಇತಿ = ಈ ಪ್ರಕಾರವಾಗಿ, ಸಖ್ಯಾ = ಗೆಳತಿಯಾದ ಪದ್ಮಾವತಿಯಿಂದ, ಸಮಾಜ್ಞಪ್ತಾಃ = ಅಪ್ಪಣೆಪಡೆದವರಾದ, ಸ್ತ್ರೀಯಃ = ಆ ಸ್ತ್ರೀಯರು, ವಚನಂ = ಮಾತನ್ನು, ಊಚುಃ = ಹೇಳಿದರು ।। 12 ।।

*ಕನ್ಯಾ ಊಚುಃ ।।*

**ಆಗತಂ ಪುರುಷಂ ದೃಷ್ಟ್ವಾ ಕೋಽಸಿ ಕೋಽಸೀತಿಚಾಬ್ರುವನ್ ।**
**ಕಿಮರ್ಥಮಾಗತೋಽಸಿ ತ್ವಂ ಕಿಂ ತೇ ಕಾರ್ಯಂ ವದ ಪ್ರಭೋ ।। 13 ।।**

**ನ ಸಂತಿ ಪುರುಷಾಹ್ಯತ್ರ ಗಚ್ಛ ಗಚ್ಛೇತಿ ಚಾಬ್ರುವನ್ ।**
**ತಾಸಾಂ ತದ್ವಚನಂ ಶ್ರುತ್ವಾ ಹಯಸ್ಥಃ ಪ್ರಬ್ರವೀಚ್ಚ ತಾಃ ।। 14 ।।**

ಕನ್ಯಾ ಊಚುಃ = ಕನ್ಯೆಯರು ಹೇಳಿದರು. ಆಗತಂ = ಅಲ್ಲಿಗೆ ಕುದುರೆಯ ಮೇಲೆ ಬಂದ, ಪುರುಷಂ = ಕಿರಾತರೂಪೀ ಪುರುಷನನ್ನು, ದೃಷ್ಟ್ವಾ = ನೋಡಿ, ಕೋಽಸಿ = ನೀನಾರು?, ಕೋಽಸೀತಿ ಚ = ನೀನ್ಯಾರಾಗಿದ್ದೀಯೆ, ಇತಿ = ಹೀಗೆ, ಅಬ್ರುವನ್ = ಅಂದರು. ಪ್ರಭೋ = ಕಿರಾತನಾಯಕನೇ, ತ್ವಂ = ನೀನು, ಕಿಮರ್ಥಂ = ಯಾವ ಉದ್ದಿಶ್ಯದಿಂದ, ಆಗತೋಽಸಿ = ಬಂದಿದ್ದೀಯೆ?, ತೇ = ನಿನಗೆ, ಕಿಂ ಕಾರ್ಯಂ = ಇಲ್ಲೇನು ಕೆಲಸ?, ವದ = ಹೇಳು ।। 13 ।। ಅತ್ರ = ಇಲ್ಲಿ, ಪುರುಷಾಃ = ಗಂಡಸರ್ಯಾರೂ, ನ ಸಂತಿ ಹಿ = ಇಲ್ಲವು. ಗಚ್ಛಗಚ್ಛ = ಹೋಗು ಹೊರಟುಹೋಗು, ಇತಿ ಚ = ಇಂತೆಂದೂ ಸಹ, ಅಬ್ರುವನ್ = ಹೇಳುವವರಾದರು. ತಾಸಾಂ = ಆ ಕನ್ಯೆಯರ, ತದ್ವಚನಂ = ಆ ಮಾತುಗಳನ್ನು, ಶ್ರುತ್ವಾ = ಕೇಳಿದವನಾದ, ಹಯಸ್ಥಃ = ಕುದುರೆ ಸವಾರನಾದ ಶ್ರೀನಿವಾಸನು, ತಾಃ (ಪ್ರತಿ) = ಅವರನ್ನು ಕುರಿತು, ಪ್ರಬ್ರವೀಚ್ಚ = ಹೇಳುವವನಾದನು (ಹೇಳಿದನು). ।। 14 ।।

*ಶ್ರೀನಿವಾಸ ಉವಾಚ -*

**ಅಸ್ತಿ ಕಾರ್ಯಂ ವರಾರೋಹಾ ರಾಜಪುತ್ರ್ಯಾಃ ಸಮೀಪಕೇ ।**
**ಇತಿ ತಸ್ಯ ವಚಃ ಶ್ರುತ್ವಾ ಸಖ್ಯಾಸ್ತಾಃ ಪುನರಬ್ರುವನ್ ॥ 15 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳುತ್ತಲಿದ್ದಾನೆ - ವರಾರೋಹಾಃ = ಸುಂದರ (ಉತ್ತಮ) ಕನ್ಯೆಯರೇ, ರಾಜಪುತ್ರ್ಯಾಃ = ರಾಜಕುಮಾರಿಯ, ಸಮೀಪಕೇ = ಹತ್ತಿರ, ಕಾರ್ಯಂ = ಕೆಲಸವೂ, ಅಸ್ತಿ = ಇರುವುದು - ಇತಿ = ಇಂತು, ತಸ್ಯ = ಶ್ರೀನಿವಾಸನ, ವಚಃಶ್ರುತ್ವಾ = ಮಾತನಾಲಿಸಿ ತಾಃ ಸಖ್ಯಃ = ಆ ಸಖಿಯರುಗಳು, ಪುನಃ = ಮತ್ತೆ, ಅಬ್ರುವನ್ = ನುಡಿದರು ॥ 15 ॥

*ಕನ್ಯಾ ಊಚುಃ ॥*

**ಕಿಂಕಾರ್ಯಂ ವದ ಶೀಘ್ರೇಣ ಯತ್ತೇ ಮನಸಿ ವರ್ತತೇ ।**
**ಕ್ವ ತೇ ವಾಸಶ್ಚ ಕಿಂ ನಾಮ ಕಾ ತೇ ಮಾತಾ ಚ ಕಃ ಪಿತಾ ॥ 16 ॥**

**ಕೋ ಭ್ರಾತಾ ಕಾ ಚ ಭಗಿನೀ ಕಿಂ ಕುಲಂ ಗೋತ್ರಮೇವ ಚ ।**
**ಇತಿ ತಾಸಾಂ ವಚಃ ಶ್ರುತ್ವಾ ನ್ಯಗದಜ್ಜಗದೀಶ್ವರಃ ॥ 17 ॥**

ಕನ್ಯಾ ಊಚುಃ = ಕನ್ನಿಕೆಯರು ಹೇಳಿದರು - ತೇ = ನಿನಗೆ, ಕಿಂ ಕಾರ್ಯಂ = (ಇಲ್ಲಿ) ಏನು ಕೆಲಸವಿದೆ, ಶೀಘ್ರಂ = ಜಾಗ್ರತೆಯಾಗಿ, ವದ = ಹೇಳು, ತೇ = ನಿನ್ನ, ಯತ್ = ಏನು, ಮನಸಿ = ಮನಸ್ಸಿನಲ್ಲಿ ವರ್ತತೇ = ಇರುವುದೋ, (ತತ್)ವದ = ಹೇಳು. ತೇ = ನಿನ್ನ, ವಾಸಃ = ವಾಸವು, ಕ್ವ = ಎಲ್ಲಿ? ಚ = ಮತ್ತು, ತೇ = ನಿನ್ನ, ನಾಮ = ಹೆಸರೇನು?, ಮಾತಾ = ತಾಯಿಯು, ಕಾ = ಯಾರು? ಪಿತಾ = ತಂದೆಯು, ಕಃ = ಯಾರು? ॥ 16 ॥ ಚ = ಮತ್ತು ಭ್ರಾತಾ ಕಃ = ಸಹೋದರನಾರು? ಭಗಿನಿ ಕಾ = ತಂಗಿಯಾರು? ತೇ = ನಿನ್ನ; ಕಿಂ ಕುಲಂ = ವಂಶವು ಯಾವುದು? ಗೋತ್ರಮೇವ ಚ = ಗೋತ್ರವಾವುದು? (ಎಂಬುದನ್ನು), ವದ = ಹೇಳು, ಇತಿ = ಈ ರೀತಿಯಾದ, ತಾಸಾಂ = ಆ ಕನ್ಯೆಯರ, ವಚಃ ಶ್ರುತ್ವಾ = ಮಾತನ್ನು ಕೇಳಿ, ಜಗದೀಶ್ವರಃ = ಜಗತ್ತಿಗೆ ಸ್ವಾಮಿಯಾದ ಶ್ರೀನಿವಾಸನು, ನ್ಯಗದತ್ = ಹೇಳಿದನು ॥ 17 ॥

*ಶ್ರೀನಿವಾಸ ಉವಾಚ -*

**ಕನ್ಯಾಪೇಕ್ಷಾ ಮುಖ್ಯಕಾರ್ಯಂ ತದಂತೇ ಪ್ರವದಾಮಿ ವಃ ।**
**ಇತಿ ತಾಃ ಪ್ರೋಚ್ಯ ಚೋವಾಚ ದೇವೀಂ ಪದ್ಮಾವತೀಮಥ ।**
**ಸಿಂಧುಪುತ್ರಕುಲಂ ಚಾಹುರಸ್ಮಾಕಂ ತು ಪುರಾವಿದಃ ॥ 18 ॥**

**ಜನಕೋ ವಸುದೇವಶ್ಚ ದೇವಕೀ ಜನನೀ ಮಮ ।**
**ಅಗ್ರಜಃ ಶ್ವೇತಕೇಶಶ್ಚ ಸುಭದ್ರಾ ಭಗಿನೀ ಮಮ ॥ 19 ॥**

**ಪಾರ್ಥೋ ಮೇ ಶ್ಯಾಲಕೋ ದೇವ್ಯಃ ಪಾಂಡವಾ ಮಮ ಬಾಂಧವಾಃ ।**
**ಷಣ್ಣಾಂತು ಮೃತಪುತ್ರಾಣಾಂ ಕೃತನಾಮ್ನಾಂ ಮಹಾತ್ಮನಾಮ್ ॥ 20 ॥**

**ವಿಯೋಗತಪ್ತೌ ಪಿತರೌ ಸಪ್ತಮಂ ರಾಮಮೇವ ಚ ।**
**ಚಕ್ರತುರ್ನಾಮಕರಣಂ ಪಿತೃಲಿಂಗಮುಪಾಗತಮ್ ॥ 21 ॥**

**ಜಾತೋಽಹಮಷ್ಟಮೋಷ್ಟಮ್ಯಾಂ ಸುಭದ್ರಾ ಮದನಂತರಮ್ ।**
**ಮಾತೃವರ್ಣಶ್ಚ ಮೇ ದೇವಿ ಕೃಷ್ಣಪಕ್ಷೇ ಜನಿರ್ಮಮ ॥ 22 ॥**

**ತಸ್ಮಾತ್ಕೃಷ್ಣೇತಿ ಮಾಂ ದೇವಿ ಚಕ್ರತುರ್ನಾಮ ಸಂಸ್ಕೃತಮ್ ।**
**ವರ್ಣತೋ ನಾಮತಶ್ಚಾಪಿ ಕೃಷ್ಣಂ ಪ್ರಾಹುರ್ಮನೀಷಿಣಃ ॥ 23 ॥**

**ವೃತ್ತಾಂತಮಖಿಲಂ ಪ್ರೋಕ್ತಂ ಶ್ರುತಂ ಪಂಡಿತನಂದನೇ ।**
**ಯುಷ್ಮಾಕಂ ವಾಚ್ಯತಾಂ ವಾರ್ತಾಂ ಗೋತ್ರ ನಾಮ ಕುಲಾದಿಕಂ ॥ 24 ॥**

**ಇತಿ ತೇನ ಸಮಾಜ್ಞಪ್ತಾ ಉವಾಚ ನೃಪನಂದಿನೀ ।**

ಪದ್ಮಾವತ್ಯುವಾಚ-

**ಆಕಾಶರಾಜತನಯಾಂ ನಿಷಾದಾಧಿಪ ವಿದ್ಧಿಮಾಮ್ ॥ 25 ॥**

**ನಾಮ್ನಾ ಪದ್ಮಾವತೀ ಕೃಷ್ಣ ಕುಲಂ ಶೀತಕರಸ್ಯ ಚ ।**
**ಗೋತ್ರಮತ್ರೇಃ ಕಿರಾತೇಂದ್ರ ಶೀಘ್ರಂ ಗಚ್ಛೇತಿ ಚಾಬ್ರವೀತ್ ॥ 26 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಹತ್ತಿದನು. ಕನ್ಯಾಪೇಕ್ಷಾ = ವಿವಾಹವಾಗಲು ಕನ್ಯೆಯ ಅಪೇಕ್ಷೆ (ಇದೆ), ಮುಖ್ಯಕಾರ್ಯಂ = (ಅದು) ಮುಖ್ಯಕಾರ್ಯವು, ತದಂತೇ = ರಾಜಕುಮಾರಿಯ ಮುಂದೆ, ವಃ = ನಿಮಗೆ, ಪ್ರವದಾಮಿ = ಹೇಳುತ್ತೇನೆ. ಇತಿ = ಹೀಗೆ, ತಾಃ = ಅವರನ್ನು ಕುರಿತು, ಪ್ರೋಚ್ಯ = ಹೇಳಿದವನಾಗಿ, ಅಥ = ಅನಂತರ, ಪದ್ಮಾವತೀಂ ದೇವೀಂ ಚ = ಪದ್ಮಾವತಿ ದೇವಿಯನ್ನು ಕುರಿತು ಸಹ, ಉವಾಚ = ಹೇಳಿದನು. ಅಸ್ಮಾಕಂತು = ನಮ್ಮದು, ಸಿಂಧುಪುತ್ರಕುಲಂ (ಇತಿ) = ಚಂದ್ರವಂಶವೆಂದು, ಪುರಾವಿದಃ = ಪೂರ್ವಿಕರು ಹೇಳುವರು ॥ 18 ॥ ಮಮ = ನನಗೆ, ಜನಕಃ = ತಂದೆಯು, ವಸುದೇವಃ = ವಸುದೇವನು, ಮಾತಾ ಚ = ತಾಯಿಯು, ದೇವಕೀ = ದೇವಕಿಯು, ಶ್ವೇತಕೇಶಃ = ಬಲರಾಮನು, ಅಗ್ರಜಃ = ಅಣ್ಣನು, ಚ = ಮತ್ತು ಮಮಭಗಿನಿ = ನನ್ನ ತಂಗಿಯು, ಸುಭದ್ರಾ = ಸುಭದ್ರೆಯು, ॥ 19 ॥ ದೇವ್ಯಃ = ಎಲೈ ದೇವಿಯರೇ, ಮೇ = ನನಗೆ, ಶ್ಯಾಲಕಃ = ತಂಗಿಯ ಗಂಡನು (ಭಾವನು), ಪಾರ್ಥಃ = ಪೃಥಾಪುತ್ರನಾದ ಅರ್ಜುನನು, ಪಾಂಡವಾಃ = ಪಾಂಡವರು (ಪಾಂಡುಸುತರು), ಮಮ = ನನ್ನ, ಬಾಂಧವಾಃ = ಬಂಧುಗಳು, ಮಹಾತ್ಮನಾಂ = ಮಹನೀಯರಾದ, ಷಣ್ಣಾಂ = ಆರುಜನರಾದ, ಕೃತನಾಮ್ನಾಂ = ಹೆಸರಿಗೆ ಮಾತ್ರವಿರುವ, ಮೃತಪುತ್ರಾಣಾಂ = ಮೃತರಾದ ಮಕ್ಕಳುಗಳ ॥ 20 ॥ ವಿಯೋಗತಪ್ತೌ = ವಸುದೇವ-ದೇವಕಿಯರು, ಆರುಜನ ಮಕ್ಕಳ ಮರಣದಿಂದ ದುಃಖಿತರಾದರು. ಪಿತೃಲಿಂಗಮುಪಾಗತಂ = ತಂದೆಯ ಗುಣರೂಪವಿಶಿಷ್ಟನಾದ, ಸಪ್ತಮಂ = ಏಳನೆಯವನಾದ ಪುತ್ರನಿಗೆ, ರಾಮಮೇವ ಚ = ಬಲರಾಮನೆಂದು, ನಾಮಕರಣಂ = ನಾಮಕರಣ (ಹೆಸರಿಡುವುದನ್ನು)ವನ್ನು, ಚಕ್ರತುಃ = ಮಾಡಿದರು ॥21॥ ಅಷ್ಟಮಃ = ಎಂಟನೆಯವನಾಗಿ, ಅಹಂ = ನಾನು, ಅಷ್ಟಮ್ಯಾಂ = ಅಷ್ಟಮಿ ತಿಥಿಯಂದು, ಜಾತಃ = ಜನಿಸಿದೆನು,

ಮದನಂತರಂ = ನಾನು ಹುಟ್ಟಿದ ಮೇಲೆ (ನನ್ನ ತರುವಾಯ), ಸುಭದ್ರಾ = ಸುಭದ್ರೆಯು (ಜಾತಾ = ಜನಿಸಿದಳು). ದೇವಿ = ಎಲೈ ಪದ್ಮಾವತಿ!, ಮೇ = ನನ್ನದು, ಮಾತೃವರ್ಣಶ್ಚ = ತಾಯಿಯ ಬಣ್ಣವು, ಚ = ಮತ್ತು, ಕೃಷ್ಣಪಕ್ಷೇ = ಕೃಷ್ಣಪಕ್ಷದಲ್ಲಿ, ಮಮ = ನನ್ನ, ಜನಿಃ = ಜನನವು (ಆಯಿತು). ॥ 22 ॥ ತಸ್ಮಾತ್ = ಆದುದರಿಂದ, ದೇವಿ = ಹೇ ಪದ್ಮಾವತಿ!, ಕೃಷ್ಣೇತಿ = ಕೃಷ್ಣನೆಂದು, ನಾಮಸಂಸ್ಕೃತಂ = ನಾಮಕರಣವನ್ನು, ಚಕ್ರತುಃ = ಮಾಡಿದರು, ತಸ್ಮಾತ್ = ಆದುದರಿಂದ, ವರ್ಣತಃ = ಬಣ್ಣದಿಂದಲೂ, ನಾಮತಶ್ಚಾಪಿ = ಹೆಸರಿನಿಂದಲೂ ಸಹ, ಮನೀಷಿಣಃ = ಬುದ್ಧಿವಂತರು, ಮಾಂ = ನನ್ನನ್ನು, ಕೃಷ್ಣಂ ಪ್ರಾಹುಃ = ಕೃಷ್ಣನೆಂದು ಕರೆಯುವರು (ಹೇಳುವರು). ॥ 23 ॥ ಪಂಡಿತನಂದನೇ = ವಿದ್ವಜ್ಜನಾನಂದಕಾರಕಳೇ (ಅಥವಾ ಪಂಡಿತನಾದ ಆಕಾಶರಾಜನ ಮಗಳೇ), ಅಖಿಲಂ ವೃತ್ತಾಂತಂ = (ನನಗೆ ಸಂಬಂಧಿಸಿದ) ಸಕಲ ಸಮಾಚಾರವೂ, ಪ್ರೋಕ್ತಂ = ಹೇಳಲ್ಪಟ್ಟಿತು. (ತ್ವಯಾ) ಶ್ರುತಂ = ನಿನ್ನಿಂದ ಕೇಳಲ್ಪಟ್ಟಿತು. ಯುಷ್ಮಾಕಂ = ನಿಮ್ಮ, ಗೋತ್ರನಾಮಕುಲಾದಿಕಂ - ಗೋತ್ರ = ನಿಮ್ಮಗೋತ್ರ, ನಾಮ = ಹೆಸರು, ಕುಲಾದಿಕಂ = ವಂಶಾದಿಗಳನ್ನು (ಕುರಿತು), ವಾರ್ತಾಂ = ಸಮಸ್ತವಿಚಾರ (ಸಮಾಚಾರ)ಗಳನ್ನು, ವಾಚ್ಯತಾಂ = ಹೇಳುವವಳಾಗು, ॥ 24 ॥ ಇತಿ = ಹೀಗೆ, ತೇನ = ಶ್ರೀನಿವಾಸನಿಂದ, ಸಮಾಜ್ಞಪ್ತಾ = ಹೇಳಿಸಿಕೊಂಡಂಥ, ನೃಪನಂದಿನೀ = ರಾಜನ ಮಗಳು, ಉವಾಚ = ಹೇಳಿದಳು - ಪದ್ಮಾವತ್ಯುವಾಚ = ಪದ್ಮಾವತಿಯು ಹೇಳಲಾರಂಭಿಸಿದಳು. ನಿಷಾದಾಧಿಪ = ಕಿರಾತದೊರೆಯೇ, ಮಾಂ = ನನ್ನನ್ನು, ಆಕಾಶರಾಜ ತನಯಾಂ = ಆಕಾಶರಾಜನ ಮಗಳೆಂದು, ವಿದ್ಧಿ = ತಿಳಿ. ॥ 25 ॥ ಕೃಷ್ಣ = ಎಲೈ ಕೃಷ್ಣನೇ, ನಾಮ್ನಾ = ಹೆಸರಿನಿಂದ, ಪದ್ಮಾವತಿ = ನಾನು ಪದ್ಮಾವತಿಯು, ಚ = ಮತ್ತು, ಶೀತಕರಸ್ಯ ಕುಲಂ = (ನನ್ನದು) ಚಂದ್ರವಂಶವು, ಗೋತ್ರಮತ್ರೇಃ = ಅತ್ರಿಗೋತ್ರವು, ಕಿರಾತೇಂದ್ರ = ಬೇಡರನಾಯಕನೇ, ಶೀಘ್ರಂ = ಬಹುಬೇಗನೇ, ಗಚ್ಛ = ಇಲ್ಲಿಂದ ಹೊರಡು, ಇತಿ ಚ = ಹೀಗೆಂದೂ, ಅಬ್ರವೀತ್ = ಹೇಳಿದಳು.॥ 26 ॥

ಶ್ರೀನಿವಾಸ ಉವಾಚ -

**ಕಿಮರ್ಥಂ ನಿಷ್ಠುರಂ ವಾಕ್ಯಂ ಮೃದು ಕಿಂ ನ ಪ್ರಭಾಶಸೇ ।**
**ಅನ್ನಂ ಕಾಂಕ್ಷತಿ ಯೋ ಲೋಕೇ ಯೋ ದದಾತಿ ನರೋತ್ತಮಃ ॥ 27 ॥**

**ಸ ಪುಮಾನ್ಪುಣ್ಯಮಾಪ್ನೋತಿ ಜಲದೋಽಪಿ ಫಲಂ ಲಭೇತ್ ।**
**ತಥಾಽಹಂ ಕಾಮಮಾಪೇಕ್ಷೇ ಪಾತ್ರಭೂತೋಸ್ಮಿ ಸಾಂಪ್ರತಮ್ ॥ 28 ॥**

**ಸುಖಮೇಷ್ಯಸಿ ದಾನೇನ ಅಂತೇ ಸ್ವರ್ಗಂ ಗಮಿಷ್ಯಸಿ ।**
**ಆತ್ಮಾನಂ ದಿಶ ಮಹ್ಯಂ ತ್ವಂ ಕಿಂ ವೃಥಾ ನಿಷ್ಠುರೋಕ್ತಿಭಿಃ ।**
**ಸಾ ತಸ್ಯ ವಚನಂ ಶ್ರುತ್ವಾ ಕ್ರುದ್ಧಾ ತಾಮ್ರವಿಲೋಚನಾ ॥ 29 ॥**

ಪದ್ಮಾವತ್ಯುವಾಚ-

**ಅವಾಚ್ಯಂ ವದಸೇ ಮೂಢ ಜೀವನೇಚ್ಛಾ ನ ವಿದ್ಯತೇ ।**
**ಆಕಾಶರಾಜಸ್ತ್ವಾಂ ದೃಷ್ಟ್ವಾ ಹನಿಷ್ಯತಿ ನ ಸಂಶಯಃ ॥ 30 ॥**

**ಯಾವನ್ನಾಯಾತಿ ತಾವತ್ತ್ವಂ ಗಚ್ಛ ಶೀಘ್ರಂ ಸ್ವಮಾಲಯಮ್ ।**

ಶ್ರೀನಿವಾಸ ಉವಾಚ -

**ಕಾರ್ಯಾಂತೇ ಮರಣಂ ಸೌಖ್ಯಂ ಅಕಾರ್ಯಸ್ಯ ತೃಣಂ ಜಗತ್ ॥ 31 ॥**

**ಕಥಂ ಹನ್ಯಾತ್ಸರಾಜೇಂದ್ರಸ್ತ್ವಧರ್ಮಾಭಿಮುಖೋ ಹಿ ಮಾಮ್ ।**

**ತ್ವಂ ಕನ್ಯಾಽಹಂ ವರೋ ದೇವಿ ಕೋಽತ್ರಾನ್ಯಾಯೋ ಮಹೀಸುತೇ ॥ 32 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಿದನು. ಕಿಮರ್ಥಂ = ಏತಕ್ಕಾಗಿ, ನಿಷ್ಠುರಂ = ನಿಷ್ಠೂರವಾದ, ವಚನಂ = ಮಾತನಾಡುವೆ. ಮೃದು = ಮೃದುವಾಗಿ, ಕಿಂ = ಏತಕ್ಕಾಗಿ, ನ ಪ್ರಭಾಷಸೇ = ಮಾತನಾಡುವುದಿಲ್ಲ? ಯಃ = ಯಾವನು, ಅನ್ನಂ = ಅನ್ನವನ್ನು, ಕಾಂಕ್ಷೇತಿ = ಬಯಸುವನೋ, ಅಂಥವನಿಗೆ, ಯಃ = ಯಾವ, ನರೋತ್ತಮಃ = ಮಾನವೋತ್ತಮನು, ದದಾತಿ = (ಅನ್ನವನ್ನು) ಕೊಡುವನೋ ॥ 27 ॥ ಸಃ ಪುಮಾನ್ = ಆ ಪುರುಷನು, ಪುಣ್ಯಮಾಪ್ನೋತಿ = ಪುಣ್ಯವನ್ನು (ಅನ್ನದಾನದಿಂದ ಧರ್ಮವನ್ನು) ಪಡೆಯುತ್ತಾನೆ, ಜಲದೋಽಪಿ = ನೀರುಕೊಟ್ಟವನು ಕೂಡ, ಫಲಂ = (ದಾನದಿಂದ) ಪುಣ್ಯಫಲವನ್ನು, ಲಭೇತ್ = ಹೊಂದುವನು, ತಥಾ = ಅದರಂತೆ, ಅಹಂ = ನಾನು, ಕಾಮಂ = ನಾನು ನಿನ್ನಲ್ಲಿ ಕಾಮಕ್ರೀಡೆಯನ್ನು, ಅಪೇಕ್ಷ್ಯೇ = ಬಯಸುವೆನು, ಸಾಂಪ್ರತಂ = ಪ್ರಕೃತ, ಪಾತ್ರಭೂತೋಽಸ್ಮಿ = ಅದಕ್ಕೆ ಪಾತ್ರನೂ ಆಗಿದ್ದೇನೆ. ॥ 28 ॥ ದಾನೇನ = ಪ್ರೇಮದಾನದಿಂದ, ಸುಖಮೇಷ್ಯಸಿ = (ನೀನು) ಸುಖವನ್ನು ಪಡೆಯುತ್ತೀಯೆ. ಅಂತೇ = ಕೊನೆಗೆ, ಸ್ವರ್ಗಂ ಗಮಿಷ್ಯಸಿ = ಸ್ವರ್ಗಲೋಕಕ್ಕೆ ಹೋಗುತ್ತೀಯೆ. ವೃಥಾ = ವ್ಯರ್ಥವಾಗಿ, ನಿಷ್ಠುರೋಕ್ತಿಭಿಃ = ನಿಷ್ಠೂರವಾದ ಮಾತುಗಳಿಂದ, ಕಿಂ = ಏನು ಪ್ರಯೋಜನ? ತ್ವಂ = ನೀನು, ಆತ್ಮಾನಂ = ನಿನ್ನನ್ನು, ದಿಶ = ನನಗೆ ಕೊಡು. ತಸ್ಯ = ಶ್ರೀನಿವಾಸನ, ವಚನಂ = ಮಾತನ್ನು, ಶ್ರುತ್ವಾ = ಕೇಳಿದವಳಾಗಿ, ಸಾ = ಆ ಪದ್ಮಾವತಿಯು, ಕ್ರುದ್ಧಾ = ಸಿಟ್ಟಿನಿಂದ (ಕುಪಿತಳಾಗಿ), ತಾಮ್ರವಿಲೋಚನಾ = ಕೆಂಗಣ್ಣು ಮಾಡಿಕೊಂಡವಳಾಗಿ ॥ 26 ॥ ಮೂಢ = ವಿವೇಕವಿಲ್ಲದವನೇ, ಅವಾಚ್ಯ = ಹೇಳಬಾರದ್ದನ್ನು, ವದಸೇ = ಹೇಳುತ್ತಿದ್ದೀಯೆ! ಜೀವನೇಚ್ಛಾ = ಬದುಕಬೇಕೆಂಬ ಆಶೆಯು (ಇಚ್ಛೆಯು), ನ ವಿದ್ಯತೇ = ಇಲ್ಲವೇನು? ತ್ವಾಂ = ನಿನ್ನನ್ನು, ದೃಷ್ಟ್ವಾ = (ಅಂತಃಪುರದ ಸ್ತ್ರೀಯರಿರುವ ಈ ಸ್ಥಳದಲ್ಲಿ) ನೋಡಿ, ಆಕಾಶರಾಜಃ = ಆಕಾಶರಾಜನು, ಹನಿಷ್ಯತಿ = ಸಂಹರಿಸುತ್ತಾನೆ. ನ ಸಂಶಯಃ = ಇದರಲ್ಲಿ ಸಂದೇಹವಿಲ್ಲ ॥ 30 ॥ ಯಾವತ್ = ಎಲ್ಲಿಯವರೆವಿಗೆ, ನಾಯಾತಿ = ಆಕಾಶರಾಜನು ಬರುವುದಿಲ್ಲವೋ, ತಾವತ್ = ಅಷ್ಟರಲ್ಲಿ, ತ್ವಂ = ನೀನು, ಶೀಘ್ರಂ = ಬೇಗನೇ, ಸ್ವಮಾಲಯಂ = ನಿನ್ನ ಮನೆಯನ್ನು, ಕುರಿತು, ಗಚ್ಛ = ಹೊರಟುಹೋಗು, ಶ್ರೀನಿವಾಸ ಉವಾಚ = ಶ್ರೀನಿವಾಸನು ಹೀಗೆ ಉತ್ತರಿಸಿದನು, ಕಾರ್ಯಾಂತೇ = ಕಾರ್ಯವಾದಮೇಲೆ, ಮರಣಂ = ಮರಣವು, ಸೌಖ್ಯಂ = ಸುಖಕರವು, ಅಕಾರ್ಯಸ್ಯ = ಕಾರ್ಯವು ಸಫಲವಾಗದಿದ್ದವನಿಗೆ, ಜಗತ್ = ಪ್ರಪಂಚವು, ತೃಣಂ = ತೃಣಸಮಾನವು (ಅಂದರೆ ಹುಲ್ಲುಕಡ್ಡಿಗೆ ಸಮಾನವು) ॥ 31 ॥ ಸಃ = ಆ, ರಾಜೇಂದ್ರಃ = ಆಕಾಶರಾಜನು, ಅಧರ್ಮಾಭಿಮುಖಃ = ಅಧರ್ಮಕಾರ್ಯಾಸಕ್ತನಾಗಿ, ಮಾಂ = ನನ್ನನ್ನು, ಕಥಂ ಹನ್ಯಾತ್ = ಹೇಗೆ ಸಂಹರಿಸುವನು?, ಹಿ = ಪ್ರಸಿದ್ಧವು. ದೇವಿ = ಎಲೈ ಪದ್ಮಾವತಿ, ತ್ವಂ = ನೀನು, ಕನ್ಯಾ = ವಿವಾಹಯೋಗ್ಯಳಾದ ಕನ್ಯೆಯು, ಅಹಂ = ನಾನು, ವರಃ = ವರನು, ಮಹೀಸುತೇ = ಭೂಮಿಕುಮಾರಿ, ಅತ್ರ = ಈ ವಿಚಾರದಲ್ಲಿ (ಇದರಲ್ಲಿ), ಅನ್ಯಾಯಃ ಕಃ = ಅನ್ಯಾಯವಾದುದು (ನ್ಯಾಯವಲ್ಲದ್ದು) ಏನಿದೆ? ॥ 32 ॥

ಪದ್ಮಾವತ್ಯುವಾಚ-

**ಶೃಣು ಮೂಢ ನ ಜಾನಾಸಿ ಬಾಲಭಾವೇನ ಕಿಂ ವೃಥಾ ।**

**ತ್ವಾಂ ದೃಷ್ಟ್ವಾಽಽಕಾಶರಾಜೋಽಪಿ ಕೃತ್ವಾ ನಿಗಡಬಂಧನಮ್ ॥ 33 ॥**

ಮದನಂತರಂ = ನಾನು ಹುಟ್ಟಿದ ಮೇಲೆ (ನನ್ನ ತರುವಾಯ), ಸುಭದ್ರಾ = ಸುಭದ್ರೆಯು (ಜಾತಾ = ಜನಿಸಿದಳು). ದೇವಿ = ಎಲ್ಲೆ ಪದ್ಮಾವತಿ!, ಮೇ = ನನ್ನದು, ಮಾತೃವರ್ಣಶ್ಚ = ತಾಯಿಯ ಬಣ್ಣವು, ಚ = ಮತ್ತು, ಕೃಷ್ಣಪಕ್ಷೇ = ಕೃಷ್ಣಪಕ್ಷದಲ್ಲಿ, ಮಮ = ನನ್ನ, ಜನಿಃ = ಜನನವು (ಆಯಿತು). ।। 22 ।। ತಸ್ಮಾತ್ = ಆದುದರಿಂದ, ದೇವಿ = ಹೇ ಪದ್ಮಾವತಿ!, ಕೃಷ್ಣೇತಿ = ಕೃಷ್ಣನೆಂದು, ನಾಮಸಂಸ್ಕೃತಂ = ನಾಮಕರಣವನ್ನು, ಚಕ್ರತುಃ = ಮಾಡಿದರು, ತಸ್ಮಾತ್ = ಆದುದರಿಂದ, ವರ್ಣತಃ = ಬಣ್ಣದಿಂದಲೂ, ನಾಮತಶ್ಚಾಪಿ = ಹೆಸರಿನಿಂದಲೂ ಸಹ, ಮನೀಷಿಣಃ = ಬುದ್ಧಿವಂತರು, ಮಾಂ = ನನ್ನನ್ನು, ಕೃಷ್ಣಂ ಪ್ರಾಹುಃ = ಕೃಷ್ಣನೆಂದು ಕರೆಯುವರು (ಹೇಳುವರು). ।। 23 ।। ಪಂಡಿತನಂದನೇ = ವಿದ್ವಜ್ಜನಾನಂದಕಾರಕಳೇ (ಅಥವಾ ಪಂಡಿತನಾದ ಆಕಾಶರಾಜನ ಮಗಳೇ), ಅಖಿಲಂ ವೃತ್ತಾಂತಂ = (ನನಗೆ ಸಂಬಂಧಿಸಿದ) ಸಕಲ ಸಮಾಚಾರವೂ, ಪ್ರೋಕ್ತಂ = ಹೇಳಲ್ಪಟ್ಟಿತು. (ತ್ವಯಾ) ಶ್ರುತಂ = ನಿನ್ನಿಂದ ಕೇಳಲ್ಪಟ್ಟಿತು. ಯುಷ್ಮಾಕಂ = ನಿಮ್ಮ, ಗೋತ್ರನಾಮಕುಲಾದಿಕಂ - ಗೋತ್ರ = ನಿಮ್ಮಗೋತ್ರ, ನಾಮ = ಹೆಸರು, ಕುಲಾದಿಕಂ = ವಂಶಾದಿಗಳನ್ನು (ಕುರಿತು), ವಾರ್ತಾಂ = ಸಮಸ್ತವಿಚಾರ (ಸಮಾಚಾರ)ಗಳನ್ನು, ವಾಚ್ಯತಾಂ = ಹೇಳುವವಳಾಗು. ।। 24 ।। ಇತಿ = ಹೀಗೆ, ತೇನ = ಶ್ರೀನಿವಾಸನಿಂದ, ಸಮಾಜ್ಞಪ್ತಾ = ಹೇಳಿಸಿಕೊಂಡಂಥ, ನೃಪನಂದಿನೀ = ರಾಜನ ಮಗಳು, ಉವಾಚ = ಹೇಳಿದಳು - ಪದ್ಮಾವತ್ಯುವಾಚ = ಪದ್ಮಾವತಿಯು ಹೇಳಲಾರಂಭಿಸಿದಳು. ನಿಷಾದಾಧಿಪ = ಕಿರಾತದೊರೆಯೇ, ಮಾಂ = ನನ್ನನ್ನು, ಆಕಾಶರಾಜ ತನಯಾಂ = ಆಕಾಶರಾಜನ ಮಗಳೆಂದು, ವಿದ್ಧಿ = ತಿಳಿ. ।। 25 ।। ಕೃಷ್ಣ = ಎಲ್ಲೈ ಕೃಷ್ಣನೇ, ನಾಮ್ನಾ = ಹೆಸರಿನಿಂದ, ಪದ್ಮಾವತಿ = ನಾನು ಪದ್ಮಾವತಿಯು, ಚ = ಮತ್ತು, ಶೀತಕರಸ್ಯ ಕುಲಂ = (ನನ್ನದು) ಚಂದ್ರವಂಶವು, ಗೋತ್ರಮತ್ರೇಃ = ಅತ್ರಿಗೋತ್ರವು, ಕಿರಾತೇಂದ್ರ = ಬೇಡರನಾಯಕನೇ, ಶೀಘ್ರಂ = ಬಹುಬೇಗನೇ, ಗಚ್ಛ = ಇಲ್ಲಿಂದ ಹೊರಡು, ಇತಿ ಚ = ಹೀಗೆಂದೂ, ಅಬ್ರವೀತ್ = ಹೇಳಿದಳು.।। 26 ।।

*ಶ್ರೀನಿವಾಸ ಉವಾಚ -*

**ಕಿಮರ್ಥಂ ನಿಷ್ಠುರಂ ವಾಕ್ಯಂ ಮೃದು ಕಿಂ ನ ಪ್ರಭಾಷಸೇ ।**
**ಅನ್ನಂ ಕಾಂಕ್ಷತಿ ಯೋ ಲೋಕೇ ಯೋ ದದಾತಿ ನರೋತ್ತಮಃ ।। 27 ।।**

**ಸ ಪುಮಾನ್ಪುಣ್ಯಮಾಪ್ನೋತಿ ಜಲದೋಽಪಿ ಫಲಂ ಲಭೇತ್ ।**
**ತಥಾಽಹಂ ಕಾಮಮಾಪೇಕ್ಷ್ಯೇ ಪಾತ್ರಭೂತೋಸ್ಮಿ ಸಾಂಪ್ರತಮ್ ।। 28 ।।**

**ಸುಖಮೇಷ್ಯಸಿ ದಾನೇನ ಅಂತೇ ಸ್ವರ್ಗಂ ಗಮಿಷ್ಯಸಿ ।**
**ಆತ್ಮಾನಂ ದಿಶ ಮಹ್ಯಂ ತ್ವಂ ಕಿಂ ವೃಥಾ ನಿಷ್ಠುರೋಕ್ತಿಭಿಃ ।**
**ಸಾ ತಸ್ಯ ವಚನಂ ಶ್ರುತ್ವಾ ಕ್ರುದ್ಧಾ ತಾಮ್ರವಿಲೋಚನಾ ।। 29 ।।**

*ಪದ್ಮಾವತ್ಯುವಾಚ-*

**ಅವಾಚ್ಯಂ ವದಸೇ ಮೂಢ ಜೀವನೇಚ್ಛಾ ನ ವಿದ್ಯತೇ ।**
**ಆಕಾಶರಾಜಸ್ತ್ವಾಂ ದೃಷ್ಟ್ವಾ ಹನಿಷ್ಯತಿ ನ ಸಂಶಯಃ ।। 30 ।।**

**ಯಾವನ್ನಾಯಾತಿ ತಾವಸ್ತ್ವಂ ಗಚ್ಛ ಶೀಘ್ರಂ ಸ್ವಮಾಲಯಮ್ ।**

ಶ್ರೀನಿವಾಸ ಉವಾಚ -

**ಕಾರ್ಯಾಂತೇ ಮರಣಂ ಸೌಖ್ಯಂ ಅಕಾರ್ಯಸ್ಯ ತೃಣಂ ಜಗತ್ ॥ 31 ॥**
**ಕಥಂ ಹನ್ಯಾತ್ಸರಾಜೇಂದ್ರಸ್ತ್ವಧರ್ಮಾಭಿಮುಖೋ ಹಿ ಮಾಮ್ ।**
**ತ್ವಂ ಕನ್ಯಾಽಹಂ ವರೋ ದೇವಿ ಕೋಽತ್ರಾನ್ಯಾಯೋ ಮಹೀಸುತೇ ॥ 32 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಿದನು. ಕಿಮರ್ಥಂ = ಏತಕ್ಕಾಗಿ, ನಿಷ್ಠುರಂ = ನಿಷ್ಠೂರವಾದ, ವಚನಂ = ಮಾತನಾಡುವೆ. ಮೃದು = ಮೃದುವಾಗಿ, ಕಿಂ = ಏತಕ್ಕಾಗಿ, ನ ಪ್ರಭಾಷಸೇ = ಮಾತನಾಡುವುದಿಲ್ಲ? ಯಃ = ಯಾವನು, ಅನ್ನಂ = ಅನ್ನವನ್ನು, ಕಾಂಕ್ಷೇತಿ = ಬಯಸುವನೋ, ಅಂಥವನಿಗೆ, ಯಃ = ಯಾವ, ನರೋತ್ತಮಃ = ಮಾನವೋತ್ತಮನು, ದದಾತಿ = (ಅನ್ನವನ್ನು) ಕೊಡುವನೋ ॥ 27 ॥ ಸಃ ಪುಮಾನ್ = ಆ ಪುರುಷನು, ಪುಣ್ಯಮಾಪ್ನೋತಿ = ಪುಣ್ಯವನ್ನು (ಅನ್ನದಾನದಿಂದ ಧರ್ಮವನ್ನು) ಪಡೆಯುತ್ತಾನೆ, ಜಲದೋಽಪಿ = ನೀರುಕೊಟ್ಟವನು ಕೂಡ, ಫಲಂ = (ದಾನದಿಂದ) ಪುಣ್ಯಫಲವನ್ನು, ಲಭೇತ್ = ಹೊಂದುವನು, ತಥಾ = ಅದರಂತೆ, ಅಹಂ = ನಾನು, ಕಾಮಂ = ನಾನು ನಿನ್ನಲ್ಲಿ ಕಾಮಕ್ರೀಡೆಯನ್ನು, ಅಪೇಕ್ಷ್ಯೇ = ಬಯಸುವೆನು, ಸಾಂಪ್ರತಂ = ಪ್ರಕೃತ, ಪಾತ್ರಭೂತೋಽಸ್ಮಿ = ಅದಕ್ಕೆ ಪಾತ್ರನೂ ಆಗಿದ್ದೇನೆ. ॥ 28 ॥ ದಾನೇನ = ಪ್ರೇಮದಾನದಿಂದ, ಸುಖಮೇಷ್ಯಸಿ = (ನೀನು) ಸುಖವನ್ನು ಪಡೆಯುತ್ತೀಯೆ. ಅಂತೇ = ಕೊನೆಗೆ, ಸ್ವರ್ಗಂ ಗಮಿಷ್ಯಸಿ = ಸ್ವರ್ಗಲೋಕಕ್ಕೆ ಹೋಗುತ್ತಿಯೆ. ವೃಥಾ = ವ್ಯರ್ಥವಾಗಿ, ನಿಷ್ಠುರೋಕ್ತಿಭಿಃ = ನಿಷ್ಠೂರವಾದ ಮಾತುಗಳಿಂದ, ಕಿಂ = ಏನು ಪ್ರಯೋಜನ? ತ್ವಂ = ನೀನು, ಆತ್ಮಾನಂ = ನಿನ್ನನ್ನು, ದಿಶ = ನನಗೆ ಕೊಡು. ತಸ್ಯ = ಶ್ರೀನಿವಾಸನ, ವಚನಂ = ಮಾತನ್ನು, ಶ್ರುತ್ವಾ = ಕೇಳಿದವಳಾಗಿ, ಸಾ = ಆ ಪದ್ಮಾವತಿಯು, ಕ್ರುದ್ಧಾ = ಸಿಟ್ಟಿನಿಂದ (ಕುಪಿತಳಾಗಿ), ತಾಮ್ರವಿಲೋಚನಾ = ಕೆಂಗಣ್ಣು ಮಾಡಿಕೊಂಡವಳಾಗಿ ॥ 26 ॥ ಮೂಢ = ವಿವೇಕವಿಲ್ಲದವನೇ, ಅವಾಚ್ಯ = ಹೇಳಬಾರದ್ದನ್ನು, ವದಸೇ = ಹೇಳುತ್ತಿದ್ದೀಯೆ! ಜೀವನೇಚ್ಛಾ = ಬದುಕಬೇಕೆಂಬ ಆಶೆಯು (ಇಚ್ಛೆಯು), ನ ವಿದ್ಯತೇ = ಇಲ್ಲವೇನು? ತ್ವಾಂ = ನಿನ್ನನ್ನು, ದೃಷ್ಟ್ವಾ = (ಅಂತಃಪುರದ ಸ್ತ್ರೀಯರಿರುವ ಈ ಸ್ಥಳದಲ್ಲಿ) ನೋಡಿ, ಆಕಾಶರಾಜಃ = ಆಕಾಶರಾಜನು, ಹನಿಷ್ಯತಿ = ಸಂಹರಿಸುತ್ತಾನೆ. ನ ಸಂಶಯಃ = ಇದರಲ್ಲಿ ಸಂದೇಹವಿಲ್ಲ ॥ 30 ॥ ಯಾವತ್ = ಎಲ್ಲಿಯವರೆವಿಗೆ, ನಾಯಾತಿ = ಆಕಾಶರಾಜನು ಬರುವುದಿಲ್ಲವೋ, ತಾವತ್ = ಅಷ್ಟರಲ್ಲಿ, ತ್ವಂ = ನೀನು, ಶೀಘ್ರಂ = ಬೇಗನೇ, ಸ್ವಮಾಲಯಂ = ನಿನ್ನ ಮನೆಯನ್ನು, ಕುರಿತು, ಗಚ್ಛ = ಹೊರಟುಹೋಗು, ಶ್ರೀನಿವಾಸ ಉವಾಚ = ಶ್ರೀನಿವಾಸನು ಹೀಗೆ ಉತ್ತರಿಸಿದನು, ಕಾರ್ಯಾಂತೇ = ಕಾರ್ಯವಾದಮೇಲೆ, ಮರಣಂ = ಮರಣವು, ಸೌಖ್ಯಂ = ಸುಖಕರವು, ಅಕಾರ್ಯಸ್ಯ = ಕಾರ್ಯವು ಸಫಲವಾಗದಿದ್ದವನಿಗೆ, ಜಗತ್ = ಪ್ರಪಂಚವು, ತೃಣಂ = ತೃಣಸಮಾನವು (ಅಂದರೆ ಹುಲ್ಲುಕಡ್ಡಿಗೆ ಸಮಾನವು) ॥ 31 ॥ ಸಃ = ಆ, ರಾಜೇಂದ್ರಃ = ಆಕಾಶರಾಜನು, ಅಧರ್ಮಾಭಿಮುಖಃ = ಅಧರ್ಮಕಾರ್ಯಾಸಕ್ತನಾಗಿ, ಮಾಂ = ನನ್ನನ್ನು, ಕಥಂ ಹನ್ಯಾತ್ = ಹೇಗೆ ಸಂಹರಿಸುವನು?, ಹಿ = ಪ್ರಸಿದ್ಧವು. ದೇವಿ = ಎಲೈ ಪದ್ಮಾವತಿ, ತ್ವಂ = ನೀನು, ಕನ್ಯಾ = ವಿವಾಹಯೋಗ್ಯಳಾದ ಕನ್ಯೆಯು, ಅಹಂ = ನಾನು, ವರಃ = ವರನು, ಮಹೀಸುತೇ = ಭೂಮಿಕುಮಾರಿ, ಅತ್ರ = ಈ ವಿಚಾರದಲ್ಲಿ (ಇದರಲ್ಲಿ), ಅನ್ಯಾಯಃ ಕಃ = ಅನ್ಯಾಯವಾದುದು (ನ್ಯಾಯವಲ್ಲದ್ದು) ಏನಿದೆ? ॥ 32 ॥

ಪದ್ಮಾವತ್ಯುವಾಚ-

**ಶೃಣು ಮೂಢ ನ ಜಾನಾಸಿ ಬಾಲಭಾವೇನ ಕಿಂ ವೃಥಾ ।**
**ತ್ವಾಂ ದೃಷ್ಟ್ವಾಽಽಕಾಶರಾಜೋಽಪಿ ಕೃತ್ವಾ ನಿಗಡಬಂಧನಮ್ ॥ 33 ॥**

**ನಿಗಡೇ ಬಧ್ಯಸೇ ಮೂರ್ಖ ಭವಿಷ್ಯಂ ಪ್ರವದಾಮ್ಯಹಮ್ ।**

*ಶ್ರೀನಿವಾಸ ಉವಾಚ -*

**ನಿಶ್ಚಿತ್ಯ ಮರಣಂ ದೇವೋ ರಂತುಕಾಮೋ ಜಗದ್ಗುರುಃ ॥ 34 ॥**

**ಜಾತಸ್ಯ ಮರಣಂ ನಿತ್ಯಂ ಪೂರ್ವಕರ್ಮಫಲಾನುಗಮ್ ।**
**ಆಕಾಶರಾಜೋ ಧರ್ಮಾತ್ಮಾ ಕಥಂ ಹನ್ಯಾದನಾಗಸಮ್ ॥ 35 ॥**

*ಪದ್ಮಾವತ್ಯುವಾಚ-*

**ಗೌರವಂ ತೇ ನಿಷಾದೇಂದ್ರ ನೃಪಸ್ಯಾಸ್ಯ ಹರೇಸ್ತಥಾ ।**
**ವರಾಹಸ್ಯಾಥ ರಂಗಸ್ಯ ವೇಂಕಟಾಚಲವಾಸಿನಃ ॥ 36 ॥**

**ಸಂರಕ್ಷಸ್ವ ಮಹಾಬಾಹೋ ಸುಖಂ ಗಚ್ಛ ಸ್ವಮಾಲಯಮ್ ।**
**ಇತ್ಯುಕ್ತೋऽಪಿ ತಥಾ ದೇವ್ಯಾ ನಿಷಾದೇಂದ್ರಾಕೃತಿರ್ಹರಿಃ ॥ 37 ॥**

**ಹಯಮಗ್ರೇ ಕೃತಂ ವೀಕ್ಷ್ಯ ಸಾ ಬಾಲಾ ವಾಕ್ಯಮಬ್ರವೀತ್ ।**

*ಪದ್ಮಾವತ್ಯುವಾಚ-*

**ತ್ಯಕ್ತ್ವಾ ಚ ಪಿತರೌ ಬಂಧೂನ್ ಭ್ರಾತೃಮುಖ್ಯಾನ್ವನೇಚರ ॥ 38 ॥**

**ಅನಾಥೋ ಮ್ರಿಯಸೇ ವ್ಯರ್ಥಂ ಕಿಮರ್ಥಂ ಕಾಕಭಾಜನಮ್ ।**
**ಇತಿ ತಸ್ಯಾ ವಚಃ ಶ್ರುತ್ವಾ ಊಚೇ ತಾಂ ವಾರಿಜೇಕ್ಷಣಃ ॥ 39 ॥**

*ಶ್ರೀನಿವಾಸ ಉವಾಚ -*

**ವಿಧಿನಾ ಲಿಖಿತಂ ಕರ್ಮ ನ ತದ್ವ್ಯರ್ಥಂ ಭವಿಷ್ಯತಿ ।**
**ಜಯೋವಾಪಜಯೋ ವಾಸ್ಯಾತ್ತ್ವಯಿ ಭೋಗಂ ಕರೋಮ್ಯಹಮ್ ॥ 40 ॥**

**ಇತ್ಯುಕ್ತಾ ಕೋಪತಾಮ್ರಾಕ್ಷೀ ಸಖೀಭಿಃ ಪರಿವಾರಿತಾ ।**
**ತರ್ಜಯಂತೀ ಜಗದ್ಯೋನಿಂ ಶಿಲಾಪಾಣಿರುಪಾಗಮತ್ ॥ 41 ॥**

**ತಾಡಯಾಮಾಸ ಗೋವಿಂದಂ ಶಿಲೌಘೈಃ ಶೀಘ್ರವತ್ತರೈಃ ।**
**ತಾಡ್ಯಮಾನಶ್ಶಿಲಾವರ್ಷೈಃ ನೃಪತದ್ಧಯರಾಟ್ ಸ್ವಯಮ್ ॥ 42 ॥**

ಪದ್ಮಾವತ್ಯುವಾಚ = ಪದ್ಮಾವತಿಯು ಮಾತನಾಡಿದಳು. ಮೂಢ = ಬುದ್ಧಿಯಿಲ್ಲದವನೇ, ಶೃಣು = (ನಾನು ಹೇಳುವುದನ್ನು) ಕೇಳು. ವೃಥಾ = ವ್ಯರ್ಥವಾಗಿ, ಬಾಲಭಾವೇನ = ಹುಡುಗಾಟದಿಂದ, ಕಿಂ = ಏನು ಪ್ರಯೋಜನ?, ನ ಜಾನಾಸಿ = (ಮುಂದಾಗುವುದನ್ನು) ತಿಳಿಯದವನಾಗಿದ್ದೀಯೆ, ಆಕಾಶರಾಜೋऽಪಿ = ಆಕಾಶರಾಜನೂ ಸಹ, ತ್ವಾಂ =

ನಿನ್ನನ್ನು, ದೃಷ್ಟ್ವಾ = ನೋಡಿ, ನಿಗಡಬಂಧನಂ = ಬೇಡಿಯನ್ನು ತೊಡಿಸುವನು ॥ 33 ॥ ನಿಗಡೇ = ಕಾರಾಗೃಹದಲ್ಲಿ ಬಧ್ಯಸೇ = ಬಂಧಿಸಲ್ಪಡುತ್ತೀಯೆ, ಮೂರ್ಖ = ವಿವೇಕವಿಲ್ಲದವನೇ, ಅಹಂ = ನಾನು, ಭವಿಷ್ಯಂ = ಮುಂದಾಗುವುದನ್ನು, ಪ್ರವದಾಮಿ = ಹೇಳುವೆನು (ಹೇಳುತ್ತಿದ್ದೇನೆ). ಮರಣಂ = ಮೃತ್ಯುವನ್ನು, ನಿಶ್ಚಿತ್ಯ = ನಿಶ್ಚಯಿಸಿದವನಾಗಿ, ಜಗದ್ಗುರುಃ = ಜಗತ್ತಿಗೆ ಗುರುವಾದ ಶ್ರೀನಿವಾಸನು, ರಂತು ಕಾಮಃ = ಪದ್ಮಾವತಿಯೊಡನೆ ಕ್ರೀಡಿಸಲು (ಇಚ್ಛಿಸಿ), ಶ್ರೀನಿವಾಸಃ = ಶ್ರೀನಿವಾಸನು, ಉವಾಚ = ಹೇಳಿದನು ॥ 34 ॥ ಜಾತಸ್ಯ = ಹುಟ್ಟಿದವನಿಗೆ, ಪೂರ್ವಕರ್ಮಫಲಾನುಗಂ = ಪೂರ್ವಜನ್ಮದಲ್ಲಿ ಮಾಡಿದಕರ್ಮದ ಫಲಾನುಸಾರವಾಗಿ, ಮರಣಂ = ಮರಣವು, ನಿತ್ಯಂ = ನಿತ್ಯವಾದುದು (ಉಂಟಾಗಿಯೇ ತೀರುವುದು), ಧರ್ಮಾತ್ಮಾ = ಧರ್ಮಿಷ್ಠನಾದ, ಆಕಾಶರಾಜಃ = ಆಕಾಶರಾಜನು, ಅನಾಗಸಂ = ನಿರಪರಾಧಿಯನ್ನು, ಕಥಂ = ಹೇಗೆ, ಹನ್ಯಾತ್ = ಕೊಂದಾನು? ॥ 35 ॥ ಪದ್ಮಾವತ್ಯುವಾಚ = ಪದ್ಮಾವತಿಯು ಮಾತನಾಡಿದಳು, ನಿಷಾದೇಂದ್ರ = ಬೇಡರದೊರೆಯೇ (ಕಿರಾತ ಶ್ರೇಷ್ಠನೇ), ತೇ ಗೌರವಂ = ನಿನ್ನ ಮೇಲೆ ಆಣೆ (ಗೌರವ), ಅಸ್ಯ ನೃಪಸ್ಯ = ಈ ಆಕಾಶರಾಜನ ಮೇಲೆ, ಗೌರವಂ = ಆಣೆಯು, ತಥಾ = ಅದರಂತೆಯೇ ಹರೇಃ ಗೌರವಂ = ಶ್ರೀಹರಿಯ ಮೇಲಾಣೆ, ಅಥ = ನಂತರ, ವೇಂಕಟಾಚಲವಾಸಿನಃ = ವೇಂಕಟಗಿರಿವಾಸಿಯಾದ, ವರಾಹಸ್ಯ = ವರಾಹದೇವನ; ರಂಗಸ್ಯ = ರಂಗನಾಥನ ಮೇಲೆ, ಗೌರವಂ = ಆಣೆಯು ॥ 36 ॥ ಗೌರವಂ = ಇವರೆಲ್ಲರ ಮೇಲೆ ಆಣೆಯಿಟ್ಟಿದ್ದೇನೆ, ಸಂರಕ್ಷಸ್ವ = ಅದನ್ನು ಕಾಪಾಡಿಕೊಳ್ಳುವವನಾಗು. ನಿನ್ನ ಗೌರವ, ಆಕಾಶರಾಜನ ಗೌರವ, ಶ್ರೀಹರಿಯಗೌರವ, ವೇಂಕಟಾಚಲಪತಿಯ ಶ್ರೀವರಾಹದೇವರ ಗೌರವ, ರಂಗನಾಥಸ್ವಾಮಿಯ ಗೌರವ ಇವುಗಳನ್ನು ಅರಿತು ಅವರನ್ನು ರಕ್ಷಿಸು- ಎಂದೂ ಭಾವ. ಮಹಾಬಾಹೋ = ನೀಳತೋಳಿನ ಕಿರಾತನೇ, ಸ್ವಮಾಲಯಂ (ಪ್ರತಿ) = ನಿನ್ನ ಗೃಹವನ್ನು ಕುರಿತು, ಸುಖಂಗಚ್ಛ = ಸುಖವಾಗಿ ಹೋಗುವವನಾಗು; ದೇವ್ಯಾ = ಪದ್ಮಾವತಿಯಿಂದ, ಇತ್ಯುಕ್ತಃ = ಇಂತುಹೇಳಲ್ಪಟ್ಟವನಾದರೂ ನಿಷಾದೇಂದ್ರಾಕೃತಿಃ = ಕಿರಾತಶ್ರೇಷ್ಠನ ಆಕಾರವುಳ್ಳ, ಹರಿಃ = ಶ್ರೀನಿವಾಸನು, ತದ್ವಾಕ್ಯಂ = ಪದ್ಮಾವತಿಯ ವಚನವನ್ನು ನಿರಾಕೃತ್ಯ ಚ = ನಿರಾಕರಿಸಿದವನಾಗಿ, ಹಯಸ್ಥಃ = ಕುದುರೆಯಮೇಲೆ ಕುಳಿತಂತೆಯೇ, ಪುನರಾಪತತ್ = ಮುಂದುವರಿದು ಹೋದನು ॥ 37 ॥ ಹಯಂ = ಕುದುರೆಯನ್ನು, ಅಗ್ರೇ = ಮುಂದೆ, ಕೃತಂ = ಮಾಡಿದ್ದನ್ನು, ದೃಷ್ಟ್ವಾ = ನೋಡಿ, ಸಾ ಬಾಲಾ = ಆ ಕನ್ಯೆಯಾದ ಪದ್ಮಾವತಿಯು, ವಾಕ್ಯಮಬ್ರವೀತ್ = ಮಾತನಾಡಿದಳು. ಪದ್ಮಾವತ್ಯುವಾಚ = ಪದ್ಮಾವತಿಯು ಹೇಳುತ್ತಲಿದ್ದಾಳೆ – ವನೇಚರ = ಕಾಡುಮನುಷ್ಯನೇ (ಕಾಡಿನಲ್ಲಿ ಅಲೆಯುವವನೇ), ಪಿತರೌ = ನಿನ್ನ ತಂದೆತಾಯಿಗಳನ್ನು, ಚ = ಮತ್ತು ಬಂಧೂನ್ = ಬಂಧುಗಳನ್ನು, ಭ್ರಾತೃಮುಖ್ಯಾನ್ = ಸಹೋದರ ಮೊದಲಾದವರನ್ನು, ತ್ಯಕ್ತ್ವಾ = ಬಿಟ್ಟು ॥ 38 ॥ ಅನಾಥೋ = ಅನಾಥನಾಗಿ (ರಕ್ಷಕರಿಲ್ಲದವನಾಗಿ), ಕಾಕಭಾಜನಂ = ಕಾಗೆಗಳಿಗೆ ಆಹಾರವಾಗಿ, ವ್ಯರ್ಥಂ = ವ್ಯರ್ಥವಾಗಿ (ಕೆಲಸಕ್ಕೆ ಬಾರದವನಾಗಿ), ಕಿಮರ್ಥಂ = ಏತಕ್ಕಾಗಿ, ಮ್ರಿಯಸೇ = ಸಾಯುತ್ತೀಯೆ?, ಇತಿ = ಇಂತು, ತಸ್ಯಾಃ = ಪದ್ಮಾವತಿಯ, ವಚಃ = ಮಾತನ್ನು, ಶ್ರುತ್ವಾ = ಕೇಳಿ, ವಾರಿಜೇಕ್ಷಣಃ = ತಾವರೆಗಣ್ಣನ ಶ್ರೀನಿವಾಸನು, ತಾಂ = ಅವಳನ್ನು ಕುರಿತು, ಊಚೇ = ಹೇಳಿದನು ॥ 39 ॥ ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಹತ್ತಿದನು, ವಿಧಿನಾ = ಬ್ರಹ್ಮನಿಂದ, ಲಿಖಿತಂ = ಬರೆಯಲ್ಪಟ್ಟ, ಕರ್ಮ = ಕರ್ಮವು, ತತ್ = ಅದು, ವ್ಯರ್ಥಂ = ವ್ಯರ್ಥವು, ನಭವಿಷ್ಯತಿ = ಆಗುವುದಿಲ್ಲ, ಜಯಃ ವಾ = ಜಯವೋ, ಅಪಜಯೋವಾ = ಅಪಜಯವೋ, ಸ್ಯಾತ್ = ಆಗಲಿ, ಅಹಂ = ನಾನು, ತ್ವಯಿ = ನಿನ್ನಲ್ಲಿ, ಭೋಗಂ = ಭೋಗವನ್ನು, ಕರೋಮಿ = ಮಾಡುತ್ತೇನೆ ॥ 40 ॥ ಇತ್ಯುಕ್ತಾ = ಹೀಗೆ ಕೇಳಲ್ಪಟ್ಟವಳಾದ, ಕೋಪತಾಮ್ರಾಕ್ಷೀ = ಸಿಟ್ಟಿನಿಂದ ಕೆಂಪಾದಕಣ್ಣುಳ್ಳವಳಾಗಿ, ಸಖೀಭಿಃ = ಗೆಳತಿಯರಿಂದ, ಪರಿವಾರಿತಾ = ಕೂಡಿದವಳಾಗಿ (ಸೇರಿಕೊಂಡು), ಜನದ್ಯೋನಿಂ = ಜಗತ್ಕಾರಣನಾದ ಶ್ರೀಹರಿಯನ್ನು, ತರ್ಜಯಂತೀ = ಭರ್ಜನಮಾಡುತ್ತಾ (ನಿಂದಿಸುತ್ತಾ), ಶಿಲಾಪಾಣಿಃ = ಕೈಯಲ್ಲಿ ಕಲ್ಲುಹಿಡಿದವಳಾಗಿ, ಉಪಾಗಮತ್ = ಮುಂದೆ ಹೋದಳು ॥ 41 ॥ ಗೋವಿಂದಂ = ಶ್ರೀನಿವಾಸನನ್ನು, ಶೀಘ್ರುವತ್ತರೈಃ =

ಅತಿಬಿರುಸಾದ, ಶಿಲೋಘೈಃ = ಕಲ್ಲುಗಳ ಸಮೂಹದಿಂದ, ತಾಡಯಾಮಾಸ = ಹೊಡೆದಳು. ಶಿಲಾವರ್ಷೈಃ = ಕಲ್ಲಿನ ಮಳೆಯಿಂದ, ತಾಡ್ಯಮಾನಃ = ಹೊಡೆಯಿಸಿಕೊಳ್ಳುತ್ತಿರುವ, ತತ್ = ಆ, ಹಯಾರಾಟ್ = ಶ್ರೇಷ್ಠ ಕುದುರೆಯು, ಸ್ವಯಂ = ತಾನಾಗಿ, ನ್ಯಪತತ್ = ಧರೆಗುರುಳಿತು ॥ 42 ॥

**ತ್ಯಕ್ತಾಸೂಂ ಸ್ವಹಯಂ ದೃಷ್ಟ್ವಾ ಮುಕ್ತಕೇಶೋ ಮುಹುರ್ಮುಹುಃ ।**
**ಪಶ್ಯನ್ಪಶ್ಯನ್ ದಿಶಸ್ಸರ್ವಾ ಅಭ್ರಮದ್ವಿಭ್ರಮನ್ನಿವ ॥ 43 ॥**

**ಅದ್ಯ ಮೇ ಸಂಕಟಂ ಪ್ರಾಪ್ತೋ ಸ್ವಾಪರಾಧಾನುಸಾರತಃ ।**
**ಇತ್ಯುಚ್ಚರನ್ ರಮಾಕಾಂತೋ ಜಗಾಮೋತ್ತರ ದಿಙ್ಮುಖಃ ॥ 44 ॥**

ಸ್ವಹಯಂ = ತನ್ನ ಕುದುರೆಯು, ತ್ಯಕ್ತಾಸುಂ = ಪ್ರಾಣಬಿಟ್ಟಿದ್ದನ್ನು, ದೃಷ್ಟ್ವಾ = ನೋಡಿ, ಮುಕ್ತಕೇಶಃ = ಬಿಚ್ಚಿದ ಕೇಶವುಳ್ಳವನಾಗಿ, ಮುಹುರ್ಮುಹುಃ = ಮತ್ತೆ ಮತ್ತೆ, ಸರ್ವಾದಿಶಃ = ಎಲ್ಲ ದಿಕ್ಕುಗಳನ್ನು, ಪಶ್ಯನ್ ಪಶ್ಯನ್ = ನೋಡಿ ನೋಡುತ್ತಾ, ವಿಭ್ರಮನ್ನಿವ = ಭ್ರಮಾಧೀನನಾದವನಂತೆ (ಹುಚ್ಚನಂತೆ), ಅಬ್ರಮತ್ = ಅಲೆದಾಡಿದನು ॥ 43 ॥ ಮೇ = ನನಗೆ, ಅದ್ಯ = ಈಗ, ಸ್ವಾಪರಾಧಾನುಸಾರತಃ = ಸ್ವಯಂಕೃತಾಪರಾಧದಿಂದ, ಸಂಕಟಂ ಪ್ರಾಪ್ತಂ = ಸಂಕಟವು ಬಂದೊದಗಿತು, ಇತಿ = ಹೀಗೆ, ಉಚ್ಚರನ್ = ಗಟ್ಟಿಯಾಗಿ ಹೇಳುತ್ತಾ, ರಮಾಕಾಂತಃ = ಲಕ್ಷ್ಮೀರಮಣನಾದ ಶ್ರೀನಿವಾಸನು, ಉತ್ತರದಿಙ್ಮುಖಃ = ಉತ್ತರದಿಕ್ಕಿಗೆ ಅಭಿಮುಖವಾಗಿ, ಜಗಾಮ = ಹೊರಟು ಹೋದನು. ॥ 44 ॥

**ಆರುಹ್ಯ ಸೋಪಾನಮನಾಮಯೋ ವಿಭುಃ**
**ವಿಡಂಬಯನ್ ಲೌಕಿಕಮಾಪ ಶಯ್ಯಾಮ್ ।**
**ಪ್ರಾಪ್ಯಾಧಿಮಾನಂದಯುತೋಽಪಿ ಮಾಧವೋ**
**ಯಥಾ ಯುಗಾಂತೇ ವಟಪತ್ರಶಾಯೀ ॥ 45 ॥**

ಅನಾಮಯಃ = ಬಾಧೆಯಿಲ್ಲದವನಾದ, ವಿಭುಃ = ಸಮರ್ಥನಾದ (ಪ್ರಭುವಾದ) ಶ್ರೀನಿವಾಸನು, ಸೋಪಾನಂ = ಬೆಟ್ಟದ ಮೆಟ್ಟಲುಗಳನ್ನು, ಆರುಹ್ಯ = ಹತ್ತಿಹೋಗಿ (ಏರಿದವನಾಗಿ), ಲೌಕಿಕಂ = ಮಾನವಲೋಕದವನಂತೆ, ವಿಡಂಬಯನ್ = ನಟಿಸುತ್ತಾ, ಶಯ್ಯಾಂ = ಹಾಸಿಗೆಯನ್ನು, ಪ್ರಾಪ್ಯ = ಹೊಂದಿ, ಅಧಿಮಾನಂದಯುತೋಽಪಿ = ಅತ್ಯಂತ ಆನಂದ ಪೂರ್ಣನಾಗಿದ್ದರೂ, ಮಾಧವಃ = ಶ್ರೀಪತಿಯಾದ ಶ್ರೀನಿವಾಸನು, ಯುಗಾಂತೇ = ಪ್ರಳಯ ಕಾಲದಲ್ಲಿ, ಯಥಾ ವಟಪತ್ರಶಾಯೀ = ಆಲದೆಲೆಯ ಮೇಲೆ ಮಲಗಿದ ಶ್ರೀಹರಿಯಂತೆ, ಶಯ್ಯಾಂ ಆಪ = ಹಾಸಿಗೆಯ ಮೇಲೆ ಪವಡಿಸಿದನು. ॥ 45 ॥

## ಕಥಾಸಾರ

ನೈಮಿಷಾರಣ್ಯದಲ್ಲಿ ಶ್ರೀಸೂತ ಮುನಿಗಳು ಶೌನಕಾದಿ ಋಷಿಗಳಿಗೆ ಶ್ರೀವೇಂಕಟೇಶ ಮಹಾತ್ಮ್ಯೆಯ ಕಥೆಯನ್ನು ಹೇಳುತ್ತಾ ಮುಂದುವರೆದು ಹೀಗೆ ಮುಂದಿನ ಕಥಾಭಾಗವನ್ನು ಹೇಳಲಾರಂಭಿಸಿದರು:-

''ಪ್ರಿಯ ಋಷಿಮುನಿಗಳೇ! ಈವರೆಗೆ ಪದ್ಮಾವತಿಯ ಅವತಾರ ವಿಚಾರವನ್ನು, ವಿಶೇಷ ರೀತಿಯಿಂದ ವಸುಧಾನನ ಜನನ ವಿಚಾರವನ್ನು ನಿಮಗೆ ತಿಳಿಸಿದೆನು. ಈಗ ಅತಿಪುಣ್ಯಕರವಾದ ಪದ್ಮಾವತಿಯ ವಿವಾಹಮಹೋತ್ಸವ ಸಂಬಂಧವಾದ ಮಂಗಳ ಚರಿತೆಯನ್ನು ಅಂಗಸಹಿತವಾಗಿ ನಿರೂಪಿಸುತ್ತೇನೆ. ಶ್ರದ್ಧೆಯಿಂದ ಆಲಿಸಿರಿ.''

ಶ್ರೀನಿವಾಸನು ಗಜರಾಜನನ್ನು ಬೆನ್ನಟ್ಟಿ ಬಂದಾಗ ಆ ಗಜವು ಶ್ರೀಹರಿಗೆ ನಮಿಸಿ ಹೋದಮೇಲೆ ಶ್ರೀನಿವಾಸನು ಆ ವನದಲ್ಲಿ ಕನ್ನಿಕೆಯೋರ್ವಳನ್ನು ಕಂಡನೆಂದು ಹೇಳಿದೆನಷ್ಟೆ? ಶ್ರೀನಿವಾಸನು ಸುಗಂಧಮಯ ಚಂದನವನ್ನು ಪೂಸಿಕೊಂಡಿದ್ದನು. ಆದ್ದರಿಂದ ಅವನ ವಕ್ಷಃಸ್ಥಳವು ಅರುಣವರ್ಣದಿಂದ ಮನೋಹರವಾಗಿ ಬೆಡಗುಗೊಂಡಿದ್ದಿತು. ಆದೇತಾನೇ ಉದಯಿಸುತ್ತಿರುವ ಸೂರ್ಯನ ಕಾಂತಿಯಂತೆ ಕಂಗೊಳಿಸುತ್ತಿದ್ದ ಶ್ರೀನಿವಾಸನು, ಬೇಗ ಕುದುರೆಯನ್ನೋಡಿಸುತ್ತಾ ಉತ್ತಮರಾದ ಆ ಕನ್ನಿಕೆಯರ ಬಳಿಗೆ ಬಂದನು. ಪದ್ಮಾವತಿ ಮತ್ತು ಅವಳ ಸಖಿಯರು ಗಜರಾಜನು ಗರ್ಜಿಸುತ್ತಾ ಓಡಿ ಹೋಗುತ್ತಿರುವಾಗ ಅದರ ಭಯದಿಂದ ಗಿಡಬಳ್ಳಿಗಳ ಹಿಂದೆ ಅಡಗಿದ್ದವರು, ತಮ್ಮ ಕಣ್ಣು ರೆಪ್ಪೆಗಳನ್ನು ಮುಚ್ಚಿಕೊಂಡು ಗುಂಪಾಗಿ ಸೇರಿ ಆ ದೃಶ್ಯವನ್ನು ನೋಡುತ್ತಿದ್ದರು. ಅವರು ಮರ ಬಳ್ಳಿಗಳ ಸಂದಿನಿಂದ ಮತ್ತೆ ಮತ್ತೆ ನೋಡುತ್ತಿದ್ದರು. ಆನೆಯು ಹೊರಟುಹೋದ ಮೇಲೆ ಉದಯಿಸುವ ಬಾಲ ಭಾಸ್ಕರನ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ; ರತ್ನಾಭರಣಗಳಿಂದ ಅಲಂಕೃತನಾದ; ಮನ್ಮಥಾಕಾರನಾದ ಪುರುಷನೋರ್ವನಿಂದ ಸಹಿತವಾದ, ಒಂದು ಶ್ರೇಷ್ಠವಾದ ಕುದುರೆಯನ್ನು ಕಂಡರು. ಆ ಎಲ್ಲ ಕನ್ನಿಕೆಯರು ಕುದುರೆಯ ಮೇಲೆ ಕುಳಿತಿರುವ ಶ್ರೀನಿವಾಸನನ್ನು ಅವಲೋಕಿಸಿ ಹೆದರಿಕೆ-ಜೊತೆಗೆ ವಿಸ್ಮಯದಿಂದ ತಮ್ಮ ಕರಗಳನ್ನು ಸಂಪುಟದಂತೆ ಮಾಡಿ ಅತ್ತಿತ್ತ ಸುತ್ತುತ್ತ ಭಯಾತುರರಾಗಿ ಒಬ್ಬರಿಗೊಬ್ಬರು ಹೀಗೆ ಮಾತನಾಡಿಕೊಂಡರು. 'ವರಾರೋಹೆ! ಕಮಲನಯನೇ! ಗೆಳತಿ! ಇಲ್ಲಿಗೆ ಬಂದಿರುವವನಾರು? ಕಿರಾತರೂಪಿಯಾದ ಈ ಪುರುಷನನ್ನು ನಾವು ಹಿಂದೆಂದೂ ನೋಡಿರಲಿಲ್ಲ, ಗೆಳತಿ! ಕುದುರೆಯನ್ನೇರಿ ಬರುತ್ತಿರುವ ಇವನ್ಯಾರಾಗಿರಬಹುದು? ಸಖಿಯರ ಮಾತು ಕೇಳಿದ, ಮಂಗಳಾಂಗಿಯಾದ ಪದ್ಮಾವತಿಯು ಸಖಿಯರ ಮುಂದೆ ನಿಂತು ಮೆಲ್ಲ ಮೆಲ್ಲನೆ ಹೀಗೆ ಹೇಳಿದಳು-

''ಗೆಳತಿಯರೇ! ಆ ಪುರುಷನಾರು? ಅವನ ತಂದೆ ತಾಯಿಗಳಾರು? ಬಾಂಧವರಾರು? ಆತನ ಕುಲವಾವುದು? ವಾಸಿಸುವ ದೇಶವಾವುದು? ಅವನ ಹೆಸರು, ಗೋತ್ರಾದಿಗಳೇನು? ಈ ಎಲ್ಲ ವಿಚಾರವನ್ನೂ ಅವನಲ್ಲಿ ಕೇಳಿರಿ''. ಪದ್ಮಾವತಿಯ ಆಣತಿಯಂತೆ ಆ ಕನ್ಯೆಯರು ಶ್ರೀನಿವಾಸನನ್ನು ನೋಡಿ, ''ನೀನಾರು, ಯಾರು ನೀನು?, ಎಲೈ ನಿಷಾದಾಧಿಪತಿಯೇ! ನೀನಾವ ಕಾರಣಕ್ಕಾಗಿ ಇಲ್ಲಿಗೆ ಬಂದಿರುವೆ? ನಿನಗಿಲ್ಲೇನು ಕೆಲಸ? ಹೇಳು, ಇಲ್ಲಿ ಪುರುಷರಾರೂ ಇಲ್ಲ; ನೀನಿಲ್ಲಿರಬಾರದು, ಬೇಗ ಹೊರಟುಹೋಗು'' ಎಂದು ಹೇಳಿದರು. ಅವರು ಮಾತನ್ನು ಕೇಳಿ ಶ್ರೀನಿವಾಸನು ''ಉತ್ತಮರಾದ ಕನ್ಯೆಯರೇ, ನನಗೆ ರಾಜಪುತ್ರಿಯ ಬಳಿ ಕೆಲಸವಿದೆ'', ಎಂದನು. ಆಗ ಆ ಸಖಿಯರು ''ಅಯ್ಯಾ, ನಿನಗೆ ಇಲ್ಲೇನು ಕೆಲಸ? ನಿನ್ನ ಮನದ ಇಂಗಿತವೇನು? ಹೇಳು. ನಿನ್ನ ವಾಸಸ್ಥಳವಾವುದು? ನಿನ್ನ ಶುಭನಾಮವೇನು? ನಿನ್ನ ತಾಯಿ ತಂದೆಗಳಾರು? ಸಹೋದರರಾರು, ತಂಗಿಯು ಇರುವಳೇ? ಅವಳ ಹೆಸರೇನು, ನಿನ್ನ ವಂಶ-ಗೋತ್ರಾದಿಗಳೇನೆಂಬುದನ್ನು ಹೇಳು'' ಎಂದರು.

ಜಗದೀಶ್ವರನಾದ ಶ್ರೀನಿವಾಸನು ಅವರ ಮಾತು ಕೇಳಿ, ಮುಗುಳು ನಗೆ ಬೀರಿ ''ನಾನು ಬಂದ ಮುಖ್ಯ ಕೆಲಸವೆಂದರೆ ವಿವಾಹಯೋಗ್ಯಳಾದ ಕನ್ಯಾಪೇಕ್ಷೆ! ಉಳಿದ ವಿಚಾರವನ್ನು ರಾಜಕುಮಾರಿಯ ಮುಂದೆಯೇ ಹೇಳುವೆನು'' ಎಂದು ಹೇಳಿ, ಆ ಪದ್ಮಾವತಿಯತ್ತ ತಿರುಗಿ ಇಂತು ನಿರೂಪಿಸಿದನು- ''ದೇವಿ! ಪೂರ್ವಿಕರು ನಾವು ಚಂದ್ರವಂಶದವರೆಂದು ಹೇಳುವರು. ವಸುದೇವನು ನನ್ನ ಜನಕನು, ತಾಯಿಯು ದೇವಕೀದೇವಿ. ಬಲರಾಮನು ನನ್ನ ಅಣ್ಣನು, ನನ್ನ ತಂಗಿಯು ಸುಭದ್ರೆ!. ಎಲೈ ದೇವಿಯರೇ, ಪೃಥಾಪುತ್ರನಾದ ಅರ್ಜುನನು ನನ್ನ ಭಾವಮೈದುನನು. ಪಾಂಡವರು ನನ್ನ ಬಂಧುಗಳು, ಮಹನೀಯರಾದ ಆರುಜನ ನನ್ನ ಅಣ್ಣಂದಿರು ಹುಟ್ಟಿದ ಕೂಡಲೇ ಮೃತರಾದರು. ಅದರಿಂದ ನನ್ನ ತಂದೆತಾಯಿಯರು ಬಹು ದುಃಖಕ್ಕೀಡಾದರು. ಅದಾದಮೇಲೆ, ನನ್ನ ತಾಯಿಯು ಏಳನೆಯವನನ್ನು ಹಡೆದಳು, ತಂದೆಯ ಬಣ್ಣ, ಗುಣಗಳಿಂದ ಕೂಡಿದ ಅವನಿಗೆ ಬಲರಾಮನೆಂದು ನಾಮಕರಣ ಮಾಡಿದನು. ಅವನೇ ನನ್ನ ಅಣ್ಣನು. ಎಂಟನೆಯವನಾಗಿ ಅಷ್ಟಮಿಯದಿನ ನಾನು ಜನಿಸಿದೆನು. ನನ್ನ ತರುವಾಯ ಹುಟ್ಟಿದವಳು ಸುಭದ್ರೆ. ಎಲೈ

ಪದ್ಮಾವತಿ! ನನ್ನ ಬಣ್ಣ ತಾಯಿಯ ಬಣ್ಣವನ್ನು ಹೋಲುವುದು. ನಾನು ಕೃಷ್ಣ ಪಕ್ಷದಲ್ಲಿ ಜನಿಸಿದ್ದರಿಂದಲೂ, ನನ್ನ ವರ್ಣವೂ ಕಪ್ಪಾದ್ದರಿಂದಲೂ, ನನಗೆ ಕೃಷ್ಣನೆಂದು ನಾಮಕರಣ ಮಾಡಿದರು. ಮತಿವಂತರು ಬಣ್ಣದಿಂದಲೂ, ಹೆಸರಿನಿಂದಲೂ ನನ್ನನ್ನು ಕೃಷ್ಣನೆಂದೇ ಕರೆಯುವರು. ವಿದ್ವಜ್ಜನಾನಂದಕಾರಕಳೇ, (ಪಂಡಿತನಾದ ಆಕಾಶರಾಜನ ಕುಮಾರಿಯೇ), ನನ್ನೆಲ್ಲ ವಿಚಾರಗಳನ್ನು ತಿಳಿಸಿದ್ದೇನೆ. ನೀನು ಕೇಳಿದ್ದೀಯೆ. ದೇವಿ! ಈಗ ನಿನ್ನ ಗೋತ್ರ, ವಂಶ, ಹೆಸರು ಮಂತಾದ ಸಮಸ್ತ ವಿಚಾರಗಳನ್ನು ನನಗೆ ತಿಳಿಸು'' ಎಂದನು. ಆಗ ರಾಜಕುಮಾರಿಯಾದ ಪದ್ಮಾವತಿಯು ''ಎಲೈ ಕಿರಾತಾಧಿಪತಿ! ನಾನು ಆಕಾಶರಾಜನ ಮಗಳು, ನನ್ನ ಹೆಸರು ಪದ್ಮಾವತಿ ಎಂದು. ನಮ್ಮದು ಚಂದ್ರವಂಶ, ಅತ್ರಿಗೋತ್ರವು. ಹೇ ಕಿರಾತೇಂದ್ರ! ಹೇ ಕೃಷ್ಣ! ಎಲ್ಲವನ್ನೂ ಕೇಳಿದೆಯಲ್ಲ, ಇನ್ನು ನೀನು ಬೇಗನೆ ಹೊರಟುಹೋಗು'' ಎಂದುಸುರಿದಳು. ಆಗ ಶ್ರೀನಿವಾಸನು ''ದೇವಿ! ಏಕಿಂತು ನಿಷ್ಠೂರವಾಗಿ ಮಾತನಾಡುತ್ತಿರುವೆ? ಅನ್ನವನ್ನು ಬಯಸುವವನಿಗೆ ಯಾವ ಉತ್ತಮಪುರುಷನು ಅನ್ನದಾನ ಮಾಡುವನೋ ಅಂಥವನು ಸುಕೃತಕ್ಕೆ ಪಾತ್ರನಾಗುವನು. ತೃಷಾರ್ತನಾದವನಿಗೆ ಜಲದಾನ ಮಾಡಿದವನೂ ಸಹ ಪುಣ್ಯಭಾಗಿಯಾಗುವನು. ನಾನು ನಿನ್ನಲ್ಲಿ ಕ್ರೀಡಿಸಲು ಅಪೇಕ್ಷಿಸುತ್ತಿದ್ದೇನೆ. ಅದಕ್ಕೆ ಈಗ ನಾನು ಪಾತ್ರನೂ ಆಗಿದ್ದೇನೆ. ದೇವಿ! ನನಗೆ ನಿನ್ನ ಪ್ರೇಮದಾನ ಮಾಡು, ಅದರಿಂದ ನೀನು ಸುಖವನ್ನು ಪಡೆಯುತ್ತೀಯೆ. ಕೊನೆಗೆ ಸ್ವರ್ಗವನ್ನೂ ಪಡೆಯುತ್ತೀಯೆ. ಅನವಶ್ಯಕವಾದ ನಿಷ್ಠೂರ ವಚನಗಳಿಂದ ಪ್ರಯೋಜನವೇನು? ನೀನು ನನಗೆ ನಿನ್ನನ್ನೇ ಸಮರ್ಪಿಸು'' ಎಂದು ನುಡಿಯಲು ಕ್ರುದ್ಧಳಾಗಿ ಕೆಂಗಣ್ಣಿನಿಂದ ಶ್ರೀನಿವಾಸನನ್ನು ನೋಡಿ, ಪದ್ಮಾವತಿಯು ಇಂತೆಂದಳು. ''ವಿವೇಕವಿಲ್ಲದವನೇ! ಆಡಬಾರದ ಮಾತುಗಳನ್ನಾಡುತ್ತಿದ್ದೀಯೆ. ನಿನಗೆ ಬದುಕುವ ಆಶೆಯಿಲ್ಲವೇನು? ಅಂತಃಪುರಸ್ತ್ರೀಯರಿರುವ ಈ ಸ್ಥಳದಲ್ಲಿ ನಿನ್ನನ್ನು ನೋಡಿ ನನ್ನ ತಂದೆ ಆಕಾಶರಾಜನು ನಿನ್ನನ್ನು ಸಂಹಾರ ಮಾಡುತ್ತಾನೆ. ಇದರಲ್ಲಿ ಸಂದೇಹವಿಲ್ಲ. ನನ್ನ ತಂದೆಯು ಇಲ್ಲಿಗೆ ಬರುವಷ್ಟರಲ್ಲಿ ನಿನ್ನ ಮನೆಗೆ ಹೊರಟುಹೋಗು'' ಎಂದಳು. ಆಗ ಶ್ರೀನಿವಾಸನು ''ಪದ್ಮಾವತಿ! ಕಾರ್ಯವು ಸಫಲವಾದ ಮೇಲೆ ಮರಣವುಂಟಾದರೂ ಅದು ಸುಖಕರವು. ಕಾರ್ಯವು ಆಗದವನಿಗೆ ಈ ಜಗತ್ತೇ ತೃಣಸಮಾನ! ಆಕಾಶರಾಜನು ಅಧರ್ಮದಿಂದ ನನ್ನನ್ನು ಹೇಗೆ ಕೊಲ್ಲುವನು? ಪದ್ಮಾವತಿ, ನೀನು ವಿವಾಹಯೋಗ್ಯಳಾದ ಕನ್ಯೆಯು, ನಾನು ಯೋಗ್ಯ ವರನು, ಇದರಲ್ಲಿ ತಪ್ಪೇನಿದೆ?'' ಎನಲು, ಪದ್ಮಾವತಿಯು ಕುಪಿತಳಾಗಿ ''ಮೂಢ! ನಾನು ಹೇಳುವುದನ್ನು ಕೇಳು. ಬರೀ ಹುಡುಗಾಟದಿಂದ ಪ್ರಯೋಜನವೇನು? ಮುಂದಾಗುವುದನ್ನು ನೀನು ಅರಿತಿಲ್ಲ, ಆಕಾಶರಾಜನು ಇಲ್ಲಿಗೆ ಬಂದು ನಿನ್ನ ಉಪದ್ವ್ಯಾಪತನವನ್ನು ಕಂಡು ನಿನಗೆ ಕೋಳತೊಡಿಸಿ, ಕಾರಾಗೃಹದಲ್ಲಿ ಬಂಧಿಸಿಡುತ್ತಾನೆ. ಎಲವೋ ವಿವೇಕಶೂನ್ಯನಾದವನೇ! ನಾನು ಮುಂದಾಗುವುದನ್ನು ಹೇಳುತ್ತಿದ್ದೇನೆ'' ಎಂದಳು.

ಆಗ ಶ್ರೀನಿವಾಸನು, ತನಗೆ ಮರಣವಾದರೂ ಸರಿ, ಎಂದು ನಿಶ್ಚಯಿಸಿ, ಜಗದ್ಗುರುವಾದ ಶ್ರೀವೆಂಕಟೇಶ್ವರನು ಪದ್ಮಾವತಿಯೊಡನೆ ರಮಿಸಲಿಚ್ಛಿಸಿ, ಹೀಗೆ ಹೇಳಿದನು- ''ಎಲೈ ಪದ್ಮಾವತಿ! ಹುಟ್ಟಿದವನಿಗೆ ಪೂರ್ವಕರ್ಮದ ಫಲಕ್ಕೆ ಅನುಗುಣವಾಗಿ ಮರಣವು ಬಂದೇ ಬರುವುದು! ಧರ್ಮಾತ್ಮನಾದ ಆಕಾಶರಾಜನು ನಿರಪರಾಧಿಯನ್ನು ಎಂತು ಸಂಹರಿಸುವನು?'' ಪದ್ಮಾವತಿಯು ಅವನ ನುಡಿಕೇಳಿ ''ಎಲೈ ನಿಷಾದೇಂದ್ರ! ನಿನ್ನ ಮೇಲೆ ಆಣೆ, ನಿನ್ನ ತಂದೆತಾಯಿಗಳ ಮೇಲೆ ಆಣೆ, ಆಕಾಶರಾಜನ ಮೇಲೆ ಆಣೆ, ಶ್ರೀಹರಿಯಮೇಲಾಣೆ ! ವೇಂಕಟಗಿರಿವಾಸಿಯಾದ ವರಾಹಸ್ವಾಮಿ, ಶ್ರೀರಂಗನಾಥ ಇವರ ಮೇಲೂ ಆಣೆ ಇಡುತ್ತಿದ್ದೇನೆ. ಈ ಎಲ್ಲರ ಮೇಲಿನ ಆಣೆಯನ್ನು ಕಾಪಾಡು. (ಅಥವಾ ಎಲೈ ಬೇಡರ ದೊರೆಯೇ ನಿನ್ನ ಗೌರವ, ನಿನ್ನ ತಂದೆತಾಯಿಗಳ ಗೌರವ, ಆಕಾಶರಾಜನ ಗೌರವ, ಶ್ರೀಹರಿಯ ಗೌರವ, ವೇಂಕಟಗಿರಿನಿವಾಸಿಯಾದ ವರಾಹಮೂರ್ತಿ, ರಂಗನಾಥ - ಇವರೆಲ್ಲರ ಗೌರವವನ್ನು ಗಮನಿಸು. ಆ ಎಲ್ಲರ ಗೌರವವನ್ನು ಸಂರಕ್ಷಿಸು - ಎಂದಳು). ಎಲೈ ನೀಳತೋಳಿನ ಕಿರಾತನೇ! ನಿನ್ನ ಮನೆಗೆ ಸುಖವಾಗಿ ಹೋಗಿಸೇರು'' ಎಂದಳು. ಅವಳ ಮಾತನ್ನು ನಿರಾಕರಿಸಿ ಶ್ರೀನಿವಾಸನು

ಅವಳತ್ತ ಕುದುರೆಯನ್ನು ಮುಂದೋಡಿಸಿದನು. ಅದನ್ನು ಕಂಡು ಪದ್ಮಾವತಿಯು ''ಎಲವೋ ಕಾಡೋಡಿ! ನಿನ್ನ ತಂದೆ, ತಾಯಿ, ಬಂಧುಗಳು, ಅಣ್ಣತಮ್ಮಂದಿರನ್ನೆಲ್ಲಾ ತ್ಯಜಿಸಿ, ಅನಾಥನಾಗಿ, ಅನ್ಯಾಯವಾಗಿ ರಕ್ಷಕರಿಲ್ಲದವನಾಗಿ, ಕಾಗೆಗಳಿಗೆ ಆಹಾರವಾಗಿ ಏಕೆ ಮೃತನಾಗುವೆ?'' ಎಂದು ವಿವೇಕ ಹೇಳಿದಳು.

ಪದ್ಮಾವತಿಯ ಮಾತು ಕೇಳಿ ತಾವರೆಗಣ್ಣನ ಶ್ರೀನಿವಾಸನು ''ದೇವಿ! ಬ್ರಹ್ಮನು ಹಣೆಯಲ್ಲಿ ಬರೆದುದು ಎಂದೂ ಸುಳ್ಳಾಗುವುದಿಲ್ಲ! ಜಯವಾಗಲಿ ಅಥವಾ ಸೋಲಾಗಲಿ, ನಾನು ನಿನ್ನಲ್ಲಿ ಭೋಗ ಮಾಡಿಯೇ ತೀರುವೆನು!'' ಎಂದು ಹೇಳಿದನು. ಆದರಿಂದ ಅತಿ ಕುಪಿತಳಾಗಿ ಕೆಂಗಣ್ಣಿನಿಂದ ಅವನನ್ನು ನೋಡುತ್ತಾ, ಗೆಳತಿಯರಿಂದೊಡಗೂಡಿ, ಜಗತ್ಕಾರಣನಾದ ಶ್ರೀಹರಿಯನ್ನು ನಿಂದಿಸುತ್ತಾ, ಕೈಯ್ಯಲ್ಲಿ ಕಲ್ಲುಗಳನ್ನು ಹಿಡಿದು, ಮುಂದೆ ಹೋದಳು. ಮತ್ತು ಶ್ರೀಗೋವಿಂದನನ್ನು, ಅತಿ ಬಿರುಸಾದ ಕಲ್ಲುಗಳಿಂದ ಹೊಡೆದಳು. ಹೀಗೆ ಕಲ್ಲಿನ ಮಳೆಯಿಂದ ತಾಡಿತವಾದ ಆ ಕುದುರೆಯು ಧರೆಗೊರಗಿ ಪ್ರಾಣಬಿಟ್ಟಿತು. ತನ್ನ ಕುದುರೆಯು ಮೃತವಾದುದನ್ನು ಕಂಡು ಅಸ್ತವ್ಯಸ್ತ ಕೇಶಯುಕ್ತನಾಗಿ ಮತ್ತೆ ಮತ್ತೆ ಎಲ್ಲ ಕಡೆ ನೋಡುತ್ತಾ ಭ್ರಮಾಧೀನನಾದವನಂತೆ ಅಲೆದಾಡಿದನು. ''ಅಯ್ಯೋ, ಸ್ವಾಪರಾಧ (ಸ್ವಯಂಕೃತಾಪರಾಧ)ದಿಂದ ನನಗೀಗ ಕಷ್ಟ ಬಂದೊದಗಿತು'' ಎಂದು ಗಟ್ಟಿಯಾಗಿ ಹೇಳುತ್ತಾ ರಮಾರಮಣನಾದ ಶ್ರೀನಿವಾಸನು ಉತ್ತರದಿಕ್ಕಿಗೆ ಅಭಿಮುಖವಾಗಿ ಹೊರಟುಹೋದನು.

ಯಾವ ವಿಧವಾದ ಬಾಧೆಯಿಲ್ಲದವನೂ, ಅತ್ಯಂತ ಸಮರ್ಥನೂ ಆದ ಶ್ರೀನಿವಾಸನು ವೇಂಕಟಗಿರಿಯ ಮೆಟ್ಟಲುಗಳನ್ನೇರಿ ಹೋಗಿ, ಸಾಮಾನ್ಯ ಮಾನವನಂತೆ ನಟಿಸುತ್ತಾ ಹಾಸಿಗೆಯಲ್ಲಿ ಪವಡಿಸಿದನು. ಅತಿಶಯಾನಂದ ಪೂರ್ಣನಾಗಿದ್ದರೂ ಶ್ರೀಪತಿಯಾದ ಶ್ರೀನಿವಾಸನು ಯುಗಾಂತ್ಯದ ಪ್ರಳಯಕಾಲದಲ್ಲಿ ಆಲದೆಲೆಯ ಮೇಲೆ ಶ್ರೀವಿಷ್ಣುವು ಮಲಗಿದಂತೆ, ಶಯ್ಯೆಯಲ್ಲಿ ಮಲಗಿದನು ॥ 45 ॥

ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೇಂಕಟೇಶಮಹಾತ್ಮೆಯಲ್ಲಿ
ಕನ್ನಿಕೆಯಿಂದ ಶ್ರೀಶ್ರೀನಿವಾಸನ ಪರಾಜಯವೆಂಬ ಏಳನೆಯ ಅಧ್ಯಾಯವು ಮುಗಿದುದು

*॥ ಶ್ರೀವೇಂಕಟೇಶನಿಗೆ ಅರ್ಪಿತವಾಗಲಿ ॥*

ಬಲ

# ಎಂಟನೆಯ ಅಧ್ಯಾಯ

*ಮೂಲ— ಶ್ರೀಸೂತ ಉವಾಚ -*

**ಶಯನಂ ಪ್ರಾಪ್ಯ ಪರ್ಯಂಕೇ ಶ್ರೀನಿವಾಸೋ ವೃಷಾಕಪಿಃ ।**
**ತದಾಗತಾ ಚ ಸಾ ದೇವೀ ಸೇವಾರ್ಥಂ ಬಕುಲಾ ಶುಭಾ ॥ 1 ॥**

**ಷಡ್ವಿಧಾನ್ನಂ ಸಮಾಧಾಯ ಸೂಪಾಪೂಪರಸಾನ್ವಿತಮ್ ।**
**ರಮಾಪತೇಸ್ತು ಬಕುಲಾ ಭಕ್ತಿಭಾವೇನ ಸಂಯುತಾ ॥ 2 ॥**

**ಶಯಾನಂ ಶ್ರೀನಿವಾಸಂ ಚ ವಲ್ಮೀಕಸ್ಥಾನಮಾಶ್ರಿತಮ್ ।**
**ಶ್ವಸಂತಂ ದೀರ್ಘನಿಶ್ವಾಸಂ ರುದಂತಂ ನೇತ್ರಬಿಂದುಭಿಃ ॥ 3 ॥**

**ಅಭಾಷಮಾಣಂ ಶ್ರೀಕಾಂತಂ ಬಭಾಷೇ ಬಕುಲಾ ಶುಭಾ ।**

*ಬಕುಲೋವಾಚ -*

**ಉತ್ತಿಷ್ಠೋತ್ತಿಷ್ಠ ಗೋವಿಂದ ಕಿಂ ಶೇಷೇ ಪುರುಷೋತ್ತಮ ॥ 4 ॥**

**ನಕದಾಚಿದ್ದಿವಾಸ್ವಾಪೋ ನ ಕೃತಂ ರೋದನಂ ಹರೇ ।**
**ಕಿಮರ್ಥಂ ದುಃಖಮೇತತ್ತೇ ಆರ್ತವದ್ದೃಶ್ಯಸೇ ಕುತಃ ॥ 5 ॥**

**ಮನೋಗತಂ ವಾ ಕಿಂ ದೇವ ತದ್ವದಸ್ವ ಯಥಾರ್ಥತಃ ।**
**ಪರಮಾನ್ನಂ ಕೃತಂ ದೇವ ಭೋಕ್ತುಮಾಗಚ್ಛ ಮಾಧವ ॥ 6 ॥**

**ಬಕುಲಾವಚನಂ ಶ್ರುತ್ವಾ ನೋವಾಚ ವಚನಂ ಹರಿಃ ।**
**ಹರಿಂ ದೃಷ್ಟ್ವಾ ಹಿರಣ್ಯಾಂಗೀ ಪುನರ್ವಾಕ್ಯಮುವಾಚ ಸಾ ॥ 7 ॥**

ಸೂತ ಉವಾಚ = ಶ್ರೀಸೂತಾಚಾರ್ಯರು ಹೇಳುತ್ತಿದ್ದಾರೆ- ಶ್ರೀನಿವಾಸಃ = ಶ್ರೀಲಕ್ಷ್ಮೀದೇವಿಗೆ ಆವಾಸಸ್ಥಾನಭೂತನಾದ, ವೃಷಾಕಪಿಃ = ಶ್ರೀವಿಷ್ಣುವು, ಪರ್ಯಂಕೇ = ಮಂಚದಲ್ಲಿ ಹಾಸಿಗೆಯ ಮೇಲೆ, ಶಯನಂ ಪ್ರಾಪ = ಮಲಗಿದನು. ತದಾ = ಆವಾಗ, ಶುಭಾ = ಶುಭಕರಳಾದ, ಸಾ ದೇವೀ = ಆ ಬಕುಳಾದೇವಿಯು, ಸೇವಾರ್ಥಂ = ವೇಂಕಟೇಶನ ಸೇವೆಗಾಗಿ, ಭಕ್ತಿ ಭಾವೇನ = ಭಕ್ತಿಯಿಂದ, ಸಂಯುತಾ = ಕೂಡಿದವಳಾದ, ಬಕುಲಾ = ಬಕುಳಮಾಲಿಕೆಯು, ರಮಾಪತೇಸ್ತು = ಶ್ರೀನಿವಾಸನಿಗಾಗಿ, ಸೂಪಾಪೂಪರಸಾನ್ವಿತಂ = ತೊವ್ವೆ, ಅಪೂಪ(ಕಜ್ಜಾಯ), ಸಾರು, ಇವುಗಳಿಂದ ಯುಕ್ತವಾದ, ಷಡ್ವಿಧಾನ್ನಂ = ಆರು ಬಗೆಯಾದ ಅನ್ನವನ್ನು (ಅಂದರೆ ಆಹಾರವನ್ನು) ಸಮಾದಾಯ = ತೆಗೆದುಕೊಂಡು ಬಂದು, ॥ 1-2 ॥ ವಲ್ಮೀಕಸ್ಥಾನಮಾಶ್ರಿತಂ = ಹುತ್ತಪ್ರದೇಶವನ್ನು ಆಶ್ರಯಿಸಿರುವ, ಶಯಾನಂ = ಮಲಗಿರುವ, ಶ್ರೀನಿವಾಸಂ = ಶ್ರೀನಿವಾಸನ ಬಳಿಗೆ, ಆಗತಾ = ಬಂದಳು. ದೀರ್ಘನಿಶ್ವಾಸಂ = ದೀರ್ಘವಾಗಿ ನಿಟ್ಟುಸುರನ್ನು, ಶ್ವಸಂತಂ = ಬಿಡುತ್ತಿರುವ, ನೇತ್ರ-

ಬಿಂದುಭಿಃ = ಕಣ್ಣೀರಿನ ಹನಿಗಳಿಂದ ಕೂಡಿ, ರುದಂತಂ = ಅಳುತ್ತಿರುವ ॥ 3 ॥ ಅಭಾಷಮಾಣಂ = ಮಾತನಾಡದಿರುವ, ಶ್ರೀಕಾಂತಂ = ಲಕ್ಷ್ಮೀಪತಿಯನ್ನುದ್ದೇಶಿಸಿ, ಶುಭಾ = ಮಂಗಳಕರಳಾದ, ಬಕುಲಾ = ಬಕುಳಾದೇವಿಯು, ಬಭಾಷೇ = ಮಾತನಾಡಿದಳು.

ಬಕುಲೋವಾಚ = ಬಕುಳೆಯು ಮಾತನಾಡುತ್ತಿದ್ದಾಳೆ – ಪುರುಷೋತ್ತಮ = ಪುರುಷೋತ್ತಮನಾದ, ಗೋವಿಂದ = ಎಲೈ ಶ್ರೀನಿವಾಸ, ಕಿಂ ಶೇಷೇ = ಏಕೆ ಮಲಗಿರುವೆ? ಉತ್ತಿಷ್ಠೋತ್ತಿಷ್ಠ = ಏಳು, ಎದ್ದೇಳು ॥ 4 ॥ ಕದಾಚಿತ್ = ಯಾವ ಕಾಲದಲ್ಲೂ, ದಿವಾ = ಹಗಲು, ಸ್ವಾಪೋ ನ ಕೃತಃ = ಮಲಗುವುದನ್ನು ಮಾಡಿಲ್ಲ (ಅಂದರೆ ನೀನು ಮಲಗಿದವನಲ್ಲ), ಹರೇ = ಶ್ರೀಹರಿಯೇ, ರೋದನಂ ನ ಕೃತಂ = ಅಳುವಿಕೆಯು ಮಾಡಲ್ಪಡಲಿಲ್ಲ (ಅಂದರೆ ಅತ್ತವನಲ್ಲ), ತೇ = ನಿನಗೆ, ಏತತ್ ದುಃಖಂ = ಈ ದುಃಖವು, ಕಿಮರ್ಥಂ = ಏಕಾಯಿತು?, ಕುತಃ = ಏತಕ್ಕಾಗಿ, ಆರ್ತವತ್ = ಕಷ್ಟಪಡುವವನಂತೆ, ದೃಶ್ಯಸೇ? = ಕಾಣುತ್ತಿದ್ದೀಯೆ? ॥ 5 ॥ ದೇವ = ಪ್ರಭುವೇ, ಮನೋಗತಂ ವಾ = ನಿನ್ನ ಮನಸ್ಸಿನಲ್ಲಿರುವುದಾದರೂ, ಕಿಂ = ಏನು?, ಯಥಾರ್ಥತಃ = ಸತ್ಯವಾಗಿ, ತತ್ = ನಿನ್ನ ವ್ಯಥೆಗೆ ಕಾರಣವಾದುದನ್ನು, ವದಸ್ವ = ಹೇಳುವವನಾಗು, ದೇವ = ಸ್ವಾಮಿಯಾದ, ಮಾಧವ = ಶ್ರೀಹರಿಯೇ, ಪರಮಾನ್ನಂ = (ನಿನಗಾಗಿ) ಪರಮಾನ್ನವು, ಕೃತಂ = ಮಾಡಲ್ಪಟ್ಟಿದೆ, ಭೋಕ್ತುಂ = ಊಟಮಾಡಲು, ಆಗಚ್ಛ = ಬಾ(ಬರುವವನಾಗು) ॥ 6 ॥ ಬಕುಲಾ = ಬಕುಳಾದೇವಿಯ, ವಚನಂ = ಮಾತನ್ನು, ಶ್ರುತ್ವಾ = ಕೇಳಿ (ಕೇಳಿದರೂ), ಹರಿಃ = ಶ್ರೀನಿವಾಸನು; ವಚನಂ = ಮಾತನ್ನು, ನೋವಾಚ = ಆಡಲಿಲ್ಲ ಹಿರಣ್ಯಾಂಗೀ = ಕಾಂಚನವರ್ಣದ ದೇಹಯುಕ್ತಳಾದ, ಸಾ = ಬಕುಳೆಯು, ಹರಿಂ ದೃಷ್ಟ್ವಾ = ಶ್ರೀನಿವಾಸನನ್ನು ನೋಡಿ, ಪುನಃ = ಮತ್ತೆ, ವಾಕ್ಯಮುವಾಚ = ನುಡಿದಳು ॥ 7 ॥

**ಕಿಂ ದೃಷ್ಟ್ವಂ ವಿಪನೇ ಕೃಷ್ಣ ಕಿಮರ್ಥಂ ದುಃಖಮುಲ್ಬಣಮ್ ।**
**ಆರ್ತಿಹೀನೋಽಪಿ ತ್ವಂ ದೇವ ಆರ್ತವದ್ದೃಶ್ಯಸೇ ಕುತಃ ॥ 8 ॥**

**ಮನೋಗತಂ ವದಾದೇಶಂ ಗೌರವಂ ಮಯಿ ಮಾಕೃಥಾಃ ।**
**ಗೌರವಂ ಬಲರಾಮಸ್ಯ ದೇವಕೀ ವಸುದೇವಯೋಃ ॥ 9 ॥**

**ದುಃಖಂ ಭವತಿ ತ್ವಾಂ ದೃಷ್ಟ್ವಾ ಹ್ಯಭುಕ್ತಂ ಭೂತಭಾವನ ।**
**ಸರ್ವಲೋಕಾರ್ತಿಸಂಹರ್ತಃ ಪುಣ್ಯಮೂರ್ತೇ ನಮೋಽಸ್ತುತೇ ॥ 10 ॥**

**ಕಾ ದೃಷ್ಟ್ವಾ ಭುವಿ ಕನ್ಯಾ ವಾ ಗಾಂಧರ್ವೀ ವಾ ಸುರೋತ್ತಮ ।**
**ಕಸ್ಯಾಃ ಸಂಗಂ ಸಮಾಪೇಕ್ಷ್ಯ ಚಿತ್ತವೈಕಲ್ಯಮದ್ಯ ತೇ ॥ 11 ॥**

**ಕಾ ಚ ಪುಣ್ಯವತೀ ಬಾಲಾ ಬಾಲಂ ಭಕ್ತವಶಂ ಹರಿಮ್ ।**
**ಮೋಹಯಾಮಾಸ ಕಾಮಾರ್ತಾ ನ ಜಾನಾಮಿ ಜಗದ್ಗುರೋ ॥ 12 ॥**

ಕೃಷ್ಣ = ಶ್ರೀಕೃಷ್ಣನೇ, ವಿಪಿನೇ = ಅರಣ್ಯದಲ್ಲಿ ಕಿಂ ದೃಷ್ಟಂ = (ನಿನ್ನಿಂದ) ಏನು ನೋಡಲ್ಪಟ್ಟಿತು? ಉಲ್ಬಣಂ = ಹೆಚ್ಚಾದ, ದುಃಖಂ = ಈ ದುಃಖವು, ಕಿಮರ್ಥಂ = ಏತಕ್ಕಾಗಿ? ದೇವ = ಎಲೈ ಪ್ರಭುವೇ, ತ್ವಂ = ನೀನು, ಆರ್ತಿಹೀನೋಽಪಿ = ದುಃಖವಿಲ್ಲದವನಾಗಿದ್ದರೂ, ಕುತಃ = ಏತಕ್ಕಾಗಿ, ಆರ್ತವತ್ = ವ್ಯಥೆಗೊಂಡವನಂತೆ, ದೃಶ್ಯಸೇ = ಕಾಣುತ್ತಿರುವೆ? ॥8॥ ಮನೋಗತಂ = ಮನಸ್ಸಿನಲ್ಲಿರುವ, ಆದೇಶಂ = ಹೇಳಲೇಬೇಕಾದ ಕೆಲಸವನ್ನು, ವದ = ಹೇಳು. ಮಯಿ =

ನನ್ನಲ್ಲಿ, ಗೌರವಂ = ಗುರುತ್ವವಾದ ಆ ಕಾರ್ಯವನ್ನು ಹೇಳಬಹುದೋ, ಇಲ್ಲವೋ ಎಂದು, ಮಾಕೃಥಾಃ = ಯೋಚನೆ ಮಾಡಬೇಡ, ಭೂತಭಾವನ = ಸಮಸ್ತಪ್ರಾಣಿಗಳಿಂದ ಭಾವಿತನಾಗಿರುವ, ಹ್ಯಭುಕ್ತಂ = ಊಟಮಾಡದಿರುವ, ತ್ವಾಂ = ನಿನ್ನನ್ನು, ದೃಷ್ಟ್ವಾ = ನೋಡಿ, ದುಃಖಂ ಭವತಿ = ವ್ಯಥೆಯಾಗುವುದು. ಬಲರಾಮಸ್ಯ ಗೌರವಂ = ಬಲರಾಮನ ಮೇಲಾಣೆ, ದೇವಕೀ ವಸುದೇವಯೋಃ = ದೇವಕಿವಸುದೇವರ ಮೇಲೆ, ಗೌರವಂ = ಆಣೆಯಿದೆ, (ಆದ್ದರಿಂದ ನಿನ್ನ ದುಃಖವೇನೆಂದು ನಿರೂಪಿಸು). (ಅಥವಾ - ಬಲರಾಮಸ್ಯ = ಅಗ್ರಜನಾದ ಬಲರಾಮನಿಗೆ, ದೇವಕೀ ವಸುದೇವಯೋಃ = ನಿನ್ನ ತಾಯಿ ತಂದೆಗಳಾದ ದೇವಕೀದೇವಿ ಮತ್ತು ವಸುದೇವರಿಗೆ ಅಭುಕ್ತಂ = ಭೋಜನ ಮಾಡದಿರುವ, ತ್ವಾಂ = ನಿನ್ನನ್ನು, ದೃಷ್ಟ್ವಾ = ಅವಲೋಕಿಸಿ, ಗೌರವಂ = ಹೆಚ್ಚಾದ, ದುಃಖಂ = ವ್ಯಥೆಯು, ಭವತಿ = ಉಂಟಾಗುವುದು). ॥ 9 ॥ ಸರ್ವಲೋಕಾರ್ತಿಸಂಹರ್ತಃ- ಸರ್ವ = ಸಮಸ್ತರಾದ, ಲೋಕ = ಜನರ, ಆರ್ತಿಸಂಹರ್ತಃ = ಕಷ್ಟವನ್ನು ಪರಿಹರಿಸುವವನಾದ (ದುಃಖಪರಿಹಾರಕನಾದ), ಪುಣ್ಯಮೂರ್ತೇ = ಪುಣ್ಯಮೂರ್ತಿಯೇ, ತೇ = ನಿನಗೆ, ನಮಃ = ನಮಸ್ಕಾರವು ॥ 10 ॥ ಸರ್ವೋತ್ತಮ = ದೇವತಾಶ್ರೇಷ್ಠನಾದ ಶ್ರೀನಿವಾಸ!, ಭುವಿ = ಈ ಭೂಲೋಕದಲ್ಲಿ, ಕಾ ಕನ್ಯಾ= ಯಾವ ಕುಮಾರಿಯು, ವಾ = ಅಥವಾ, ಗಾಂಧರ್ವೀ = ಗಂಧರ್ವಸ್ತ್ರೀಯು, ದೃಷ್ಟಾ ವಾ = ನೋಡಲ್ಪಟ್ಟಳೇನು? ಕಸ್ಯಾಃ = ಯಾವಳ, ಸಂಗಂ = ಸಂಬಂಧವನ್ನು (ಮಿಲನವನ್ನು), ಸಮಾಪೇಕ್ಷ್ಯ = ಅಪೇಕ್ಷಿಸಿ, ತೇ = ನಿನಗೆ, ಅದ್ಯ = ಈಗ ಚಿತ್ತ-ವೈಕಲ್ಯಂ (ಆಸೀತ್) = ಮನೋವಿಕಾರವುಂಟಾಯಿತು? ॥ 11 ॥ ಜಗದ್ಗುರೋ = ಸಕಲಜಗತ್ತಿಗೆ ಗುರುವಾದ ಶ್ರೀವೇಂಕಟೇಶ!, ಭಕ್ತವಶಂ = ಭಕ್ತಪರಾಧೀನನಾದ, (ಭಕ್ತರಿಗೆ ಅಧೀನನಾದ), ಬಾಲಂ = ಜಗದ್ಪಾಲಕನಾದ, ಹರಿಂ = ಶ್ರೀಹರಿಯನ್ನು, ಕಾಮಾರ್ತಾ = ಮನ್ಮಥೋದ್ರೇಕದಿಂದ ತಪ್ತಳಾದ (ಕಾಮಾರ್ತಳಾದ), ಪುಣ್ಯವತೀ = ಪುಣ್ಯವಂತಳಾದ, ಕಾ ಬಾಲಾ = ಯಾವ ಹುಡುಗಿಯು, ಮೋಹಯಾಮಾಸ = ಪರವಶಗೊಳಿಸಿದಳು? (ಮೋಹಪಡಿಸಿದಳು), ನ ಜಾನಾಮಿ = ನಾನರಿಯೆನು. (ಅಥವಾ - ಜಗದ್ಗುರೋ = ಜಗತ್ತಿಗೆ ಉಪದೇಶಕನಾದ ಶ್ರೀನಿವಾಸ, ಪುಣ್ಯವತಿ = ಪುಣ್ಯವಂತಳಾದ, ಕಾ = ಯಾವ, ಬಾಲಾ = ಹುಡುಗಿಯು, ಕಾಮಾರ್ತಾ(ಸತಿ) = ಕಾಮಪೀಡಿತಳಾಗಿ, ಬಾಲಂ = ಬಾಲಕನಾದ, ಭಕ್ತವಶಂ = ಭಕ್ತರಿಗೆ ಅಧೀನನಾದ, ಹರಿಂ = ವಿಷ್ಣುವನ್ನು, ಮೋಹಯಾಮಾಸ = ಮೋಹ ಪಡಿಸಿದಳೋ, ನ ಜಾನಾಮಿ = ನನಗೆ ತಿಳಿಯದು (ನಾನರಿಯೆನು) ॥ 12 ॥

**ವದ ಗೋವಿಂದ ತೇ ಕಾರ್ಯಂ ಕ್ಷಣಮಾತ್ರಾತ್ಕರೋಮ್ಯಹಮ್ ।**
**ಮೃಗಂ ದೃಷ್ಟ್ವಾ ಭಯಂ ಪ್ರಾಪ್ತಂ ಚೋರಂ ವಾ ಕ್ರೂರರೂಪಿಣಂ ॥ 13 ॥**

**ಪಿಶಾಚ ಭೂತಪ್ರೇತಾನ್ವಾ ನ ಜಾನಾಮಿ ರಮಾಪತೇ ।**
**ಮಂತ್ರಂ ವಾ ಯಂತ್ರಪೂಗಾನ್ವಾ ಮೂಲಿಕಾದ್ಯೌಷಧಾನಪಿ ॥ 14 ॥**

**ಕಾರಯಿತ್ವಾ ಯಥಾಶಾಸ್ತ್ರಂ ತತ್ಸರ್ವಂ ಮೋಚಯಾಮ್ಯಹಮ್ ।**
**ಇತ್ಯುಕ್ತೇಽಪಿ ಹರೌ ತೂಷ್ಣೀಂ ಸ್ಥಿತೇ ಬಕುಲಮಾಲಿಕಾ ॥ 15 ॥**

**ಆನೀತಂ ತತ್ರ ನಿಕ್ಷಿಪ್ಯ ತತ್ಸಮೀಪಮುಪಾಗತಾ ।**
**ಪಾದಸಂಹನನಂ ಕೃತ್ವಾ ಶಯಾನಸ್ಯ ಜಗತ್ಪತೇಃ ॥ 16 ॥**

**ಸಾಂತ್ವಯಂತ್ಯಾ ತಯಾ ಭಕ್ತ್ಯಾ ಖಿನ್ನಂ ದೇಹಂ ಸಮಂತತಃ ।**
**ಆಪಾದಮೌಲಿಪರ್ಯಂತಂ ಕರಾಭ್ಯಾಂ ಪರಿಮೃಜ್ಯ ಚ ॥ 17 ॥**

**ಬೋಧಿತೋಽಪಿ ರಮಾಕಾಂತೋ ನೋವಾಚ ವಚನಂ ಯದಾ ।**
**ತದಾ ಸಾ ಬಕುಲಾಖೇದಾದುವಾಚ ವಚನಂ ಹರಿಮ್ ॥ 18 ॥**

**ಪೃಥಕ್ಕೃತ್ವಾ ಛನ್ನವಸ್ತ್ರಂ ಹಸ್ತೇನ ಪರಿಮೃಜ್ಯ ಚ ।**
**ದೇವದೇವ ಜಗನ್ನಾಥ ಪುರಾಣಪುರುಷೋತ್ತಮ ॥ 19 ॥**

**ಮನೋಗತಂ ಕರಿಷ್ಯಾಮಿ ನಾತ್ರ ಕಾರ್ಯಾ ವಿಚಾರಣಾ ।**
**ಸತ್ಯಂವದ ಮನಸ್ಥಂತೇ ಮಾ ಲಜ್ಜಾಂ ಮಾ ಭಯಂ ಕೃಥಾಃ ॥ 20 ॥**

**ಪೂರಯಾಮ್ಯವಿಲಂಬೇನ ಯಾವನ್ಮೇ ವರ್ತತೇ ಬಲಮ್ ।**
**ಇತಿ ತದ್ವಚನಂ ಶ್ರುತ್ವಾ ಹರಿರುಷ್ಣಂ ಸಮುಚ್ಛ್ವಸನ್ ।**
**ಉವಾಚತಿದುಃಖೇನ ಮಂದಂ ಮಂದಂ ಮನೋಗತಮ್ ॥ 21 ॥**

ಗೋವಿಂದ = ಹೇ ಶ್ರೀನಿವಾಸ, ತೇ = ನಿನ್ನ, ಕಾರ್ಯಂ = ಕೆಲಸವನ್ನು, ವದ = ಹೇಳು, ಅಹಂ = ನಾನು, ಕ್ಷಣಮಾತ್ರಾತ್ = ಒಂದು ಕ್ಷಣದಲ್ಲಿಯೇ ಆ ಕಾರ್ಯವನ್ನು, ಕರೋಮಿ = ಮಾಡುತ್ತೇನೆ. ಮೃಗಂ = ಅರಣ್ಯದಲ್ಲಿರುವ ಮೃಗವನ್ನು, ವಾ = ಅಥವಾ, ಕ್ರೂರರೂಪಿಣಂ = ಕ್ರೂರರೂಪದ, ಚೋರಂ = ಕಳ್ಳನನ್ನು, ದೃಷ್ಟ್ವಾ = ನೋಡಿ, ಭಯಂ = ಹೆದರಿಕೆಯು, ಪ್ರಾಪ್ತಂ(ಕಿಂ) = ಉಂಟಾಯಿತೇನು? ॥ 13 ॥ ರಮಾಪತೇ! = ಲಕ್ಷ್ಮೀರಮಣ!, ಪಿಶಾಚಭೂತಪ್ರೇತಾನ್ವಾ = ಪಿಶಾಚಿ, ಭೂತ, ಪ್ರೇತಾದಿಗಳನ್ನು, ದೃಷ್ಟ್ವಾ = ನೋಡಿ, ಭಯಂ = ಅಂಜಿಕೆಯು, ಪ್ರಾಪ್ತಂ = ಉಂಟಾಯಿತೇ? ನ ಜಾನಾಮಿ = ಅದನ್ನು ನಾನು ತಿಳಿದಿಲ್ಲ, ಮಂತ್ರ = ಭಯನಿವಾರಕ ಮಂತ್ರವನ್ನು, ವಾ = ಅಥವಾ, ಯಂತ್ರಪೂಗಾನ್ = ಯಂತ್ರ ತಂತ್ರಾದಿಗಳನ್ನು, ವಾ = ಇಲ್ಲವೇ, ಮೂಲಿಕಾದ್ಯೌಷಧಾನ್ಯಪಿ = ಗಿಡಮೂಲಿಕೆಗಳು ಔಷಧಗಳನ್ನೂ ಸಹ ॥ 14 ॥ ಯಥಾಶಾಸ್ತ್ರಂ = ಆಯಾ ಶಾಸ್ತ್ರ ವಿಧಿ, ತಂತ್ರಗಳ ಪ್ರಕಾರವಾಗಿ, ಕಾರಯಿತ್ವಾ = ಮಾಡಿಸಿ, ತತ್ಸರ್ವಂ = ಆ ಎಲ್ಲದರ ಭಯವನ್ನೂ, ಅಹಂ = ನಾನು, ಮೋಚಯಾಮಿ = ಪರಿಹರಿಸುತ್ತೇನೆ. ಇತ್ಯುಕ್ತೇಽಪಿ = ಹೀಗೆ ವಿಧವಿಧವಾಗಿ ಹೇಳಿದರೂ ಸಹ, ಹರೌ = ಶ್ರೀಹರಿಯು, ತೂಷ್ಣೀಂ ಸ್ಥಿತೇ= ಮೌನವಾಗಿರಲು, ಬಕುಲಮಾಲಿಕಾ = ಬಕುಳಾದೇವಿಯು ॥ 15 ॥ ಆನೀತಂ = ತಾನು ತಂದ ಆಹಾರಪದಾರ್ಥಗಳನ್ನು (ಅಡುಗೆಯನ್ನು), ತತ್ರ = ಅಲ್ಲಿಯೇ, ನಿಕ್ಷಿಪ್ಯ = ಇಟ್ಟು, ತತ್ಸಮೀಪಂ = ಶ್ರೀನಿವಾಸನ ಬಳಿಗೆ, ಉಪಾಗತಾ = ಬಂದಳು. ಶಯಾನಸ್ಯ = ಮಲಗಿರುವ, ಜಗತ್ಪತೇಃ = ಜಗತ್ಪ್ರಭುವಿನ, ಪಾದಸಂಹನನಂ = ಪಾದಸೇವೆಯನ್ನು (ಕಾಲೊತ್ತುವುದನ್ನು), ಕೃತ್ವಾ = ಮಾಡಿ ॥ 16 ॥ ಸಾಂತ್ವಯಂತ್ಯಾ = ಸಾಂತ್ವನ ಮಾಡುತ್ತಿರುವ (ಸಮಾಧಾನ ಪಡಿಸುತ್ತಿರುವ), ತಯಾ = ಬಕುಳಮಾಲಿಕೆಯಿಂದ, ಭಕ್ತ್ಯಾ = ಭಕ್ತಿಪೂರ್ವಕವಾಗಿ, ಆಪಾದಮೌಲಿಪರ್ಯಂತಂ = ಕಾಲಿನಿಂದಾರಂಭಿಸಿ ತಲೆಯವರೆವಿಗೆ, ಸಮಂತತಃ = ಎಲ್ಲ ಕಡೆಗೂ, ಖಿನ್ನಂ = ನೊಂದಿರುವ (ಶ್ರಾಂತವಾದ), ದೇಹಂ = ಶರೀರವನ್ನು, ಕರಾಭ್ಯಾಂ = ತನ್ನೆರಡು ಕರಗಳಿಂದ, ಪರಿಮೃಜ್ಯ ಚ = ಸವರಿದವಳಾಗಿ ॥17॥ ಬೋಧಿತೋಽಪಿ = ಎಚ್ಚರಗೊಳಿಸಿದರೂ ಸಹ, ರಮಾಕಾಂತಃ = ಕಮಲಾನಾಯಕನಾದ ಶ್ರೀನಿವಾಸನು, ಯದಾ = ಯಾವಾಗ, ವಚನಂ = ಮಾತನ್ನು, ನೋವಾಚ = ಆಡಲಿಲ್ಲವೋ; ತದಾ = ಆಗ, ಸಾ ಬಕುಲಾ = ಆ ಬಕುಳಮಾಲಿಕೆಯು, ಛನ್ನವಸ್ತ್ರಂ = ಹೊದ್ದಿದ್ದ ವಸ್ತ್ರವನ್ನು, ಪೃಥಕ್ ಕೃತ್ವಾ = ತೆಗೆದುಹಾಕಿ, ಹಸ್ತೇನ = ಅಂಗೈಯಿಂದ, ಪರಿಮೃಜ್ಯ ಚ = ಅವನ ಅಂಗಾಂಗಳನ್ನು ಸವರಿ, ಖೇದಾತ್ = ಖೇದದಿಂದ, ವಚನಂ = ಮಾತನ್ನು, ಉವಾಚ = ಆಡಿದಳು, ದೇವದೇವ = ಸಕಲದೇವತೆಗಳಿಗೂ ದೇವನಾದ, ಜಗನ್ನಾಥ = ಜಗತ್ತಿಗೆ ಪ್ರಭುವಾದ, ಪುರಾಣಪುರುಷೋತ್ತಮ = ಅನಾದಿನಿತ್ಯನೂ, ಪುರುಷೋತ್ತಮನೂ ಆದ ಹೇ ಶ್ರೀನಿವಾಸ! ॥ 18-19 ॥ ಮನೋಗತಂ = ನಿನ್ನ ಮನಸ್ಸಿನಲ್ಲಿರುವ ಕಾರ್ಯವನ್ನು,

ಕರಿಷ್ಯಾಮಿ = ಮಾಡುತ್ತೇನೆ, ಅತ್ರ = ಈ ವಿಚಾರಗಳಲ್ಲಿ, ವಿಚಾರಣಾ = ಯೋಚನೆಯು, ನಕಾರ್ಯಾ = ಮಾಡತಕ್ಕದ್ದಲ್ಲ (ಮಾಡಬೇಕಾಗಿಲ್ಲ), ತೇ = ನಿನ್ನ, ಮನಸ್ಥಂ = ಮನದಲ್ಲಿರುವ ಬಯಕೆಯನ್ನು, ಸತ್ಯಂ = ಸತ್ಯವಾಗಿ, ವದ = ಹೇಳು, ಭಯಂ = ಭಯವನ್ನು, ಲಜ್ಜಾಂ = ನಾಚಿಕೆಯನ್ನು, ಮಾ ಕೃಥಾಃ = ಮಾಡಬೇಡ ।। 20 ।। ಮೇ = ನನಗೆ, ಯಾವತ್ = ಎಷ್ಟು, ಬಲ = ಶಕ್ತಿಯು, ವರ್ತತೇ = ಇದೆಯೋ, (ತಾವತ್ = ಅಷ್ಟನ್ನೂ ಉಪಯೋಗಿಸಿ), ಅವಿಲಂಬೇನ = ತಡಮಾಡದೆ (ಅತಿಬೇಗ), ಪೂರಯಾಮಿ = ಪೂರೈಸುವೆನು. ಇತಿ = ಹೀಗೆ, ತದ್ವಚನಂ = ಬಕುಳೆಯ ಮಾತನ್ನು, ಶ್ರುತ್ವಾ = ಕೇಳಿ, ಹರಿಃ = ಶ್ರೀಕೃಷ್ಣನು (ಶ್ರೀನಿವಾಸನು), ಉಷ್ಣಂ ಸಮುಚ್ಛ್ವಸನ್ = ಬಿಸಿಯಾದ ನಿಟ್ಟುಸಿರನ್ನು ಬಿಡುತ್ತಾ, ಅತಿದುಃಖೇನ = ಬಹುವ್ಯಥೆಯಿಂದ, ಮನೋಗತಂ = ತನ್ನ ಮನಸ್ಸಿನಲ್ಲಿರುವುದನ್ನು, ಮಂದಂ ಮಂದಂ = ಮೆಲ್ಲಮೆಲ್ಲನೆ, ಉವಾಚ = ಹೇಳಿದನು ।। 21 ।।

*ಶ್ರೀನಿವಾಸ ಉವಾಚ –*

**ನಾಮೋಹಯನ್ಮಾಂ ಗಾಂಧರ್ವೀ ನರ್ಷಿಪುತ್ರೀ ನ ರಾಕ್ಷಸೀ ।**
**ನ ಪಿಶಾಚಾ ಭೂತಗಣಾಃ ಪ್ರೇತಾ ವಾ ಮೇ ಭಯಾವಹಾಃ ।। 22 ।।**

**ಮೃಗಾಶ್ಚಾರಣ್ಯಕಾಶ್ಚೋರಾ ನ ಕ್ರೂರಾ ಮೇ ಕದಾಚನ ।**
**ಮನ್ನಾಮ ಸ್ಮರಣಾದೇತೇ ವಿದ್ರವಂತಿ ದಿಶೋ ದಶ ।। 23 ।।**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಲಾರಂಭಿಸಿದನು – ಮಾಂ = ನನ್ನನ್ನು, ಗಾಂಧರ್ವೀ = ಗಂಧರ್ವಸ್ತ್ರೀಯು, ನಾ ಮೋಹಯತ್ = ಮೋಹಪಡಿಸಲಿಲ್ಲ, ಋಷಿಪುತ್ರೀ = ಋಷಿಕನ್ನಿಕೆಯಾಗಲೀ, ನ = ಮೋಹಗೊಳಿಸಲಿಲ್ಲ; ಮೇ = ನನಗೆ, ರಾಕ್ಷಸೀ = ರಾಕ್ಷಸಿಯು, ಪಿಶಾಚಾ = ಪಿಶಾಚಿಯಾಗಲೀ, ಭೂತಗಣಾಃ = ಭೂತಗಣಗಳಾಗಲೀ, ಪ್ರೇತಾ ವಾ = ಪ್ರೇತಗಳಾಗಲೀ, ನ ಭಯಾವಹಾಃ = ಭಯಪಡಿಸಲಾರವು ।। 22 ।। ಮೇ = ನನಗೆ, ಕದಾಚನ = ಯಾವಕಾಲದಲ್ಲಿಯೇ ಆಗಲಿ, ಅರಣ್ಯಕಾಃ = ಕಾಡಿನಲ್ಲಿರುವ, ಮೃಗಾಃ = ದುಷ್ಟಮೃಗಗಳು, ಚ = ಮತ್ತು, ಚೋರಾಶ್ಚ = ಕಳ್ಳರುಗಳೂ ಸಹ, ನ ಕ್ರೂರಾಃ = ಕ್ರೂರರೆನಿಸಲಾರರು (ಕ್ರೂರವೆನಿಸುವುದಿಲ್ಲ), ಏತೇ = ಇವೆಲ್ಲವೂ, ಮನ್ನಾಮ = ನನ್ನ ಹೆಸರಿನ, ಸ್ಮರಣಾತ್ = ಸ್ಮರಣೆಯಿಂದಲೇ, ದಶೋದಿಶ = ಹತ್ತುದಿಕ್ಕುಗಳಿಗೂ, ವಿದ್ರವಂತಿ = ಓಡಿಹೋಗುವುವು ।। 23 ।।

**ತತಸ್ತೇಭ್ಯೋ ಭಯಂ ನೇಹ ಮೃತ್ಯುಮೃತ್ಯೋರ್ಮಮಾನಘೇ ।**
**ಮಯಾ ದೃಷ್ಟಾ ವರಾ ಕನ್ಯಾ ನಾಮ್ನಾ ಪದ್ಮಾವತೀ ಶುಭಾ ।। 24 ।।**

**ತಾಂ ದೃಷ್ಟ್ವಾ ಮೇ ಮನೋಭ್ರಾಂತಂ ಕಾಮಮೋಹವಶಂಗತಮ್ ।**
**ಸುರೂಪಾಂ ಸುಂದರೀಂ ಸುಭ್ರೂಂ ನೀಲಾಲಕವಿರಾಜಿತಮ್ ।। 25 ।।**

**ಪೂರ್ಣೇಂದುಸದೃಶೀಂ ಶ್ಯಾಮಾಂ ನೀಲಮಾಣಿಕ್ಯವಿಗ್ರಹಾಮ್ ।**
**ಸಾಕ್ಷಾದ್ರಮಾಸಮಾಂ ಕನ್ಯಾಂ ಘಟಯಾಶು ವರಾನನೇ ।। 26 ।।**

**ಜನ್ಮಜನ್ಮಾರ್ಜಿತೇನ್ಯೆವ ಪುಣ್ಯೇನ್ಯೆಷಾ ಹಿ ಲಭ್ಯತೇ ।**
**ಮತ್ಪುಣ್ಯಂ ಪಕ್ವತಾಂ ಪ್ರಾಪ್ತಂ ದರ್ಶನೇನ ಸುಲೋಚನೇ ।। 27 ।।**

**ಮಾನವಂ ದೇಹಮಾಸಾದ್ಯ ತಾಂ ಕನ್ಯಾಂ ಕಃ ಪುಮಾನ್ ತ್ಯಜೇತ್ ।**
**ವಿನಾ ಜಡಮತಿಂ ಲೋಕೇ ಅನ್ನಪಾನವಿವರ್ಜಿತಮ್ ॥ 28 ॥**

**ಕಿಮನಿತ್ಯೇನ ದೇಹೇನ ಕಾರ್ಯಹೀನೇನ ಮೇ ಸಖೇ ।**
**ಘಟಯಾಶು ವರಾಂಗೀಂ ತಾಂ ಆಕಾಶನೃಪನಂದಿನೀಮ್ ॥ 29 ॥**

**ತಾಂ ವಿನಾ ನ ಹಿ ಜೀವಾಮಿ ಸತ್ಯಮಿತ್ಯವಧಾರಯ ।**
**ತಾಡಿತೋಽಹಂ ಶಿಲಾವರ್ಷೈಃ ಹತಾಶ್ವೋಽಪಿ ವರಾನನೇ ॥ 30 ॥**

**ಮಜ್ಜೀವನಂ ತದಾರ್ಥಾಯ ಜನಿತಂ ವೇಂಕಟಾಚಲೇ ।**
**ಯಥೋಭೂದವತಾರೋಽತ್ರ ಪದ್ಮಾವತ್ಯರ್ಥಮೇವ ಮೇ ॥ 31 ॥**

**ಪುತ್ರೋ ಮೇ ವೈರಮಾಪನ್ನಃ ಕಿಂ ಕೃತಂ ಪೂರ್ವಜನ್ಮನಿ ।**
**ದೃಷ್ಟಿಹೀನೇನ ವಿಧಿನಾ ನಿರ್ಮಿತಾ ಕನ್ಯಕಾ ವರಾ ॥ 32 ॥**

**ಅನಾಯಾಸೇನ ಮೇ ಭೂಯಾದಿತಿ ಮೇ ನಿಶ್ಚಿತಾ ಮತಿಃ ।**
**ಕಿಂ ದೃಷ್ಟಂ ಬ್ರಹ್ಮಣಾ ಪೂರ್ವಂ ಮತ್ತಾಪಂ ಘೋರದರ್ಶನಮ್ ॥ 33 ॥**

**ಯತ್ತಾಪಮನುಸೃತ್ಯೈವಂ ಘಟನಂ ನಾಕರೋದ್ವಿಧಿಃ ।**
**ಮದ್ಭಾಗಸ್ಥೋ ವಿಧಿಸ್ತ್ವಂ ಹಿ ಸಾಹಾಯ್ಯಂ ಕುರು ಮೇಽಂಗನೇ ॥ 34 ॥**

**ನ ಕರಿಷ್ಯಸಿ ಚೇದ್ಬಾಲೇ ತದಾ ಮೇ ಮರಣಂ ಧ್ರುವಮ್ ।**
**ಮರಣೇ ಜೀವನೋಪಾಯಂ ಯೇ ಕುರ್ವಂತಿ ನರೋತ್ತಮಾಃ ॥ 35 ॥**

**ತೇ ದಿವಂ ಯಾಂತಿ ಯಾನೇನ ಪುಣ್ಯಮಾರ್ಗೇಣ ಕನ್ಯಕೇ ।**
**ಇತ್ಥಂ ಧರ್ಮಾರ್ಥಮಾಸಾದ್ಯ ಧರ್ಮಮಾರ್ಗಮುಪಾಶ್ರಯ ॥ 36 ॥**

ತತಃ = ಆದುದರಿಂದ, ಅನಘೇ = ಪಾಪವಿಲ್ಲದವಳೇ!, ಮೃತ್ಯೋಃ = ಮೃತ್ಯುವಿಗೂ(ಯಮನಿಗೂ), ಮೃತ್ಯುಃ = ಮೃತ್ಯುವಾಗಿರುವ, ಮಮ = ನನಗೆ, ಇಹ = ಇಲ್ಲಿ, ತೇಭ್ಯಃ = ಅವುಗಳಿಂದ, ಭಯಂ ನ = ಭಯವಿಲ್ಲ, ಮಯಾ = ನನ್ನಿಂದ, ಶುಭಾ = ಮಂಗಳಕರಳಾದ, ವರಾ = ಶ್ರೇಷ್ಠಳಾದ, ನಾಮ್ನಾ = ಹೆಸರಿನಿಂದ, ಪದ್ಮಾವತೀ = ಪದ್ಮಾವತಿಯೆಂಬ, ಕನ್ಯಾ = ಕನ್ಯೆಯು, ದೃಷ್ಟ್ವಾ = ನೋಡಲ್ಪಟ್ಟಳು ॥ 24 ॥ ತಾಂ = ಆ ಪದ್ಮಾವತಿಯನ್ನು, ದೃಷ್ಟ್ವಾ = ನೋಡಿ, ಕಾಮಮೋಹವಶಂ = ಕಾಮ-ಮೋಹಗಳಿಗೆ ವಶವು, ಗತಂ = ಆಗಿ, ಮೇ = ನನ್ನ, ಮನಃ = ಮನಸ್ಸು, ಭ್ರಾಂತಂ = ಭ್ರಾಂತವಾಗಿದೆ(ಭ್ರಮಿಸಿದೆ), ಸುರೂಪಾಂ = ಅತಿರೂಪವತಿಯಾದ, ಸುಂದರೀಂ = ಸುಂದರಳಾದ (ಲಾವಣ್ಯವತಿಯಾದ), ಸುಭ್ರೂಂ = ಸಮೀಚೀನವಾದ ಹುಬ್ಬುಗಳುಳ್ಳ, ನೀಲಾಲಕವಿರಾಜಿತಾಂ = ಕಪ್ಪಾದ ಮುಂಗುರುಳುಗಳಿಂದ ಶೋಭಿಸುವ ॥ 25 ॥ ಪೂರ್ಣೇಂದು ಸದೃಶಾಂ = ಹದಿನಾರು ಕಲೆಗಳಿಂದ ಪೂರ್ಣವಾದ ಚಂದ್ರನಿಗೆ ಸಮಾನಳಾದ, ಶ್ಯಾಮಾಂ = ನೀಲವರ್ಣೋಪೇತಳಾದ, ನೀಲಮಾಣಿಕ್ಯವಿಗ್ರಹಾಂ =

ಇಂದ್ರನೀಲಮಣಿ-ಮಾಣಿಕ್ಯಗಳಂತಿರುವ ಶರೀರವುಳ್ಳ (ಇಂದ್ರನೀಲ-ಮಾಣಿಕ್ಯಮಣಿ ಖಚಿತ ಪುತ್ಥಳಿಯಂತಿರುವ); ಸಾಕ್ಷಾತ್ = ದೃಗ್ಗೋಚರಳಾದ, ರಮಾಸಮಾಂ = ಲಕ್ಷ್ಮೀದೇವಿಗೆ ಸದೃಶಳಾದ, ಕನ್ಯಾಂ = ಆ ಪದ್ಮಾವತಿಯನ್ನು, ಹೇ ವರಾನನೇ ! = ಸುಂದರವದನ ರಾಜಿತಳಾದ ಬಕುಳೆಯೇ!, ಆಶು = ಶೀಘ್ರವಾಗಿ, ಘಟಯ = ಘಟನೆಮಾಡಿಸು (ಅಂದರೆ ಮದುವೆ ಮಾಡಿಸು) ॥ 26 ॥ ಸುಲೋಚನೆ = ಸುಂದರನಯನ ವಿರಾಜಿತಳೇ!, ಜನ್ಮಜನ್ಮಾರ್ಜಿತೈಃ = ಜನುಮ ಜನುಮಗಳಲ್ಲಿ ಸಂಪಾದಿಸಿದ, ಪುಣ್ಯೈರೇವ ಹಿ = ಪುಣ್ಯದಿಂದಲೇ, ಏಷಾ = ಇಂಥವಳು, ಲಭ್ಯತೇ = ಲಭಿಸುವಳು (ದೊರಕಲ್ಪಡುವಳು), ಮತ್ಸುಕೃತ್ಯಂ = ನನ್ನ ಸುಕೃತವು, ದರ್ಶನೇನ = ಅವಳ ದರ್ಶನದಿಂದ, ಪಕ್ವತಾಂ ಪ್ರಾಪ್ತಂ = ಪರಿಪಕ್ವವಾಯಿತು (ಪರಿಪಕ್ವವಾಗಿದೆ) ॥ 27 ॥ ಮಾನವಂ ದೇಹಂ = ಮನುಷ್ಯದೇಹವನ್ನು, ಆಸಾದ್ಯ = ಹೊಂದಿ, ಲೋಕೇ = ಜಗತ್ತಿನಲ್ಲಿ, ಅನ್ನಪಾನವಿವರ್ಜಿತಂ = ಅನ್ನಪಾನಾದಿಗಳನ್ನು ಬಿಟ್ಟಿರುವ, ಜಡಮತಿಂ ವಿನಾ = ಮಂದಮತಿಯನ್ನು (ಜಡಮತಿಯನ್ನು) ಬಿಟ್ಟು, ಕಃ ಪುಮಾನ್ = ಯಾವ ಪುರುಷನು ತಾನೇ, ತಾಂ = ಆ, ಕನ್ಯಾಂ = ಕನ್ಯೆಯನ್ನು, ತ್ಯಜೇತ್ = ಬಿಟ್ಟಾನು? ॥ 28 ॥ ಸಖಿ = ಎಲೈ ಸ್ನೇಹಿತಳೇ, ಅನಿತ್ಯೇನ = ಶಾಶ್ವತವಲ್ಲದ, ಕಾರ್ಯಹೀನೇನ = ಯಾವ ಕೆಲಸಕ್ಕೂ ಬಾರದ, ಮೇ = ನನ್ನ, ದೇಹೇನ = ಶರೀರದಿಂದ, ಕಿಂ = ಪ್ರಯೋಜನವೇನು? ಆಶು = ಬೇಗನೆ, ವರಾಂಗೀಂ = ಸುರಸುಂದರಾಕಾರವುಳ್ಳ, ತಾಂ = ಆ, ಆಕಾಶ ನೃಪನಂದಿನೀಂ = ಆಕಾಶರಾಯನ ಮಗಳಾದ ಪದ್ಮಾವತಿಯನ್ನು, ಘಟಯ = ಘಟನೆ ಮಾಡಿಸು ॥ 29 ॥ ವರಾನನೇ = ಶ್ರೇಷ್ಠವದನವಿರಾಜಿತಳೇ, ತಾಂವಿನಾ = ಅವಳನ್ನು ಬಿಟ್ಟು (ಅವಳಿಲ್ಲದೆ), ನಹಿ ಜೀವಾಮಿ = ಬದುಕಿರಲಾರೆನು, ಸತ್ಯಮಿತ್ಯವಧಾರಯ = ಇದು ಸತ್ಯವೆಂದು ತಿಳಿ. ಅಹಂ = ನಾನು, ಶಿಲಾವರ್ಷೈಃ = ಕಲ್ಲಿನ ಮಳೆಯಿಂದ, ತಾಡಿತಃ = ಹೊಡೆಯಲ್ಪಟ್ಟೆನು, ಹತಾಶ್ವೋಽಪಿ = ನನ್ನ ಕುದುರೆಯೂ ಸತ್ತಿತು ॥ 30 ॥ ಮಜ್ಜೀವನಂ = ನನ್ನ ಜೀವನವು, ತದರ್ಥಾಯ = ಅವಳಿಗಾಗಿಯೇ, ಜನಿತಂ = ಹುಟ್ಟಿತು, ಯತಃ = ಯಾವ ಕಾರಣದಿಂದ, ಅತ್ರ ವೇಂಕಟಾಚಲೇ = ಈ ವೇಂಕಟಗಿರಿಯಲ್ಲಿ, ಮೇ = ನನ್ನ, ಅವತಾರಃ = ಆವಿರ್ಭಾವವು, ಪದ್ಮಾವತ್ಯರ್ಥಮೇವ = ಕೇವಲ ಪದ್ಮಾವತಿಗಾಗಿಯೇ, ಅಭೂತ್ = ಆಯಿತು ॥ 31 ॥ ಮೇ = ನನ್ನ, ಪುತ್ರಃ = ಮಗನು, ವೈರಮಾಪನ್ನಃ = ಶತ್ರುತ್ವವನ್ನು ಪಡೆದಿರುವನು, (ಹಗೆಯಾಗಿದ್ದಾನೆ!) ಪೂರ್ವಜನ್ಮನಿ = ಹಿಂದಿನ ಜನ್ಮದಲ್ಲಿ, (ಮಯಾ = ನನ್ನಿಂದ), ಕಿಂ ಕೃತಂ = ಏನು ಮಾಡಲ್ಪಟ್ಟಿತು? ದೃಷ್ಟಿಹೀನೇನ = ಕಣ್ಣಿಲ್ಲದ, ವಿಧಿನಾ = ಬ್ರಹ್ಮನಿಂದ, ನಿರ್ಮಿತಾ = ಸೃಷ್ಟಿಸಲ್ಪಟ್ಟ, ವರಾ = ಉತ್ತಮಳಾದ, ಕನ್ಯಕಾ = ಕನ್ಯೆಯಾದ ಪದ್ಮಾವತಿಯು ॥ 32 ॥ ಮೇ = ನನಗೆ, ಅನಾಯೇಸೇನ = ಶ್ರಮವಿಲ್ಲದಂತೆ (ಸುಲಭವಾಗಿ), ಭೂಯಾತ್ = ಆಗಲಿ (ಪತ್ನಿಯಾಗಿ ದೊರಕಲಿ), ಇತಿ = ಹೀಗೆಂದು, ಮತಿಃ = ಬುದ್ಧಿಯು, (ನ) ನಿಶ್ಚಿತಾ = ನಿಶ್ಚಯಿಸಲ್ಪಡಲಿಲ್ಲ (ಪಾ-ನಾಶ್ರಿತಾ = ಆಶ್ರಯಿಸಲ್ಪಡಲಿಲ್ಲ), ಪೂರ್ವಂ = ಹಿಂದೆ, ಘೋರದರ್ಶನಂ = ಕ್ರೂರವಾಗಿ ಕಾಣುವ, ಮತ್ಪಾಪಂ = ನನ್ನ ಪಾಪವು, ಬ್ರಹ್ಮಣಾ = ಬ್ರಹ್ಮನಿಂದ, ಕಿಂದೃಷ್ಟಂ = ಏನು ನೋಡಲ್ಪಟ್ಟಿತು? ॥ 33 ॥ ಯತ್ = ಯಾವ, ಪಾಪಂ = ಪಾಪವನ್ನು, ಅನುಸೃತ್ಯ = ಅನುಸರಿಸಿ, ವಿಧಿಃ = ಬ್ರಹ್ಮನು, ಏವಂ ಘಟನಂ = ಈ ವಿವಾಹ ಸಂಘಟನೆಯನ್ನು, ನಾ ಕರೋತ್ = ಮಾಡಲಿಲ್ಲ? ಮತ್ = ನನ್ನ, ಭಾಗಸ್ಥಃ = ಪಾಲಿನ (ಪರವಾಗಿರುವ), ವಿಧಿಃ = ಬ್ರಹ್ಮನು (ಪಾ-ವಿಷ್ಣುಃ = ಹರಿಯು), ತ್ವಂಹಿ = ನೀನೇ ಆಗಿದ್ದೀಯೆ, ಅಂಗನೆ = ನಾರೀಮಣಿ, ಮೇ = ನನಗೆ, ಸಾಹಾಯ್ಯಂ = ಸಹಾಯವನ್ನು, ಕುರು = ಮಾಡು ॥ 34 ॥ ಬಾಲೆ = ಬಕುಳೆಯೆ, ನ ಕರಿಷ್ಯಸಿ ಚೇತ್ = ನನಗೆ ಪದ್ಮಾವತಿಯ ಸಂಘಟನೆ ಮಾಡಿಸದಿದ್ದರೆ, (ಮದುವೆ ಮಾಡಿಸದಿದ್ದರೆ), ತದಾ = ಆವಾಗ, ಮೇ = ನನಗೆ, ಮರಣಂ = ಮರಣವು, ಧ್ರುವಂ = ನಿಶ್ಚಿತವು. ಮರಣೇ = ಮರಣೋನ್ಮುಖನಾದವನಿಗೆ, ಜೀವನೋಪಾಯಂ = ಜೀವಿಸಲು ಉಪಾಯವನ್ನು (ಸಹಾಯವನ್ನು), ಯೇ = ಯಾವ, ನರೋತ್ತಮಾಃ = ಉತ್ತಮರಾದ ಮಾನವರು, ಕುರ್ವಂತಿ = ಮಾಡುತ್ತಾರೆಯೋ

|| 35 || ಕನ್ಯಕೇ = ಕನ್ಯೆಯಾದ ಬಕುಳೆ! ತೇ = ಅಂಥವರು, ಪುಣ್ಯಮಾರ್ಗೇಣ = ಪುಣ್ಯಕರಮಾರ್ಗದಿಂದ, ಯಾನೇನ = ದೇವವಿಮಾನದಿಂದ (ವಿಮಾನದಲ್ಲಿ), ದಿವಂ = ಸ್ವರ್ಗವನ್ನು ಕುರಿತು, ಯಾಂತಿ = ತೆರಳುವರು, ಇತ್ಥಂ = ಹೀಗೆ, ಧರ್ಮಾರ್ಥಂ = ಧರ್ಮಕ್ಕಾಗಿ, ಧರ್ಮಮಾರ್ಗಂ = ಧರ್ಮದ ಹಾದಿಯನ್ನು, ಉಪಾಶ್ರಯ = ಆಶ್ರಯಿಸು ||36||

**ಕಿಮುಕ್ತೇನ ವಿಶೇಷಣ ಸಾಧಯಸ್ಯಾಶ್ಚ ಸಂಗಮಮ್ ।**
**ತ್ವಂ ಮೇ ಮಾತಾ ಪಿತಾ ದೇವೀ ಭ್ರಾತಾ ಮಾತುಲ ಏವ ಚ || 37 ||**

**ತ್ವಂ ಪ್ರಹ್ಲಾದಸ್ತ್ವಮಕ್ರೂರಸ್ತ್ವಂ ಧ್ರುವಸ್ತ್ವಂ ಗಜೇಶ್ವರಃ ।**
**ತ್ವಮುದ್ಧವೋ ಮೇ ಭಕ್ತಶ್ಚ ತ್ವಂ ಕಿರೀಟೀ ಬಲಿಸ್ತಥಾ || 38 ||**

**ಅಜಾಮಿಲೋ ದ್ರೌಪದೀ ಚ ಭಕ್ತೋ ಮೇ ತ್ವಂ ವಿಭೀಷಣಃ ।**
**ಏತೇ ಪ್ರಾಣಸಮಾ ಭಕ್ತಾಃ ಅನ್ಯೇ ಭಕ್ತಾಶ್ಚ ಯೇ ಚ ತೇ || 39 ||**

**ಸರ್ವೇ ತ್ವಮೇವ ಬಕುಲೇ ಏತತ್ಕಾರ್ಯಂ ಸಮಾಚರ ।**
**ತ್ವಾಂ ದೃಷ್ಟ್ವಾ ಮೇ ಮನೋಹರ್ಷಂ ಗಚ್ಛತಿ ಸ್ಮ ನಿರಂತರಮ್ || 40 ||**

**ಮದ್ದುಃಖವ್ಯಪನೋದಾಯ ನಿರ್ಮಿತಾ ಹರಿಣಾಂಗನಾ ।**
**ಗವಾಂಕೋಟಿಸಹಸ್ರಾಣಾಂ ಹಯಾನಾಮಯುತಂ ತಥಾ || 41 ||**

**ಸುವರ್ಣತಿಲದಾನಾನಾಂ ಸಮಂ ಮಾಂಗಲ್ಯಬಂಧನಮ್ ।**
**ಕನ್ಯಾಂ ದೃಷ್ಟ್ವಾತಿಸಂತೋಷಂ ಲಭಸೇ ನಾತ್ರ ಸಂಶಯಃ ।**
**ಇತಿತೇನ ಸಮಾಜ್ಞಪ್ತಾ ಬಕುಲಾ ವಾಕ್ಯಮಬ್ರವೀತ್ || 42 ||**

ವಿಶೇಷಣ = ವಿಶೇಷರೀತಿಯಿಂದ, ಉಕ್ತೇನ ಕಿಂ = ಹೇಳುವುದರಿಂದೇನು ಪ್ರಯೋಜನ? (ಹೆಚ್ಚು ಹೇಳುವುದೇನಿದೆ?), ಅಸ್ಯಾಶ್ಚ = ಪದ್ಮಾವತಿಯ, ಸಂಗಮಂ = ವಿವಾಹ ಸಂಬಂಧವನ್ನು, ಸಾಧಯ = ಸಾಧಿಸು. ದೇವಿ = ಎಲೈ ಬಕುಳಮಾಲಿಕೆ! ತ್ವಂ = ನೀನು, ಮೇ = ನನ್ನ, ಮಾತಾ = ತಾಯಿಯು, ಪಿತಾ = ತಂದೆಯು, ಭ್ರಾತಾ = ಅಣ್ಣನು, ಚ = ಮತ್ತು ಮಾತುಲಏವ = ಸೋದರಮಾವನೂ ಸಹ || 37 || ತ್ವಂ = ನೀನೇ, ಪ್ರಹ್ಲಾದಃ = ಭಕ್ತಾಗ್ರಣಿಯಾದ ಪ್ರಹ್ಲಾದನು, ಅಕ್ರೂರಸ್ತ್ವಂ = ಅಕ್ರೂರನೂ ನೀನೇ, ತ್ವಂ = ನೀನು, ಧ್ರುವಃ = ಧ್ರುವಕುಮಾರನು, ತ್ವಂ = ನೀನೇ, ಗಜೇಶ್ವರಃ = ಗಜೇಂದ್ರನು (ಪಾ-ಹರೀಶ್ವರಃ = ಸುಗ್ರೀವನು), ಚ = ಮತ್ತು, ತ್ವಂ = ನೀನು, ಉದ್ಧವಃ = ಉದ್ಧವನು, ಕಿರೀಟೀ = ಅರ್ಜುನನು, ತಥಾ = ಹಾಗೆಯೇ, ಭಕ್ತಃ = ಭಕ್ತನಾದ, ತ್ವಂ ಬಲಿಶ್ಚ = ಬಲಿರಾಜನೂ ನೀನೇ || 38 || ಅಜಾಮಿಲಃ = ಅಜಾಮಿಳನೂ, ದ್ರೌಪದೀಚ = ದ್ರೌಪದಾದೇವಿಯೂ ಸಹ, ತ್ವಂ = ನೀನು, ಮೇ = ನನಗೆ, ಭಕ್ತಃ = ಭಕ್ತನಾದ, ವಿಭೀಷಣಃ = ವಿಭೀಷಣನು, ಏತೇ ಭಕ್ತಾಃ = ಈ ಭಕ್ತರೆಲ್ಲರೂ, ಪ್ರಾಣಸಮಾಃ = ನನಗೆ ಪ್ರಾಣಸಮಾನರು, ಯೇ = ಯಾರು, ಅನ್ಯೇಚ = ಇತರರಾದ, ಭಕ್ತಾಶ್ಚ = ಭಕ್ತರೇನಿದ್ದಾರೋ || 39 || ತೇ ಸರ್ವೇ = ಅವರೆಲ್ಲರೂ, ತ್ವಮೇವ = ನೀನೇ ಆಗಿದ್ದೀಯೆ. ಬಕುಲೆ = ಬಕುಳೆಯೇ, ಏತತ್ಕಾರ್ಯಂ = ಈ ಮಂಗಳ ಕಾರ್ಯವನ್ನು, ಸಮಾಚರ = ಯಶಸ್ವಿಯಾಗಿ

ನೆರವೇರಿಸುವವಳಾಗು, ತ್ವಾಂ = ನಿನ್ನನ್ನು, ದೃಷ್ಟ್ವಾ = ನೋಡಿ, ಮೇ = ನನ್ನ, ಮನಃ = ಮನಸ್ಸು, ನಿರಂತರಂ = ಸರ್ವದಾ, ಹರ್ಷಂ = ಸಂತೋಷವನ್ನು, ಗಚ್ಛಂತಿ ಸ್ಮ = ಪಡೆಯುತ್ತಿದೆ ॥ 40 ॥ ಮದ್ದುಃಖ ವ್ಯಪನೋದಾಯ = ನನ್ನ ದುಃಖ ಪರಿಹಾರಕ್ಕಾಗಿ, ಹರಿಣಾ = ಶ್ರೀಹರಿಯಿಂದ, ನಿರ್ಮಿತಾ = ಸೃಜಿಸಲ್ಪಟ್ಟ, ಅಂಗನಾ (ತ್ವಂ) = ಸ್ತ್ರೀಯಾಗಿದ್ದೀಯೆ, ಮಾಂಗಲ್ಯ ವರ್ಧನಂ = ಮದುವೆ ಮಾಡಿಸುವುದು, ಕೋಟಿ ಸಹಸ್ರಾಣಾಂ = ಸಾವಿರ ಕೋಟಿ ಸಂಖ್ಯಾಕವಾದ, ಗವಾಂ = ಗೋವುಗಳ; ತಥಾ = ಹಾಗೆಯೇ, ಅಯುತಂ = ಹತ್ತು ಸಾವಿರ, ಹಯಾನಾಂ = ಕುದುರೆಗಳು, ॥ 41 ॥ ಸುವರ್ಣತಿಲದಾನಾನಾಂ = ಬಂಗಾರದ ಎಳ್ಳು ದಾನಗಳಿಗೆ, ಸಮಂ = ಸಮಾನವು, ಕನ್ಯಾಂ = ಆ ಕನ್ಯೆಯಾದ ಪದ್ಮಾವತಿಯನ್ನು, ದೃಷ್ಟ್ವಾ = ನೋಡಿ, (ತ್ವಂ = ನೀನು), ಅತಿಸಂತೋಷಂ = ಅತ್ಯಂತ ಆನಂದವನ್ನು, ಲಭಸೇ = ಪಡೆಯುತ್ತೀಯೆ. ಅತ್ರ = ಈ ವಿಚಾರದಲ್ಲಿ ನ ಸಂಶಯಃ = ಸಂದೇಹವಿಲ್ಲ, ಇತಿ = ಹೀಗೆ, ತೇನ = ಶ್ರೀನಿವಾಸನಿಂದ, ಸಮಾಜ್ಞಪ್ತಾ = ಹೇಳಿಸಿಕೊಂಡು, ಬಕುಲಾ = ಬಕುಳಾದೇವಿಯು, ವಾಕ್ಯಮಬ್ರವೀತ್ = ಮಾತನಾಡಿದಳು ॥ 42 ॥

*ಬಕುಲೋವಾಚ–*

**ಕುತ್ರಾಸ್ತೇ ಜಗದಾಧಾರ ತ್ವಯಾ ಯತ್ರ ನಿರೀಕ್ಷಿತಾ ।**
**ತನ್ಮಾರ್ಗಂ ವದ ಗೋವಿಂದ ಗಚ್ಛಾಮಿ ಕರುಣಾನಿಧೇ ॥ 43 ॥**

**ಕಾ ಸಾ ಪೂರ್ವಂ ಕಿಮರ್ಥಂ ಚ ಕನ್ಯಕಾ ಜನಿತಾ ಭುವಿ ।**
**ತದ್ವೃತ್ತಮಖಿಲಂ ಬ್ರೂಹಿ ಸತ್ಯೇನ ಮಮ ಕೇಶವ ॥ 44 ॥**

**ತಯಾಜ್ಞಪ್ತೋ ವಿರಂಚೀಶವಿನತಾಂಘ್ರಿಸರೋರುಹಃ ।**
**ಉವಾಚ ವಚನಂ ಮಂದಂ ಬಕುಲಾಂ ಧಾರಿಣೀಸಖಿಮ್ ॥ 45 ॥**

ಬಕುಲೋವಾಚ = ಬಕುಳೆಯು ಹೇಳಹತ್ತಿದಳು (ಹೇಳುತ್ತಿದ್ದಾಳೆ). ಜಗದಾಧಾರ = ಜಗತ್ತಿಗೆ ಆಧಾರ (ಆಶ್ರಯ)ನಾದ, ಕರುಣಾನಿಧೇ = ದಯಾನಿಧಿಯಾದ ಶ್ರೀನಿವಾಸ!, ಗೋವಿಂದ = ಶ್ರೀಹರಿಯೇ, ತ್ವಯಾ = ನಿನ್ನಿಂದ, ಯಾ = ಯಾವ ಕನ್ಯೆಯು, (ಅತ್ರ = ಕಾಡಿನಲ್ಲಿ) ಯತ್ರ = ಎಲ್ಲಿ, ನಿರೀಕ್ಷಿತಾ = ನೋಡಲ್ಪಟ್ಟಳೋ, ತನ್ಮಾರ್ಗಂ = ಆ ದಾರಿಯನ್ನು, ವದ = ಹೇಳುವವನಾಗು, ಗಚ್ಛಾಮಿ = (ಆ ಮಾರ್ಗವಾಗಿ) ಹೋಗುತ್ತೇನೆ ॥ 43 ॥ ಕೇಶವ = ಬ್ರಹ್ಮರುದ್ರಾದಿಗಳಿಗೆ ನಿಯಾಮಕನಾದ ಶ್ರೀಹರಿಯೇ, ಸಾ = ಆ ಕನ್ಯೆಯು, ಪೂರ್ವಂ = ಹಿಂದೆ (ಹಿಂದಿನ ಜನ್ಮದಲ್ಲಿ), ಕಾ = ಯಾರು? (ಯಾರಾಗಿದ್ದಳು?), ಚ = ಮತ್ತು, ಕನ್ಯಕಾ = ಆ ಕನ್ನಿಕೆಯು, ಭುವಿ = ಈ ಪ್ರಪಂಚದಲ್ಲಿ, ಕಿಮರ್ಥಂ = ಏತಕ್ಕಾಗಿ, ಜನಿತಾ = ಹುಟ್ಟಿದಳು?, ಮಮ = ನನಗೆ, ಅಖಿಲಂ ತದ್ವೃತ್ತಂ = ಆ ಸಕಲ ವಿಚಾರಗಳನ್ನು, ಸತ್ಯೇನ = ಸತ್ಯವಾಗಿ, ಬ್ರೂಹಿ = ಹೇಳು ॥ 44 ॥ ತಯಾ = ಬಕುಳಮಾಲಿಕೆಯಿಂದ, ಆಜ್ಞಪ್ತಃ = ಹಿಂದೆ ಹೇಳಿದಂತೆ ಪ್ರಶ್ನಿಸಲ್ಪಟ್ಟ, ವಿರಿಂಚೀಶ ವಿನತಾಂಘ್ರಿ ಸರೋರುಹಃ – ವಿರಂಚೀ = ಬ್ರಹ್ಮನು, ಈಶ = ರುದ್ರನು, ಇವರಿಂದ, ವಿನತ = ನಮಸ್ಕಾರ ಮಾಡಿಸಿಕೊಳ್ಳಲ್ಪಟ್ಟ, ಅಂಘ್ರಿ ಸರೋರುಹಃ = ಪಾದಕಮಲವುಳ್ಳ ಶ್ರೀನಿವಾಸನು, ಧರಣೀಸಖಿಂ = ವರಾಹದೇವರ ಪತ್ನಿಯಾದ ಭೂದೇವಿಗೆ ಗೆಳತಿಯಾದ, ಅಥವಾ ಆಕಾಶರಾಜನಪತ್ನಿಯಾದ ಧರಣೀದೇವಿಗೆ ಮಿತ್ರಳಾದ; ಈ ಭೂಮಿಯಲ್ಲಿ ತನಗೆ ಸಖಿಯಾದ, ಬಕುಲಾಂ = ಬಕುಳಾದೇವಿಯನ್ನು ಕುರಿತು, ಮಂದಂ = ಮೆಲ್ಲಗೆ (ನಿಧಾನವಾಗಿ), ವಚನಂ = ಮಾತನ್ನು, ಉವಾಚ = ಹೇಳಿದನು ॥ 45 ॥

ಶ್ರೀನಿವಾಸ ಉವಾಚ -

**ಶ್ರುಣು ಬಾಲೇ ಪುರಾವೃತ್ತಂ ಪದ್ಮಾವತ್ಯಾ ಜನಿಂ ಶುಭಾಂ ।**
**ತ್ರೇತಾಯಾಂ ರಾಮರೂಪೇಣ ಅವತಾರಮುಪಾಗತಃ ॥ 46 ॥**

**ಪಿತೃಮಾತೃವಚಃ ಶ್ರುತ್ವಾ ದಂಡಕಾರಣ್ಯ ಮಾಗತಃ ।**
**ಲಕ್ಷ್ಮಣೇನ ಸಹ ಭ್ರಾತ್ರಾ ಸೀತಯಾ ಭಾರ್ಯಯಾ ಶುಭೇ ॥ 47 ॥**

**ಪುರಾ ತು ರಾವಣೋ ನಾಮ ರಾಕ್ಷಸೋ ಲೋಕಕಂಟಕಃ ।**
**ಲೋಕಭರ್ತುಸ್ಸತೀಂ ಹೃತ್ವಾಂ ಲಂಕಾಂ ಗಂತುಮವರ್ತತ ।**
**ಲಕ್ಷ್ಮಣೋಽಪ್ಯಗ್ರಜಂ ದ್ರಷ್ಟುಂ ಸೀತಯಾ ಪ್ರೇರಿತೋ ವನೇ ॥ 48 ॥**

**ತತ್ಕಾಲಮಾಲಕ್ಷ್ಯ ಸರಾಕ್ಷಸೇಂದ್ರೋ ವಿಮಾನಮಾರೋಪಯಿತುಂ ಹಿ ಸೀತಾಮ್ ।**
**ಪ್ರಾವರ್ತತೈಷಾ ಚ ತದಾ ರುರಾವ ಹಾ ರಾಮ ಹಾ ಲಕ್ಷ್ಮಣ ರಾಘವೇತಿ ॥ 49 ॥**

**ತದಾರ್ತರಾವೇಣ ತದಾ ವನೌಕಸೋ ವಿಚುಕ್ರುಶುಸ್ತತ್ರ ವನಾಂತರ ಸ್ಥಿತಾಃ ।**
**ತದ್ವಾಕ್ಯಮಾಕರ್ಣ್ಯ ಹವಿರ್ಭುಜೋಽಪಿ ಪಾತಾಲಲೋಕಾದಪತದ್ಧರಾತಲಮ್ ॥ 50 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳುತ್ತಲಿದ್ದಾನೆ. ಬಾಲೇ = ಬಕುಳಾದೇವಿ!, ಶುಭಾಂ = ಮಂಗಳಪ್ರದಳಾದ, ಪದ್ಮವತ್ಯಾಃ = ಪದ್ಮಾವತಿಯ, ಶುಭಾಂ = ಮಂಗಳಪ್ರದವಾದ, ಪುರಾವೃತ್ತಂ = ಹಿಂದಿನ ಚರಿತ್ರೆಯನ್ನು (ಹಿಂದಿನ ಕಥೆಯನ್ನು) ಜನಿಂ = ಈಗಿನ ಜನನವನ್ನೂ, ಶ್ರುಣು = ಕೇಳುವವಳಾಗು. (ಅಹಂ = ನಾನು), ತ್ರೇತಾಯಾಂ = ತ್ರೇತಾಯುಗದಲ್ಲಿ ರಾಮರೂಪೇಣ = ಶ್ರೀರಾಮಚಂದ್ರನ ರೂಪದಿಂದ, ಅವತಾರಂ = ಪ್ರಾದುರ್ಭಾವವನ್ನು, ಉಪಾಗತಃ = ಹೊಂದಿದೆನು, ॥ 46 ॥ ಶುಭೆ = ಮಂಗಳಕರಳಾದ ಬಕುಳೆ, ಪಿತೃಮಾತೃವಚಃ = ತಂದೆ ತಾಯಿಗಳಾದ ದಶರಥಮಹಾರಾಜ, ಚಿಕ್ಕಮ್ಮ ಕೈಕೇಯಿದೇವಿಯರ ಮಾತನ್ನು, ಶ್ರುತ್ವಾ = ಕೇಳಿ, ಭಾರ್ಯಯಾ ಸೀತಯಾ = ಪತ್ನಿಯಾದ ಸೀತಾದೇವಿಯೊಡನೆ, ಭ್ರಾತ್ರಾ = ತಮ್ಮನಾದ, ಲಕ್ಷ್ಮಣೇನ ಸಹ = ಲಕ್ಷ್ಮಣನೊಡನೆ, ದಂಡಕಾರಣ್ಯಂ (ಪ್ರತಿ) = ದಂಡಕಾರಣ್ಯವನ್ನು ಕುರಿತು, ಆಗತಃ = ಬಂದೆನು ॥ 47 ॥ ಪುರಾತು = ಪೂರ್ವದಲ್ಲಿ, ಲೋಕಕಂಟಕಃ = ಲೋಕಕಂಟಕನಾದ (ಜನರಿಗೆ ಮುಳ್ಳಿನಂತಿದ್ದ), ರಾವಣೋನಾಮ = ರಾವಣನೆಂಬ ಹೆಸರಿನ, ರಾಕ್ಷಸಃ = ರಾಕ್ಷಸನು, ಲೋಕಭರ್ತುಃ = ಜಗದೊಡೆಯನಾದ ರಾಮನ (ನನ್ನ), ಸತೀಂ = ಪತ್ನಿಯಾದ ಸೀತೆಯನ್ನು, ಹೃತ್ವಾ = ಅಪಹರಿಸಿ, ಲಂಕಾಂ ಗಂತು = ಲಂಕೆಗೆ ಹೋಗಲು, ಅವರ್ತತ = ಸಿದ್ಧನಾಗಿ ನಿಂತನು, (ಆ ಸಮಯದಲ್ಲಿ), ಲಕ್ಷ್ಮಣೋಽಪಿ = ಲಕ್ಷ್ಮಣನೂ ಸಹ, ಸೀತಯಾ ಪ್ರೇರಿತಃ = ಸೀತೆಯಿಂದ ಪ್ರೇರಿಸಲ್ಪಟ್ಟವನಾಗಿ, ವನೇ = ವನದಲ್ಲಿ, ಅಗ್ರಜಂ = ರಾಮನನ್ನು, ದ್ರಷ್ಟುಂ = ನೋಡಲು (ಹೋಗಿದ್ದನು), ॥ 48 ॥ ಸರಾಕ್ಷಸೇಂದ್ರಃ = ಆ ರಕ್ಕಸರೊಡೆಯನಾದ ರಾವಣನು, ತತ್ಕಾಲಂ = ಲಕ್ಷ್ಮಣನಿಲ್ಲದಿರುವ ಸಮಯವನ್ನು, ಆಲಕ್ಷ್ಯ = ಗಮನಿಸಿ, (ಅಂದರೆ ರಾಮಲಕ್ಷ್ಮಣರಿಲ್ಲದ ವೇಳೆಯನ್ನು ಗಮನಿಸಿ), ಸೀತಾಂ = ಸೀತಾದೇವಿಯನ್ನು, ವಿಮಾನಮಾರೋಪಯಿತುಂ = ವಿಮಾನದಲ್ಲಿ ಹತ್ತಿಸಿಕೊಳ್ಳಲು, ಪ್ರಾವರ್ತತ = ಪ್ರವರ್ತಿಸಿದನು (ಪ್ರಯತ್ನಿಸಿದನು), ಹಿ = ಇದು ಪ್ರಸಿದ್ಧವು. ತದಾ ಚ = ಆವಾಗ, ಏಷಾ = ಸೀತೆಯು, ಹಾ ರಾಮ = ಹಾ ರಾಮಚಂದ್ರ, ಹಾ ಲಕ್ಷ್ಮಣ = ಅಯ್ಯೋ ಲಕ್ಷ್ಮಣ, ರಾಘವ = ರಘುಕುಲತಿಲಕ ಎಂದು, ರುರಾವ = ಅತ್ತಳು ॥ 49 ॥ ತದಾ = ಆಗ, ತತ್ರ = ಆ ಅರಣ್ಯದಲ್ಲಿ, ವನಾಂತರಸ್ಥಿತಾಃ =

ವನದ ಮಧ್ಯಭಾಗದಲ್ಲಿರುವ, ಅರಣ್ಯವಾಸಿಗಳು, (ಗಿಡಬಳ್ಳಿಗಳು, ಪಕ್ಷಿಸಂಕುಲವು), ತದಾರ್ತರಾವೇಣ = ಸೀತೆಯು ಆರ್ತಧ್ವನಿಯಿಂದ ದುಃಖಿಸಿ, ವಿಚುಕ್ರುಶುಃ = ಕೂಗಿಕೊಂಡರು (ಕಿರುಚಿದವು), ಹವಿರ್ಭುಜೋಽಪಿ = ಅಗ್ನಿದೇವನೂ ಕೂಡ, ತದ್ವಾಕ್ಯಮಾಕರ್ಣ್ಯ = ಸೀತೆ 'ಹಾ ರಾಮ, ಹಾ ಲಕ್ಷ್ಮಣ' ಎಂಬ ಮಾತನ್ನು ಕೇಳಿ, ಪಾತಾಲಲೋಕಾತ್ = ಪಾತಾಳ ಲೋಕದಶೆಯಿಂದ, ಧರಾತಲಂ (ಪ್ರತಿ) = ಭೂತಳವನ್ನು ಕುರಿತು, ಆಪತತ್ = ಬಂದವನಾದನು ।। 50 ।।

**ಸಮಾಯಾಂತಂ ಧುರಾದರ್ಶಮಾಕರ್ಷಂತಂ ಚ ಜಾನಕೀಮ್ ।**
**ಸಂಭಾಷ್ಯ ರಾವಣಂ ಕ್ರೂರಂ ಪಾತಾಲಾದುಪಗಮ್ಯ ಚ ।। 51 ।।**

**ರಾವಣೇನ ಸುಪಾಪೇನ ಸಹಿತಸ್ಸೀತಯಾ ಸಹ ।**
**ರಾವಣಂ ಬೋಧಯಾಮಾಸ ನಾನಾವಾಕ್ಯಗಣೈಸ್ಸಹ ।। 52 ।।**

**ಇಯಂ ಜನಕಪುತ್ರೀ ನ ವಿಪ್ರಪತ್ನೀ ನರೇಶ್ವರ ।**
**ರಾಘವಸ್ತ್ವದ್ಭಯಾದ್ರಕ್ಷೋ ಜಾನಕೀಂ ಮಮ ಸನ್ನಿಧೌ ।। 53 ।।**

**ಸಂಸ್ಥಾಪ್ಯ ವಿಪನೇ ರಾಮಃ ಸಂಚರನ್ ಸಹ ಲಕ್ಷ್ಮಣಃ ।**
**ಶಿಷ್ಯೋಽಸಿ ಪರಮೋಽದಾರ ಮಮ ಕಲ್ಯಾಣ ರಾವಣ ।।**
**ಪ್ರಿಯೋಽಸಿ ಮಾಗಮೋ ವಿಪ್ರಪತ್ನ್ಯಾಂ ಸೀತಾಭ್ರಮೋ ವೃಥಾ ।**
**ಇತಿ ಪ್ರತಾರಯನ್ನಕ್ಷಚ್ಛದ್ಮನಾ ಜನಕಾತ್ಮಜಾಮ್ ।। 54 ।।**

**ಇತ್ಥಂ ಸ್ವಲೋಕಮಾದಾಯ ತಾಂ ಸಂಪೂಜಯಿತುಂ ದ್ರುತಂ ।**
**ಸ್ವಾಹಾಯಾಂ ಸನ್ನಿವೇಶ್ಯಾಥ ನಾಮ್ನಾ ವೇದವತೀಂ ಶುಭಾಮ್ ।। 55 ।।**

**ಸೀತಾಕೃತಿಂ ತತಃ ಕೃತ್ವಾ ಮಾಯಯಾ ಮೇಷವಾಹನಃ ।**
**ಪ್ರದರ್ಶಯನ್ನುವಾಚಾಥ ರಾವಣಂ ಪ್ರೀಣಯನ್ನಿವ ।।**
**ಇಮಾಂ ಸೀತಾಂ ಸಮಾದಾಯ ಗಚ್ಛ ಶೀಘ್ರಂ ನಿಶಾಚರ ।**
**ಹರಾವಗ್ನೌ ವಿಶೇಷಣ ಭಕ್ತಿ ರ್ವ್ಯೈ ರಾವಣಸ್ಯ ಚ ।। 56 ।।**

**ತಸ್ಮಾದಗ್ನಿವಚಃ ಶ್ರುತ್ವಾ ಜಾನಕೀಂ ಮನಸಾ ಸ್ಮರನ್ ।**
**ಅಜ್ಞಾನಾನ್ಮನ್ಯಮಾನೋಽಸೌ ರಾವಣೋ ಮೋಹದರ್ಪಿತಃ ।। 57 ।।**

**ಲಂಕಾಂ ಗತ್ವಾಽಶೋಕವನೇ ಶಿಂಶುಪಾವೃಕ್ಷಮೂಲತಃ ।**
**ಸ್ಥಾಪ್ಯ ಸೀತಾಕೃತಿಂ ಕ್ರೂರೋ ವಿಷ್ಣ್ವಾವಿಷ್ಟಾಂ ಸ ರಾಕ್ಷಸಃ ।। 58 ।।**

**ಕೃತಕೃತ್ಯಂ ತದಾಽತ್ಮಾನಂ ಮೇನೇ ವೈ ಕಾಲಚೋದಿತಃ ।**
**ರಾಮೋ ಗತ್ವಾ ತು ತಂ ಹತ್ವಾ ರಾವಣಂ ಸಗಣಂ ಖಲಮ್ ।**
**ಸೀತಾಂ ಪ್ರಾಪ್ಯ ಜಗನ್ನಾಥಸ್ತ್ವಯೋಧ್ಯಾಂ ಪರ್ಯಪದ್ಯ ಚ ।। 59 ।।**

**ತಾಂತು ಲೋಕಾಪವಾದೇನ ಸೀತಾಮಗ್ನೌ ಪ್ರವೇಶ್ಯ ಚ ।**
**ಸೀತಾದ್ವಂದ್ವಂ ತದಾ ದೃಷ್ಟ್ವಾ ಉವಾಚ ನಿಜಭಾಮಿನೀಮ್ ॥ 60 ॥**

**ಕಾ ಸಾ ದೇವೀ ತವ ಸಮಾ ತವರೂಪ ಸಮನ್ವಿತಾ ।**
**ನ ಜಾನೇಽಹಂ ವರಾಂಗೀಂ ತಾಂ ತವ ಬಿಂಬಸಮಾಂ ಶುಭಾಮ್ ॥ 61 ॥**

ಪಾತಾಲಾದುಪಾಗಮ್ಯ = ಪಾತಾಳದಿಂದ ಬಂದು, ಸಮಾಯಾತಂ ಚ = ಅಲ್ಲಿಗೆ ಆ ವೇಳೆಗಾಗಲೇ ಬಂದಿರುವವನಾದ, ಜಾನಕೀಂ = ಸೀತಾದೇವಿಯನ್ನು, ಆಕರ್ಷಂತಂ = ಎಳೆಯುತ್ತಿರುವ, ದುರಾದರ್ಷಂ = ಜಯಿಸಲಶಕ್ಯನಾದ, ಕ್ರೂರಂ = ಕ್ರೂರಿಯಾದ, ರಾವಣಂ = ರಾವಣನನ್ನು ಕುರಿತು, ಸಂಭಾಷ್ಯ = ಮಾತನಾಡಿ, ಸೀತಯಾ ಸಹ = ಸೀತೆಯೊಡನೆ, ಸಹಿತಃ = ಇರುವ, (ರಾವಣಂ ಪ್ರತಿ) = ರಾವಣನನ್ನು ಕುರಿತು, ಅಗ್ನಿದೇವನು – ನಾನಾವಾಕ್ಯಗಣೈಸ್ಸಹ = ಬಹುಬಗೆಯಾದ ಮಾತಿನ ಮೋಡಿಯಿಂದ, ಬೋಧಯಾಮಾಸ = ಉಪದೇಶ ಮಾಡಿದನು ॥ 51-52 ॥ ನರೇಶ್ವರ – ಎಲೈ ಜನಪತಿಯೇ, ಇಯಂ = ಇವಳು, ಜನಕಪುತ್ರೀ ನ = ಜನಕರಾಯನ ಮಗಳಾದ ಸೀತೆಯಲ್ಲ, ಇಯಂ = ಇವಳು, ವಿಪ್ರಪತ್ನೀ = ಬ್ರಾಹ್ಮಣ ಪತ್ನಿಯು, ತ್ವದ್ಭಯಾತ್ = ನಿನ್ನ ಹೆದರಿಕೆಯಿಂದ, ರಾಘವಃ = ರಾಮನು, ಜಾನಕೀಂ = ಸೀತೆಯನ್ನು, ಮಮ = ನನ್ನ, ಸನ್ನಿಧೌ = ಸನ್ನಿಧಿಯಲ್ಲಿ (ಬಳಿಯಲ್ಲಿ) ॥ 53 ॥ ಸಂಸ್ಥಾಪ್ಯ = ಸ್ಥಾಪಿಸಿ ಅಂದರೆ ಇಟ್ಟು, ರಾಮಃ = ರಾಮನು, ವಿಪನೇ = ಕಾಡಿನಲ್ಲಿ, ಸಹಲಕ್ಷ್ಮಣಃ = ಲಕ್ಷ್ಮಣನೊಡನೆ, ಸಂಚರನ್ (ವರ್ತತೇ) = ಸಂಚರಿಸುತ್ತಿದ್ದಾನೆ. ಕಲ್ಯಾಣ = ಮಂಗಳಕರನಾದ, ಪರಮೋದಾರ = ಬಹುಉದಾರಿಯಾದ, ರಾವಣ = ಎಲೈ ರಾವಣನೇ!, ಮಮ ಶಿಷ್ಯೋಽಸಿ = (ನೀನು) ನನಗೆ ಶಿಷ್ಯನಾಗಿದ್ದೀಯೆ, ಪ್ರಿಯೋಽಸಿ = ಪ್ರೀತಿಪಾತ್ರನಾಗಿದ್ದೀಯೆ, ವಿಪ್ರಪತ್ನ್ಯಾಂ = ಬ್ರಾಹ್ಮಣಸತಿಯಲ್ಲಿ, ವೃಥಾ = ವ್ಯರ್ಥವಾಗಿ, ಸೀತಾಭ್ರಮೋ = ಸೀತೆಯೆಂಬ ಭ್ರಾಂತಿಯನ್ನು, ಮಾಗಮಃ = ಹೊಂದಬೇಡ, ಇತಿ = ಈ ಪ್ರಕಾರವಾಗಿ, ಜನಕಾತ್ಮಜಾಂ (ಪ್ರತಿ) = ಜಾನಕಿಯ ವಿಚಾರವಾಗಿ, ಪ್ರತಾರಣ ಮಾಡುತ್ತಾ, ಅಕ್ಷಭದ್ಮನಾ = ಮಾಯೆಯಿಂದ, ಪ್ರತಾರಯನ್ = ಮೋಸ ಮಾಡಿ ॥ 54 ॥ ಇತ್ಥಂ = ಹೀಗೆ, ತಾಂ = ಸೀತೆಯನ್ನು, ದ್ರುತಂ = ಬೇಗನೆ, ಸ್ವಲೋಕಮಾದಾಯ = ತನ್ನ ಲೋಕಕ್ಕೆ ಕರೆದುತಂದು, ತಾಂ = ಸೀತೆಯನ್ನು, ಸಂಪೂಜಯಿತುಂ = ಪೂಜಿಸಲು, ಸ್ವಾಹಾಯಾಂ = ತನ್ನ ಪತ್ನಿಯಾದ ಸ್ವಾಹಾ ದೇವಿಯಲ್ಲಿ, ಸನ್ನಿವೇಶ್ಯ = ಇಡುವವನಾಗಿ, ಅಥ = ಆನಂತರ, ಶುಭಾಂ = ಶುಭಕರಳಾದ, ನಾಮ್ನಾ = ಹೆಸರಿನಿಂದ, ವೇದವತೀಂ = ವೇದವತಿಯೆಂಬುವವಳನ್ನು ॥ 55 ॥ ಮೇಷವಾಹನಃ = ಅಗ್ನಿ ದೇವನು, ಸ್ವಮಾಯಯಾ = ತನ್ನ ಮಾಯೆಯಿಂದ, ಸೀತಾಕೃತಿಂ = ಸೀತೆಯರೂಪ, ಅಲಂಕಾರಗಳಂತೆಯೇ ಇರುವ ಬೇರೊಂದು ಸೀತೆಯ ಆಕಾರವನ್ನು, ಕೃತ್ವಾ = ಮಾಡಿ, ತತಃ = ಆನಂತರ, ಪ್ರದರ್ಶಯನ್ = ರಾವಣನಿಗೆ ಇವಳೇ ನಿಜವಾದ ಸೀತೆಯೆಂದು ತೋರಿಸಿ, ಪ್ರೀಣಯನ್ನಿವ = ಸಂತೋಷ(ಪ್ರೀತಿ) ಪಡಿಸುವವನಂತೆ – (ವಾಲ್ಮೀಕಿ ರಾಮಾಯಣದಲ್ಲಿ ಸುಂದರಕಾಂಡದಲ್ಲಿ ಈ ವಿಚಾರ ಸ್ಪಷ್ಟವಾಗಿ ಉಕ್ತವಾಗಿದೆ). ರಾವಣಂ (ಪ್ರತಿ) = ರಾವಣನನ್ನು ಕುರಿತು, ನಿಶಾಚರ = ಎಲೈ ರಾಕ್ಷಸನಾದ ರಾವಣನೇ!, ಇಮಾಂ ಸೀತಾಂ = ಈ ಸೀತೆಯನ್ನು, ಸಮಾದಾಯ = ತೆಗೆದು (ಕರೆದು)ಕೊಂಡು, ಶೀಘ್ರಂ = ಬೇಗ ಗಚ್ಛ = (ಲಂಕೆಗೆ) ಹೊರಟುಹೋಗು, ಇತಿ = ಹೀಗೆ, ಉವಾಚ = ಹೇಳಿದನು, ರಾವಣಸ್ಯ = ರಾವಣನಿಗೆ, ಹರಾವಗ್ನೌ – ಹರೌ = ರುದ್ರದೇವರಲ್ಲಿ, ಅಗ್ನೌ = ಅಗ್ನಿದೇವನಲ್ಲೂ, ವಿಶೇಷೇಣ = ವಿಶೇಷಾಕಾರವಾಗಿ (ಹೆಚ್ಚಾಗಿ), ಭಕ್ತಿರ್ವೈ = ಭಕ್ತಿಯುಂಟು ॥ 56 ॥ ತಸ್ಮಾತ್ = ಆದುದರಿಂದ, ಅಗ್ನಿವಚಃ = ಅಗ್ನಿದೇವನ ಮಾತನ್ನು, ಶ್ರುತ್ವಾ = ಕೇಳಿದವನಾಗಿ, ಜಾನಕೀಂ = ಸೀತೆಯನ್ನು, ಮನಸಾಸ್ಮರನ್ = ಮನದಲ್ಲಿ ಚಿಂತಿಸುತ್ತಾ (ಸ್ಮರಿಸುತ್ತಾ), ರಾವಣಃ = ರಾವಣನು, ಅಜ್ಞಾನಾತ್ = ಅಜ್ಞಾನದಿಂದ ವೇದವತಿಯನ್ನು, ಜಾನಕೀಂ ಮನ್ಯಮಾನಃ = ಸೀತೆಯೆಂದೇ ತಿಳಿದು, ಮೋಹದರ್ಪಿತಃ = ಮೋಹದಿಂದ ಮದಿಸಿದವನಾಗಿ ॥ 57 ॥

ಕ್ರೂರಃ = ಕ್ರೂರಿಯಾದ, ಸಃ ರಾಕ್ಷಸಃ = ಆ ರಕ್ಕಸನಾದ ದಶಕಂಠನು, ಲಂಕಾಂಗತ್ವಾ = ಲಂಕೆಗೆ ತೆರಳಿ, ಅಶೋಕವನೇ = ಅಶೋಕವನದಲ್ಲಿ, ಶಿಂಶುಪಾವೃಕ್ಷಮೂಲತಃ = ಶಿಂಶುಪಾವೃಕ್ಷದ ಬುಡದಲ್ಲಿ, ವಿಷ್ಣ್ವಾವಿಷ್ಟಾಂ = ವಿಷ್ಣುವಿನ ಆವೇಶವುಳ್ಳ (ಪಾ- ಇಂದ್ರಾವಿಷ್ಟಾಂ = ಇಂದ್ರನ ಆವೇಶವುಳ್ಳ), ಸೀತಾಕೃತಿಂ = ಸೀತೆಯಂತಿರುವ ವೇದವತಿಯನ್ನು ಸ್ಥಾಪ್ಯ = ಸ್ಥಾಪಿಸಿ (ಅಲ್ಲಿ ಇಡುವವನಾಗಿ) ।। 58 ।। ಕಾಲಚೋದಿತಃ = ಕಾಲನಾಮಕ ಹರಿಯಿಂದ ಪ್ರೇರಿತನಾಗಿ, ತದಾ = ಆವಾಗ, ಆತ್ಮಾನಂ = ತನ್ನನ್ನು, ಕೃತಕೃತ್ಯಂ = ಕೃತಾರ್ಥನನ್ನಾಗಿ, ಮೇನೇ = ತಿಳಿದನು.

ಜಗನ್ನಾಥಃ = ಜಗತ್ತಿಗೆ ಸ್ವಾಮಿಯಾದ, ರಾಮಃ = ರಾಮಚಂದ್ರನು, ಗತ್ವಾತು = ಲಂಕೆಗೆ ಹೋಗಿ, ಸಗಣಂ = ರಾಕ್ಷಸಸಮೂಹದಿಂದ ಯುಕ್ತನಾದ, ಖಲಂ = ನೀಚನಾದ, ತಂ ರಾವಣಂ = ಆ ರಾವಣನನ್ನು, ಹತ್ವಾ = ಸಂಹಾರಮಾಡಿ, ಸೀತಾಂ = ಸೀತಾದೇವಿಯನ್ನು, ಪ್ರಾಪ್ಯ = ಹೊಂದಿ, ಅಯೋಧ್ಯಾಂ = ಅಯೋಧ್ಯಾಪಟ್ಟಣವನ್ನು, ಪರ್ಯಪದ್ಯತ = ಹೊಂದಿದನು. ।। 59 ।। ಲೋಕಾಪವಾದೇನ = ಲೋಕದ ಅಪವಾದ ಬಂದುದರಿಂದ, ತಾಂ = ಆ ಸೀತಾದೇವಿಯನ್ನು, ಅಗ್ನೌ = ಅಗ್ನಿಯಲ್ಲಿ ಪ್ರವೇಶ್ಯ = ಪ್ರವೇಶಮಾಡಿಸಿ, ತದಾ = ಆವಾಗ, ಸೀತಾದ್ವಂದ್ವಂ ಚ = ಇಬ್ಬರು ಸೀತೆಯರನ್ನು ಕೂಡ, ದೃಷ್ಟ್ವಾ = ಕಂಡು, ನಿಜಭಾಮಿನೀಂ = ತನ್ನ ಪತ್ನಿಯಾದ ಸೀತೆಯನ್ನು ಕುರಿತು, ಉವಾಚ = ಮಾತನಾಡಿದನು. ।। 60 ।। ದೇವಿ = ಸೀತಾದೇವಿಯೇ, ತವಸಮಾ = ನಿನಗೆ ಸಮಳಾದ, ತವರೂಪ ಸಮನ್ವಿತಾ = ನಿನ್ನ ರೂಪಕ್ಕೆ ಸದೃಶಳಾದ, ಸಾ = ಅವಳು, ಕಾ = ಯಾರು? ತವ = ನಿನ್ನ, ಬಿಂಬನಿಭಾಂ = ಆಕಾರ ಸದೃಶಳಾದ, ಶುಭಾಂ = ಮಂಗಳಕರಳಾದ, ವರಾಂಗೀಂ = ಶ್ರೇಷ್ಠಾದ ಸ್ತ್ರೀಯನ್ನು (ಉತ್ತಮ ಅವಯವಗಳುಳ್ಳ ಈಕೆಯನ್ನು), ಅಹಂ = ನಾನು, ನ ಜಾನೇ = (ಯಾರೆಂದು) ತಿಳಿದಿಲ್ಲ ।। 61 ।।

**ರಾಘವೇಣೈವಮುಕ್ತಾ ಸಾ ಜಾನಕೀ ವಾಕ್ಯಮಬ್ರವೀತ್ ।**

ಜಾನಕ್ಯುವಾಚ-

**ಮದ್ದುಃಖಂ ಹಿ ತಯಾ ಭುಕ್ತಂ ನಿರ್ನಿಮಿತ್ತಂ ದಯಾಜುಷಾ ।। 62 ।।**

**ನಾಮ್ನಾ ವೇದವತೀಚೇಯಂ ಸ್ವಾಹಾಯಾಸ್ಸನ್ನಿಧೌ ಸ್ಥಿತಾ ।**
**ತಾಮಂಗೀಕುರು ಗೋವಿಂದ ವಿವಾಹವಿಧಿಪೂರ್ವಕಮ್ ।। 63 ।।**

**ಇತಿ ಸೀತಾವಚಃ ಶ್ರುತ್ವಾ ರಾಮೋ ವಚನಮಬ್ರವೀತ್ ।**

ಶ್ರೀರಾಮ ಉವಾಚ -

**ಏಕಪತ್ನಿವ್ರತಂ ಮೇऽದ್ಯ ಕೃತಂ ಜಾನಾಸಿ ಭಾಮಿನಿ ।। 64 ।।**

**ದ್ವಾಪರೇಂಗೀಕರೋಮೀತಿ ಬಹೂನಾಂ ವರದೋ ಯತಃ ।**
**ತವ ವಾಕ್ಯಂ ಕರಿಷ್ಯಾಮಿ ಅಷ್ಟಾವಿಂಶತಿಮೇ ಕಲೌ ।। 65 ।।**

ರಾಘವೇಣ = ಶ್ರೀರಾಮನಿಂದ, ಏವಮುಕ್ತಾ = ಇಂತು ಹೇಳಿಸಿಕೊಳ್ಳಲ್ಪಟ್ಟ (ಪ್ರಶ್ನಿಸಲ್ಪಟ್ಟ), ಸಾ ಜಾನಕೀ = ಆ ಸೀತಾದೇವಿಯು, ವಾಕ್ಯಮಬ್ರವೀತ್ = ಇಂತು ಮಾತನಾಡಿದಳು, ತಯಾ = ಅವಳಿಂದ, ನಿರ್ನಿಮಿತ್ತಂ = ಕಾರಣವಿಲ್ಲದಲೆ, ದಯಾಜುಷಾ = ಕಾರುಣ್ಯದಿಂದ, ಮದ್ದುಃಖಂ = ನನ್ನ ದುಃಖವು, ಭುಕ್ತಂ ಹಿ = ಅನುಭವಿಸಲ್ಪಟ್ಟಿತು. ಇದು ಪ್ರಸಿದ್ಧವು

|| 62 || ಇಯಂ = ಇವಳು, ನಾಮ್ನಾ = ಹೆಸರಿನಿಂದ, ವೇದವತಿ = ವೇದವತಿಯೆಂಬುವವಳು, ಚ = ಮತ್ತು, ಸ್ವಾಹಾಯಾಃ = ಸ್ವಾಹಾದೇವಿಯ, ಸನ್ನಿಧೌ = ಸನ್ನಿಧಿಯಲ್ಲಿ, ಸ್ಥಿತಾ = ಇದ್ದವಳು, ಗೋವಿಂದ = ಎಲೈ ಶ್ರೀರಾಮಚಂದ್ರ (ಗೋವಿಂದ), ವಿವಾಹವಿಧಿಪೂರ್ವಕಂ = ವೈವಾಹಿಕವಿಧಿಪೂರ್ವಕವಾಗಿ, ತಾಂ = ವೇದವತಿಯನ್ನು, ಅಂಗೀಕುರು = ಪತ್ನಿಯನ್ನಾಗಿ ಸ್ವೀಕರಿಸು || 63 || ರಾಮಃ = ರಾಮನು, ಇತಿ = ಹೀಗೆಂದ, ಸೀತಾವಚಃ = ಸೀತೆಯ ನುಡಿಯನ್ನು ಶ್ರುತ್ವಾ = ಕೇಳಿದವನಾಗಿ, ವಚನಮಬ್ರವೀತ್ = ಮಾತನಾಡಿದನು, ಶ್ರೀರಾಮ ಉವಾಚ = ಶ್ರೀರಾಮಚಂದ್ರನು ಮಾತನಾಡುತ್ತಲಿದ್ದಾನೆ - ಭಾಮಿನಿ = ಪ್ರಿಯಳಾದ ಸೀತೆಯೇ, ಅದ್ಯ = ಈ ಜನ್ಮದಲ್ಲಿ, ಮೇ = ನನಗಿರುವ, ಏಕಪತ್ನೀವ್ರತಂ = ಒಬ್ಬಳೇ ಹೆಂಡತಿಯೆಂಬ ನಿಯಮವನ್ನು (ವ್ರತವನ್ನು), ಜಾನಾಸಿ = ತಿಳಿದಿದ್ದೀಯೆ || 64 || ಬಹೂನಾಂ = ಅನೇಕರಿಗೆ, ಯತಃ ವರದಃ = ವರವನ್ನು ಕೊಟ್ಟಿರುವುದರಿಂದ, ದ್ವಾಪರೇ = ದ್ವಾಪರಯುಗದಲ್ಲಿ, ಅಷ್ಟಾವಿಂಶತಿಮೇ = ಇಪ್ಪತ್ತೆಂಟನೆಯ, ಕಲೌ = ಕಲಿಯುಗದಲ್ಲಿ ಅಂಗೀಕರೋಮಿ = ಇವಳನ್ನು ಮದುವೆಯಾಗುವೆನು, ಇತಿ = ಈ ಪ್ರಕಾರವಾಗಿ ಮಾಡುವ ಮೂಲಕ, ತವ = ನಿನ್ನ ವಾಕ್ಯಂ = ಮಾತನ್ನು, ಕರಿಷ್ಯಾಮಿ = ನೆರವೇರಿಸುತ್ತೇನೆ. || 65 ||

**ತಾವದೇಷಾ ಬ್ರಹ್ಮಲೋಕೇ ಬ್ರಹ್ಮಣಾ ಪೂಜಿತಾ ಭವೇತ್ ।**
**ಶ್ರುತ್ವಾ ದಾಶರಥೇರ್ವಾಕ್ಯಂ ಜಗಾಮ ಭವನಂ ವಿಧೇಃ || 66 ||**

ತಾವತ್ = ಅಲ್ಲಿಯವರೆಗೆ, ಏಷಾ = ಈ ವೇದವತಿಯು, ಬ್ರಹ್ಮಲೋಕೇ = ಬ್ರಹ್ಮದೇವನ ಸತ್ಯಲೋಕದಲ್ಲಿ, ಬ್ರಹ್ಮಣಾ = ಬ್ರಹ್ಮದೇವರಿಂದ, ಪೂಜಿತಾ ಭವೇತ್ = ಪೂಜೆಗೊಳ್ಳುತ್ತಿರಲಿ, ದಾಶರಥೇಃ = ರಾಮಚಂದ್ರನ, ವಾಕ್ಯಂ = ಮಾತನ್ನು, ಶ್ರುತ್ವಾ = ಕೇಳಿ, ವಿಧೇಃ = ಬ್ರಹ್ಮನ, ಭವನಂ (ಪ್ರತಿ) = ಮನೆಯಾದ ಬ್ರಹ್ಮಲೋಕವನ್ನು ಕುರಿತು, ಜಗಾಮ = (ವೇದವತಿಯು) ಹೋದಳು || 66 ||

**ಕಾರಣಂ ಪದ್ಮವತ್ಯಾಸ್ತು ಭಣಿತಂ ತವ ಸುವ್ರತೇ ।**
**ನ ಮೇ ವಾಕ್ಯಮಸದ್ಭೂಯಾದಿತಿ ವೇದವಿದೋ ವಿದುಃ || 67 ||**

**ಶ್ರುತ್ವಾ ತಜ್ಜನನಂ ಕರ್ಮ ಬಕುಲಾಽಽನಂದನಿರ್ಭರಾ ।**
**ಕೌತೂಹಲಸಮಾವಿಷ್ಟಾ ಶ್ರೀನಿವಾಸಮಭಾಷತ || 68 ||**

ಬಕುಲೋವಾಚ -

**ಗಚ್ಛಾಮಿ ರಾಜೇಂದ್ರ ಸಭಾಂ ಸಭಾಸದ್ಯೈಃ**
**ಸಂಪೂರ್ಣಸರ್ವಾರ್ಥವಿಶಾರದೈರ್ಯುತಾಮ್ ।**
**ಆಕಾಶರಾಜಸ್ಯ ಪುರೀಂ ಸುರೋತ್ತಮೈಃ**
**ಸಂಸ್ತೂಯಮಾನಾಂ ಚ ರಮಾವಿಗೂಹಿತಾಮ್ ।**
**ಇತ್ಯೇವಮುಕ್ತೋ ಭಗವಾನ್ ಜಗದ್ಗುರುಃ**
**ಸಂಪ್ರೇಷಯಿಷ್ಯನ್ ಬಕುಲಾಂ ಸ್ವಕಾರಣಾತ್ || 69 ||**

**ದಿವ್ಯಾಂ ತುರಂಗೀಮಾಸ್ಥಾಯ ನಿರ್ಮಿತಾಂ ದೇವಮಾಯಯಾ ।**
**ಮಾರ್ಗಂ ವಿಜ್ಞಾತುಕಾಮಾ ತಮಾಪ್ರಷ್ಟುಂ ಬಕುಲಾಽವದತ್ || 70 ||**

ಸುವ್ರತೇ = ಸಮೀಚೀನ ವ್ರತ ಬದ್ಧಳಾದ ಬಕುಳೆಯೇ, ಪದ್ಮಾವತ್ಯಾಸ್ತು = ಪದ್ಮಾವತಿಯ, ಕಾರಣಂತು = (ಜನನದ) ಕಾರಣವನ್ನು, ತವ = ನಿನಗೆ, ಭಣಿತಂ (ಮಯಾ) = ನನ್ನಿಂದ ಹೇಳಲ್ಪಟ್ಟಿತು. ಮೇ = ನನ್ನ, ವಾಕ್ಯಂ = ವಚನವು, ನ ಅಸದ್ಭೂಯಾತ್ = ಸುಳ್ಳಾಗುವುದಿಲ್ಲವೆಂದು, ವೇದವಿದಃ = ವೇದಶಾಸ್ತ್ರಜ್ಞರಾದ ಜ್ಞಾನಿಗಳು, ವಿದುಃ = ತಿಳಿಯುವರು || 67 || ಬಕುಲಾ = ಬಕುಳೆಯು, ತಜ್ಜನನಂ ಕರ್ಮ = ಪದ್ಮಾವತಿಯ ಹುಟ್ಟು, ಹಿಂದಿನ ಜನ್ಮದ ಕಾರ್ಯ (ವಿಚಾರ) ಗಳನ್ನು, ಶ್ರುತ್ವಾ = ಕೇಳಿ, ಆನಂದನಿರ್ಭರಾ = ಸಂತೋಷಭರಿತಳಾಗಿ, ಕೌತೂಹಲ ಸಮಾವಿಷ್ಟಾ = ಕುತೂಹಲಯುಕ್ತಳಾಗಿ, ಶ್ರೀನಿವಾಸಂ = ಶ್ರೀನಿವಾಸನನ್ನು ಕುರಿತು, ಅಭಾಷತ = ಮಾತನಾಡಿದಳು || 68 || ಬಕುಲೋವಾಚ = ಬಕುಳಾದೇವಿಯು ಹೇಳುತ್ತಲಿದ್ದಾಳೆ - ಸಂಪೂರ್ಣಸರ್ವಾರ್ಥವಿಶಾರದೈಃ- ಸಂಪೂರ್ಣ = ಸಂಪೂರ್ಣವಾಗಿ, ಸರ್ವಾರ್ಥ = ಚತುರ್ವಿಧ ಪುರುಷಾರ್ಥಗಳಲ್ಲಿ (ಎಲ್ಲ ವಿಚಾರಗಳಲ್ಲಿ), ವಿಶಾರದೈಃ = ಪರಿಣತರಾದ, ಸಭಾಸದೈಃ = ಪಂಡಿತರಾದ ಸಭಾಸದರಿಂದ, ಯುತಾಂ = ಕೂಡಿರುವ, ಸುರೋತ್ತಮೈಃ = ದೇವತಾ ಶ್ರೇಷ್ಠರಿಂದ, ಸಂಸ್ತೂಯಮಾನಾಂ = ಸ್ತೋತ್ರ ಮಾಡಿಸಿಕೊಳ್ಳುತ್ತಿರುವ, ಚ = ಮತ್ತು, ರಮಾವಿಗೂಹಿತಾಂ = ತನ್ನಲ್ಲಿ ರಮಾದೇವಿಯನ್ನು ಬಚ್ಚಿಟ್ಟುಕೊಂಡಿರುವ (ಅಡಗಿಸಿಕೊಂಡಿರುವ), ರಾಜೇಂದ್ರ ಸಭಾಂ = ಆಕಾಶರಾಜನ ಸಭೆಯನ್ನು ಕುರಿತು, ಗಚ್ಛಾಮಿ = ಹೋಗುವೆನು, ಇತ್ಯೇವಂ = ಈ ರೀತಿಯಾಗಿ, ಉಕ್ತಃ = ಹೇಳಲ್ಪಟ್ಟವನಾದ, ಜಗದ್ಗುರುಃ = ಜಗತ್ತಿಗೆ ಗುರುವಾದ, ಭಗವಾನ್* = ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀನಿವಾಸನು, ಸ್ವಕಾರಣಾತ್ = ತನ್ನ ಲಗ್ನದ ಕಾರ್ಯದದಶೆಯಿಂದ, ದೇವಮಾಯಯಾ = ದೇವಮಾಯೆಯಿಂದ, ನಿರ್ಮಿತಾಂ = ನಿರ್ಮಿಸಲ್ಪಟ್ಟ, ದಿವ್ಯಾಂ = ಶ್ರೇಷ್ಠವಾದ, ತುರಂಗೀಮಾಸ್ಥಾಯ = ಹೆಣ್ಣುಕುದುರೆಯ ಮೇಲೆ ಕೂಡಿಸಿ, ಬಕುಲಾಂ = ಬಕುಳಮಾಲಿಕೆಯನ್ನು, ಸಂಪ್ರೇಷಯಿಷ್ಯನ್ = ಕಳುಹಿಸುವವನಾದನು, ಮಾರ್ಗಂ = (ನಾರಾಯಣಪುರಕ್ಕೆ ಹೋಗುವ) ದಾರಿಯನ್ನು, ವಿಜ್ಞಾತುಕಾಮಾ = ತಿಳಿಯಲಪೇಕ್ಷೆಯುಳ್ಳವಳಾಗಿ, ಬಕುಲಾ = ಬಕುಳೆಯು, ತಂ = ಶ್ರೀನಿವಾಸನನ್ನು ಪ್ರಷ್ಟುಂ = ಕೇಳಲು (ಪ್ರಶ್ನಿಸಲು), ಅವದತ್ = ಹೇಳಿದಳು || 69-70 ||

*ಬಕುಲೋವಾಚ -*

**ಮಾರ್ಗಂ ವದ ರಮಾನಾಥ ಗಚ್ಛಾಮಿ ನೃಪಪುಂಗವಮ್ ।**

*ಶ್ರೀನಿವಾಸ ಉವಾಚ -*

**ಅಸ್ಮಾದೇವ ವರಾನ್ಮಾರ್ಗಾದವರುಹ್ಯ ಗಿರೇಸ್ತಟಾತ್ || 71 ||**

**ಪರ್ವತಾಧಃ ಪ್ರದೇಶೇ ಚ ಕಪಿಲಾಪೂಜಿತಃ ಶಿವಃ ।**
**ತತ್ರಾಸ್ತೇ ತೀರ್ಥರಾಜೋಽಸೌ ಕಪಿಲೇಶ್ವರಸನ್ನಿಧೌ || 72 ||**

**ತತ್ರ ಸ್ನಾತ್ವಾ ಯಥಾಯೋಗ್ಯಂ ಮದರ್ಥಂ ತೀರ್ಥಪುಂಗವೇ ।**
**ಕಪಿಲೇಶ್ವರಮಾಸಾದ್ಯ ಯಾಚ್ಯತಾಂ ವರಮವ್ಯಯಮ್ || 73 ||**

**ಶ್ರೀನಿವಾಸೋ ದಯಾಸಾರ ವದತೇ ನಮನಂ ತವ ।**
**ಕಲ್ಯಾಣಂ ಕುರು ಮೇ ದೇವ ಶಿವಶಂಕರ ತೇ ನಮಃ ।**
**ತತಃ ಶುಕಂ ಸಮಾಸಾದ್ಯ ದಂಡವತ್ಪತನಂ ಕೃತಮ್ || 74 ||**

---

*"ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಶ್ಶ್ರಿಯಃ। ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ" ||

**ಶ್ರೀನಿವಾಸೇನ ಬಾಲೇನ ಸದಾ ಕಲ್ಯಾಣಕಾಂಕ್ಷಿಣಾ ।**
**ಪ್ರೇಷಿತಾಽಹಂ ತದರ್ಥಂ ವೈ ಕುರುಮೇಽಭೀಪ್ಸಿತಂ ಪ್ರಿಯಮ್ ॥ 75 ॥**

ಅಂದರೆ ಸಮಗ್ರಸ್ಯ = ಸಮಗ್ರವಾದ, ಐಶ್ವರ್ಯಸ್ಯ = ಐಶ್ವರ್ಯ, ವೀರ್ಯಸ್ಯ = ಸಮಗ್ರವಾದ ಪರಾಕ್ರಮ (ಬಲ), ಯಶಸಃ = ಸಮಗ್ರ ಕೀರ್ತಿ, ಶ್ರಿಯಃ = ಸಂಪತ್ತು, ಜ್ಞಾನ = ಸಾಮಾನ್ಯಜ್ಞಾನ, ವಿಜ್ಞಾನಯೋಶ್ಚೈವ = ವಿಶೇಷಜ್ಞಾನದಿಂದಲೂ, ಹೀಗೆ ಷಣ್ಣಾಂ = ಈ ಆರು ನಿರವಧಿಕವಾಗಿ ಯಾರಲ್ಲಿ ಇದೆಯೋ ಅಂತಹವರನ್ನು (ಪರಬ್ರಹ್ಮ ಸ್ವರೂಪವಾದ ಶ್ರೀಹರಿಗೆ) ಭಗವಾನ್ ಎಂದು ಸಂಜ್ಞೆ ಹೇಳಬೇಕು.

ಬಕುಳೋವಾಚ = ಬಕುಳೆಯು ಹೇಳಿದಳು - ರಮಾಕಾಂತ = ಲಕ್ಷ್ಮೀಪತಿಯೇ, ನೃಪಪುಂಗವಂ (ಪ್ರತಿ) = ಆಕಾಶರಾಜನನ್ನು ಕುರಿತು, (ಅಹಂ) ಗಚ್ಛಾಮಿ = ನಾನು ಹೋಗುತ್ತೇನೆ. ಮಾರ್ಗಂ = ನಾರಾಯಣಪುರಕ್ಕೆ ಹೋಗುವ ದಾರಿಯನ್ನು, ವದ = ಹೇಳುವವನಾಗು, ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಹತ್ತಿದನು - ಅಸ್ಮಾದೇವಮಾರ್ಗಾತ್ = ಇದೇ ಮಾರ್ಗವಾಗಿಯೇ, ವರಾತ್ = ಶ್ರೇಷ್ಠವಾದ, ಗಿರೇಸ್ತಟಾತ್ = ಬೆಟ್ಟದ ತೀರ (ದಡದ) ಭಾಗದಿಂದ ॥ 71 ॥ ಅವರುಹ್ಯ = ಇಳಿದು, ಚ = ಮತ್ತು, ಪರ್ವತಾಧಃಪ್ರದೇಶೇ = ಪರ್ವತದ ಕೆಳಪ್ರದೇಶದಲ್ಲಿ, ತತ್ರ = ಅಲ್ಲಿ, ಕಪಿಲಾಪೂಜಿತಃ = ಕಪಿಲಳಿಂದ (ಕಪಿಲತೀರ್ಥಾಭಿಮಾನಿದೇವತೆಯಿಂದ) ಪೂಜಿತನಾದ, ಶಿವಃ = ರುದ್ರದೇವನು, ಆಸ್ತೇ = ಇದ್ದಾನೆ, ಕಪಿಲೇಶ್ವರ ಸನ್ನಿಧೌ = ಕಪಿಲೇಶ್ವರನ ಸನ್ನಿಧಿಯಲ್ಲಿ, ಅಸೌ ತೀರ್ಥರಾಜಃ = ಕಪಿಲತೀರ್ಥವೆಂಬ ಶ್ರೇಷ್ಠತೀರ್ಥವು, ಆಸ್ತೇ = ಇರುವುದು ॥ 71 ॥ ತತ್ರ = ಅಲ್ಲಿ, ಮದರ್ಥಂ = ನನಗಾಗಿ, ತೀರ್ಥಪುಂಗವೇ = ಶ್ರೇಷ್ಠ ಕಪಿಲತೀರ್ಥದಲ್ಲಿ, ಯಥಾ ಯೋಗ್ಯಂ = ಯೋಗ್ಯ ವಿಧಿಪೂರ್ವಕವಾಗಿ, ಸ್ನಾತ್ವಾ = ಸ್ನಾನಮಾಡಿ, ಕಪಿಲೇಶ್ವರಂ = ಕಪಿಲೇಶ್ವರನನ್ನು, ಆಸಾದ್ಯ = ಹೊಂದಿ, ಅವ್ಯಯಂ = ಶಾಶ್ವತವಾದ, ವರಂ = ವರವನ್ನು, ಯಾಚ್ಯತಾಂ = ನಿನ್ನಿಂದ ಕೇಳಲ್ಪಡಲಿ ॥ 73 ॥ ದಯಾಸಾರ = ಕರುಣಾಳುವಾದ ರುದ್ರದೇವನೇ, ಶ್ರೀನಿವಾಸಃ = ಶ್ರೀನಿವಾಸನು, ತವ = ನಿನಗೆ, ನಮನಂ = ನಮಸ್ಕಾರವನ್ನು, ವದತೇ = ಹೇಳುತ್ತಲಿದ್ದಾನೆ (ಎಂದು ವಿಜ್ಞಾಪಿಸಿ), ಶಿವ = ಮಂಗಳಕರನಾದ, ಶಂಕರದೇವ = ಸುಖಪ್ರದನಾದ ರುದ್ರದೇವನೆ, ತೇ = ನಿನಗೆ, ನಮಃ = ನಮಸ್ಕಾರವು, ಮೇ = ನನಗೆ, ಕಲ್ಯಾಣಂ = ಶುಭವನ್ನು (ವಿವಾಹವು), ಕುರು = ಮಾಡು (ಆಗುವಂತೆ ಮಾಡು), ತತಃ = ಹೀಗೆ ಹೇಳಿ ತರುವಾಯ, ಅಲ್ಲಿಂದ, ಶುಕಂ = ಶುಕಾಚಾರ್ಯನನ್ನು, ಸಮಾಸಾದ್ಯ = ಹೊಂದಿ, ದೇವ = ಸ್ವಾಮಿ, ಕಲ್ಯಾಣಾಕಾಂಕ್ಷಿಣಾ = ವಿವಾಹ ಮಾಡಿಕೊಳ್ಳಲು ಬಯಸುವ, ಬಾಲೇನ = ಬಾಲಕನಾದ, ಶ್ರೀನಿವಾಸೇನ = ಶ್ರೀನಿವಾಸನಿಂದ, ದಂಡವತ್ಪತನಂ = ದಂಡಪ್ರಣಾಮವು, ಕೃತಂ = ಮಾಡಲ್ಪಟ್ಟಿತು, ತದರ್ಥಂ ವೈ = ಈ ಉದ್ದಿಶ್ಯವಾಗಿಯೇ, ಅಹಂ = ನಾನು, ಪ್ರೇಷಿತಾ (ಅಸ್ಮಿ) = ಕಳಿಸಲ್ಪಟ್ಟವಳಾಗಿದ್ದೇನೆ. ಮೇ = ನನಗೆ, ಪ್ರಿಯಂ = ಪ್ರಿಯವಾದ, ಅಭೀಪ್ಸಿತಂ = ವಿವಾಹ ಮಾಡಿಸಲು ಬಯಸುವ ಅಭೀಷ್ಟವನ್ನು, ಕುರು = ನೆರವೇರಿಸುವವನಾಗು ॥ 75 ॥

**ಏವಮುಕ್ತ್ವಾ ಶುಕಂ ದೇವ ತತಃ ಪದ್ಮತಟಂಗತಾ ।**
**ತತ್ರಾಸಾತೇ ಕೃಷ್ಣರಾಮೌ ತೌ ನತ್ವಾ ಭಕ್ತಿಭಾವತಃ ॥ 76 ॥**

**ಪದ್ಮತೀರ್ಥಸಮುದ್ಭೂತೈಃ ಕಮಲೈಃ ಕಮಲಾನನೇ ।**
**ಪೂಜಾಂ ಕುರು ಮದರ್ಥಂ ತು ಭ್ರಾತೃಭೂತೌ ಹಿ ಮೇ ಮತೌ ॥ 77 ॥**

**ಸುವರ್ಣಮುಖರೀಂ ತೀರ್ತ್ವಾ ತತ್ರ ಗಚ್ಛ ಯಥಾಸುಖಮ್ ।**
**ಉಚಿತಂ ಕುರು ಕಲ್ಯಾಣಿ ಕನ್ಯಾರ್ಥಂ ಕಮಲಾನನೇ ॥ 78 ॥**

ದೇವಿ = ಎಲ್ಲೈ ಬಕುಳಾದೇವಿ! ಶುಕಂ (ಪ್ರತಿ) = ಶುಕಾಚಾರ್ಯನನ್ನು ಕುರಿತು, ಏವಮುಕ್ತ್ವಾ = ಹೀಗೆ ಹೇಳಿ, ತತಃ = ಅಲ್ಲಿಂದ (ಶುಕಾಶ್ರಮದಿಂದ), ಪದ್ಮತಟಂ = ಪದ್ಮ ಸರೋವರಕ್ಕೆ, ಗತಾ ಸತಿ = ಹೋಗುವವಳಾಗಿ, ತತ್ರ = ಪದ್ಮಸರೋವರದಲ್ಲಿ, ಕೃಷ್ಣರಾಮೌ = ಕೃಷ್ಣ-ಬಲರಾಮರು, ಆಸಾತೇ = ಇರುವವರಾಗಿದ್ದಾರೆ, ತೌ = ಅವರನ್ನು, ಭಕ್ತಿಭಾವಾತ್ = ಭಕ್ತಿಭಾವನೆಯಿಂದ ನತ್ವಾ = ನಮಸ್ಕರಿಸಿ, ಕಮಲಾನನೇ = ಕಮಲಮುಖಿಯಾದ ಬಕುಳೆ! ಪದ್ಮತೀರ್ಥ ಸಮುದ್ಭವೈಃ = ಪದ್ಮಸರೋವರದಲ್ಲಿ ಹುಟ್ಟಿರುವ, ಕಮಲೈಃ = ಕಮಲಪುಷ್ಪಗಳಿಂದ, ಮದರ್ಥಂ = ನನಗಾಗಿ, ಪೂಜಾಂಕುರು = ಪೂಜೆಯನ್ನು ಮಾಡುವವಳಾಗು, (ಮೇ = ನನಗೆ) ತೌ = ಅವರು, ಭ್ರಾತೃ ಭೂತೌಮತೌ = ಸಹೋದರರಾಗಿದ್ದಾರೆ || 77 || ಆ ತರುವಾಯ, ಸುವರ್ಣಮುಖರೀಂ = ಸುವರ್ಣಮುಖರೀ ನದಿಯನ್ನು, ತೀರ್ತ್ವಾ = ದಾಟಿ, ತತ್ರ = ಆಕಾಶರಾಜಪುರಿಗೆ, ಯಥಾಸುಖಂ = ಸುಖವಾಗುವಂತೆ (ಕಷ್ಟವಿಲ್ಲದಂತೆ), ಗಚ್ಛ = ಹೋಗು, ಕಮಲಾನನೆ = ಕಮಲ ವದನಳೇ, ಕಲ್ಯಾಣಿ = ಮಂಗಳಕರಳೇ, ಕನ್ಯಾರ್ಥಂ = ಪದ್ಮಾವತಿಯನ್ನು ನನಗೆ ವಿವಾಹಮಾಡಿಸಲು, ಉಚಿತಂ = ಯೋಗ್ಯೋಪಾಯವನ್ನು (ಉಚಿತವಾದುದನ್ನು), ಕುರು = ಮಾಡುವವಳಾಗು || 78 ||

**ಆಜ್ಞಪ್ತಾ ದೇವದೇವೇನ ಬಕುಲಾ ಲೋಕಭರ್ತೃಣಾ |**
**ಜಗಾಮ ಶನಕೈಃ ಶೇಷಶೈಲಾದುತ್ತೀರ್ಯ ಚಾಂಗನಾ || 79 ||**

**ಯಥೋಕ್ತಂ ಶ್ರೀನಿವಾಸೇನ ತಚ್ಚಕಾರ ತದಾಬಲಾ |**
**ಹಯಮಾರುಹ್ಯ ಬಕುಲಾ ಸುವರ್ಣಮುಖರೀಂ ತದಾ || 80 ||**

**ತೀರ್ತ್ವಾಗಸ್ತ್ಯಾಶ್ರಮಂ ಪ್ರಾಪ್ಯ ಸಖೀಸ್ತಸ್ಯಾ ವ್ಯಲೋಕಯತ್ |**
**ಶಿವಾಲಯೇ ಶಿವಂ ದ್ರಷ್ಟುಂ ಗತಾಸ್ತಾ ಶ್ಶಿವಮಂದಿರಮ್ || 81 ||**

**ತತ್ರ ಗತ್ವಾ ವರಾಃ ಕನ್ಯಾಃ ಕಾಯೂಯಮಿತಿ ಚಾಬ್ರವೀತ್ |**
**ತಯಾ ಸಂಭಾಷಿತಾ ಬಾಲಾಃ ಊಚುರೇನಾಂ ಯಥಾರ್ಥತಃ || 82 ||**

ಲೋಕಭರ್ತೃಣಾ = ಪ್ರಪಂಚಕ್ಕೆ ಸ್ವಾಮಿಯಾದ, ದೇವದೇವೇನ = ದೇವತಾ ಸಾರ್ವಭೌಮನಾದ ಶ್ರೀನಿವಾಸನಿಂದ ಆಜ್ಞಪ್ತಾ = ಆಜ್ಞಾಪಿಸಲ್ಪಟ್ಟ, ಬಕುಲಾ = ಬಕುಳೆಯು, ಶೇಷಾಚಲಾತ್ = ಶೇಷಗಿರಿಯಿಂದ, ಉತ್ತೀರ್ಯ = ಕೆಳಗಿಳಿದು, ಶನಕೈಃ = ನಿಧಾನವಾಗಿ, ಅಂಗನಾ = ಆ ಬಕುಳೆಯು, ಜಗಾಮ = ಹೊರಟಳು || 76 || ತದಾ = ಆವಾಗ, ಅಬಲಾ = ಅಬಲೆಯಾದ ಬಕುಳೆಯು, ಶ್ರೀನಿವಾಸೇನ = ಶ್ರೀನಿವಾಸನಿಂದ, ಯಥೋಕ್ತಂ = ಹೇಳಲ್ಪಟ್ಟಂತೆಯೇ, ತತ್ = ಆ ಕಾರ್ಯವನ್ನು, ಚಕಾರ = ಮಾಡಿದಳು, ಬಕುಳಾ = ಬಕುಳೆಯು, ಹಯಮಾರುಹ್ಯ = ಕುದುರೆಯನ್ನೇರಿ, ತದಾ = ಆಗ, ಸುವರ್ಣಮುಖರೀಂ = ಸುವರ್ಣಮುಖರೀ ನದಿಯನ್ನು, ತೀರ್ತ್ವಾ = ದಾಟಿ, ಅಗಸ್ತ್ಯಾಶ್ರಮಂ = ಅಗಸ್ತ್ಯಮುನಿಗಳ ಆಶ್ರಮವನ್ನು, ಪ್ರಾಪ್ಯ = ಹೊಂದಿ, ತಸ್ಯಾಃ = ಪದ್ಮಾವತಿಯ, ಸಖೀಃ = ಗೆಳತಿಯರನ್ನು, ಶಿವಾಲಯೇ = ಶಿವನ ಮಂದಿರದಲ್ಲಿ ವ್ಯಲೋಕಯತ್ = ನೋಡಿದಳು, ತಾಃ = ಅವರು, ಶಿವಂ = ರುದ್ರದೇವನನ್ನು, ದ್ರಷ್ಟುಂ = ನೋಡಲೋಸುಗ, ಶಿವಮಂದಿರಂ = ರುದ್ರದೇವನ ಗುಡಿಗೆ, ಗತಾಃ = ಹೋಗಿದ್ದರು (ಬಂದವರಾಗಿದ್ದರು). ತತ್ರ = ಆ ಶಿವನಗುಡಿಯಲ್ಲಿ, ವರಾಃ = ಉತ್ತಮರಾದ, ಕನ್ಯಾಃ = ಕನ್ನಿಕೆಯರನ್ನು, ದೃಷ್ಟ್ವಾ = ನೋಡಿ, ಕಾಯೂಯಂ = ನೀವು ಯಾರು? ಇತಿ ಚ = ಹೀಗೆಂದೂ ಸಹ, ಅಬ್ರವೀತ್ = ಅಂದಳು, ತಯಾ = ಬಕುಳೆಯಿಂದ, ಸಂಭಾಷಿತಾಃ = ಮಾತನಾಡಿಸಲ್ಪಟ್ಟ, ಬಾಲಾಃ = ಕನ್ಯೆಯರು, ಏನಾಂ = ಬಕುಳೆಯನ್ನು (ಕುರಿತು), ಯಥಾರ್ಥತಃ = ಸತ್ಯ ಸಮಾಚಾರವನ್ನು (ಸತ್ಯವಾಗಿ), ಊಚುಃ = ಹೇಳುವವರಾದರು || 82 ||

*ಕನ್ಯಾ ಊಚುಃ –*

**ವಯಮಾಕಾಶರಾಜಸ್ಯ ಸನ್ನಿಧಾನಗತಾಃ ಸದಾ ।**
**ಇತಃ ಪೂರ್ವದಿನೇ ಕಶ್ಚಿತ್ಪುರುಷಂ ತುರುಗಸ್ಥಿತಮ್ ॥ 83 ॥**

**ಪದ್ಮಾವತ್ಯಾಸ್ಸಮೀಪೇ ಚ ಸಂಪ್ರಾಪ್ತಂ ಮನ್ಮಥಾಕೃತಿಮ್ ।**
**ದೃಷ್ಟುವತ್ಯೋ ವಯಂ ಸರ್ವಾಃ ಕಿರಾತಾಕೃತಿಶೋಭನಮ್ ॥ 84 ॥**

**ದೃಷ್ಟ್ವಾ ಪದ್ಮಾವತೀ ಭೀತ್ಯಾ ಜ್ವರತಾಪವಿಮೂರ್ಛಿತಾ ।**
**ತತ್ತಾಪಸ್ಯೋಪಶಾಂತ್ಯರ್ಥಂ ರಾಜಾಜ್ಞಯಾ ವಯಂತ್ವಿಹ ॥ 85 ॥**

**ಅಗಸ್ತ್ಯೇಶಾಭಿಷೇಕಾರ್ಥಂ ವಸಾಮೋದ್ಯ ಸಮಾಗತಾಃ ।**
**ಇದಾನೀಂ ಕನ್ಯಕಾರೂಪಾಂ ತ್ವಾಂತು ವೀಕ್ಷಾಮಹೇ ವಯಮ್ ।**
**ಇತಿ ತದ್ವಚನಂ ಶ್ರುತ್ವಾ ಬಕುಲಾ ವಾಕ್ಯಮಬ್ರವೀತ್ ॥ 86 ॥**

*ಬಕುಲೋವಾಚ –*

**ಕೋಽಸೌಕಿರಾತರೂಪೀ ಚ ಭವದ್ಭಿಸ್ಸಂಗತಃ ಕುತಃ ।**
**ವದಧ್ವಂ ಕನ್ಯಕಾ ಸ್ಸರ್ವಾಸ್ತದ್ವೃತ್ತಮಖಿಲಂ ಮಮ ॥ 87 ॥**

*ಕನ್ಯಾಕಾ ಊಚುಃ ॥*

**ಸಹಿತಾಃ ಪದ್ಮವತ್ಯಾ ಚ ಕದಾಚಿದ್ವನಮಾಗತಾಃ ।**
**ಪುಷ್ಪಾವಚಯನಂ ಕರ್ತುಮಾರಬ್ಧಾಸ್ತದ್ವನಾಂತರೇ ॥ 88 ॥**

**ತತ್ರ ಕಶ್ಚಿತ್ಪುಮಾನ್ ಪ್ರಾಪ್ತೋ ವಿಚಿತ್ರತುರಾಗಾರುಹಃ ।**
**ಅಸ್ಮಾಭಿಃ ಕಥಿತಂ ತೇನಾಪ್ಯವಾಚ್ಯವಚನಂ ರುಷಾ ।**
**ತಚ್ಛ್ರುತ್ವಾ ತನಯಾ ರಾಜ್ಞೋ ರುಷ್ಟಾ ವಚನಮಬ್ರವೀತ್ ॥ 89 ॥**

**ತಯೋಃ ಕಲಹಮಾಪನ್ನಂ ಕದನೇ ತಾಡಿತೋ ಹಯಃ ।**
**ನಿಪಪಾತ ತದಾಶ್ವಸ್ತು ಶಿಲಾಭಿರ್ಹತಚೇತನಃ ॥ 90 ॥**

ಕನ್ಯಾ ಊಚುಃ = ಆ ಕನ್ನಿಕೆಯರು ಹೇಳಹತ್ತಿದರು, ವಯಂ = ನಾವು, ಸದಾ = ಯಾವಾಗಲೂ, ಆಕಾಶರಾಜಸ್ಯ = ಆಕಾಶರಾಜನ, ಸನ್ನಿಧಾನಗತಾಃ (ಸ್ಮ) = ಸನ್ನಿಧಿಯಲ್ಲಿರುವವರಾಗಿದ್ದೇವೆ. ಇತಃ ಪೂರ್ವದಿನೇ = ಇಂದಿನ ಹಿಂದಿನ ದಿವಸ (ನಿನ್ನೆ), ಪದ್ಮಾವತ್ಯಾ ಸಮೀಪಂ = ಪದ್ಮಾವತಿಯ ಬಳಿಗೆ, ಸಂಪ್ರಾಪ್ತಂ = ಬಂದಂಥಾ, ಚ = ಮತ್ತು, ತುರಗ ಸ್ಥಿತಂ = ಕುದುರೆಯ ಮೇಲೆ ಕುಳಿದಿದ್ದ, ಮನ್ಮಥಾಕೃತಿಂ = ಮನ್ಮಥಾಕಾರವುಳ್ಳ, ಕಶ್ಚಿತ್ = ಒಬ್ಬ ಪುರುಷ = ಪುರುಷನನ್ನು, ಸರ್ವಾಃ ವಯಂ = ನಾವೆಲ್ಲರೂ, ದೃಷ್ಟವತ್ಯಃ = ನೋಡಿದವರಾದೆವು, ಕಿರಾತಾಕೃತಿ ಶೋಭನಂ = ಬೇಡರವನಂತೆ ಮಂಗಳಕರನಾಗಿದ್ದ

ಅವನನ್ನು, ಪದ್ಮಾವತೀ = ಪದ್ಮಾವತಿಯು, ದೃಷ್ಟ್ವಾ = ನೋಡಿ, ಭೀತ್ಯಾ = ಭಯದಿಂದ, ಜ್ವರತಾಪವಿಮೂರ್ಛಿತಾ = ಜ್ವರದ ತಾಪದಿಂದ ಎಚ್ಚರ ತಪ್ಪಿದಳು. ವಯಂ = ನಾವು, ಇಹ = ಇಲ್ಲಿಗೆ, ರಾಜಾಜ್ಞಯಾ = ಮಹಾರಾಜನ ಆಣತಿಯತೆ, ತತ್ತಾಪಸ್ಯ = ಪದ್ಮಾವತಿಯ ಜ್ವರದ ತಾಪದ, ಉಪಶಾಂತ್ಯರ್ಥಂ = ಪರಿಹಾರಕ್ಕಾಗಿ ॥ 83-85 ॥ ಅಗಸ್ತ್ಯೇಶಾಭಿಷೇಕಾರ್ಥಂ = ಅಗಸ್ತ್ಯೇಶ್ವರನಿಗೆ ಅಭಿಷೇಕ ಮಾಡಿಸಲು, ಸಮಾಗತಾಃ = ಬಂದವರಾಗಿ, ಅದ್ಯ ವಸಾಮಃ = ಈಗಿಲ್ಲದ್ದೇವೆ. ಇದಾನೀಂ = ಈವಾಗ, ತ್ವಾಂತು = ನಿನ್ನನ್ನು, ವೀಕ್ಷಾಮಹೇ = ನೋಡುತ್ತಿದ್ದೇವೆ, ಇತಿ = ಈ ಪ್ರಕಾರವಾಗಿ, ತದ್ವಚನಂ = ಆ ಸಖಿಯರ ಮಾತನ್ನು, ಶ್ರುತ್ವಾ = ಕೇಳಿದವಳಾಗಿ, ಬಕುಲಾ = ಬಕುಳಮಾಲಿಕೆಯು, ವಾಕ್ಯಮಬ್ರವೀತ್ = ಮಾತನಾಡಿದಳು ॥ 86 ॥ ಬಕುಲೋವಾಚ = ಬಕುಳೆಯು ಹೇಳುತ್ತಿದ್ದಾಳೆ - ಕಿರಾತರೂಪೀ ಕಃ = ಆ ಕಿರಾತರೂಪಿಯು ಯಾರು? ಅಸೌ = ಅವನು, ಭವದ್ಭಿಃ = ನಿಮ್ಮೊಡನೆ, ಕುತಃ ಸಂಗತಃ = ಏತಕ್ಕಾಗಿ ಸೇರಿದನು? ಸರ್ವಾ ಕನ್ಯಾಕಾಃ = ನೀವೆಲ್ಲ ಕನ್ಯೆಯರೂ, ಮಮ = ನನಗೆ, ಅಖಿಲಂ = ಸಮಸ್ತವಾದ, ತದ್ವೃತ್ತಂ = ಆ ವಿಚಾರವನ್ನು, ವದಧ್ವಂ = ಹೇಳುವವರಾಗಿರಿ ॥ 87 ॥ ಕನ್ಯಕಾ ಊಚುಃ = ಕನ್ನಿಕೆಯರು ಹೇಳಲಾರಂಭಿಸಿದರು - ಪದ್ಮವತ್ಯಾ ಚ = ಪದ್ಮಾವತಿಯೊಡನೆ, ಕದಾಚಿತ್ = ಒಂದಾನೊಂದು ದಿನ, (ವಯಂ = ನಾವು) ವನಮಾಗತಾಃ = ವನಕ್ಕೆ ಬಂದೆವು, ತದ್ವನಾಂತರೇ = ಆ ಅರಣ್ಯಮಧ್ಯದಲ್ಲಿ, ಪುಷ್ಪಾವಚಯನಂ = ಹೂವು ಬಿಡಿಸುವ ಕಾರ್ಯವನ್ನು, ಆರಬ್ಧಾಃ = ಪ್ರಾರಂಭಿಸಿದೆವು ॥ 88 ॥ ತತ್ರ = ಅಲ್ಲಿಗೆ, ವಿಚಿತ್ರ ತುರುಗಾರುಹಃ = ಆಶ್ಚರ್ಯಕರ ಕುದುರೆಯನ್ನೇರಿದ, ಕಶ್ಚಿತ್ = ಓರ್ವ, ಪುಮಾನ್ = ಪುರುಷನು, ಪ್ರಾಪ್ತಃ = ಬಂದನು, ಅಸ್ಮಾಭಿಃ = ನಮ್ಮಿಂದ, ತೇನಾಪಿ = ಅವನಿಂದಲೂ ಸಹ, ರುಷಾ = ಕೋಪದಿಂದ, ಅವಾಚ್ಯ ವಚನಂ = ಆಡಬಾರದ ಮಾತು, ಕಥಿತಂ = ಹೇಳಲ್ಪಟ್ಟಿತು. ರಾಜ್ಞಃ = ಆಕಾಶರಾಜನ, ತನಯಾ = ಮಗಳಾದ ಪದ್ಮಾವತಿಯು, ರುಷ್ಟ್ವಾ = ಕೋಪಗೊಂಡವಳಾಗಿ, ವಚನಮಬ್ರಮೀತ್ = ಮಾತನಾಡಿದಳು ॥ 89 ॥ ತಯೋಃ = ಅವರಿಬ್ಬರಿಗೂ, ಕಲಹಮಾಪನ್ನಂ = ಜಗಳವಾಯಿತು. ಕದನೇ = ಆ ಜಗಳದಲ್ಲಿ, ಹಯಃ = ಕುದುರೆಯು, ತಾಡಿತಃ = ಕಲ್ಲಿನಿಂದ ಹೊಡೆಯಲ್ಪಟ್ಟಿತು. ತದಾ = ಆಗ, ಅಶ್ವಸ್ತು = ಆ ಕುದುರೆಯು, ಶಿಲಾಭಿಃ = ಕಲ್ಲುಗಳಿಂದ, ತಾಡಿತಃ = ಹೊಡೆಯಲ್ಪಟ್ಟದ್ದಾಗಿ, ಹತಚೇತನಃ = ಪ್ರಾಣಕಳೆದುಕೊಂಡು, ನಿಪಪಾತ = ಧರೆಗೊರಗಿತು ॥ 90 ॥

**ಸಘೋಟಂ ಸಂಪರಿತ್ಯಜ್ಯ ಜಗಾಮೋತ್ತರದಿಙ್ಮುಖಃ ।**
**ಗತೇ ಕಿರಾತೇ ಕಮಲೋದ್ಭವಾಬಲಾ**
**ಮೂರ್ಛಾಮುಪಾಗಮ್ಯ ಪಪಾತ ಭೂಮೌ ॥ 91 ॥**

**ಕನ್ಯಾಂ ತತಸ್ತಾಮುಪವೇಶ್ಯ ಯಾನೇ ವಯಂ ಸ್ವಕಂ ರಾಜಪುರಂ ಗತಾಸ್ಮಃ ।**
**ತಾಮಾಗತಾಂ ಯಾನಗತಾಂ ಸುತಾಂ ನೃಪೋ**
**ಚಿಂತಾಮುಪಾಗಮ್ಯ ರುರೋದ ದೀನಃ ॥ 92 ॥**

**ಅಂಕೇ ನಿಧಾಯಾತ್ಮಸುತಾಂ ಪ್ರಪಶ್ಯನ್ ಮುಖಂ ಮುದಾಹೀನಮಭಾಷಮಾಣಾಮ್ ।**
**ಕಿಂ ವಾ ಭವನ್ಮೇ ದುಹಿತುರ್ದುರಾಸದಾ ಬಿಭೀಷಿಕಾ ವಿಶ್ವವಿನಾಶಕಾ ಚ ॥ 93 ॥**

**ತಸ್ಯಾ ವಿನಾಶಂ ಸ ಹಿ ಜಾನತೇ ಗುರುಃ ತಮಾಹ್ವಯತ್ತತ್ರ ಸುತೇನ ಶೀಘ್ರಮ್ ।**
**ತದ್ವಾಕ್ಯಮಾಕರ್ಣ್ಯ ಗುರುರ್ಧರಾತಲಂ ಶೀಘ್ರಂ ಪ್ರಪನ್ನೋ ನಿಜಮಂದಿರಂ ಚ ॥ 94 ॥**

**ಪ್ರಾಪ್ತಂ ಗುರುಂ ಪ್ರಾಣಮಿವಾಗತಂ ನೃಪಃ ಪ್ರಾಯೇಣ ಪುಣ್ಯಂ ಪರಿಪಕ್ವಮಾಗತಮ್ ।**
**ದತ್ವಾಽಽಸನಂ ರತ್ನಮಯಂ ಸಮರ್ಚ್ಯ ಸುಸಾಧನೈಸ್ಸಾರ್ಘ್ಯಸುಪುಷ್ಪಭೋಜನೈಃ ॥ 95 ॥**

**ಕೃತ್ವಾತಿಥ್ಯಂ ವಿಪ್ರವರಂ ಬಭಾಷೇ ಸುತಾನಿಮಿತ್ತಂ ಗಗನಾಭಿಧೋ ನೃಪಃ ।**
**ತದ್ವಾಕ್ಯಮಾಕರ್ಣ್ಯ ಗುರು ಸ್ಸತಾಂಗುರುಃ ಪ್ರಶಾಂತಯನ್ವಾಕ್ಯಮುವಾಚ ಭೂಮಿಪಮ್ ॥ 96 ॥**

ಸಃ = ಆ ಕಿರಾತನು, ಘೋಟಂ = ಕುದುರೆಯನ್ನು, ಸಂಪರಿತ್ಯಜ್ಯ = ಅಲ್ಲೇಬಿಟ್ಟವನಾಗಿ, ಉತ್ತರದಿಙ್ಮುಖಃ = ಉತ್ತರಾಭಿಮುಖವಾಗಿ, ಜಗಾಮ = ಹೊರಟು ಹೋದನು, ಕಿರಾತೇ ಗತೇ ಸತಿ = ಕಿರಾತನು ಹೊರಟು ಹೋಗುತ್ತಿರಲಾಗಿ, ಅಬಲಾ = ಅಬಲೆಯಾದ, ಕಮಲೋದ್ಭವಾ = ಕಮಲದಲ್ಲಿ ಹುಟ್ಟಿದ ಪದ್ಮಾವತಿಯು, ಮೂರ್ಛಾಂ = ಮೂರ್ಛೆಯನ್ನು, ಉಪಾಗಮ್ಯ = ಹೊಂದಿ, ಭೂಮೌ = ಭೂಮಿಯಲ್ಲಿ (ನೆಲದ ಮೇಲೆ) ಪಪಾತ = ಬಿದ್ದು ಬಿಟ್ಟಳು ॥ 91 ॥ ತತಃ = ಆ ತರುವಾಯ, ಯಾನೇ = ಪಲ್ಲಕ್ಕಿ (ಮೇನಾ)ಯಲ್ಲಿ, ತಾಂ ಕನ್ಯಾಂ = ಆ ಪದ್ಮಾವತಿಯನ್ನು, ಉಪವೇಶ್ಯ = ಕೂಡಿಸಿ, ವಯಂ = ನಾವು, ಸ್ವಕಂ = ನಮ್ಮ, ರಾಜಪುರಂ = ರಾಜಧಾನಿಗೆ (ನಾರಾಯಣಪುರಕ್ಕೆ), ಗತಾಸ್ಮಃ = ಹೋದವರಾದೆವು, ನೃಪಃ = ಆಕಾಶರಾಜನು, ಯಾನಗತಾಂ = ಪಲ್ಲಕ್ಕಿಯಲ್ಲಿ (ಮೇನೆಯಲ್ಲಿ), ಆಗತಾಂ = ಬಂದ, ತಾಂ ಸುತಾಂ = ಮೂರ್ಛಿತಳಾದ ಮಗಳನ್ನು (ಕಂಡು), ಚಿಂತಾಮುಪಾಗಮ್ಯ = ಚಿಂತಾಕ್ರಾಂತನಾಗಿ, ದೀನಃ = ದೀನನಾಗಿ (ಖಿನ್ನನಾಗಿ), ರುರೋದ = ಅತ್ತನು ॥ 92 ॥ ಅಭಾಷಮಾಣಾಂ = ಮಾತನಾಡದಿರುವ, ಆತ್ಮಸುತಾಂ = ತನ್ನ ಮಗಳಾದ ಪದ್ಮಾವತಿಯನ್ನು, ಅಂಕೇನಿಧಾಯ = ತೊಡೆಯಮೇಲಿಟ್ಟುಕೊಂಡು (ಕೂಡಿಸಿಕೊಂಡು), ಮುದಾಹೀನಾಂ = ಸಂತೋಷವಿಲ್ಲದಿರುವ, ಮುಖಂ = ಪುತ್ರಿಯ ಮುಖವನ್ನು, ಪ್ರಪಶ್ಯನ್ = ನೋಡುತ್ತಿರುವವನಾಗಿ, ಮೇ = ನನ್ನ, ದುಹಿತುಃ = ಮಗಳಿಗೆ, ವಿಶ್ವವಿನಾಶಕಾಃ = ಜಗತ್ತನ್ನು ನಾಶಪಡಿಸುವ, ದುರಾಸದಾಃ = ಅಸಾಧ್ಯವಾದ, ವಿಭೀಷಿಕಾಃ = ಭಯಪಡಿಸುವಂತಹುದು, ಕಿಂ ವಾ? = ಏನಾಗಿರಬಹುದು? ತಸ್ಯಾಃ = ಆ ಭಯಕಾರಕವಾದುದನ್ನು ಸಃ ಗುರುಃ = ದೇವಗುರುವಾದ ಬೃಹಸ್ಪತ್ಯಾಚಾರ್ಯನೇ(ನು), ಜಾನತೇ = ತಿಳಿದಿದ್ದಾನೆ (ತಿಳಿಯುವನು) ಹೀಗೆ ನಿಶ್ಚಯಿಸಿ, ತಂ ಗುರುಂ = ಆ ಬೃಹಸ್ಪತ್ಯಾಚಾರ್ಯನನ್ನು, ತತ್ರ = ನಾರಾಯಣಪುರಿಗೆ (ಅಲ್ಲಿಗೆ), ಸುತೇನ = ಮಗನದ್ವಾರಾ, ಆಹ್ವಯತ್ = ಆಹ್ವಾನಿಸಿದನು, ತತ್ = ಆಕಾಶರಾಜನ ಪರವಾಗಿ ಬಂದ ವಸುಧಾನನ, ವಾಕ್ಯಂ = ಮಾತನ್ನು, ಆಕರ್ಣ್ಯ = ಕೇಳಿ, ಗುರುಃ = ಬೃಹಸ್ಪತ್ಯಾಚಾರ್ಯನು, ಶೀಘ್ರಂ = ವೇಗವಾಗಿ, ಧರಾತಲಂ ಪ್ರಪನ್ನಃ = ಭೂಮಿಗೆ ಆಗಮಿಸಿದನು, ನಿಜಮಂದಿರಂಚ = ತನ್ನ ಮನೆಯನ್ನು ಕುರಿತು, ಆಗತಂ = ಬಂದಂಥಾ, ಗುರುಂ = ಗುರುವನ್ನು (ನೋಡಿ), ಪ್ರಾಯೇಣ = ಪ್ರಾಯಶಃ, ಪುಣ್ಯಂ = ನನ್ನ ಪುಣ್ಯವು ಪರಿಪಕ್ವಮಾಗತಂ = ಪರಿಪಕ್ವವಾಯಿತು (ಎಂದು ತಿಳಿದು), ರತ್ನಮಯಂ = ರತ್ನಖಚಿತವಾದ, ಆಸನಂ = ಭದ್ರಪೀಠವನ್ನು, ದತ್ವಾ = ನೀಡಿ, ಸಾರ್ಘ್ಯಸುಪುಷ್ಪಭೋಜನೈಃ = ಅರ್ಘ್ಯ, ಪಾದ್ಯ, ಹೂವು, ಗಂಧಾಕ್ಷತೆಗಳು ಹಾಗೂ ಮೃಷ್ಟಾನ್ನಭೋಜನ ಮೊದಲಾದ, ಸುಸಾಧನೈಃ = ಶ್ರೇಷ್ಠಸಾಧನ ಸಾಮಗ್ರಿಗಳಿಂದ (ಅಥವಾ ಉತ್ತಮವಾದ ಅತಿಥಿ ಸತ್ಕಾರಸಾಧನಗಳಿಂದ), ಸಮರ್ಚ್ಯ = ಚೆನ್ನಾಗಿ ಪೂಜಿಸಿ ॥ 93-95 ॥ ಗಗನಾಭಿಧೋನೃಪಃ = ಆಕಾಶನಾಮಕನಾದ ನೃಪತಿಯು, ಆತಿಥ್ಯಂ = ಬೃಹಸ್ಪತ್ಯಾಚಾರ್ಯನಿಗೆ ಅತಿಥಿಸತ್ಕಾರವನ್ನು, ಕೃತ್ವಾ = ಮಾಡಿ, ಸುತಾನಿಮಿತ್ತಂ = ಮಗಳಕಾರಣಕ್ಕಾಗಿ, ವಿಪ್ರವರಂ = ಆ ಬ್ರಾಹ್ಮಣೋತ್ತಮನನ್ನು (ಕುರಿತು), ಬಭಾಷೇ = ಮಾತನಾಡಿದನು. ಸತಾಂಗುರುಃ = ಸಜ್ಜನರಿಗೆ ಉಪದೇಶಕನಾದ, ಗುರುಃ = ಬೃಹಸ್ಪತ್ಯಾಚಾರ್ಯನು, ತದ್ವಾಕ್ಯಮಾಕರ್ಣ್ಯ = ರಾಜನು ಹೇಳಿದ ಮಾತನ್ನು ಕೇಳಿ, ಪ್ರಶಾಂತಯನ್ = ರಾಜನನ್ನು ಸಾಂತ್ವನಗೊಳಿಸುತ್ತಾ (ಶಾಂತಗೊಳಿಸುತ್ತಾ), ಭೂಮಿಪಂ (ಪ್ರತಿ) = ಆಕಾಶರಾಜನನ್ನು ಕುರಿತು, ವಾಕ್ಯಮುವಾಚ = ಮಾತನಾಡಿದನು ॥ 96 ॥

ಬೃಹಸ್ಪತಿರುವಾಚ-

ದುಹಿತುಸ್ತೇದ್ಯ ಸಂಕಷ್ಟನಿಮಿತ್ತಂ ಶ್ರುಣು ಭೂಮಿಪ ।
ಪುಷ್ಪಾರ್ಥಂ ತು ಗತಾ ಬಾಲಾ ಭೀತಾ ಪುರುಷದರ್ಶನಾತ್ ।
ತಸ್ಮಾಚ್ಛಾಂತಿಂ ಪ್ರವಕ್ಷ್ಯಾಮಿ ಅಭಿಷೇಕಂ ಶಿವಸ್ಯ ಚ ॥ 97 ॥

ಅಗಸ್ತ್ಯೇಶಸ್ಯ ವೈ ರಾಜನ್ ರುದ್ರೈಕಾದಶಭಿಸ್ತದಾ ।
ಏವಮುಕ್ತೋಽಥ ಗುರುಣಾ ರಾಜಾಪ್ಯಸ್ಮಾನ್ಸಮಾದಿಶತ್ ॥ 98 ॥

ಸಂಪಾದ್ಯ ಸರ್ವಸಂಭಾರಾನ್ ಯೂಯಂ ವಿಪ್ರೈಸ್ಸಮನ್ವಿತಾಃ ।
ಮತ್ಪುತ್ರೀ ಜ್ವರತಾಪೇನ ಶಯಾನಾ ನಿಜಮಂದಿರೇ ॥ 99 ॥

ತಚ್ಛಾಂತ್ಯರ್ಥಂ ವಯಂ ಪ್ರಾಪ್ತಾ ಅಭಿಷೇಕಾರ್ಥಮಂಗನೇ ।
ಧಿಷಣೇನ ಸಮಾಜ್ಞಪ್ತಾಃ ದ್ವಿಜವರ್ಯಾಸ್ಸಮಾಗತಾಃ ॥ 100 ॥

ತೇಷಾಂ ಸಂಗಾತ್ಸಮಾಯಾತಾಃ ಕೈಲಾಸಪತಿಮಂದಿರಮ್ ।
ಶ್ರುತ್ವಾ ತದ್ವಚನಂ ದೇವೀ ಬಕುಲಾಽಽನಂದನಿರ್ಭರಾ ॥ 101 ॥

ಅಹೋ ಧಿಗಾತ್ಮಾನುಭವಸ್ಯ ವಿಷ್ಣೋಃ ಪ್ರಭಾಂ ನ ಜಾನೇಽದ್ಯ ಪುರಾಣಪುಂಸಃ ।
ಕೃಷ್ಣಂ ಮುಕುಂದಂ ತನಯೇತಿ ಮತ್ವಾ ವೃಥಾ ಶರೀರಂ ಪುನರಾಗತಂ ಮಮ ॥ 102 ॥

ಬೃಹಸ್ಪತಿರುವಾಚ = ಬೃಹಸ್ಪತಿಯು ಹೇಳುತ್ತಿದ್ದಾನೆ - ಭೂಮಿಪ = ಎಲೈ ಭೂಪಾಲ! ಅದ್ಯ = ಈಗ, ತೇ = ನಿನ್ನ ದುಹಿತುಃ = ಮಗಳಿಗೆ (ಬಂದೊದಗಿದ), ಸಂಕಷ್ಟನಿಮಿತ್ತಂ = ಸಂಕಟದ ಕಾರಣವನ್ನು, ಶ್ರುಣು = ಕೇಳು, ಪುಷ್ಪಾರ್ಥಂತು = ಹೂವಿಗಾಗಿ, ಗತಾ = ಹೋದವಳಾದ, ಬಾಲಾ = ನಿನ್ನ ಕುಮಾರಿಯು, ಪುರುಷದರ್ಶನಾತ್ = ಒಬ್ಬ ಪುರುಷನನ್ನು ಕಂಡು, ಭೀತಾ = ಭಯಗೊಂಡಿರುವಳು. ತಸ್ಮಾತ್ = ಆದ್ದರಿಂದ, ಶಾಂತಿಂ = ಶಾಂತಿಯನ್ನು (ಅಥವಾ ತಸ್ಮಾಚ್ಛಾಂತಿ = ಆ ಭಯಪರಿಹಾರಕ್ಕೆ ಶಾಂತಿಯನ್ನು) ಪ್ರವಕ್ಷ್ಯಾಮಿ = ಹೇಳುತ್ತೇನೆ, ಶಿವಸ್ಯ ಚ = ರುದ್ರನಿಗೆ, ಅಭಿಷೇಕಂ = ಅಭಿಷೇಕವನ್ನು (ಮಾಡಿಸಬೇಕು) ॥ 97 ॥ ರಾಜನ್ = ಭೂಮೀಂದ್ರ!, ಅಗಸ್ತ್ಯೇಶಸ್ಯ ವೈ = ಅಗಸ್ತೇಶ್ವರನಿಗೆ, ರುದ್ರೈಃ = ರುದ್ರ ಮತ್ತು ಚಮಕಗಳ ಪಾರಾಯಣಪೂರ್ವಕವಾಗಿ, ಏಕಾದಶಭಿಃ = ಹನ್ನೊಂದುಬಾರಿ, ಅಭಿಷೇಕಂ ಚ = ಅಭಿಷೇಕವನ್ನು (ಮಾಡಿಸಬೇಕು), ತದಾ = ಆವಾಗ, ಗುರುಣಾ = ಬೃಹಸ್ಪತಿಯಿಂದ, ಏವಮುಕ್ತಃ = ಹೀಗೆ ಹೇಳಿಸಿಕೊಳ್ಳಲ್ಪಟ್ಟ, ರಾಜಾ ಅಪಿ = ಆಕಾಶರಾಜನೂ ಕೂಡ, ಅಥ = ಅನಂತರ, ಅಸ್ಮಾನ್ ಪ್ರತಿ = ನಮ್ಮಗಳನ್ನು ಕುರಿತು, ಮತ್ಪುತ್ರೀ = ನನ್ನ ಮಗಳು, ನಿಜಮಂದಿರೇ = ತನ್ನರಮನೆಯಲ್ಲಿ, ಜ್ವರತಾಪೇನ = ಜ್ವರದ ಬಾಧೆಯಿಂದ, ಶಯಾನಾ(ವರ್ತತೇ) = ಮಲಗಿದ್ದಾಳೆ, ಯೂಯಂ = ನೀವುಗಳು, ವಿಪ್ರೈಃ = ಬ್ರಾಹ್ಮಣರಿಂದ, ಸಮನ್ವಿತಾಃ = ಸಹಿತರಾಗಿ, ಸರ್ವಸಂಭಾರಾನ್ = ದೇವರ ಸೇವೆಗೆ ಬೇಕಾದ ಸಕಲ ಸಾಮಗ್ರಿಗಳನ್ನು, ಸಂಪಾದ್ಯ = ಸಂಗ್ರಹಿಸಿಕೊಂಡು (ಸಂಪಾದಿಸಿ ತೆಗೆದುಕೊಂಡು) ಹೋಗಿರಿ ಎಂದು, ಸಮಾದಿಶತ್ = ಆಜ್ಞಾಪಿಸಿದನು ॥ 98-99 ॥ ಅಂಗನೇ = ಎಲೈ ಸ್ತ್ರೀಯೇ, ವಯಂ = ನಾವು, ತಚ್ಛಾಂತ್ಯರ್ಥಂ = ಪದ್ಮಾವತಿಯ ಭಯಪರಿಹಾರ, ಜ್ವರಪರಿಹಾರಗಳ ಶಾಂತಿಗಾಗಿ, ಅಭಿಷೇಕಾರ್ಥಂ = ರುದ್ರದೇವರಿಗೆ ಏಕಾದಶವಾರ ರುದ್ರಾಭಿಷೇಕ ಮಾಡಿಸಲು, ಪ್ರಾಪ್ತಾ(ಸ್ಸ) = ಬಂದವರಾಗಿದ್ದೇವೆ. ಧೀಷಣೇನ = ಬೃಹಸ್ಪತಿಯಿಂದ, ಸಮಾಜ್ಞಪ್ತಾಃ =

ಆಜ್ಞಾಪಿಸಲ್ಪಟ್ಟ, ದ್ವಿಜವರ್ಯಾಃ = ಬ್ರಾಹ್ಮಣ ಶ್ರೇಷ್ಠರೂ ಸಹ, ಸಮಾಗತಾಃ = ಬಂದವರಾದರು ॥ 100 ॥ ತೇಷಾಂ = ಆ ಭೂಸುರರ, ಸಂಗಾತ್ = ಜೊತೆಗೆ, ಕೈಲಾಸಪತಿ ಮಂದಿರಂ = ಈ ಶಿವನ ಗುಡಿಗೆ, ಸಮಾಯಾತಾಃ = ಬಂದೆವು. ಬಕುಲಾದೇವಿ = ಬಕುಳಮಾಲಿಕೆಯು, ತದ್ವಚನಂ = ಅವರ ವಚನವನ್ನು, ಶ್ರುತ್ವಾ = ಕೇಳಿ, ಆನಂದನಿರ್ಭರಾ (ಅಭೂತ್) = ಪರಮಾನಂದಭರಿತಳಾದಳು ॥ 101 ॥. ಆತ್ಮಾನುಭವಸ್ಯ = ಸ್ವಾನುಭವವುಳ್ಳ (ಆತ್ಮಾನುಭವವುಳ್ಳ), ಪುರಾಣಪುಂಸಃ = ಅನಾದಿಪುರುಷನಾದ, ವಿಷ್ಣೋಃ = ವ್ಯಾಪಕನಾದ ಶ್ರೀಹರಿಯ, ಪ್ರಭಾಂ = ತೇಜಸ್ಸನ್ನು, ನ ಜಾನೇ = ನಾನು ಅರಿಯದವಳಾಗಿದ್ದೇನೆ. ಅದ್ಯ = ಈಗ, ಪುರಾಣಪುಂಸಃ = ಅನಾದಿನಿತ್ಯನೂ ಪುರುಷೋತ್ತಮನೂ ಆದ, ಮುಕುಂದಂ = ಮುಕುಂದನಾದ, ಕೃಷ್ಣಂ = ಶ್ರೀಕೃಷ್ಣನನ್ನು, ತನಯೇತಿ = ನನ್ನ ಮಗನೆಂದು, ಮತ್ವಾ = ತಿಳಿದು, ಮಮ = ನನಗೆ, ವೃಥಾ = ವ್ಯರ್ಥವಾಗಿ, ಶರೀರಂ = ಈ ದೇಹವು (ಜನ್ಮವು), ಪುನಃ = ಮತ್ತೆ, ಆಗತಂ = ಬಂದಿತು! ಅಹೋ ಧಿಕ್ = ಅಜ್ಞಾನಿಯಾದ ನನಗೆ ಧಿಕ್ಕಾರವಿರಲಿ (ಎಂದು ನೊಂದುಕೊಂಡಳು). ॥ 102 ॥

*ಕನ್ಯಾ ಊಚುಃ –*

**ತ್ವಂ ಕುತ್ರ ಗಚ್ಛಸೇ ಬಾಲೇ ಕಿಮರ್ಥಂ ತ್ವಮಿಹಾಗತಾ ।**
**ವದಾದೇಶಂ ವರಾಂಗಿ ತ್ವಮಿತಿ ತಾಭಿಃ ಸುಭಾಷಿತಾ ॥ 103 ॥**

*ಬಕುಲೋವಾಚ –*

**ಶೃಣ್ವಂತು ಕನ್ಯಕಾಃ ಸರ್ವಾ ಮದ್ವಾಕ್ಯಮವಿಚಾರತಃ ।**
**ಅಹಂ ಶ್ರೀವೇಂಕಟೇಶಸ್ಯ ದಾಸೀ ಭೂತಾಸ್ಮಿ ಸಾಂಪ್ರತಮ್ ॥ 104 ॥**

**ಧರಣ್ಯಾ ರಾಜಭಾರ್ಯಾಯಾಃ ಸಮೀಪೇ ಕಾರ್ಯಮಸ್ತಿ ಮೇ ।**
**ನಾರಾಯಣಾಪುರಂ ದಿವ್ಯಮಭೇದ್ಯಂ ಪರದೇಶಿಭಿಃ ॥ 105 ॥**

**ಭವತಾಂ ಸಂಗಮಾತ್ರೇಣ ಕರಿಷ್ಯೇಽಂತಃ ಪ್ರವೇಶನಮ್ ।**
**ಇತ್ಥಮುಕ್ತ್ವಾ ಚ ಸಾ ಬಾಲಾ ಕನ್ಯಾಭಿಶ್ಚಾಪತತ್ಪುರಮ್ ॥ 106 ॥**

ಕನ್ಯಾ ಊಚುಃ = ಕನ್ನಿಕೆಯರು ಮಾತನಾಡುತ್ತಿದ್ದಾರೆ – ಬಾಲೇ = ಎಲೈ ಕನ್ಯೆಯೇ, ತ್ವಂ = ನೀನು, ಕುತ್ರ ಗಚ್ಛಸೇ = ಎಲ್ಲಿಗೆ ಹೋಗುತ್ತಿದ್ದೀಯೆ? ಕಿಮರ್ಥಂ = ಏತಕ್ಕಾಗಿ, ತ್ವಂ = ನೀನು, ಇಹಾಗತಾ = ಇಲ್ಲಿಗೆ ಬಂದಿದ್ದೀಯೆ? ವರಾಂಗಿ = ಉತ್ತಮಶರೀರವುಳ್ಳವಳೇ, ಆದೇಶಂ = ಆ ವಿಚಾರವನ್ನು, ತ್ವಂ = ನೀನು, ವದ = ಹೇಳು, ಇತಿ = ಹೀಗೆ, ತಾಭಿಃ = ಅರಮನೆಯ ವನಿತೆಯರಿಂದ, ಸುಭಾಷಿತಾ = ಹಿತವಾಗಿ ಹೇಳಿಸಿಕೊಂಡಂಥ, ॥ 103 ॥ ಬಕುಲೋವಾಚ = ಬಕುಳೆಯು ಮಾತನಾಡಲಾರಂಭಿಸಿದಳು, ಕನ್ಯಕಾಃ = ಕನ್ನಿಕೆಯರೇ, ಅವಿಚಾರತಃ = ಏನನ್ನೂ ವಿಚಾರಮಾಡದಲೇ (ವಿವಿಧ ರೀತಿ ಊಹಿಸಿ ವಿಚಾರಮಾಡದೇ), ಮದ್ವಾಕ್ಯಂ = ನನ್ನ ನುಡಿಯನ್ನು, ಸರ್ವಾಃ = ನೀವೆಲ್ಲರೂ, ಶೃಣ್ವಂತು = ಕೇಳುವವರಾಗಿರಿ, ಸಾಂಪ್ರತಂ = ಈಗ, ಅಹಂ = ನಾನು, ಶ್ರೀವೇಂಕಟೇಶಸ್ಯ = ಕಾಂತಿಸಂಪನ್ನನೂ, ಸಂಪದ್ಯುಕ್ತನೂ ಆದ ಶ್ರೀನಿವಾಸನಿಗೆ, ದಾಸೀ ಭೂತಾಸ್ಮಿ = ದಾಸಿ (ಸೇವಕಿ)ಯಾಗಿದ್ದೇನೆ ॥ 104 ॥ ಮೇ = ನನಗೆ, ರಾಜಭಾರ್ಯಾಯಾಃ = ರಾಜಪತ್ನಿಯಾದ, ಧರಣ್ಯಾಃ = ಧರಣೀದೇವಿಯ, ಸಮೀಪಕೇ = ಹತ್ತಿರ, ಕಾರ್ಯಮಸ್ತಿ = ಕಾರ್ಯವಿದೆ. ಪರದೇಶಿಭಿಃ = ಪರದೇಶಿಗಳಿಗೆ (ಪರದೇಶಿಗಳಿಂದ), ದಿವ್ಯಂ = ಶ್ರೇಷ್ಠವಾದ, ನಾರಾಯಣಪುರಂ = ನಾರಾಯಣಪುರವು, ಅಭೇದ್ಯಂ = ಭೇದಿಸಲಾಗದಂತಹುದು (ಅಂದರೆ ಪರದೇಶಿಗಳು ರಾಜಧಾನಿಯನ್ನು ಪ್ರವೇಶಿಸುವುದು ಬಹುಕಷ್ಟವೆಂದು ಭಾವ)

|| 105 || ಭವತಾಂ = ನಿಮ್ಮಗಳ, ಸಂಗಮಾತ್ರೇಣ = ಜೊತೆಯಲ್ಲಿರುವ ಮಾತ್ರದಿಂದಲೇ, ಅಂತಃಪ್ರವೇಶನಂ = ಪುರಪ್ರವೇಶವನ್ನು, ಕರಿಷ್ಯೇ = ಮಾಡುತ್ತೇನೆ. ಸಾ ಬಾಲಾ = ಆ ಬಕುಳಾದೇವಿಯು, ಇತ್ಥಮುಕ್ತ್ವಾ = ಹೀಗೆ ಹೇಳಿದವಳಾಗಿ, ಕನ್ಯಾಭಿಶ್ಚ = ಆ ರಾಜ ಮಂದಿರದ ಕನ್ನಿಕೆಯರೊಡನೆ, ಪುರಂ = ನಾರಾಯಣಪುರವನ್ನು, ಆಪತತ್ = ಬಂದು ಸೇರಿದವಳಾದಳು || 106 ||

**ಏವಂ ಗತಾಯಾಂ ತಸ್ಯಾಂ ತು ನ ವಿಶ್ವಾಸಮಗಾದ್ಧರಿಃ |**
**ಏಕ ಪುತ್ರೋಽಹ್ಯಪುತ್ರಸ್ತು ಏಕನೇತ್ರೋಽಹ್ಯನೇತ್ರವಾನ್ || 107 ||**

**ಸ್ತ್ರೀಭಿಶ್ಚ ಯತ್ಕೃತಂ ಕಾರ್ಯಂ ನ ತದರ್ಥಫಲಪ್ರದಮ್ |**
**ಇತಿ ಸಂಚಿಂತ್ಯ ಗೋವಿಂದೋ ಮಾಯಾವೀ ಕಾಮರೂಪವಾನ್ || 108 ||**

**ಸ್ವಯಂ ಶ್ರೀವೇಂಕಟಾಧೀಶೋ ವನಿತಾರೂಪಮಾಶ್ರಿತಃ |**
**ಪುಲಿಂದವೇಷಧಾರೀ ಸಃ ಚಕ್ರೇ ತದ್ವೇಷಭೂಷಣಮ್ || 109 ||**

ತಸ್ಯಾಂ = ಬಕುಳೆಯು, ಏವಂ = ಹೀಗೆ, ಗತಾಯಾಂಸತಿ = ನಾರಾಯಣಪುರಕ್ಕೆ ಹೋಗುತ್ತಿರಲಾಗಿ, ಹರಿಃ = ಶ್ರೀನಿವಾಸನು, ತಸ್ಯಾಂ = ಅವಳಲ್ಲಿ, ವಿಶ್ವಾಸಪರಃ = ತನ್ನ ಕಾರ್ಯಪೂರ್ಣಮಾಡುವ ಬಗೆಗೆ ವಿಶ್ವಾಸವುಳ್ಳವನು, ನ ಸಮಾಗಾತ್ = ಆಗಲಿಲ್ಲ, ಏಕಪುತ್ರಃ = ಒಬ್ಬನೇ ಮಗನುಳ್ಳವನು, ಅಪುತ್ರಃ = ಪುತ್ರನಿಲ್ಲದವನಂತೆಯೇ ಸರಿ, ಹಿ = ಪ್ರಸಿದ್ಧವು, ಏಕನೇತ್ರಃ = ಒಕ್ಕಣ್ಣನು, ಅನೇತ್ರವಾನ್ = ಕಣ್ಣಿಲ್ಲದವನಂತೆಯೇ ಸರಿ || 107 || ಸ್ತ್ರೀಭಿಶ್ಚ = ಹೆಂಗಸರಿಂದ, ಯತ್ಕರ್ಮ = ಯಾವ ಕಾರ್ಯವು, ಕೃತಂ = ಮಾಡಲ್ಪಡುವ(ಟ್ಟದ್ದು), ತತ್ = ಅದು, ನ ಕೃತಂ = ಮಾಡಲ್ಪಟ್ಟಿದ್ದೇ ಅಲ್ಲವು, ತತ್ = ಅದು, ಅರ್ಥ = ಪ್ರಯೋಜನರೂಪವಾದ, ಫಲಪ್ರದಂ = ಫಲವನ್ನು ಕೊಡತಕ್ಕದ್ದು ನ = ಆಗುವುದಿಲ್ಲ ಇತಿ = ಹೀಗೆ, ಸಂಚಿತ್ಯ = ಚೆನ್ನಾಗಿ ಯೋಚನೆ ಮಾಡಿ, ಮಾಯಾವೀ = ಸ್ವಾಧೀನವಾಗಿರುವ ಮಾಯೆಯುಳ್ಳ, ಕಾಮರೂಪವಾನ್ = ಇಚ್ಛಿಸಿದ ರೂಪವನ್ನು ತಾಳಲು ಸಮರ್ಥನಾದ, ಗೋವಿಂದಃ = ಗೋವರ್ಧನ ಗಿರಿಧಾರಿಯಾದ (ವೇದೋದ್ಧಾರಕನಾದ) || 108 || ಶ್ರೀವೇಂಕಟಾಧೀಶಃ = ವೇದಪ್ರತಿಪಾದ್ಯ ಮಹಿಮನಾದ ಶ್ರೀನಿವಾಸನು, ಸ್ವಯಂ = ತಾನು, ವನಿತಾರೂಪಂ = ಸ್ತ್ರೀರೂಪವನ್ನು, ಆಶ್ರಿತಃ = ಆಶ್ರಯಿಸಿ (ಧರಿಸಿ), ಪುಲಿಂದವೇಷಧಾರಿ = ಕೊರವಂಜಿಯ ವೇಷ ಪಡೆದವನಾಗಿ, ಸಃ = ಶ್ರೀಹರಿಯು, ತದ್ವೇಷಭೂಷಣಂ = ಅದಕ್ಕೆ ತಕ್ಕಂತೆ ವೇಷ ಅಲಂಕಾರಗಳನ್ನು, ಚಕ್ರೇ = ಮಾಡಿಕೊಂಡನು || 109 ||

**ಚೀರವಸ್ತ್ರಂ ತತೋ ಬಧ್ವಾ ಛಿದ್ರಕಂಚುಕರಂಜಿತಃ |**
**ಬ್ರಹ್ಮಾಣಂ ಚ ಶಿಶುಂ ಕೃತ್ವಾ ಯಷ್ಟಿಂ ಕೃತ್ವಾ ಮಹೇಶ್ವರಮ್ |**
**ಬ್ರಹ್ಮಾಂಡಂ ಜಗದಾಧಾರಂ ತ್ರೈಗುಣ್ಯಂ ಗುಲ್ಮಮೇವ ಚ || 110 ||**

**ವಿಕೀರ್ಯ ಕೇಶಪುಂಖಾನಿ ಯಥಾ ಪಂಚಶತಾಯುಷಾ |**
**ಗುಂಜಾಮಣಿವಿಭೂಷಾಂಗಾ ಶಂಖಬದ್ಧಸುಹಾರಿಕಾ || 111 ||**

**ವೇಣುಗುಲ್ಮಂ ಸ್ವಶಿರಸಿ ನವಧಾನ್ಯಪ್ರಪೂರಿತಮ್ |**
**ಲಂಬೋದರೀ ಲಂಬಕರ್ಣಾ ಲಂಬಿತಾತ್ಮಪಯೋಧರಾ || 112 ||**

**ಅದಂತಾ ಶುಷ್ಕವದನಾ ಸಾ ಬಾಲಾ ಧರ್ಮದೇವತಾ ।**
**ಬ್ರಹ್ಮಾಣಂ ನಾಭಿಸಂಭೂತಂ ಸಪ್ತಮಾಸಾತ್ಮಕಂ ಶಿಶುಮ್ ॥ 113 ॥**

**ರುದಂತಂ ಶುಷ್ಕವದನಂ ಕೃಶಾಂಗಂ ದೀರ್ಘಬಾಹುಕಮ್ ।**
**ಶಿಶುಂ ಬಧ್ವಾ ಚೀರವಸ್ತ್ರೇ ನೃತ್ಯಂತೀ ಜಗದೀಶ್ವರೀ ॥ 114 ॥**

**ಯಷ್ಟಿಂ ಧೃತ್ವಾ ಕರೇ ಚಾಗಾತ್ ಸಾ ಬಾಲಾ ಧರ್ಮದೇವತಾ ।**
**ನಾರಾಯಣಪುರಂ ಪ್ರಾಪ್ತಾ ನಾರದಾಬ್ಜವಂದಿತಾ ॥ 115 ॥**

**ಪುರೀಂ ಸಮಾಗತ್ಯ ಚ ಗರ್ಜಯಂತೀ ಸುತಾನ್ ಪತೀನ್ ಬಂಧುಗಣಾನ್ ದದಾಮಿ ।**
**ಶ್ರುತ್ವಾ ವಚಸ್ತದ್ಗದಿತಂ ಪುರಸ್ತ್ರಿಯಃ ಊಚು ಸ್ತದಾ ತಾಂ ನೃಪವಲ್ಲಭಾಂ ಪ್ರತಿ ॥ 116 ॥**

ತತಃ = ಅನಂತರ, ಚೀರವಸ್ತ್ರಂ = ನಾರುಬಟ್ಟೆಯನ್ನು, ಬಧ್ವಾ = ಕಟ್ಟಿ (ಉಟ್ಟು)ಕೊಂಡು, ಛಿದ್ರಕಂಚುಕರಂಜಿತಃ = ಹರಿದು ತೂತಾಗಿರುವ ಕುಪ್ಪಸದಿಂದ ಅಲಂಕೃತನಾಗಿ, ಬ್ರಹ್ಮಾಣಂ = ಬ್ರಹ್ಮದೇವನನ್ನು, ಶಿಶುಂ = ಮಗುವಾಗಿ, ಕೃತ್ವಾ = ಮಾಡಿಕೊಂಡು, ಮಹೇಶ್ವರಂ = ರುದ್ರದೇವನನ್ನು, ಯಷ್ಟಿಂಕೃತ್ವಾ = ಊರುಗೋಲಾಗಿ ಮಾಡಿಕೊಂಡು, ಜಗದಾಧಾರಂ = ಜಗತ್ತಿಗೆ ಆಧಾರವಾದ, ತ್ರೈಗುಣ್ಯಂ = ತ್ರಿಗುಣಯುಕ್ತವಾದ, ಬ್ರಹ್ಮಾಂಡಂ = ಸಮಸ್ತ ಬ್ರಹ್ಮಾಂಡವನ್ನೇ, ಗುಲ್ಮಮೇವ ಚ = ಬುಟ್ಟಿಯನ್ನಾಗಿ, ಕೃತ್ವಾ = ಮಾಡಿಕೊಂಡವನಾಗಿ ॥ 110 ॥ ಕೇಶಪುಂಖಾನಿ = ಕೂದಲುಗಳ ಕೊನೆಗಳನ್ನು (ತುದಿಗೂದಲುಗಳನ್ನು), ವಿಕೀರ್ಯ = ಎಲ್ಲಕಡೆ ಬರುವಂತೆ ಕೆದರಿಕೊಂಡು, ತಥಾ = ಹಾಗೆಯೇ, ಪಂಚಶತಾಯುಷಾ = ಐದುನೂರು ವರ್ಷ ವಯಸ್ಸಾದವಳಂತೆ, ಗುಂಜಾಮಣಿ ವಿಭೂಷಾಂಗಾ = ಗುಲಗಂಜಿಗಳಿಂದ ಅಲಂಕೃತವಾದ ದೇಹವುಳ್ಳ, ಶಂಖಬದ್ಧಸುಹಾರಿಕಾ = ಶಂಖಗಳಿಂದ ಕಟ್ಟಲ್ಪಟ್ಟ ಹಾರಗಳುಳ್ಳ, ಕೊರವಂಜಿಯ (ವೇಷಧಾರಿಯಾದ ಶ್ರೀನಿವಾಸನು) ॥ 111 ॥ ನವಧಾನ್ಯ ಪ್ರಪೂರಿತಂ = ನವವಿಧ ಧಾನ್ಯಗಳಿಂದ ತುಂಬಿದ, ನವಧಾನ್ಯ – ಗೋಧಿ, ಹೆಸರು, ಉದ್ದು, ಭತ್ತ, ತೊಗರಿ, ಅವರೆ, ಹುರುಳಿ, ಎಳ್ಳು, ಕಡಲೆ, ಇವೆ ನವಧಾನ್ಯಗಳು. ವೇಣುಗಲ್ಮಂ = ಬಿದಿರಿನ ಬುಟ್ಟಿಯನ್ನು, ಸ್ವಶಿರಸಿ = ತನ್ನ ತಲೆಯ ಮೇಲೆ (ಇಟ್ಟುಕೊಂಡು), ಲಂಬೋದರೀ = ಉದ್ದವಾಗಿ ಜೋಲುಬಿದ್ದ ಉದರ(ಹೊಟ್ಟೆ)ವುಳ್ಳವಳಾಗಿ, ಲಂಬಕರ್ಣಾ = ಜೋಲುಬಿದ್ದ ಕಿವಿಗಳುಳ್ಳ, ಲಂಬಿತಾತ್ಮಪಯೋಧರಾ = ಜೋಲುಬಿದ್ದ ತನ್ನ ಸ್ತನಗಳಿಂದ ಯುಕ್ತಳಾದ ॥ 112 ॥ ಅದಂತಾ = ಹಲ್ಲುಗಳಿಲ್ಲದ ಬೊಕ್ಕಬಾಯಿಯುಳ್ಳ, ಶುಷ್ಕವದನಾ = ಒಣಗಿದ ಮುಖವುಳ್ಳ, ಸಾ = ಆ, ಬಾಲಾ = ಸ್ತ್ರೀಯಾದ, ಧರ್ಮದೇವತಾ = ಧರ್ಮದೇವತೆಯು, ನಾಭಿಸಂಭೂತಂ = ನಾಭಿಕಮಲದಿಂದ ಜನಿಸಿದ, ಬ್ರಹ್ಮಾಣಂ = ಚತುರ್ಮುಖ ಬ್ರಹ್ಮನನ್ನು, ಸಪ್ತಮಾಸಾತ್ಮಕಂ = ಏಳು ತಿಂಗಳ ವಯಸ್ಸಿನ, ಶಿಶುಂ (ಕೃತ್ವಾ) = ಮಗುವನ್ನಾಗಿ ಮಾಡಿಕೊಂಡು, ॥ 113 ॥ ಕೃಶಾಂಗಂ = ಒಣಕಲುದೇಹವುಳ್ಳ, ದೀರ್ಘಬಾಹುಕಂ = ಉದ್ದ ತೋಳುಳ್ಳ, ರುದಂತಂ = ಅಳುತ್ತಲಿರುವ, ಶಿಶುಂ = ಕೂಸನ್ನು, ಚೀರವಸ್ತ್ರೇಣ = ನಾರುಬಟ್ಟೆಯಲ್ಲಿ(ನಾರು ಬಟ್ಟೆಯಿಂದ), ಬಧ್ವಾ = ಕಟ್ಟಿಕೊಂಡವಳಾಗಿ, ಜಗದೀಶ್ವರೀ = ಜಗತ್ತಿಗೆ ನಿಯಾಮಕಳಾದ ಆ ಕೊರವಂಜಿಯು, ॥ 114 ॥ ನೃತ್ಯಂತೀ = ನರ್ತನಮಾಡುತ್ತಾ, ಕರೇ = ಕೈಯಲ್ಲಿ, ಯಷ್ಟಿಂ = ಕೋಲನ್ನೂ ಸಹ, ಧೃತ್ವಾ = ಹಿಡಿದುಕೊಂಡವಳಾಗಿ, ಸಾ ಬಾಲಾ ಧರ್ಮದೇವತಾ = ಆ ಹೆಣ್ಣು ರೂಪದ ಧರ್ಮದೇವತೆಯು, ಆಗಾತ್ = ಬರುವವಳಾದಳು. ನಾರದಾಬ್ಜವಂದಿತಾ = ಕಮಲದಲ್ಲಿ ಜನಿಸಿದ ಬ್ರಹ್ಮನಿಂದ ಜನಿಸಿದ ನಾರದನಿಂದ ನಮಸ್ಕೃತಳಾದ, ಅಥವಾ–ನಾರದ = ನಾರದನಿಂದಲೂ, ಅಬ್ಜ = ಬ್ರಹ್ಮನಿಂದಲೂ, ವಂದಿತಾ = ನಮಸ್ಕೃತಳಾದ ಆ ಕೊರವಂಜಿಯು ॥ 115 ॥ ನಾರಾಯಣಪುರಂ (ಪ್ರತಿ) = ನಾರಾಯಣಪುರವನ್ನು (ಪುರಕ್ಕೆ),

ಪ್ರಾಪ್ತಾ = ಬಂದು ಸೇರಿದವಳಾದಳು(ಬಂದಳು). ಪುರೀಂ = ನಾರಾಯಣಪುರವನ್ನು ಕುರಿತು, ಸಮಾಗತ್ಯ ಚ = ಬಂದು ಸೇರಿದವಳಾಗಿ, ಚ = ಮತ್ತು, ಗರ್ಜಂತೀ = ಕೂಗುತ್ತಾ, ಸುತಾನ್ = ಮಕ್ಕಳನ್ನೂ, ಪತೀನ್ = ಗಂಡಂದಿರನ್ನೂ, ಬಂಧುಗಣಾನ್ = ಬಾಂಧವ ಸಮೂಹವನ್ನೂ, ದದಾಮಿ = ಕೊಡುತ್ತೇನೆ (ಪಾ- ಸುತಾನ್ಪತೀನ್ ಬಂಧುಗಣಾನ್ ವದಾಮಿ = ಮಕ್ಕಳು, ಗಂಡಂದಿರು ಮತ್ತು ಬಂಧು ಜನರನ್ನು ಕುರಿತು ಭವಿಷ್ಯವನ್ನು ಹೇಳುತ್ತೇನೆ - ಎಂದು ಭಾವ). ತದ್ಗದಿತಂ = ಕೊರವಂಜಿಯಿಂದ ಹೇಳಲ್ಪಟ್ಟ, ವಚಃ = ಮಾತನ್ನು, ಶ್ರುತ್ವಾ = ಕೇಳಿ, ಪುರಸ್ತ್ರೀಯಃ = ಆ ಪಟ್ಟಣದ ಹೆಂಗಸರು, ತದಾ = ಆವಾಗ, ತಾಂ = ಆ, ನೃಪವಲ್ಲಭಾಂ (ಪ್ರತಿ) = ರಾಜನ ಮಡದಿಯಾದ ಧರಣೀದೇವಿಯನ್ನು ಕುರಿತು, ಊಚುಃ = ಹೇಳುವವರಾದರು ॥ 110-116 ॥

*ಗ್ರಾಮಿಕಾ ಊಚುಃ -*

**ಧರ್ಮದೇವೀ ಸಮಾಯಾತಾ ನರನಾರಾಯಣಾಶ್ರಮಾತ್ ।**
**ವೃದ್ಧಾ ಸಾ ವರ್ತತೇ ಹ್ಯೇಷಾ ಮಿತಭಾಷೀವ ದೃಶ್ಯತೇ ॥ 117 ॥**

**ಮನೋಗತಂ ವದಾಮೀತಿ ವದತಿ ಸ್ಮ ಪುನಃ ಪುನಃ ।**
**ತಮಾನಯ ಮಹಾಭಾಗೇ ಯಾ ಬಾಲಾ ಧರ್ಮದೇವತಾ ॥ 118 ॥**

**ತಾಭಿಸ್ಸಮಾಭಾಷಿತ ಚಿತ್ತವೃತ್ತಿಃ ಉವಾಚ ವಾಕ್ಯಂ ಸ್ವಸಖೀಗಣೇಭ್ಯಃ ।**
**ತಾಮಾಹ್ವಯತ್ತತ್ರ ಸಖೀಭಿರಾದರಾತ್ ಸಂಪ್ರಾಪ್ತಭಾಗ್ಯಾಹಮಿತಿ ಸ್ಮರಂತೀ ॥ 119 ॥**

**ಆಜ್ಞಪ್ತಾ ಧರಣೀದೇವ್ಯಾ ಆಗತಾಸ್ತಾ ವರಾಂಗನಾಃ ।**
**ಊಚುಸ್ತಾಮಗ್ರಗಾಸ್ಸರ್ವಾ ತಾಂ ಬಾಲಾಂ ಧರ್ಮದೇವತಾಮ್ ।**
**ಯಾಹಿ (ಏಹಿ) ಮಂಗಲದೇ ದೇವಿ ರಾಜಭಾರ್ಯಾಂತಿಕಂ ತ್ವರಾತ್ ॥ 120 ॥**

**ಸಾ ಶ್ರುತ್ವಾ ವಚನಂ ತಾಸಾಂ ಮಂದಮಾಹಮನಸ್ವಿನೀ ।**

*ಧರ್ಮದೇವ್ಯುವಾಚ -*

**ಅಹಂ ದರಿದ್ರಾ ಕುಟಿಲಾ ಸಾ ಬಾಲಾ ಭಾಗ್ಯಸಂಯುತಾ ॥ 121 ॥**

**ಅಹ್ವಾನಂ ಚ ವಿನೋದಾರ್ಥಂ ಹಾಸ್ಯಾರ್ಥಂ ಹಸಿತಾನನಾಃ ।**
**ಮದ್ವಸ್ತ್ರಂ ಮತ್ಕುಸ್ತಂ ಪಶ್ಯ ಮದಾಭರಣ ಮಂಡಲಮ್ ॥ 122 ॥**

**ನವಧಾನ್ಯಸಮಾಕೀರ್ಣಂ ಗುಂಜಾಮಣಿ ವಿಭೂಷಿತಮ್ ।**
**ಅನ್ನಹೀನಂ ಶಿಶುಂ ಮಾಂ ಚ ದೃಷ್ಟ್ವಾ ಹಾಸ್ಯಾರ್ಥಮೇವ ಚ ॥ 123 ॥**

**ನಾಗಮಿಷ್ಯೇ ವಿಶಾಲಾಕ್ಷ್ಯಃ ಕಿಂಕಾರ್ಯಂ ರಾಜಮಂದಿರೇ ।**
**ಧರ್ಮದೇವೀ ವಚಃ ಶ್ರುತ್ವಾ ಜಗ್ಮುಸ್ತಾ ಧರಣೀಂ ಪ್ರತಿ ॥ 124 ॥**

ತಥೋಕ್ತಂ* ಚಾವದದ್ಬಾಲಾಃ ಧರಣೀ ಸಾಪಿ ತಾಂ ಯಯೌ ।

*ಧರಣ್ಯುವಾಚ-*

+ಯಾಹಿ ಭದ್ರೇ ಮಹಾಭಾಗೇ ಸಾಕ್ಷಾತ್ತ್ವಂ ಧರ್ಮದೇವತಾ ॥ 125 ॥

ದೈವಯೋಗಾದಾಗತಾಽಸಿ ಮಮ ಕಲ್ಯಾಣ ವರ್ಧಿನಿ! ।

ಭಾಷಿತಾ ರಾಜಪತ್ನ್ಯಾ ಸಾ ಸತ್ಯಮಾಹ ಧರಾಂ ಪ್ರತಿ

*ಧರ್ಮದೇವ್ಯುವಾಚ-*

ಮಯಾ ಹಿ ಗದಿತಂ ವಾಕ್ಯಂ ಅಸತ್ಯಂ ಚೇನ್ಮನಸ್ವಿನಿ ॥ 126 ॥

ಪುರಾನ್ನಿಷ್ಕಾಸ್ಯ ಮಾಂ ದೇವಿ ಛೇದನಂ ಕರಯೋಃ ಕುರು ।

ಕಠಿಣಂ ಮಮ ವಾಕ್ಯಂ ತು ಹ್ಯಸತ್ಯೇ ಹಸ್ತಛೇದನಮ್ ॥ 127 ॥

ನರನಾರಾಯಣಃ ಶ್ರೀಮಾನ್ ಭರ್ತಾ ಮೇ ರಾಜವಲ್ಲಭೆ ।

ತದ್ವೀರ್ಯಜಾತಪುತ್ರಸ್ತು ಪ್ರಜಾಪತಿಮಿಮಂ ವಿದುಃ ॥ 128 ॥

ತೇನಾಜ್ಞಪ್ತಾತಿವೇಗೇನ ಸಂಪ್ರಾಪ್ತಾ ತವಮಂದಿರಮ್ ।

ಭೂತಭವ್ಯಭವಿಷ್ಯಂ ಚ ವದಾಮಿ ಜಗದೀಶ್ವರಿ ॥ 129 ॥

ಇತ್ಯುಕ್ತಾ ಧರ್ಮದೇವ್ಯಾ ಸಾ ರಾಜಪತ್ನೀ ಪತಿವ್ರತಾ ।

ಸಾಂತ್ವಯಿತ್ವಾ ಮಹಾರಾಜ್ಞೀ ಧರಣೀ ಧರ್ಮದೇವತಾ ॥ 130 ॥

ಸಂಪ್ರಾಪ್ಯ ಭವನಂ ರಾಜ್ಞೀ ಧರ್ಮದೇವ್ಯಾ ಧರಾಸತೀ ।

ರತ್ನಾಸನೇ ಸಮಾರೋಪ್ಯ ತಾಂ ಬಾಲಾಂ ಧರ್ಮದೇವತಾಮ್ ॥ 131 ॥

ಸುಸ್ಥಿರಾ ವಚನಂ ಪ್ರಾಹ ಮಂದಂ ಮಂದಂ ಮುದಾನ್ವಿತಾ ।

*ಧರ್ಮದೇವ್ಯುವಾಚ -*

ಮಜ್ಜನಂ ಕುರು ಕಲ್ಯಾಣಿ ಶುಭ್ರವಸ್ತ್ರಾ ಸಕಂಚುಕಾ । ॥ 132 ॥

ಗುರುದೇವ ನಮಸ್ಕಾರಂ ಕುರು ದೇವಿ ಹರಿಪ್ರಿಯಮ್ ।

ಏವಮುಕ್ತಾಥ ಕಲ್ಯಾಣೀ ತಥಾ ಚಕ್ರೇ ಯಥೋದಿತಾ ॥ 133 ॥

ತಸ್ಯಾಶ್ಚಾಭಿಮುಖೀಭೂತ್ವಾ ಪಶ್ಚಾದ್ವಾಕ್ಯಮುವಾಚ ಸಾ ।

---

* ಪಾ: ತಯೋಕ್ತಂ. + ಪಾ: ಏಹಿ

*ಧರಣ್ಯುವಾಚ -*

ಕಿಂಕಾರ್ಯಂ ವದ ಭದ್ರೇಽಹಂ ಕರೋಮಿ ತವ ಶಾಸನಾತ್ ॥ 134 ॥

*ಪುಲಿಂದೋವಾಚ -*

ವಾಯನಂ ದೇಹಿ ಕಲ್ಯಾಣಿ ದೇವಾನಾಂ ಮಮ ಪೂರ್ವಿಣಾಮ್ ।
ಸ್ವರ್ಣಶೂರ್ಪಂ ಸಮಾಪೂರ್ಯ ಮುಕ್ತಾತಂಡುಲ ಪೂರ್ವಕೈಃ ॥ 135 ॥

ನಿಕ್ಷಿಪ್ಯ ಬಹುಭಕ್ತೈವ ಧರ್ಮದೇವಿಂ ವಚೋಽಬ್ರವೀತ್ ।
ಸತ್ಯಂ ವದ ಮಹಾಪ್ರಾಜ್ಞೇ ಮಮ ದುಃಖಂ ಪ್ರಣೋದಯ ।
ಧರಣೀವಾಕ್ಯಮಾಕರ್ಣ್ಯ ಧರ್ಮದೇವೀ ವಚೋಽಬ್ರವೀತ್ ॥ 136 ॥

*ಧರ್ಮದೇವ್ಯುವಾಚ -*

ಸತ್ಯಂ ವದಾಮಿ ಧರ್ಮಜ್ಞೇ ಶಿಶೋರನ್ನಂ ಪ್ರಯಚ್ಛ ಮೇ ।
ಅಹಃಕೃತಂ ರಾತ್ರಿಕೃತಂ ಸುಪಕ್ವಂ ರಸಸಂಯುತಮ್ ॥ 137 ॥

ಶ್ರುತ್ವಾ ತದ್ವಚನಂ ರಮ್ಯಂ ಪುತ್ರೇಣಾನೀಯ ಭಾಮಿನೀ ।
ಕ್ಷೀರಾನ್ನಂ ಸ್ವರ್ಣಪಾತ್ರಸ್ಥಮರ್ಭಕಸ್ಯ ದದೌ ನೃಪ ॥ 138 ॥

ತಂ ದೃಷ್ಟ್ವಾ ಸ್ವರ್ಣಪಾತ್ರಸ್ಥಂ ಮಾನುಷಾನ್ನಂ ನಭುಕ್ತವಾನ್ ।
ರುರೋದ ಸ ಶಿಶುಸ್ತಸ್ಯಾಃ ಧರ್ಮದೇವ್ಯಾಶ್ಚ ಭೂಮಿಪ ॥ 139 ॥

ರುದಂತಮಾತ್ಮಜಂ ದೃಷ್ಟ್ವಾ ವಿನಿಂದ್ಯ ಪ್ರತ್ಯತಾಡ್ಯ ಚ ।
ದರಿದ್ರೋಽಸಿ ದುರಾಚಾರ ಕಂದಮೂಲಫಲಾಶನಃ ॥ 140 ॥

ಕಥಂ ನು ಭೋಕ್ಷ್ಯಸೇ ಮೃಷ್ಟಂ ಕ್ಷೀರಾನ್ನಂ ರಾಜನಿರ್ಮಿತಮ್ ।
ಕದಾಪಿ ರೋದನಂ ಮಾತಃ ಕಿಂ ಕರಿಷ್ಯಾಮಿ ಭೂಮಿಪೇ ॥ 141 ॥

ಇತಿ ತಂ ಭರ್ತ್ಸಯಿತ್ವಾಥ ಸ್ವಯಂಭುಂಕ್ತ್ವಾ ನ್ನಮುತ್ತಮಮ್ ।
ಮಮೋದರಗತಂ ಚಾನ್ನಂ ಪುತ್ರಸ್ಯ ಹಿತಕಾರಣಮ್ ॥ 142 ॥

ಇತ್ಯುಕ್ತ್ವಾ ಭೋಜನಂ ಚಕ್ರೇ ಧರ್ಮದೇವೀ ನೃಪೋತ್ತಮ ।
ಕ್ಷೀರಾನ್ನಂ ಭೋಜನಂ ಕೃತ್ವಾ ಸ್ವಸ್ಥಚಿತ್ತಾಭವತ್ತದಾ ॥ 143 ॥

ಗ್ರಾಮಿಕಾಊಚುಃ = ಆ ಗ್ರಾಮದ ಹೆಂಗಳೆಯರು ನುಡಿದರು – ನರನಾರಾಯಣಾಶ್ರಮಾತ್ = ಬದರಿಯಲ್ಲಿರುವ ನರನಾರಾಯಣರ ಆಶ್ರಮದಿಂದ, ಧರ್ಮದೇವಿ = ಧರ್ಮದೇವಿ ಎಂಬ ಕೊರವಂಜಿಯು (ಕಣಿ ಹೇಳುವವಳು),

ಸಮಾಯಾತಾ = ಬಂದಿರುವಳು, ಸಾ = ಅವಳು, ವೃದ್ಧಾ = ವೃದ್ಧಳು (ಜ್ಞಾನವೃದ್ಧಳು), ವರ್ತತೇ = ಆಗಿದ್ದಾಳೆ, ಏಷಾ = ಈ ಧರ್ಮದೇವಿಯು, ಮಿತಭಾಷೀವ = ಸ್ವಲ್ಪವೇ ಮಾತನಾಡುವವಳಂತೆ (ಹೆಚ್ಚು ಮಾತನಾಡುವವಳಲ್ಲದವಳಂತೆ), ದೃಶ್ಯತೇ = ಕಾಣುವುದು ॥ 117 ॥ ಮನೋಗತಂ = ಮನಸ್ಸಿನಲ್ಲಿರುವುದನ್ನು, ವದಾಮೀತಿ = ಹೇಳುವೆನೆಂದು, ಪುನಃಪುನಃ = ಮತ್ತೆ ಮತ್ತೆ (ಬಾರಿಬಾರಿಗೂ), ವದತಿಸ್ಮ = ಹೇಳುತ್ತಿರುವಳು, ಮಹಾಭಾಗೇ = ಮಹನೀಯಳಾದ ಧರಣೀದೇವಿಯೇ! ಯಾ ಬಾಲಾ = ಯಾವ ಹೆಂಗಸು, ಧರ್ಮದೇವತಾ = ಧರ್ಮದೇವಿಯೆಂಬುವಳೋ, ತಾಂ = ಅವಳನ್ನು, ಆನಯ = ಕರೆದು ತರಿಸುವವಳಾಗು(ಕರೆಸು) ॥ 118 ॥ ತಾಭಿಃ = ಆ ಗ್ರಾಮೀಣ ಸ್ತ್ರೀಯರಿಂದ, ಸಮಾಭಾಷಿತಚಿತ್ತವೃತ್ತಿಃ = ಮಾತನಾಡಲ್ಪಟ್ಟ ಮನೋವೃತ್ತಿಯುಳ್ಳ ಧರಣೀದೇವಿಯು, ಸ್ವಸಖೀಗಣೇಭ್ಯಃ = ತನ್ನ ಸಖಿಯರ ಗುಂಪಿನ ಜನರಿಗೆ, ವಾಕ್ಯಂ = ಮಾತನ್ನು, ಉವಾಚ = ಹೇಳಿದಳು. ಅಹಂ = ನಾನು, ಸಂಪ್ರಾಪ್ತಭಾಗ್ಯಾ = ಬಂದೊದಗಿರುವ ಭಾಗ್ಯವುಳ್ಳವಳು, ಇತಿ = ಹೀಗೆ, ಸ್ಮರಂತಿ = ನೆನೆಯುತ್ತಾ (ಆಲೋಚಿಸುತ್ತಾ) ॥ 119 ॥ ಆದರಾತ್ = ಆದರದಿಂದ, ತತ್ರ = ಅಲ್ಲಿಗೆ (ಅರಮನೆಗೆ), ತಾಂ = ಆ ಕೊರವಂಜಿಯನ್ನು, ಸಖೀಭಿಃ = ಸಖಿಯರ ಮೂಲಕ, ಆಹ್ವಯತ್ = ಬರುವಂತೆ ಆಹ್ವಾನಿಸಿದಳು (ಬರುವಂತೆ ಹೇಳಿಕಳುಹಿಸಿದಳು). ಧರಣೀ ದೇವ್ಯಾ = ಧರಣೀದೇವಿಯಿಂದ, ಆಜ್ಞಪ್ತಾಃ = ಆಜ್ಞಾಪಿಸಲ್ಪಟ್ಟವರಾಗಿ, ಆಗತಾಃ = ಬಂದ, ತಾಃ = ಆ, ವರಾಂಗನಾಃ = ಶ್ರೇಷ್ಠವನಿತೆಯರು, ಅಗ್ರಗಾಃ = ಮುಂದೆ ಬಂದವರಾಗಿ, ಸರ್ವಾಃ = ಅವರೆಲ್ಲರೂ, ತಾಂ ಬಾಲಾಂ = ಆ ಹೆಂಗಸಾದ, ಧರ್ಮ ದೇವತಾಂ (ಪ್ರತಿ) = ಧರ್ಮದೇವಿಯನ್ನು ಕುರಿತು, ಊಚುಃ = ಹೇಳಿದರು, ಮಂಗಲದೇ = ಮಂಗಳಪ್ರದಳೇ, (ಶುಭವನ್ನುಂಟುಮಾಡುವವಳೇ !) ದೇವಿ = ಎಲೈ ಧರ್ಮ ದೇವತೆಯೇ, ತ್ವರಾತ್ = ಬೇಗನೆ, ರಾಜಭಾರ್ಯಾಂತಿಕಂ = ರಾಜನ ಮಡದಿಯ ಬಳಿಗೆ, ಯಾಹಿ = ಹೋಗು. (ಪಾ- ಏಹಿ = ಬರುವವಳಾಗು) ॥ 120 ॥ ತಾಸಾಂ = ಆ ಹೆಂಗಸರ, ವಚನಂ = ಮಾತನ್ನು, ಶ್ರುತ್ವಾ = ಕೇಳಿ, ಮನಸ್ವಿನೀ = ಉತ್ತಮ ಮನಸ್ಸುಳ್ಳ (ಪತಿವ್ರತೆಯಾದ), ಸಾ = ಆ ಧರ್ಮದೇವಿಯು, ಮಂದಂ = ಮೆಲ್ಲನೆ, ವಚನಮಾಹ = ನುಡಿದಳು. ಧರ್ಮದೇವ್ಯುವಾಚ = ಧರ್ಮದೇವಿಯು ಹೇಳಹತ್ತಿದಳು, ಅಹಂ = ನಾನು, ದರಿದ್ರಾ = ಬಡವಳು, ಕುಟಿಲಾ = ವಕ್ರವಾಗಿರುವವಳು (ಸೊಟ್ಟಗಿರುವವಳು), ಸಾ ಬಾಲಾ = ಆ ಹೆಣ್ಣುಮಗಳಾದರೋ, ಭಾಗ್ಯಸಂಯುತಾ = ಸಂಪತ್ತುಳ್ಳವಳು (ಸಿರಿವಂತಳು), ॥ 121 ॥ ಹಸಿತಾನನಾಃ = ನಗಮುಖದ ಸ್ತ್ರೀಯರೇ, ವಿನೋದಾರ್ಥಂ = (ನನ್ನನ್ನು ಕರೆದಿರುವುದು) ವಿನೋದಕ್ಕಾಗಿ, ಚ = ಮತ್ತು, ಹಾಸ್ಯಾರ್ಥಂ = ಅಪಹಾಸ್ಯಮಾಡಲಿಕ್ಕಾಗಿ, ಆಹ್ವಾನಂ = ಕರೆದಿರುವಳು, ಮದ್ವಸ್ತ್ರಂ = ನನ್ನ ಹರಿದ ಬಟ್ಟೆಯನ್ನು, ಮತ್ಸುತಂ = ನನ್ನ ಮಗನನ್ನು, ಪಶ್ಯ = ನೋಡು, ಮದಾಭರಣಮಂಡಲಂ = ನಾನು ಧರಿಸಿರುವ ಗುಲಗಂಜಿ, ಕರಿಮಣಿ, ಶಂಖಗಳಿಂದ ಕೂಡಿದ ಆಭರಣ ಸಮೂಹವನ್ನು, ಪಶ್ಯ = ನೋಡು. ॥ 122 ॥ ನವಧಾನ್ಯ ಸಮಾಕೀರ್ಣಂ = ಒಂಬತ್ತು ಬಗೆಯ ಧಾನ್ಯಗಳಿಂದ ಬೆರೆತಿರುವ, ಗುಂಜಾಮಣಿ ವಿಭೂಷಿತಂ = ಗುಲಗುಂಜಿಯಿಂದ ಭೂಷಿಸಲ್ಪಟ್ಟಿರುವ, ಅನ್ನಹೀನಂ = ಆಹಾರವಿಲ್ಲದ, ಶಿಶುಂ = ಮಗುವನ್ನು, ಮಾಂ ಚ = ನನ್ನನ್ನೂ, ದೃಷ್ಟ್ವಾ = ನೋಡಿ, ಹಾಸ್ಯಾರ್ಥಮೇವಚ =ಹಾಸ್ಯ(ನಗೆಚಾಟಿಕೆ) ಮಾಡಲಿಕ್ಕಾಗಿಯೇ, (ಆಹ್ವಾನಂ = ಕರೆದಿರುವಳು), ॥ 123 ॥ ವಿಶಾಲಾಕ್ಷ್ಯಃ = ಅರಳಿದ ಕಣ್ಣುಗಳುಳ್ಳವರೇ, ನಾಗಮಿಷ್ಯೇ = ನಾನು ಬರುವುದಿಲ್ಲ, ರಾಜಮಂದಿರೇ = ಅರಮನೆಯಲ್ಲಿ (ರಾಜಭವನದಲ್ಲಿ) ಕಿಂಕಾರ್ಯಂ? = ನನಗೇನು ಕೆಲಸವಿದೆ?

ಧರ್ಮದೇವೀವಚಃ = ಧರ್ಮದೇವಿಯ ನುಡಿಯನ್ನು, ಶ್ರುತ್ವಾ = ಆಲಿಸಿ, ತಾಃ = ಆ ಸ್ತ್ರೀಯರು, ಧರಣೀಂಪ್ರತಿ = ಧರಣೀದೇವಿಯನ್ನುದ್ದೇಶಿಸಿ, ಜಗ್ಮುಃ = ಹೋದರು. ತಥೋಕ್ತಂ = ಹಾಗೆ ಹೇಳಿದ ಧರ್ಮದೇವಿಯ ಮಾತನ್ನು, (ಪಾ-ತಯೋಕ್ತಂ = ಆ ಕೊರವಂಜಿಯು ಹೇಳಿದ್ದನ್ನು), ಬಾಲಾಃ = ಆ ಸಖಿಯರು, ಅವದನ್ = ರಾಣಿಯಲ್ಲಿ ವಿಜ್ಞಾಪಿಸಿದರು (ತಿಳಿಸಿದರು), ಸಾ = ಆ ಧರಣೀ, ಅಪಿ = ಧರಣೀ ದೇವಿಯೇ (ಸ್ವತಃ), ತಾಂ (ಪ್ರತಿ) = ಧರ್ಮ

ದೇವತೆಯನ್ನು ಕುರಿತು, ಯಯೌ = ಹೋದಳು. ಮತ್ತು ಧರಣ್ಯುವಾಚ = ಧರಣೀದೇವಿಯು ಮಾತನಾಡಿದಳು- ಮಹಾಭಾಗೇ = ಮಹನೀಯಳೇ, ಏಹಿ = (ನಮ್ಮ ಮನೆಗೆ) ಬರುವವಳಾಗು. ತ್ವಂ = ನೀನು, ಸಾಕ್ಷಾತ್ = ಪ್ರತ್ಯಕ್ಷಳಾದ, ಧರ್ಮದೇವತಾ = ಧರ್ಮದೇವತೆಯು ॥ 125 ॥ ಮಮ = ನನಗೆ, ಕಲ್ಯಾಣವರ್ಧಿನೀ = ಮಂಗಳಾಭ್ಯುದಯ ಮಾಡುವವಳು, ದೈವಯೋಗಾತ್ = ದೇವಯೋಗದಿಂದ (ಸಂಕಲ್ಪದಿಂದ), ಆಗತಾಸಿ = ಬಂದಿದ್ದೀಯೇ (ಎಂದು ಹೇಳಿದಳು), ರಾಜಪತ್ನ್ಯಾ = ಧರಣಿಯಿಂದ, ಭಾಷಿತಾ = ಹೀಗೆ ಸಂಭಾಷಿಸಲ್ಪಟ್ಟು, ಸಾ = ಧರ್ಮದೇವಿಯು, ಧರಾಂಪ್ರತಿ = ಧರಣೀದೇವಿಯನ್ನುದ್ದೇಶಿಸಿ, ಸತ್ಯಂ = ದಿಟವಾಗಿ, ಆಹ = ಹೇಳಿದಳು. ಧರ್ಮದೇವ್ಯುವಾಚ = ಧರ್ಮದೇವಿಯು ಹೇಳುತ್ತಲಿದ್ದಾಳೆ - ಮನಸ್ವಿನಿ = ಎಲೈ ಸಾಧ್ವಿಯೇ ॥ 126 ॥ ಮಯಾ = ನನ್ನಿಂದ, ಗದಿತಂ = ಹೇಳಲ್ಪಟ್ಟ, ವಾಕ್ಯಂ = ವಚನವು, ಅಸತ್ಯಂಚೇತ್ = ಸುಳ್ಳಾದ ಪಕ್ಷದಲ್ಲಿ, ದೇವಿ = ಧರಣಿಯೇ, ಮಾಂ = ನನ್ನನ್ನು, ಪುರಾತ್ = ನಾರಾಯಣಪುರದಿಂದ (ಪುರದಶೆಯಿಂದ), ನಿಷ್ಕಾಸ್ಯ = ಹೊರಗೆ ಹಾಕಿಸಿ, ಕರಯೋಃ = ನನ್ನೆರಡು ಕೈಗಳ, ಛೇದನಂ ಕುರು = ಕತ್ತರಿಸಿ ಹಾಕು (ಕತ್ತರಿಸಿ ಹಾಕಿಸು), ಮಮ = ನನ್ನ, ವಾಕ್ಯಂತು = ಮಾತಾದರೋ, ಕಠಿಣಂ = ಕಠಿಣವಾಗಿದೆ. ಅಸತ್ಯೇ = ಅದು ಸುಳ್ಳಾದಲ್ಲಿ, ಹಸ್ತಛೇದನಂ = ಕೈ ಕಡಿಸಿಹಾಕು. ಹಿ = ಪ್ರಸಿದ್ಧವು ॥ 127 ॥ ರಾಜವಲ್ಲಭೆ = ರಾಜಕಾಂತೆ! ಶ್ರೀಮಾನ್ = ಕಾಂತಿಸಂಪದ್ಭರಿತನೂ, ವೇದಪ್ರತಿಪಾದ್ಯಮಹಿಮನೂ ಆದ, ನರನಾರಾಯಣಃ = ನರನಾರಾಯಣನು, ಮೇ = ನನ್ನ, ಭರ್ತಾ = ಪತಿಯು, ತದ್ವೀರ್ಯಜಾತಪುತ್ರಸ್ತು = ಅವನ ವೀರ್ಯದಿಂದ ಹುಟ್ಟಿದ ಮಗನಾದ, ಇಮಂ = ಇವನನ್ನು, ಪ್ರಜಾಪತಿಂ = ಪ್ರಜಾಪತಿಯೆಂದು (ಬ್ರಹ್ಮನೆಂದು), ವಿದುಃ = ಜ್ಞಾನಿಗಳು ತಿಳಿಯುವರು ॥ 128 ॥ ತೇನ = ನರನಾರಾಯಣನಿಂದ, ಆಜ್ಞಪ್ತಾ = ಆಜ್ಞಾಪಿಸಲ್ಪಟ್ಟವಳಾಗಿ, ವೇಗೇನ = ಶೀಘ್ರವಾಗಿ, ತವ = ನಿನ್ನ, ಮಂದಿರಂ ಪ್ರತಿ = ಮನೆಯನ್ನು ಕುರಿತು, (ಅಹಂ = ನಾನು), ಪ್ರಾಪ್ತಾ = ಬಂದಿರುವೆನು, ಜಗದೀಶ್ವರಿ = ಭೂಮಿಗೆ ಒಡತಿಯಾದ ರಾಣಿ!, ಭೂತಭವ್ಯಭವಿಷ್ಯಂಚ = ಹಿಂದಾದುದು, ಇಂದಾಗುತ್ತಿರುವುದು ಮತ್ತು ಮುಂದಾಗಲಿರುವುದನ್ನೂ ಸಹ, ವದಾಮಿ = ಹೇಳುತ್ತೇನೆ ॥ 126 ॥ ಧರ್ಮದೇವ್ಯಾ = ಧರ್ಮದೇವಿಯಿಂದ, ಇತಿ = ಹೀಗೆ, ಉಕ್ತಾ = ಹೇಳಿಸಿಕೊಂಡಂಥ; ಸಾ = ಆ, ಪತಿವ್ರತಾ = ಸಾಧ್ವಿಯಾದ, ರಾಜಪತ್ನೀ = ರಾಜನ ಮಡದಿಯು, ಧರ್ಮದೇವತಾಂ = ಧರ್ಮದೇವಿಯಾದ, ಬಾಲಾಂ = ಕೊರವಂಜಿಯನ್ನು, ಸಾಂತ್ವಯಿತ್ವಾ = ಸಮಾಧಾನಪಡಿಸಿ ॥ 130 ॥ ಧರ್ಮದೇವ್ಯಾ = ಧರ್ಮದೇವಿಯೊಡನೆ, ರಾಜ್ಞಃ = ರಾಜನ, ಭವನಂ = ಅರಮನೆಗೆ, ಸಂಪ್ರಾಪ್ಯ = ಬಂದುಸೇರಿ, ಧರಾಸತೀ = ಧರಣೀಯು, ತಾಂ ಬಾಲಾಂ = ಆ ಹೆಣ್ಣುಮಗಳಾದ, ಧರ್ಮದೇವತಾಂ = ಧರ್ಮದೇವೀ ಎಂಬ ಹೆಸರಿನ ಕೊರವಂಜಿಯನ್ನು, ರತ್ನಾಸನೇ = ರತ್ನಪೀಠದಲ್ಲಿ, ಸಮಾರೋಪ್ಯ = ಏರಿಸಿ (ಕೂಡಿಸಿದಳು) ॥ 131 ॥ ಸುಸ್ಥಿರಾ = ಪೀಠದಲ್ಲಿ ದೃಢವಾಗಿ ಕುಳಿತು, ಮುದಾನ್ವಿತಾ = ಸಂತೋಷಯುಕ್ತಳಾದ ಕೊರವಂಜಿಯು, ಮಂದಂ ಮಂದಂ = ಮೆಲ್ಲಮೆಲ್ಲನೆ, ವಚನಂ = ಮಾತನ್ನು, ಪ್ರಾಹ = ಹೇಳಿದಳು.

ಧರ್ಮದೇವ್ಯುವಾಚ = ಧರ್ಮದೇವಿಯು ಮಾತನಾಡುತ್ತಿದ್ದಾಳೆ - ಕಲ್ಯಾಣಿ = ಮಂಗಳಕರಳೇ, ಮಜ್ಜನಂಕುರು = ಮಂಗಳಸ್ನಾನ ಮಾಡು, ಸಕಂಚುಕಾ = ಕುಪ್ಪಸ ಸಹಿತವಾಗಿ, ಶುಭ್ರವಸ್ತ್ರಾ = ಶುಭ್ರವಾದ ಸೀರೆಯನ್ನು ಉಟ್ಟು ॥ 132 ॥ ದೇವಿ = ಎಲೈ ಧರಣೀ!, ಹರಿಪ್ರಿಯಂ = ವಿಷ್ಣುವಿಗೆ ಪ್ರಿಯವಾದ, ಗುರುದೇವ ನಮಸ್ಕಾರಂ = ಗುರುಗಳು ಹಾಗೂ ದೇವರಿಗೆ ಪ್ರಣಾಮವನ್ನು, ಕುರು = ಮಾಡುವವಳಾಗು, ಏವಮುಕ್ತಾ = ಇಂತು ಹೇಳಿಸಿಕೊಂಡಂಥ, ಕಲ್ಯಾಣಿ = ಶುಭಕರಳಾದ ಧರಣಿಯು, ಯಥೋದಿತಾ = ಹೇಗೆ ಹೇಳಲ್ಪಟ್ಟಳೋ, ತಥಾ = ಹಾಗೆಯೇ, ಚಕ್ರೆ = ಮಾಡಿದಳು ॥ 133 ॥ ತಸ್ಯಾಶ್ಚ = ಕೊರವಂಜಿಯ, ಅಭಿಮುಖೀಭೂತ್ವಾ = ಅಭಿಮುಖ (ಎದುರಾಗಿ)ವಾಗಿ ಕುಳಿತು, ಪಶ್ಚಾತ್ = ತರುವಾಯ, ಸಾ = ಧರಣಿಯು, ವಾಕ್ಯಮುವಾಚ = ಮಾತನಾಡಿದಳು. ಧರಣ್ಯುವಾಚ =

ಧರಣಿಯು ಹೇಳಹತ್ತಿದಳು. ಭದ್ರೆ = ಮಂಗಳಕರಳೇ, (ಮಯಾ = ನನ್ನಿಂದ), (ಅಧ್ಯ) ಕಿಂ ಕಾರ್ಯಂ = ಈಗೇನು ಮಾಡಲ್ಪಡಬೇಕು? ವದ = ಹೇಳು, ತವ = ನಿನ್ನ, ಶಾಸನಾತ್ = ಹೇಳಿದಂತೆಯೇ, ಕರೋಮಿ = ಮಾಡುತ್ತೇನೆ ।। 134 ।। ಪುಲಿಂದೋವಾಚ = ಕೊರವಂಜಿಯು ಹೇಳುತ್ತಲಿದ್ದಾಳೆ, ಕಲ್ಯಾಣಿ = ಶುಭಕರಳೇ, ಮಮ = ನನ್ನ, ಪೂರ್ವಿಣಾಂ = ಪ್ರಾಚೀನರಾದ, ದೇವಾನಾಂ = ದೇವತೆಗಳಿಗೆ, ಮುಕ್ತಾತಂಡುಲೈಃ = ಮುತ್ತು, ಅಕ್ಕಿಗಳಿಂದ, ಸ್ವರ್ಣಶೂರ್ಪಂ = ಬಂಗಾರದ ಮರವನ್ನು, ಸಮಾಪೂರ್ಯ = ತುಂಬಿದವಳಾಗಿ ।। 135 ।। ವಾಯನಂ = ಬಾಗಿನವನ್ನು, ದೇಹಿ = ಕೊಡು, ಬಹುಭಕ್ತೈವ = ಅತಿಭಕ್ತಿಯಿಂದಲೇ, ನಿಕ್ಷಿಪ್ಯ = ಕೊರವಂಜಿಯು ಹೇಳಿದಂತೆ ಸುವರ್ಣ ಮರದಲ್ಲಿ ಮುತ್ತು, ಅಕ್ಕಿ ಮುಂತಾದವನ್ನು ತುಂಬಿ, ಧರ್ಮದೇವಿಯ ಮುಂದಿಟ್ಟು, ಧರ್ಮದೇವೀಂ (ಪ್ರತಿ) = ಧರ್ಮದೇವಿಯನ್ನುದ್ದೇಶಿಸಿ, ವಚೋಽಬ್ರವೀತ್ = ಮಾತನಾಡಿದಳು; ಮಹಾಪ್ರಾಜ್ಞೇ = ಬಹುಪ್ರಜ್ಞಾವಂತಳಾದ ದೇವಿಯೇ! ಸತ್ಯಂವದ = ಸತ್ಯವಾಗಿ ಹೇಳು, ಮಮ = ನನ್ನ, ದುಃಖಂ = ವ್ಯಥೆಯನ್ನು, ಪ್ರಣೋದಯ = ಪರಿಹರಿಸು, ಧರಿಣೀವಾಕ್ಯಂ = ಧರಣೀಯು ನುಡಿದ ವಚನವನ್ನು, ಆಕರ್ಣ್ಯ = ಕೇಳಿ, ಧರ್ಮದೇವಿ = ಧರ್ಮದೇವಿಯು, ವಚೋಽಬ್ರವೀತ್ = ಮಾತನಾಡಿದಳು ।। 136 ।। ಧರ್ಮದೇವ್ಯುವಾಚ = ಧರ್ಮದೇವಿಯು ಮಾತಾಡಲಾರಂಭಿಸಿದಳು, ಧರ್ಮಜ್ಞೆ = ಧರ್ಮವನ್ನು ತಿಳಿದಿರುವ ರಾಣಿ!, ಸತ್ಯಂವದಾಮಿ = ಸತ್ಯವನ್ನುರುಹುವೆನು. ಮೇ = ನನ್ನ, ಶಿಶೋಃ = ಮಗುವಿಗೆ, ಸುಪಕ್ವಂ = ಚೆನ್ನಾಗಿ ಬೆಂದಿರುವ, ರಸಯುತಂ = ರಸದಿಂದೊಡಗೂಡಿರುವ, ಅಹಃಕೃತಂ = ಬೆಳಿಗ್ಗೆ ತಯಾರಿಸಿದ್ದು, ವಾ = ಅಥವಾ, ರಾತ್ರಿಕೃತಂ = ಹಿಂದಿನ ರಾತ್ರಿಮಾಡಿದ್ದಾದರೂ ಸರಿ; ಅನ್ನಂ = ಅನ್ನವನ್ನು (ಆಹಾರವನ್ನು), ದೇಹಿ = ಕೊಡುವವಳಾಗು ।। 137 ।। ರಮ್ಯಂ = ಮನೋಹರವಾದ, ತದ್ವಚನಂ = ಅವಳ ಮಾತನ್ನು, ಶ್ರುತ್ವಾ = ಕೇಳಿ, ಭಾಮಿನೀ = ರಾಣಿಯು, ಪುತ್ರೇಣ = ಮಗನಿಂದ, ಆನೀಯ = ತರಿಸಿ, ಹೇ ನೃಪ = ಜನಕರಾಯನೇ, ಸ್ವರ್ಣಪಾತ್ರಸ್ಥಂ = ಬಂಗಾರದ ಪಾತ್ರೆಯಲ್ಲಿರುವ, ಕ್ಷೀರಾನ್ನಂ = ಹಾಲನ್ನವನ್ನು, ಅರ್ಭಕಸ್ಯ = ಮಗುವಿಗೆ, ದದೌ = ಕೊಟ್ಟಳು ।। 138 ।। ಸ್ವರ್ಣಪಾತ್ರಸ್ಥಂ = ಬಂಗಾರದ ಬಟ್ಟಲಿನಲ್ಲಿರುವ, ತಂ = ಆ, ಮಾನುಷಾನ್ನಂ = ಮನುಷ್ಯರು ತಯಾರಿಸಿದ ಅನ್ನವನ್ನು, ದೃಷ್ಟ್ವಾ = ನೋಡಿ, ನ ಭಕ್ತುವಾನ್ = ಊಟಮಾಡಲಿಲ್ಲ; ಭೂಮಿಪ = ಎಲೈ ಜನಕರಾಯನೇ, ತಸ್ಯಾಃ ಧರ್ಮದೇವ್ಯಾಃ = ಆ ಧರ್ಮದೇವಿಯ, ಸಃ ಶಿಶುಃ = ಆ ಮಗುವು, ರುರೋದ = ಅತ್ತಿತು ।। 139 ।। ರುದಂತಂ = ಅಳುತ್ತಲಿರುವ, ಆತ್ಮಜಂ = ಪುತ್ರನನ್ನು, ದೃಷ್ಟ್ವಾ = ನೋಡಿ, ವಿನಿಂದ್ಯ = ನಿಂದಿಸಿ, ಪ್ರತ್ಯತಾಡ್ಯ ಚ = ಹೊಡೆದವಳಾಗಿ, ದುರಾಚರ = ಕೆಟ್ಟನಡತೆಯುಳ್ಳವನೇ, ಕಂದಮೂಲಫಲಾಶನಃ = ಗೆಡ್ಡೆಗೆಣಸುಗಳನ್ನು ತಿನ್ನುವ ನೀನು, ದರಿದ್ರೋಽಸಿ = ದರಿದ್ರನಾಗಿರುವೆ, ರಾಜನಿರ್ಮಿತಂ = ರಾಜರಿಂದ ಮಾಡಲ್ಪಟ್ಟ (ರಾಜರಿಗಾಗಿ ತಯಾರಿಸಲ್ಪಟ್ಟ), ಮಿಷ್ಟಂ = ಸ್ವಾದುವಾದ, ಕ್ಷೀರಾನ್ನಂ = ಹಾಲನ್ನವನ್ನು, ಕಥಂನು = ಹೇಗೆತಾನೆ, ಭೋಕ್ಷ್ಯಸೇ = ತಿನ್ನುವೇ? (ಇತಿ = ಹೀಗೆಂದು) ವಿನಿಂದ್ಯ = ನಿಂದನ ಮಾಡಿ, ಮಾತಃ = ಎಲೈ ತಾಯಿಯೇ, ಭೂಮಿಪೆ = ಧರಾಪಾಲಕಳಾದ ರಾಣಿಯೇ, ಕದಾಪಿ = ಯಾವಾಗಲೂ, ರೋದನಂ = ಅಳುತ್ತಲೇ ಇರುವನು, ಕಿಂ ಕರಿಷ್ಯಾಮಿ = ನಾನೇನು ಮಾಡಲಿ? ।। 140-141 ।। ಇತಿ = ಹೀಗೆ, ತಂ = ಅಳುತ್ತಿರುವ ಮಗನನ್ನು, ಭರ್ತ್ಸಯಿತ್ವಾ = ಜಬರಿಸಿ, ಅಥ = ಆ ತರುವಾಯ, ಉತ್ತಮಂ = ಉತ್ಕೃಷ್ಟವಾದ, ಅನ್ನಂ = ಕ್ಷೀರಾನ್ನವನ್ನು, ಸ್ವಯಂ = ತಾನೇ, ಭುಕ್ತ್ವಾ = ಊಟಮಾಡಿ, ಮಮ = ನನ್ನ, ಉದರಗತಂ = ಉದರದಲ್ಲಿರುವ, ಅನ್ನಂ ಚ = ಈ ಅನ್ನವಾದರೂ, ಪುತ್ರಸ್ಯ = ನನ್ನ ಮಗನಿಗೆ, ಹಿತಕಾರಣಂ = ಹಿತಕ್ಕೆ ಕಾರಣವಾಗುವುದು ।।142।। ಇತ್ಯುಕ್ತ್ವಾ = ಇಂತು, ಧರ್ಮದೇವಿ = ಧರ್ಮದೇವಿಯು, ಭೋಜನಂ = ಮಗುವಿಗೆ ತಂದಿದ್ದ ಭೋಜನವನ್ನು, ಚಕ್ರೇ = ಮಾಡಿದಳು. ತದಾ = ಆವಾಗ, ಕ್ಷೀರಾನ್ನಂ = ಕ್ಷೀರಾನ್ನವನ್ನು, ಭೋಜನಂ ಕೃತ್ವಾ = ಊಟಮಾಡಿದವಳಾಗಿ, ಸ್ವಸ್ಥಚಿತ್ತಾಭವತ್ = ಸಮಾಧಾನವುಳ್ಳ ಮನಸ್ಸುಳ್ಳವಳಾದಳು (ಶಾಂತಮನಸ್ಕಳಾದಳು) ।। 143 ।।

**ಸತ್ಯಂ ವದಾಮಿ ಸುಶ್ರೋಣಿ ತಾಂಬೂಲಂ ದೇಹಿಮೇಽಂಗನೇ ।**
**ಇತ್ಯುಕ್ತಾ ಧರಣೀದೇವೀ ಧರ್ಮದೇವ್ಯಾ ಪುಲಿಂದಯಾ ॥ 144 ॥**

**ಏಲಾಲವಂಗ ಕರ್ಪೂರ ನಾಗವಲ್ಲೀದಲೈರ್ಯುತಮ್ ।**
**ತಾಂಬೂಲಮರ್ಪಯಾಮಾಸ ಪುಲಿಂದಾಯೈ ಪತಿವ್ರತಾ ॥ 145 ॥**

**ಸಾ ಪೂರ್ವಾಭಿಮುಖೀ ಭೂತ್ವಾ ಪುತ್ರಮಂಕೇ ನಿಧಾಯ ಚ ।**
**ಪುರತೋ ಗುಲ್ಮಮಾಸ್ಥಾಯ ಪಾದಾವಾಸ್ತೀರ್ಯ ಸುಸ್ಥಿತಾ ॥ 146 ॥**

ಅಂಗನೇ = ಎಲೈ ಹೆಂಗಸೇ, ಸುಶ್ರೋಣಿ = ಸುಂದರ ಕೇಶವುಳ್ಳವಳೇ, ಸತ್ಯಂವದಾಮಿ = ಸತ್ಯವನ್ನೇ ಹೇಳುವೆನು, ಮೇ = ನನಗೆ, ತಾಂಬೂಲಂ ದೇಹಿ = ತಾಂಬೂಲವನ್ನು (ವಿಳ್ಳೇದೆಲೆ ಅಡಿಕೆಯನ್ನು) ಕೊಡು, ಧರ್ಮದೇವ್ಯಾ = ಧರ್ಮದೇವಿ ನಾಮಕಳಾದ ಕೊರವಂಜಿಯಿಂದ, ಇತ್ಯುಕ್ತಾ = ಹೀಗೆ ಹೇಳಿಸಿಕೊಂಡಂಥ, ಧರಣೀದೇವಿ = ಧರಣೀದೇವಿಯು ॥ 144 ॥ ಏಲಾಲವಂಗಕರ್ಪೂರನಾಗವಲ್ಲೀದಲೈಃ - ಏಲಾ = ಏಲಕ್ಕಿ, ಲವಂಗ = ಲವಂಗವು, ಕರ್ಪೂರ = ಪಚ್ಚಕರ್ಪೂರ, ನಾಗವಲ್ಲೀದಲೈಃ = ವಿಳ್ಳೇದೆಲೆಗಳಿಂದ, ಯುತಂ = ಕೂಡಿದ (ಅಡಿಕೆಯಿಂದೊಡಗೂಡಿದ), ತಾಂಬೂಲಂ = ತಾಂಬೂಲವನ್ನು, ಪತಿವ್ರತಾ = ಪತಿವ್ರತೆಯಾದ ಧರಣಿಯು, ಪುಲಿಂದಾಯೈ = ಆ ಕೊರವಂಜಿಗೆ, ಅರ್ಪಯಾಮಾಸ = ಸಮರ್ಪಿಸಿದಳು ॥ 145 ॥ ಸಾ = ಆ ಧರ್ಮದೇವಿಯು, ಪೂರ್ವಾಭಿಮುಖೀ ಭೂತ್ವಾ = ಪೂರ್ವದಿಕ್ಕಿಗೆ ಮುಖಮಾಡಿಕೊಂಡು, ಪುತ್ರಂ = ಮಗನನ್ನು, ಚ = ಮತ್ತು, ಅಂಕೇನಿಧಾಯ = ತೊಡೆಯ ಮೇಲಿಟ್ಟುಕೊಂಡು, ಪುರತಃ = ತನ್ನ ಮುಂಭಾಗದಲ್ಲಿ, ಗುಲ್ಮಂ = ಬುಟ್ಟಿಯನ್ನು, ಆಸ್ಥಾಯ = ಇಟ್ಟುಕೊಂಡು, ಪಾದಾವಾಸ್ತೀರ್ಯ = ತನ್ನೆರೆಡು ಪಾದಗಳನ್ನು ಅಗಲಿಸಿಕೊಂಡು (ಕಾಲುಚಾಚಿ), ಸಂಸ್ಥಿತಾ = ಕುಳಿತುಕೊಂಡಳು ॥ 146 ॥

**ಏವಂ ರೂಪಂ ಗತಂ ಕೃಷ್ಣಂ ಶ್ರೀನಿವಾಸಂ ಸುರೋತ್ತಮಾಃ ।**
**ದ್ರಷ್ಟುಕಾಮಾಸ್ಸಮಾಯಾತಾ ವೈಖರೀಂ ಪ್ರಾಕೃತೋಚಿತಾಮ್ ॥ 147 ॥**

**ಸದಾರಾಶ್ಚ ಸಪುತ್ರಾಶ್ಚ ಸವಿಮಾನಗಣಾಸ್ತದಾ ।**
**ಅನ್ಯೋನ್ಯಂ ಭಾರತೀಂ ಪ್ರೋಚುಃ ಸಂಭ್ರಮಾತ್ಕೌತುಕಾನ್ವಿತಾಃ ॥ 148 ॥**

**ಕಿಂ ತಯಾ ಸುಕೃತಂ ರಾಜ್ಞ್ಯಾ ಕೃತಂ ಪೂರ್ವಂ ಯಯಾಧುನಾ ।**
**ಲಕ್ಷ್ಮೀಸಹಾಯೋ ಭಗವಾನ್ ಕ್ರೀಡತೇ ಪ್ರಾಕೃತೋ ಯಥಾ ॥ 149 ॥**

ಏವಂ = ಈ ಪರಿಯ, ರೂಪಂಗತಂ = ರೂಪವುಳ್ಳ (ರೂಪಧರಿಸಿರುವ), ಶ್ರೀನಿವಾಸಂ = ಲಕ್ಷ್ಮೀದೇವಿಗೆ ಆಶ್ರಯನಾದ, ಕೃಷ್ಣಂ = ಶ್ರೀಹರಿಯನ್ನು, ಪ್ರಾಕೃತೋಚಿತಾಂ = ಪ್ರಕೃತಿ ಸಂಬಂಧವುಳ್ಳ ಮಾನವರಿಗೆ ಉಚಿತವಾಗಿರುವ, ವೈಖರೀಂ = ವೈಖರಿಯನ್ನು, ದ್ರಷ್ಟುಕಾಮಾಃ = ನೋಡಲಪೇಕ್ಷೆಯುಳ್ಳವರಾಗಿ, ಸದಾರಾಶ್ಚ = ಹೆಂಡತಿಯರು, ಸಪುತ್ರಾಶ್ಚ = ಪುತ್ರರಿಂದಯುಕ್ತರಾಗಿ, ಸುರೋತ್ತಮಾಃ = ದೇವತಾಶ್ರೇಷ್ಠರು, ತಥಾ = ಹಾಗೆಯೇ, ಸವಿಮಾನಗಣಾಃ = ವಿಮಾನಸಮೂಹಯುಕ್ತರಾಗಿ, ಕೌತುಕಾನ್ವಿತಾಃ = ವಿಸ್ಮಯಭರಿತರಾಗಿ, ಸಂಭ್ರಮಾತ್ = ಸಂಭ್ರಮದಿಂದ, ಸಮಾಯಾತಾಃ = ಬಂದವರಾಗಿ, ಅನ್ಯೋನ್ಯಂ = ಒಬ್ಬರಿಗೊಬ್ಬರು, ಭಾರತೀಂ ಚಕ್ರುಃ = ಮಾತನಾಡಿದರು; ಯಯಾ = ಯಾವ, ರಾಜ್ಞ್ಯಾ

ಧರಣಿಯು ಹೇಳಹತ್ತಿದಳು. ಭದ್ರೆ = ಮಂಗಳಕರಳೇ, (ಮಯಾ = ನನ್ನಿಂದ), (ಅಧ್ಯ) ಕಿಂ ಕಾರ್ಯಂ = ಈಗೇನು ಮಾಡಲ್ಪಡಬೇಕು? ವದ = ಹೇಳು, ತವ = ನಿನ್ನ, ಶಾಸನಾತ್ = ಹೇಳಿದಂತೆಯೇ, ಕರೋಮಿ = ಮಾಡುತ್ತೇನೆ ॥ 134 ॥ ಪುಲಿಂದ್ರೋವಾಚ = ಕೊರವಂಜಿಯು ಹೇಳುತ್ತಲಿದ್ದಾಳೆ, ಕಲ್ಯಾಣಿ = ಶುಭಕರಳೇ, ಮಮ = ನನ್ನ, ಪೂರ್ವಿಣಾಂ = ಪ್ರಾಚೀನರಾದ, ದೇವಾನಾಂ = ದೇವತೆಗಳಿಗೆ, ಮುಕ್ತಾತಂಡುಲೈಃ = ಮುತ್ತು, ಅಕ್ಕಿಗಳಿಂದ, ಸ್ವರ್ಣಶೂರ್ಪಂ = ಬಂಗಾರದ ಮರವನ್ನು, ಸಮಾಪೂರ್ಯ = ತುಂಬಿದವಳಾಗಿ ॥ 135 ॥ ವಾಯನಂ = ಬಾಗಿನವನ್ನು, ದೇಹಿ = ಕೊಡು, ಬಹುಭಕ್ತ್ಯೆವ = ಅತಿಭಕ್ತಿಯಿಂದಲೇ, ನಿಕ್ಷಿಪ್ಯ = ಕೊರವಂಜಿಯು ಹೇಳಿದಂತೆ ಸುವರ್ಣ ಮರದಲ್ಲಿ ಮುತ್ತು, ಅಕ್ಕಿ ಮುಂತಾದವನ್ನು ತುಂಬಿ, ಧರ್ಮದೇವಿಯ ಮುಂದಿಟ್ಟು, ಧರ್ಮದೇವೀಂ (ಪ್ರತಿ) = ಧರ್ಮದೇವಿಯನ್ನುದ್ದೇಶಿಸಿ, ವಚೋऽಬ್ರವೀತ್ = ಮಾತನಾಡಿದಳು; ಮಹಾಪ್ರಾಜ್ಞೇ = ಬಹುಪ್ರಜ್ಞಾವಂತಳಾದ ದೇವಿಯೇ! ಸತ್ಯಂವದ = ಸತ್ಯವಾಗಿ ಹೇಳು, ಮಮ = ನನ್ನ, ದುಃಖಂ = ವ್ಯಥೆಯನ್ನು, ಪ್ರಣೋದಯ = ಪರಿಹರಿಸು, ಧರಿಣೀವಾಕ್ಯಂ = ಧರಣೀಯು ನುಡಿದ ವಚನವನ್ನು, ಆಕರ್ಣ್ಯ = ಕೇಳಿ, ಧರ್ಮದೇವಿ = ಧರ್ಮದೇವಿಯು, ವಚೋऽಬ್ರವೀತ್ = ಮಾತನಾಡಿದಳು ॥ 136 ॥ ಧರ್ಮದೇವ್ಯುವಾಚ = ಧರ್ಮದೇವಿಯು ಮಾತಾಡಲಾರಂಭಿಸಿದಳು, ಧರ್ಮಜ್ಞೆ = ಧರ್ಮವನ್ನು ತಿಳಿದಿರುವ ರಾಣಿ!, ಸತ್ಯಂವದಾಮಿ = ಸತ್ಯವನ್ನುರುಹುವೆನು. ಮೇ = ನನ್ನ, ಶಿಶೋಃ = ಮಗುವಿಗೆ, ಸುಪಕ್ವಂ = ಚೆನ್ನಾಗಿ ಬೆಂದಿರುವ, ರಸಯುತಂ = ರಸದಿಂದೊಡಗೂಡಿರುವ, ಅಹಃಕೃತಂ = ಬೆಳಿಗ್ಗೆ ತಯಾರಿಸಿದ್ದು ವಾ = ಅಥವಾ, ರಾತ್ರಿಕೃತಂ = ಹಿಂದಿನ ರಾತ್ರಿಮಾಡಿದ್ದಾದರೂ ಸರಿ; ಅನ್ನಂ = ಅನ್ನವನ್ನು (ಆಹಾರವನ್ನು), ದೇಹಿ = ಕೊಡುವವಳಾಗು ॥ 137 ॥ ರಮ್ಯಂ = ಮನೋಹರವಾದ, ತದ್ವಚನಂ = ಅವಳ ಮಾತನ್ನು, ಶ್ರುತ್ವಾ = ಕೇಳಿ, ಭಾಮಿನೀ = ರಾಣಿಯು, ಪುತ್ರೇಣ = ಮಗನಿಂದ, ಆನೀಯ = ತರಿಸಿ, ಹೇ ನೃಪ = ಜನಕರಾಯನೇ, ಸ್ವರ್ಣಪಾತ್ರಸ್ಥಂ = ಬಂಗಾರದ ಪಾತ್ರೆಯಲ್ಲಿರುವ, ಕ್ಷೀರಾನ್ನಂ = ಹಾಲನ್ನವನ್ನು, ಅರ್ಭಕಸ್ಯ = ಮಗುವಿಗೆ, ದದೌ = ಕೊಟ್ಟಳು ॥ 138 ॥ ಸ್ವರ್ಣಪಾತ್ರಸ್ಥಂ = ಬಂಗಾರದ ಬಟ್ಟಲಿನಲ್ಲಿರುವ, ತಂ = ಆ, ಮಾನುಷಾನ್ನಂ = ಮನುಷ್ಯರು ತಯಾರಿಸಿದ ಅನ್ನವನ್ನು, ದೃಷ್ಟ್ವಾ = ನೋಡಿ, ನ ಭಕ್ತುವಾನ್ = ಊಟಮಾಡಲಿಲ್ಲ; ಭೂಮಿಪ = ಎಲೈ ಜನಕರಾಯನೇ, ತಸ್ಯಾಃ ಧರ್ಮದೇವ್ಯಾಃ = ಆ ಧರ್ಮದೇವಿಯ, ಸಃ ಶಿಶುಃ = ಆ ಮಗುವು, ರುರೋದ = ಅತ್ತಿತು ॥ 139 ॥ ರುದಂತಂ = ಅಳುತ್ತಲಿರುವ, ಆತ್ಮಜಂ = ಪುತ್ರನನ್ನು, ದೃಷ್ಟ್ವಾ = ನೋಡಿ, ವಿನಿಂದ್ಯ = ನಿಂದಿಸಿ, ಪ್ರತ್ಯತಾಡ್ಯ ಚ = ಹೊಡೆದವಳಾಗಿ, ದುರಾಚರ = ಕೆಟ್ಟನಡತೆಯುಳ್ಳವನೇ, ಕಂದಮೂಲಫಲಾಶನಃ = ಗೆಡ್ಡೆಗೆಣಸುಗಳನ್ನು ತಿನ್ನುವ ನೀನು, ದರಿದ್ರೋऽಸಿ = ದರಿದ್ರನಾಗಿರುವೆ, ರಾಜನಿರ್ಮಿತಂ = ರಾಜರಿಂದ ಮಾಡಲ್ಪಟ್ಟ (ರಾಜರಿಗಾಗಿ ತಯಾರಿಸಲ್ಪಟ್ಟ), ಮಿಷ್ಟಂ = ಸ್ವಾದುವಾದ, ಕ್ಷೀರಾನ್ನಂ = ಹಾಲನ್ನವನ್ನು, ಕಥಂನು = ಹೇಗೆತಾನೆ, ಭೋಕ್ಷ್ಯಸೇ = ತಿನ್ನುವೇ? (ಇತಿ = ಹೀಗೆಂದು) ವಿನಿಂದ್ಯ = ನಿಂದನ ಮಾಡಿ, ಮಾತಃ = ಎಲೈ ತಾಯಿಯೇ, ಭೂಮಿಪೆ = ಧರಾಪಾಲಕಳಾದ ರಾಣಿಯೇ, ಕದಾಪಿ = ಯಾವಾಗಲೂ, ರೋದನಂ = ಅಳುತ್ತಲೇ ಇರುವನು, ಕಿಂ ಕರಿಷ್ಯಾಮಿ = ನಾನೇನು ಮಾಡಲಿ? ॥ 140-141 ॥ ಇತಿ = ಹೀಗೆ, ತಂ = ಅಳುತ್ತಿರುವ ಮಗನನ್ನು, ಭರ್ತ್ಸಯಿತ್ವಾ = ಜಬರಿಸಿ, ಅಥ = ಆ ತರುವಾಯ, ಉತ್ತಮಂ = ಉತ್ಕೃಷ್ಟವಾದ, ಅನ್ನಂ = ಕ್ಷೀರಾನ್ನವನ್ನು, ಸ್ವಯಂ = ತಾನೇ, ಭುಕ್ತ್ವಾ = ಊಟಮಾಡಿ, ಮಮ = ನನ್ನ, ಉದರಗತಂ = ಉದರದಲ್ಲಿರುವ, ಅನ್ನಂ ಚ = ಈ ಅನ್ನವಾದರೂ, ಪುತ್ರಸ್ಯ = ನನ್ನ ಮಗನಿಗೆ, ಹಿತಕಾರಣಂ = ಹಿತಕ್ಕೆ ಕಾರಣವಾಗುವುದು ॥142॥ ಇತ್ಯುಕ್ತ್ವಾ = ಇಂತು, ಧರ್ಮದೇವಿ = ಧರ್ಮದೇವಿಯು, ಭೋಜನಂ = ಮಗುವಿಗೆ ತಂದಿದ್ದ ಭೋಜನವನ್ನು, ಚಕ್ರೇ = ಮಾಡಿದಳು. ತದಾ = ಆವಾಗ, ಕ್ಷೀರಾನ್ನಂ = ಕ್ಷೀರಾನ್ನವನ್ನು, ಭೋಜನಂ ಕೃತ್ವಾ = ಊಟಮಾಡಿದವಳಾಗಿ, ಸ್ವಸ್ಥಚಿತ್ತಾಭವತ್ = ಸಮಾಧಾನವುಳ್ಳ ಮನಸ್ಸುಳ್ಳವಳಾದಳು (ಶಾಂತಮನಸ್ಕಳಾದಳು) ॥ 143 ॥

**ಸತ್ಯಂ ವದಾಮಿ ಸುಶ್ರೋಣಿ ತಾಂಬೂಲಂ ದೇಹಿಮೇಽಂಗನೇ ।**
**ಇತ್ಯುಕ್ತಾ ಧರಣೀದೇವೀ ಧರ್ಮದೇವ್ಯಾ ಪುಲಿಂದಯಾ ॥ 144 ॥**

**ಏಲಾಲವಂಗ ಕರ್ಪೂರ ನಾಗವಲ್ಲೀದಲೈರ್ಯುತಮ್ ।**
**ತಾಂಬೂಲಮರ್ಪಯಾಮಾಸ ಪುಲಿಂದಾಯೈ ಪತಿವ್ರತಾ ॥ 145 ॥**

**ಸಾ ಪೂರ್ವಾಭಿಮುಖೀ ಭೂತ್ವಾ ಪುತ್ರಮಂಕೇ ನಿಧಾಯ ಚ ।**
**ಪುರತೋ ಗುಲ್ಮಮಾಸ್ಥಾಯ ಪಾದಾವಾಸ್ತೀರ್ಯ ಸುಸ್ಥಿತಾ ॥ 146 ॥**

ಅಂಗನೇ = ಎಲೈ ಹೆಂಗಸೇ, ಸುಶ್ರೋಣಿ = ಸುಂದರ ಕೇಶವುಳ್ಳವಳೇ, ಸತ್ಯಂವದಾಮಿ = ಸತ್ಯವನ್ನೇ ಹೇಳುವೆನು, ಮೇ = ನನಗೆ, ತಾಂಬೂಲಂ ದೇಹಿ = ತಾಂಬೂಲವನ್ನು (ವಿಳ್ಳೇದೆಲೆ ಅಡಿಕೆಯನ್ನು) ಕೊಡು, ಧರ್ಮದೇವ್ಯಾ = ಧರ್ಮದೇವಿ ನಾಮಕಳಾದ ಕೊರವಂಜಿಯಿಂದ, ಇತ್ಯುಕ್ತಾ = ಹೀಗೆ ಹೇಳಿಸಿಕೊಂಡಂಥ, ಧರಣೀದೇವಿ = ಧರಣೀದೇವಿಯು ॥ 144 ॥ ಏಲಾಲವಂಗಕರ್ಪೂರನಾಗವಲ್ಲೀದಲೈಃ - ಏಲಾ = ಏಲಕ್ಕಿ, ಲವಂಗ = ಲವಂಗವು, ಕರ್ಪೂರ = ಪಚ್ಚಕರ್ಪೂರ, ನಾಗವಲ್ಲೀದಲೈಃ = ವಿಳ್ಳೇದೆಲೆಗಳಿಂದ, ಯುತಂ = ಕೂಡಿದ (ಅಡಿಕೆಯಿಂದೊಡಗೂಡಿದ), ತಾಂಬೂಲಂ = ತಾಂಬೂಲವನ್ನು, ಪತಿವ್ರತಾ = ಪತಿವ್ರತೆಯಾದ ಧರಣಿಯು, ಪುಲಿಂದಾಯೈ = ಆ ಕೊರವಂಜಿಗೆ, ಅರ್ಪಯಾಮಾಸ = ಸಮರ್ಪಿಸಿದಳು ॥ 145 ॥ ಸಾ = ಆ ಧರ್ಮದೇವಿಯು, ಪೂರ್ವಾಭಿಮುಖೀ ಭೂತ್ವಾ = ಪೂರ್ವದಿಕ್ಕಿಗೆ ಮುಖಮಾಡಿಕೊಂಡು, ಪುತ್ರಂ = ಮಗನನ್ನು, ಚ = ಮತ್ತು, ಅಂಕೇನಿಧಾಯ = ತೊಡೆಯ ಮೇಲಿಟ್ಟುಕೊಂಡು, ಪುರತಃ = ತನ್ನ ಮುಂಭಾಗದಲ್ಲಿ, ಗುಲ್ಮಂ = ಬುಟ್ಟಿಯನ್ನು, ಆಸ್ಥಾಯ = ಇಟ್ಟುಕೊಂಡು, ಪಾದಾವಾಸ್ತೀರ್ಯ = ತನ್ನೆರಡು ಪಾದಗಳನ್ನು ಅಗಲಿಸಿಕೊಂಡು (ಕಾಲುಚಾಚಿ), ಸಂಸ್ಥಿತಾ = ಕುಳಿತುಕೊಂಡಳು ॥ 146 ॥

**ಏವಂ ರೂಪಂ ಗತಂ ಕೃಷ್ಣಂ ಶ್ರೀನಿವಾಸಂ ಸುರೋತ್ತಮಾಃ ।**
**ದ್ರಷ್ಟುಕಾಮಾಸ್ಸಮಾಯಾತಾ ವೈಖರೀಂ ಪ್ರಾಕೃತೋಚಿತಾಮ್ ॥ 147 ॥**

**ಸದಾರಾಶ್ಚ ಸಪುತ್ರಾಶ್ಚ ಸವಿಮಾನಗಣಾಸ್ತದಾ ।**
**ಅನ್ಯೋನ್ಯಂ ಭಾರತೀಂ ಪ್ರೋಚುಃ ಸಂಭ್ರಮಾತ್ಕೌತುಕಾನ್ವಿತಾಃ ॥ 148 ॥**

**ಕಿಂ ತಯಾ ಸುಕೃತಂ ರಾಜ್ಞ್ಯಾ ಕೃತಂ ಪೂರ್ವಂ ಯಯಾಧುನಾ ।**
**ಲಕ್ಷ್ಮೀಸಹಾಯೋ ಭಗವಾನ್ ಕ್ರೀಡತೇ ಪ್ರಾಕೃತೋ ಯಥಾ ॥ 149 ॥**

ಏವಂ = ಈ ಪರಿಯ, ರೂಪಂಗತಂ = ರೂಪವುಳ್ಳ (ರೂಪಧರಿಸಿರುವ), ಶ್ರೀನಿವಾಸಂ = ಲಕ್ಷ್ಮೀದೇವಿಗೆ ಆಶ್ರಯನಾದ, ಕೃಷ್ಣಂ = ಶ್ರೀಹರಿಯನ್ನು, ಪ್ರಾಕೃತೋಚಿತಾಂ = ಪ್ರಕೃತಿ ಸಂಬಂಧವುಳ್ಳ ಮಾನವರಿಗೆ ಉಚಿತವಾಗಿರುವ, ವೈಖರೀಂ = ವೈಖರಿಯನ್ನು, ದ್ರಷ್ಟುಕಾಮಾಃ = ನೋಡಲಪೇಕ್ಷೆಯುಳ್ಳವರಾಗಿ, ಸದಾರಾಶ್ಚ = ಹೆಂಡತಿಯರು, ಸಪುತ್ರಾಶ್ಚ = ಪುತ್ರರಿಂದಯುಕ್ತರಾಗಿ, ಸುರೋತ್ತಮಾಃ = ದೇವತಾಶ್ರೇಷ್ಠರು, ತಥಾ = ಹಾಗೆಯೇ, ಸವಿಮಾನಗಣಾಃ = ವಿಮಾನಸಮೂಹಯುಕ್ತರಾಗಿ, ಕೌತುಕಾನ್ವಿತಾಃ = ವಿಸ್ಮಯಭರಿತರಾಗಿ, ಸಂಭ್ರಮಾತ್ = ಸಂಭ್ರಮದಿಂದ, ಸಮಾಯಾತಾಃ = ಬಂದವರಾಗಿ, ಅನ್ಯೋನ್ಯಂ = ಒಬ್ಬರಿಗೊಬ್ಬರು, ಭಾರತೀಂ ಚಕ್ರುಃ = ಮಾತನಾಡಿದರು; ಯಯಾ = ಯಾವ, ರಾಜ್ಞ್ಯಾ

= ರಾಣಿಯಾದ, ತಯಾ = ಧರಣೀದೇವಿಯಿಂದ, ಪೂರ್ವಂ = ಹಿಂದೆ (ಹಿಂದಿನ ಜನ್ಮದಲ್ಲಿ), ಕಿಂ ಸುಕೃತಂ = ಏನು ಪುಣ್ಯವು, ಕೃತಂ = ಮಾಡಲ್ಪಟ್ಟಿತು? ಅಧುನಾ = ಈವಾಗ, ಲಕ್ಷ್ಮೀಸಹಾಯಃ = ಲಕ್ಷ್ಮೀರಮಣನಾದ, ಭಗವಾನ್ = ಷಡ್ಗುಣೈಶ್ವರ್ಯ ಸಂಪನ್ನನಾದ (ಪೂಜ್ಯನಾದ) ಶ್ರೀಹರಿಯು, ಪ್ರಾಕೃತೋಯಥಾ = ಪ್ರಾಕೃತಮಾನವನಂತೆ, ಕ್ರೀಡತೇ = ವಿಹರಿಸುತ್ತಿದ್ದಾನೆ ! ॥ 147-149॥

**ಏವಂ ಹರೇಶ್ಚಿತ್ರವಿಚಿತ್ರ ಕರ್ಮ ಗಾಯಂತಿ ಕಂಜೋದ್ಭವ ಶಂಭು ಶಕ್ರಾಃ ।**
**ಕಲೌಯುಗೇ ಪಾಪಕೃತಾಂ ನರಾಣಾಮುದ್ಧಾರಣಾರ್ಥಂ ಜಗದೀಶಚೇಷ್ಟಾ ॥ 150 ॥**

ಏವಂ = ಈ ಪ್ರಕಾರವಾಗಿ, ಕಂಜೋದ್ಭವಶಂಭುಶಕ್ರಾಃ- ಕಂಜೋದ್ಭವ = ಕಮಲದಲ್ಲಿ ಉದ್ಭವಿಸಿದ ಬ್ರಹ್ಮದೇವರು, ಶಂಭು = ರುದ್ರದೇವರು, ಶಕ್ರಾಃ = ಇಂದ್ರಾದಿಗಳು, ಏವಂ = ಈ ಬಗೆಯ, ಹರೇ = ಶ್ರೀಹರಿಯ, ಚಿತ್ರವಿಚಿತ್ರ ಕರ್ಮ = ಆಶ್ಚರ್ಯಕರವಾದ ವಿಚಿತ್ರಕಾರ್ಯವು, ಕಲೌಯುಗೇ = ಕಲಿಯುಗದಲ್ಲಿ, ಪಾಪಕೃತಾಂ = ಪಾಪಮಾಡುತ್ತಿರುವವರ, ಉದ್ಧಾರಣಾರ್ಥಂ = ಉದ್ಧಾರಕ್ಕಾಗಿಯೇ, ಜಗದೀಶಚೇಷ್ಟಾ = ಜಗತ್ಪತಿಯಾದ ಶ್ರೀಹರಿಯ ಕಾರ್ಯವು (ನಡವಳಿಕೆಯು), ಏವಂ = ಈ ರೀತಿಯಾಗಿ, ಗಾಯಂತಿ = (ಕೊಂಡಾಡುವರು) ಗಾನಮಾಡುವರು ॥ 150 ॥

## ಕಥಾಸಾರ

ನೈಮಿಷಾರಣ್ಯದಲ್ಲಿ ಸೂತಮುನಿಗಳು ಶೌನಕ ಮೊದಲಾದವರಿಗೆ ಶ್ರೀವೇಂಕಟೇಶ್ವರನ ಚರಿತಾಮೃತವನ್ನು ಪಾನಮಾಡಿಸುತ್ತಾ ಶ್ರೀವೇಂಕಟೇಶ್ವರನ ಮಹಿಮೆಯನ್ನು ಹೀಗೆ ನಿರೂಪಿಸಲಾರಂಭಿಸಿದರು.

ಸೂತ:- ವಿಪ್ರೋತ್ತಮರೇ! ಬೇಟೆಗಾಗಿ ಹೊರಟ ಶ್ರೀನಿವಾಸನು ವನಸಿರಿಯ ಮಧ್ಯದಲ್ಲಿ ಪದ್ಮಾವತಿಯನ್ನು ಕಂಡು ಅವಳಲ್ಲಿ ಮೋಹಿತನಾದವನಂತೆ ತೋರುತ್ತಾ, ಮಾತು ಪ್ರಾರಂಭಿಸಿ ಕೊನೆಗೆ ಅದು ಕಲಹದಲ್ಲಿ ಪರ್ಯಾವಸನವಾಗಿ, ಪದ್ಮಾವತಿ ಹಾಗೂ ಅವಳ ಸಖಿಯರು ಹೊಡೆದ ಕಲ್ಲುಗಳ ಆಘಾತದಿಂದ ಶ್ರೀನಿವಾಸನ ದಿವ್ಯಾಶ್ವವು ಮೃತವಾದ್ದರಿಂದ ದುಃಖಿಸುತ್ತಾ ವೇಂಕಟೇಶಗಿರಿಗೆ ಬಂದು ಪಲ್ಲಂಗದಲ್ಲಿ ಸುಪ್ಪತ್ತಿಗೆಯ ಮೇಲೆ ಮಲಗಿಬಿಟ್ಟನೆಂದು ಹೇಳಿದೆನಷ್ಟೇ? ಈಗ ಮುಂದಿನ ಕಥಾಭಾಗವನ್ನು ಆಲಿಸಿರಿ-

ಹೀಗೆ ಶ್ರೀನಿವಾಸನು ಮಲಗಿರಲು ಮಂಗಳಕರಳಾದ ಬಕುಳಮಾಲಿಕೆಯು ಪ್ರಭುವನ್ನು ಸೇವಿಸಲು ಭಕ್ತಿಭರಿತಳಾಗಿ ಶ್ರೀನಿವಾಸನ ಭೋಜನಕ್ಕಾಗಿ ಅನ್ನ, ತೊವ್ವೆ, ಸಾರು, ಕಜ್ಜಾಯ ಮೊದಲಾದ ಆರು ಬಗೆಯ, ಭೋಜ್ಯ ಪದಾರ್ಥಗಳನ್ನು ಸಿದ್ಧಪಡಿಸಿಕೊಂಡು ವಲ್ಮೀಕದ ಬಳಿ ಮಲಗಿರುವ ಶ್ರೀನಿವಾಸನ ಬಳಿಗೆ ಆಗಮಿಸಿದಳು. ಶ್ರೀಹರಿಯ ಬಳಿ ಬಂದಾಗ ಅವನು ದೀರ್ಘವಾಗಿ ನಿಟ್ಟುಸಿರುಬಿಡುತ್ತಾ, ಮಾತನಾಡದಲೇ ಅಳುತ್ತಿರುವುದನ್ನು ಗಮನಿಸಿ ಬಕುಳೆಯು ಇಂತೆಂದಳು ''ಪುರುಷೋತ್ತಮ, ಹೇ ಗೋವಿಂದ! ಏಕೆ ಮಲಗಿರುವೆ? ಏಳು, ಎದ್ದೇಳು. ನೀನೆಂದೂ ಹಗಲಿನಲ್ಲಿ ಮಲಗಿದವನಲ್ಲ; ಶ್ರೀಹರಿ! ನೀನು ಅಶ್ವವನೂ ಅಲ್ಲ! ನಿನಗೇಕೆ ಈ ದುಃಖ? ಏಕಿಂತು ಕಷ್ಟಪಡುತ್ತಿರುವವನಂತೆ ಕಾಣುತ್ತಿರುವೆ? ನಿನ್ನ ಮನದಲ್ಲಿರುವುದಾದರೂ ಏನು? ನಿನ್ನ ವ್ಯಥೆಯ ಕಾರಣವನ್ನು ಸತ್ಯವಾಗಿ ತಿಳಿಸು. ಮಾಧವ! ನಿನಗಾಗಿ ಪರಮಾನ್ನವನ್ನು ಮಾಡಿತಂದಿದ್ದೇನೆ, ಊಟಮಾಡಲು ಬಾ, ಸ್ವಾಮಿ''.

ಬಕುಳೆಯು ಮಾತನಾಡಿಸಿದರೂ ಶ್ರೀನಿವಾಸನು ಉತ್ತರಿಸಲಿಲ್ಲ! ಬಂಗಾರದ ವರ್ಣದಿಂದ ಕಂಗೊಳಿಸುವ ಬಕುಳಮಾಲಿಕೆಯು ಪುನಃ ನುಡಿದಳು. ''ಶ್ರೀಕೃಷ್ಣ! ಅರಣ್ಯದಲ್ಲಿ ನೀನೇನಾದರೂ ಕಂಡು ಭಯಗೊಂಡೆಯಾ? ನಿನಗೇತಕೆ

ಈ ವ್ಯಥೆ? ಪ್ರಭು! ದುಃಖವೇ ಇಲ್ಲದಿರುವ ನೀನೇಕೆ ದುಃಖಿತನಂತೆ ಕಾಣುತ್ತಿರುವೆ? ನಿನ್ನ ಮನಸ್ಸಿನಲ್ಲಿರುವುದಾವರೂ ಏನು? ತಿಳಿಸಲೇಬೇಕಾದುದನ್ನು ಮರೆಮಾಚದೆ ಹೇಳು. ಅತಿಗುರುತ್ವದ ಆ ಕಾರಣವನ್ನು ನನಗೆ ಹೇಳಬಹುದೋ ಕೂಡದೋ ಎಂದು ಚಿಂತಿಸಬೇಡ, ಭೂತಭಾವನ! ಭೋಜನ ಮಾಡದೇ ಮಲಗಿರುವ ನಿನ್ನನ್ನು ನೋಡಿ ಅತೀವ ದುಃಖವಾಗುತ್ತಿದೆ. ಬಲರಾಮನಲ್ಲಿ, ದೇವಕೀವಸುದೇವರಲ್ಲಿ ನಿನಗಿರುವ ಗೌರವದ ಮೇಲಾಣೆ! ನಿನ್ನ ವ್ಯಥೆಯ ಕಾರಣವನ್ನರುಹು. ಊಟಮಾಡದಲೇ ಇಂತು ಮಲಗಿದರೆ ಬಲರಾಮ-ದೇವಕಿ-ವಸುದೇವರಿಗೆ ಸಂಕಟವಾಗುವುದಿಲ್ಲವೇ? ಅವರ ಮೇಲಾಣೆ! ಹೇಳು ದೇವ, ಸಮಸ್ತಜನರ ಕಷ್ಟವನ್ನು ಪರಿಹರಿಸುವ ಪುಣ್ಯಮೂರ್ತಿ ನೀನು! ನಿನಗೆ ನಮಸ್ಕಾರ! ಮಾತನಾಡು ಗೋವಿಂದ!

ದೇವತಾಸಾರ್ವಭೌಮನಾದ ಶ್ರೀನಿವಾಸ! ಈ ಭೂತಳದಲ್ಲಿ ಯಾವಳಾದರೂ ಕನ್ಯೆಯನ್ನು ಕಂಡೆಯಾ? ಗಂಧರ್ವ ಸ್ತ್ರೀಯನ್ನು ನೋಡಿದೆಯಾ? ಯಾವಳ ಅಂಗಸಂಗವನ್ನು ಬಯಸಿ ನಿನಗೀ ಮನೋವಿಕಾರವುಂಟಾಗಿದೆ? ಸಕಲ ಜಗತ್ತಿಗೆ ಗುರುವಾದ ಶ್ರೀನಿವಾಸ! ಭಕ್ತಪರಾಧೀನನೂ, ಜಗತ್ಪಾಲಕನೂ ಆದ ನಮ್ಮ ಶ್ರೀಹರಿಯನ್ನು ಕಾಮಾರ್ತಳಾದ ಅದಾವ ಪುಣ್ಯವಂತಳು ಮೋಹಗೊಳಿಸಿದಳೋ ಕಾಣೆನೇ! ಗೋವಿಂದ! ನಿನ್ನ ಕಾರ್ಯವೇನಿದ್ದರೂ ತಿಳಿಸು. ಕ್ಷಣಮಾತ್ರದಲ್ಲಿ ನಾನದನ್ನು ನೆರವೇರಿಸಿಕೊಡುವೆನು. ದೇವ! ಅರಣ್ಯದಲ್ಲಿರುವ ಕ್ರೂರ ಮೃಗ ಅಥವಾ ಕಳ್ಳರನ್ನು ಕಂಡು ಹೆದರಿಕೆಯಾಯಿತೇ? ಲಕ್ಷ್ಮೀರಮಣ! ಭೂತ-ಪ್ರೇತ-ಪಿಶಾಚಾದಿಗಳ ದರ್ಶನದಿಂದ ಅಂಜಿರುವೆಯೇನು? ಸ್ವಾಮಿ, ಭಯನಿವಾರಕವಾದ ಮಂತ್ರ-ಯಂತ್ರ-ತಂತ್ರ ಅಥವಾ ಗಿಡಮೂಲಿಕೆಗಳು, ಔಷಧಾದಿಗಳನ್ನು ಸಕ್ರಮವಾಗಿ ಮಾಡಿಸಿ ನಿನ್ನೆಲ್ಲ ಭಯಗಳನ್ನೂ ನಾನು ಪರಿಹಾರ ಮಾಡಿಸುತ್ತೇನೆ''.

ಇಂತು ವಿನಂತಿಸಿದರೂ ಶ್ರೀನಿವಾಸನು ಮೌನಬಿಡದಿರಲು ಬಕುಳೆಯು ತಾನು ತಂದ ಆಹಾರ ಪದಾರ್ಥಗಳನ್ನು ಅಲ್ಲಿಯೇ ಒಂದು ಬದಿಯಲ್ಲಿಟ್ಟು ಶ್ರೀವೇಂಕಟೇಶನ ಬಳಿಗಾಗಮಿಸಿ ಮಲಗಿರುವ ಶ್ರೀನಿವಾಸನಿಗೆ ಪಾದಸೇವೆ ಮಾಡುತ್ತಾ, ಸಂತೈಸುತ್ತಾ, ಬಕುಳಮಾಲಿಕೆಯು ಭಕ್ತ್ಯತಿಶಯದಿಂದ ಪ್ರಭುವಿನ, ಪಾದದಿಂದಾರಂಭಿಸಿ ಶಿರಸ್ಸಿನವರೆಗೆ ನೊಂದಿರುವ ಶರೀರವನ್ನು ಎಲ್ಲಕಡೆ ತನ್ನ ಕರಗಳಿಂದ ಸವರುತ್ತಾ ಎಚ್ಚರಗೊಳಿಸಲು ಪ್ರಯತ್ನಿಸಿದರೂ ಶ್ರೀನಿವಾಸನು ಮಾತನಾಡದಿರಲು ಬಕುಳಾದೇವಿಯು ಶ್ರೀನಿವಾಸನು ಹೊದ್ದಿದ್ದ ವಸ್ತ್ರವನ್ನು (ಮುಸುಕನ್ನು) ತೆಗೆದು ಹಾಕಿ, ತನ್ನ ಅಂಗೈಯಿಂದ ದೇವನ ಅಂಗಾಂಗಗಳನ್ನು ಸವರುತ್ತಾ ಖೇದದಿಂದ ''ಸರ್ವ ದೇವತೆಗಳಿಗೂ ದೇವನಾದ, ಜಗತ್ಪ್ರಭುವಾದ, ಎಲೈ ಅನಾದಿನಿತ್ಯನಾದ ಪುರುಷೋತ್ತಮ! ಶ್ರೀನಿವಾಸ, ನಿನ್ನ ಮನದಲ್ಲಿರುವ ಬಯಕೆಯನ್ನು ಪೂರೈಸುತ್ತೇನೆ. ಈ ವಿಷಯದಲ್ಲಿ ಸಂದೇಹ ಪಡಬೇಡ, ಯೋಚನೆ ಮಾಡಬೇಡ, ನಿನ್ನ ಮನೋಕಾಮನೆಯನ್ನು ಸತ್ಯವಾಗಿ ಹೇಳು, ಭಯಪಡಬೇಡ, ನಾಚಿಕೆಪಡಬೇಡ ನನ್ನ ಎಲ್ಲ ಶಕ್ತಿಯನ್ನು ವಿನಿಯೋಗಿಸಿ ಬೇಗ ನಿನ್ನ ಇಷ್ಟವನ್ನು ಪೂರ್ಣ ಮಾಡುವೆನು'' ಎಂದು ಹೇಳಿದಳು.

ಆಗ ಶ್ರೀನಿವಾಸನು ಬಿಸಿಯಾದ ನಿಟ್ಟುಸಿರುಬಿಡುತ್ತಾ ಮೆಲ್ಲ ಮೆಲ್ಲನೆ ತನ್ನ ಹಾರ್ದವನ್ನು ತಿಳಿಸಲಾರಂಭಿಸಿದನು- ''ಅಮ್ಮಾ, ಬಕುಳಾದೇವಿ! ಯಾವ ಗಂಧರ್ವಸ್ತ್ರೀಯಾಗಲಿ, ಋಷಿಪುತ್ರಿಯಾಗಲಿ ನನ್ನನ್ನು ಮೋಹಗೊಳಿಸಲಿಲ್ಲ, ರಾಕ್ಷಸಿ, ಪಿಶಾಚ, ಭೂತಗಣಗಳು, ಅಥವಾ ಪ್ರೇತಗಳೇ ಆಗಲಿ ನನ್ನನ್ನು ಭಯಪಡಿಸಲಾರವು. ಎಂದಿಗೂ ಕಾಡಿನಲ್ಲಿರುವ ದುಷ್ಟ ಮೃಗಗಳು ಅಥವಾ ಕಳ್ಳರು ನನಗೆ ಕ್ರೂರರಾಗಲಾರರು, ಅವು ನನಗೆ ಲೆಕ್ಕವಿಲ್ಲ! ಇವೆಲ್ಲವೂ ನನ್ನ ನಾಮಸ್ಮರಣಮಾತ್ರದಿಂದಲೇ ಹತ್ತು ದಿಕ್ಕುಗಳತ್ತ ಭಯಗೊಂಡು ಓಡಿಹೋಗುವುವು! ಪಾಪರಹಿತಳಾದ ಬಕುಳೆ! ಸಾಕ್ಷಾತ್ ಮೃತ್ಯುವಿಗೂ ಮೃತ್ಯುವಾಗಿರುವ ನನಗೆ ಅವುಗಳಿಂದೇತರ ಭಯ? ನನ್ನೀ ವ್ಯಥೆಗೆ ಕಾರಣವಿದೆ, ಕೇಳು. ನಾನು ಬೇಟೆಗೆ ಹೋದಾಗ ಅರಣ್ಯಮಧ್ಯದ ವನದಲ್ಲಿ ಮಂಗಳಕರಳೂ, ಉತ್ತಮಳೂ ಆದ ಪದ್ಮಾವತಿ ಎಂಬ ಕನ್ಯೆಯನ್ನು ನೋಡಿದೆನು. ಅವಳ ದರ್ಶನದಿಂದ ನನ್ನ ಮನಸ್ಸು

ಕಾಮ-ಮೋಹಪರವಶವಾಗಿದೆ, ಚಿತ್ತವೈಕಲ್ಯವುಂಟಾಗಿದೆ. ಅತಿ ರೂಪಸಿಯೂ, ಲಾವಣ್ಯವತಿಯೂ, ಸುಂದರ ಭ್ರೂಲತೆ, ನೀಲವರ್ಣದ ಮುಂಗುರುಳುಗಳಿಂದ ಬೆಡಗುಗೊಂಡಿರುವ; ಸಕಲಕಲೆಗಳಿಂದ ಕೂಡಿದ ಪೂರ್ಣಚಂದ್ರನಿಗೆ ಸಮಾನಳಾದ ಶ್ಯಾಮಲವರ್ಣದಿಂದ ಇಂದ್ರನೀಲಮಾಣಿಕ್ಯ ದೀಪ್ತಿಯಿಂದ ಸಾಕ್ಷಾತ್ ರಮಾದೇವಿಗೆ ಸದೃಶಳಾದ ಆ ಪದ್ಮಾವತಿಯನ್ನು ಶೀಘ್ರವಾಗಿ ನನಗೆ ಘಟನೆ ಮಾಡಿಸು. ಸುಂದರನಯನ ವಿರಾಜಿತಳಾದ ಹೇ ದೇವಿ! ಜನುಮ ಜನುಮಗಳಿಂದ ಸಂಪಾದಿಸಿರುವ ಪುಣ್ಯಗಳಿಂದ ಮಾತ್ರ ಪದ್ಮಾವತಿಯಂತಹ ಕನ್ಯೆಯು ದೊರಕುವಳು! ಅವಳ ಶುಭದರ್ಶನದಿಂದ ನನ್ನ ಸುಕೃತವು ಪರಿಪಕ್ವವಾಗಿದೆ. ಜಗತ್ತಿನಲ್ಲಿ ಅನ್ನಪಾನಾದಿಗಳನ್ನು ಬಿಟ್ಟಿರುವ ಮೂಢನನ್ನು ಹೊರತುಪಡಿಸಿ ಮಾನವನಾಗಿ ಜನಿಸಿದ ಆದಾವ ಪುರುಷನು ತಾನೆ ಅಂತಹ ಕನ್ಯೆಯನ್ನು ಬಿಟ್ಟಾನು? ಎಲೈ ಗೆಳತಿ! ಅವಳಿಲ್ಲದೆ ಅಶಾಶ್ವತವಾದ, ಕೆಲಸಕ್ಕೆಬಾರದ ಈ ಶರೀರದಿಂದೇನು ಪ್ರಯೋಜನ? ನೀನು ಬೇಗನೆ ಸುಂದರಿಯಾದ ಆಕಾಶರಾಜಕುವರಿಯಾದ ಆ ಪದ್ಮಾವತಿಯೊಡನೆ ನನಗೆ ವಿವಾಹಮಾಡಿಸು! ಅವಳನ್ನು ಬಿಟ್ಟು ನಾನು ಬದುಕಿರಲಾರೆ. ಇದು ಸತ್ಯವೆಂದು ತಿಳಿ. ಪದ್ಮಾವತಿ ಮತ್ತು ಅವಳ ಸಖಿಯರು ನನ್ನ ಮೇಲೆ ಕಲ್ಲಿನಮಳೆ ಸುರಿಸಿದರು. ಆದುದರಿಂದ ನನ್ನ ಅಶ್ವವು ಮರಣಹೊಂದಿತು. ಆ ಪದ್ಮಾವತಿಗಾಗಿಯೇ ನಾನು ಈ ವೇಂಕಟಾಚಲದಲ್ಲಿ ಅವತರಿಸಿದ್ದೇನೆ!

ದೇವಿ! ನನ್ನ ಪುತ್ರನಾದ ಬ್ರಹ್ಮನು ನನಗೆ ಹಗೆಯಾಗಿದ್ದಾನೆ. ಹಿಂದೆ ನಾನಾವ ಪಾಪಮಾಡಿದ್ದೇನೆಂದು ಕಣ್ಣಿದ್ದೂ ಕುರುಡನಾದ ಬ್ರಹ್ಮನು ತಾನು ಸೃಜಿಸಿದ ಶ್ರೇಷ್ಠ ಕನ್ಯೆಯಾದ ಪದ್ಮಾವತಿಯು ನನಗೆ ಸುಲಭವಾಗಿ ದೊರಕುವಂತೆ ಮನಸ್ಸು ಮಾಡಲಿಲ್ಲವಲ್ಲ! ಹಿಂದೆ ನಾನೇನು ಘೋರ ಪಾಪಮಾಡಿದ್ದೇನೆಂದು ಚತುರ್ಮುಖನು ಹೀಗೆ ಮಾಡಿದನು? ಹಿಂದಿನ ಯಾವ ಪಾಪದ ಫಲವನ್ನನುಸರಿಸಿ ಪದ್ಮಾವತಿಯೊಡನೆ ನನಗೆ ವಿವಾಹವಾಗುವಂತೆ ಮಾಡಲಿಲ್ಲ? ಹೂಂ, ಅವನನ್ನು ದೂಷಿಸಿ ಫಲವೇನು? ನನ್ನ ಪಾಲಿಗೆ ಹೇ ಬಕುಳೆ! ನೀನೇ ವಿಷ್ಣು-ಬ್ರಹ್ಮ ಆಗಿದ್ದೀಯೆ. ನನಗೆ ಸಹಾಯ ಮಾಡು. ನೀನೀಕಾರ್ಯ ಮಾಡದಿದ್ದೊಡೆ ಆಗ ನನ್ನ ಮರಣವು ನಿಶ್ಚಿತವೆಂದು ತಿಳಿ. ಯಾವ ಮನುಷ್ಯನು ಮರಣೋನ್ಮುಖನಾದವನನ್ನು ಬದುಕಿಸಲು ಸಹಾಯಮಾಡುವನೋ, ಅಂಥವನು ದೇವವಿಮಾನದಲ್ಲಿ ಕುಳಿತು ಪುಣ್ಯಮಾರ್ಗವಾಗಿ ಸ್ವರ್ಗಕ್ಕೆ ತೆರಳುವನು. ಇಂತು ನೀನು ಧರ್ಮಕ್ಕಾಗಿ, ಧರ್ಮಮಾರ್ಗವನ್ನು ಆಶ್ರಯಿಸು. ಬಕುಳೆ! ಹೆಚ್ಚು ಹೇಳುವುದೇನಿದೆ? ಎಂತಾದರೂ ನೀನು ಪದ್ಮಾವತಿಯೊಡನೆ ನನ್ನ ವಿವಾಹವನ್ನು ಸಾಧಿಸು, ನೀನೇ ನನ್ನ ತಾಯಿ, ತಂದೆ. ಅಣ್ಣ ಮತ್ತು ಸೋದರಮಾವನಾಗಿದ್ದೀಯೆ! ಭಕ್ತಾಗ್ರಣಿಯಾದ ಪ್ರಹ್ಲಾದ, ಅಕ್ರೂರ, ಧ್ರುವಕುಮಾರ, ಗಜೇಂದ್ರ, (ಸುಗ್ರೀವ), ಇವರೆಲ್ಲರೂ ನೀನೇ ಆಗಿರುವ. ಉದ್ಧವ, ಬಲಿರಾಜ, ಅಜಾಮಿಳ, ದ್ರೌಪದಿಯರೂ ನೀನೇ. ಭಕ್ತನಾದ ವಿಭೀಷಣನೂ ನೀನೇ. ದೇವಿ, ಈ ಭಕ್ತರೆಲ್ಲರೂ ನನಗೆ ಪ್ರಾಣಸಮಾನರು. ಇವರಂತೆ ಇನ್ನುಳಿದ ನನ್ನೆಲ್ಲ ಭಕ್ತರೂ ಸಹ ನೀನೇ ಆಗಿದ್ದೀಯೆ. ಈ ಮಂಗಳಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸು. ನಿನ್ನನ್ನು ನೋಡುತ್ತಿದ್ದರೆ ನಿರಂತರವೂ ನನ್ನ ಮನಸ್ಸು ಹರ್ಷಪುಳಕಿತವಾಗುವುದು. ಬಕುಳೇ! ನನ್ನ ದುಃಖ ಪರಿಹಾರ ಮಾಡಲೆಂದೇ ಹರಿಯು ನಿನ್ನನ್ನು ಸೃಷ್ಟಿಸಿರುವನು. ಶ್ರೇಷ್ಠವಾದ ಲಗ್ನವನ್ನು ಮಾಡಿಸುವುದು-ಸಾವಿರ ಕೋಟಿ ಗೋವುಗಳು, ಹತ್ತು ಸಾವಿರ ಕುದುರೆಗಳು, ಹಾಗೂ ಬಂಗಾರದ ತಿಲದಾನಗಳಿಗೆ ಸಮಾನವಾದುದು. ನೀನು ಪದ್ಮಾವತಿಯನ್ನು ನೋಡಿದಲ್ಲಿ ಬಹಳ ಸಂತೋಷಪಡೆಯುವೆ. ಇದರಲ್ಲಿ ಸಂದೇಹವಿಲ್ಲ'' ಎಂದು ಶ್ರೀನಿವಾಸನು ಬಕುಳಾದೇವಿಗೆ ಹೇಳಿದನು.

ಬಕುಳಾದೇವಿಯು ಹೇಳುತ್ತಾಳೆ- ಹೇ ಜಗತ್ತಿಗೆ ಆಶ್ರಯನಾದ ದಯಾನಿಧಿಯೇ, ಶ್ರೀನಿವಾಸ! ಕಾಡಿನಲ್ಲಿ ನೀನು ನಿರೀಕ್ಷಿಸಿದ ಕನ್ಯೆಯ ನಗರಕ್ಕೆ ಹೋಗುವ ಮಾರ್ಗವನ್ನು ತಿಳಿಸು. ನಾನು ಆ ಮಾರ್ಗವಾಗಿ ಪ್ರಯಾಣ ಬೆಳೆಸುವೆನು. ಬ್ರಹ್ಮರುದ್ರಾದಿನಿಯಾಮಕನೇ! ಪೂರ್ವದಲ್ಲಿ ಆ ಕನ್ಯೆಯು ಯಾರಾಗಿದ್ದಳು? ಈ ಜಗತ್ತಿನಲ್ಲಿ ಅವಳು ಅವತರಿಸಲು

ಕಾರಣವೇನು? ಇವೆಲ್ಲವನ್ನು ದಿಟವಾಗಿ ನಿರೂಪಿಸು. ಕಮಲಸಂಭವ-ಕಾಮರಿಪುವಂದ್ಯಚರಣಾರವಿಂದನಾದ ಗೋವಿಂದನು ವರಾಹದೇವನ ಮಡದಿಯಾದ ಧರಣೀದೇವಿಯ ಸಖಿಯಾದ, (ಅಥವಾ) ಆಕಾಶರಾಯನ ಸತಿಯಾದ ಧರಣೀದೇವಿಯ ಗೆಳತಿಯಾದ ಬಕುಳಾದೇವಿಗೆ ಶ್ರೀನಿವಾಸನು ಮೆಲ್ಲ ಮೆಲ್ಲನೆ ಹೇಳತೊಡಗಿದನು.

ಶ್ರೀನಿವಾಸ:- ಬಕುಳಮಾಲಿಕೆ! ಮಂಗಳಪ್ರದಳಾದ ಪದ್ಮಾವತಿಯ ಶುಭಕರವಾದ ಪೂರ್ವಚರಿತೆಯನ್ನೂ, ಇಂದು ಅವಳು ಅವತರಿಸಿದ ಕಾರಣವನ್ನೂ ವಿವರಿಸುವೆನು, ಕೇಳು - ತ್ರೇತಾಯುಗದಲ್ಲಿ ನಾನು ದಶರಥಚಕ್ರವರ್ತಿಗೆ ರಾಮನೆಂಬ ಹೆಸರಿನಿಂದ ಅವತರಿಸಿದೆನು. ನನ್ನ ರಾಜ್ಯಾಭಿಷೇಕ ವಿಚಾರದಲ್ಲಿ ಭಿನ್ನಾಭಿಪ್ರಾಯವುಂಟಾಗಿ ತಂದೆ ಹಾಗೂ ಮಲತಾಯಿ ಕೈಕೇಯಿ ದೇವಿಯರ ಆದೇಶದಂತೆ ಹದಿನಾಲ್ಕು ವರ್ಷ ವನವಾಸ ಮಾಡಲು, ನನ್ನ ಹೃದಯದರಸಿಯಾದ ಸೀತಾದೇವಿ ಮತ್ತು ಅನುಜ ಲಕ್ಷ್ಮಣರೊಡನೆ ದಂಡಕಾರಣ್ಯಕ್ಕೆ ಪ್ರಯಾಣ ಮಾಡಿದೆನು. ಪೂರ್ವದಲ್ಲಿ ಲೋಕಕಂಟನಾಗಿದ್ದ ರಾವಣನೆಂಬ ರಾಕ್ಷಸನಿದ್ದನು. ಅವನು ಜಗದೊಡೆಯನಾದ ರಾಮಚಂದ್ರನ (ನನ್ನ) ಮಡದಿಯಾದ ಸೀತೆಯನ್ನು ಅಪಹರಿಸಿ ಲಂಕೆಗೆ ಕೊಂಡೊಯ್ಯಲು ಸಿದ್ಧನಾಗಿ ಬಂದನು. ಆಗ ಲಕ್ಷ್ಮಣನು ಸೀತೆಯ ಅಪ್ಪಣೆಯಂತೆ ಅಗ್ರಜನಾದ ರಾಮನನ್ನು (ನನ್ನನ್ನು) ನೋಡಲು ಕಾಡಿನ ಬೇರೊಂದೆಡೆಗೆ ಹೋಗಿದ್ದನು. ಹೀಗೆ ರಾಮ-ಲಕ್ಷ್ಮಣರಿಲ್ಲದ ವೇಳೆಯಲ್ಲಿ ಅಲ್ಲಿಗೆ ಬಂದ ರಾವಣನು ಸೀತೆಯನ್ನು ಬಲವಂತದಿಂದ ತನ್ನ ವಿಮಾನಕ್ಕೇರಿಸಲು ಉದ್ಯುಕ್ತನಾಗಲು, ಸೀತೆಯು 'ಹಾ ರಾಮ! ಹಾ ಲಕ್ಷ್ಮಣ, ಅಯ್ಯೋ ರಾಘವ, ಕಾಪಾಡಿ' ಎಂದು ಕೂಗಿ ಅಳಹತ್ತಿದಳು. ಅವಳ ರೋದನ ಧ್ವನಿಯನ್ನಾಲಿಸಿ ವನಾಂತರದಲ್ಲಿದ್ದ ಗಿಡ, ಮರ, ಬಳ್ಳಿ (ಋಷಿಗಳೂ)ಗಳೂ ಆರ್ತನಾದ ಮಾಡಿದವು. ಸೀತೆಯ ಆಕ್ರಂದನವನ್ನು ಕೇಳಿ ಪಾತಾಳಲೋಕದಿಂದ ಅಗ್ನಿದೇವನು ಭೂಮಿಗಾಗಮಿಸಿದನು.

ದುಷ್ಟನೂ, ಅಪ್ರತಿಹತನೂ, ಕ್ರೂರಿಯೂ ಆದ ರಾವಣನು ಜಗನ್ಮಾತೆಯಾದ ಸೀತಾದೇವಿಯನ್ನು ಎಳೆಯಲುದ್ಯುಕ್ತನಾಗಿರುವುದನ್ನು ಕಂಡು ರಾವಣನ ಬಳಿಗೆಬಂದು ಬಹುಬಗೆಯಾದ ಮಾತಿನ ಮೋಡಿಯಿಂದ ರಾವಣನನ್ನು ಮರುಳುಗೊಳಿಸುತ್ತಾ ''ರಾವಣೇಶ್ವರ! ಇವಳು ಜನಕರಾಜನ ಮಗಳಾದ ಸೀತೆಯಲ್ಲ; ಇವಳು ವಿಪ್ರಪತ್ನಿಯು. ನಿನ್ನ ಭಯದಿಂದ ರಾಮನು ಸೀತೆಯನ್ನು ನನ್ನ ಬಳಿ ಬಿಟ್ಟು, ಲಕ್ಷ್ಮಣನೊಡನೆ ಅರಣ್ಯದಲ್ಲಿ ತಿರುಗುತ್ತಿರುವನು. ಮಂಗಳಕರನೂ, ಉದಾರಿಯೂ ಆದ ರಾವಣ! ನೀನು ನನ್ನ ಶಿಷ್ಯನಾಗಿದ್ದೀಯೆ. ನಿನ್ನ ಹಿತಕ್ಕಾಗಿ ಹೇಳುತ್ತಿದ್ದೇನೆ. ಸೀತೆಯೆಂದು ಭ್ರಮಿಸಿ ಭೂಸುರಪತ್ನಿಯನ್ನು ಕೊಂಡೊಯ್ಯಬೇಡ, ನನ್ನ ಬಳಿಯಿರುವ ಸೀತೆಯನ್ನು ತಂದು ನಿನಗೊಪ್ಪಿಸುವೆನು'' ಎಂದು ರಾವಣನಿಗೆ ಪ್ರಲೋಭನ ಮಾಡಿ, ಸೀತಾಮಾತೆಯೊಡನೆ ಪಾತಾಳಕ್ಕೆ ತೆರಳಿ, ಜಾನಕಿಯನ್ನು ಗೌರವದಿಂದ ಪೂಜಿಸುತ್ತಿರಬೇಕೆಂದು ತನ್ನ ಪತ್ನಿಯಾದ ಸ್ವಾಹಾದೇವಿಗೆ ಹೇಳಿ, ಸೀತೆಯನ್ನು ಅವಳಿಗೊಪ್ಪಿಸಿ, ತನ್ನ ಮಂದಿರದಲ್ಲಿದ್ದ ಮಂಗಳಕರಳಾದ ಸೀತೆಯಂತೆಯೇ ಇರುವ ವೇದವತಿ ಎಂಬ ಸೀತಾಕೃತಿಯನ್ನು ದೇವಮಾಯೆಯಿಂದ ಜಾನಕಿಯಂತೆಯೆ ತಯಾರಿಸಿ ಅವಳನ್ನು ರಾವಣನ ಬಳಿಗೆ ಕರೆತಂದು ''ದಶಕಂಠ! ನೋಡು, ಇವಳೇ ನಿಜವಾದ ಸೀತೆಯು'' ಎಂದು, ರಾವಣನನ್ನು ಪ್ರೀತಿಪಡಿಸುವವನಂತೆ ಹೇಳಿ ''ರಾವಣ! ಈ ಸೀತೆಯನ್ನು ಕರೆದುಕೊಂಡು ಇಲ್ಲಿಂದ ಬೇಗನೆ ಹೊರಟುಬಿಡು'' ಎಂದನು.

ರಾವಣನಿಗೆ ರುದ್ರದೇವನಲ್ಲಿಯೂ, ಅಗ್ನಿದೇವನಲ್ಲಿಯೂ ಭಕ್ತಿಯಿರುವುದರಿಂದ ಅಗ್ನಿಯ ಮಾತನ್ನು ನಂಬಿ, ವೇದವತಿಯನ್ನೇ ಸೀತೆಯೆಂದು ಭ್ರಮಿಸಿ ಅಜ್ಞಾನದಿಂದ ಮೋಹವಶನಾಗಿ ಆ ಸೀತಾಕೃತಿಯನ್ನು ಕರೆದುಕೊಂಡು ಲಂಕೆಗೆ ಹೋಗಿ ಅಲ್ಲಿ ಅಶೋಕವನದಲ್ಲಿ ಶಿಂಶಿಪಾವೃಕ್ಷದ ಬುಡದಲ್ಲಿ (ಬನ್ನಿಯಮರದ ಕೆಳಗೆ) ವೇದವತಿಯನ್ನು ಸ್ಥಾಪಿಸಿ ಶ್ರೀಹರಿಯಿಂದ ಚೋದಿತನಾಗಿ 'ನಾನು ಕೃತಕೃತ್ಯನಾದೆ' ಎಂದು ತಿಳಿದನು. ಜಗತ್ಪ್ರಭುವಾದ ಶ್ರೀರಾಮಚಂದ್ರನು ಮುಂದೆ ವಾನರ ಸೈನ್ಯದೊಡನೆ ಲಂಕೆಗೆ ಹೋಗಿ, ರಾಕ್ಷಸಗಣಸಹಿತವಾಗಿ ನೀಚನಾದ ರಾವಣನನ್ನು ಸಂಹರಿಸಿ, ಸೀತಾದೇವಿಯನ್ನು

ಪಡೆದು ಅಯೋಧ್ಯೆಗಾಗಮಿಸಿದನು. ಅಲ್ಲಿ ಲೋಕಾಪವಾದ ಭಯದಿಂದ ಸೀತೆಯ ಪಾತಿವ್ರತ್ಯ ಪರೀಕ್ಷೆಗಾಗಿ ಜಾನಕಿಯನ್ನು ''ಅಗ್ನಿಪ್ರವೇಶಮಾಡಿ ನಿನ್ನ ಸತೀತ್ವವನ್ನು ದೃಢಪಡಿಸು''ವಂತೆ ಶ್ರೀರಾಮನು ಸೀತೆಗೆ ಆಜ್ಞಾಪಿಸಿದನು. ಪತಿಯ ಅಣತಿಯಂತೆ ಸೀತಾಮಾತೆಯು ಅಗ್ನಿಪ್ರವೇಶ ಮಾಡಿದಳು. ಆದರೇನಾಶ್ಚರ್ಯ! ಆ ಅಗ್ನಿಜ್ವಾಲೆಯಿಂದ, ಒಂದೇ ರೂಪ, ಆಕಾರ, ಆಭರಣಗಳಿಂದ ಅಲಂಕೃತರಾದ ಇಬ್ಬರು ಸೀತೆಯರು ಮೇಲೆದ್ದು ಬಂದರು! ಜನರು ಈ ವಿಚಿತ್ರವನ್ನು ಕಂಡು ವಿಸ್ಮಿತರಾದರು. ದೇವತೆಗಳು ಪುಷ್ಪವೃಷ್ಟಿ ಮಾಡಿದರು. ಜನರು ಸೀತೆಯು ಪೂತಾತ್ಮಳು ಮಹಾ ಪತಿವ್ರತೆಯೆಂದು ಅವಳನ್ನು ಕೊಂಡಾಡಿ ಹರ್ಷಧ್ವನಿಗೈದರು. ಆಗ ಶ್ರೀರಾಮನು ಅಚ್ಚರಿಗೊಂಡವನಂತೆ ನಟಿಸುತ್ತಾ ಪ್ರಿಯಳಾದ ಸೀತೆಯನ್ನವಲೋಕಿಸಿ ''ದೇವಿ! ಇದೇನಚ್ಚರಿ! ಅಗ್ನಿಪ್ರವೇಶಮಾಡಿದ ನೀನು ನಿನ್ನ ಆಕಾರ-ರೂಪ-ಅಲಂಕಾರಗಳಿಂದ ಕಂಗೊಳಿಸುವ ಮತ್ತೊಬ್ಬ ಸೀತೆಯೊಡನೆ ಬಂದಿರುವೆಯಲ್ಲ!, ನಿನ್ನಂತೆಯೇ ಇರುವ ಈ ಶುಭಾಂಗಿ ಯಾರು? ಇವಳಾರೆಂಬುದನ್ನು ನಾನರಿಯದವನಾಗಿದ್ದೇನೆ, ಪ್ರಿಯೇ, ಇವಳಾರು?'' ಎಂದನು.

ಸೀತೆ :- ಆರ್ಯಪುತ್ರ! ಇವಳು ಮಹನೀಯಳು. ಇವಳ ಹೆಸರು ವೇದವತಿ ಎಂದು. ಇವಳು ಅಗ್ನಿದೇವನ ಮಡದಿಯಾದ ಸ್ವಾಹಾದೇವಿಯ ಸನ್ನಿಧಿಯಲ್ಲಿದ್ದವಳು. ಅಗ್ನಿಲೋಕದಲ್ಲಿ ನಾನು ಸ್ವಾಹಾದೇವಿಯ ಮನೆಯಲ್ಲಿ ಅವಳಿಂದ ಪೂಜೆಗೊಳ್ಳುತ್ತಾ ಅಲ್ಲಿ ಸುಖವಾಗಿರುವಾಗ, ಈ ದೇವಿಯು ನಿರ್ನಿಮಿತ್ತವಾಗಿ ರಾವಣನ ಬಳಿ ನಾನು ಅನುಭವಿಸಬೇಕಾಗಿದ್ದ ಎಲ್ಲ ದುಃಖವನ್ನೂ, ನನ್ನ ಮೇಲಿನ ಕಾರುಣ್ಯದಿಂದ ತಾನೇ ರಾವಣನ ಸೆರೆಯಾಳಾಗಿದ್ದು, ಲಂಕೆಯಲ್ಲಿದ್ದು ಅನುಭವಿಸಿರುವಳು. ಆದ್ದರಿಂದ ಹೇ ಪ್ರಭು, ರಾಮಚಂದ್ರ! ನೀನು ಇವಳನ್ನು ವೈದಿಕಮಂಗಳವಿಧಿಪೂರ್ವಕವಾಗಿ ವಿವಾಹವಾಗಿ ಪತ್ನಿಯನ್ನಾಗಿ ಸ್ವೀಕರಿಸು''.

ಶ್ರೀರಾಮ:- (ಪ್ರಿಯಸತಿಯ ನುಡಿಯನಾಲಿಸಿ) ''ದೇವಿ! ನಾನು ಈ ಅವತಾರದಲ್ಲಿ ಏಕಪತ್ನಿವ್ರತಸ್ಥನಾಗಿರುವುದನ್ನು ನೀನು ತಿಳಿದಿರುವೆ. ನಾನು ಅನೇಕರಿಗೆ ಪತಿಯಾಗುವೆನೆಂದು ವರವನ್ನು ದಯಪಾಲಿಸಿರುವುದರಿಂದ ದ್ವಾಪರಯುಗದ ಅಂತ್ಯಭಾಗದಲ್ಲಿ, (ಇಪ್ಪತ್ತೆಂಟನೆಯ ಕಲಿಯುಗದಲ್ಲಿ) ನನ್ನ ಮುಂದಿನ ಅವತಾರದಲ್ಲಿ ಇವಳನ್ನು ಪತ್ನಿಯಾಗಿ ಸ್ವೀಕರಿಸಿ, ನಿನ್ನ ಮನೋಕಾಮನೆಯನ್ನು ಪೂರೈಸುವೆನು. ಅಲ್ಲಿಯವರೆಗೆ ಈ ವೇದವತಿಯು ಸತ್ಯಲೋಕದಲ್ಲಿ ಬ್ರಹ್ಮದೇವನಿಂದ ಪೂಜಿತಳಾಗಿರಲಿ''. ದಾಶರಥಿಯ ವಚನವನ್ನಾಲಿಸಿ ವೇದವತಿಯು ಶ್ರೀರಾಮ-ಸೀತೆಯರ ಅಪ್ಪಣೆ ಪಡೆದು ಬ್ರಹ್ಮಲೋಕಕ್ಕೆ ಪ್ರಯಾಣ ಬೆಳೆಸಿದಳು.

ಇಂತು ಬಕುಳಾದೇವಿಗೆ ಶ್ರೀನಿವಾಸನು ಹಿಂದಿನ ವೃತ್ತಾಂತವನ್ನು ಅರುಹಿ ''ಬಕುಳೇ! ಪದ್ಮಾವತಿಯ ಹಿಂದಿನ ಜನ್ಮದ ಕಥೆ, ಈಗಿನ ಅವತಾರದ ಕಾರಣಗಳನ್ನು ತಿಳಿಸಿದ್ದೇನೆ. ನನ್ನ ವಚನವು ಸುಳ್ಳಾಗುವುದಿಲ್ಲವೆಂದು ವೇದವಿದ್ಯಾವಿಶಾರದರು ತಿಳಿಯುವರು (ಹೇಳುವರು)'' ಎಂದು ಹೇಳಲು, ಬಕುಳೆಯು ಪದ್ಮಾವತಿಯ ಹುಟ್ಟು, ಹಿಂದಿನ ಜನ್ಮದ ವೃತ್ತಾಂತಗಳನ್ನು ಕೇಳಿ ಆನಂದನಿರ್ಭರಳಾಗಿ ಕುತೂಹಲದಿಂದ ಶ್ರೀನಿವಾಸನಲ್ಲಿ ಇಂತು ವಿಜ್ಞಾಪಿಸಿದಳು-

ಬಕುಳಾ:- ಪ್ರಭು, ಶ್ರೀನಿವಾಸ! ನಾನು ನಾರಾಯಣಪುರಕ್ಕೆ ತೆರಳುವೆನು. ಸಂಪೂರ್ಣ ಚತುರ್ವಿಧ ಪುರುಷಾರ್ಥವಿಚಾರ ವಿಶಾರದರಾದ, ಪಂಡಿತ ಸಭಾಸದರಿಂದಯುಕ್ತವಾದ, ದೇವತಾಶ್ರೇಷ್ಠರಿಂದ ಸಂಸ್ತೂಯಮಾನವಾದ ಶ್ರೀರಮಾದೇವಿಯನ್ನು ತನ್ನಲ್ಲಿ ಅಡಗಿಸಿಕೊಂಡಿರುವ ಆಕಾಶರಾಜನ ಸಭೆಗೆ ಹೋಗುವೆನು. ಸ್ವಾಮಿ, ನಾರಾಯಣಪುರಕ್ಕೆ ಹೋಗುವ ಮಾರ್ಗವನ್ನು ತಿಳಿಸು.

ಆಗ ''ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃಶ್ರಿಯಃ । ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ''॥ ಎಂಬ ಪ್ರಮಾಣದಂತೆ, ಅಂದರೆ ಸಮಗ್ರವಾದ ಐಶ್ವರ್ಯ, ಸಂಪತ್ತು, ಸಮಗ್ರಪರಾಕ್ರಮ (ಬಲ), ಸಮಗ್ರಕೀರ್ತಿ, ಸಮಗ್ರವಾದ ಸಾಮಾನ್ಯಜ್ಞಾನ ಹಾಗೂ ಸಮಗ್ರವಾದ ವಿಶೇಷಜ್ಞಾನಗಳೆಂಬ ಈ ಆರು ಯಾರಲ್ಲಿ ನಿರವಧಿಕವಾಗಿರುವುದೋ

ಅಂತಹ ಪರಬ್ರಹ್ಮಸ್ವರೂಪನಾದವನಿಗೆ ಭಗವಾನ್ ಎಂದು ಸಂಜ್ಞೆಯು. ಇಂತು ಭಗವಂತನಾದ ಶ್ರೀನಿವಾಸನು ದೇವಮಾಯೆಯಿಂದ ನಿರ್ಮಿತವಾದ ಹೆಣ್ಣು ಕುದುರೆಯ ಮೇಲೆ ಬಕುಳಾದೇವಿಯನ್ನು ಕೂಡಿಸಿ ನಾರಾಯಣಪುರದ ಮಾರ್ಗ ಪರಿಚಯವನ್ನೂ ಮಾಡಬೇಕಾದ ಕರ್ತವ್ಯವನ್ನು ನಿರೂಪಿಸಲಾರಂಭಿಸಿದನು.

ಶ್ರೀನಿವಾಸ:- ಬಕುಳೆ! ಇದೇ ಮಾರ್ಗವಾಗಿ ಬೆಟ್ಟದಿಂದಿಳಿದು, ಪರ್ವತದ ಕೆಳಭಾಗಕ್ಕೆ ಹೋಗು, ಅಲ್ಲಿ ಕಪಿಲ ತೀರ್ಥಾಭಿಮಾನಿದೇವತೆಯಿಂದ ಪೂಜ್ಯನಾದ ರುದ್ರದೇವನಿರುವನು. ಕಪಿಲೇಶ್ವರನ ಸನಿಹದಲ್ಲಿಯೇ ಕಪಿಲತೀರ್ಥವಿದೆ. ನೀನು ನನಗಾಗಿ ಕಪಿಲತೀರ್ಥದಲ್ಲಿ ವಿಧಿಪೂರ್ವಕವಾಗಿ ಸ್ನಾನ ಮಾಡಿ, ಕಪಿಲೇಶ್ವರನನ್ನು ಸಂದರ್ಶಿಸಿ, ನನಗಾಗಿ ಶಾಶ್ವತ ವರವನ್ನು ಬೇಡು – ''ಕರುಣಾಕರ, ಮಂಗಳಕರನಾದ ರುದ್ರದೇವ! ನಿನಗೆ ಶ್ರೀನಿವಾಸನ ನಮಸ್ಕಾರ, ನನಗೆ ಶುಭವನ್ನುಂಟುಮಾಡಿ ನನ್ನ ವಿವಾಹೇಚ್ಛೆಯನ್ನು ನೆರವೇರಿಸು ಎಂದು ಶ್ರೀನಿವಾಸನು ಪ್ರಾರ್ಥಿಸಿದ್ದಾನೆ'' ಎಂದು ಶಿವನಲ್ಲಿ ವಿಜ್ಞಾಪಿಸಿ, ಅಲ್ಲಿಂದ ಶುಕಾಶ್ರಮಕ್ಕೆ ತೆರಳು. ದೇವಿ, ಅಲ್ಲಿ ಪದ್ಮಸರೋವರದಲ್ಲಿ ನನ್ನ ಸಹೋದರರಾದ ಕೃಷ್ಣ-ಬಲರಾಮರಿದ್ದಾರೆ. ಅವರನ್ನು ಭಕ್ತಿಯಿಂದ ನಮಿಸಿ, ನಂತರ ಸುವರ್ಣಮುಖರೀ ನದಿಯನ್ನು ದಾಟಿ, ಆಕಾಶರಾಜನ ಪಟ್ಟಣಕ್ಕೆ ಪ್ರಯಾಣಮಾಡು. ಮಂಗಳಕರಳೆ! ಪದ್ಮಾವತಿಯೊಡನೆ ನನಗೆ ವಿವಾಹವಾಗಲು ಸೂಕ್ತ ಉಪಾಯವನ್ನು ಮಾಡಿ ಕಾರ್ಯಸಾಧಿಸಿಕೊಂಡು ಬಾ.

ಜಗತ್ಪ್ರಭುವಾದ, ದೇವೋತ್ತಮನಾದ ಶ್ರೀನಿವಾಸನಿಂದ ಬೀಳ್ಕೊಂಡು ಬಕುಳಾದೇವಿಯು, ಶೇಷಗಿರಿಯಿಂದ ಕೆಳಗಿಳಿದು ನಿಧಾನವಾಗಿ ಹೊರಟಳು. ಶ್ರೀನಿವಾಸನು ಹೇಳಿದಂತೆಯೇ ಎಲ್ಲ ಕಾರ್ಯವನ್ನೂ ನೆರವೇರಿಸಿ ಕುದುರೆಯನ್ನೇರಿ, ಸುವರ್ಣಮುಖರೀ ನದಿಯನ್ನು ದಾಟಿ, ಅಗಸ್ತ್ಯಾಶ್ರಮಕ್ಕೆ ಆಗಮಿಸಿದಳು, ಅಲ್ಲಿ ಅವಳು ಶಿವನ ದರ್ಶನಕ್ಕಾಗಿ ಬಂದಿದ್ದ ಪದ್ಮಾವತಿಯ ಸಖಿಯರನ್ನು ಕಂಡು ''ನೀವಾರು?'' ಎಂದು ಪ್ರಶ್ನಿಸಿದಳು. ಆಗ ಆ ಕನ್ಯೆಯರು ಹೇಳಿದರು-

ಕನ್ಯೆಯರು:- ನಾವು ಸದಾ ಆಕಾಶರಾಜನ ಸನ್ನಿಧಿಯಲ್ಲಿರುವ, ರಾಜನ ಪರಿವಾರದವರು. ನೆನ್ನೆಯ ದಿನ ನಮ್ಮ ಪದ್ಮಾವತಿಯ ಬಳಿಗೆ ವಿಚಿತ್ರ ತುರುಗಾರೂಢನಾದ, ಮನ್ಮಥನಂತೆ ಸರ್ವಾಂಗ ಸುಂದರನಾದ, ಬೇಡನಂತೆ ಕಾಣುತ್ತಿದ್ದ ಪುರುಷನು ಬಂದನು. ಅವನನ್ನು ಕಂಡು ಪದ್ಮಾವತಿಯು ಭಯ ಹಾಗೂ ಜ್ವರದ ತಾಪದಿಂದ ಬಳಲಿ ಮೂರ್ಛಿತಳಾದಳು. ನಾವು ಅವಳ ಭಯ ಹಾಗೂ ಜ್ವರ ತಾಪಪರಿಹಾರದ ಶಾಂತಿಗಾಗಿ, ಅಗಸ್ತ್ಯೇಶ್ವರನಿಗೆ ಅಭಿಷೇಕ-ಪೂಜೆಯನ್ನು ಮಾಡಿಸಲು ಬಂದಿದ್ದೇವೆ. ಈಗ ನಿನ್ನ ದರ್ಶನವಾಯಿತು.

ರಾಣೀವಾಸದವರ ನುಡಿಯನ್ನಾಲಿಸಿ ಬಕುಳೆಯು ಅವರನ್ನು ಪ್ರಶ್ನಿಸಿದಳು.

ಬಕುಳೆ:- ಅಮ್ಮಾ, ನೀವು ಪದ್ಮಾವತಿಯು ಕಿರಾತನನ್ನು ಕಂಡಳೆಂದು ಹೇಳಿದಿರಲ್ಲವೇ? ಆ ಕಿರಾತನಾರು? ನಿಮಗವನೊಡನೆ ಮಿಲನವೆಂತಾಯಿತು? ದಯಮಾಡಿ ಆ ಎಲ್ಲ ವೃತ್ತಾಂತವನ್ನು ತಿಳಿಸಿರಿ.

ಕನ್ನಿಕೆಯರು:- ಒಂದಾನೊಂದು ದಿನ ನಾವು ಪದ್ಮಾವತಿಯೊಡನೆ ವನಕ್ಕೆ ಬಂದು ಹೂವುಗಳನು ಬಿಡಿಸಿ ಸಂಗ್ರಹಿಸುವ ಕೆಲಸದಲ್ಲಿ ತೊಡಗಿದ್ದವು. ಅದೇ ವೇಳೆಗೆ ಅಲ್ಲಿಗೆ ಆಶ್ಚರ್ಯಕರ ಕುದುರೆಯನ್ನೇರಿದ್ದ ಓರ್ವ ಪುರುಷನು ಬಂದನು. ಪರಸ್ಪರ ನಮಗೂ ಅವನಿಗೂ ಮಾತಿನ ಚಕಮಕಿಯಾಯಿತು. ಅವನು ಅವಾಚ್ಯವಚನಗಳನ್ನಾಡಿದನು. ಅದರಿಂದ ಕೋಪಗೊಂಡ ರಾಜಕುಮಾರಿ ಪದ್ಮಾವತಿಯು, ಅವನೊಡನೆ ಜಗಳವಾಡಿದಳು ಮತ್ತು ನಮ್ಮೊಡನೆ ಸೇರಿ ಅವನಿಗೆ ಕಲ್ಲುಗಳಿಂದ ಹೊಡೆದಳು. ಅದರ ಪರಿಣಾಮವಾಗಿ ಅವನ ಕುದುರೆಯು ಧರೆಗೊರಗಿ ಪ್ರಾಣಬಿಟ್ಟಿತು. ಆಗ ಆ ಕಿರಾತನು ಕುದುರೆಯನ್ನು ಅಲ್ಲಿಯೇ ಬಿಟ್ಟು ಉತ್ತರಾಭಿಮುಖವಾಗಿ ಹೊರಟುಹೋದನು.

ಕಿರಾತನು ನಿರ್ಗಮಿಸಲು ಕಮಲದಲ್ಲಿ ಜನಿಸಿದ, ಅಬಲೆಯಾದ ಪದ್ಮಾವತಿಯು ಎಚ್ಚರತಪ್ಪಿಬಿದ್ದಳು. ನಾವು ಅವಳನ್ನು ಪಲ್ಲಕ್ಕಿ (ಮೇನೆ)ಯಲ್ಲಿ ಕೂಡಿಸಿಕೊಂಡು ರಾಜಧಾನಿಗೆ ತೆರಳಿದೆವು. ಆಕಾಶರಾಜನು ತನ್ನ ಕುಮಾರಿಯು ಪಲ್ಲಕ್ಕಿಯಲ್ಲಿ ಬಂದುದು, ಮೂರ್ಛಿತಳಾಗಿರುವುದನ್ನು ಕಂಡು ಚಿಂತಾಕ್ರಾಂತನಾಗಿ ಬಹುಖಿನ್ನನಾಗಿ ಅತ್ತನು. ತರುವಾಯ ರಾಜನು ಪದ್ಮಾವತಿಯನ್ನು ಮಾತನಾಡಿಸಿದನು. ಆದರವಳು ಉತ್ತರಕೊಡಲಿಲ್ಲ. ಅದರಿಂದ ಮತ್ತಷ್ಟು ದುಃಖಿತನಾಗಿ, ಮಗಳನ್ನು ತೊಡೆಯಮೇಲೆ ಕೂಡಿಸಿಕೊಂಡು, ಆನಂದರಹಿತವಾದ, ಬಾಡಿದ ಪದ್ಮಾವತಿಯ ಮುಖವನ್ನೀಕ್ಷಿಸುತ್ತಾ ''ಅಯ್ಯೋ ಇದೆಂತಹ ಸಂಕಟ ಪ್ರಾಪ್ತವಾಯಿತಲ್ಲ! ನನ್ನ ಪುತ್ರಿಯನ್ನು, ಜಗನ್ನಾಶಕರವಾದ, ಅಸಾಧ್ಯವಾದ ಅದಾವುದು ಭಯಪಡಿಸಿರಬಹುದು? ಆ ಭಯಕಾರಕವಾದುದೇನೆಂಬುದನ್ನು ದೇವಗುರುಗಳಾದ ಬೃಹಸ್ಪತ್ಯಾಚಾರ್ಯರು ತಿಳಿಯುವರು. ಅವರನ್ನಿಲ್ಲಿಗೆ ಕರೆಯಿಸಬೇಕು'' ಎಂದು ನಿಶ್ಚಯಿಸಿ ಮಗನನ್ನು ದೇವಗುರುಗಳನ್ನು ಆಹ್ವಾನಿಸಲು ಕಳುಹಿಸಿದನು. ವಸುಧಾನನು ಬಂದು ಆಹ್ವಾನಿಸಿ ಹೇಳಿದ ಮಾತನ್ನು ಕೇಳಿ, ದೇವಗುರುಗಳು ಕೂಡಲೇ ಅವನೊಡನೆ ಧರೆಗಿಳಿದು ಬಂದು ಅರಮನೆಗೆ ಆಗಮಿಸಿದರು. ದೇವಗುರುಗಳು ಆಗಮಿಸಿದ್ದನ್ನು ಕಂಡು ತನಗೆ ಪ್ರಾಣವು ಬಂದಂತೆ, ತನ್ನ ಪುಣ್ಯವು ಪರಿಪಕ್ವವಾಯಿತೆಂದು ಭಾವಿಸಿ, ಬೃಹಸ್ಪತ್ಯಾಚಾರ್ಯರನ್ನು ಸ್ವಾಗತಿಸಿ, ರತ್ನಮಯ ಭದ್ರಪೀಠದಲ್ಲಿ ಮಂಡಿಸಿ ಅರ್ಘ್ಯ, ಪಾದ್ಯ, ಪುಷ್ಪ, ಗಂಧಾಕ್ಷತೆಗಳಿಂದಲೂ, ಮೃಷ್ಟಾನ್ನಭೋಜನಾದಿಗಳಿಂದಲೂ ಅತಿಥಿ ಸತ್ಕಾರ ಮಾಡಿ, ತನ್ನ ಮಗಳ ವಿಚಾರವನ್ನು ಅರುಹಿ, ಅವಳ ಭಯಪರಿಹಾರದ ಬಗೆಯನ್ನು ತಿಳಿಸುವಂತೆ ಪ್ರಾರ್ಥಿಸಿದನು. ಬೃಹಸ್ಪತ್ಯಾಚಾರ್ಯರು ರಾಜನನ್ನು ಸಾಂತ್ವನಗೊಳಿಸಿ ಹೇಳಹತ್ತಿದರು.

ದೇವಗುರು:- ನರೇಂದ್ರ! ನಿನ್ನ ಮಗಳಿಗೆ ಬಂದೊದಗಿದ ಕಷ್ಟದ ಕಾರಣವನ್ನು ತಿಳಿಸುವೆನು, ಕೇಳು. ನಿನ್ನ ಕುಮಾರಿಯು ಸಖಿಯರೊಡನೆ ಪುಷ್ಪಾವಚಯಕ್ಕಾಗಿ ಅರಣ್ಯಕ್ಕೆ ತೆರಳಿದಾಗ ಅಲ್ಲಿ ಅವಳು ಓರ್ವ ಪುರುಷನನ್ನು ಅವಲೋಕಿಸಿ ಭಯಗೊಂಡಿದ್ದಾಳೆ. ಆ ಭಯಪರಿಹಾರಕ್ಕೆ ಶಾಂತಿ ಮಾಡಿಸಬೇಕು. ಮಹಾರಾಜ! ನೀನು ಅಗಸ್ತ್ಯೇಶ್ವರನಿಗೆ ರುದ್ರ-ಚಮಕ ಪಾರಾಯಣಪೂರ್ವಕವಾಗಿ ಏಕಾದಶವಾರ ರುದ್ರಾಭಿಷೇಕವನ್ನು ಮಾಡಿಸು. ಅದರಿಂದ ಪದ್ಮಾವತಿಯ ಭಯಪರಿಹಾರವಾಗಿ ಮುಂಚಿನಂತಾಗುವಳು.

ಬೃಹಸ್ಪತ್ಯಾಚಾರ್ಯರ ಅಪ್ಪಣೆಯನ್ನು ಶಿರಸಾವಹಿಸಿದ ಆಕಾಶರಾಜನು ನಮ್ಮನ್ನು ಕರೆದು- ''ನನ್ನ ಕುಮಾರಿಯು ಜ್ವರಪೀಡಿತಳಾಗಿ ನರಳುತ್ತಾ ಅಂತಃಪುರದಲ್ಲಿ ಮಲಗಿರುವಳು. ನೀವು ಬ್ರಾಹ್ಮಣರಿಂದೊಡಗೂಡಿ ಅಭಿಷೇಕ-ಪೂಜೆಗಳಿಗೆ ಬೇಕಾದ ಸಮಸ್ತ ಸಾಮಗ್ರಿಗಳನ್ನು ತೆಗೆದುಕೊಂಡು ಹೋಗಿ ರುದ್ರದೇವರಿಗೆ ಏಕಾದಶವಾರ ರುದ್ರಾಭಿಷೇಕ ಮಾಡಿಸಿಕೊಂಡು ಬನ್ನಿ'' ಎಂದು ಆಜ್ಞಾಪಿಸಿದನು. ''ದೇವಿ! ರಾಜನ ಆಣತಿಯಂತೆ ನಾವು ಬಂದೆವು, ಬೃಹಸ್ಪತ್ಯಾಚಾರ್ಯರ ಅಪ್ಪಣೆಯಂತೆ ಬ್ರಾಹ್ಮಣರೂ ಬಂದಿದ್ದಾರೆ. ಅಭಿಷೇಕಕ್ಕಾಗಿ ನಾವೆಲ್ಲರೂ ಈ ಶಿವ ಮಂದಿರಕ್ಕೆ ಬಂದಿದ್ದೇವೆ'' ಎಂದರು. ರಾಜಪರಿವಾರದವರ ಮಾತು ಕೇಳಿ, ಬಕುಳಾದೇವಿಯು ಪರಮಾನಂದಭರಿತಳಾಗಿ, ''ಆಹಾ, ಆತ್ಮಾನುಭವವುಳ್ಳ, ಪರಮಪುರುಷನಾದ, ವ್ಯಾಪಕನಾದುದರಿಂದ ವಿಷ್ಣುನಾಮಕನಾದ ಶ್ರೀಹರಿಯ ತೇಜಸ್ಸನ್ನು ಅಜ್ಞಾನಿಯಾದ ನಾನೇನು ಬಲ್ಲೆ! ಅನಾದಿನಿತ್ಯನೂ, ಪುರುಷೋತ್ತಮನೂ ಆದ ಶ್ರೀಕೃಷ್ಣನನ್ನು ನನ್ನ ಮಗನೆಂದು ತಿಳಿದು ವರ್ತಿಸಿದ್ದರಿಂದ ವ್ಯರ್ಥವಾಗಿ ನನಗೀಜನ್ಮವು ಬಂದೊದಗಿತು! ಅಯ್ಯೋ, ನನಗೆ ಧಿಕ್ಕಾರವಿರಲಿ'' ಎಂದು ನೊಂದುಕೊಂಡಳು. ಆಗ ಪದ್ಮಾವತಿಯ ಸಖಿಯರು ''ಎಲೈ ಬಾಲೆ! ನೀನು ಈಗ ಎಲ್ಲಿಗೆ ಹೋಗುವೆ? ಏತಕ್ಕಾಗಿ ಹೋಗುತ್ತೀಯೆ? ಇಲ್ಲಿಗೇತಕ್ಕೆ ಬಂದೆ? ಅವೆಲ್ಲ ವಿಚಾರಗಳನ್ನೂ ವಿಶದವಾಗಿ ತಿಳಿಸು'' ಎಂದರು. ಬಕುಳಾದೇವಿಯು ತನ್ನಾಗಮನಾದಿ ವೃತ್ತಾಂತವನ್ನಿಂತು ತಿಳಿಸಿದಳು.

ಬಕುಳಾ:- ಕನ್ನಿಕೆಯರೇ! ಸಂದೇಹಕ್ಕೆಡೆಯಿಲ್ಲದಂತೆ ನೀವೆಲ್ಲರೂ ನನ್ನ ಮಾತನ್ನು ಆಲಿಸಿರಿ. ನಾನು ಈಗ ಕಾಂತಿಸಂಪದ್ಯುಕ್ತನಾದ ಶ್ರೀನಿವಾಸನಿಗೆ ದಾಸಿಯಾಗಿದ್ದೇನೆ. ರಾಜಪತ್ನಿಯಾದ ಧರಣಿಯಲ್ಲಿ ನನಗೆ ಅವಶ್ಯಕಾರ್ಯವಿದೆ.

ಪರದೇಶಿಯರು ನಾರಾಯಣಪುರವನ್ನು ಪ್ರವೇಶಿಸುವುದು ಬಹುಕಷ್ಟ, ಆದ್ದರಿಂದ ನಿಮ್ಮ ಜೊತೆಗಿದ್ದರೆ ಸುಲಭವಾಗಿ ನಾನು ನಾರಾಯಣಪುರವನ್ನು ಪ್ರವೇಶಿಸಬಹುದೆಂದು ಭಾವಿಸಿದೇನೆ. ನೀವು ರಾಜಧಾನಿಗೆ ನನ್ನನ್ನೂ ಕರೆದುಕೊಂಡು ಹೋಗಿರಿ.

ಹೀಗೆ ಹೇಳಿ ಬಕುಳಾದೇವಿಯು ಆ ಕನ್ಯೆಯರೊಡನೆ ನಾರಾಯಣಪುರಕ್ಕೆ ಸುಖವಾಗಿ ಬಂದು ಸೇರಿದಳು.

ಇತ್ತ ಶ್ರೀನಿವಾಸನು ಬಕುಳಮಾಲಿಕೆಯನ್ನು ನಾರಾಯಣಪುರಕ್ಕೆ ಕಳುಹಿಸಿದ ಮೇಲೆ ಅವಳು ತನ್ನ ಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸುವಳೆಂಬುದನ್ನು ನಂಬಲಾರದವನಾದನು. ಒಬ್ಬನೇ ಮಗನನ್ನು ಪಡೆದವನು ಮಕ್ಕಳಿಲ್ಲದವನಂತೆಯೇ ಸರಿ! ಒಂದು ಕಣ್ಣುಳ್ಳವನು ನೇತ್ರಹೀನನಂತೆಯೇ ಅಹುದು! ಹೆಂಗಸರು ಮಾಡುವ ಕಾರ್ಯ ಮಾಡದಿದ್ದಂತೆಯೇ ಮತ್ತು ಅದು ಪ್ರಯೋಜನ ರೂಪಫಲವನ್ನು ಖಂಡಿತ ಕೊಡಲಾರದು ಮುಂತಾಗಿ ಆಲೋಚಿಸಿ, ಮಾಯಾವಿಯಾದ, ಅಪೇಕ್ಷಿಸಿದ ರೂಪಗಳನ್ನು ತಾಳಲು ಸಮರ್ಥನಾದ, ಗೋವರ್ಧನಗಿರಿಧಾರಿಯೂ, ವೇದಪ್ರತಿಪಾದ್ಯ ಮಹಿಮನೂ ಆದ ಶ್ರೀನಿವಾಸನು ತಾನೇ ಹೆಣ್ಣುರೂಪಧರಿಸಲು ನಿಶ್ಚಯಿಸಿ, ಕೊರವಂಜಿಯ ರೂಪ ಧರಿಸಿದನು ಮತ್ತು ಅದಕ್ಕೆ ತಕ್ಕಂತೆ ಅಲಂಕಾರ ಮಾಡಿಕೊಂಡನು. ಆಗ ಶ್ರೀನಿವಾಸನು ನಾರುಬಟ್ಟೆಯನ್ನುಟ್ಟು, ಹರಿದು ತೂತಾಗಿರುವ ಕುಪ್ಪಸವನ್ನು ತೊಟ್ಟು, ಬ್ರಹ್ಮದೇವನನ್ನು ಮಗುವಾಗಿಯೂ, ರುದ್ರದೇವನನ್ನು ಊರುಗೋಲಾಗಿಯೂ; ಜಗತ್ತಿಗೆ ಆಧಾರವಾದ ತ್ರಿಗುಣೋಪೇತವಾದ ಬ್ರಹ್ಮಾಂಡವನ್ನು ಬುಟ್ಟಿಯಾಗಿ ಮಾಡಿಕೊಂಡು ಉದ್ದವಾದ ಕೇಶಗಳನ್ನು ತುದಿಗಂಟು ಹಾಕಿಕೊಂಡು, ಅಥವಾ ಉದ್ದವಾದ ಕೂದಲುಗಳು ಎಲ್ಲೆಡೆ ಬರುವಂತೆ ಕೆದರಿಕೊಂಡು, ಐದನೂರು ವರ್ಷ ವಯಸ್ಸಾದ ಮುದುಕಿಯಂತೆ ಕಾಣುತ್ತಾ, ಗುಲಗುಂಜಿ ಸರಗಳಿಂದ ಅಲಂಕಾರ ಮಾಡಿಕೊಂಡು, ಶಂಖಬದ್ಧವಾದ ಹಾರಗಳನ್ನು ಹಾಕಿಕೊಂಡು, ಗೋಧಿ, ಹೆಸರು, ಉದ್ದು, ಭತ್ತ, ತೊಗರಿ, ಅವರೆ, ಹುರಳಿ, ಎಳ್ಳು, ಕಡಲೆಗಳೆಂಬ ನವವಿಧಧಾನ್ಯಗಳಿಂದ ತುಂಬಿದ ಬಿದರಿನ ಬುಟ್ಟಿಯನ್ನು ತಲೆಯಮೇಲಿಟ್ಟುಕೊಂಡನು! ಆ ಕೊರವಂಜಿಯ ರೂಪ ವಿಚಿತ್ರವಾಗಿದ್ದಿತು. ಅವಳ ಉದರವು ಉದ್ದವಾಗಿ ಜೋಲು ಬಿದ್ದಿದ್ದಿತು, ಕಿವಿಗಳೂ ಜೋಲು ಬಿದ್ದಿದ್ದವು. ಜೋಲು ಬಿದ್ದ ಸ್ತನೋಪೇತಳಾದ, ಬಾಡಿದ ಮುಖವುಳ್ಳ, ಧರ್ಮದೇವಿಯೆಂಬ ಹೆಸರಿನ ಆ ಕೊರವಂಜಿಯು, ನಾಭಿಕಮಲಸಂಜಾತನಾದ ಬ್ರಹ್ಮನನ್ನು ಎಳುತಿಂಗಳ ಕೂಸಾಗಿ ಮಾಡಿಕೊಂಡು, ಒಣಕಲುದೇಹ, ಉದ್ದ ತೋಳುಗಳುಳ್ಳ, ಅಳುತ್ತಲಿರುವ ಕೂಸನ್ನು ನಾರುಬಟ್ಟೆಯಿಂದ ತನ್ನ ಬೆನ್ನಿಗೆ ಕಟ್ಟಿಕೊಂಡು, ಜಗನ್ನಿಯಾಮಕಳಾದ ಆ ಕಣಿಹೇಳುವ ಧರ್ಮದೇವತೆಯು ನಾರಾಯಣಪುರಕ್ಕೆ ಆಗಮಿಸಿದಳು.

ಕಮಲಜಕುಮಾರನಾದ ನಾರದಮುನಿವಂದಿತಳಾದ (ನಾರದ-ಬ್ರಹ್ಮರಿಂದ ನಮಸ್ಕೃತಳಾದ) ಕೊರವಂಜಿಯು ನಾರಾಯಣಪುರಕ್ಕೆ ಬಂದು ಗಟ್ಟಿಯಾಗಿ ''ಪುರನಿವಾಸಿಗಳೇ ಕೇಳಿರಿ, ಮಕ್ಕಳಿಲ್ಲದವರಿಗೆ ಮಕ್ಕಳು; ಪತಿಗಳಿಲ್ಲದವರಿಗೆ (ಮದುವೆಯಾಗದವರಿಗೆ) ಪತಿಗಳು; ಬಂಧುರಹಿತರಿಗೆ ಬಾಂಧವರುಗಳನ್ನು ನೀಡುವೆನು. ಅಥವಾ ನಿಮ್ಮ ಮಕ್ಕಳು, ಪತಿಗಳು ಹಾಗೂ ಬಾಂಧವರ ಭವಿಷ್ಯವನ್ನು ತಿಳಿಸುತ್ತೇನೆ'' ಎಂದು ಕೂಗಿ ಹೇಳಹತ್ತಿದಳು. ಅವಳ ಘೋಷಣೆಯನ್ನಾಲಿಸಿ ಪುರವನಿತೆಯರು ರಾಣಿ ಧರಣಿದೇವಿಯ ಬಳಿಗೆ ಬಂದು ''ಮಹಾರಾಣಿ! ನರನಾರಾಯಣಾಶ್ರಮದಿಂದ ಧರ್ಮದೇವಿಯೆಂಬ ಹೆಸರಿನ ಕೊರವಂಜಿಯು ಬಂದಿದ್ದಾಳೆ. ವೃದ್ಧಳಾದ ಅವಳು ಜ್ಞಾನವೃದ್ಧಳಂತೆ ಕಾಣುತ್ತಿರುವಳು. ಮಿತಭಾಷಿಣಿಯಾಗಿರುವಳು. ಎಲ್ಲರ ಮನದಲ್ಲಿರುವುದನ್ನು ಭೂತ-ಭವಿಷ್ಯತ್- ವರ್ತಮಾನಗಳನ್ನು ತಿಳಿಸುವುದಾಗಿ ಪುನಃ ಪುನಃ ಹೇಳುತ್ತಿರುವಳು. ದೇವಿ, ಆ ಧರ್ಮದೇವಿಯನ್ನು ನಿನ್ನ ಮನೆಗೆ ಬೇಗನೆ ಕರೆಸು ಎಂದು ಹೇಳಿದರು. ಅವರ ಮಾತು ಕೇಳಿ ಧರಣೀದೇವಿಯು ''ಈಗಲೀಗ ನನ್ನ ಭಾಗ್ಯವು ಬಂದೊದಗಿತು!'' ಎಂದಾಲೋಚಿಸಿ, ಧರ್ಮದೇವಿಯನ್ನು ಕರೆತರುವಂತೆ ಹೇಳಿಕಳಿಸಿದಳು. ಆಗ ರಾಣಿಯ ಸಖಿಯರು ಕೊರವಂಜಿಯ ಬಳಿಗಾಗಮಿಸಿ ''ಅಮ್ಮಾ, ಮಂಗಳಪ್ರದಳೇ!

ನಮ್ಮ ಮಹಾರಾಣಿಯು ಅರಮನೆಗೆ ನಿನ್ನನ್ನು ಆಹ್ವಾನಿಸಿದ್ದಾಳೆ. ಬೇಗ ರಾಣಿಯ ಬಳಿಗೆ ಬಾರಮ್ಮಾ'' ಎಂದು ಕರೆದರು. ಅವರ ನುಡಿ ಕೇಳಿ ಪತಿವ್ರತೆಯಾದ ಧರ್ಮದೇವಿಯು ಮೆಲ್ಲಮೆಲ್ಲನೆ ಇಂತೆಂದಳು-

ಧರ್ಮದೇವಿ:- ಸಖಿಯರೇ, ನಾನು ಕಡುಬಡವಳು, ಸೊಟ್ಟಗಿರುವವಳು (ಕುರೂಪಿ), ಆ ಮಹಾರಾಣಿಯು ಭಾಗ್ಯವಂತಳು. ಎಲೈ ಮಂದಹಾಸಿನಿಯರೇ! ನಿಮ್ಮ ರಾಣಿಯು ನನ್ನನ್ನು ಬರಹೇಳಿರುವುದು ಬಹುಶಃ ವಿನೋದ ಹಾಗೂ ತಮಾಷೆಗಾಗಿಯೇ ಇರಬಹುದೆಂದು ನಾನು ಭಾವಿಸುವೆನು. ನಾನು ಉಟ್ಟಿರುವ ಬಟ್ಟೆಯನ್ನು ನೋಡಿರಿ, ನನ್ನೀ ಬಡಕಲು ಕೂಸನ್ನು ನೋಡಿರಿ, ನಾನು ಧರಿಸಿರುವ ಈ ಗುಲಗಂಜಿ, ಕರಿಮಣಿ, ಶಂಖಗಳ ಆಭರಣಗಳನ್ನು ನೋಡಿರಿ, ನವಧಾನ್ಯಗಳಿಂದ ಬೆರತಿರುವ ಬುಟ್ಟಿಯನ್ನು, ಗುಲಗಂಜಿಯಿಂದಲಂಕೃತನಾದ ಆಹಾರ ಕಾಣದ ನನ್ನ ಮಗನನ್ನೂ, ನನನ್ನೂ ನೋಡಿ ಹಾಸ್ಯಮಾಡಲೆಂದೇ ಕರೆದಿರುವಳು! ಆಯತಾಕ್ಷಿಯರೇ, ನಾನು ಬರುವುದಿಲ್ಲ, ರಾಜಮಂದಿರದಲ್ಲಿ ನನಗೇನು ಕೆಲಸ?

ಧರ್ಮದೇವಿಯ ಮಾತು ಕೇಳಿ, ಆ ಸಖಿಯರು ಧರಣೀದೇವಿಯ ಬಳಿಗೆ ಬಂದು ಕೊರವಂಜಿಯು ಹೇಳಿದ ಮಾತನ್ನು ತಿಳಿಸಿದರು. ಆಗ ರಾಣಿಯು ತಾನೇ ಸ್ವತಃ ಧರ್ಮದೇವಿಯ ಬಳಿಗೆ ಬಂದು ಹೀಗೆಂದಳು-

ಧರಣಿ:- ಮಹನೀಯಳೇ! ನಮ್ಮ ಅರಮನೆಗೆ ಬಾರಮ್ಮ, ನೀನು ಸಾಕಾರಳಾದ ಧರ್ಮದೇವತೆಯೆ ಆಗಿದ್ದೀಯೆ. ನನಗೆ ಮಂಗಳಾಭ್ಯುದಯ ಮಾಡುವ ನೀನು ದೈವಯೋಗದಿಂದ ಇಲ್ಲಿ ಬಂದಿರುವೆ. ನನ್ನ ಮಂದಿರಕ್ಕೆ ಬಾರಮ್ಮ.

ಅರಮನೆಗೆ ರಾಣಿಯೊಡನೆ ಬಂದು ಕೊರವಂಜಿಯು ಹೇಳಹತ್ತಿದಳು. ''ಎಲೈ ಸಾಧ್ವಿ, ಸತ್ಯವಾಗಿ ಹೇಳುವೆನು. ಕೇಳು, ನನ್ನ ಮಾತು ಸುಳ್ಳಾದರೆ ನನ್ನನ್ನು ಈ ಪುರದಿಂದ ಹೊರದಬ್ಬಿಸಿ ನನ್ನ ಕೈಗಳನ್ನು ಕತ್ತರಿಸಿ ಹಾಕಿಸು. ನನ್ನ ಮಾತು ಕಠಿಣವಾಗಿದೆ. ಆದರೆ ನನ್ನ ಮಾತು ಸತ್ಯವು. ಅದು ಸುಳ್ಳಾದರೆ, ನನ್ನ ಕೈಗಳನ್ನು ಕಡಿಸಿಹಾಕು. ರಾಜಕಾಂತೆ! ಕಾಂತಿಸಂಪದ್ಭರಿತನಾದ, ವೇದ ಪ್ರತಿಪಾದ್ಯಮಹಿಮನಾದ ನರನಾರಾಯಣನು ನನ್ನ ಪತಿಯು. ಅವನ ವೀರ್ಯದಿಂದ ಜನಿಸಿದ ನನ್ನೀ ಮಗನನ್ನು ಪ್ರಜಾಪತಿ (ಬ್ರಹ್ಮ)ನೆಂದು ಜ್ಞಾನಿಗಳು ತಿಳಿಯುವರು. ನರನಾರಾಯಣನ ಅಪ್ಪಣೆಯಂತೆ ಇಲ್ಲಿಗೆ ಬಂದಿದ್ದೇನೆ. ರಾಣಿ! ಹಿಂದಾದುದು, ಇಂದಾಗುವುದು, ಆಗುತ್ತಿರುವುದು ಮತ್ತು ಮುಂದಾಗುವುದನ್ನು ಸಹ ಹೇಳುವೆನು'', ಎಂದೆನಲು ಧರಣೀದೇವಿಯು ಕೊರವಂಜಿಯನ್ನು ಸಮಾಧಾನಪಡಿಸಿ, ಧರ್ಮದೇವಿಯನ್ನು ರತ್ನಪೀಠದಲ್ಲಿ ಮಂಡಿಸಿದಳು. ಪೀಠದಲ್ಲಿ ಸ್ಥಿರವಾಗಿ ಕುಳಿತು ಸಂತೋಷಭರಿತಳಾದ ಕೊರವಂಜಿಯು ಮೆಲ್ಲನೆ ಹೇಳಿದಳು.

ಧರ್ಮದೇವಿ:- ಶುಭಾಂಗಿ! ನೀನು ಈಗ ಮಂಗಳಸ್ನಾನ ಮಾಡು. ಶುಭ್ರವಾದ ಕಂಚುಕ-ಸೀರೆಗಳನ್ನು ಧರಿಸು ಶ್ರೀಹರಿಗೆ ಪ್ರಿಯವಾದ ಗುರು-ದೇವ ನಮಸ್ಕಾರವನ್ನು ಮಾಡಿ ಬಾ.

ಧರಣೀದೇವಿಯು ಕೊರವಂಜಿಯು ಹೇಳಿದಂತೆಯೇ ಮಾಡಿ ಧರ್ಮದೇವಿಗೆ ಅಭಿಮುಖವಾಗಿ ಕುಳಿತು ''ಅಮ್ಮಾ, ಮಂಗಳಕರಳಾದ ಧರ್ಮದೇವಿ! ಈಗ ನಾನೇನು ಮಾಡಬೇಕು, ತಿಳಿಸು. ನಿನ್ನ ಆದೇಶದಂತೆ ವರ್ತಿಸುವೆನು'' ಎಂದಳು.

ಧರ್ಮದೇವಿ:- ಹೇ ಕಲ್ಯಾಣಿ! ನನ್ನ ಪೂರ್ವಿಕರಾದ ದೇವತೆಗಳಿಗೆ ಮುತ್ತು ಅಕ್ಕಿಗಳನ್ನು ಬಂಗಾರದ ಮರದಲ್ಲಿ ತುಂಬಿ ಬಾಗಿನವನ್ನು ಕೊಡು.

ಧರಣೀದೇವಿಯು ಕೊರವಂಜಿಯು ಹೇಳಿದಂತೆಯೇ ಸುವರ್ಣಮಯ ಮರದಲ್ಲಿ ಮುತ್ತು-ಅಕ್ಕಿ ಮುಂತಾದುವನ್ನು ತುಂಬಿಸಿ ಭಕ್ತಿಯಿಂದ ಧರ್ಮದೇವಿಯ ಮುಂದಿಟ್ಟು, ''ಸರ್ವಜ್ಞಳಾದ ಧರ್ಮದೇವಿ! ಸತ್ಯವಾಗಿ ಹೇಳು. ನನ್ನ ವ್ಯಥೆಯನ್ನು ಪರಿಹರಿಸು'' ಎಂದು ವಿಜ್ಞಾಪಿಸಿದಳು. ಆಗ ಕೊರವಂಜಿಯು ''ಮಹಾರಾಣಿ! ಸತ್ಯವನ್ನೇ ನುಡಿಯುವೆನು. ನನ್ನ ಮಗುವಿಗೆ

ಪಕ್ವವಾದ, ಸಾರಿನೊಡಗೂಡಿದ ಆಹಾರವನ್ನು ನೀಡು, ಅದು ಹಗಲು ಅಥವಾ ನೆನ್ನೆ ರಾತ್ರಿ ಮಾಡಿದ್ದಾದರೂ ಸರಿ, ಕೊಡಮ್ಮ'' ಎಂದಳು.

ಎಲೈ ಜನಕರಾಯನೆ! ಆಗ ಧರಣೀದೇವಿಯು ಪುತ್ರನದ್ವಾರಾ ಬಂಗಾರದ ಬಟ್ಟಲಿನಲ್ಲಿ ಕ್ಷೀರಾನ್ನವನ್ನು ತರಿಸಿಕೊಟ್ಟಳು. ಸ್ವರ್ಣಪಾತ್ರೆಯಲ್ಲಿರುವ ಮಾನುಷಾನ್ನವನ್ನು ಕಂಡು ಕೂಸಿನರೂಪದಲ್ಲಿದ್ದ ಬ್ರಹ್ಮದೇವನು ತಿನ್ನಲಿಲ್ಲ. ಎಲೈ ಜನಕಭೂಪತಿ! ಮನುಷ್ಯನಿರ್ಮಿತ ಅನ್ನವನ್ನು ತಿನ್ನದೇ ಆ ಮಗುವು ಅಳಹತ್ತಿತು. ಅಳುತ್ತಿರುವ ಕೂಸನ್ನು ನಿಂದಿಸಿ, ಎರಡೇಟು ಹೊಡೆದು ''ದುಷ್ಟಾಚಾರವುಳ್ಳವನೇ, ಗೆಡ್ಡೆ ಗೆಣಸುಗಳನ್ನು ತಿಂದು ಜೀವಿಸುವ ನೀನು ಮಹಾದರಿದ್ರನು. ರಾಜನಿರ್ಮಿತವಾದ, ಮಧುರವಾದ ಈ ಹಾಲನ್ನವನ್ನು ಹೇಗೆ ತಿನ್ನುವೆ? ತಾಯಿ, ಧರಣಿ! ನನ್ನೀ ದರಿದ್ರ ಕೂಸು ಯಾವಾಗಲೂ ಹೀಗೆಯೇ ಅಳುತ್ತಿರುವುದು ನಾನೇನು ಮಾಡಲಮ್ಮ'' ಎಂದು ಮಗನನ್ನು ಜಬರಿಸಿ, ಉತ್ಕೃಷ್ಟವಾದ ಕ್ಷೀರಾನ್ನವನ್ನು ತಾನೇ ತಿಂದು ''ನನ್ನ ಉದರದಲ್ಲಿರುವ ಆಹಾರವು ನನ್ನ ಮಗನಿಗೆ ಹಿತಕಾರಕವು'' ಎಂದು ಪೂರ್ಣವಾಗಿ ಹಾಲನ್ನವನ್ನುಂಡು, ಸ್ವಸ್ಥಚಿತ್ತಳಾಗಿ, ''ಎಲೈ ಸುಶ್ರೋಣಿ! ಸತ್ಯವನ್ನು ನಿರೂಪಿಸುವೆನು, ನನಗೆ ತಾಂಬೂಲವನ್ನು ಕೊಡು'' ಎಂದಳು. ಧರಣೀದೇವಿಯು ಏಲಕ್ಕಿ, ಲವಂಗ, ಪಚ್ಚಕರ್ಪೂರ, ಕೇಸರಿ, ವಿಳ್ಳೇದೆಲೆ ಅಡಕೆಗಳಿಂದ ಯುಕ್ತವಾದ ತಾಂಬೂಲವನ್ನು ಕೊಡಿಸಿದಳು.

ಧರ್ಮದೇವಿಯು ಆಗ ಪೂರ್ವಾಭಿಮುಖವಾಗಿ ಕುಳಿತು, ತೊಡೆಯಮೇಲೆ ಮಗುವನ್ನಿಟ್ಟುಕೊಂಡು, ತನ್ನ ಮುಂಭಾಗದಲ್ಲಿ ಬಿದರಿನ ಬುಟ್ಟಿಯನ್ನಿಟ್ಟುಕೊಂಡು ತನ್ನೆರಡು ಪಾದಗಳನ್ನೂ ಅತ್ತಿತ್ತ ಚಾಚಿ ಹೇಳಲಾರಂಭಿಸಿದಳು.

ಈ ಪರಿಯ ವಿಚಿತ್ರ ರೂಪವನ್ನು ಧರಿಸಿರುವ, ಲಕ್ಷ್ಮೀದೇವಿಗೆ ಆಶ್ರಯನಾದ, ಅಂದರೆ ಪ್ರಕೃತಿ ಸಂಬಂಧವುಳ್ಳ ಸಾಮಾನ್ಯ ಮಾನವರಿಗೆ ಉಚಿತವಾದ ಶ್ರೀಕೃಷ್ಣನ ವೈಖರಿಯನ್ನು ನೋಡಲಾಶಿಸಿ, ಪತ್ನೀ-ಪುತ್ರ-ಬಾಂಧವರು ಹಾಗೂ ವಿಮಾನಸಮೂಹಗಳಿಂದ ಯುಕ್ತರಾಗಿ ಬಂದಿರುವ ದೇವತಾ ಶ್ರೇಷ್ಠರೆಲ್ಲರೂ ಅಂಬರದಲ್ಲಿ ನಿಂತು ಶ್ರೀಹರಿಯ ವಿಚಿತ್ರ ಲೀಲಾವಿಲಾಸಗಳನ್ನು ವಿಸ್ಮಯಾನಂದಭರಿತರಾಗಿ, ಸಂಭ್ರಮದಿಂದ ನೋಡುತ್ತಾ ಪರಸ್ಪರ ಮಾತನಾಡಿಕೊಂಡರು! ''ಆಹಾ! ಮಹಾರಾಣಿಯಾದ ಈ ಧರಣೀದೇವಿಯು ಪೂರ್ವಜನ್ಮದಲ್ಲಿ ಅದೆಂತಹ ಪುಣ್ಯಮಾಡಿರಬಹುದು? ಈಗ ಶ್ರೀಲಕ್ಷ್ಮೀನಾಯಕನಾದ, ಷಡ್ಗುಣೈಶ್ವರ್ಯಪೂರ್ಣನಾದ ಶ್ರೀಹರಿಯು ಪ್ರಾಕೃತ ಮಾನವರಂತೆ ವಿಹರಿಸುತ್ತಿರುವನಲ್ಲ!'' ಎಂದು ಕಮಲಸಂಭವನಾದ ಬ್ರಹ್ಮ, ಶಿವ, ಇಂದ್ರಾದಿ ದೇವತೆಗಳು ಕೊಂಡಾಡಿ, ''ಶ್ರೀಹರಿಯ ಈ ಆಶ್ಚರ್ಯಕರ ವಿಚಿತ್ರ ಕಾರ್ಯವು ಕಲಿಕಲ್ಮಷಕಲುಷಿತರಾದ, ಪಾಪಿಗಳಾದ ಮಾನವರ ಉದ್ಧಾರಕ್ಕಾಗಿಯೇ ಆಗಿದೆ! ಅಂತೆಯೇ ಭಗವಂತನಿಂತು ನಟಿಸುತ್ತಿದ್ದಾನೆ'' ಎಂದು ಮುಂತಾಗಿ ಶ್ರೀಹರಿ ಪರಮಾತ್ಮನನ್ನು ಸ್ತುತಿಸಿ ಗಾನಮಾಡಿದರು.

*ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೇಂಕಟೇಶಮಹಾತ್ಮೆಯಲ್ಲಿ*
*ಶ್ರೀಹರಿಯು ಧರಿಸಿದ ಕೊರವಂಜಿ ರೂಪ-ವೇಷ ವರ್ಣನೆಯೆಂಬ ಎಂಟನೆಯ ಅಧ್ಯಾಯವು ಮುಗಿದುದು*

*।। ಶ್ರೀವೇಂಕಟೇಶನಿಗೆ ಅರ್ಪಿತವಾಗಲಿ ।।*

# ಒಂಭತ್ತನೆಯ ಅಧ್ಯಾಯ

*ಮೂಲ— ಶತಾನಂದ ಉವಾಚ -*

**ಭೋಜನಾಂತೇಸ್ಮರನ್ ಬಾಲಾ ದೇವಾನ್ ಸ್ವಕುಲಪೂಜಿತಾನ್ ।**
**ಆದೌ ನಾರಾಯಣಂ ಧ್ಯಾತ್ವಾ ಪಶ್ಚಾಲ್ಲಕ್ಷ್ಮೀಂ ಪಿತಾಮಹಮ್ ॥ 1 ॥**

**ಸರಸ್ವತೀಮುಮಾಕಾಂತಮುಮಾಮಿಂದ್ರಮತಃ ಪರಮ್*।**
**ಶಚೀಮಗ್ನಿಯಮಾದ್ಯಾಂಶ್ಚ ಸದಾರಾನ್ ದಿಕ್ಪತೀನಥ ॥ 2 ॥**

**ಕುಬೇರಮಗ್ನಿಂ ವಾಯುಂಚ ವರುಣಂ ವಾಸುಕಿಂ ತಥಾ ।**
**ದೇವರ್ಷೀನ್ಪಿತರೋ ರಾಜನ್ ಗಂಧರ್ವಾನ್ರಾಜಸತ್ತಮಾನ್ ॥ 3 ॥**

**ಕಾಶೀಶಂ ವಿಶ್ವನಾಥಂ ಚ ಬಿಂದುಮಾಧವಮೇವ ಚ ।**
**ವಿಷ್ಣುಪಾದಂ +ಪ್ರಯಾಗಂ ಚ ಗೋದಾತೀರನಿವಾಸಿನಮ್ ॥ 4 ॥**

**ನಾರಸಿಂಹಂ ಜಗನ್ನಾಥಂ ಪಾಂಡುರಂಗಂ ಮಹಾಬಲಮ್ ।**
**ಪಂಪಾಧ್ಯಕ್ಷಂ ವಿರೂಪಾಕ್ಷಂ ಶ್ರೀಶೈಲಂ ಪುಣ್ಯಕಾನನಮ್ ॥ 5 ॥**

ಶತಾನಂದ ಉವಾಚ = ಶತಾನಂದರು ಹೇಳುತ್ತಿದ್ದಾರೆ, ಭೋಜನಾಂತೇ = ಭೋಜನ ಮಾಡಿದ ಮೇಲೆ, ಬಾಲಾ = ಆ ಧರ್ಮದೇವಿಯು, ಸ್ವಕುಲಪೂಜಿತಾನ್ = ತನ್ನ ಕುಲಪರಂಪರೆಯಿಂದ ಪೂಜಿತರಾದ, ದೇವಾನ್ = ದೇವತೆಗಳನ್ನು, ಅಸ್ಮರತ್ = ಸ್ಮರಿಸಿದಳು, ಧ್ಯಾನಮಾಡಿದಳು, ಆದೌ = ಮೊದಲು, ನಾರಾಯಣಂ = ಶ್ರೀಮನ್ನಾರಾಯಣನನ್ನು, ಪಶ್ಚಾತ್ = ಆನಂತರ, ಲಕ್ಷ್ಮೀಂ = ಶ್ರೀರಮಾದೇವಿಯನ್ನು, ಪಿತಾಮಹಂ = ಬ್ರಹ್ಮದೇವನನ್ನು, ಧ್ಯಾತ್ವಾ = ಧ್ಯಾನಿಸಿ ॥ 1 ॥ ಸರಸ್ವತೀಂ = ಗೀರ್ವಾಣಿಯನ್ನು, ಉಮಾಕಾಂತಂ = ರುದ್ರದೇವನನ್ನು, ಉಮಾಂ = ಪಾರ್ವತಿಯನ್ನು, ಅತಃ ಪರಃ = ಆ ತರುವಾಯ, ಇಂದ್ರಂ = ಇಂದ್ರದೇವನನ್ನು; (ಪಾ:- ಗರುಡಂ ಪನ್ನಗೇಶಾನಂ ಮಹೇಂದ್ರಂ ಚಂಡಶಾಸನಂ - ಗರುಡ, ಆದಿಶೇಷ, ವರಾಹದೇವರು, ಚಂಡಿಕೇಶನನ್ನೂ), ಶಚಿಂ = ಇಂದ್ರಾಣಿಯನ್ನು, ಅಗ್ನಿಯಮಾದ್ಯಾಂಶ್ಚ = ಅಗ್ನಿ-ಯಮಾದಿಗಳನ್ನೂ, ತಥಾ = ಹಾಗೆಯೇ, ಸದಾರಾನ್ = ಪತ್ನಿಯರಿಂದೊಡಗೂಡಿದ, ದಿಕ್ಪತೀನ್ = ದಿಕ್ಪಾಲಕರುಗಳನ್ನು, ಕುಬೇರಂ = ಧನಾಧಿಪನಾದ ಕುಬೇರನನ್ನು, ವಾಯುಂ = ವಾಯುದೇವನನ್ನು, ಚ = ಮತ್ತು, ವರುಣಂ = ವರುಣದೇವನನ್ನು, ವಾಸುಕಿಂ = ವಾಸುಕಿನಾಮಕನಾದ ಸರ್ಪರಾಜನನ್ನು, ತಥಾ = ಅದರಂತೆಯೇ ರಾಜನ್! = ಎಲೈ ಜನಕಮಹಾರಾಜ! ದೇವರ್ಷೀನ್ = ದೇವರ್ಷಿಗಳಾದ ನಾರದಾದಿ ಮುನಿಗಳನ್ನು, ಪಿತರಃ = ಪಿತೃದೇವತೆಗಳನ್ನೂ, ಗಂಧರ್ವಾನ್ = ಗಂಧರ್ವರನ್ನೂ, ರಾಜಸತ್ತಮಾನ್ = ನಳ - ಮುಂತಾದ ರಾಜಶ್ರೇಷ್ಠರನ್ನೂ ॥ 2-3 ॥ ಕಾಶೀಶಂ = ಕಾಶಿಕ್ಷೇತ್ರಕ್ಕೆ ಪ್ರಭುವಾದ ವಿಶ್ವೇಶ್ವರನನ್ನು, ಚ = ಮತ್ತು, ಬಿಂದುಮಾಧವ ಮೇವ = ಬಿಂದುಮಾಧವನನ್ನೂ, ಚ = ಮತ್ತು, ವಿಷ್ಣುಪಾದಂ = ಗಯಾದಲ್ಲಿರುವ

*ಪಾ:- ಗರುಡಂ ಪನ್ನಗೇಶಾನಂ ಮಹೇಂದ್ರಂ ಚಂಡಶಾಸನಂ,

+ ವಿಂಧ್ಯಪಾದಂ

ಶ್ರೀವಿಷ್ಣುಪಾದವನ್ನೂ (ಪಾ-ವಿಂಧ್ಯಾಪಾದಂ = ವಿಂಧ್ಯವಾಸಿನಿಯಾದ, ಶ್ರೀಕೃಷ್ಣಸಹೋದರಿಯಾದ ದುರ್ಗಾದೇವಿಯನ್ನು), ಪ್ರಯಾಗಂ ಚ = ಪ್ರಯಾಗ ಕ್ಷೇತ್ರವನ್ನು, ಅಥವಾ ಪ್ರಯಾಗದಲ್ಲಿರುವ ಗಂಗಾ-ಯಮುನಾ-ಸರಸ್ವತಿಯರನ್ನು (ತ್ರಿವೇಣಿ ಸಂಗಮವನ್ನು), ಗೋದಾತೀರನಿವಾಸಿನಂ = ಗೋದಾವರಿ ತೀರವಾಸಿಯಾದ ಶ್ರೀ ರಾಮಚಂದ್ರನನ್ನು ಅಥವಾ ತ್ರ್ಯಂಬಕೇಶ್ವರನನ್ನು ॥ 4 ॥ ನಾರಸಿಂಹಂ = ಗುಂಜಾನರಸಿಂಹದೇವರನ್ನು, ಜಗನ್ನಾಥಂ = ಜಗನ್ನಾಥಸ್ವಾಮಿಯನ್ನು, ಪಾಂಡುರಂಗಂ = ಪಂಢರಾಪುರದ ಪಾಂಡುರಂಗನನ್ನೂ, ಪಂಪಾಧ್ಯಕ್ಷಂ = ಪಂಪಾಪತಿಯಾದ (ಹಂಪೆಯಲ್ಲಿರುವ) ವಿರೂಪಾಕ್ಷಸ್ವಾಮಿಯನ್ನೂ; ಪುಣ್ಯಕಾನನಂ = ಸುಕೃತಕರ ಅರಣ್ಯವುಳ್ಳ, ಶ್ರೀಶೈಲಂ = ಶ್ರೀಶೈಲಪರ್ವತವನ್ನು (ಮತ್ತು ಅಲ್ಲಿರುವ ಶ್ರೀಮಲ್ಲಿಕಾರ್ಜುನ ಮತ್ತು ಭ್ರಮರಾಂಬೆಯರನ್ನು) ॥ 5 ॥

**ಶ್ರೀವೇಂಕಟಗಿರೀಶಂ ಚ ಕಾಲಹಸ್ತೀಶ್ವರಂ ಹರಮ್ ।**
**ಘಟಿಕಾಚಲಸಂಸ್ಥಾನಂ ವೃದ್ಧಾಚಲನಿವಾಸಿನಮ್ ॥ 6 ॥**

**ವರದಂ ಸರ್ವಲೋಕೇಶಂ ಶ್ರೀರಂಗಂ ಶ್ವೇತರೂಪಿಣಂ ।**
**ಕುಂಭಕೋಣಾಲಯಂ ಕೃಷ್ಣಂ ಶಾರ್ಙ್ಗಪಾಣಿಂ ಮಹೀಪತೇ ॥ 7 ॥**

**ಸೇತುಂ ರಾಮಕೃತಂ ರಾಜನ್ ಪದ್ಮನಾಭಮನಂತರಮ್ ।**
**ಸುಬ್ರಹ್ಮಣ್ಯಂ ಕುಮಾರಾಖ್ಯಂ ಮಧುಸೂದನ ಶಂಕರೌ ॥ 8 ॥**

**ಚಂದ್ರೇಶ್ವರಂ ಚ ಗೋಕರ್ಣಂ ತಥಾ ಹರಿಹರಂ ನೃಪ ।**
**ಗಂಗಾಂ ಗೋದಾವರೀಂ ಕೃಷ್ಣಾಂ ತುಂಗಭದ್ರಾಂ ಮಲಾಪಹಾಮ್ ॥ 9 ॥**

**ಕಾವೇರೀಂ ಕಪಿಲಾಂ ಕ್ಷೀರಾಂ ಸುವರ್ಣಮುಖರೀಂ ತಥಾ ।**
**ಮೂಕಾಂಬಿಕಾಂ ಭೈರವಂ ಚ ಕಾಲಭೈರವಮೇವ ಚ ॥ 10 ॥**

ಶ್ರೀವೇಂಕಟಗಿರೀಶಂ ಚ - ಶ್ರೀ = ಕಾಂತಿಸಂಪನ್ನನೂ, ಶ್ರೀ = ಸಂಪದ್ಯುಕ್ತನೂ, ಶ್ರೀ = ವೇದಪ್ರತಿಪಾದ್ಯ ಮಹಾಮಹಿಮನೂ ಆದ, ವೇಂಕಟಗಿರಿಗೆ ಪ್ರಭುವಾದ ಶ್ರೀನಿವಾಸನನ್ನು ಅಥವಾ ಶ್ರೀಧರಣೀವರಾಹಮೂರ್ತಿಯನ್ನು; ಕಾಳಹಸ್ತೀಶ್ವರಂ = ಕಾಳಹಸ್ತಿಕ್ಷೇತ್ರಕ್ಕೆ ಅಧಿಪನಾದ ಕಾಳಹಸ್ತೀಶ್ವರನೆಂಬ, ಹರಂ = ರುದ್ರದೇವನನ್ನು ; ಘಟಿಕಾಚಲಸಂಸ್ಥಾನಂ = ಘಟಿಕಾಚಲದಲ್ಲಿರುವ, ಚತುರ್ಭುಜ ಮೂರ್ತಿಯಾದ ಶ್ರೀ ಆಂಜನೇಯನನ್ನು (ಪ್ರಾಣದೇವರನ್ನು), ವೃದ್ಧಾಚಲನಿವಾಸಿನಂ = ವೃದ್ಧಾಚಲದಲ್ಲಿರುವ ವಿಷ್ಣುವನ್ನು, (ಮತ್ತು ರುದ್ರನನ್ನು) ॥ 6 ॥ ಮಹೀಪತೇ = ಎಲೈ ಜನಕಭೂಪತಿಯೇ, ಸರ್ವಲೋಕೇಶಂ = ಸಕಲಲೋಕಗಳಿಗೆ ಸ್ವಾಮಿಯಾದ, ವರದಂ = ಕಂಚಿಯ ಶ್ರೀವರದರಾಜಸ್ವಾಮಿಯನ್ನು, ಶ್ವೇತರೂಪಿಣಂ = ಶುಭ್ರಾಕಾರದ ಶ್ರೀರಂಗನಾಥನನ್ನು, ಕುಂಭಕೋಣಾಲಯಂ = ಕುಂಭಕೋಣಕ್ಷೇತ್ರದಲ್ಲಿರುವ ರುದ್ರದೇವನನ್ನು, ಕೃಷ್ಣಂ = ಚಕ್ರಪಾಣಿಯನ್ನು, ಶಾರ್ಙ್ಗಪಾಣಿಂ = ಸಾರಂಗಪಾಣಿಯನ್ನು, ಕೃಷ್ಣಂ = ಮಧುರೆಯಲ್ಲಿರುವ ಶ್ರೀಕೃಷ್ಣನನ್ನು, ರಾಜನ್ = ಜನಕಮಹಾರಾಜ! ರಾಮಕೃತಂ = ಶ್ರೀರಾಮನು ನಿರ್ಮಿಸಿದ, ಸೇತುಂ = ಸೇತುವನ್ನು (ಅಥವಾ ಅಲ್ಲಿರುವ ಗಣಪತಿ, ದೇವಿ, ನವಗ್ರಹಗಳನ್ನು), ರಾಮೇಶ್ವರಂ = ಶ್ರೀರಾಮಪ್ರತಿಷ್ಠಿತ ರಾಮೇಶ್ವರ, ದರ್ಭಶಯನ ರಾಮಚಂದ್ರರನ್ನು, ಪರ್ವತವರ್ಧಿನಿಂ = ಪರ್ವತವರ್ಧಿನಿಯನ್ನು, ಅನಂತರಂ = ತರುವಾಯ, ಪದ್ಮನಾಭಂ = ಅನಂತಶಯನದಲ್ಲಿರುವ ಶ್ರೀ ಅನಂತಪದ್ಮನಾಭನನ್ನು, ಸುಬ್ರಹ್ಮಣ್ಯಂ = ಸ್ವಾಮಿಯನ್ನು ಅಥವಾ ಚಿರುತಣಿಯ ಬಳಿ ಇರುವ ಸುಬ್ರಹ್ಮಣ್ಯನನ್ನು, ಕುಮಾರಂ

= ಕುಮಾರಧಾರೆಯ ಸನಿಹದಲ್ಲಿರುವ ಕುಮಾರಸ್ವಾಮಿಯನ್ನು, ಮಧುಸೂದನ ಶಂಕರೌ = ಶ್ರೀ ಮಧುಸೂದನ ಶಂಕರನನ್ನು ॥ 7–8 ॥ ಚಂದ್ರೇಶ್ವರಂ = ಚಂದ್ರಪ್ರತಿಷ್ಠಿತ ಚಂದ್ರೇಶ್ವರನನ್ನು, ಗೋಕರ್ಣಂ = ಗೋಕರ್ಣದಲ್ಲಿರುವ ರುದ್ರದೇವನನ್ನೂ, ತಥಾ = ಅದರಂತೆಯೇ, ಹರಿಹರಂ = ತುಂಗಾನದೀತೀರದಲ್ಲಿರುವ ಹರಿಹರದಲ್ಲಿ ವಿರಾಜಿಸುವ ಹರಿಹರನನ್ನು, ಹೇ ನೃಪ = ಎಲೈ ಜನಕರಾಯ, ಗಂಗಾಂ = ಅಂತರಗಂಗೆ, ವಿಯದ್ಗಂಗೆ, ಪಾತಾಳಗಂಗೆಯರನ್ನು, ಗೋದಾವರೀಂ = ಸಪ್ತರ್ಷಿಗಳ ಹೆಸರಿನಿಂದ ಏಳು ಭಾಗವಾಗಿ ಹರಿಯುತ್ತಿರುವ ಏಳು ಗೋದಾವರಿ ನದಿಗಳನ್ನು, ಕೃಷ್ಣಾಂ = ಕೃಷ್ಣಾಂ (ಕೃಷ್ಣವೇಣಿ) ನದಿಯನ್ನೂ, ಮಲಾಪಹಾಂ = ಪಾಪನಾಶಕವಾದ, ತುಂಗಭದ್ರಾಂ = ಶ್ರೀ ವರಾಹದೇವರ ದಂಷ್ಟ್ರದಿಂದ ಉದ್ಭವಿಸಿದ ತುಂಗಭದ್ರಾ ನದಿಯನ್ನು, ಕಾವೇರೀಂ = ಕಾವೇರಿ ನದಿಯನ್ನೂ, ಕಪಿಲಾಂ = ಕಪಿಲಾ ನದಿಯನ್ನೂ, ಕ್ಷೀರಾಂ = ಕ್ಷೀರಾವತಿ ನದಿಯನ್ನೂ, ಸುವರ್ಣಮುಖರೀಂ = ಸುವರ್ಣಮುಖರೀ ನದಿಯನ್ನೂ, ತಥಾ = ಹಾಗೆಯೇ, ಮೂಕಾಂಬಿಕಾಂ = ಮೂಕಾಂಬಿಕಾದೇವಿಯನ್ನೂ, ಭೈರವಂ ಚ = ಕಾಲಭೈರವನನ್ನೂ ॥ 10 ॥

**ಕಾಮಾಕ್ಷೀಂ ಚ ವಿಶಾಲಾಕ್ಷೀಂ ಕಮಲಾಕ್ಷೀಂ ವರಪ್ರದಾಮ್ ।**
**ರಮೆ! ಕೊಲ್ಹಾಪುರಧ್ಯಕ್ಷೆ! ಪಾಹಿಮಾಂ ಪರದೇಶಗಾಮ್ ॥ 11 ॥**

**ಸಸ್ಮಾರ ಭಕ್ತಿಭಾವೇನ ಚೋವಾಚ ಮಧುರಂ ವಚಃ ।**
**ಶೃಣು ಮತ್ತಸ್ಸವಿಸ್ತಾರಂ ಶಪೆ ಗುಲ್ಮಂ ಸಪುತ್ರಕಮ್ ॥ 12 ॥**

**ಭರ್ತಾರಂ ಬದರೀವಾಸಂ ಮಾತರಂ ಪಿತರಂ ಗುರುಮ್ ।**
**ಸ್ವಾತ್ಮಾನಂ ತು ಶಪೇ ರಾಜ್ಞಿ! ಸತ್ಯಮಿತ್ಯವಧಾರಯ ॥ 13 ॥**

**ಸತ್ಯಂ ವದಾಮಿ ಸುಶ್ರೋಣಿ! ತಾಂಬೂಲಂ ದೇಹಿಮೇಽಗನೇ ।**
**ಏಲಾಲವಂಗಕರ್ಪೂರ ಜಾತೀಪತ್ರಂ ಸಪೂಗಕಮ್ ॥ 14 ॥**

**ನಾಗವಲ್ಲೀ ದಲೈರ್ಯುಕ್ತಂ ದೇಹಿ ಮೇ ಮಂದಗಾಮಿನಿ ।**

ಧರಣ್ಯುವಾಚ –

**ಸತ್ಯಂ ವದ ಮಹಾಪ್ರಾಜ್ಞೆ! ಸರ್ವದುಃಖಪ್ರಶಾಂತಯೇ ॥ 15 ॥**

**ತ್ರಿರಾಶಿಂ ಮೌಕ್ತಿಕಾನಾಂತು ಸೂರ್ಪಪೂರ್ಣಮಿದಂ ಶುಭಮ್ ।**
**ಇತಿ ತಸ್ಯಾ ವಚಃ ಶ್ರುತ್ವಾ ತುಷ್ಟೋ ಭಾಗೀರಥೀಪಿತಾ ॥ 16 ॥**

ಕಾಮಾಕ್ಷೀಂ = ಕಂಚಿಯ ಕಾಮಾಕ್ಷೀದೇವಿಯನ್ನೂ, ವಿಶಾಲಾಕ್ಷೀಂ = ಕಾಶಿಯ ವಿಶಾಲಾಕ್ಷಿಯನ್ನೂ, ಚ = ಮತ್ತು, ವರಪ್ರದಾಂ = ವರದಾಯಕಳಾದ, ಕಮಲಾಕ್ಷೀಂ = ಹಿಮಾಲಯದಲ್ಲಿರುವ ಕಮಲಾಕ್ಷಿಯನ್ನೂ (ಅಸ್ಮರತ್ = ಸ್ಮರಣೆಮಾಡಿದಳು). ಕೊಲ್ಲಾಪುರಾಧ್ಯಕ್ಷೆ = ಕರವೀರಪುರದ ಸ್ವಾಮಿನಿಯಾದ, ರಮೆ = ಎಲೈ ಲಕ್ಷ್ಮೀದೇವಿಯೇ!, ಪರದೇಶಗಾಂ = ಪರದೇಶದಲ್ಲಿರುವ, ಮಾಂ = ನನ್ನನ್ನು, ಪಾಹಿ = ಕಾಪಾಡು ॥ 11 ॥ (ಎಂದು) ಭಕ್ತಿಭಾವೇನ = ಭಕ್ತಿ (ಪ್ರೀತಿ) ಪೂರ್ವಕವಾಗಿ, ಸಸ್ಮಾರ = ಧ್ಯಾನಿಸಿದಳು, ಮತ್ತು ಮಧುರಂವಚಃ = ಮಧುರವಾದ ನುಡಿಯನ್ನು, ಉವಾಚ = ಹೇಳಿದಳು, ಮತ್ತಃ = ನನ್ನಿಂದ, ಶೃಣು = ಕೇಳುವವಳಾಗು. ಸಪುತ್ರಕಂ = ಪುತ್ರನಿಂದೊಡಗೂಡಿದ, ಗುಲ್ಮಂ = ನನ್ನ

ಈ ಕಣ ಹೇಳುವ ಬುಟ್ಟಿಯನ್ನು(ಕುರಿತು), ಶಪೇ = ಆಣೆ ಇಡುತ್ತೇನೆ. ಬದರೀವಾಸಂ = ಬದರಿಯಲ್ಲಿರುವ, ಭರ್ತಾರಂ = ನನ್ನ ಪತಿಯನ್ನು, ಮಾತರಂ = ತಾಯಿಯನ್ನು, ಪಿತರಂ = ತಂದೆಯನ್ನು, ಗುರುಂ = ಗುರುವನ್ನು, ಸ್ವಾತ್ಮಾನಂ = ನನ್ನನ್ನೂ ಕುರಿತು (ಗಂಡ, ತಂದೆ, ತಾಯಿ, ಗುರು ಮತ್ತು ನನ್ನ ಮೇಲೆ) ಶಪೇ = ಆಣೆಯಿಡುತ್ತೇನೆ. ರಾಜ್ಞಿ = ಮಹಾರಾಣಿ! ಸತ್ಯಮಿತ್ಯವಧಾರಯ = ನಾನು ಹೇಳುವುದೆಲ್ಲವೂ ಸತ್ಯವೆಂದು ತಿಳಿಯುವವಳಾಗು ॥ 12-13 ॥ ಸುಶ್ರೋಣಿ = ಎಲೈ ಸುಶ್ರೋಣಿ (ಸಮೀಚೀನ ಕೇಶವುಳ್ಳವಳೇ?) ಅಂಗನೆ = ಧರಣೀದೇವಿ, ಮೇ = ನನಗೆ, ತಾಂಬೂಲಂ = ತಾಂಬೂಲವನ್ನು, ದೇಹಿ = ಕೊಡು, ಮಂದಗಾಮಿನಿ = ಹೇ ಮಂದಗಮನೆ! ಏಲಾಲಂವಂಗಕರ್ಪೂರ ಜಾತೀಪತ್ರಂ - ಏಲಾ = ಏಲಕ್ಕಿ, ಲವಂಗ = ಲವಂಗ, ಕರ್ಪೂರ = ಪಚ್ಚಕರ್ಪೂರ, ಜಾತೀಪತ್ರಂ = ಜಾಜೀಕಾಯಿ, ಸಪೂಗಕಂ = ಅಡಿಕೆ ಇವುಗಳಿಂದ ಸಹಿತವಾದ, ನಾಗವಲ್ಲೀದಲೈಃ = ವಿಳೇದೆಲೆಗಳಿಂದ, ಯುಕ್ತಂ = ಕೂಡಿರುವ ॥ 14 ॥ ತಾಂಬೂಲಂ = ತಾಂಬೂಲವನ್ನು, ಮೇ = ನನಗೆ, ದೇಹಿ = ಕೊಡುವವಳಾಗು, ಧರಣ್ಯುವಾಚ = ಧರಣೀದೇವಿಯು ಹೇಳಹತ್ತಿದಳು, ಮಹಾಪ್ರಾಜ್ಞೇ = ಅತಿಬುದ್ಧಿವಂತಳಾದ ಧರ್ಮದೇವಿ!, ಸರ್ವದುಃಖ ಪ್ರಶಾಂತಯೇ = ನನ್ನ ಸಕಲ ದುಃಖ ಪರಿಹಾರಕ್ಕಾಗಿ, ಸತ್ಯಂ ವದ = ದಿಟವನ್ನೇ ಹೇಳು, ಶೂರ್ಪಪೂರ್ಣಂ = ಮರದಲ್ಲಿ ತುಂಬಿಟ್ಟಿರುವ, ಶುಭಂ = ಶುಭಕರವಾದ, ಮೌಕ್ತಿಕಾನಾಂ = ಮುತ್ತುಗಳ, ಇದಂ ತ್ರಿರಾಶಿಂ = ಈ ಮೂರು ರಾಶಿಯನ್ನು (ಪಶ್ಯ = ನೋಡು), ಇತಿ = ಎಂದು, ತಸ್ಯಾಃ = ಧರಣೀದೇವಿಯ, ವಚಃ = ಮಾತನ್ನು, ಶ್ರುತ್ವಾ = ಕೇಳಿ, ಭಾಗೀರಥೀಪಿತಾ = ಭಾಗೀರಥಿಗೆ ತಂದೆಯಾದ ಶ್ರೀನಿವಾಸನು, ತುಷ್ಟಃ = ಸಂತುಷ್ಟನಾದನು ॥ 15-16 ॥

**ಹಸ್ತೇ ಧೃತ್ವಾ ವರಾಂ ಯಷ್ಟಿಂ ಪ್ರಿಯಾಯಾಃ ಪ್ರೀತಿಕಾರಿಣೀಮ್ ।**
**ವದಾಮಿ ಶ್ರೃಣು ಭದ್ರಾಣಿ ದುಹಿತುಸ್ತೇಽಂಗ ಶೋಷಣಮ್ ॥ 17 ॥**

**ಆಗತಂ ಪುರುಷೇಣಾಪಿ ಮನ್ಮಥಾಕೃತಿನಾ ಶುಭೇ ।**
**ಸವಿಸ್ತಾರಾದ್ರಾಜಪುತ್ರಿ! ಪ್ರವದಾಮಿ ನಿಬೋಧ ತತ್ ॥ 18 ॥**

**ಇತಃ ಪೂರ್ವದಿನೇ ಕಂಚಿತ್ಪುರುಷಂ ತುರುಗಾರುಹಮ್ ।**
**ದೃಷ್ಟ್ವಾ ಮೋಹವಶಂ ಯಾತಾ ಕಾಮಜ್ವರಸುಪೀಡಿತಾ ॥**
**ದುಹಿತಾ ತೇ ಭವದ್ರಾಜ್ಞಿ! ತತೋಽಸ್ಯಾ ಅಂಗಶೋಷಣಮ್ ॥ 19 ॥**

**ತಚ್ಛಾಂತ್ಯರ್ಥಂ ವರಾರೋಹೇ! ದಾತವ್ಯಾ ಪುರುಷಾಯ ಸಾ ।**

ಧರಣ್ಯುವಾಚ -

**ಕ್ವಾಸ್ತೇ ಕಿರಾತರೂಪೀ ಸಃ ದುಹಿತು ರ್ಮೇಽಂಗಶೋಷಕಃ ॥**
**ವದ ತನ್ನಾಮ ಕಿಂಭದ್ರೇ! ವರಂ ದಾಸ್ಯೇ ತವೇಪ್ಸಿತಮ್ ।**
**ಇತಿ ಪೃಷ್ಟಾ ಧರ್ಮದೇವಿ ಧರಣೀಂ ವಾಕ್ಯಮಬ್ರವೀತ್ ॥**

ಧರ್ಮದೇವ್ಯುವಾಚ-

**ವೈಕುಂಠಸ್ಥೋ ಹರಿಸ್ಸಾಕ್ಷಾದ್ವರ್ತತೇ ವೇಂಕಟಾಚಲೇ ॥ 20 ॥**

ಪ್ರಿಯಾಯಾಃ = ಪ್ರಿಯಕರಳಾದ ಪದ್ಮಾವತಿಗೆ, ಪ್ರೀತಿಕಾರಣಂ = ಪ್ರೀತಿಗೆ ಕಾರಣವಾದ (ಹಿತವನ್ನುಂಟುಮಾಡುವ) ವರಾಂ = ಶ್ರೇಷ್ಠವಾದ, ಯಷ್ಟಿಂ = ಕೈಗೋಲನ್ನು, ಹಸ್ತೇ = ಕರದಲ್ಲಿ, ಧೃತ್ವಾ = ಹಿಡಿದು, ಭದ್ರಾಂಗೆ = ಮಂಗಳಾಂಗಿ, ತೇ ದುಹಿತುಃ = ನಿನ್ನ ಮಗಳ, ಅಂಗಶೋಷಣಂ = ದೇಹಶೋಷಣವನ್ನು ಕುರಿತು, ಅಹಂ = ನಾನು, ವದಾಮಿ = ಹೇಳುತ್ತೇನೆ ॥ 17 ॥ ಶುಭೇ = ಶುಭಕರಳಾದ ರಾಣಿ! ಮನ್ಮಥಾಕೃತಿನಾ = ಮನ್ಮಥನಿಗೆ ಸದೃಶವಾದ ಆಕಾರವುಳ್ಳ, ಪುರುಷೇಣ = ಪುರುಷನಿಂದ, ಆಗತಮಪಿ = ಬಂದುದನ್ನು, ರಾಜಪುತ್ರೀ = ಎಲೈ ರಾಜಕುವರಿ, ಸವಿಸ್ತರಾತ್ = ವಿಶದವಾಗಿ, ವದಾಮಿ = ಹೇಳುವೆನು, ತತ್ = ಅದನ್ನು, ನಿಬೋಧ = ತಿಳಿಯುವವಳಾಗು; ಇತಃ ಪೂರ್ವದಿನೇ = ಈ ಹಿಂದಿನ ದಿನ (ನೆನ್ನೆಯದಿನ), ತುರುಗಾರುಹಂ = ಕುದುರೆಯನ್ನೇರಿದ, ಕಂಚಿತ್ ಪುರುಷಂ = ಔವನ ಪುರುಷನನ್ನು, ದೃಷ್ಟ್ವಾ = ನೋಡಿ, ಮೋಹವಶಂ = ಮೋಹಪರವಶಳು, ಯಾತಾ = ಆದಂತಹ, ತೇ = ನಿನ್ನ, ದುಹಿತಾ = ಮಗಳಾದ ಪದ್ಮಾವತಿಯು, ಕಾಮಜ್ವರಸುಪೀಡಿತಾ = ಕಾಮಜ್ವರದಿಂದ ಪೀಡಿತಳಾಗಿದ್ದಾಳೆ, ರಾಜ್ಞೀ = ಅರಸಿ!, ತತಃ = ಅದರಿಂದಲೇ, ಅಸ್ಯಾಃ = ಪದ್ಮಾವತಿಗೆ, ಅಂಗಶೋಷಣಂ = ದೇಹಶೋಷಣೆಯು, ಅಭವತ್ = ಉಂಟಾಯಿತು ॥ 18-19 ॥ ವರಾರೋಹೇ = ಉತ್ತಮವಾದ ಅಂಗ ವಿರಾಜಿತಳೇ! ತತ್ = ಅದರ (ಕಾಮಜ್ವರದ), ಶಾಂತ್ಯರ್ಥಂ = ಶಾಂತಿಗಾಗಿ (ಪರಿಹಾರಕ್ಕಾಗಿ), ಸಾ = ಆ ಪದ್ಮಾವತಿಯು, ಪುರುಷಾಯ = ಆ ಪುರುಷನಿಗೆ, ದಾತವ್ಯಾ = ಕೊಡಲ್ಪಡಬೇಕು. ಧರಣ್ಯುವಾಚ = ಧರಣೀದೇವಿಯು ಮಾತನಾಡುತ್ತಿದ್ದಾಳೆ - ಭದ್ರೆ = ಮಂಗಳಕರಳಾದ ಕೊರವಂಜಿ! ಮೇ = ನನ್ನ, ದುಹಿತುಃ = ಮಗಳ, ಅಂಗಶೋಷಕಃ = ದೇಹತಾಪಕ್ಕೆ ಕಾರಣನಾದ, ಕಿರಾತರೂಪಿ = ಬೇಡರರೂಪವುಳ್ಳ, ಸಃ = ಆತನು, ಕ್ವಾಸ್ತೇ = ಎಲ್ಲಿದ್ದಾನೆ? ತನ್ನಾಮ ಕಿಂ = ಅವನ ಹೆಸರೇನು? ವದ = ಹೇಳು, ತವೇಪ್ಸಿತಂ = ನಿನಗೆ ಇಷ್ಟವಾದ, ವರಂ = ವರವನ್ನು(ಕೊಡುಗೆಯನ್ನು), ದಾಸ್ಯೇ = ಪ್ರದಾನ ಮಾಡುತ್ತೇನೆ, ಇತಿ = ಈ ಪ್ರಕಾರವಾಗಿ, ಪೃಷ್ಟಾ = ಪ್ರಶ್ನಿತಳಾದ, ಧರ್ಮದೇವಿ = ಧರ್ಮದೇವಿಯು, ಧರಣೀಂ (ಪ್ರತಿ) = ಧರಣೀದೇವಿಯನ್ನು ಉದ್ದೇಶಿಸಿ, ವಾಕ್ಯಮಬ್ರವೀತ್ = ಮಾತನಾಡಿದಳು. ಧರ್ಮದೇವ್ಯುವಾಚ = ಧರ್ಮದೇವಿಯು ಹೀಗೆ ಹೇಳಿದಳು - ಸಾಕ್ಷಾತ್ = ಪ್ರತ್ಯಕ್ಷವಾಗಿ, ವೈಕುಂಠಸ್ಥಃ = ವೈಕುಂಠಲೋಕದಲ್ಲಿರುವ, ಹರಿಃ = ಶ್ರೀ ವಿಷ್ಣುವು, ವೇಂಕಟಾಚಲೇ = ವೇಂಕಟಗಿರಿಯಲ್ಲಿ, ವರ್ತತೇ = ಇದ್ದಾನೆ ॥ 20 ॥

**ಶ್ರೀನಿವಾಸೇತಿ ವಿಖ್ಯಾತೋ ವಿದ್ಯಾವಾನ್ಧನವಾನ್ಬಲೀ ।**
**ಪುತ್ರ್ಯಾ ತವ ವರಾರೋಹೆ! ಹತೋ ಯಸ್ಯ ಹಯೋತ್ತಮಃ ॥ 21 ॥**

**ಆರಾಮದ್ವಾರನಿಕಟೇ ಪತಿತಃ ಪೃಚ್ಛತತ್ಸಖೀಃ ।**
**ಗೌರವಂ ರಾಜಪುತ್ರ್ಯಾಸ್ತು ಕ್ಷಮಿತಂ ಪುರುಷೇಣ ತತ್ ॥ 22 ॥**

**ಸತ್ಯಂ ವಿದ್ಧಿ ವಚೋ ಮೇಽದ್ಯ ದತ್ತಾಚೇತ್ಸುಖಮೇಷ್ಯತಿ ।**
**ಅದತ್ವಾ ದುಃಖಮಾಪ್ನೋತಿ ನ ಮೇ ವಾಣೀ ವೃಥಾಭವೇತ್ ॥ 23 ॥**

**ಅದ್ಯೈವ ದಿನಮಾತ್ರೇಣ ಮರಿಷ್ಯತಿ ನ ಸಂಶಯಃ ।**
**ಅಮಂಗಲವಚಃ ಶ್ರುತ್ವಾ ಕಿಂಚಿದ್ದುಃಖಸಮಾಕುಲಾ ॥ 24 ॥**

**ಊಚೇ ವದಸಿ ಕಲ್ಯಾಣಿ! ದುಃಖಹೇತುರ್ವಚೋ ಮಮ ।**
**ಇತಿ ತಸ್ಯಾ ವಚಃ ಶ್ರುತ್ವಾ ಪುನರಾಹ ಪುಲಿಂದಜಾ ॥ 25 ॥**

ಶ್ರೀನಿವಾಸೇತಿ = ಶ್ರೀನಿವಾಸನೆಂದು, ವಿಖ್ಯಾತಃ = ಅತಿಪ್ರಸಿದ್ಧನಾಗಿರುವ ಅವನು, ವಿದ್ಯಾವಾನ್ = ವಿದ್ಯಾವಂತನು, ಧನವಾನ್ = ಅತಿಸಿರಿವಂತನು, ಬಲೀ = ಮಹಾಪರಾಕ್ರಮಿಯೂ (ಬಲಶಾಲಿಯೂ) ಆಗಿದ್ದಾನೆ. ವರಾರೋಹೇ = ಧರಣೀದೇವಿ! ತವ = ನಿನ್ನ, ಪುತ್ರ್ಯಾ = ಮಗಳಾದ ಪದ್ಮಾವತಿಯಿಂದ, ಯಸ್ಯ = ಯಾವನ, ಹಯೋತ್ತಮಃ = ಉತ್ತಮ ಕುದುರೆಯು, ಹತಃ = ಸಂಹರಿಸಲ್ಪಟ್ಟಿತೋ, ಆರಾಮನಿಕಟೇ = ಉದ್ಯಾನವನದ ಬಾಗಿಲಿನಲ್ಲಿ, ಪತಿತಃ = ಆ ಅಶ್ವವು ಸತ್ತುಬಿದ್ದಿದೆ (ಬೇಕಾದರೆ). ತತ್ = ಆ ವಿಚಾರವನ್ನು, ಸಖೀಃ = ನಿನ್ನ ಮಗಳ ಸಖಿಯರನ್ನು, ಪೃಚ್ಛ = ಕೇಳು. ಪುರುಷೇಣ = ಆ ಪುರುಷನಿಂದ, ರಾಜಪುತ್ರ್ಯಾಃ = ಪದ್ಮಾವತಿಯಿಂದ ಮಾಡಲ್ಪಟ್ಟ, ಗೌರವಂ = ಗುರುತ್ವಪೂರ್ಣವಾದ (ದೊಡ್ಡದಾದ), ತತ್ = ಅಶ್ವಸಂಹಾರರೂಪ ಅಪರಾಧವು, ಕ್ಷಮಿತಂ = ಕ್ಷಮಿಸಲ್ಪಟ್ಟಿತು (ಸಹಿಸಲ್ಪಟ್ಟಿತು) ॥ 21-22 ॥ ಮೇ = ನನ್ನ, ವಚಃ = ಮಾತು, ಸತ್ಯಂ ವಿದ್ಧಿ = ಸತ್ಯವೆಂದು ತಿಳಿ, ಅದ್ಯ = ಈಗ, ದತ್ತಾಚೇತ್ = ಆ ಪುರುಷನಿಗೆ ಮದುವೆ ಮಾಡಿಕೊಟ್ಟಲ್ಲಿ, ಸುಖಮೇಷ್ಯತಿ = ಸುಖಪಡೆಯುವಳು, ಅದತ್ವಾ = ಕೊಡದಿದ್ದರೆ, ದುಃಖಂ = ವ್ಯಥೆಯನ್ನು, ಆಪ್ನೋತಿ = ಹೊಂದುತ್ತಾಳೆ, ಮೇ = ನನ್ನ, ವಾಣಿ = ನುಡಿಯು, ವೃಥಾ ನ ಭವೇತ್ = ವ್ಯರ್ಥವಾಗುವುದಿಲ್ಲ ॥ 23 ॥ ಅದ್ಯ = ಈಗ, ದಿನಮಾತ್ರೇಣ = ಒಂದು ದಿನದಲ್ಲಿಯೇ, ಮರಿಷ್ಯತಿ = ಮರಣಿಸುತ್ತಾಳೆ, ನ ಸಂಶಯಃ = ಸಂದೇಹವಿಲ್ಲ; ಅಮಂಗಲವಚಃ ಶ್ರುತ್ವಾ = ಅಶುಭವಾದ ವಾಕ್ಯವನ್ನು ಆಲಿಸಿ, ಕಿಂಚಿತ್ ದುಃಖ ಸಮಾಕುಲಾ = ಸ್ವಲ್ಪ ದುಃಖಯುಕ್ತಳಾಗಿ ॥ 24 ॥ ಕಲ್ಯಾಣಿ = ಮಂಗಳಕರಳಾದ ಧರ್ಮದೇವಿ! ಮಮ = ನನಗೆ, ದುಃಖಹೇತುಃ = ವ್ಯಥೆಗೆ ಕಾರಣವಾದ, ವಚಃ = ಮಾತನ್ನು, ವದಸಿ = ಹೇಳುತ್ತಿರುವೆ (ಇತಿ = ಹೀಗೆ ಧರಣೀದೇವಿಯು), ಊಚೇ = ಹೇಳಿದಳು, ಇತಿ = ಈ ಪ್ರಕಾರವಾದ, ತಸ್ಯಾಃ = ಧರಣೀದೇವಿಯ, ವಚಃ = ಮಾತನ್ನು, ಶ್ರುತ್ವಾ = ಕೇಳಿ, ಪುಲಿಂದಜಾ = ಕೊರವಂಜಿಯು, ಪುನರಾಹ = ಮತ್ತೆ ಹೇಳಿದಳು ॥ 25 ॥

*ಧರ್ಮದೇವ್ಯುವಾಚ-*

**ನಾ ಸತ್ಯಂ ವಚನಂ ದೇವಿ! ಮಯೋಕ್ತಂ ಪೂರ್ವಮೇವ ತತ್ ।**
**ಭೀತಾ ತದ್ವಚನಾದ್ರಾಜ್ಞೀ ರುದತೀ ವಾಕ್ಯಮಬ್ರವೀತ್ ॥ 26 ॥**

*ಧರಣ್ಯುವಾಚ-*

**ಅಯಾಚಿತಾ ಮಯಾ ಕನ್ಯಾ ಕಥಂ ದೇಯಾ ಭವಿಷ್ಯತಿ ।**
**ಇತಿ ಚಿಂತಾಪರಾಂ ರಾಜ್ಞೀಂ ಧರ್ಮದೇವೀ ವಚೋಽಬ್ರವೀತ್**

*ಧರ್ಮದೇವ್ಯುವಾಚ-*

**ಅದ್ಯೈವ ಘಟಿಕಾಂತೇ ತು ಆಗಮಿಷ್ಯತಿ ಕಾಚನ ॥ 27 ॥**

**ಅಬಲಾ ಬಹುವೃದ್ಧಾ ಚ ಧರ್ಮಾರ್ಥಕುಶಲಾ ಭುವಿ ।**
**ಮದ್ವಾಕ್ಯೇ ವಿಶ್ವಸಂತೀ ತ್ವಂ ರಾಜಾನಂ ಪರಿಬೋಧಯ ॥ 28 ॥**

**ತೋಂಡಮಾನಂ ಚ ತೇ ಭರ್ತುರ್ಭ್ರಾತರಂ ಸಸುಹೃದ್ಗಣಮ್ ।**
**ಸಂಬೋಧ್ಯ ಸಾಧು ಮಾರ್ಗಂತು ಸಮಾಶ್ರಯ ನೃಪಪ್ರಿಯೆ ॥ 29 ॥**

**ಸನ್ನಿಧೌ ಮಮ ಸಂಕಲ್ಪಂ ಕುರು ಕನ್ಯಾನಿಮಿತ್ತಕಮ್ ।**

*ಧರಣ್ಯುವಾಚ -*

**ಯೇನ ಕೇನಾಪ್ಯುಪಾಯೇನ ಜೀವಿತಾ ಸ್ಯಾತ್ಸುತಾ ಮಮ** **॥ 30 ॥**

ಧರ್ಮದೇವ್ಯುವಾಚ = ಧರ್ಮದೇವಿಯು ಹೇಳಿದಳು, ದೇವೀ = ಧರಣೀದೇವಿ! ವಚನಂ = ನನ್ನ ಮಾತು, ನಾಸತ್ಯಂ = ಸುಳ್ಳಲ್ಲ ; ತತ್ = ನಾನು ಹೇಳುವುದು ಸತ್ಯವೆಂಬುದು, ಪೂರ್ವಮೇವ = ಹಿಂದೆಯೇ, ಮಯಾ = ನನ್ನಿಂದ, ಉಕ್ತಂ = ಹೇಳಲ್ಪಟ್ಟಿತು. ರಾಜ್ಞೀ = ಮಹಾರಾಣಿಯು, ತದ್ವಚನಾತ್ = ಅವಳ ಮಾತಿನಿಂದ, ಭೀತಾ (ಸತಿ) = ಭೀತಳಾಗಿ (ಭಯಗೊಂಡವಳಾಗಿ), ರುದತೀ = ಅಳುತ್ತಾ, ವಾಕ್ಯಮಬ್ರವೀತ್ = ಮಾತನಾಡಿದಳು ॥ 26 ॥ ಧರಣ್ಯುವಾಚ = ಧರಣಿಯು ಹೇಳುತ್ತಿದ್ದಾಳೆ - ಮಯಾ = ನನ್ನಿಂದ, ಅಯಾಚಿತಾ = ಕನ್ಯಾಬೇಕೆಂದು ಕೇಳಲ್ಪಡವಳ, ಕನ್ಯಾ = ಕನ್ಯೆಯಾದ ಪದ್ಮಾವತಿಯು, ಕಥಂ = ಹೇಗೆ, ದೇಯಾ ಭವಿಷ್ಯತಿ = ಕೊಡಲ್ಪಡುವವಳಾಗುವಳು? ಇತಿ = ಹೀಗೆ, ಚಿಂತಾಪರಾ = ಚಿಂತಾಪರಳಾದ, ರಾಜ್ಞೀಂ (ಪ್ರತಿ) = ರಾಣಿಯನ್ನು ಕುರಿತು, ಧರ್ಮದೇವಿ = ಧರ್ಮದೇವಿಯು, ವಚಃ = ಮಾತನ್ನು, ಅಬ್ರವೀತ್ = ಹೇಳಿದಳು ॥ 27 ॥ ಧರ್ಮದೇವ್ಯುವಾಚ = ಧರ್ಮದೇವಿಯು ಹೇಳಹತ್ತಿದಳು - ಅದ್ಯೈವ = ಈಗಲೇ, ಘಟಿಕಾಂತೇಷು = ಒಂದು ಘಳಿಗೆಯಾಗುವುದರೊಳಗೆ, ಬಹುವೃದ್ಧಾ = ಅತಿವೃದ್ಧಳಾದ, ಚ = ಮತ್ತು, ಭುವಿ = ಲೋಕದಲ್ಲಿ, ಧರ್ಮಾರ್ಥಕುಶಲಾ = ಧರ್ಮ-ಅರ್ಥಾದಿ ಪುರುಷಾರ್ಥವಿಷಯದಲ್ಲಿ ನಿಪುಣಳಾದ, ಕಾಚನ ಅಬಲಾ = ಓರ್ವ ಸ್ತ್ರೀಯು, ಆಗಮಿಷ್ಯತಿ = ಬರುತ್ತಾಳೆ ಅಂದರೆ ಕನ್ಯಾಪೇಕ್ಷೆಯಿಂದ ಆಗಮಿಸುವಳು. ಮದ್ವಾಕ್ಯೇ = ನನ್ನ ಮಾತಿನಲ್ಲಿ, ವಿಶ್ವಸಂತೀ = ವಿಶ್ವಾಸವಿಟ್ಟು, ತ್ವಂ = ನೀನು, ರಾಜಾನಂ (ಪ್ರತಿ) = ಆಕಾಶರಾಜನನ್ನು ಕುರಿತು, ಪರಿಬೋಧಯ = ಈ ವಿಷಯವನ್ನು ವಿವರಿಸಿ ಎಚ್ಚರಿಸು ॥ 28 ॥ ತೇ = ನಿನ್ನ, ಭರ್ತುಃ = ಗಂಡನ, ಭ್ರಾತರಂ ಚ = ತಮ್ಮನಾದ ಮತ್ತು, ತೋಂಡಮಾನಂ = ತೋಂಡಮಾನರಾಜನನ್ನೂ, ಚ = ಮತ್ತು, ಸಸುಹೃದ್ಗಣಂ ಪ್ರತಿ = ಬಂಧುಮಿತ್ರ ಜನರನ್ನೂ ಕುರಿತು, ಸಂಬೋಧ್ಯ = ಹೇಳುವವಳಾಗಿ, ನೃಪಪ್ರಿಯೇ = ರಾಜನರಸಿ! ಸಾಧುಮಾರ್ಗಂತು = ಸಾಧುವಾದ ಮಾರ್ಗವನ್ನು, ಮಾಶ್ರಯ = ಆಶ್ರಯಿಸು ॥ 29 ॥ ಮಮ = ನನ್ನ, ಸನ್ನಿಧೌ = ಸನ್ನಿಧಿಯಲ್ಲಿ (ನನ್ನ ಮುಂದೆ), ಕನ್ಯಾದಾನ ನಿಮಿತ್ತಕಂ = ಕನ್ಯಾದಾನ ಮಾಡುವ ಬಗೆಗೆ ಕಾರಣದಿಂದ, ಸಂಕಲ್ಪಂ = ಸಂಕಲ್ಪವನ್ನು, ಕುರು = ಮಾಡು. ಧರಣ್ಯುವಾಚ = ಧರಣೀದೇವಿಯು ಹೇಳಿದಳು - ಮಮ = ನನ್ನ, ಸುತಾ = ಮಗಳು, ಯೇನ ಕೇನಾಪಿ = ಯಾವುದಾದರೊಂದು, ಉಪಾಯೇನ = ಉಪಾಯದಿಂದ, ಜೀವಿತಾ ಸ್ಯಾತ್ = ಜೀವಂತವಾಗಿರಲಿ (ಎಂದು ನಿಶ್ಚಯಿಸಿ), ॥ 30 ॥

**ಸುತಾಂ ತಸ್ಯೈವ ದಾಸ್ಯಾಮಿ ಗಿರಿಗಹ್ವರವಾಸಿನಃ ।**

*ಧರ್ಮದೇವ್ಯುವಾಚ-*

**ಏವಂ ಚೇತ್ತೇ ಸುತಾ ರಾಜ್ಞಿ! ಜೀವಿಷ್ಯತಿ ನ ಸಂಶಯಃ ।**
**ಪತಿರ್ಮೇ ವರ್ತತೇ ಯತ್ರ, ದೇವಿ! ತತ್ರ ವ್ರಜಾಮ್ಯಹಮ್** **॥ 31 ॥**

**ಇತ್ಯುಕ್ತ್ವಾ ಸಾ ಜಗಾಮಾಶು ನಿಜ ಧಾಮ ವ್ರಜಾಂಗನಾ ।**
**ಸಾಪಿ ತಾಂ ಬಾಢ್ಯಮಿತ್ಯುಕ್ತ್ವಾ ನಿರ್ಜಗಾಮ ಪುರಾದ್ಬಹಿ** **॥ 32 ॥**

**ಕಕ್ಷೇ ಬಧ್ವಾ ಸುತಂ ರಾಜನ್ ಸ್ವರ್ಣಶೂರ್ಪಂ ಸಗುಲ್ಮಕಮ್ ।**
**ಜಗಾಮೋತ್ತರ ಮಭ್ಯೇತ್ಯ ಪುಲಿಂದಾ ಮಿಥಿಲೇಶ್ವರ** **॥ 33 ॥**

**ಪುಲಿಂದಿನ್ಯಾಂ ಗತಾಯಾಂತು ಧರಣೀಬಾಷ್ಪಲೋಚನಾ ।**
**ಪುತ್ರೀನಿಕೇತನಂ ಪ್ರಾಪ್ಯ ರುದಂತೀ ಭೃಶದುಃಖಿತಾ ॥ 34 ॥**

**ಕಿಂ ತೇ ಮನೋಗತಂ ಪುತ್ರಿ! ನ ವದಿಷ್ಯಸಿ ಕಿಂಚ ಮಾಮ್ ।**
**ನ ಚ ಮಾತೃಸಮಂ ಮಿತ್ರಂ ಪುತ್ರೀಣಾಂ ವಿದ್ಯತೇ ಶುಭೇ ॥ 35 ॥**

ಗಿರಿಗಹ್ವರವಾಸಿನಃ = ಪರ್ವತದ ಗುಹೆಯಲ್ಲಿವಾಸಮಾಡುವ, ತಸ್ಯೇವ = ಆ ಶ್ರೀನಿವಾಸನಿಗೆ, ಸುತಾಂ = ಮಗಳನ್ನು, ದಾಸ್ಯಾಮಿ = ಕೊಡುತ್ತೇನೆ. ಧರಣಿಯ ನುಡಿಯನಾಲಿಸಿ, ಧರ್ಮದೇವ್ಯುವಾಚ = ಕೊರವಂಜಿಯು ಮಾತನಾಡಿದಳು : - ರಾಜ್ಞಿ = ಮಹಾರಾಣಿ, ಏವಂಚೇತ್ = ಹಾಗಿದ್ದಲ್ಲಿ (ನೀನು ಹಾಗೆ ಮಾಡಿದ ಪಕ್ಷದಲ್ಲಿ), ತೇ ಸುತಾ = ನಿನ್ನ ಮಗಳಾದ ಪದ್ಮಾವತಿಯು, ಜೀವಿಷ್ಯತಿ = ಬದುಕುತ್ತಾಳೆ. ನ ಸಂಶಯಃ = ಇದರಲ್ಲಿ ಸಂದೇಹವಿಲ್ಲ, ದೇವಿ = ಧರಣೀದೇವಿ, ಯತ್ರ = ಎಲ್ಲಿ, ಮೇ = ನನ್ನ, ಪತಿಃ = ಪತಿಯು, ವರ್ತತೇ = ಇರುವನೋ, ಅಹಂ = ನಾನು, ತತ್ರ ವ್ರಜಾಮಿ = ಅಲ್ಲಿಗೆ ಹೋಗುತ್ತೇನೆ ॥ 31 ॥ ಇತ್ಯುಕ್ತ್ವಾ = ಹೀಗೆ ಹೇಳಿ, ಅಸೌ ವ್ರಜಾಂಗನಾ = ವ್ರಜದ ಸ್ತ್ರೀಯಾದ ಧರ್ಮದೇವಿಯು, ನಿಜಧಾಮ = ತನ್ನ ಮನೆಗೆ, ಆಶು = ಬೇಗನೆ, ಜಗಾಮ = ಹೋದಳು, ತಾಂ = ಆ ಧರ್ಮದೇವಿಯನ್ನು ಕುರಿತು, ಬಾಢಂ = ಸರಿ ಹಾಗೆಯೇ ಮಾಡು ಎಂದು, ಉಕ್ತಾ = ಧರಣಿಯಿಂದ ಹೇಳಲ್ಪಟ್ಟವಳಾಗಿ, ಸಾಪಿ = ಧರ್ಮದೇವಿಯೂ ಸಹ, ಪುರಾದ್ಬಹಿಃ = ನಾರಾಯಣಪುರದಿಂದ ಹೊರಗೆ, ನಿರ್ಜಗಾಮ = ಹೊರಟುಹೋದಳು ॥ 32 ॥ ಮಿಥಿಲೇಶ್ವರ = ಮಿಥಿಲೆಯ ರಾಜನಾದ ಎಲೈ ಜನಕಮಹಾರಾಜ! ಸಗುಲ್ಮಂ = ಬುಟ್ಟಿಯಿಂದ ಸಹಿತವಾದ, ಸ್ವರ್ಣಶೂರ್ಪಂ = ಬಂಗಾರದ ಮರವನ್ನೂ, ಸುತಂ = ಮಗನನ್ನೂ, ಕಕ್ಷೇ = ಕಂಕಳಿನಲ್ಲಿ (ಟೊಂಕದಲ್ಲಿ), ಬಧ್ವಾ = ಕಟ್ಟಿಕೊಂಡು, ಪುಲಿಂದಾ = ಕೊರವಂಜಿಯು, ಉತ್ತರಮಭ್ಯೇತ್ಯ = ಉತ್ತರಾಭಿಮುಖವಾಗಿ, ಜಗಾಮ = ಹೊರಟಳು ॥ 33 ॥ ಪುಲಿಂದಿನ್ಯಾಂ = ಕೊರವಂಜಿಯು, ಗತಾಯಾಂತು = ಹೊರಟುಹೋದ ಮೇಲೆ, ಧರಣೀ = ಧರಣೀದೇವಿಯು, ಬಾಷ್ಪಲೋಚನಾ = ನೀರು ತುಂಬಿದ ಕಣ್ಣುಳ್ಳವಳಾಗಿ (ಕಣ್ಣೀರುಸುರಿಸುತ್ತಾ), ಪುತ್ರೀನಿಕೇತನಂ = ಮಗಳ ಮನೆಯನ್ನು (ಕುರಿತು), ಪ್ರಾಪ್ಯ = ಹೊಂದಿ, ರುದಂತೀ = ಅಳುತ್ತಾ, ಭೃಶಂದುಃಖಿತಾ = ಹೆಚ್ಚು ವ್ಯಥೆಯುಳ್ಳವಳಾಗಿ ॥ 34 ॥ ಶುಭೆ = ಮಂಗಳಕರಳಾದ, ಪುತ್ರಿ = ಮಗಳೇ, ತೇ = ನಿನ್ನ, ಮನೋಗತಂ = ಮನಸ್ಸಿನಲ್ಲಿರುವುದು, ಕಿಂ = ಏನು? ಚ = ಮತ್ತು, ಮಾಂ = ನನ್ನನ್ನು ಕುರಿತು (ನನಗೆ), ಕಿಂ = ಏತಕ್ಕಾಗಿ, ನ ವದಿಷ್ಯಸಿ = ಹೇಳುವುದಿಲ್ಲ? (ಹೇಳುತ್ತಿಲ್ಲ) ಪುತ್ರೀಣಾಂ = ಹೆಣ್ಣು ಮಕ್ಕಳಿಗೆ, ಮಾತೃಸಮಂ = ತಾಯಿಗೆ ಸಮಾನರಾದ, ಮಿತ್ರಂ = ಸ್ನೇಹಿತರು, ನ ಚ ವಿದ್ಯತೇ = ಇರುವುದಿಲ್ಲ ॥ 35 ॥

**ಕಿಂ ಚ ಕಾರ್ಯಮಕಾರ್ಯಂಚ ತನ್ಮಮಾಚಕ್ಷ್ವ ಭಾಮಿನಿ ।**
**ಪೂರಯಾಮಿ ಮನಸ್ಥಂ ತೇ ಕಿಂ ವೃಥಾ ದೇಹಶೋಷಣಾತ್ ॥ 36 ॥**

**ಅಭಾಗ್ಯಾಹಂ ಮಹಾರಾಜ್ಞೀ ವಿಷಪಾನಂ ಕರೋಮಿ ಚ ।**
**ಸಾ ಚ ದುಃಖಪರಾ ದೀನಾ ರುದತೀ ದುಃಖಿತಾಽಭವತ್ ॥ 37 ॥**

**ದುಃಖಿತಾಂ ಜನನೀಂ ದೃಷ್ಟ್ವಾ ಮಂದಮಾಹ ಮನೋಗತಮ್ ।**

ಪದ್ಮಾವತ್ಯುವಾಚ-

**ಕಿಂ ವದಿಷ್ಯಾಮಿ ಹೇಮಾತಃ ಸೂತಿಕಾದುಃಖಮಾಗತಮ್ ॥ 38 ॥**

**ಅಥವಾ ಪುತ್ರಲಾಭಂ ವಾ ಪ್ರವದಾಮಿ ನಿಗೂಢನಮ್ ।**
**ನಾ ಕೃತ್ಯಂ ತಾದೃಶಂ ಕಿಂಚಿಜ್ಜಾತಂ ಕ್ವಾಪಿ ತು ಮೇ ವರೇ ॥ 39 ॥**

**ಕಾಂಕ್ಷಾ ಸಂಪ್ರತಿ ತಾಮದ್ಯ ವಕ್ತುಂ ಶಕ್ನೋಮಿ ನ ಸ್ವಯಂ ।**
**ತಥಾಪಿ ತತ್ಪ್ರವಕ್ಷ್ಯಾಮಿ ಮಾತೃತ್ವಾತ್ ಶ್ರುಣು ಭಾಮಿನಿ ॥ 40 ॥**

ಭಾಮಿನಿ = ಪದ್ಮಾವತಿ! ಕಿಂಚ = ಮತ್ತು. ಕಾರ್ಯಂ = ಮಾಡುವುದು, ಅಕಾರ್ಯಂ ಚ = ಮಾಡಬಾರದ್ದು ಸಹ, ಆದೇನಿದ್ದರೂ, ತತ್ = ಅದನ್ನು, ಮಮ = ನನಗೆ, ಆಚಕ್ಷ್ವ = ಹೇಳುವವಳಾಗು, ತೇ = ನಿನ್ನ, ಮನಸ್ಥಂ = ಮನದಲ್ಲಿರುವ ಇಚ್ಛೆಯನ್ನು, ಪೂರಯಾಮಿ = ಪೂರ್ಣಮಾಡುತ್ತೇನೆ. ವೃಥಾ = ವ್ಯರ್ಥವಾಗಿ, ದೇಹಶೋಷಣಾತ್ = ದೇಹವನ್ನು ಒಣಗಿಸಿಕೊಳ್ಳುವುದರಿಂದ, ಕಿಂ = ಏನು ಫಲ? ಅಭಾಗ್ಯಾ = ನಿರ್ಭಾಗ್ಯಳಾದ, ಚ = ಮತ್ತು, ಮಹಾರಾಜ್ಞೀ = ಮಹಾರಾಣಿಯಾದ, ಅಹಂ = ನಾನು, ವಿಷಪಾನಂ ಕರೋಮಿ = ವಿಷವನ್ನು ಕುಡಿಯುತ್ತೇನೆ (ಎಂದಳು). ಸಾ ಚ = ಆ ಪದ್ಮಾವತಿಯು, ದುಃಖಪರಾ = ದುಃಖಿತಳಾಗಿ, ದೀನಾ = ದೀನಳಾಗಿ, ರುದತೀ = ಅಳುತ್ತಾ, ದುಃಖಿತಾಽಭವತ್ = ವ್ಯಥೆಯುಳ್ಳವಳಾದಳು ॥ 37 ॥ ದುಃಖಿತಾಂ = ದುಃಖವುಳ್ಳವಳಾದ, ಜನನೀಂ = ತಾಯಿಯನ್ನು, ದೃಷ್ಟ್ವಾ = ನೋಡಿ, ಮನೋಗತಂ = ತನ್ನ ಮನದಲ್ಲಿರುವುದನ್ನು, ಮಂದಂ = ಮೆಲ್ಲಗೆ, ಆಹ = ಹೇಳಿದಳು. ಪದ್ಮಾವತ್ಯುವಾಚ = ಪದ್ಮಾವತಿಯು ನುಡಿದಳು - ಮಾತಃ = ಎಲೈ ತಾಯಿಯೇ, ಕಿಂ ವದಿಷ್ಯಾಮಿ = ನಾನೇನು ಹೇಳಲಿ? ಸೂತಿಕಾ ದುಃಖಂ = ಪ್ರಸವ ವೇದನೆಯು, ಆಗತಂ = ಬಂದಿತು ॥ 38 ॥ ಅಥವಾ = ಇಲ್ಲವೇ, ಪುತ್ರಲಾಭಂ ವಾ = ಪುತ್ರನು ಹುಟ್ಟಿದನೆಂಬುದನ್ನಾಗಲಿ, ವದಾಮಿ ವಾ = ಹೇಳುವವಳಾಗಲೇ? ನಿಗೂಢಾಂ = ಮುಚ್ಚಿಡುವಂತಹ, ಅಕೃತ್ಯಂ = ಮಾಡಬಾರದ, ತಾದೃಶಂ = ಅಂತಹ ಕೆಲಸವು, ವರೇ = ಮಂಗಳೇ, ಮೇ = ನನಗೆ, ಕ್ವಾಪಿ ತು = ಯಾವಾಗಲೂ, ಕಿಂಚಿಜ್ಜಾತಂ = ಯಾವುದೂ ಆಗಲಿಲ್ಲ (ಆಗಿಲ್ಲ) ॥ 39 ॥ ಸಂಪ್ರತಿ = ಈಗ, ಕಾಂಕ್ಷಾ = ಅಪೇಕ್ಷೆಯು (ಏನಿದೆಯೋ), ತಾಂ = ಅದನ್ನು, ಸ್ವಯಂ = ನಾನಾಗಿ, ಅದ್ಯ = ಈಗ, ವಕ್ತುಂ = ಹೇಳಲು, ನ ಶಕ್ನೋಮಿ = ಶಕ್ತಳಾಗಿಲ್ಲ, ಭಾಮಿನಿ = ಎಲೈ ತಾಯಿ! ತಥಾಪಿ = ಹೀಗಿದ್ದರೂ, ಮಾತೃತ್ವಾತ್ = ತಾಯಿಯಾಗಿರುವುದರಿಂದ, ತತ್ = ನನ್ನ ಮನಸ್ಸಿನಲ್ಲಿರುವುದನ್ನು, ಪ್ರವಕ್ಷ್ಯಾಮಿ = ಹೇಳುತ್ತೇನೆ, ಶ್ರುಣು = ಕೇಳು ॥ 40 ॥

**ತ್ವಯಾಜ್ಞಪ್ತಾ ಗತಾ ಮಾತಃ ಪುಷ್ಪಾರಾಮಂ+ ಸಖೀಯುತಾ ।**
**ತತ್ರ ಕಶ್ಚಿತ್ಪುಮಾನ್ ಪ್ರಾಪ್ತಃ ಪುರಾಣಪುರುಷೋತ್ತಮಃ ॥ 41 ॥**

**ಮಾತಃಸ್ಮರಾಮಿ ತದ್ವಕ್ತ್ರಂ ಪುಂಡರೀಕನಿಭೇಕ್ಷಣಮ್ ।**
**ತಂ ವಿನಾ ನಹಿ ಜೀವಾಮಿ ಸತ್ಯಮಿತ್ಯವಧಾರಯ ॥ 42 ॥**

**ಚರಿತಂ ತಸ್ಯ ಕೃಷ್ಣಸ್ಯ ಜಾನಂತಿ ವಿಬುಧಾದಯಃ ।**
**ಪಾಪಾಲಯಾಶ್ಚ ಮನುಜಾಃ ಪ್ರಭಾವಂ ನ ಹರೇಃಪರಮ್ ॥ 43 ॥**

**ಸತ್ಯಂ ಸರ್ವೋತ್ತಮಸ್ಸಾಕ್ಷಾತ್ ಸ ಏವ ಪುರುಷೋತ್ತಮಃ ।**
**ದಕ್ಷಿಣಂ ಪಾಣಿಮಾಶ್ರಿತ್ಯ ರಾಜತೇ ಚಕ್ರಮುತ್ತಮಮ್ ॥ 44 ॥**

---

+ ವಿಂಧ್ಯಪಾದಂ

**ತಥೋತ್ತರೇ ಶಂಖವರೋ ರಾಜತೇ ಹಂಸರಾಜವತ್ ।**
**ಯತ್ಕಂಠೇ ಕೌಸ್ತುಭಂ ರತ್ನಂ ಕರ್ಣೇ ಮಕರಕುಂಡಲೇ ॥ 45 ॥**

ಮಾತಃ = ಅಮ್ಮಾ, ತ್ವಯಾ = ನಿನ್ನಿಂದ, ಆಜ್ಞಪ್ತಾ = ಅಪ್ಪಣೆಪಡೆದವಳಾಗಿ, ಸಖೀಯುತಾ = ಗೆಳತಿಯರೊಡನೆ, ಪುಷ್ಪಾರಾಮಂ (ಪ್ರತಿ) = ಪುಷ್ಪೋದ್ಯಾನವನ್ನು(ಹೂವಿನ ತೋಟವನ್ನು) ಕುರಿತು (ಪಾ- ಪುಣ್ಯೋದ್ಯಾನಂ = ಪುಣ್ಯಕರವಾದ ಉದ್ಯಾನವನವನ್ನು ಕುರಿತು), ಗತಾ = ಹೋದೆನು. ತತ್ರ = ಅಲ್ಲಿ (ಅಲ್ಲಿಗೆ), ಕಶ್ಚಿತ್ = ಒಬ್ಬ, ಪುರಾಣಪುರುಷೋತ್ತಮಃ = ಅನಾದಿನಿತ್ಯನಾದ ಸಾಕ್ಷಾತ್ ಪರಮಪುರುಷನಾದ, ಪುಮಾನ್ = ಪುರುಷನು, ಪ್ರಾಪ್ತಃ = ಬಂದನು. ॥ 41 ॥ ಮಾತಃ = ತಾಯಿಯೇ, ಪುಂಡರೀಕ ನಿಭೇಕ್ಷಣಂ = ಕಮಲದಂತಿರುವ ಕಣ್ಣುಗಳಿಂದ ಕೂಡಿರುವ, ತದ್ವಕ್ತ್ರಂ = ಅವನ ಮುಖವನ್ನು, ಸ್ಮರಾಮಿ = ಧ್ಯಾನಿಸುತ್ತಿದ್ದೇನೆ, ತಂ ವಿನಾ = ಅವನನ್ನು ಬಿಟ್ಟು, ನ ಹಿ ಜೀವಾಮಿ = ಬದುಕಿರಲಾರೆ, ಸತ್ಯಮಿತಿ = ಇದು ಸತ್ಯವೆಂದು, ಅವಧಾರಯ = ತಿಳಿಯುವವಳಾಗು(ತಿಳಿ) ॥ 42 ॥ ತಸ್ಯ ಕೃಷ್ಣಸ್ಯ = ಆ ಶ್ರೀಕೃಷ್ಣನ, ಚರಿತಂ = ಚರಿತ್ರೆಯನ್ನು, ವಿಬುಧಾದಯಃ = ದೇವತೆಗಳೇ ಮೊದಲಾದ ಜ್ಞಾನಿಗಳು, ಜಾನಂತಿ = ತಿಳಿಯುವರು (ತಿಳಿದಿದ್ದಾರೆ). ಪಾಪಾಲಯಾಶ್ಚ = ಪಾಪಿಗಳಿಗೆ ಆಶ್ರಯರಾದ (ಮಹಾಪಾಪಿಗಳಾದ), ಮನುಜಾಃ = ಮಾನವರು, ಹರೇಃ = ಶ್ರೀಹರಿಯ, ಪರಂ = ಉತ್ಕೃಷ್ಟವಾದ, ಪ್ರಭಾವಂ = ಮಹಿಮೆಯನ್ನು, ನ ಜಾನಂತಿ = ತಿಳಿಯಲಾರರು ॥ 43 ॥ ಸ ಏವ = ಆ ಮಹಾನುಭಾವನೇ, ಸರ್ವೋತ್ತಮಃ = ಸಕಲ ದೇವತೆಗಳಲ್ಲಿ ಶ್ರೇಷ್ಠನಾದ, ಸಾಕ್ಷಾತ್ = ಪ್ರತ್ಯಕ್ಷವಾಗಿ, ಪುರುಷೋತ್ತಮಃ = ಶ್ರೀಹರಿಪರಮಾತ್ಮನು. ಸತ್ಯಂ = ಇದು ಸತ್ಯವು, ಉತ್ತಮಂ = ಶ್ರೇಷ್ಠವಾದ, ಚಕ್ರಂ = ಸುದರ್ಶನ ಚಕ್ರವು, ದಕ್ಷಿಣಂ ಪಾಣಿಂ = ಬಲಕೈಯನ್ನು, ಆಶ್ರಿತ್ಯ = ಆಶ್ರಯಿಸಿ, ರಾಜತೇ = ವಿರಾಜಿಸುವುದು ॥ 44 ॥ ತಥಾ = ಹಾಗೆಯೇ, ಉತ್ತರೇ = ಎಡಕರದಲ್ಲಿ, ಹಂಸರಾಜವತ್ = ಅತಿ ಬಿಳುವಾದ ರಾಜಹಂಸದಂತೆ, ಅಥವಾ ಹಂಸ = ಬಿಳುಪಾದ ಹಂಸ ಮತ್ತು ರಾಜವತ್ = ಚಂದ್ರನಂತೆ, ಶಂಖವರಃ = ಶ್ರೇಷ್ಠಶಂಖವು, ರಾಜತೇ = ಪ್ರಕಾಶಿಸುವುದು. ಯತ್ = ಯಾವ ಪರಮಾತ್ಮನ, ಕಂಠೇ = ಕೊರಳಲ್ಲಿ, ಕೌಸ್ತುಭಂ ರತ್ನಂ = ಕೌಸ್ತುಭವೆಂದು ಖ್ಯಾತವಾದ ರತ್ನವೂ, ಕರ್ಣೇ = ಕಿವಿಗಳಲ್ಲಿ, ಮಕರಕುಂಡಲೇ = ಮಕರಕುಂಡಲಗಳು (ವಿರಾಜಿಸಿವೆಯೋ) ॥ 45 ॥

**ಯಸ್ಯ ಚಕ್ರ ಪ್ರಭಾವೇಣ ದಗ್ಧಾ ವಾರಾಣಸೀಪುರೀ ।**
**ಯಸ್ಯ ಶಾರ್ಙ್ಗಧ್ವನಿಂ ಶ್ರುತ್ವಾ ವಿದ್ರವಂತ್ಯಸುರಾದಯಃ ॥ 46 ॥**

**ತದ್ಭಕ್ತ ಲಕ್ಷಣಂ ವಕ್ಷ್ಯೇ ಶ್ರುಣು ಮಾತಃ ಸವಿಸ್ತರಮ್ ।**
**ವೇದಶಾಸ್ತ್ರಪರಾ ಯೇಚ ಯೇಚ ಧರ್ಮವ್ರತೇ ಪರಾಃ ॥ 47 ॥**

**ವೇದೋಕ್ತಂ ಕರ್ಮ ಕುರ್ವಂತಿ ತಾನ್ ಭಕ್ತಾನ್ವಿದ್ಧಿ ವೈಷ್ಣವಾನ್ ।**
**ಶಂಖಚಕ್ರಾಂಕಿತಾ ಯೇಚ ಊರ್ಧ್ವಪುಂಡ್ರಧರಾಶ್ಚ ಯೇ ॥ 48 ॥**

**ನಾ ಸತ್ಯಂ ವದತೇ ಯೇತು ಪಿತೃಮಾತೃವ್ರತೇಸ್ಥಿತಾಃ *।**
**ತದ್ಭಕ್ತಲಕ್ಷಣಂ ಚೈತತ್ತಂ ವಿನಾ ಕೋಽನು ಜೀವತಿ ॥ 49 ॥**

**ತನಯಾ ವಚನಂ ಶ್ರುತ್ವಾ ಸಾನಂದಾ ವಾಕ್ಯಮಬ್ರವೀತ್ ।**

*ಪಾ - ಗರುಡಂ ಪನಗೇಶಾನಂ ಮಹೇಂದಂ ಚಂಡಶಾಸನಂ

*ಧರಣ್ಯುವಾಚ-*

**ಸತ್ಯಂ ವದ ವರಾರೋಹೆ! ಭ್ರಮೋ ವಾ ಜ್ವರಕಾರಣಮ್ II 50 II**

ಯಸ್ಯ = ಯಾವ ಶ್ರೀಹರಿಯ, ಚಕ್ರಪ್ರಭಾವೇಣ = ಸುದರ್ಶನ ಚಕ್ರದ ಮಹಿಮೆ (ಪ್ರಭಾವದಿಂದ)ಯಿಂದ, ವಾರಾಣಸೀಪುರೀ = ಕಾಶೀಪಟ್ಟಣವು, ದಗ್ಧಾ = ಭಸ್ಮವಾಯಿತೋ. ಯಸ್ಯ = ಯಾವ ವಿಷ್ಣುವಿನ, ಶಾರ್ಙವೆಂಬ ಧನುಸ್ಸಿನ ಠೇಂಕಾರಧ್ವನಿಯನ್ನು (ಪಾ- ಶಂಖಧ್ವನಿಂ = ಪಾಂಚಜನ್ಯವೆಂಬ ಶಂಖದ ಧ್ವನಿಯನ್ನು) ಶ್ರುತ್ವಾ = ಕೇಳಿ, ಅಸುರಾದಯಃ = ದೈತ್ಯದಾನವಾದಿಗಳು, ವಿದ್ರವಂತಿ = ಹೆದರಿ ಓಡಿಹೋಗುವರೋ (ಅಂತಹ ಪುರುಷೋತ್ತಮನ), ವಕ್ತ್ರಂ = ಮುಖವನ್ನು, ಸ್ಮರಾಮಿ = ಸ್ಮರಿಸುವೆನು II 46 II ಹೇ ಮಾತಃ = ಎಲೈ ತಾಯಿಯೇ(ಇನ್ನು), ತದ್ಭಕ್ತಲಕ್ಷಣಂ = ಆ ಶ್ರೀಹರಿಯ ಭಕ್ತರ ಲಕ್ಷಣ (ಗುರುತು)ವನ್ನು, ಸವಿಸ್ತರಂ = ವಿಸ್ತಾರವಾಗಿ, ವಕ್ಷ್ಯೇ = ಹೇಳುತ್ತೇನೆ. ಶ್ರುಣು = ಕೇಳು, ಯೇಚ = ಯಾರು, ವೇದಶಾಸ್ತ್ರಪರಾಃ = ವೇದಾದಿಶಾಸ್ತ್ರಗಳಲ್ಲಿ ಆಸಕ್ತರಾಗಿರುವರೋ, ಯೇ ಚ = ಯಾರು, ಧರ್ಮವ್ರತೇ = ಧರ್ಮಸಂಪಾದಕವಾದ ನಿಯಮದಲ್ಲಿ (ಧಾರ್ಮಿಕ ನಿಯಮದಲ್ಲಿ) ಪರಾಃ = ಆಸಕ್ತರಾಗಿ, ವೇದೋಕ್ತಂ = ವೇದಗಳಲ್ಲಿ ಹೇಳಿರುವ, ಕರ್ಮ = ಸತ್ಕರ್ಮಗಳನ್ನು, ಕುರ್ವಂತಿ = ಮಾಡುವರೋ, ತಾನ್ = ಅಂಥ, ವೈಷ್ಣವಾನ್ = ವಿಷ್ಣುನಿಷ್ಠರಾದ, ಭಕ್ತಾನ್ = ಹರಿಭಕ್ತರನ್ನಾಗಿ, ವಿದ್ಧಿ = ತಿಳಿಯುವವಳಾಗು, ಯೇ ಚ = ಯಾರು, ಶಂಖಚಕ್ರಾಂಕಿತಾಃ = ಎರಡು ಭುಜಗಳಲ್ಲಿ ತಪ್ತಮುದ್ರಾಂಕನಮಾಡಿಕೊಂಡಿರುವರೋ, ಅಥವಾ ಶಂಖಚಕ್ರಚಿನ್ಹೆಗಳನ್ನು ಧಾರಣಮಾಡಿಕೊಂಡಿರುವರೋ, ಚ = ಮತ್ತು, ಯೇ = ಯಾರು, ಊರ್ಧ್ವಪುಂಡ್ರಧರಾಶ್ಚ = ಊರ್ಧ್ವಪುಂಡ್ರ (ನಾಮ)ವನ್ನು ಧರಿಸಿರುವರೋ, ಯೇತು = ಯಾರು, ಅಸತ್ಯಂ = ಸುಳ್ಳನ್ನು, ನ ವದತೇ = ಹೇಳುವುದಿಲ್ಲವೋ, ಯೇತು = ಯಾರು, ಪಿತೃಮಾತೃವ್ರತೇ = ತಂದೆ ತಾಯಿಗಳ ಸೇವಾರೂಪವ್ರತದಲ್ಲಿ, ಸ್ಥಿತಾಃ = ಇದ್ದಾರೆಯೋ, (ಪಾ- ವ್ರತೇ = ಸೇವಾರೂಪನಿಯಮದಲ್ಲಿ, ಏಧಿತಾಃ = ಅಭಿವೃದ್ಧಿ ಪಡೆದಿರುವರೋ), ಏತತ್ = ಇವುಗಳು, ತದ್ಭಕ್ತಲಕ್ಷಣಂ = ಶ್ರೀ ಹರಿಭಕ್ತರ ಲಕ್ಷಣವು, ತಂ = ಇಂಥ ಶ್ರೀಹರಿಯನ್ನು, ವಿನಾ = ಬಿಟ್ಟು, ಕೋನು = ಯಾರುತಾನೇ, ಜೀವತಿ = ಜೀವಿಸುವರು? II 47-49 II ತನಯಾವಚನಂ = ಮಗಳ ಮಾತನ್ನು, ಶ್ರುತ್ವಾ = ಕೇಳಿ, ಸಾನಂದಾ = ಸಂತೋಷಯುಕ್ತಳಾಗಿ, ವಾಕ್ಯಮಬ್ರವೀತ್ = (ಧರಣಿಯು) ಮಾತನಾಡಿದಳು, ವರಾರೋಹೇ = ಪದ್ಮಾವತಿ! (ನೀನು ಹೇಳುತ್ತಿರುವುದು), ಭ್ರಮೋ ವಾ = ಮನೋಭ್ರಾಂತಿಯೇ? ಜ್ವರ ಕಾರಣಂವಾ = ಅಥವಾ ಜ್ವರದ ತಾಪದ ಕಾರಣದಿಂದಲೋ? ಸತ್ಯಂ ವದ = ಸತ್ಯವನ್ನು (ಸತ್ಯವಾಗಿ) ಹೇಳು II50II

*ಪದ್ಮಾವತ್ಯುವಾಚ-*

**ಸತ್ಯಂ ವದಾಮಿ ಹೇಮಾತಃ ದೃಷ್ಟ ಏವ ಮಹಾಪ್ರಭುಃ ।**
**ತದ್ದರ್ಶನಧಿಯಾ ಮೇದ್ಯ ಜಾಯತೇ ದೇಹಶೋಷಣಂ II**

*ಶತಾನಂದ ಉವಾಚ -*

**ಸಾಂತ್ವಯಿತ್ವಾ ಸುತಾಂ ಭದ್ರಾಂ ಭರ್ತುರ್ಭವನಮಭ್ಯಗಾತ್ II 51 II**

**ಪಾಕಾರ್ಥಂ ಪರಮಾನಂದಭರಿತಾ ಭಾಗ್ಯಸಂಪದಾ ।**
**ಪುತ್ರ್ಯಂಗಶೋಷಸಂಕ್ಷುಬ್ಧಂ ಕೃಚ್ಛ್ರಸಂತಾಪಸಂಯುತಮ್ II 52 II**

**ಅವದತ್ಸ್ವಪತಿಂ ಪ್ರಾಪ್ಯ ಪುತ್ರೀಕಾಯವಿಶೋಷಣೇ ।**
**ಕಾರಣಂ ಧರ್ಮದೇವ್ಯುಕ್ತಮಥ ತಚ್ಛಾಂತಿಕಾರಣಮ್ II 53 II**

**ಸರ್ವಂ ಸಂಬೋಧಯಾಮಾಸ ಪುತ್ರ್ಯಾಹೃದ್ಗತಮಾದರಾತ್ ।**
**ಏತಸ್ಮಿನ್ನೇವ ಸಮಯೇ ಕನ್ಯಾಶ್ಚ ಬಕುಲಾನ್ವಿತಾಃ ॥ 54 ॥**

**ಅಭಿಷಿಚ್ಯ ಜಗನ್ನಾಥಂ ಶಂಕರಂ ಬ್ರಾಹ್ಮಣೈಸ್ಸಹ ।**
**ಸಂಭಾರಾನ್ ಶಿರಸಾಧೃತ್ವಾ ಬ್ರಾಹ್ಮಣೈಸ್ಸಪುರೋಹಿತೈಃ ॥ 55 ॥**

ಪದ್ಮಾವತ್ಯುವಾಚ = ಪದ್ಮಾವತಿಯು ಹೇಳಹತ್ತಿದಳು - ಹೇ ಮಾತಃ = ಎಲೈ ತಾಯಿಯೇ, ಸತ್ಯಂವದಾಮಿ = ಸತ್ಯವಾಗಿ ಹೇಳುತ್ತೇನೆ. ಮಹಾಪ್ರಭುಃ = ಆ ಮಹಾಸ್ವಾಮಿಯು, ದೃಷ್ಟ ಏವ = ಕಣ್ಣಾರೆ ಕಂಡವನಾದನು (ನನ್ನಿಂದ ನಿಜವಾಗಿ ನೋಡಲ್ಪಟ್ಟನು). ತದ್ದರ್ಶನಧಿಯಾ = ಅವನನ್ನು ಮತ್ತೆ ನೋಡಬೇಕೆಂಬ ಬುದ್ಧಿಯಿಂದ, ಮೇ = ನನಗೆ, ಅದ್ಯ = ಈಗ, ದೇಹಶೋಷಣಂ = ದೇಹದ ಬಳಲಿಕೆಯು, ಜಾಯತೇ = ಆಗುತ್ತಿದೆ. ಶತಾನಂದ ಉವಾಚ = ಶತಾನಂದ ಮುನಿಗಳು (ಜನಕರಾಯನಿಗೆ) ಹೇಳುತ್ತಿದ್ದಾರೆ. ಭದ್ರಾಂ = ಮಂಗಳಕರಳಾದ, ಸುತಾಂ = ಪುತ್ರಿಯಾದ ಪದ್ಮಾವತಿಯನ್ನು, ಸಾಂತ್ವಯಿತ್ವಾ = ಸಮಾಧಾನಪಡಿಸಿ, ಧರಣಿಯು, ಭರ್ತುರ್ಭವನಂ (ಪ್ರತಿ) = ಪತಿಯ ಅರಮನೆಯನ್ನು ಕುರಿತು, ಪರಮಾನಂದಭರಿತಾ = ಪರಮಹರ್ಷಯುಕ್ತಳಾಗಿ, ಭಾಗ್ಯಸಂಪದಾ = ಭಾಗ್ಯಸಂಪದ್ಯುಕ್ತಳಾದ ಧರಣೀದೇವಿಯು, ಪಾಕಾರ್ಥಂ = ಅಡುಗೆಯ ನಿರ್ವಹಣೆಗಾಗಿ, ಅಭ್ಯಗಾತ್ = ಬಂದಳು ॥ 51 ॥ ಪುತ್ರ್ಯಂಗಶೋಷಕ್ಷುಬ್ಧಂ = ಮಗಳ ದೇಹಶೋಷಣೆಯಿಂದ ಕ್ಷುಬ್ಧನಾಗಿರುವ, ಕೃಚ್ಛ್ರಸಂತಾಪ ಸಂಯುತಂ - ಕೃಚ್ಛ್ರ = ಉಪವಾಸ, ಸಂತಾಪ = ಸಂಕಟಗಳಿಂದ, ಸಂಯುತಂ = ಕೂಡಿರುವ ॥ 52 ॥ ಪತಿಂ ಪ್ರಾಪ್ಯ = ಪತಿಯಾದ ಆಕಾಶರಾಜನನ್ನು ಹೊಂದಿ (ಪತಿಯ ಬಳಿಗೆ ಬಂದು), ಪುತ್ರೀಕಾಯವಿಶೋಷಣೇ = ಮಗಳ ದೇಹಶೋಷಣೆಗೆ, ಕಾರಣಂ = ಕಾರಣವನ್ನು, ಅವದತ್ = ಹೇಳಿದಳು. ಅಥ = ಆ ತರುವಾಯ, ಧರ್ಮದೇವ್ಯುಕ್ತಂ = ಕೊರವಂಜಿಯು ನಿರೂಪಿಸಿದ್ದನ್ನೂ; ತಚ್ಛಾಂತಿಕಾರಣಂ = ಅದಕ್ಕೆ ಶಾಂತಿಯು ಏನೆಂಬುದನ್ನು ॥ 53 ॥ ಪುತ್ರ್ಯಾಃ = ಮಗಳ, ಹೃದ್ಗತಂ = ಮನಸ್ಸಿನಲ್ಲಿರುವುದನ್ನೂ, ಸರ್ವಂ = ಆ ಎಲ್ಲ ಸಮಾಚಾರಗಳನ್ನು, ಆದರಾತ್ = ಆದರಪೂರ್ವಕವಾಗಿ, ಸಂಬೋಧಯಾಮಾಸ = ತಿಳಿಸಿಹೇಳುವವಳಾದಳು. ಏತಸ್ಮಿನ್ನೇವ ಸಮಯೇ = ಅದೇ ವೇಳೆಗೆ ಸರಿಯಾಗಿ, ಬಕುಲಾನ್ವಿತಾಃ = ಬಕುಳೆಯಿಂದ ಸಹಿತರಾದ, ಕನ್ಯಾಃ = ಅಂತಃಪುರದ ಕನ್ನಿಕೆಯರು, ॥ 54 ॥ ಜಗನ್ನಾಥಂ = ಜಗತ್ತಿಗೆ ಸ್ವಾಮಿಯಾದ, ಶಂಕರಂ = (ಸುಖಪ್ರದನಾದ) ರುದ್ರನನ್ನು, ಅಭಿಷಿಚ್ಯ = ಅಭಿಷೇಕಮಾಡಿಸಿ, ಬ್ರಾಹ್ಮಣೈಸ್ಸಹ = ಬ್ರಾಹ್ಮಣರಿಂದೊಡಗೂಡಿ, ಸಂಭಾರಾನ್ = ಅಭಿಷೇಕಪ್ರಸಾದಾದಿಗಳನ್ನು, ಶಿರಸಾ = ತಲೆಯಲ್ಲಿ, ಧೃತ್ವಾ = ಇಟ್ಟುಕೊಂಡು, ಸಪುರೋಹಿತೈಃ = ಪುರೋಹಿತರಿಂದ ಯುಕ್ತರಾದ, ಬ್ರಾಹ್ಮಣೈಃ = ಭೂಸುರರಿಂದ, ಸಹಿತರಾಗಿ (ಬ್ರಾಹ್ಮಣರೊಡನೆ) ॥ 55 ॥

**ರಾಜಧಾನೀಂ ಸಮಾಸಾದ್ಯ ಅಂತರ್ಭವನಮಭ್ಯಯುಃ ।**
**ಸಮಾಗತಾನ್ ದ್ವಿಜಾನ್ ಸರ್ವಾನ್ ಸಂಪೂಜ್ಯ ವಿಧಿಪೂರ್ವಕಮ್ ॥ 56 ॥**

**ಗಂಧಪುಷ್ಪಾಕ್ಷತಾದ್ಯೈಶ್ಚ ವಸ್ತ್ರಾಲಂಕಾರದಕ್ಷಿಣೈಃ ।**
**ವಿಪ್ರಾಶಿಷೋಕ್ತಮಂತ್ರೈಶ್ಚ ಸುತಾಂ ಸಂಮಾರ್ಜಯತ್ತದಾ ॥ 57 ॥**

**ಸ್ವಯಂ ಭುಕ್ತ್ವಾ ಮಹಾರಾಜಾ ಬ್ರಾಹ್ಮಣಾನಾಮಥಾಜ್ಞಯಾ ।**
**ಸಾಪಿ ಭುಕ್ತ್ವಾ ಮಹಾರಾಜ! ಧರಣೀ ಬಹಿರಾಗತಾ ॥ 58 ॥**

**ದದರ್ಶ ತಾಂ ಮಹಾರಾಜ! ಬಕುಲಾಂ ನವರೂಪಿಣೀಮ್ ।**
**ಧರ್ಮದೇವೀವಚಃಸ್ಮೃತ್ವಾ ತತ್ಸಮೀಪಮುಪಾಗತಾ ॥ 59 ॥**

**ಪಪ್ರಚ್ಛ ತಾಸ್ತದಾ ಕನ್ಯಾ ಏತದ್ವೃತ್ತಾಂತಕೋವಿದಾಃ ।**

*ಧರಣ್ಯುವಾಚ-*

**ಪೃಚ್ಛ್ಯತಾಂ ಕನ್ಯಕಾ ಅಸ್ಯಾಃ ಕಿಮಾಗಮನಕಾರಣಮ್ ॥**
**ಕೈಷಾ ಕಸ್ಮಾದುಪಾಯಾತಾ ಪೂಜ್ಯೈಷಾ ಪ್ರತಿಭಾತಿ ಮೇ ॥ 60 ॥**

ರಾಜಧಾನೀಂ = ನಾರಾಯಣಪುರವನ್ನು, ಸಮಾಸಾದ್ಯ = ಬಂದು ಸೇರಿ, ಅಂತರ್ಭವನಂ = ರಾಣೀವಾಸದ ಮನೆಯನ್ನು ಕುರಿತು, ಅಭ್ಯಯುಃ = ಬಂದವರಾದರು. ಮಹಾರಾಜಾ = ಆಕಾಶರಾಜನು, ಸಮಾಗತಾನ್ = ಬಂದಂಥಾ, ಸರ್ವಾನ್ ಬುಧಾನ್ = ಎಲ್ಲ ಬ್ರಾಹ್ಮಣರನ್ನೂ, ಗಂಧಪುಷ್ಪಾಕ್ಷತಾದ್ಯೈಶ್ಚ = ಗಂಧ, ಹೂವು, ಅಕ್ಷತಾದಿಗಳಿಂದಲೂ, ವಸ್ತ್ರಾಲಂಕಾರ ದಕ್ಷಿಣೈಃ = ವಸ್ತ್ರ, ಆಭರಣ, ದಕ್ಷಿಣೆ ಮುಂತಾದವುಗಳಿಂದ, ವಿಧಿಪೂರ್ವಕ = ವೈದಿಕಶಾಸ್ತ್ರೋಕ್ತ ಕ್ರಮದಿಂದ, ಸಂಪೂಜ್ಯ = ಗೌರವಿಸಿ, ವಿಪ್ರಾಶಿಷೋಕ್ತಮಂತ್ರೈಶ್ಚ = ಭೂಸುರರು ಹೇಳಿದ ಆಶೀರ್ವಾದ ಮಂತ್ರಗಳಿಂದ, ಸುತಾಂ = ಪದ್ಮಾವತಿಯನ್ನು, ಸಂಮಾರ್ಜಯತ್ = (ಮಂತ್ರೋದಕದಿಂದ) ಪ್ರೋಕ್ಷಣಮಾಡಿದನು ॥ 56-57 ॥ ಅಥ = ತರುವಾಯ, ಮಹಾರಾಜಾ = ಆಕಾಶರಾಜನು, ಬ್ರಾಹ್ಮಣಾನಾಂ = ವಿಪ್ರರ, ಅಜ್ಞಯಾ = ಅಪ್ಪಣೆಯಿಂದ, ಸ್ವಯಂ = ತಾನು, ಭುಕ್ತ್ವಾ = ಭೋಜನಮಾಡಿದನು, ಮಹಾರಾಜ = ಎಲೈ ಜನಕಮಹಾರಾಜ, ಸಾಪಿ ಧರಣೀ = ರಾಣಿಯಾದ ಧರಣಿದೇವಿಯೂ, ಭುಕ್ತ್ವಾ = ಊಟಮಾಡಿ, ಬಹಿರಾಗತಾ = ಹೊರಗೆ ಬಂದವಳಾದಳು. ಮಹಾರಾಜ = ಜನಕಮಹಾರಾಜ!, ನವರೂಪಿಣೀಂ = ನೂತನರೂಪಯುಕ್ತಳಾದ, ತಾಂ ಬಕುಲಾಂ = ಆ ಬಕುಳಾದೇವಿಯನ್ನು, ದದರ್ಶ = ನೋಡಿದಳು. ಧರ್ಮದೇವೀವಚಃ = ಕೊರವಂಜಿಯ ಮಾತನ್ನು, ಸ್ಮೃತ್ವಾ = ನೆನೆದು, ತತ್ಸಮೀಪಂ = ಬಕುಳೆಯ ಬಳಿಗೆ, ಉಪಗತಾ = ಬಂದಳು ॥ 58-59 ॥ ತದಾ = ಆವಾಗ, ಏತದ್ವೃತ್ತಾಂತಕೋವಿದಾಃ = ಬಕುಳೆಯ ಸಮಾಚಾರವನ್ನು ತಿಳಿಸಲು ನಿಪುಣರಾದ (ಅಥವಾ ಎಲ್ಲ ವಿಚಾರಗಳಲ್ಲಿ ಕುಶಲರಾದ), ತಾ ಕನ್ಯಕಾಃ = ಆ ಕನ್ನಿಕೆಯರು, ಪಪ್ರಚ್ಛ = ಕೇಳಲ್ಪಟ್ಟವರಾದರು, ಧರಣ್ಯುವಾಚ = ಧರಣೀದೇವಿಯು ಕೇಳಹತ್ತಿದಳು. ಕನ್ಯಕಾಃ = ಎಲೈ ಕನ್ನಿಕೆಯರೇ, ಅಸ್ಯಾಃ = ಇವಳ, ಆಗಮನಕಾರಣಂ = ಇವಳಿಲ್ಲಿಗೆ ಬಂದಕಾರಣವು, ಪೃಚ್ಛ್ಯತಾಂ = ಹೇಳಲ್ಪಡಲಿ. ಏಷಾ ಕಾ = ಇವಳಾರು?, ಕಸ್ಮಾತ್ = ಏತಕ್ಕಾಗಿ, ಉಪಾಗತಾ = ಬಂದವಳಾದಳು? ಏಷಾ = ಈಕೆಯು, ಮೇ = ನನಗೆ, ಪೂಜ್ಯಾ ಪ್ರತಿಭಾತಿ = ಪೂಜಾರ್ಹಳಂತೆ ತೋರುತ್ತಿದ್ದಾಳೆ ॥ 60 ॥

**ತದಾಜ್ಞಾಕಾರಿಕಾ ಕಾಚಿದ್ವಾಕ್ಯಮಾಹ ಮಹೀಪತೆ! ।**

*ಕನ್ಯಕೋವಾಚ-*

**ವಾಸಃ ಪನ್ನಗಶೈಲೇಂದ್ರೇ ಸ್ವಾಮೀ ಮೇ ವೇಂಕಟೇಶ್ವರಃ ॥ 61 ॥**

**ಕಾರ್ಯಮಸ್ತೀತಿ ಕಥಿತಂ ತಯಾ ಬಕುಲಾಮಲಯಾ ।**
**ವಯಂ ಪ್ರಾಪ್ತಾ ಮಹಾಭಾಗೆ! ತ್ವತ್ಸಮೀಪಂ ಮಹಾಮತೇ ॥ 62 ॥**

**ಪೃಚ್ಛತ್ತಾಂ ತಾಂ ಚ ವೃತ್ತಾಂತಂ ತದಾಗಮನಜಂ ಸಖೇ ।**
**ಏವಮುಕ್ತಾಥ ಕಲ್ಯಾಣೀ ಪ್ರತಿನಂದ್ಯಾಹ ಭಾರತೀಮ್ ॥ 63 ॥**

*ಧರಣ್ಯುವಾಚ-*

**ತಿಷ್ಠ ಭದ್ರೇ! ವರಾರೋಹೇ! ರತ್ನಪೀಠೇ ಸುನಿರ್ಮಲೇ ।**
**ಇತ್ಯುಕ್ತಾ ಸಾ ತಯಾ ಬಾಲಾ ರತ್ನಪೀಠೇ ನಿವೇಶಿತಾ ॥ 64 ॥**

**ಮೇನೇ ಕೃತಾರ್ಥಮಾತ್ಮಾನಂ ಸಾಫಲ್ಯಂ ಜನ್ಮನೋ ನೃಪಃ ।**
**ಉವಾಚ ನೃಪಭಾರ್ಯಾಽಥ ಧರಣೀ ದೇವಮಾತರಮ್ ॥ 65 ॥**

ಮಹೀಪತೇ = ಜನಕಮಹಾರಾಜನೇ, ತದಾಜ್ಞಾಕಾರಿಕಾ = ರಾಣಿಯ ಅಪ್ಪಣೆಯನ್ನು ನೆರವೇರಿಸುವವಳಾದ, ಕಾಚಿತ್ = ಓರ್ವ ಸಖಿಯು, ವಾಕ್ಯಮಾಹ = ಮಾತು ಹೇಳಿದಳು, ಕನ್ಯಕೋವಾಚ = ಕನ್ನಿಕೆಯು ಹೇಳುತ್ತಿದ್ದಾಳೆ, ಪನ್ನಗಶೈಲೇಂದ್ರೇ = ಶೇಷಗಿರಿಯಲ್ಲಿ, ಮೇ = ನನಗೆ, ವಾಸಃ = ವಾಸವು, ವೇಂಕಟೇಶ್ವರಃ = ವೇಂಕಟಗಿರಿಗೆ ಸ್ವಾಮಿಯಾದ ಶ್ರೀನಿವಾಸನು, ಸ್ವಾಮೀ = ಪ್ರಭುವು ॥ 61 ॥ ಕಾರ್ಯಮಸ್ತಿ = ರಾಣಿಯ ಹತ್ತಿರ ಕಾರ್ಯವಿದೆ, ಇತಿ = ಹೀಗೆ, ತಯಾ ಬಕುಲಮಾಲಯಾ = ಆ ಬಕುಳಮಾಲಿಕೆಯಿಂದ, ಕಥಿತಂ = ಹೇಳಲ್ಪಟ್ಟಿತು. ಮಹಾಮತೇ = ಮತಿವಂತಳಾದ, ಮಹಾಭಾಗೇ = ಮಹನೀಯಳಾದ ಧರಣೀದೇವಿ! ತ್ವತ್ಸಮೀಪಂ = ನಿನ್ನ ಸನ್ನಿಧಿಯನ್ನು ಕುರಿತು, ವಯಂ = ನಾವು, ಪ್ರಾಪ್ತಾಃ = ಬಂದೆವು ॥ 62 ॥ ಸಖೆ = ಗೆಳತಿಯೇ, ತದಾಗಮನಜಂ = ಅವಳ ಆಗಮನಕ್ಕೆ ಕಾರಣವಾದ (ಅವಳಿಲ್ಲಿಗೆ ಬರಲು ಕಾರಣವಾದ), ವೃತ್ತಾಂತಂ (ಪ್ರತಿ) = ಸಮಾಚಾರದ ಬಗೆಗೆ, ತಾಂ = ಅವಳನ್ನು, ಪೃಚ್ಛತ್ತಾಂ = ಕೇಳಲ್ಪಡಲಿ. ಏವಮುಕ್ತಾ = ಹೀಗೆ ಹೇಳಿಕೊಳ್ಳಲ್ಪಟ್ಟ, ಕಲ್ಯಾಣೀ = ಧರಣೀದೇವಿಯು, ಅಥ = ಆ ತರುವಾಯ, ಪ್ರತಿನಂದ್ಯ = ಸಖಿಯಮಾತನ್ನು ಅನುಮೋದಿಸಿ, ಭಾರತೀಂ = ಮಾತನ್ನು, ಆಹ = ಹೇಳಿದಳು ॥ 63 ॥ ಧರಣ್ಯುವಾಚ = ಧರಣಿಯು ಹೇಳಿದಳು – ವರಾರೋಹೇ = ಎಲ್ಲೈ ಉತ್ತರಮಾಂಗವುಳ್ಳ, ಭದ್ರೇ = ಮಂಗಳಕರಳೇ, ಸುನಿರ್ಮಲೇ = ಅತಿನಿರ್ಮಲವಾದ, ರತ್ನಪೀಠೇ = ರತ್ನಮಯವಾದ ಆಸನದಲ್ಲಿ, ತಿಷ್ಠ = ಕೂಡುವವಳಾಗು, ತಯಾ = ಧರಣೀದೇವಿಯಿಂದ, ಇತ್ಯುಕ್ತಾ = ಹೇಳಲ್ಪಟ್ಟಂಥ, ಸಾಬಾಲಾ = ಆ ಬಕುಳೆಯು, ರತ್ನಪೀಠೇ = ರತ್ನಪೀಠದಲ್ಲಿ, ನಿವೇಶಿತಾ = ಕೂಡಿಸಲ್ಪಟ್ಟಳು. ನೃಪ = ಜನಕರಾಜ, ನೃಪಭಾರ್ಯಾ = ರಾಜನ ಮಡದಿಯಾದ ಧರಣೀದೇವಿಯು, ಆತ್ಮಾನಂ = ತನ್ನನ್ನು, ಕೃತಾರ್ಥಂ = ಕೃತಾರ್ಥಳನ್ನಾಗಿ, ಜನ್ಮಸಾಫಲ್ಯಂ = ಜನ್ಮದ ಸಫಲತೆಯನ್ನು, ಮನ್ಯೇ = ತಿಳಿದಳು, ಅಥ = ಅನಂತರ, ಧರಣೀ = ಧರಣೀದೇವಿಯು, ದೇವಮಾತರಂ (ಪ್ರತಿ) = ಭಗವಂತನತಾಯಿಯಾದ ಬಕುಳೆಯನ್ನು ಕುರಿತು, ಉವಾಚ = ಮಾತನಾಡಿದಳು ॥ 64-65 ॥

**ಸ್ವಾಗತಂ ತೇ ಮಹಾಭಾಗೇ! ಮಮ ಪುಣ್ಯಸ್ಯ ಕಾರಣಮ್ ।**
**ಮನ್ಯೇ ಕೃತಾರ್ಥಮಾತ್ಮಾನಂ ಸಫಲಂ ಸಾಧುಸಂಗಮಾತ್ ॥ 66 ॥**

**ನಿರ್ದೇಶಿತವ್ಯಂ ಯತ್ಕರ್ಮ ತದದ್ಯ ವಿದಧೀಮಹಿ ।**
**ಕಿಮರ್ಥಮಾಗಮೋ ಮಾತಃ ಕಿಂ ಕಾರ್ಯಂ ವದತಾಮಿತಿ ॥ 67 ॥**

**ಬಭಾಷೇ ಬಕುಲಾ ಭಾರ್ಯಾಂ ರಾಜ್ಞಸ್ತಸ್ಯ ಮಹಾತ್ಮನಃ ।**

*ಬಕುಲೋವಾಚ-*

**ಕನ್ಯಾಪೇಕ್ಷಾ ಮುಖ್ಯಕಾರ್ಯಂ ಪುನಃ ಕಾರ್ಯಶತೇನ ಕಿಮ್ ॥ 68 ॥**

**ಮುಖ್ಯಕಾರ್ಯಂ ತತಃ ಶ್ರುತ್ವಾ ವರಾರೋಹಾಮಥಾಬ್ರವೀತ್ ।**

*ಧರಣ್ಯುವಾಚ-*

**ಸಮ್ಯಗುಕ್ತಂ ತ್ವಯಾ ದೇವಿ! ವರಾಪೇಕ್ಷಾಽಪಿ ವರ್ತತೇ ॥ 69 ॥**

**ಕೋ ವಾ ವರಃ ಕಶ್ಚ ದೇಶೋ ಗೋತ್ರಂ ನಕ್ಷತ್ರಕಂ ಚ ಕಿಮ್ ।**

**ಜನನೀ ತಸ್ಯ ಕಾ ಬಾಲಾ ಜನಕಶ್ಚ ಮಹಾಮತೇಃ ॥ 70 ॥**

ಧರಣ್ಯುವಾಚ = ಧರಣೀದೇವಿಯು ಹೇಳುತ್ತಲಿದ್ದಾಳೆ, ಮಹಾಭಾಗೇ = ಮಹಾನುಭಾವಳೇ, ತೇ = ನಿನಗೆ, ಸ್ವಾಗತಂ = ಸ್ವಾಗತವು (ನೀನು ಬಂದುದು) ಮಮ = ನನಗೆ, ಪುಣ್ಯಸ್ಯಕಾರಣಂ = ಸುಕೃತಕ್ಕೆ ಕಾರಣವು. ಸಾಧು ಸಂಗಮಾತ್ = ಸಜ್ಜನಳಾದ ನಿನ್ನ ಸಂಗಮದಿಂದ, ಆತ್ಮಾನಂ = ನನ್ನನ್ನು, ಕೃತಾರ್ಥಂ = ಕೃತಕೃತ್ಯಳನ್ನಾಗಿ, ಸಫಲಂ = ಫಲಪ್ರದವನ್ನಾಗಿಯೂ, ಮನ್ಯೇ = ತಿಳಿಯುವೆನು ॥ 66 ॥ ಯತ್ಕರ್ಮ = ನೀನು ಬಂದಕಾರ್ಯವು, ನಿರ್ದೇಶಿತವ್ಯಂ = ನಿರ್ದೇಶಿಸಲ್ಪಡಬೇಕು. ಅದ್ಯ = ಈಗ, ತತ್ = ಆ ಕಾರ್ಯವನ್ನು, ವಿದಧೀಮಹಿ = ನೆರವೇರಿಸುತ್ತೇವೆ. ಮಾತಃ = ತಾಯಿ ! ಕಿಮರ್ಥಮಾಗಮಃ = ಏತಕ್ಕಾಗಿ ಬರೋಣವಾಯಿತು? ಕಾರ್ಯಂ ಕಿಂ = ಏನು ಕೆಲಸವಿದೆ?, ವದತಾಂ = ಹೇಳಲ್ಪಡಲಿ, ಇತಿ = ಈ ಪ್ರಕಾರವಾಗಿ, ಅಪೃಚ್ಛತ = ಕೇಳಿದಳು ॥ 67 ॥ ಬಕುಳಾ = ಬಕುಳೆಯು, ಮಹಾತ್ಮನಃ = ಮಹನೀಯನಾದ, ತಸ್ಯರಾಜ್ಞಃ = ಆಕಾಶರಾಜನ, ಭಾರ್ಯಾಂ (ಪ್ರತಿ) = ಪತ್ನಿಯನ್ನು ಕುರಿತು, ಬಭಾಷೇ = ಮಾತನಾಡಿದಳು, ಬಕುಲೋವಾಚ = ಬಕುಳೆಯು ಹೇಳಿದಳು – ಕನ್ಯಾಪೇಕ್ಷಾ = ಕನ್ಯೆಯು ಬೇಕೆಂಬ ಅಪೇಕ್ಷೆಯು, ಮುಖ್ಯಕಾರ್ಯಂ = ಪ್ರಮುಖ ಕಾರ್ಯವಾಗಿದೆ. ಪುನಃ = ಮತ್ತೆ, ಕಾರ್ಯಶತೇನ ಕಿಂ = ನೂರು ಕಾರ್ಯಗಳಿಂದ ಪ್ರಯೋಜನವೇನು? ॥ 68 ॥ ತತಃ = ಅನಂತರ (ಬಕುಳೆಯಿಂದ) ಮುಖ್ಯಕಾರ್ಯಂ = ಪ್ರಮುಖಕಾರ್ಯವನ್ನು, ಶ್ರುತ್ವಾ = ಕೇಳಿದವಳಾಗಿ, (ರಾಣಿಯು) ಅಥ = ನಂತರ, ವರಾರೋಹಾಂ = ಬಕುಳೆಯನ್ನು ಕುರಿತು, ಅಬ್ರವೀತ್ = ಹೇಳಿದಳು. ಧರಣ್ಯುವಾಚ = ಧರಣೀದೇವಿಯು ಹೇಳಹತ್ತಿದಳು. ದೇವಿ = ಎಲೈ ಬಕುಳಾದೇವಿ! ತ್ವಯಾ = ನಿನ್ನಿಂದ, ಸಮ್ಯಗುಕ್ತಂ = ಚೆನ್ನಾಗಿ ಹೇಳಲ್ಪಟ್ಟಿತು. (ಅಸ್ಮಾಕಂ = ನಮಗೆ), ವರಾಪೇಕ್ಷಾಽಪಿ = ವರನ ಅಪೇಕ್ಷೆಯೂ, ವರ್ತತೇ = ಇದೆ. ॥ 69 ॥ ವರಃ = ವರನು, ಕೋವಾ = ಯಾರು? ಚ = ಮತ್ತು, ದೇಶಃ ಕಃ = ಅವನ ದೇಶವಾವುದು? ಗೋತ್ರಂ = ಗೋತ್ರವು, ನಕ್ಷತ್ರಕಂ ಚ = ಅವನ ನಕ್ಷತ್ರವೂ ಕೂಡ, ಕಿಂ = ಯಾವುದು? ಕಾ ಬಾಲಾ = ಯಾವ ಸ್ತ್ರೀಯು, ತಸ್ಯ = ಅವನ, ಜನನೀ = ತಾಯಿಯು? ಮಹಾಮತೇ = ಅತಿಬುದ್ಧಿವಂತಳೇ, ಜನಕಶ್ಚ = ಆತನ ತಂದೆಯು, (ಕಃ = ಯಾರು?) ॥ 70 ॥

**ಕಿಂ ಕುಲಂ ಚ ಕಿಮಾಚಾರೋ ಜಾತಿರ್ವಾ ತಸ್ಯ ಕಾ ವದ ।**

**ಕುಲಾಚಾರಕಥಾಂ ಶ್ರುತ್ವಾ ಬಕುಲಾ ವಾಕ್ಯಮಬ್ರವೀತ್ ॥ 71 ॥**

*ಬಕುಲೋವಾಚ-*

**ಶ್ರುಣು ರಾಣಿ ಸವಿಸ್ತಾರಂ ಗೋತ್ರನಕ್ಷತ್ರಬಂಧುತಾಮ್ ।**

**ದೇವಕೀ ಜನನೀ ತಸ್ಯ ಜನಕಃಶೂರನಂದನಃ ॥ 72 ॥**

**ನಿಶಾಕರಕುಲಂ ತಸ್ಯ ನಾಮ್ನಾ ಕೃಷ್ಣ ಇತಿ ಸ್ಮೃತಃ ।**
**ವಸಿಷ್ಠ ಗೋತ್ರೇಚೋತ್ಪನ್ನೋ ನಕ್ಷತ್ರಂ ಶ್ರವಣಂ ತಥಾ ॥ 73 ॥**
**ಆವಾಸೋ ವೇಂಕಟಗಿರಿಃ ವಿದ್ಯಾವಾನ್ಧನವಾನ್ಬಲೀ ।**
**ಬಹುಲಾಚಾರಸಂಪನ್ನಃ ಪಂಚವಿಂಶತಿವಾರ್ಷಿಕಃ ॥ 74 ॥**
**ಪಾಣಿಗ್ರಹಣಕಾಲೋಽಯಂ ದತ್ತಾ ಚೇತ್ಸುಖಮೇಷ್ಯಸಿ ।**
**ಕಿಮತ್ರ ಬಹುನೋಕ್ತೇನ ದರ್ಶನಾತ್ತೇ ಸುಖಂ ಭವೇತ್ ॥ 75 ॥**

ಚ = ಮತ್ತು, ಕಿಂ ಕುಲಂ = ವಂಶವಾವುದು? ಕಿಮಾಚರಃ = ಅವನ ಆಚಾರವ್ಯವಹಾರಾದಿಗಳೇನು? ತಸ್ಯ = ಅವನ, ಜಾತಿರ್ವಾ = ಜಾತಿ (ವರ್ಣ)ಯಾದರೂ, ಕಾ = ಯಾವುದು? ವದ = ಹೇಳು, ಬಕುಲಾ = ಬಕುಳೆಯು, ಕುಲಾಚಾರಕಥಾಂ = ವಂಶ-ಆಚಾರಾದಿವೃತ್ತಾಂತದ ಬಗೆಗೆ, ಶ್ರುತ್ವಾ = ಕೇಳಿದವಳಾಗಿ, ವಾಕ್ಯಮಬ್ರವೀತ್ = ಮಾತನಾಡಿದಳು ॥ 71 ॥ ಬಕುಲೋವಾಚ = ಬಕುಳಾದೇವಿಯು ಹೇಳುತ್ತಲಿದ್ದಾಳೆ - ರಾಣಿ = ಮಹಾರಾಣಿ! ಗೋತ್ರನಕ್ಷತ್ರ ಬಂಧುತಾಂ = ಅವನ ಗೋತ್ರ, ಹುಟ್ಟಿದ ನಕ್ಷತ್ರ, ಮತ್ತು ಬಂಧುಗಳ ವಿಚಾರಗಳನ್ನು, ಸವಿಸ್ತಾರಂ = ವಿಶದವಾಗಿ, ಶೃಣು = ಕೇಳುವವಳಾಗು, ತಸ್ಯ = ಶ್ರೀನಿವಾಸನ (ವರನ), ಜನನೀ = ತಾಯಿಯು, ದೇವಕೀ = ದೇವಕೀದೇವಿಯು, ಶೂರನಂದನಃ = ಶೂರನ ಮಗನಾದ ವಸುದೇವನು, ಜನಕಃ = ತಂದೆಯು ॥ 72 ॥ ತಸ್ಯ = ಅವನದು, ನಿಶಾಚರಕುಲಂ = ಚಂದ್ರವಂಶವು, ನಾಮ್ನಾ = ಹೆಸರಿನಿಂದ, ಕೃಷ್ಣ ಇತಿ = ಕೃಷ್ಣನೆಂದು, ಸ್ಮೃತಃ = ಕರೆಯಲ್ಪಡುವನು, ವಸಿಷ್ಠಗೋತ್ರೇ = ವಸಿಷ್ಠಋಷಿಗಳ ಗೋತ್ರದಲ್ಲಿ, ಉತ್ಪನ್ನಶ್ಚ = ಜನಿಸಿದವನಾಗಿದ್ದಾನೆ. ತಥಾ = ಹಾಗೆಯೇ (ಮತ್ತು), ನಕ್ಷತ್ರಂ = ಅವನು ಹುಟ್ಟಿದ ನಕ್ಷತ್ರವು, ಶ್ರವಣಂ = ಶ್ರವಣ ನಕ್ಷತ್ರವು, ವೇಂಕಟಗಿರಿಃ = ವೇಂಕಟಾಚಲವು, ಆವಾಸಃ = ಅವನವಾಸಸ್ಥಳವು, ವಿದ್ಯಾವಾನ್ = ವಿದ್ಯಾವಂತನು, ಧನವಾನ್ = ಶ್ರೀಮಂತನು, ಬಲೀ = ಅತಿಪರಾಕ್ರಮಶಾಲಿಯು (ಬಲಿಷ್ಠನು), ಬಹುಲಾಚಾರಸಂಪನ್ನಃ = ಬಹು ಆಚಾರಶೀಲನು, ಪಂಚವಿಂಶತಿ ವಾರ್ಷಿಕಃ = ಇಪ್ಪತ್ತೈದುವರ್ಷ ವಯಸ್ಸಿನವನು ॥ 73-74 ॥ ಪಾಣಿಗ್ರಹಣಕಾಲೋಽಯಂ = ಇದು ಅವನು ಮದುವೆಯಾಗಲು ಸರಿಯಾದ ಕಾಲವು, ದತ್ತಾಚೇತ್ = ನಿನ್ನ ಮಗಳನ್ನು ಅವನಿಗೆ ಕೊಟ್ಟಲ್ಲಿ, ಸುಖಮೇಷ್ಯತಿ = ನಿನ್ನ ಕುವರಿಯು ಸುಖವನ್ನು ಪಡೆಯುವಳು. ಅತ್ರ = ಈ ವಿಚಾರದಲ್ಲಿ, ಬಹುನೋಕ್ತೇನ = ಹೆಚ್ಚು ಹೇಳುವುದರಿಂದ, ಕಿಂ = ಏನು ಪ್ರಯೋಜನ? (ಹೆಚ್ಚು ಹೇಳುವುದೇನಿದೆ?), ದರ್ಶನಾತ್ = ಶ್ರೀನಿವಾಸನ ದರ್ಶನದಿಂದ, ತೇ = ನಿನಗೆ, ಸುಖಂಭವೇತ್ = ಸುಖವು ಉಂಟಾದೀತು! ॥ 75 ॥

**ತದ್ವೃತ್ತಮಖಿಲಂ ಶ್ರುತ್ವಾ ತಾಮಾಹಾನಂದನಿರ್ಭರಾ ।**

*ಧರಣ್ಯುವಾಚ-*

**ಶಂಕಾ ಜಾತಾ ವರಾರೋಹೆ! ಮಮ ತೇ ವಚನಾಚ್ಛುಭೆ! ॥ 76 ॥**
**ಸಭಾಗ್ಯಶ್ಚ ಕುಲೀನಶ್ಚ ಬುದ್ಧಿಮಾಂಶ್ಚ ಯುವಾ ಬಲೀ ।**
**ವಾಗ್ಮೀತ್ಯುಕ್ತಾಽಸಿ ಚೈತಾವದ್ವಿವಾಹೋ ನ ಕೃತಃ ಕುತಃ ।**
**ಸಾ ತದ್ವಚನಮಾಕರ್ಣ್ಯ ಮನಸೀತ್ಥಮಚಿಂತಯತ್ ॥ 77 ॥**
**ಧೈರ್ಯೇಣ ವಚನಂ ಪ್ರಾಹ ಧರಣೀಂ ರಾಜವಲ್ಲಭಾಮ್ ॥**

*ಬಕುಲೋವಾಚ-*

**ಕೃತಂ ವೈವಾಹಿಕಂ ದೇವಿ! ಬಾಲ್ಯೇ ಭಾಗೀರಥೀಪಿತುಃ** **॥ 78 ॥**

**ತತ್ರಾಪತ್ಯಮನಾಲೋಕ್ಯ ದ್ವಿತೀಯಂ ಕರ್ತುಮುದ್ಯತಃ ।**
**ನ ದೋಷಮಿತರಂ ವಿದ್ಧಿ ಶ್ರೀನಿವಾಸೇ ನಿರಾಮಯೇ** **॥ 79 ॥**

**ತದ್ವೃತ್ತಮಖಿಲಂ ಶ್ರುತ್ವಾ ಸಂಪೂಜ್ಯ ಬಕುಲಾಂ ನೃಪ! ।**
**ಸಾ ಪುತ್ರಂ ಸಂದಿದೇಶಾಽಥ ನೃಪಾಹ್ವಾನೇ ನೃಪೋತ್ತಮ!** **॥ 80 ॥**

ತದ್ವೃತ್ತಂ = ಶ್ರೀನಿವಾಸನ ವೃತ್ತಾಂತವನ್ನು, ಶ್ರುತ್ವಾ = ಕೇಳಿದವಳಾಗಿ, ಆನಂದ ನಿರ್ಭರಾ = ಹರ್ಷಭರಿತಳಾಗಿ, ತಾಂ = ಬಕುಳೆಯನ್ನು ಕುರಿತು, ಆಹ = ಹೇಳಿದಳು, ಧರಣ್ಯುವಾಚ = ಧರಣೀದೇವಿಯು ಹೇಳಹತ್ತಿದಳು, ಶುಭೇ = ಮಂಗಳಕರಳಾದ, ವರಾರೋಹೇ = ಬಕುಳೆಯೇ, ತೇ = ನಿನ್ನ, ವಚನಾತ್ = ಮಾತಿನಿಂದ, ಮಮ = ನನಗೆ, ಶಂಕಾಜಾತಾ = ಒಂದು ಸಂದೇಹವುಂಟಾಗಿದೆ ॥ 76 ॥ ನೀನು ಹೇಳಿದಂತೆ ಶ್ರೀನಿವಾಸನು ಸಭಾಗ್ಯಶ್ಚ = ಭಾಗ್ಯವುಳ್ಳವನಾಗಿದ್ದಾನೆ, ಕುಲೀನಶ್ಚ = ಸತ್ಕುಲಪ್ರಸೂತನೂ ಆಗಿದ್ದಾನೆ, ಬುದ್ಧಿಮಾನ್ = ಬುದ್ಧಿವಂತನು, ಯುವಾ = ತರುಣನು, ಚ = ಮತ್ತು, ಬಲೀ = ಪರಾಕ್ರಮಿಯು, ವಾಗ್ಮೀ = ಬಹುವಾಗ್ಮಿ, ಇತಿ = ಹೀಗೆಂದು, ಉಕ್ತಾಽಸಿ = ಹೇಳಿದ್ದೀಯೇ, ಕುತಃ = ಹೀಗಿದ್ದರೂ ಏತಕ್ಕಾಗಿ, ಚೈತಾವತಾ = ಇದುವರೆವಿಗೆ (ಅವನಿಗೆ), ವಿವಾಹಃ = ಮದುವೆಯು, ನಕೃತಃ = ಮಾಡಲ್ಪಡಲಿಲ್ಲ? ಸಾ = ಆ ಬಕುಳೆಯು, ತದ್ವಚನ ಮಾಕರ್ಣ್ಯ = ರಾಣಿಯವಚನವನ್ನಾಲಿಸಿ, ಮನಸಿ = ಮನಸ್ಸಿನಲ್ಲಿಯೇ, ಇತ್ಥಂ = ಹೀಗೆ ಹೇಳಬೇಕೆಂದು, ಅಚಿಂತಯತ್ = ಯೋಚನೆ ಮಾಡಿದಳು ॥ 77 ॥ ರಾಜವಲ್ಲಭಾಂ = ರಾಜನಸತಿಯಾದ, ಧರಣೀಂ (ಪ್ರತಿ) = ಧರಣಿಯನ್ನು ಕುರಿತು, ಧೈರ್ಯೇಣ = ಧೈರ್ಯದಿಂದ, ವಚನಂ ಪ್ರಾಹ = ಮಾತನ್ನು ಹೇಳಿದಳು. ಬಕುಲೋವಾಚ = ಬಕುಳೆಯು ಇಂತೆಂದಳು – ದೇವಿ = ಧರಣೀದೇವಿಯೇ! ಭಾಗೀರಥೀಪಿತುಃ = ಭಾಗೀರಥಿಯ ಜನಕನಾದ ಶ್ರೀನಿವಾಸನಿಗೆ, ಬಾಲ್ಯೇ = ಬಾಲ್ಯದಲ್ಲಿ, ವೈವಾಹಿಕಂ = ವಿವಾಹಮಹೋತ್ಸವವು, ಕೃತಂ = ಮಾಡಲ್ಪಟ್ಟಿತು. ತತ್ರ = ಆ ಲಗ್ನದಿಂದ (ಆ ಕನ್ಯೆಯಲ್ಲಿ), ಅಪತ್ಯಂ = ಸಂತಾನವು, ಅನಾಲೋಕ್ಯ = ಆಗದಿದ್ದುದನ್ನು ಕಂಡು, ದ್ವಿತೀಯಂ = ಎರಡನೆಯ ಮದುವೆಯನ್ನು, ಕರ್ತುಂ = ಮಾಡಲು, ಉದ್ಯತಃ = ಉದ್ಯುಕ್ತರಾಗಿದ್ದೇವೆ (ಶ್ರೀನಿವಾಸನು ಉದ್ಯುಕ್ತನಾಗಿದ್ದಾನೆ), ನಿರಾಮಯೇ = ಯಾವವಿಧವಾದ ರೋಗಾದಿಗಳಿಲ್ಲದೆ, ಶ್ರೀನಿವಾಸೇ = ಶ್ರೀನಿವಾಸನಲ್ಲಿ, ಇತ್ಥಂ = ಹೀಗೆ ಬೇರಾವ, ದೋಷಂ = ದೋಷವನ್ನೂ (ಕುಂದನ್ನೂ) ನವಿದ್ಧಿ = ತಿಳಿಯಬೇಡ (ತಿಳಿಯದಿರು) ॥ 78–79 ॥ ನೃಪ = ಎಲೈ ಜನಕಮಹೀಪಾಲ, ಅಖಿಲಂ = ಸಮಸ್ತವಾದ, ತದ್ವೃತ್ತಂ = ಶ್ರೀನಿವಾಸನ ಸಮಾಚಾರವನ್ನು, ಶ್ರುತ್ವಾ = ಕೇಳಿ, ಬಕುಲಾಂ = ಬಕುಳಾಮಾಲಿಕೆಯನ್ನು, ಸಂಪೂಜ್ಯ = ಸನ್ಮಾನಿಸಿ (ಸತ್ಕರಿಸಿ), ನರೋತ್ತಮ = ಎಲೈ ರಾಜಶ್ರೇಷ್ಠನಾದ ಜನಕರಾಯ! ಸಾ = ಧರಣಿಯು, ಅಥ = ನಂತರ, ನೃಪಾಹ್ವಾನೇ = ಆಕಾಶರಾಜನನ್ನು ಕರೆತರುವ ವಿಷಯದಲ್ಲಿ, ಪುತ್ರಂ = ಮಗನಾದ ವಸುಧಾನನನ್ನು, ಸಂದಿದೇಶ = ಕಳುಹಿಸಿದಳು ॥ 80 ॥

**ಸ ಪುತ್ರವಚನಂ ಶ್ರುತ್ವಾ ಹರ್ಷಾದಂತಃಪುರಂ ಯಯೌ ।**
**ಏಕಾಂತೇ ರಾಜಶಾರ್ದೂಲಮಿದಂ ವಚನಮಬ್ರವೀತ್** **॥ 81 ॥**

ಧರಣ್ಯುವಾಚ-

**ಕನ್ಯಾರ್ಥಮಾಗತಾ ರಾಜನ್ ಬಕುಲಾ ವೇಂಕಟಾಚಲಾತ್ ।**
**ಸುತಂ ಸಂಪ್ರೇಷಯಿತ್ವಾಥ ಪುರೋಹಿತಮಿಹಾನಯ ॥ 82 ॥**

**ವರಸ್ಯಾಪಿ ವಿಚಾರ್ಯಾಶು ಕುಲವಿದ್ಯಾಬಲಾದಿಕಮ್ ।**
**ಗೋತ್ರ ಋಕ್ಷಾದ್ಯಾನುಕೂಲ್ಯಂ ಬ್ರಾಹ್ಮಣೈರ್ವೇದಪಾರಗೈಃ ॥**
**ವಿಚಾರ್ಯ ವರವಧ್ವೋಶ್ಚ ಯೋನಿನಾಡೀ ಸುಸಂಗತಿಮ್ ॥ 83 ॥**

**ಸರ್ವಂ ಸಮ್ಯಕ್ಸಮಾಲೋಚ್ಯ ಕನ್ಯಾದಾನಂ ಕುರು ಪ್ರಭೋ ।**
**ಕನ್ಯಾರ್ಥಮಾಗತಾ ಸಾಧ್ವೀ ದುಹಿತುರ್ವಿದಿತಂ ಮನಃ ॥ 84 ॥**

**ತಮೇವೇಚ್ಛತಿ ತ್ವತ್ಪುತ್ರೀ ವೇಂಕಟಾದ್ರಿನಿವಾಸಿನಮ್ ।**
**ಧರ್ಮದೇವೀ ವಚಸ್ಸತ್ಯಂ ಶುಭಂ ಶೀಘ್ರಂ ವಿಧೀಯತಾಮ್ ॥ 85 ॥**

ಸಃ = ಆಕಾಶರಾಜನು, ಪುತ್ರವಚನಂ = ಮಗನಮಾತನ್ನು, ಶ್ರುತ್ವಾ = ಕೇಳಿ, ಹರ್ಷಾತ್ = ಸಂತೋಷದಿಂದ, ಅಂತಃಪುರಂ = ಅಂತಃಪುರವನ್ನು ಕುರಿತು, ಯಯೌ = ಹೋದನು, ಏಕಾಂತೇ = ಏಕಾಂತದಲ್ಲಿ, ರಾಜಶಾರ್ದೂಲಂ = ರಾಜಶ್ರೇಷ್ಠನನ್ನು ಕುರಿತು, ಇದಂ ವಚನಂ = ಈ ಮಾತನ್ನು, ಅಬ್ರವೀತ್ = ಧರಣೀದೇವಿಯು ಹೇಳಿದಳು. ॥ 81 ॥ ಧರಣ್ಯುವಾಚ = ಧರಣಿಯು ಇಂತೆಂದಳು. ರಾಜನ್ = ನೃಪೇಂದ್ರ! ವೇಂಕಟಾಚಲಾತ್ = ವೇಂಕಟಗಿರಿಯಿಂದ, ಬಕುಲಾ = ಬಕುಳಾದೇವಿಯು, ಕನ್ಯಾರ್ಥಂ = ಕನ್ಯಾಪೇಕ್ಷೆಯಿಂದ, ಆಗತಾ = ಬಂದಿರುವಳು. ಅಥ = ಆದ್ದರಿಂದ, ಸುತಂ = ಮಗನನ್ನು, ಪ್ರೇಷಯಿತ್ವಾ = ಕಳುಹಿಸಿ, ಇಹ = ಇಲ್ಲಿಗೆ, ಪುರೋಹಿತಂ = ಪುರೋಹಿತನನ್ನು, ಆನಯ = ಕರೆತರಿಸು ॥ 82 ॥ ಅಪಿ = ಮತ್ತು, ವರಸ್ಯ = ವರನ, ಕುಲವಿದ್ಯಾಬಲಾದಿಕಂ = ವಂಶ, ವಿದ್ಯೆ, ಸಾಮರ್ಥ್ಯಾದಿಗಳನ್ನು, ಆಶು = ಬೇಗನೆ, ವಿಚಾರ್ಯ = ವಿಚಾರಿಸಿ, ಗೋತ್ರಂ = ಗೋತ್ರ, ರುಕ್ಷ್ಯಾದಿ = ಗೋತ್ರ ನಕ್ಷತ್ರಾದಿಗಳ, ಅನುಕೂಲ್ಯಂ = ಅನುಕೂಲತೆಯನ್ನು, ವೇದಪಾರಗೈಃ = ವೇದಶಾಸ್ತ್ರಪಾರಂಗತರಾದ, ಬ್ರಾಹ್ಮಣೈಃ = ಭೂಸುರರಿಂದ, ವಿಚಾರ್ಯ = ವಿವೇಚನೆಮಾಡಿಸುವವನಾಗಿ, ವರವಧ್ವೋಶ್ಚ = ವರ ಮತ್ತು ವಧೂಗಳ, ಯೋನಿನಾಡಿಸುಸಂಗತಿಂ = ಯೋನಿಕೂಟ, ನಾಡಿಕೂಟಾದಿಗಳ ಹೊಂದಾಣಿಕೆಯನ್ನು ॥ 83 ॥ ಸರ್ವಂ = ಇವೆಲ್ಲವನ್ನು, ಸಮ್ಯಕ್ = ಚೆನ್ನಾಗಿ, ಸಮಾಲೋಚ್ಯ = ಸರಿಯಾಗಿ ಆಲೋಚಿಸಿ (ಪರಿಶೀಲಿಸಿ), ಪ್ರಭೋ = ಸ್ವಾಮಿ, ಕನ್ಯಾದಾನಂ = ಕನ್ಯಾಪ್ರದಾನವನ್ನು, ಕುರು = ಮಾಡು. ಕನ್ಯಾರ್ಥಂ = ಕನ್ಯೆಯನ್ನು ಬಯಸಿ, ಸಾಧ್ವೀ = ಪತಿವ್ರತೆಯಾದ ಬಕುಳಾದೇವಿಯು, ಆಗತಾ = ಬಂದಿದ್ದಾಳೆ. ದುಹಿತುಃ = ಪದ್ಮಾವತಿಯ, ಮನಃ = ಮನಸ್ಸಿನಲ್ಲಿರುವುದು, ವಿದಿತಂ = ತಿಳಿಯಲ್ಪಟ್ಟಿದೆ ॥ 84 ॥ ತ್ವತ್ಪುತ್ರೀ = ನಿನ್ನ ಮಗಳೂ, ವೇಂಕಟಾದ್ರಿನಿವಾಸಿನಂ = ವೇಂಕಟಾಚಲವಾಸಿಯಾದ, ತಮೇವ = ಶ್ರೀನಿವಾಸನನ್ನೇ, ಇಚ್ಛತಿ = ಅಪೇಕ್ಷಿಸುವಳು, ಧರ್ಮದೇವೀವಚಃ = ಕೊರವಂಜಿಯ ಮಾತು, ಸತ್ಯಂ = ಸತ್ಯವು. ಶುಭಂ = ಮಂಗಳಕಾರ್ಯವು, ಶೀಘ್ರಂ = ಜಾಗ್ರತೆಯಾಗಿ, ವಿಧೀಯತಾಂ = ಮಾಡಲ್ಪಡಲಿ ॥ 85 ॥

**ಇತಿ ಪತ್ನ್ಯಾ ವಚಃ ಶ್ರುತ್ವಾ ಪರಮಾನಂದನಿರ್ಭರಃ ।**

ಆಕಾಶರಾಜೋವಾಚ-

ಬಕುಲಾಗಮನೇऽಸ್ಮಾಕಂ ಶಿವಂ ಭದ್ರೆ! ಸಮಾಗತಮ್ ॥ 86 ॥

ಅಹೋ ಮಂಗಲಮಸ್ಮಾಕಂ ಸಂಪ್ರಾಪ್ತಂ ಪೂರ್ವಪುಣ್ಯತಃ ।
ಅಭವನ್ಪಿತರಸ್ಸರ್ವೇ ಕೃತಾರ್ಥಾ ಮುಕ್ತಿಭಾಗಿನಃ ॥ 87 ॥

ತದ್ವಾಕ್ಯಾಮೃತಪಾನೇನ ರೋಮಹರ್ಷಸ್ತು ಜಾಯತೇ ।
ಕದಾ ಪಶ್ಯಾಮಿ ಕಲ್ಯಾಣಂ ವಧೂವರಸಮಾಗಮಮ್ ॥ 88 ॥

ಸಭರ್ತೃಕಾಂ ರಾಜಪುತ್ರೀಂ ಸ್ವರ್ಣಸಿಂಹಾಸನೇ ಸ್ಥಿತಾಮ್ ।
ಕದಾ ಪಶ್ಯಾಮಿ ನೇತ್ರಾಭ್ಯಾಂ ಬಂಧುಮಂಡಲಮಧ್ಯಗಾಮ್ ॥ 89 ॥

ಇತ್ಯುಕ್ತ್ವಾ ಭವನಂ ಚಾಗಾದ್ರಾಜಾ ದುಹಿತೃವತ್ಸಲಃ ।
ರಾಜಾ ಪದ್ಮಾವತೀಂ ಪ್ರಾಹ ಸಾಂತ್ವಯನ್ವಚಸಾऽऽದರಾತ್ ॥ 90 ॥

ಇತಿ = ಇಂತು, ಪತ್ನೀವಚಃ = ಧರಣೀದೇವಿಯ ಮಾತನ್ನು, ಶ್ರುತ್ವಾ = ಕೇಳಿ, ಆನಂದನಿರ್ಭರಃ = ಸಂತೋಷಭರಿತನಾಗಿ, ಆಕಾಶರಾಜೋವಾಚ = ಆಕಾಶರಾಜನು ಮಾತನಾಡಿದನು. ಭದ್ರೆ = ಶುಭಕರಳಾದ ಧರಣಿ! ಅಸ್ಮಾಕಂ = ನಮಗೆ, ಬಕುಲಾಗಮನಂ = ಬಕುಳೆಯ ಆಗಮನವು (ಆಗಮನದಿಂದ), ಶುಭಂ = ಶುಭವು, ಸಮಾಗತಂ = ಬಂದಿತು (ಉಂಟಾಯಿತು). ॥ 86 ॥ ಅಸ್ಮಾಕಂ = ನಮಗೆ, ಪೂರ್ವಪುಣ್ಯತಃ = ಹಿಂದೆ ಮಾಡಿದ ಸುಕೃತದಿಂದ, ಮಂಗಳಂ = ಶುಭವು, ಸಂಪ್ರಾಪ್ತಂ = ಬಂದು ಸೇರಿತು. ಅಹೋ = ಆಶ್ಚರ್ಯವು (ಸಂತೋಷವು), ಸರ್ವೇ = ಸಮಸ್ತರಾದ, ಪಿತರಃ = ನಮ್ಮ ಪಿತೃಗಳು, ಕೃತಾರ್ಥಾಃ = ಕೃತಕೃತ್ಯರೂ, ಮುಕ್ತಿಭಾಗಿನಃ = ಮೋಕ್ಷಭಾಜನರೂ, ಅಭವನ್ = ಆದರು ॥ 87 ॥ ತದ್ವಾಕ್ಯಾಮೃತಪಾನೇನ = ಬಕುಳೆಯು ಹೇಳಿದ ಮಂಗಳಕರವಚನವೆಂಬ ಅಮೃತಪಾನದಿಂದ, ರೋಮಹರ್ಷಸ್ತು = ರೋಮಾಂಚನವು, ಜಾಯತೇ = ಉಂಟಾಗುತ್ತದೆ. ವಧೂವರಸಮಾಗಮಂ = ವಧೂವರರ ಸಮ್ಮಿಳನವನ್ನು, ಕಲ್ಯಾಣಂ = ಮದುವೆಯನ್ನು, ಕದಾ = ಯಾವಾಗ, ಪಶ್ಯಾಮಿ = ನೋಡುವೆನು? ॥ 88 ॥ ಸ್ವರ್ಣಸಿಂಹಾಸನೇ = ಬಂಗಾರದ ಭದ್ರಪೀಠದಲ್ಲಿ, ಸ್ಥಿತಾಂ = ಕುಳಿತಿರುವ, ಬಂಧುಮಂಡಲಮಧ್ಯಗಾಂ = ಬಾಂಧವಸಮೂಹದ ಮಧ್ಯದಲ್ಲಿರುವ, ಸಭರ್ತೃಕಾಂ = ಪತಿಯಿಂದೊಡಗೂಡಿದ, ರಾಜಪುತ್ರೀಂ = ರಾಜಕುವರಿಯಾದ ಪದ್ಮಾವತಿಯನ್ನು, ನೇತ್ರಾಭ್ಯಾಂ = ಎರಡು ಕಣ್ಣುಗಳಿಂದ, ಕದಾ = ಯಾವಾಗ, ಪಶ್ಯಾಮಿ = ನೋಡುವೆನು? ॥ 89 ॥ ಇತ್ಯುಕ್ತ್ವಾ = ಇಂತು ನುಡಿದು, ದುಹಿತೃವತ್ಸಲಃ = ಮಗಳಲ್ಲಿ ವಾತ್ಸಲ್ಯವುಳ್ಳ, ರಾಜಾ = ಆಕಾಶರಾಜನು, ಭವನಂ = ಕನ್ಯಾಂತಃಪುರವನ್ನು ಕುರಿತು, ಚಾಗಾತ್ = ಬಂದನು (ಬಂದವನಾದನು), ರಾಜಾ = ಆಕಾಶಭೂಪತಿಯು, ಆದರಾತ್ = ಆದರಪೂರ್ವಕ, ವಚಸಾ = ಮಾತಿನಿಂದ, ಸಾಂತ್ವಯನ್ (ಸನ್) = ಸಮಾಧಾನಪಡಿಸುವವನಾಗಿ, ಪದ್ಮಾವತೀಂ = ಪದ್ಮಾವತಿಯನ್ನು ಕುರಿತು, ಪ್ರಾಹ = ಹೇಳಿದನು ॥ 90 ॥

ರಾಜೋವಾಚ -

ಭದ್ರೆ! ದುಃಖಂ ಮನಸ್ಥಂ ತೇ ತ್ಯಜ ಶೀಘ್ರಮಿತಃ ಪರಮ್ ।
ಹೃದಯೇ ತವ ಕಲ್ಯಾಣಿ! ಯತ್ಕಾಂಕ್ಷಾ ವರ್ತತೇ ವದ ॥ 91 ॥

**ತದದ್ಯಾಹಂ ಕರಿಷ್ಯಾಮಿ ನಾತ್ರ ಕಾರ್ಯಾ ವಿಚಾರಣಾ ।**
**ಜನಕಸ್ಯ ವಚಃ ಶ್ರುತ್ವಾ ಜನನೀಂ ವಾಕ್ಯಮಬ್ರವೀತ್ ॥ 92 ॥**

ಪದ್ಮಾವತ್ಯುವಾಚ-

**ಮಾತಸ್ತೇ ಕಥಿತಂ ಸರ್ವಂ ವೃತ್ತಾಂತಂ ಜನಕಸ್ಯ ಮೇ ।**
**ಸಮಾಚಕ್ಷ್ವಾದ್ಯ ಸಂಕೋಚಾನ್ನ ವಕ್ತುಮಹಮುತ್ಸಹೇ ॥ 93 ॥**

**ಪುತ್ರೀಗಿರಂ ವಿದಿತ್ವಾ ಸಾ ಭರ್ತಾರಂ ವಾಕ್ಯಮಬ್ರವೀತ್ ।**

ಧರಣ್ಯುವಾಚ-

**ಸಾಧಯಸ್ವ ಮಹಾರಾಜ ವಿವಾಹಂ ವಿಧಿಪೂರ್ವಕಮ್ ॥ 94 ॥**

**ವಿಲಂಬೋ ನೈವಕರ್ತವ್ಯಃ ಶುಭಸ್ಯಾರ್ಥಂ ಶುಭಾನನ ।**

ರಾಜೋವಾಚ-

**ತಸ್ಮೈ ದಾಸ್ಯಾಮಿ ಕೃಷ್ಣಾಯ ಶ್ರೀನಿವಾಸಾಯ ಭಾಮಿನಿ ॥ 95 ॥**

ರಾಜೋವಾಚಃ = ಮಹಾರಾಜನು ಹೇಳಿದನು. ಭದ್ರೆ = ಮಂಗಳಕರಳೇ! ಪದ್ಮಾವತಿ! ಇತಃಪರಂ = ಇನ್ನು ಮುಂದೆ, ಮನಸ್ಥಂ = ಮನದಲ್ಲಿರುವ, ದುಃಖಂ = ವ್ಯಥೆಯನ್ನು, ಶೀಘ್ರಂ = ಬೇಗ, ತ್ಯಜ = ಬಿಟ್ಟುಬಿಡು. ಕಲ್ಯಾಣಿ = ಮಂಗಳಾಂಗಿ, ತವ = ನಿನ್ನ, ಹೃದಯೇ = ಮನಸ್ಸಿನಲ್ಲಿ, ಯತ್ಕಾಂಕ್ಷಾ = ಯಾವ ಅಪೇಕ್ಷೆಯು, ವರ್ತತೇ = ಇದೆಯೋ (ಅದನ್ನು), ವದ = ತಿಳಿಸು ॥ 91 ॥ ತತ್ = ನಿನ್ನಾಶೆಯನ್ನು, ಅಹಂ = ನಾನು, ಅದ್ಯ= ಈಗಲೇ, ಕರಿಷ್ಯಾಮಿ = ಪೂರ್ಣ ಮಾಡುತ್ತೇನೆ (ನೆರವೇರಿಸುವೆನು), ಅತ್ರ = ಈ ವಿಚಾರದಲ್ಲಿ, ವಿಚಾರಣಾ = ಯೋಚನೆಯು, ನ ಕಾರ್ಯಾ = ಮಾಡಬೇಕಾಗಿಲ್ಲ. ಜನಕಸ್ಯ = ತಂದೆಯ, ವಚಃ = ಮಾತನ್ನು, ಶ್ರುತ್ವಾ = ಆಲಿಸಿ, ಜನನೀಂ = ತಾಯಿಯನ್ನು ಕುರಿತು, ವಾಕ್ಯಮಬ್ರವೀತ್ = ಮಾತನಾಡಿದಳು ॥ 92 ॥ ಪದ್ಮಾವತ್ಯುವಾಚ = ಪದ್ಮಾವತಿಯು ಹೇಳಿದಳು - ಮಾತಃ = ಅಮ್ಮಾ, ತೇ = ನಿನಗೆ, ಸರ್ವಂ = ಸಕಲವಾದ, ವೃತ್ತಾಂತಂ = ವಿಷಯವೂ (ಸಮಾಚಾರವೂ), ಕಥಿತಂ = ನನ್ನಿಂದ ಹೇಳಲ್ಪಟ್ಟಿತು (ಅದನ್ನು), ಮೇ = ನನ್ನ, ಜನಕಸ್ಯ = ತಂದೆಗೆ, ಸಮಾಚಕ್ಷ್ವ = ಹೇಳುವವಳಾಗು, ಅದ್ಯ = ಈಗ, ಅಹಂ = ನಾನು, ಸಂಕೋಚಾತ್ = ಸಂಕೋಚದಿಂದ (ಲಜ್ಜೆಯಿಂದ), ವಕ್ತುಂ = ಹೇಳಲು, ನೋತ್ಸಹೇ = ಉತ್ಸುಕಳಾಗಿಲ್ಲ (ಶಕ್ತಳಾಗಿಲ್ಲ) ॥ 93 ॥ ಪುತ್ರೀಗಿರಂ = ಮಗಳಮಾತನ್ನು, ವಿದಿತ್ವಾ = ತಿಳಿದು, ಸಾ = ಧರಣಿಯು, ಭರ್ತಾರಂ = ಪತಿಯನ್ನು ಕುರಿತು, ವಾಕ್ಯಮಬ್ರವೀತ್ = ಮಾತನಾಡಿದಳು. ಧರಣ್ಯುವಾಚ = ಧರಣಿದೇವಿಯು ನುಡಿಯುತ್ತಿದ್ದಾಳೆ. ಮಹಾರಾಜ = ಪ್ರಭು, ವಿಧಿಪೂರ್ವಕಂ = ವಿಧ್ಯುಕ್ತ ಕ್ರಮದಿಂದ, ವಿವಾಹಂ = ಕುಮಾರಿಯ ಮದುವೆಯನ್ನು, ಸಾಧಯ = ಯಶಸ್ವಿಗೊಳಿಸು ॥ 94 ॥ ಶುಭಾನನ = ಮಂಗಳಕರಮುಖನೇ, ಶುಭಸ್ಯಾರ್ಥಂ = ಶುಭಕಾರ್ಯದಲ್ಲಿ, ವಿಲಂಬೋ = ವಿಳಂಬವು (ಸಾವಕಾಶವು) ನೈವ ಕರ್ತವ್ಯಃ = ಮಾಡತಕ್ಕದ್ದಲ್ಲ. ರಾಜೋವಾಚ = ಆಕಾಶರಾಜನು ಹೀಗೆಂದನು - ಭಾಮಿನಿ = ಎಲೈ ಪದ್ಮಾವತಿ, ಶ್ರೀನಿವಾಸಾಯ = ಲಕ್ಷ್ಮೀದೇವಿಗೆ ವಾಸಭೂತನಾದ, ತಸ್ಮೈ-ಕೃಷ್ಣಾಯ = ಆ ಕೃಷ್ಣನಿಗೆ, ದಾಸ್ಯಾಮಿ = ನಿನ್ನನ್ನು ವಿವಾಹ ಮಾಡಿಕೊಡುತ್ತೇನೆ ॥ 95 ॥

**ಸಮಾಶ್ವಾಸ್ಯ ಸುತಾಂ ರಾಜಾ ಪುತ್ರಮಿಂದ್ರನಿಕೇತನಮ್ ।**
**ಪ್ರೇಷಯಾಮಾಸ ರಾಜೇಂದ್ರ! ಗುರ್ವಾಗಮನಕಾಂಕ್ಷಯಾ** **॥ 96 ॥**

**ವಿಲಿಖ್ಯ ಪತ್ರಿಕಾಂ ರಾಜಾ ಪುತ್ರೀಕಲ್ಯಾಣಸೂಚಿಕಾಮ್ ।**
**ಸಂಪ್ರೇಷಯಾಮಾಸ ತದಾ ಸ್ವಪುತ್ರೇಣ ವಿಯನ್ನೃಪಃ ॥**
**ಸ ಗತ್ವಾತಿ ತ್ವರೇಣೈವ ಚಂದ್ರಾಂಶತ್ವಾಚ್ಚ ಭೂಮಿಪ** **॥ 97 ॥**

**ವಂದಯಿತ್ವಾಽಽನಂದಪೂರ್ಣಂ ಗುರುಮಿಂದ್ರಸ್ಯ ಭೂಪತೇ!**
**ಪ್ರತಿಷ್ಠಾಪ್ಯ ವರಂ ಪತ್ರಂ ಪುರತಃ ಪುರುಷರ್ಷಭಃ** **॥ 98 ॥**

**ರಾಜಪುತ್ರಂ ಸಪತ್ರಂ ಚ ದೃಷ್ಟ್ವಾಂಗಿರಸನಂದನಃ ।**
**ಕರದ್ವಯೇನ ತಾಮಾಶು ಗೃಹೀತ್ವಾಽಽನಂದನಿರ್ಭರಃ** **॥ 99 ॥**

**ಸ ಪಪಾಠ ಮಹಾರಾಜ! ಪತ್ರಿಕಾಂ ಶುಭಸೂಚಿಕಾಮ್ ॥**
**ತತ್ಕ್ಷಣಾದಗಮದ್ರಾಜನ್! ರಾಜಾನಂ ಸ ಪುರೋಹಿತಃ** **॥ 100 ॥**

ರಾಜೇಂದ್ರ = ಜನಕಮಹಾರಾಜ, (ಇತಿ = ಹೀಗೆ), ಸುತಾಂ = ಮಗಳನ್ನು, ಸಮಾಶ್ವಾಸ್ಯ = ಸಮಾಧಾನಗೊಳಿಸಿ, ಪುತ್ರಂ = ಮಗನಾದ ವಸುಧಾನನನ್ನು, ಇಂದ್ರನಿಕೇತನಂ = ಸ್ವರ್ಗವನ್ನು ಕುರಿತು, ಪ್ರೇಷಯಾಮಾಸ = ಕಳುಹಿಸಿದನು; ಗುರ್ವಾಗಮನಕಾಂಕ್ಷಯಾ = ಬೃಹಸ್ಪತಿಯು ಬರಬೇಕೆಂಬ ಬಯಕೆಯಿಂದ, ರಾಜಾವಿಯನ್ನೃಪಃ = ಮಹಾರಾಜನಾದ ಆಕಾಶರಾಯನು, ಪುತ್ರೀಕಲ್ಯಾಣಸೂಚಿಕಾಂ = ಮಗಳ ಮದುವೆಯನ್ನು ಸೂಚಿಸುವ, ಪತ್ರಿಕಾಂ = ಪತ್ರವನ್ನು, ವಿಲಿಖ್ಯ = ಬರೆದು ॥ 96 ॥ ಸ್ವಪುತ್ರೇಣ = ತನ್ನ ಮಗನೊಡನೆ, ಪ್ರೇಷಯಾಮಾಸ = ಕಳುಹಿಸಿದನು. ಭೂಮಿಪ = ಜನಕರಾಯ! ಸಃ = ಪುತ್ರನಾದ ವಸುಧಾನನು, ಚಂದ್ರಾಂಶತ್ವಾತ್ = ಚಂದ್ರನ ಅಂಶಯುಕ್ತನಾದುದರಿಂದ ॥ 97 ॥ ಅತಿತ್ವರೇಣೈವ = ಬಹುಜಾಗ್ರತೆಯಾಗಿಯೇ, ಗತ್ವಾ = ಹೋಗಿ; ಭೂಪತೇ = ಎಲೈ ಜನಕರಾಯ, ಆನಂದಪೂರ್ಣಂ = ಸಂತೋಷಭರಿತನಾದ, ಇಂದ್ರಸ್ಯ ಗುರುಂ = ಇಂದ್ರನಿಗೆ ಉಪದೇಶಕನಾದ ಬೃಹಸ್ಪತ್ಯಾಚಾರ್ಯನನ್ನು, ವಂದಯಿತ್ವಾ = ನಮಸ್ಕರಿಸಿ, ಪುರುಷರ್ಷಭಃ = ಪುರುಷಶ್ರೇಷ್ಠನಾದ ವಸುಧಾನನು, ಪುರತಃ = ಗುರುವಿನ ಮುಂಭಾಗದಲ್ಲಿ, ವರಂ = ಶ್ರೇಷ್ಠವಾದ, ಪತ್ರಂ = ಪತ್ರವನ್ನು, ಪ್ರತಿಷ್ಠಾಪ್ಯ = ಇಟ್ಟು, (ಸ್ಥಿತಃ = ನಿಂತನು) ॥ 98 ॥ ಅಂಗೀರಸನಂದನಃ = ಅಂಗೀರಸ ಕುಮಾರನಾದ ಬೃಹಸ್ಪತಿಯು, ಸಪತ್ರಂ = ಪತ್ರಸಹಿತನಾದ, ರಾಜಪುತ್ರಂಚ = ರಾಜಕುಮಾರನನ್ನೂ ಸಹ, ದೃಷ್ಟ್ವಾ = ನೋಡಿ, ಆಶು = ಒಡನೆಯೇ, ಕರದ್ವಯೇನ = ಎರಡು ಕರಗಳಿಂದಲೂ, ಗೃಹೀತ್ವಾ = ಆ ಪತ್ರವನ್ನು ಹಿಡಿದು, ಆನಂದನಿರ್ಭರಃ = ಹರ್ಷಯುಕ್ತನಾಗಿ, ॥ 99 ॥ ಮಹಾರಾಜ = ಎಲೈ ಜನಕರಾಯ, ಸಃ = ಬೃಹಸ್ಪತಿಯು, ಶುಭಸೂಚಿಕಾಂ = ಮಂಗಳಸೂಚಕವಾದ, ತಾಂ = ಆ ಪತ್ರಿಕೆಯನ್ನು, ಪಪಾಠ = ಪಠಿಸಿದನು(ಓದಿದನು). ರಾಜನ್ = ಜನಕರಾಯನೇ!, ತತ್‌ಕ್ಷಣಾತ್ = ಆ ಕೂಡಲೇ, ಸಃ ಪುರೋಹಿತಃ = ಕುಲಪುರೋಹಿತನಾದ ಬೃಹಸ್ಪತಿಯು, ರಾಜಾನಂ = ಆಕಾಶರಾಜನನ್ನು, ಅಗಮತ್ = ಹೊಂದಿದನು (ಆಕಾಶರಾಜನ ಬಳಿಗೆ ಬಂದನು) ॥ 100 ॥

**ಪ್ರಾಪ್ತಂ ಪುರೋಹಿತಂ ದೃಷ್ಟ್ವಾ (ನತ್ವಾ) ಕೃತ್ವಾರ್ಚಾಂ ವಿಧಿಪೂರ್ವಿಕಾಮ್ ।**
**ಕಾಲೋಚಿತಂ ವಾಚಯಿತ್ವಾ ವಂದಮಾನ ಉವಾಚ ಸಃ ॥**

ರಾಜೋವಾಚ-

**ತವಾಜ್ಞಯಾ ಕರಿಷ್ಯಾಮಿ ವಿವಾಹಂ ದುಹಿತುರ್ಮಮ** **॥ 101 ॥**

**ಶ್ರೀನಿವಾಸಸ್ಯ ಸಂಬಂಧೋ ವಿದಿತಸ್ಯ* ಪ್ರಶಸ್ಯತೇ ।**
**ಕನ್ಯಾರ್ಥಮಾಗತಾ ಸಾಧ್ವೀ ವಿಧಿತೇ ಗೋತ್ರನಾಮನೀ** **॥ 102 ॥**

**ತಥಾಪಿ ತವ ವಾಕ್ಯೇನ ವಿವಾಹಂ ಕರ್ತುಮುತ್ಸಹೇ ।**
**ಸ ರಾಜ್ಞೋ ವಚನಂ ಶ್ರುತ್ವಾ ರಾಜಾನಂ ಪ್ರತ್ಯಭಾಷತ** **॥ 103 ॥**

ಗುರುರುವಾಚ-

**ಸಫಲಂ ವೃಕ್ಷಮಾಶ್ರಿತ್ಯ ಜೀವಂತಿ ಬಹವೋ ಭುವಿ ।**
**ತಥಾ ವಯಂ ಚ ಜೀವಾಮಸ್ತವಭಾಗ್ಯಾವಲಂಬಿನಃ** **॥ 104 ॥**

**ಅಹಂ ಕದಾಚಿದೇವಾತ್ರ ಸಮಾಗಚ್ಛಾಮಿ ಭೂತಲಮ್ ।**
**ನ ಜಾನಾಮಿ ತತಸ್ಸಮಕ್ ಶುಕ ಆಶ್ರಿತವಾನ್ ಸದಾ** **॥ 105 ॥**

ಪ್ರಾಪ್ತಂ = ಬಂದಂತಹ, ಪುರೋಹಿತಂ = ಬೃಹಸ್ಪತ್ಯಾಚಾರ್ಯನನ್ನು, ದೃಷ್ಟ್ವಾ = ನೋಡಿ, (ಪಾ- ನತ್ವಾ = ನಮಸ್ಕರಿಸಿ), ವಿಧಿಪೂರ್ವಿಕಾಂ = ನಿಯಮಪುರಸ್ಸರವಾದ, ಅರ್ಚಾಂ = ಪೂಜೆಯನ್ನು, ಕೃತ್ವಾ = ಮಾಡಿ, ಸಃ = ಆಕಾಶನೃಪನು, ವಂದಮಾನಃ = ನಮಸ್ಕರಿಸುವವನಾಗಿ, ಕಾಲೋಚಿತಂ = ಕಾಲೋಚಿತವಾದ, ವಾಚ ಮಾನಃ = ಕುಶಲಪ್ರಶ್ನೆ ಮಾಡುವವನಾಗಿ, ಉವಾಚ = ಹೇಳಿದನು. ರಾಜೋವಾಚ = ಆಕಾಶರಾಜನು ಹೇಳುತ್ತಿದ್ದಾನೆ - ಮಮ = ನನ್ನ, ದುಹಿತುಃ = ಕುಮಾರಿಯ, ವಿವಾಹಂ = ಲಗ್ನವನ್ನು, ತವಾಜ್ಞಯಾ = ನಿನ್ನ ಅಪ್ಪಣೆಯಂತೆ, ಕರಿಷ್ಯಾಮಿ = ನೆರವೇರಿಸುವೆನು ॥ 101 ॥ ವಿದಿತಸ್ಯ = ತ್ರಿಲೋಕವಿಖ್ಯಾತನಾದ, ಶ್ರೀನಿವಾಸಸ್ಯ = ಶ್ರೀನಿವಾಸನ, ಸಂಬಂಧಃ = ಬಾಂಧವ್ಯವು (ಕನ್ಯಾಪ್ರದಾನರೂಪ ಸಂಬಂಧವು), ಪ್ರಶಸ್ಯ ತೇ = ಹೆಗ್ಗಳಿಕೆಯಾಗಿರುತ್ತದೆ (ಪ್ರಶಸ್ತವಾಗಿರುತ್ತದೆ.) (ಪಾ- ಶ್ರೀನಿವಾಸಸ್ಯ ಸಂಬಂಧಃ = ಶ್ರೀನಿವಾಸನಿಗೆ ಸಂಬಂಧಿಸಿದ ವಿಚಾರಗಳು, ಅನಘ = ಎಲೈ ಪಾಪರಹಿತನಾದ ಗುರುವೇ, (ತೇ = ನಿನಗೆ), ವಿದಿತಂಸ್ಯಾತ್ = ತಿಳಿದಿರಬಹುದು) ಸಾಧ್ವೀ = ಸಾಧ್ವಿಯಾದ ಬಕುಳಾದೇವಿಯು, ಕನ್ಯಾರ್ಥಂ = ಕನ್ಯಾಪೇಕ್ಷೆಯಿಂದ, ಆಗತಾ = ಬಂದಿದ್ದಾಳೆ. ಗೋತ್ರನಾಮಾನಿ = ವರನ ಗೋತ್ರ ಮತ್ತು ವರನ ಹೆಸರುಗಳು, ವಿದಿತೇ = ತಿಳಿಯಿತು (ತಿಳಿಯಲ್ಪಟ್ಟವು) ॥ 102 ॥ ತಥಾಪಿ = ಹೀಗಿದ್ದರೂ, ತವ = ನಿನ್ನ, ವಾಕ್ಯೇನ = ಸಮ್ಮತಿಯ ವಚನದಿಂದ, ವಿವಾಹಂ = ಪದ್ಮಾವತಿಯ ಮದುವೆಯನ್ನು, ಕರ್ತುಮುತ್ಸಹೇ = ಮಾಡಲು ಉತ್ಸುಕನಾಗಿದ್ದೇನೆ. ಸಃ = ದೇವಗುರುವು, ರಾಜ್ಞಃ = ಆಕಾಶರಾಜನ, ವಚನಂ = ಮಾತನ್ನು, ಶ್ರುತ್ವಾ = ಕೇಳಿದವನಾಗಿ, ರಾಜಾನಂ = ರಾಜನನ್ನು ಕುರಿತು, ಅಭಾಷತ = ಮಾತನಾಡಿದನು ॥ 103 ॥ ಗುರುರುವಾಚ = ಬೃಹಸ್ಪತಿಯು ಹೇಳಿದನು - ಸಫಲಂ ವೃಕ್ಷಮಾಶ್ರಿತ್ಯ = ಫಲಭರಿತವಾದ ವೃಕ್ಷವನ್ನು ಆಶ್ರಯಿಸಿಕೊಂಡು, ಭುವಿ = ಜಗತ್ತಿನಲ್ಲಿ, ಬಹವಃ = ಅನೇಕ ಪ್ರಾಣಿಗಳು, ಜೀವಂತಿ = ಜೀವಿಸುವುವು. ತಥಾ = ಅದರಂತೆಯೇ, ವಯಂ = ನಾವು, ತವ = ನಿನ್ನ, ಭಾಗ್ಯಾವಲಂಬಿನಃ = ಭಾಗ್ಯವನ್ನು ಅವಲಂಬಿಸುವವರಾಗಿ, ಜೀವಾಮಃ = ಜೀವಿಸುವವರಾಗಿದ್ದೇವೆ.

---

*ಪಾ :- ವಿದಿತಂ ಸ್ಯಾತ್ತವಾನಘ

|| 104 || ಅಹಂ = ನಾನು, ಅತ್ರ ಭೂತಲಂ = ಈ ಭೂಮಿಗೆ, ಕದಾಚಿದೇವ = ಯಾವಾಗಲಾದರೊಮ್ಮೆ, ಸಮಾಗಚ್ಛಾಮಿ = ಬರುತ್ತೇನೆ. ತತಃ = ಆದ್ದರಿಂದ, ಸಮ್ಯಕ್ = ಚೆನ್ನಾಗಿ, ನ ಜಾನಾಮಿ = ತಿಳಿದಿಲ್ಲ. ಶುಕಃ = ಶುಕಮುನಿಯು, ಸದಾ = ಯಾವಾಗಲೂ, ಆಶ್ರಿತವಾನ್ = ಈ ಭೂತಲವನ್ನಾಶ್ರಯಿಸಿದವನಾಗಿದ್ದಾನೆ. || 105 ||

**ಸ ಜಾನಾತಿ ಮಹಾರಾಜ ಸ್ಥಿತಿಮೇತಸ್ಯ ಶಾರ್ಙ್ಗಿಣಃ ।**
**ಅತ್ರೈವೋತ್ತರದಿಗ್ಭಾಗೇ ಪಂಚಕ್ರೋಶಮಿತೇ ನೃಪ || 106 ||**

**ಶುಕೋಽಸ್ತಿ ವ್ಯಾಸತನಯಃ ಶ್ರೀನಿವಾಸಪರಾಯಣಃ ।**
**ತಮಾಹ್ವಯ ಮಹಾರಾಜ ಶೀಘ್ರೇಣ ಪೃಥಿವೀಪತೆ! || 107 ||**

**ಸ ವಕ್ಷ್ಯತ್ಯಾತ್ಮನ ಸೌಖ್ಯಂ ವೃತ್ತಾಂತಂ ತಸ್ಯಚಾದಿತಃ || 108 ||**

**ಏವಮುಕ್ತೋಽಥ ಗುರುಣಾ ಭ್ರಾತರಂ ಬ್ರಾಹ್ಮಣಪ್ರಿಯಮ್ ।**
**ಸಂದಿದೇಶ ಮಹಾರಾಜಾ ಶುಕಾಶ್ರಮಮರಿಂದಮಃ || 109 ||**

ಮಹಾರಾಜ = ಎಲೈ ದೊರೆಯೇ, ಸಃ = ಶುಕಾಚಾರ್ಯನು, ಏತಸ್ಯ ಶಾರ್ಙ್ಗಿಣಃ = ಸಾರಂಗಧರನಾದ ಈ ಶ್ರೀನಿವಾಸನ, ಸ್ಥಿತಿಂ = ಸ್ಥಿತಿಗತಿಗಳನ್ನು (ಸಮ್ಯಕ್ = ಚೆನ್ನಾಗಿ), ಜಾನಾತಿ = ತಿಳಿದಿದ್ದಾನೆ. ನೃಪ = ಆಕಾಶರಾಜ! ಅತ್ರೈವ = ಇಲ್ಲಿಯೇ, ಉತ್ತರದಿಗ್ಭಾಗೇ = ಉತ್ತರದ ದಿಗ್ಭಾಗದಲ್ಲಿ, ಪಂಚಕ್ರೋಶಮಿತೇ = ಐದು ಹರಿದಾರಿ ದೂರದಲ್ಲಿ || 106 || ಶ್ರೀನಿವಾಸಪರಾಯಣಃ = ಶ್ರೀಹರಿಧ್ಯಾನನಿರತನಾದ, ವ್ಯಾಸತನಯಃ = ಶ್ರೀವೇದವ್ಯಾಸಕುಮಾರನಾದ, ಶುಕಃ = ಶುಕಮುನಿಯು, ಅಸ್ತಿ = ಇರುವನು. ಪೃಥಿವೀಪತೇ = ಭೂಮಿಗೊಡೆಯನಾದ, ಮಹಾರಾಜ = ಆಕಾಶರಾಜ! ತಂ = ಆ ಶುಕಾಚಾರ್ಯನನ್ನು, ಆಹ್ವಯ = ಆಹ್ವಾನಿಸು || 107 || ಪೃಥಿವೀಪತೇ = ಮಹಾರಾಜ, ಸಃ = ಶುಕಮುನಿಯು, ಆದಿತಃ = ಮೊದಲಿನಿಂದ, ತಸ್ಯ = ಶ್ರೀನಿವಾಸನ, ವೃತ್ತಾಂತಂ = ಸಮಾಚಾರವನ್ನು, ಆತ್ಮನಃ = ನಿನಗೆ, ಸೌಖ್ಯ = ಸುಖವಾಗುವ ಬಗೆಯನ್ನು, ವಕ್ಷ್ಯತಿ = ಹೇಳುತ್ತಾನೆ || 108 || ಗುರುಣಾ = ಬೃಹಸ್ಪತಿಯಿಂದ, ಏವಮುಕ್ತಃ = ಹೀಗೆ ಹೇಳಲ್ಪಟ್ಟಂಥವನಾಗಿ, ಅಥ = ಆ ತರುವಾಯ, ಬ್ರಾಹ್ಮಣ ಪ್ರಿಯಂ = ಬ್ರಾಹ್ಮಣರಲ್ಲಿ ಪ್ರೀತಿಯುಳ್ಳ, ಭ್ರಾತರಂ = ತಮ್ಮನಾದ ತೋಂಡಮಾನನನ್ನು, ಅರಿಂದಮಃ = ಶತ್ರುಮರ್ದಕನಾದ, ಮಹಾರಾಜಃ = ಆಕಾಶರಾಜನು, ಶುಕಾಶ್ರಮಂ = ಶುಕಮುನಿಯ ಆಶ್ರಮವನ್ನು ಕುರಿತು, ಸಂದಿದೇಶ = ಕಳುಹಿಸಿದನು || 109 ||

**ಸ ಗತ್ವಾ ವಾಯುವೇಗೇನ ರಥೇನಾದಿತ್ಯವರ್ಚಸಾ ।**
**ಧ್ಯಾನಯೋಗಾದುತ್ಥಿತಂ ತಂ ದೃಷ್ಟ್ವಾ ಶುಕಮುವಾಚ ಹ || 110 ||**

*ತೋಂಡಮಾನ ಉವಾಚ –*

**ಶೃಣು ತಾಪಸಶಾರ್ದೂಲ ವಚನಂ ರಾಜಭಾಷಿತಮ್ ।**
**ಪದ್ಮಾವತೀ ವಿವಾಹಾರ್ಹಾ ಸಂಪನ್ನಾ ಗುರುಪೂಜಿತಾ || 111 ||**

**ಶ್ರೀನಿವಾಸಾಯ ತಾಂ ಕನ್ಯಾಂ ಪ್ರದಾತುಂ ಕಾಂಕ್ಷತೇ ನೃಪಃ ।**
**ಯುಕ್ತಾಯುಕ್ತ ವಿಚಿಂತಾಯೈ ಗುರುಮಾಹೂತವಾನಪಿ || 112 ||**

**ತದರ್ಥಮೇವ ಚಾದ್ಯ ತ್ವಾಂ ಸಮಾಹ್ವಯತಿ ಭೂಮಿಪಃ ।**
**ಯುಕ್ತಾಯುಕ್ತೇ ವಿಚಿಂತ್ಯಾಥ ಲಿಖಿತುಂ ಶುಭಪತ್ರಿಕಾಮ್ ॥ 113 ॥**

**ಅವಕಾಶಂ ನ ಕೃತ್ವಾದ್ಯ ಗಚ್ಛತಾಂ ನಗರಂ ಪ್ರತಿ ।**
**ಏವಮುಕ್ತೋ ಮಹೀದೇವೋ ಮಹೀಪಾಲೇನ ಭೂಮಿಪ ॥ 114 ॥**

**ಸಸಂಭ್ರಮಾತ್ಸಮುತ್ಥಾಯ ವ್ಯಭ್ರಮದ್ವಿಭ್ರಮನ್ನಿವ ।**
**ಭಿಂದನ್ ಕಮಂಡಲುಂರಾಜನ್ ಛಿಂದನ್ ಕೃಷ್ಣಮೃಗತ್ವಚಮ್ ॥ 115 ॥**

ಸಃ = ತೋಂಡಮಾನ ರಾಜನು, ಆದಿತ್ಯವರ್ಚಸಾ = ಸೂರ್ಯನಂತೆ ಕಾಂತಿಯುಳ್ಳ(ಪ್ರಕಾಶಮಾನವಾದ), ರಥೇನ = ರಥದಿಂದ, ವಾಯುವೇಗೇನ = ವಾಯುದೇವನಿಗೆ ಸಮಾನವಾದ ವೇಗದಿಂದ, ಗತ್ವಾ = ಹೋಗಿ, ಧ್ಯಾನಯೋಗಾದುತ್ಥಿತಂ = ಧ್ಯಾನಸಮಾಧಿಯಿಂದ ಎಚ್ಚರಗೊಂಡು ಮೇಲೆದ್ದ, ತಂ = ತಪಸ್ವಿಯಾದ, ಶುಕಂ = ಶುಕಮುನಿಯನ್ನು ಕುರಿತು, ಉವಾಚ ಹ = ಹೇಳಿದನು. ತೋಂಡಮಾನ ಉವಾಚ = ತೋಂಡಮಾನನು ಇಂತೆಂದನು – ತಾಪಸಶಾರ್ದೂಲ = ತಾಪಸೋತ್ತಮ, ರಾಜಭಾಷಿತಂ = ಆಕಾಶರಾಜನಿಂದ ಹೇಳಲ್ಪಟ್ಟ, ವಚನಂ = ಮಾತನ್ನು, ಶೃಣು = ಕೇಳು. ಗುರುಪೂಜಿತಾ = ಹಿರಿಯರಿಂದ ಸಂಭಾವಿತಳಾದ ಅಥವಾ ಬೃಹಸ್ಪತಿಯಿಂದ ಸಂಭಾವಿತಳಾದ, ಪದ್ಮಾವತೀ = ರಾಜಪುತ್ರಿಯಾದ ಪದ್ಮಾವತಿಯು, ವಿವಾಹಾರ್ಹಾ = ವಿವಾಹಕ್ಕೆ ಅರ್ಹಳು, ಸಂಪನ್ನಾ = ಆಗಿದ್ದಾಳೆ. ತಾಂ ಕನ್ಯಾಂ = ಆ ಪದ್ಮಾವತಿಯನ್ನು, ಶ್ರೀನಿವಾಸಾಯ = ಶ್ರೀನಿವಾಸನಿಗೆ, ಪ್ರದಾತುಂ = ವಿವಾಹಮಾಡಿಕೊಡಲು, ಕಾಂಕ್ಷತೇ = ಅಪೇಕ್ಷಿಸುವನು, ಯುಕ್ತಾ ಯುಕ್ತ ವಿಚಿಂತ್ಯಾಯ್ಯೆ = ಕಾರ್ಯಾಕಾರ್ಯಗಳನ್ನು ವಿಮರ್ಶಿಸಿ ನಿರ್ಣಯಿಸಲು, ಗುರುಮಪಿ = ಬೃಹಸ್ಪತ್ಯಾಚಾರ್ಯನನ್ನೂ, ಆಹೂತವಾನ್ = ಕರೆಸಿದ್ದಾನೆ. (ಆಹ್ವಾನಿಸಿದ್ದಾನೆ) ॥ 110-113 ॥ ಅದ್ಯ = ಈಗ, ಅವಕಾಶಂ = ಸಾವಕಾಶವನ್ನು (ನಿಧಾನವನ್ನು), ನ ಕೃತ್ವಾ = ಮಾಡದಲೇ, ನಗರಂ ಪ್ರತಿ = ನಾರಾಯಣಪುರವನ್ನು ಕುರಿತು, ಗಚ್ಛತಾಂ = ಹೊರಡೋಣವಾಗಲಿ. ಭೂಮಿಪೇನ = ತೋಂಡಮಾನನಿಂದ, ಏವಮುಕ್ತಃ = ಇಂತು ಹೇಳಿಸಿಕೊಂಡಂಥವನಾಗಿ, ಮಹೀದೇವಃ = ಭೂಸುರನಾದ ಶುಕಮುನಿಯು ॥ 114 ॥ ಸಸಂಭ್ರಮಾತ್ = ಸಂತೋಷ ಸಂಭ್ರಮದಿಂದ, ಸಮುತ್ಥಾಯ = ಆಸನದಿಂದ ಮೇಲೆದ್ದು, ವಿಭ್ರಮನ್ನಿವ = ಭ್ರಮಿಷ್ಠನಂತೆ (ಮೈಮೇಲೆ ಎಚ್ಚರವಿಲ್ಲದವನಂತೆ), ವ್ಯಭ್ರಮತ್ = ಅತ್ತಿತ್ತ ಕುಣಿದಾಡಿದನು. ರಾಜನ್ = ಜನಕಮಹಾರಾಜ! ಕಮಂಡಲುಂ = (ಶುಕಮುನಿಯು) ತನ್ನ ಕಮಂಡಲವನ್ನು, ಭಿಂದನ್ = ಒಡೆದುಹಾಕುತ್ತ, ಕೃಷ್ಣಮೃಗತ್ವಚಂ = ಉಟ್ಟ ಜಿಂಕೆಯಚರ್ಮವನ್ನು, ಛಿಂದನ್ = ಹರಿದು ಹಾಕುವವನಾಗಿ ॥ 115 ॥

**ವಿಚ್ಛಿದ್ಯ ಮಣಿಮಾಲಾಶ್ಚ ಸ ನನರ್ತ ಮಹಾಮುನಿಃ ।**
**ಮೂಹೂರ್ತಮಿತ್ಥಂ ರಾಜೇಂದ್ರ! ತದ್ಬುದ್ಧಿರವಶಂ ಗತಾ ॥**
**ಉವಾಚ ಪಶ್ಚಾದ್ರಾಜಾನಂ ಕಾರ್ಷ್ಣದ್ವೈಪಾಯನಿರ್ಮುನಿಃ ॥ 116 ॥**

*ಶ್ರೀಶುಕ ಉವಾಚ –*

**ಸಾಧೂದಿತಂ ವಾಕ್ಯಮುದಾರ ವಿಕ್ರಮ ತ್ವಯಾ ಹರೇರ್ವೇಂಕಟಶೈಲವಾಸಿನಃ ।**
**ಕನ್ಯಾಪ್ರದಾನಂ ಪುರುಷಾರ್ಥಸಾಧನಂ ಸಮಸ್ತ ಲೋಕಸ್ಯ ಪವಿತ್ರತಾರಕಮ್ ॥ 117 ॥**

***ಆಕಾಶರಾಜಧಿಷಣಾ ಶ್ರೀನಿವಾಸಕೃಪಾಬಲಾತ್ ।**
**ಮಹಾದಾನಪರಾಭೂಯಾತ್ ಏವಮೇವ ದಿನೇದಿನೇ ॥ 118 ॥**

ಮಣಿಮಾಲಾಶ್ಚ = ತುಳಸೀಮಣಿ - ಕಮಲಾಕ್ಷಮಣಿಗಳ ಹಾರಗಳನ್ನು, ಏಚ್ಛಿದ್ಯ = ಕಿತ್ತು ಹಾಕಿ, ಸಃ ಮಹಾಮುನಿಃ = ಆ ಮುನಿಕುಲೋತ್ತಮನಾದ ಶುಕಾಚಾರ್ಯನು, ನನರ್ತ = ನರ್ತಿಸಿದನು. ರಾಜೇಂದ್ರ = ಎಲೈ ಜನಕರಾಯ, ಇತ್ಥಂ = ಹೀಗೆ, ಮುಹೂರ್ತಂ = ಒಂದು ಮುಹೂರ್ತಕಾಲ, ತದ್ಬುದ್ಧಿಃ = ಅವನ ಬುದ್ಧಿಯು, ಅವಶಂ ಗತಾ = ಸ್ವಾಧೀನ ತಪ್ಪಿತು, ಪಶ್ಚಾತ್ = ಬುದ್ಧಿಯು ಸ್ಥಿಮಿತಕ್ಕೆ ಬಂದ ಮೇಲೆ, ಕೃಷ್ಣದ್ವೈಪಾಯನಿಃ = ಕೃಷ್ಣದ್ವೈಪಾಯನರ ಮಗನಾದ, ಮುನಿಃ = ಶುಕಮುನಿಯು, ರಾಜಾನಂ = ತೋಂಡಮಾನ ಭೂಪತಿಯನ್ನು ಉದ್ದೇಶಿಸಿ, ಉವಾಚ = ಹೇಳಿದನು ॥ 116 ॥ ಶ್ರೀ ಶುಕ ಉವಾಚ = ಶುಕಮುನಿಯು ಹೇಳಹತ್ತಿದನು - ಉದಾರ ವಿಕ್ರಮ = ಉನ್ನತ ಪರಾಕ್ರಮಶಾಲಿಯಾದ ತೋಂಡಮಾನ ರಾಜ!, ತ್ವಯಾ = ನಿನ್ನಿಂದ, ಸಾಧು ವಾಕ್ಯಂ = ಸಜ್ಜನಸಮ್ಮತವಾದ ಮಾತು, ಉದಿತಂ = ಹೇಳಲ್ಪಟ್ಟಿತು. ವೇಂಕಟಶೈಲವಾಸಿನಃ = ವೇಂಕಟಾಚಲವಾಸಿಯಾದ, ಹರೇಃ = ಶ್ರೀನಿವಾಸನಿಗೆ, ಕನ್ಯಾಪ್ರದಾನಂ = ಕನ್ಯಾಪ್ರದಾನ ಮಾಡುವುದು, ಪುರುಷಾರ್ಥ ಸಾಧನಂ = ಚತುರ್ವಿಧ ಪುರುಷಾರ್ಥಗಳಿಗೆ ಸಾಧನವಾಗಿದೆ. ಸಮಸ್ತಲೋಕಸ್ಯ = ಸಕಲ ಜಗತ್ತಿನ, ಪವಿತ್ರ ತಾರಕಂ = ಪಾವಿತ್ರ್ಯಕ್ಕೂ, ಉದ್ಧಾರಕ್ಕೂ, ಕಾರಣವಾದುದು. ॥ 117 ॥ ಆಕಾಶರಾಜಧಿಷಣಾ = ಆಕಾಶರಾಜನ ಬುದ್ಧಿಯು, ಶ್ರೀನಿವಾಸಕೃಪಾಬಲಾತ್ = ಶ್ರೀನಿವಾಸನ ಕೃಪೆಯ ಬಲದಿಂದ, ದಿನೇ ದಿನೇ = ದಿನದಿನವೂ, ಏವಮೇವ = ಇದರಂತೆಯೇ, ಮಹಾದಾನಪರಾ = ಮಹಾದಾನತರವು, ಭೂಯಾತ್ = ಉಂಟಾಗಲಿ, (ಅಥವಾ ಪಾ- ಮಹಾದಾನಪರೌ = ಕನ್ಯಾದಾನದಂತಹ ಮಹಾದಾನಮಾಡಲುದ್ಯುಕ್ತರಾಗಿರುವ, ಆಕಾಶರಾಜಧಿಷಣೌ = ಆಕಾಶರಾಜ ಮತ್ತು ಬೃಹಸ್ಪತಿಗಳು, ಶ್ರೀನಿವಾಸ ಕೃಪಾಬಲಾತ್ = ಶ್ರೀನಿವಾಸನ ಕರುಣೆಯ ಬಲದಿಂದ, ಇತ್ಥಂ = ಹೀಗೆಯೇ, ದಿನೇ ದಿನೇ = ಪ್ರತಿದಿನವೂ, ಮಹಾದಾನಪರೌ = ಕನ್ಯಾದಾನದಂತೆಯೇ ಇನ್ನಿತರ ಮಹಾದಾನಪರರು, ಭೂಯಾಸ್ತಾಂ = ಆಗಲಿ) ॥ 118 ॥

**ಇತ್ಯಾಶಿಷಾ ಪ್ರಶಸ್ಯಾಥ ಪದ್ಮತೀರ್ಥೇಽವಗಾಹ್ಯ ಚ ।**
**ಕೃತ್ವಾ ಮಾಧ್ಯಾಹ್ನಿಕೀಂ ಸಂಧ್ಯಾಂ ತ್ಯಕ್ತ್ವಾ ಜೀರ್ಣೋಪಬರ್ಹಣಮ್ ॥ 119 ॥**

**ಸ ನವಾನಿ ಕುಶಾಗ್ರಾಣಿ ನಿಕೃತ್ಯ ಮುನಿಸತ್ತಮಃ ।**
**ಕಿರೀಟಂ ಬಂಧಯಿತ್ವಾತ್ತೈರುತ್ತಮಾಂಗನಿಬಂಧನಮ್ ॥ 120 ॥**

ಇತ್ಯಾಶಿಷಾ = ಹೀಗೆ ಆಶೀರ್ವಾದಪೂರ್ವಕವಾಗಿ, ಪ್ರಶಸ್ಯ = ಆಕಾಶಭೂಪತಿಯನ್ನು ಪ್ರಶಂಸಿಸಿ, ಅಥ = ಆ ಬಳಿಕ, ಪದ್ಮತೀರ್ಥೇ = ಪದ್ಮಸರೋವರದಲ್ಲಿ, ಅವಗಾಹ್ಯ ಚ = ಅವಗಾಹನ ಸ್ನಾನಮಾಡಿದವನಾಗಿ, ಮಾಧ್ಯಾಹ್ನಿಕೀಂ = ಮಧ್ಯಾಹ್ನ ಸಮಯದಲ್ಲಾಚರಿಸಬೇಕಾದ, ಸಂಧ್ಯಾಂ = ಸಂಧ್ಯೆಯನ್ನು, ಕೃತ್ವಾ = ಮಾಡಿ, ಜೀರ್ಣೋಪಬರ್ಹಣಂ = ಜೀರ್ಣವಾದ (ಹಳೆಯದಾದ) ಅಲಂಕಾರಗಳನ್ನು, ತ್ಯಕ್ತ್ವಾ = ತೆಗೆದುಹಾಕಿ, ಮುನಿಸತ್ತಮಃ = ಆ ಮುನಿವರನು, ನವಾನಿ = ಹೊಸದಾದ, ಕುಶಾಗ್ರಾಣಿ = ದರ್ಭಾಗ್ರಗಳನ್ನು, ನಿಕೃತ್ಯ = ಕತ್ತರಿಸಿಕೊಂಡು, ತೈಃ = ಅವುಗಳಿಂದ, ಉತ್ತಮಾಂಗ ನಿಬಂಧನಂ = ಉತ್ತಮಾಂಗಸೂಚಕವಾದ, ಕಿರೀಟಂ = ಕಿರೀಟವನ್ನು, ಬಂಧಯಿತ್ವಾ = ಕಟ್ಟಿಕೊಂಡು ॥ 119-120 ॥

*ಪಾ: - ಆಕಾಶರಾಜಧಿಷಣೌ ಶ್ರೀನಿವಾಸಕೃಪಾಬಲಾತ್ । ಮಹಾದಾನಪರಾವಿತ್ಥಂ ಭೂಯಾಸ್ತಾಂ ಚ ದಿನೇ ದಿನೇ ॥ 118 ॥

ಕವಚಂ ಕಲ್ಪಯಾಮಾಸ ಕುಶಾಗ್ರೈಃಕುಸುಮೈಸ್ಸಹ ।
ತುಲಸೀಮಣಿಮಾಲಾಭಿಃ ಕಂಠಕರ್ಣವಿಭೂಷಿತಃ ॥ 121 ॥

ಮೃಗತ್ವಗ್ಭಿಃ ಪಾದಲಂಬೈಃ ಕಂಚುಕೈಸ್ಸಮಲಂಕೃತಃ ।
ಜ್ಞಾನಾಶ್ವಮಧಿರೂಢಸ್ತು ಸ ಜಗಾಮ ನೃಪಾಲಯಮ್ ॥ 122 ॥

ತಮಾಯಾಂತಂ ಮುನಿಂ ದೃಷ್ಟ್ವಾ ಚತುರಂಗಬಲಾನ್ವಿತಃ ।
ಪುರೋಹಿತಂ ಪುರಸ್ಕೃತ್ಯ ಕುಶಮೂಲಫಲೋದಕೈಃ ॥ 123 ॥

ಅಭಿಯಾತಸ್ತದಾ ರಾಜಾ ಸಂತೋಷಂ ಪ್ರಾಪ ಸಾ ಪುರೀ ।
ಯಾನಾದುತ್ತೀರ್ಯ ರಾಜೇಂದ್ರಃ ಸಾಷ್ಟಾಂಗಂ ಪ್ರಣಿಪತ್ಯ ತಮ್ ॥
ಗಜಮಾರೋಪ್ಯ ನಗರೀಂ ಸ ಪುರೋಹಿತ ಆನಯತ್ ॥ 124 ॥

ನಿಕೇತನಾಂತರ್ಭವನೇ ನಿವೇಶ್ಯ
ನಿಧಿಂ ಮುನೀನಾಂ ಪ್ರವರಂ ಸ ರಾಜಾ (ನಿರತಂ ಪರಾತ್ಪರೇ) ।
ಸಂಪೂಜಯಾಮಾಸ ವಿಧಾನವಿತ್ತಮೋ
ವಿದ್ಯಾಗುರುಂ ಜ್ಞಾನಗುರುಂ ಚ ನತ್ವಾ (ಪಾ:- ಶುಕಂನೃಪಃ) ॥ 125 ॥

ಕುಶಾಗ್ರೈಃ = ದರ್ಭಾಗ್ರಗಳಿಂದಲೂ, ಕುಸುಮೈಃ = ಹೂವುಗಳಿಂದಲೂ, ಕವಚಂ = ಕವಚವನ್ನು, ಕಲ್ಪಯಿತ್ವಾ = ನಿರ್ಮಿಸಿಕೊಂಡು, ತುಳಸೀಮಣಿಮಾಲಾಭಿಃ = ತುಳಸಿ ಮಣಿಗಳಿಂದ ಮತ್ತು ತುಳಸಿ ಹಾರಗಳಿಂದ, ಕಂಠ-ಕರ್ಣ ವಿಭೂಷಿತಃ = ಕೊರಳು ಮತ್ತು ಕಿವಿಗಳನ್ನು ಅಲಂಕರಿಸಿಕೊಂಡವನಾಗಿ, ॥ 121 ॥ ಪಾದಲಂಬೈಃ = ಕಾಲಿನವರೆಗೂ ಉದ್ದವಾದ, ಮೃಗತ್ವಗ್ಭಿಃ = ಜಿಂಕೆಯ ಚರ್ಮದಿಂದ ಮಾಡಲ್ಪಟ್ಟ, ಕಂಚುಕೈಃ = ಕಂಚುಕ(ಅಂಗಿ)ಗಳಿಂದಲೂ, ಸಮಲಂಕೃತಃ = ಚೆನ್ನಾಗಿ ಅಲಂಕರಿಸಿಕೊಂಡು, ಜ್ಞಾನಾಶ್ವಮಧಿರೂಢಸ್ತು = ಜ್ಞಾನವೆಂಬ ಕುದುರೆಯನ್ನೇರಿದವನಾಗಿ, ಸಃ = ಆ ಶುಕಮುನಿಯು, ನೃಪಾಲಯಂ = ಆಕಾಶರಾಜನ ಅರಮನೆಯನ್ನು ಕುರಿತು, ಜಗಾಮ = ಹೋದನು ॥ 122 ॥ ಆಯಾಂತಂ = ನಾರಾಯಣಪುರಕ್ಕೆ ಆಗಮಿಸಿದ, ತಂ ಮುನಿಂ = ಆ ಶುಕಮುನಿಯನ್ನು, ದೃಷ್ಟ್ವಾ = ನೋಡಿ, ಚತುರಂಗಬಲಾನ್ವಿತಃ = ರಥ, ಗಜ, ತುರಗ, ಪದಾತಿ ಎಂಬ ನಾಲ್ಕು ವಿಧ ಬಲದಿಂದ ಕೂಡಿದವನಾಗಿ, ಕುಶಮೂಲ ಫಲೋದಕೈಃ = ದರ್ಭೆ-ಗೆಡ್ಡೆಗೆಣಸು-ಫಲಗಳು-ಉದಕ (ಜಲಪೂರಿತ ಪೂರ್ಣಕುಂಭ) ಗಳೊಡನೆ, ಪುರೋಹಿತಂ = ಬೃಹಸ್ಪತ್ಯಾಚಾರ್ಯರನ್ನು, ಪುರಸ್ಕೃತ್ಯ = ಮುಂದೆ ಮಾಡಿಕೊಂಡು, ಅಭಿಯಾತಃ = ಎದುರುಗೊಳ್ಳಲು ಹೊರಟನು ॥ 123 ॥ ತದಾ = ಆವಾಗ, ರಾಜಾ = ಆಕಾಶರಾಜನು, ಸಾ ಪುರೀ = ಆ ಪುರನಿವಾಸಿಗಳು (ಆ ನಾರಾಯಣಪುರವೂ) ಸಂತೋಷಂ = ಆನಂದವನ್ನು, ಪ್ರಾಪ = ಹೊಂದಿ(ತು)ದರು. ರಾಜಾ = ಆಕಾಶರಾಜನು, ಯಾನಾದುತ್ತೀರ್ಯ = ರಥದಿಂದ (ಪಲ್ಲಕ್ಕಿಯಿಂದ) ಕೆಳಗಿಳಿದು, ತಂ = ಶುಕಾಚಾರ್ಯರನ್ನು ಕುರಿತು, ಸಾಷ್ಟಾಂಗಂ ಪ್ರಣಿಪತ್ಯ = ಸಾಷ್ಟಾಂಗ ನಮಸ್ಕಾರಮಾಡಿ, ಗಜಮಾರೋಪ್ಯ = ಶುಕಮುನಿಗಳನ್ನು ಆನೆಯ ಮೇಲೆ ಕೂಡಿಸಿ, ಸಪುರೋಹಿತಃ = ಬೃಹಸ್ಪತ್ಯಾಚಾರ್ಯರಿಂದೊಡಗೂಡಿದವನಾಗಿ, ನಗರೀಂ = ನಾರಾಯಣಪುರವನ್ನು ಕುರಿತು, ಆನಯತ್ = ಮೆರವಣಿಗೆಯಿಂದ ಕರೆದುತಂದನು ॥ 124 ॥ ಮುನೀನಾಂ ನಿಧಿಂ = ಮನನಶೀಲರಲ್ಲಿ, ಪ್ರವರಂ = ಜ್ಞಾನಿಶ್ರೇಷ್ಠನಾದ ಶುಕಾಚಾರ್ಯನನ್ನು, ನಿಕೇತನಾಂತರ್ಭವನೇ = ಅರಮನೆಯ

ಅಂತಃಪುರದಲ್ಲಿ, ನಿವೇಶ್ಯ = ಪೀಠದಲ್ಲಿ ಮಂಡಿಸಿ, ವಿಧಾನವಿತ್ತಮಃ = ಗುರುಪೂಜಾನಿಯಮಗಳನ್ನು ಚೆನ್ನಾಗಿ ಬಲ್ಲ, ಸ ರಾಜಾ = ಆ ಆಕಾಶಭೂಪತಿಯು (ಪಾ- ಪರಾತ್ಪರೇ = ಸರ್ವೋತ್ತಮನಾದ ಶ್ರೀಹರಿಯಲ್ಲಿ, ನಿರತಂ = ಧ್ಯಾನಾಸಕ್ತನಾದ) ವಿದ್ಯಾಗುರುಂ = ವಿದ್ಯಾಗುರುಗಳೂ, ಜ್ಞಾನಗುರುಂ = ಜ್ಞಾನೋಪದೇಶಕರೂ ಆದ (ಶುಕಂ) ಶುಕಮುನಿಗಳನ್ನು, ನತ್ವಾ = ನಮಸ್ಕರಿಸಿ, ಸಂಪೂಜಯಾಮಾಸ = ಚೆನ್ನಾಗಿ ಪೂಜಿಸಿದನು ॥ 125 ॥

*ರಾಜೋವಾಚ-*

**ತಾಪಸಂ ಪರಿಪಪ್ರಚ್ಛ ಕನ್ಯಾರ್ಥಂ ಧಿಷಣಾಗ್ರತಃ ।**
**ಪದ್ಮಾವತೀಂ ಪ್ರದಾಸ್ಯಾಮಿ ನಿಶ್ಚಿತೇಯಂ ಮತಿರ್ಮಮ ॥**
**ಶ್ರೀನಿವಾಸಾಯ ಕೃಷ್ಣಾಯ ಭವದ್ಭ್ಯಾಮನುಮೋದಿತಃ ॥ 126 ॥**

**ಸ ತದ್ವಚನ ಮಾಕರ್ಣ್ಯ ರಾಜಾನಂ ರಾಜಸತ್ತಮ! ।**
**ಶುಕೋಽಬ್ರವೀದ್ಗಿರಂ ಪುತ್ರೀಕಾರಣಾತ್ಕರುಣಾನ್ವಿತಃ ॥ 127 ॥**

*ಶ್ರೀಶುಕ ಉವಾಚ-*

**ಮಾಕುರುಷ್ವ ಮಹಾರಾಜ ಸಂದೇಹಂ ದಾನಕರ್ಮಣಿ ।**
**ಧನ್ಯೋಽಸಿ ತ್ವಂ ಮಹೀಪಾಲ! ಕುಲಂ ಪಾವನತಾಂಗತಮ್ ॥ 128 ॥**

**ಪಿತರಸ್ತುದಿವಂ (ಪಾ:-ಪಿತರಸ್ತ್ರಿದಿವಂ) ಪ್ರಾಪ್ತಾ ನಾತ್ರ ಕಾರ್ಯ ವಿಚಾರಣಾ ।**
**ಕಿಂ ತ್ವಯಾ ಚರಿತಂ ಪುಣ್ಯಂ ಪೂರ್ವಜನ್ಮನಿ ಭೂಮಿಪ ॥ 129 ॥**

**ಭಗವಾನರವಿಂದಾಕ್ಷಃ ಶ್ರೀನಿವಾಸಸ್ತ್ವತಾಂ ಗತಿಃ ।**
**ಜಾಮಾತೃತ್ವಂ ಸಮಾಪನ್ನಸ್ತಸ್ಮಾನ್ನಾಸ್ತಿ ತವಾಧಿಕಃ ॥ 130 ॥**

ರಾಜೋವಾಚ = ರಾಜನು ಮಾತನಾಡಿದನು. ಧಿಷಣಾಗ್ರತಃ = ಬೃಹಸ್ಪತ್ಯಾಚಾರ್ಯರ ಸಮಕ್ಷ, ಕನ್ಯಾರ್ಥಂ = ಕನ್ಯಾದಾನ ನಿಮಿತ್ತವಾಗಿ, ತಾಪಸಂ = ಶುಕಮುನಿಯನ್ನು, ಪಪ್ರಚ್ಛ = ಕೇಳಿದನು. ಭವದ್ಭ್ಯಾಮನುಮೋದಿತಃ = ನಿಮ್ಮಿಬ್ಬರ ಸಮ್ಮತಿಯಿಂದ, ಶ್ರೀನಿವಾಸಾಯ = ಲಕ್ಷ್ಮೀದೇವಿಗೆ ಆವಾಸಭೂತನಾದ, ಕೃಷ್ಣಾಯ = ಶ್ರೀಕೃಷ್ಣನಿಗೆ, ಪದ್ಮಾವತೀಂ = ನನ್ನ ಮಗಳಾದ ಪದ್ಮಾವತಿಯನ್ನು, ಪ್ರದಾಸ್ಯಾಮಿ = ಮದುವೆ ಮಾಡಿಕೊಡುತ್ತೇನೆ, ಮಮ = ನನ್ನ, ಇಯಂ ಮತಿಃ = ಈ ಬುದ್ಧಿಯು, ನಿಶ್ಚಿತಾ = ನಿಶ್ಚಿತವಾಗಿದೆ. ರಾಜಸತ್ತಮ = ಎಲೈ ಜನಕಮಹಾರಾಜ! ಸ ಚ = ಆ ಶುಕಮುನಿಯು, ತದ್ವಚನಂ = ರಾಜನ ನುಡಿಯನ್ನು, ಆಕರ್ಣ್ಯ = ಆಲಿಸಿ, ರಾಜಾನಂ (ಪ್ರತಿ) = ಆಕಾಶರಾಜನನ್ನು ಕುರಿತು, ಕರುಣಾನ್ವಿತಃ = ಕಾರುಣ್ಯಪೂರ್ಣನಾಗಿ, ಪುತ್ರೀಕಾರಣಾತ್ = ಪದ್ಮಾವತಿಯ ಕಾರಣಕ್ಕಾಗಿ, ಶುಕಃ = ಶುಕಮುನಿಯು, ಗಿರಂ = ಮಾತನ್ನು, ಅಬ್ರವೀತ್ = ಹೇಳಿದನು ॥ 127 ॥ ಶ್ರೀಶುಕ ಉವಾಚ = ಶ್ರೀಶುಕಾಚಾರ್ಯನು ಇಂತೆಂದನು - ಮಹಾರಾಜ = ಎಲೈ ದೊರೆಯೇ! ದಾನಕರ್ಮಣಿ = ಶ್ರೀಹರಿಗೆ ಕನ್ಯಾದಾನ ಮಾಡುವ ವಿಷಯದಲ್ಲಿ, ಸಂದೇಹಂ = ಸಂಶಯವನ್ನು, ಮಾಕುರುಷ್ವ = ಮಾಡಬೇಡ. ಮಹೀಪಾಲ = ಆಕಾಶರಾಜ! ತ್ವಂ = ನೀನು, ಧನ್ಯೋಽಸಿ = ಧನ್ಯನಾಗಿದ್ದೀಯೆ, ಕುಲಂ = ನಿಮ್ಮ ವಂಶವು, ಪಾವನತಾಂ ಗತಂ = ಪಾವನವಾಯಿತು ॥ 128 ॥ ಪಿತರಸ್ತು = ನಿಮ್ಮ ಪಿತೃಗಳು, ದಿವಂ ಪ್ರಾಪ್ತಾಃ

= ಸ್ವರ್ಗವನ್ನು ಪಡೆದರು (ಪಾ- ಪಿತರಃ = ಪಿತೃಗಳು, ತ್ರಿದಿವಂ = ಸ್ವರ್ಗಲೋಕವನ್ನು, ಪ್ರಾಪ್ತಾಃ = ಹೊಂದಿದರು) ಅತ್ರ = ಈ ವಿಷಯದಲ್ಲಿ, ವಿಚಾರಣಾ = ಆಲೋಚನೆಯು, ನ ಕಾರ್ಯಾ = ಮಾಡಬೇಕಾಗಿಲ್ಲ. ಭೂಮಿಪ = ಭೂಪತಿಯೇ, ತ್ವಯಾ = ನಿನ್ನಿಂದ, ಪೂರ್ವಜನ್ಮನಿ = ಹಿಂದಿನ ಜನ್ಮದಲ್ಲಿ, ಕಿಂಪುಣ್ಯಂ = ಅದೆಷ್ಟು ಪುಣ್ಯವು, ಚರಿತಂ = ಮಾಡಲ್ಪಟ್ಟಿತು? ॥ 129 ॥ ಸತಾಂ ಗತಿಃ = ಸಜ್ಜನರಿಗೆ ರಕ್ಷಕನಾದ, ಭಗವಾನ್ = ಷಡ್ಗುಣೈಶ್ವರ್ಯಪೂರ್ಣನಾದ, ಅರವಿಂದಾಕ್ಷಃ = ಕಮಲನಯನನಾದ, ಶ್ರೀನಿವಾಸಃ = ಶ್ರೀನಿವಾಸನು, ಜಾಮಾತೃತ್ವಂ = ನಿನ್ನ ಅಳಿಯತನವನ್ನು, ಸಮಾಪನ್ನಃ = ಹೊಂದಿದವನಾದನು! ತಸ್ಮಾತ್ = ಆದಕಾರಣದ ದೆಶೆಯಿಂದ, ತವಾಧಿಕಃ = ನಿನಗಿಂತ ಹೆಚ್ಚಿನ ಪುಣ್ಯವಂತನಾದ ಬೇರೊಬ್ಬನು, ನಾಸ್ತಿ = ಇಲ್ಲವು ॥ 130 ॥

**ವಿಲಂಬೋ ನೈವ ಕರ್ತವ್ಯಃ ಶುಭಂ ಶೀಘ್ರಂ ವಿಧೀಯತಾಮ್ ।**
**ವಯಂ ಧನ್ಯಾಃ ಕೃತಾರ್ಥಸ್ಮ ಸ್ತವ ಸಂಗೇನ ಭೂಮಿಪ ॥ 131 ॥**

**ವಯಂತು ತಪಸಾರಾಧ್ಯ ಕಂದಮೂಲಫಲಾಶನಾಃ ।**
**ಸರ್ವಸಂಗಂ ಪರಿತ್ಯಜ್ಯ ನ ಪಶ್ಯಾಮೋಽತ್ರ ತಂ ವಿಭುಮ್ ॥ 132 ॥**

**ಸಂಗತೇಸ್ತವ ಪಶ್ಯಾಮಃ ಶ್ರೀನಿವಾಸಂ ಶ್ರಿಯಾಯುತಮ್ ।**
**ಸಂಗತಿಸ್ತವ ಭದ್ರಾ ನೋ ಭವೇಜ್ಜನ್ಮನಿಜನ್ಮನಿ ॥ 133 ॥**

**ಏವಂ ತಮುಕ್ತ್ವಾ ರಾಜರ್ಷಿಂ ತೂಷ್ಣೀಮಾಸ ಸ ತಾಪಸಃ ।**
**ಶುಕವಾಕ್ಯಂ ತತಃ ಶ್ರುತ್ವಾ ಸ ರಾಜಾನಂದನಿರ್ಭರಃ ॥ 134 ॥**

**ವೈಯ್ಯಾಸಿಕೇರ್ವಚಶ್ಶ್ರುತ್ವಾ ಪ್ರಶಶಂಸ ಪ್ರಜಾಪತಿಃ★ ।**
**ಮನ್ಯೇ ಕೃತಾರ್ಥಮಾತ್ಮಾನಂ ವ್ಯಾಸಪುತ್ರ ನಮೋಽಸ್ತುತೇ ॥ 135 ॥**

ವಿಲಂಬೋ = ನಿಧಾನವು (ಸಾವಕಾಶವು), ನೈವ ಕರ್ತವ್ಯಃ = ಮಾಡತಕ್ಕದ್ದಲ್ಲ. ಶುಭಂ = ಲಗ್ನದ ಮಂಗಳ ಕಾರ್ಯವು, ಶೀಘ್ರಂ = ತ್ವರೆಯಿಂದ, ವಿಧೀಯತಾಂ = ಮಾಡಲ್ಪಡಲಿ. ಭೂಮಿಪ = ಎಲೈ ಆಕಾಶರಾಜ, ತವ = ನಿನ್ನ, ಸಂಗೇನ = ಸಂಗದಿಂದ (ಸಹವಾಸದಿಂದ), ವಯಂ = ನಾವು, ಧನ್ಯಾಃ = ಧನ್ಯರೂ, ಕೃತಾರ್ಥಾಸ್ಮಃ = ಕೃತಕೃತ್ಯರೂ ಆಗಿದ್ದೇವೆ (ನಮ್ಮ ಮನೋರಥದ್ರುಮವು ಫಲಿಸಿತು) ॥ 131 ॥ ವಯಂತು = ನಾವಾದರೋ, ಕಂದಮೂಲಫಲಾಶನಾಃ = ಗೆಡ್ಡೆ-ಗೆಣಸು-ಹಣ್ಣುಗಳೇ ಆಹಾರವಾಗುಳ್ಳವರು, ಸರ್ವಸಂಗಂ = ಸಕಲ ಐಹಿಕ ಸಂಬಂಧವನ್ನು ಅಂದರೆ ಹೆಂಡಿರು, ಮಕ್ಕಳು ಮುಂತಾದವರ ಸಹವಾಸವನ್ನು, ಪರಿತ್ಯಜ್ಯ = ಬಿಟ್ಟವರಾಗಿ, ತಪಸಾ = ತಪಸ್ಸಿನಿಂದ, ಆರಾಧ್ಯ = ಆರಾಧಿಸಿದರೂ, ಅತ್ರ = ಇಲ್ಲಿ, ತಂ ವಿಭುಂ = ಸರ್ವೋತ್ತಮನಾದ ಪ್ರಭುವನ್ನು, ನ ಪಶ್ಯಾಮಃ = ನೋಡದವರಾಗಿದ್ದೇವೆ ॥ 132 ॥ ತವ = ನಿನ್ನ, ಸಂಗತೇಃ = ಸಹವಾಸದಿಂದ, ಶ್ರಿಯಾ = ಲಕ್ಷ್ಮೀ ದೇವಿಯಿಂದ, (ಪದ್ಮಾವತಿಯಿಂದ), ಯುತಂ = ಸಹಿತನಾದ, ಶ್ರೀನಿವಾಸಂ = ಶ್ರೀನಿವಾಸನನ್ನು, ಪಶ್ಯಾಮಃ = ನೋಡುತ್ತೇವೆ (ನೋಡುವವರಾಗುತ್ತೇವೆ), ನಃ = ನಮಗೆ, ಭದ್ರಾ = ಮಂಗಳಕರವಾದ, ತವ = ನಿನ್ನ, ಸಂಗತಿಃ = ಸಹವಾಸವು, ಜನ್ಮನಿಜನ್ಮನಿ = ಜನ್ಮ ಜನ್ಮಗಳಲ್ಲಿಯೂ, ಭವೇತ್ = ಉಂಟಾಗಲಿ ॥ 133 ॥ ಸತಾಪಸಃ = ಆ ತಪಸ್ವಿಯು, ತಂ ರಾಜರ್ಷಿಂ = ಆ ರಾಜರ್ಷಿಯಾದ ಆಕಾಶರಾಜನನ್ನು ಕುರಿತು, ಏವಮುಕ್ತ್ವಾ

★ ಪಾ :- ವೈವಾಹಿಕವಚಃಶ್ರುತ್ವಾ

= ಹೀಗೆ ಹೇಳಿ, ತೂಷ್ಣೀಮಾಸ = ಮೌನವಹಿಸಿದನು. ತತಃ = ಅನಂತರ, ಸ ರಾಜಾ = ಆ ದೊರೆಯು, ಶುಕವಾಕ್ಯಂ = ಶುಕಮುನಿಯ ನುಡಿಯನ್ನು, ಶ್ರುತ್ವಾ = ಕೇಳಿ, ಆನಂದನಿರ್ಭರಃ (ಅಭೂತ್) = ಸಂತೋಷಭರಿತನಾದನು. ಪ್ರಜಾಪತಿಃ = ಪ್ರಜೆಗಳಿಗೆ ಪ್ರಭುವಾದ ಆಕಾಶರಾಜನು, ವೈಯಾಸಿಕೇರ್ವಚಃ = ವೇದವ್ಯಾಸದೇವರ ಮಕ್ಕಳಾದ ಶುಕಮುನಿಯ ಮಾತನ್ನು, (ಪಾ- ವೈವಾಹಿಕವಚಃ = ಪದ್ಮಾವತಿಯನ್ನು ಶ್ರೀನಿವಾಸನಿಗೆ ಕೊಟ್ಟು ಮದುವೆಮಾಡು - ಎಂಬ ಮಾತನ್ನು), ಶ್ರುತ್ವಾ = ಕೇಳಿ, ಆತ್ಮಾನಂ = ತನ್ನನ್ನು, ಕೃತಾರ್ಥಂ = ಕೃತಕೃತ್ಯನನ್ನಾಗಿ, ಮೇನೇ = ತಿಳಿದನು. ಅನಂತರ, ವ್ಯಾಸಪುತ್ರ! = ಎಲೈ ವೇದವ್ಯಾಸಕುಮಾರನಾದ ಶುಕಮುನಿಯೇ! ತೇ = ನಿನಗೆ, ನಮೋಽಸ್ತು = ನಮಸ್ಕಾರವಿರಲಿ, (ಇತಿ = ಹೀಗೆಂದು), ಪ್ರಶಶಂಸ = ಶುಕಮುನಿಗಳನ್ನು ಪ್ರಶಂಸಿಸಿದನು ॥ 134-135 ॥

**ಗ್ರಹಾಣಾಂ ಚ ಗತಿಸ್ತಾತ ತಯೋರ್ಯೋಗೋ ವಿಚಿಂತ್ಯತಾಮ್ ।**
**ರುಕ್ಷಯೋಗಂ ಗೋತ್ರಯೋಗಂ ಪಶ್ಯ ವಿಪ್ರ ಬಲಾಬಲಮ್ ॥ 136 ॥**

**ಇತಿರಾಜ್ಞೋ ವಚ ಶ್ರುತ್ವಾ ಸುರಾಚಾರ್ಯಸ್ಸಸಂಭ್ರಮಮ್ ।**
**ಛಾಯಾಶಾಸ್ತ್ರವಿಧಾನಜ್ಞೋ ಬಕುಲಾಂ ವಾಕ್ಯಮಬ್ರವೀತ್ ॥ 137 ॥**

*ಬೃಹಸ್ಪತಿರುವಾಚ-*

**ಗೋತ್ರಂ ಶ್ರೀ ವೇಂಕಟೇಶಸ್ಯ ತನ್ಮಮಾಚಕ್ಷ್ವ ಭಾಮಿನಿ ।**
**ನಕ್ಷತ್ರಂ ಚ ವರಾರೋಹೆ! ಕಥ್ಯತಾಮಿತಿ ಚಾಬ್ರವೀತ್ ॥**
**ಸಾ ತಸ್ಯ ವಚನಂ ಶ್ರುತ್ವಾ ಕಿಂಚಿತ್ಕೋಪಾನ್ವಿತಾಬ್ರವೀತ್ ॥ 138 ॥**

*ಬಕುಲೋವಾಚ-*

**ಬ್ರಾಹ್ಮಣಾಸ್ಸತ್ಯಸಂಪನ್ನಾಃ ಕಲೌ ಮಿಥ್ಯಾಪ್ರವಾದಿನಃ ।**
**ಜಾನಂತೋಽಪಿ ಮಹಾರಾಜ! ನ ವದಂತಿ ಹಿತಾಹಿತಮ್ ॥ 139 ॥**

*ಶ್ರೀ ಶುಕ ಉವಾಚ -*

**ಅವಿಶ್ವಾಸಶ್ಚ ವಿಪ್ರೇಷು ಕ್ಷತ್ರಿಯಾಣಾಂ ವರಾನನೆ! ।**
**ಧರ್ಮೋಽಪ್ಯಧರ್ಮತಾಮೇತಿ ಹ್ಯಧರ್ಮೋ ಧರ್ಮತಾಂಗತಃ + ॥ 140 ॥**

ತಾತಃ = ಪಿತೃಸಮಾನನಾದ ಬೃಹಸ್ಪತಿಯೇ, ತಯೋಃ = ಶ್ರೀನಿವಾಸ ಪದ್ಮಾವತಿಯರ, ಯೋಗಃ = ಕೂಟವು, ಗ್ರಹಾಣಾಂಚ = ಗ್ರಹಗಳ, ಗತಿಃ = ಸ್ಥಿತಿಯು, ವಿಚಿಂತ್ಯತಾಂ = ವಿವೇಚಿಸಲ್ಪಡಲಿ. ವಿಪ್ರ = ಭೂಸುರನೇ! ರುಕ್ಷಯೋಗಂ = ನಕ್ಷತ್ರಯೋಗವು, ಗೋತ್ರಯೋಗಂ = ಋಷಿಗಳ ಗೋತ್ರದ ಕೂಡುವಿಕೆಯು, ಬಲಾಬಲಂ = ಪರಸ್ಪರ ಜಾತಕದ ಬಲಾಬಲಗಳು - ಇವುಗಳನ್ನು, ಪಶ್ಯ = ನೋಡುವವನಾಗು ॥ 136 ॥ ಇತಿ = ಈ ರೀತಿಯಾದ, ರಾಜ್ಞಃ = ರಾಜನ, ವಚಃ = ಮಾತನ್ನು, ಶ್ರುತ್ವಾ = ಕೇಳಿ, ಛಾಯಾಶಾಸ್ತ್ರ ವಿಧಾನಜ್ಞಃ = ಜ್ಯೋತಿಷಶಾಸ್ತ್ರದವಿಧಿವಿಧಾನಗಳನ್ನು ಬಲ್ಲವನಾದ, ಸುರಾಚಾರ್ಯಃ = ದೇವತೆಗಳಿಗೆ ಉಪದೇಶಕನಾದ ಬೃಹಸ್ಪತಿಯು, ಸಸಂಭ್ರಮಂ = ಸಂಭ್ರಮಯುಕ್ತನಾಗಿ, ಬಕುಲಾಂ

+ ಪಾ :- ವ್ರಜೇತ್

= ಬಕುಳಾದೇವಿಯನ್ನು ಕುರಿತು, ॥ 137 ॥ ವಾಕ್ಯಮಬ್ರವೀತ್ = ಮಾತು ಹೇಳಿದನು. ವರಾರೋಹೇ = ಉತ್ತಮ ಆರೋಹಪ್ರದೇಶ ಶೋಭಿತಳಾದ, ಭಾಮಿನಿ = ಬಕುಳೆಯೇ, ಶ್ರೀವೇಂಕಟೇಶಸ್ಯ = ಕಾಂತಿ ಸಂಪದ್ಭರಿತನಾದ, ವೇಂಕಟಾಚಲಕ್ಕೆ ಪ್ರಭುವಾದ ಶ್ರೀನಿವಾಸನ, ತತ್ ಗೋತ್ರಂ = ಆ ಗೋತ್ರವನ್ನು, ಮಮ = ನನಗೆ, ಆಚಕ್ಷ್ವ = ಹೇಳು, ನಕ್ಷತ್ರಂ ಚ = ಅವನ ನಕ್ಷತ್ರವನ್ನೂ ಸಹ, ಕಥ್ಯತಾಂ = ಹೇಳಲ್ಪಡಲಿ, ಇತಿ ಚ = ಹೀಗೆಂದೂ, ಅಬ್ರವೀತ್ = ಹೇಳಿದನು. ಸಾ = ಬಕುಳಮಾಲಿಕೆಯು, ತಸ್ಯ = ಬೃಹಸ್ಪತಿಯ, ವಚನಂ = ಮಾತನ್ನು, ಶ್ರುತ್ವಾ = ಕೇಳಿ, ಕಿಂಚಿತ್ = ಸ್ವಲ್ಪ, ಕೋಪಾನ್ವಿತಾ = ಕೋಪಯುಕ್ತಳಾಗಿ, ಅಬ್ರವೀತ್ = ನುಡಿದಳು ॥ 138 ॥ ಬಕುಲೋವಾಚ = ಬಕುಳೆಯು ಹೀಗೆ ಹೇಳಿದಳು, ಬ್ರಾಹ್ಮಣಾಃ = ಬ್ರಾಹ್ಮಣರು, ಸತ್ಯಸಂಪನ್ನಾಃ = ಸತ್ಯವನ್ನೇ ನುಡಿದು, ಸತ್ಯಮಾರ್ಗದಲ್ಲಿಯೇ ನಡೆಯುವವರು. ಆದರೆ, ಕಲೌ = ಕಲಿಯುಗದಲ್ಲಿ, ಮಿಥ್ಯಾ ಪ್ರವಾದಿನಃ = ಸುಳ್ಳು ಹೇಳುವವರಾಗಿದ್ದಾರೆ. ಜಾನಂತೋಽಪಿ = ಎಲ್ಲ ವಿಚಾರವರಿತಿದ್ದರೂ (ಪಾ - ಜ್ಞಾನವಂತೋಽಪಿ = ಎಲ್ಲದರ ಜ್ಞಾನವಿದ್ದವರಾದರೂ), ಹಿತಾಹಿತಂ = ಯಾವುದು ಹಿತಕರ, ಯಾವುದು ಹಿತಕರವಲ್ಲ - ಎಂಬುದನ್ನು, ನ ವದಂತಿ = ಹೇಳುವುದಿಲ್ಲ ॥ 139 ॥ ಶುಕ ಉವಾಚ = ಶುಕಮುನಿಯು ಹೇಳಿದನು. ವರಾನನೇ! = ಸುಂದರಮುಖವುಳ್ಳವಳೇ, ಕ್ಷತ್ರಿಯಾಣಾಂ = ಕ್ಷತ್ರಿಯರಿಗೆ, (ಸ್ವತಃ ಬ್ರಾಹ್ಮಣರು ಯೋಗ್ಯವಾದುದನ್ನು ಹೇಳಿದರೆ, ಅಥವಾ ಶ್ರೀನಿವಾಸನ ಬಗೆಗೆ ತಾವಾಗಿ ಹೇಳಿದರೆ) ವಿಪ್ರೇಷು = ಬ್ರಾಹ್ಮಣರಲ್ಲಿ, ಅವಿಶ್ವಾಸಃ = ವಿಶ್ವಾಸವಿಲ್ಲ, ಚ = ಮತ್ತು, ಧರ್ಮೋಽಪಿ = ಧರ್ಮವೂ ಕೂಡ, ಅಧರ್ಮತಾಮೇತಿ = ಅಧರ್ಮವಾಗುವುದು, ಅಧರ್ಮಃ = ಅಧರ್ಮವು (ಧರ್ಮವಲ್ಲದುದು) ಧರ್ಮತಾಂ = ಧರ್ಮವೇ, ಗತಃ = ಆಗುವುದು (ಪಾ-ವ್ರಜೇತ್ = ಆಗುವುದು) ॥ 140 ॥

**ತಸ್ಮಾತ್ತ್ವಯಾ ಮಹಾಭಾಗೇ! ಕಥನೀಯಂ ಹಿತಾಹಿತಮ್ ।**

*ಬಕುಲೋವಾಚ-*

**ನಕ್ಷತ್ರಂ ಶ್ರವಣಂ ತಸ್ಯ ಗೋತ್ರಂ ವಾಸಿಷ್ಠ ಸಂಜ್ಞಕಮ್ ॥ 141 ॥**

**ಊಚುಃ ಪುರಾತನಾ ಮತ್ಸ್ಯ ಕೂರ್ಮ ಕೃಷ್ಣಾದಿರೂಪಿಣಃ ।**

*ರಾಜೋವಾಚ-*

**ಗೋತ್ರಮತ್ರೇರ್ಮಹಾಭಾಗ! ನಕ್ಷತ್ರಂ ಮೃಗಶೀರ್ಷಕಮ್ ॥ 142 ॥**

**ಸೀತಾ ಸತ್ಯಾದಿ ರೂಪಾಯಾಃ ಪದ್ಮಾವತ್ಯಾ ವಿದುರ್ಬುಧಾಃ**
**ಉಭಯೋರ್ವಚನಂ ಶ್ರುತ್ವಾ ಗುರುರ್ಯೋಗಂ ವಿಚಿಂತ್ಯ ಸಃ ॥**
**ಹರ್ಷೋದ್ರಿಕ್ತಮನಾ ಭೂತ್ವಾ ಸತ್ಯಮಾಹ ಮಹಾಮತಿಃ ॥ 143 ॥**

*ಗುರುವಾಚ-*

**ನಾಡೀಕೂಟಂ ವಿಶೇಷೇಣ ಸೂತ್ರಕೂಟಂ ವಿಶೇಷತಃ ।**
**ಯೋನಿಕೂಟಂ ಚಾನುಕೂಲಂ ಗ್ರಹಾಶ್ಚ ಶುಭದರ್ಶನಾಃ ॥ 144 ॥**

**ಸರ್ವಂ ವಿಚಾರ್ಯ ಭೂಪಾಲ! ಸ್ವಾರ್ಯಭಾವಂ ಸಮಾಶ್ರಿತಃ ।**
**ಸಂಮಂತ್ರ್ಯ ಬಂಧುಮಿತ್ರಾದ್ಯೈಃ ಕನ್ಯಾದಾನಂ ಕುರು ಪ್ರಭೋ ॥ 145 ॥**

ಮಹಾಭಾಗೇ = ಮಹನೀಯಳಾದ ಬಕುಳೆ! ತಸ್ಮಾತ್ = ಆದ್ದರಿಂದ, ತ್ವಯಾ = ನಿನ್ನಿಂದ, ಹಿತಾಹಿತಂ = ಹಿತ-ಅಹಿತಗಳು, ಕಥನೀಯಂ = ಹೇಳಲ್ಪಡಬೇಕು. ಬಕುಲೋವಾಚ = ಬಕುಳೆಯು ನುಡಿದಳು. ಪುರಾತನಾಃ = ಪ್ರಾಚೀನರು, ಮತ್ಸ್ಯಕೂರ್ಮಕೃಷ್ಣಾದಿ ರೂಪಿಣಃ = ಮತ್ಸ್ಯ, ಕೂರ್ಮ, ಕೃಷ್ಣ ಮೊದಲಾದ ಅವತಾರವುಳ್ಳ (ರೂಪವುಳ್ಳ), ತಸ್ಯ = ಶ್ರೀನಿವಾಸನ, ನಕ್ಷತ್ರಂ = ಹುಟ್ಟಿದ ನಕ್ಷತ್ರವು, ಶ್ರವಣಂ = ಶ್ರವಣ ನಕ್ಷತ್ರವೆಂದೂ, ಗೋತ್ರಂ = ಅವನ ಗೋತ್ರವು, ವಾಸಿಷ್ಠ ಸಂಜ್ಞಿಕಂ = ವಸಿಷ್ಠಋಷಿಗೋತ್ರವೆಂದೂ ॥ 141 ॥ (ವಿದುಃ = ತಿಳಿಯುವರು) ; ರಾಜೋವಾಚ = ಆಕಾಶರಾಜನು ಹೇಳಿದನು - ಮಹಾಭಾಗ = ಮಹನೀಯನಾದ ಬೃಹಸ್ಪತಿಯೇ, ಸೀತಾಸತ್ಯಾದಿರೂಪಾಯಾಃ = ಜಾನಕೀ - ಸತ್ಯಾಭಾಮಾ ಮುಂತಾದ ರೂಪವುಳ್ಳ, ಪದ್ಮಾವತ್ಯಾಃ = ಪದ್ಮಾವತಿಯ, ಗೋತ್ರಂ = ಗೋತ್ರವು, ಅತ್ರೇಃ = ಅತ್ರಿಮಹರ್ಷಿಯದು, ನಕ್ಷತ್ರಂ = ನಕ್ಷತ್ರವು, ಮೃಗಶೀರ್ಷಕಂ = ಮೃಗಶಿರಾನಕ್ಷತ್ರವು (ಇತಿ = ಹೀಗೆ) ॥ 142 ॥ ಬುಧಾಃ = ಪಂಡಿತರು (ಜ್ಞಾನಿಗಳು), ವಿದುಃ = ತಿಳಿಯುವರು, ಮಹಾಮತಿಃ = ಅತಿಶಯ ಬುದ್ಧಿಶಾಲಿಯಾದ ಬೃಹಸ್ಪತಿಯು, ಉಭಯೋಃ = ಬಕುಳೆಯ - ಆಕಾಶರಾಜರ, ವಚನಂ = ಮಾತನ್ನು, ಶ್ರುತ್ವಾ = ಕೇಳಿ, ಯೋಗಂ = ವಧೂವರರ ಯೋಗಾದಿಗಳನ್ನು ವಿಚಿಂತ್ಯ = ಪರಿಶೀಲಿಸಿ, ಹರ್ಷೋದ್ರಿಕ್ತಮನಾಃ ಭೂತ್ವಾ = ಆನಂದದಿಂದ ತುಂಬಿ ಬಂದ ಮನಸ್ಸುಳ್ಳವನಾಗಿ, ಸತ್ಯಂ = ಸತ್ಯವಿಚಾರವನ್ನು, ಆಹ = ಹೇಳಿದನು ॥ 143 ॥ ಗುರುರುವಾಚ = ದೇವಗುರುವು ಹೇಳಿದನು, ವಿಶೇಷೇಣ = ವಿಶೇಷವಾಗಿ, ನಾಡಿಕೂಟಂ = ವಧೂವರರ ನಾಡಿಕೂಟವು, ಸೂತ್ರಕೂಟಂ = ಮಾಂಗಲ್ಯಕೂಟವು, ಚ = ಮತ್ತು, ಯೋನಿಕೂಟಂ = ಯೋನಿಕೂಟವೂ, ನಾನು ಪರಿಶೀಲಿಸಿ ನೋಡಿದ್ದರಲ್ಲಿ ವಿಶೇಷತಃ = ಹೆಚ್ಚಾಗಿ, ಅನುಕೂಲಂ = ಅನುಕೂಲವಾಗಿವೆ. ಗ್ರಹಾಶ್ಚ = ಎಲ್ಲಾ ಗ್ರಹಗಳೂ, ಶುಭದರ್ಶಕಾಃ = ಮಂಗಳ ದೃಷ್ಟಿ ಬೀರುತ್ತಿದೆ (ಉಳ್ಳದ್ದಾಗಿವೆ) ॥ 144 ॥ ಭೂಪಾಲ = ಮಹಾರಾಜನೇ! ಸರ್ವಂ ವಿಚಾರ್ಯ = ಇವೆಲ್ಲವನ್ನೂ ವಿವೇಚಿಸಿ, ಸ್ವಾರ್ಯಭಾವಂ = ಗುರುಹಿರಿಯರು ಬಾಂಧವರಲ್ಲಿ ಪೂಜ್ಯಭಾವವನ್ನು, ಸಮಾಶ್ರಿತಃ = ಆಶ್ರಯಿಸಿದವನಾಗಿ, ಪ್ರಭೋ = ಎಲೈ ಸ್ವಾಮಿ! ಬಂಧುಮಿತ್ರಾದ್ಯೈಃ = ಬಾಂಧವರು - ಸ್ನೇಹಿತರುಗಳೊಡನೆ, ಸಂಮಂತ್ರ್ಯ = ವಿಚಾರವಿನಿಮಯ ಮಾಡಿಕೊಂಡು, ಕನ್ಯಾದಾನಂ = ಪದ್ಮಾವತಿಯ ವಿವಾಹವನ್ನು, ಕುರು = ಮಾಡು ॥ 145 ॥

**ಏವಂ ಗುರುರ್ವಚಃ ಶ್ರುತ್ವಾ ವಿಚಾರ್ಯಾರ್ಥೇಷು ವಿಚಕ್ಷಣಃ ।**
**ಭಕ್ತ್ಯಾ ಪರಮಯಾ ರಾಜಾ ಸ್ವಾರ್ಯಭಾವಂ ಸಮಾಶ್ರಿತಃ ॥ 146 ॥**

**ಜ್ಞಾತಿ ಬಾಂಧವ ಸಂಬಂಧಿ ಸುಹೃನ್ಮಿತ್ರ ಜನೈರ್ಯುತಃ ।**
**ಮಂತ್ರಂ ಚಕಾರ ರಾಜೇಂದ್ರಃ ಕನ್ಯಾದಾನನಿಮಿತ್ತಕಮ್ ॥ 147 ॥**

**ತೇ ಸರ್ವೇ ಬಂಧುವರ್ಗಾಶ್ಚ ರಾಜಾನಂ ಪ್ರತ್ಯಪೂಜಯನ್ ।**
**ಸಭಾಂ ಚಕಾರಯಾಮಾಸ ರತ್ನಸಿಂಹಾಸನೇ ಸ್ಥಿತಃ ॥ 148 ॥**

**ವಾಚಯಿತ್ವಾಥ ಪುಣ್ಯಾಹಂ ಕನ್ಯಾನಿಶ್ಚಯಕಾರಣಾತ್ ।**
**ಭುಜಮುದ್ಧೃತ್ಯ ರಾಜೇಂದ್ರಃ ಸಭಾಮಧ್ಯೇ ವಚೋಽಬ್ರವೀತ್ ॥ 149 ॥**

ರಾಜೋವಾಚ-

**ಪದ್ಮಾವತೀಂ ಪ್ರದಾಸ್ಯಾಮಿ ಶ್ರೀನಿವಾಸಾಯ ಶಾರ್ಙ್ಗಿಣೇ ।**
**ಯೂಯಂ ಬಂಧುಗಣಾಶ್ಚಾತ್ರ ದಯಾಂ ಕುರುತ ಮಾಂ ಪ್ರತಿ ॥ 150 ॥**

ಏವಂ = ಈ ರೀತಿಯಾಗಿ, ಗುರೋರ್ವಚಃ = ಬೃಹಸ್ಪತ್ಯಾಚಾರ್ಯನ ಮಾತನ್ನು, ಶ್ರುತ್ವಾ = ಆಲಿಸಿ, ಆಶು = ಶೀಘ್ರವಾಗಿ, ವಿಚಕ್ಷಣಃ = ಯುಕ್ತಾಯುಕ್ತವಿಚಾರದಲ್ಲಿ ನಿಪುಣನಾದ, ರಾಜಾ = ಆಕಾಶರಾಜನು, ಪರಮಯಾಭಕ್ತ್ಯಾ = ಪರಮಭಕ್ತಿಯಿಂದ, ಸ್ವಾರ್ಯಭಾವಂ = ತನಗೆ ಹಿರಿಯರಾದ ಕುಲವೃದ್ಧರು, ಬಾಂಧವರಲ್ಲಿ ಪೂಜ್ಯಭಾವವನ್ನು, ಸಮಾಶ್ರಿತಃ = ಆಶ್ರಯಿಸಿದವನಾಗಿ (ಹೊಂದಿದವನಾಗಿ) ।। 146 ।। ಜ್ಞಾತಿಬಾಂಧವಸಂಬಂಧಿಸುಹೃನ್ಮಿತ್ರಜನ್ಯೈಃ = ಜ್ಞಾತಿ = ವಂಶೀಕರು, ಬಾಂಧವ = ಬಂಧುಗಳು, ಸಂಬಂಧಿ = ಬಾಂಧವರ ಸಂಬಂಧಿಕರು, ಸುಹೃತ್ = ಹಿತೈಷಿಗಳು, ಮಿತ್ರ = ಸ್ನೇಹಿತರು, ಜನ್ಯೈಃ = ಇನ್ನಿತರಪೌರಜಾನಪದರಾದ ಜನರಿಂದ, ಜನ್ಯೈಃ = ಸ್ನೇಹಿತರೊಡನೆ, ಯುತಃ = ಕೂಡಿದವನಾಗಿ (ಕಲೆತು), ರಾಜೇಂದ್ರಃ = ಆಕಾಶರಾಜನು, ಕನ್ಯಾದಾನ ನಿಮಿತ್ತಕಂ = ಕನ್ಯಾದಾನಮಾಡುವ ನಿಮಿತ್ತ ವಿಚಾರವಾಗಿ, ಮಂತ್ರಂ ಚಕಾರ = ಚೆನ್ನಾಗಿ ವಿಚಾರವಿನಿಮಯ ಮಾಡಿದನು ।। 147 ।। ತೇ = ಆ, ಸರ್ವೇ = ಸಕಲರಾದ, ಬಂಧುವರ್ಗಾಶ್ಚ = ಬಂಧುವರ್ಗದವರೂ, ರಾಜಾನಂ = ಆಕಾಶರಾಜನನ್ನು, ಪ್ರತ್ಯಪೂಜಯನ್ = (ತಮ್ಮೊಡನೆ ವಿಚಾರಮಾಡಿದ್ದಕ್ಕಾಗಿ) ತಾವೂ ಅವನನ್ನು ಗೌರವಿಸಿದರು. ಆ ತರುವಾಯ ಆಕಾಶರಾಜನು, ಸಭಾಂ = ಸಭೆಯನ್ನು, ಚಕಾರಯಾಮಾಸ = ಸೇರಿದನು. ಮತ್ತು, ರತ್ನಸಿಂಹಾಸನೇಸ್ಥಿತಃ = ರತ್ನಮಯಸಿಂಹಾಸನದಲ್ಲಿ ಕುಳಿತು ।। 148 ।। ರಾಜೇಂದ್ರಃ = ಆಕಾಶರಾಜನು, ಕನ್ಯಾನಿಶ್ಚಯ ಕಾರಣಾತ್ = ಪದ್ಮಾವತಿಯ ವಿವಾಹ ನಿಶ್ಚಯ ನಿಮಿತ್ತವಾಗಿ, ಪುಣ್ಯಾಹಂ = ಪುಣ್ಯಾಹವನ್ನು, ವಾಚಯಿತ್ವಾ = ಮಂತ್ರಪಠಣಪೂರ್ವಕವಾಗಿ ಮಾಡಿಸಿದವನಾಗಿ, ಸಭಾಮಧ್ಯೇ = ರಾಜಸಭೆಯ ಮಧ್ಯದಲ್ಲಿ, ಭುಜಮುದ್ಧೃತ್ಯ = ಬಲತೋಳನ್ನು ಮೇಲೆತ್ತಿ, ವಚೋಽಬ್ರವೀತ್ = ಮಾತನಾಡಹತ್ತಿದನು ।। 149 ।। ರಾಜೋವಾಚ = ಆಕಾಶರಾಜನು ಹೇಳಿದನು - ಶ್ರೀನಿವಾಸಾಯ = ಶ್ರೀರಮಾದೇವಿಗೆ ಆವಾಸಭೂತನಾದ, ಶಾರ್ಙ್ಗಿಣೇ = ಶ್ರೀಹರಿಗೆ, ಪದ್ಮಾವತೀಂ = ಪದ್ಮಾವತಿಯನ್ನು, ಪ್ರದಾಸ್ಯಾಮಿ = ಮದುವೆಮಾಡಿಕೊಡುತ್ತೇನೆ. ಅತ್ರ = ಈ ವಿಷಯದಲ್ಲಿ, ಬಂಧುಗಣಾಃ = ಬಂಧುಗಳ ಗುಂಪಿನವರಾದ, ಯೂಯಂ = ನೀವುಗಳು, ಮಾಂಪ್ರತಿ = ನನ್ನಲ್ಲಿ (ನನ್ನನ್ನು ಕುರಿತು), ದಯಾಂ ಕುರುತ = ದಯೆ ಮಾಡಿರಿ. ಇತ್ಥಂ = ಹೀಗೆ, ವೇಂಕಟೇಶಿತುಃ = ಶ್ರೀನಿವಾಸನಿಗೆ, ಕನ್ಯಾರ್ಥೇ = ಕನ್ಯಾದಾನ ಮಾಡುವ ವಿಷಯವಾಗಿ, ಪ್ರತಿಜ್ಞಾಂ = ಪ್ರತಿಜ್ಞೆಯನ್ನು, ಅಕರೋತ್ = ಮಾಡಿದನು ।। 150 ।।

**ಪ್ರತಿಜ್ಞಾಮಕರೋದಿತ್ಥಂ ಕನ್ಯಾರ್ಥೇ ವೇಂಕಟೇಶಿತುಃ ।**
**ಸ ಚೋವಾಚ ಮಹಾರಾಜಾ ಗುರುಂ ಗುರುಜನಪ್ರಿಯಃ ।। 151 ।।**

**ಕಿಂಕಾರ್ಯಂ ವದ ವಿಪ್ರೇಂದ್ರ! ಸಂಕಲ್ಪಾನಂತರಂ ಮಯಾ ।**
**ರಾಜಾನಮಬ್ರವೀದ್ರಾಜನ್! ಅಂಗಿರಾ ದೇವತಾಗುರುಃ ।। 152 ।।**

ಬೃಹಸ್ಪತಿರುವಾಚ-

**ವಿಲಿಖ್ಯ ಪತ್ರಿಕಾಂ ರಾಜನ್! ಶ್ರೀನಿವಾಸಾಯ ವಿಷ್ಣವೇ ।**
**ವಿಪ್ರಂ ಪ್ರೇಷಯ ರಾಜೇಂದ್ರ! ತಸ್ಯಾಗಮನಕಾರಣಾತ್ ।। 153 ।।**

**ಸ್ವಗುರೋರ್ವಾಕ್ಯಮಾಕರ್ಣ್ಯ ರಾಜಾ ಗುರುಮಭಾಷತ ।**

ರಾಜೋವಾಚ-

**ಕಿಂ ಲೇಖ್ಯಂ ಪ್ರಾಕೃತೈರ್ವಿದ್ವನ್! ಅಪ್ರಾಕೃತ ಶರೀರಿಣಃ ।।**
**ತಥಾಪಿ ಲೇಖನೀಯಂ ಯತ್ತದ್ಬ್ರೂಹಿ ಗುರುಸತ್ತಮ ।। 154 ।।**

**ಆಕಾಶರಾಜ ವಚನಂ ಶ್ರುತ್ವಾ ಗೀಷ್ಪತಿರಾದರಾತ್ ।**
**ಲೇಖ್ಯಾಂಶಂ ಬೋಧಯಾಮಾಸ ರಾಜ್ಞಸ್ತಸ್ಯ ಮಹಾತ್ಮನಃ ॥ 155 ॥**

ಗುರುಜನಪ್ರಿಯಃ = ಹಿರಿಯರಲ್ಲಿ ಪ್ರೀತಿಯುಳ್ಳ, ಸಃ ರಾಜಾ = ಆ ಆಕಾಶರಾಜನು, ಗುರುಂ = ದೇವಗುರುವನ್ನು ಕುರಿತು, ಉವಾಚ = ಹೇಳಿದನು ॥ 151 ॥ ವಿಪ್ರೇಂದ್ರ = ಬ್ರಾಹ್ಮಣೋತ್ತಮನಾದ ಬೃಹಸ್ಪತಿಯೇ, ಸಂಕಲ್ಪಾನಂತರಂ = ಕನ್ಯಾದಾನ ಸಂಕಲ್ಪಮಾಡಿದ ಮೇಲೆ, ಮಯಾ = ನನ್ನಿಂದ, ಕಿಂಕಾರ್ಯಂ = ಏನು ಮಾಡಬೇಕು? ವದ = ಹೇಳು. ರಾಜನ್ = ಎಲೈ ಜನಕರಾಯ! ದೇವತಾಗುರುಃ = ದೇವತೆಗಳಿಗೆ ಗುರುವಾದ, ಅಂಗಿರಾಃ = ಅಂಗೀರಸಕುಮಾರನಾದ ಬೃಹಸ್ಪತಿಯು, ರಾಜಾನಮಬ್ರವೀತ್ = ರಾಜನನ್ನು ಕುರಿತು ಹೇಳಿದನು ॥ 152 ॥ ಬೃಹಸ್ಪತಿರುವಾಚ = ಬೃಹಸ್ಪತ್ಯಾಚಾರ್ಯನು ಇಂತೆಂದನು - ರಾಜನ್ = ಆಕಾಶರಾಜ! ಶ್ರೀನಿವಾಸಾಯ = ಲಕ್ಷ್ಮೀದೇವಿಗೆ ಆಶ್ರಯನಾದ, ವಿಷ್ಣವೇ = ಶ್ರೀಹರಿಗೆ, ಪತ್ರಿಕಾಂ = ಲಗ್ನಪತ್ರಿಕೆಯನ್ನು, ವಿಲಿಖ್ಯ = ಬರೆದು, ರಾಜೇಂದ್ರ = ಎಲೈ ರಾಜೋತ್ತಮನೇ, ವಿಪ್ರಂ = (ಲಗ್ನಪತ್ರಿಕೆಯೊಡನೆ) ಬ್ರಾಹ್ಮಣನನ್ನು, ಪ್ರೇಷಯ = ಕಳುಹಿಸು ॥ 153 ॥ ರಾಜಾ = ಆಕಾಶರಾಜನು, ಸ್ವಗುರೋಃ = ಗುರುವಾದ ಬೃಹಸ್ಪತ್ಯಾಚಾರ್ಯರ, ವಾಕ್ಯಮಾಕರ್ಣ್ಯ = ಮಾತನ್ನು ಕೇಳಿ, ಗುರುಮಭಾಷತ = ಬೃಹಸ್ಪತಿಯನ್ನು ಕುರಿತು ಹೇಳಿದನು. ರಾಜೋವಾಚ = ರಾಜನಿಂತೆಂದನು - ವಿದ್ವನ್ = ಎಲೈ ವಿದ್ವಾಂಸನೇ, ಅಪ್ರಾಕೃತಶರೀರಿಣಃ = ಪ್ರಕೃತಿ ಸಂಬಂಧವಿಲ್ಲದ ಶರೀರವುಳ್ಳ (ಮಾನವರಂತೆ ಹೇಯವಾದ ಪ್ರಾಕೃತಶರೀರವಿಲ್ಲದಿರುವ) ಶ್ರೀನಿವಾಸನಿಗೆ, ಪ್ರಾಕೃತೈಃ = ಪ್ರಾಕೃತ ಶರೀರಿಗಳಾದ ನಮ್ಮಿಂದ, ಲೇಖ್ಯಂ ಕಿಂ = ಬರೆಯುವುದೇನಿದೆ? ಗುರುಸತ್ತಮ = ಗುರುವರ್ಯ! ತಥಾಪಿ = ಆದರೂ, ಯಲ್ಲೇಖನೀಯಂ = ಏನು ಬರೆಯಬೇಕೋ, ತತ್ = ಅದನ್ನು, ಬ್ರೂಹಿ = ಹೇಳು ॥ 154 ॥ ಗೀಷ್ಪತಿ = ಬೃಹಸ್ಪತಿಯು, ಆಕಾಶರಾಜವಚನಂ = ಆಕಾಶರಾಜನ ಮಾತನ್ನು, ಶ್ರುತ್ವಾ = ಕೇಳಿ, ಮಹಾತ್ಮನಃ = ಮಹನೀಯನಾದ, ತಸ್ಯ ರಾಜ್ಞಃ = ಆ ಭೂಪತಿಗೆ, ಆದರಾತ್ = ವಿಶ್ವಾಸದಿಂದ, ಲೇಖ್ಯಾಂಶಂ = ಲಗ್ನಪತ್ರಿಕೆಯಲ್ಲಿ ಬರೆಯಬೇಕಾದ ವಿಷಯವನ್ನು, ಬೋಧಯಾಮಾಸ = ತಿಳಿಸಿ ಹೇಳಿದನು ॥ 155 ॥

**ಗುರೂಪದಿಷ್ಟಮಾರ್ಗೇಣ ವಿಲಿಲೇಖ ಸ ಪತ್ರಿಕಾಮ್ ।**
**ಅಪ್ರಾಕೃತಾಯ ನಿತ್ಯಾಯ ಸಚ್ಚಿದಾನಂದಮೂರ್ತಯೇ ॥ 156 ॥**

**ಸ್ವತಂತ್ರಾಯಾಽದ್ವಿತಾಯಾಯಾನಂತ ರೂಪಾಯ ಶಾರ್ಙ್ಗಿಣೇ ।**
**ಭಕ್ತಪ್ರಿಯಾಯ ಭಕ್ತೈಕವೇದ್ಯೋಪಾದೇಯ ರೂಪಿಣೇ ॥ 157 ॥**

**ದೇವಾದಿದೇವ ಪೂಜ್ಯಾಯ ಬ್ರಹ್ಮಪೂಜ್ಯಾಯ ವಿಷ್ಣವೇ ।**
**ಶ್ರೀನಿವಾಸಾಯ ಕೃಷ್ಣಾಯ ವೇಂಕಟಾಚಲವಾಸಿನೇ ॥ 158 ॥**

**ಸಾಂಗೈಸ್ಸರ್ವೈಶ್ಚ ವೇದಾದ್ಯೈರಾಗಮೈಸ್ಸಪುರಾಣಕೈಃ ।**
**ಆವೇದಿತಾನಂತಗುಣಕರ್ಮಣೇ ಶ್ರೀಧರಾಯ ತೇ ॥ 159 ॥**

**ಆಶೀರ್ವಾದಂ ಕರಿಷ್ಯಾಮಿ ಬಂಧುತ್ವಾತ್ತೇ ಸುರೋತ್ತಮ ।**
**ತ್ವತ್ಪಾದಪದ್ಮ ಸಂವೀಕ್ಷಾಕಾಮ ಆಕಾಶನಾಮಕಃ ॥ 160 ॥**

**ತ್ವದಾಶ್ರಯಂ ಸಮಾಕಾಂಕ್ಷನ್ ಲೇಖಯಾಮ್ಯದ್ಯ ಮಾಧವ ।**
**ಸ್ತ್ರೀಪುತ್ರಭ್ರಾತೃಭಿಸ್ಸಾಕಂ ಸರ್ವೇ ಕುಶಲಿನೋ ವಯಮ್ ॥ 161 ॥**

ಸಃ = ರಾಜನು, ಗುರೂಪದಿಷ್ಟಮಾರ್ಗೇಣ = ಬೃಹಸ್ಪತಿಯುಪದೇಶಿಸಿದ ಕ್ರಮದಲ್ಲಿ, ಪತ್ರಿಕಾಂ = ಲಗ್ನಪತ್ರಿಕೆಯನ್ನು, ವಿಲಿಲೇಖ = ಬರೆದನು:- ''ಅಪ್ರಾಕೃತಾಯ = ಪ್ರಕೃತಿ ಸಂಬಂಧರಹಿತನಾದ, ನಿತ್ಯಾಯ = ಅನಾದಿನಿತ್ಯನಾದ (ಶಾಶ್ವತನಾದ), ಸಚ್ಚಿದಾನಂದ ಮೂರ್ತಯೇ = ಸಚ್ಚಿದಾನಂದ ಸ್ವರೂಪನಾದ, ಸ್ವತಂತ್ರಾಯ = ಸರ್ವಸ್ವತಂತ್ರನಾದ (ಮತ್ತೊಬ್ಬರ ಸಹಾಯವನ್ನು ಬಯಸದೇ ಎಲ್ಲದರಲ್ಲೂ ಸ್ವತಂತ್ರನಾದ,) ಅದ್ವಿತೀಯಾಯ = ಏಕಮೇವಾದ್ವಿತೀಯನಾದ, (ತನಗೆ ಸರಿಸಮಾನರಾದ ಬೇರೊಬ್ಬರಾರೂ ಇಲ್ಲದ), ಅನಂತರೂಪಾಯ = ಅನಂತರೂಪಗಳುಳ್ಳ, ಶಾರ್ಙಿಣೇ = ಸಾರಂಗವೆಂಬ ಧನುರ್ಧಾರಿಯಾದ, ದೇವಾದಿದೇವಪೂಜ್ಯಾಯ = ದೇವತೆಗಳಲ್ಲಿ ಉತ್ತಮರಾದ ಗರುಡ-ಶೇಷ-ರುದ್ರಾದಿಗಳಿಂದ ಪೂಜಿತನಾದ, ಬ್ರಹ್ಮಪೂಜ್ಯಾಯ = ಚತುರ್ಮುಖ ಬ್ರಹ್ಮದೇವರಿಂದ ಅರ್ಚಿತನಾದ, ವೇದ್ಯೋಪಾದೇಯರೂಪಿಣೇ = ತಿಳಿಯಲ್ಪಡಬೇಕಾದ ಸ್ವೀಕಾರಾರ್ಹ ರೂಪವುಳ್ಳವನೂ ಆದ (ರೂಪವುಳ್ಳ), ಭಕ್ತಪ್ರಿಯಾಯ = ಭಕ್ತರಿಗೆ ಪ್ರಿಯನಾದ, ವಿಷ್ಣವೇ = ವ್ಯಾಪಕನಾದ, ಸಾಂಗೈಃ = ಅಂಗಸಹಿತವಾದ, ಸರ್ವೈಶ್ಚ = ಸಮಸ್ತವಾದ, ವೇದಾದ್ಯೈಃ = ವೇದಾದಿಗಳಿಂದಲೂ, ಸಪುರಾಣಕೈಃ = ಪುರಾಣಗಳಿಂದ ಯುಕ್ತವಾದ, ಆಗಮೈಃ = ಪಾಂಚರಾತ್ರಾದ್ಯಖಿಲ ಆಗಮಗಳಿಂದಲೂ, ಅನಂತಗುಣಕರ್ಮಣೇ = ಅನಂತಕಲ್ಯಾಣಗುಣಗಳು, ಅನಿತರಸಾಧಾರಣ ಕರ್ಮಗಳುಳ್ಳ, ವೇಂಕಟಾಚಲವಾಸಿನೇ = ವೇಂಕಟಗಿರಿಯಲ್ಲಿ ವಾಸ ಮಾಡುತ್ತಿರುವವನಾದ, ಶ್ರೀಧರಾಯ = ರಮಾದೇವಿಯನ್ನು ಹೃದಯದಲ್ಲಿ ಧರಿಸಿರುವ, ಕೃಷ್ಣಾಯ = ಶ್ರೀಕೃಷ್ಣನಾಮಕನಾದ, ಶ್ರೀನಿವಾಸಾಯ = ಶ್ರೀನಿವಾಸನಿಗೆ, ಬಂಧುತ್ವಾತ್ = ಬಂಧುವಾದ್ದರಿಂದ (ಆ ಸಲುಗೆಯಿಂದ), ಸುರೋತ್ತಮ = ಹೇ ದೇವತಾ ಸಾರ್ವಭೌಮನೇ! ತೇ = ನಿನಗೆ, ಆಶೀರ್ವಾದಂ = ಆಶೀರ್ವಾದವನ್ನು, ಕರಿಷ್ಯಾಮಿ = ಮಾಡುತ್ತೇನೆ. ತ್ವತ್ಪಾದಪದ್ಮಸಂವೀಕ್ಷಾಕಾಮಃ - ನಿನ್ನ ಪಾದಕಮಲಗಳ ಸಂದರ್ಶನಾಪೇಕ್ಷಿಯಾದ, ಆಕಾಶನಾಮಕಃ = ಆಕಾಶರಾಜನೆಂಬ ಹೆಸರಿನ ನಾನು, ಹೇ ಮಾಧವ = ಶ್ರೀಲಕ್ಷ್ಮೀರಮಣ! ತ್ವದಾಶ್ರಯಂ = ನಿನ್ನ ಆಶ್ರಯವನ್ನು, ಸಮಾಕಾಂಕ್ಷನ್ = ಬಯಸುವವನಾಗಿ, ಅದ್ಯ = ಈವಾಗ, ಲೇಖಯಾಮಿ = ಈ ಪತ್ರವನ್ನು ಬರೆಯುತ್ತಿದ್ದೇನೆ (ಬರೆಯುವೆನು), ಸ್ತ್ರೀಪುತ್ರಭ್ರಾತೃಭಿಸ್ಸಾಕಂ = ಪತ್ನೀಪುತ್ರಸಹೋದರಾದಿಗಳೊಡನೆ, ವಯಂ = ನಾವು, ಸರ್ವೇ = ಸಕಲರೂ, ಕುಶಲಿನಃ = ಕ್ಷೇಮದಿಂದಿದ್ದೇವೆ ॥ 156 - 161 ॥

**ತ್ವದನುಗ್ರಹಮಾತ್ರೇಣ ವಸಾಮೋಽತ್ರ ಹರೇಃಪುರೇ ।**
**ಸರ್ವೇಷಾಂ ಭವತಾಂ ಕ್ಷೇಮಂ ಪತ್ರದ್ವಾರಾ ನಿಬೋಧಯ ॥ 162 ॥**

**ಚೈತ್ರಶುಕ್ಲ ತ್ರಯೋದಶ್ಯಾಮೇತತ್ಪತ್ರಂ ವಿಲಿಖ್ಯತೇ ।**
**ಕನ್ಯಾಂ ಪದ್ಮಾವತೀಂ ತುಭ್ಯಂ ದಾಸ್ಯಾಮೀತಿಮತಿರ್ಮಮ ॥ 163 ॥**

**ತಾಮಂಗೀಕುರು ಗೋವಿಂದ ವಿವಾಹವಿಧಿಪೂರ್ವಕಮ್ ।**
**ಶುಕೋ ವೇತ್ತಿ ಗುರುರ್ವೇತ್ತಿ ಹೃದಯಂ ಮಮ ಸರ್ವತಃ ॥ 164 ॥**

**ಮಾ ಕುರುಷ್ವಾತ್ರ ಸಂದೇಹಂ ಕನ್ಯಾರ್ಥಂ ಪುರುಷೋತ್ತಮ ।**
**ವೈಶಾಖ ಶುಕ್ಲದಶಮೀ ಭೃಗುವಾರೇ ಶುಭೇದಿನೇ ॥ 165 ॥**

**ಬಂಧುಭಿಸ್ಸಹ ಸಂಪ್ರಾಪ್ಯ ಮಾಮುದ್ಧೃತ್ಯ ಗಣೈಸ್ಸಹ ।**
**ಹರ್ಷೇಣ ಪಾಣಿಗ್ರಹಣಂ ಕರ್ತವ್ಯಂ ಮೇ ಮನೋಗತಮ್ ॥ 166 ॥**

ತ್ವದನುಗ್ರಹಮಾತ್ರೇಣ = ಕೇವಲ ನಿನ್ನ ಅನುಗ್ರಹದಿಂದಲ್ಲೇ, ಅತ್ರ = ಇಲ್ಲಿ, ಹರೇಃಪುರೇ = ನಾರಾಯಣಪುರದಲ್ಲಿ, ವಸಾಮಃ = ಸುಖವಾಗಿ ವಾಸಮಾಡುತ್ತಿದ್ದೇವೆ. ಸರ್ವೇಷಾಂ ಭವತಾಂ = ನಿಮ್ಮೆಲ್ಲರ, ಕ್ಷೇಮಂ = ಕುಶಲವನ್ನು, ಪತ್ರದ್ವಾರಾ = ಪತ್ರ ಮೂಲಕವಾಗಿ, ನಿಬೋಧಯ = ತಿಳಿಸುವವನಾಗು ॥ 162 ॥ ಏತತ್ಪತ್ರಂ = ಈ ಶುಭ ಲಗ್ನಪತ್ರಿಕೆಯು, ಚೈತ್ರಶುಕ್ಲತ್ರಯೋದಶ್ಯಾಂ = ಚೈತ್ರಶುದ್ಧತ್ರಯೋದಶಿ ದಿನದಂದು, ವಿಲಿಖ್ಯತೇ = ಬರೆಯಲ್ಪಡುತ್ತಿದೆ. ಮಮ = ನನ್ನ, ಕನ್ಯಾಂ = ಮಗಳಾದ, ಪದ್ಮಾವತೀಂ = ಪದ್ಮಾವತಿಯನ್ನು, ತುಭ್ಯಂ = ನಿನಗೆ, ದಾಸ್ಯಾಮೀತಿ = ವಿವಾಹ ಮಾಡಿಕೊಡುವುದಾಗಿ, ಮಮ = ನನ್ನ, ಮತಿಃ = ಅಭಿಪ್ರಾಯವು ॥ 163 ॥ ವಿವಾಹವಿಧಿಪೂರ್ವಕಂ = ವಿವಾಹ ವಿಧಿಪೂರ್ವಕವಾಗಿ, ಗೋವಿಂದ = ಹೇ ಶ್ರೀನಿವಾಸ! ತಾಂ = ಪದ್ಮಾವತಿಯನ್ನು, ಅಂಗೀಕುರು = ಪತ್ನಿಯಾಗಿ ಸ್ವೀಕರಿಸು. ಮಮ ಹೃದಯಂ = ನನ್ನ ಮನಸ್ಸನ್ನು, ಸರ್ವತಃ = ಎಲ್ಲ ರೀತಿಯಿಂದಲೂ, ॥ 164 ॥ ಶುಕೋವೇತ್ತಿ = ಶುಕಾಚಾರ್ಯರು ತಿಳಿದಿದ್ದಾರೆ. ಪುರುಷೋತ್ತಮ = ಹೇ ಪುರುಷೋತ್ತಮನೇ! ಅತ್ರ = ಈ ವಿಚಾರದಲ್ಲಿ, ಕನ್ಯಾರ್ಥಂ = ಕನ್ಯಾದಾನ ವಿಷಯದಲ್ಲಿ, ಸಂದೇಹಂ = ಸಂಶಯವನ್ನು, ಮಾಕುರುಷ್ವ = ಮಾಡಬೇಡ, ಭೃಗುವಾಸರೇ = ಶುಕ್ರವಾರದ, ಶುಭೇದಿನೇ = ಶುಭದಿನದಂದು, ಬಂಧುಭಿಸ್ಸಹ = ಬಾಂಧವರೊಡನೆ, ಗಣೈಸ್ಸಹ = ದೇವತಾಗಣದೊಡನೆ, ಸಂಪ್ರಾಪ್ಯ = ಇಲ್ಲಿಗೆ ಬಂದು, ಮಾಮುದ್ಧೃತ್ಯ = ನನ್ನನ್ನು ಉದ್ಧರಿಸಿ, ಹರ್ಷೇಣ = ಸಂತೋಷದಿಂದ, ಪಾಣಿಗ್ರಹಣಂ = ಪದ್ಮಾವತಿಯ ಕರಪಿಡಿದು (ಕನ್ಯಾಸ್ವೀಕಾರವನ್ನು), ಕರ್ತವ್ಯಂ = ಮಾಡಬೇಕು. (ಇತಿ = ಹೀಗೆಂದು) ಮೇ = ನನ್ನ, ಮನೋಗತಂ = ಮನಸ್ಸಿನ ಬಯಕೆಯಾಗಿದೆ. ॥ 165-166 ॥

**ಅಧಿಕಂ ಲೇಖನೀಯಂ ತೇ ಕಿಮಸ್ತಿ ಪುರುಷೋತ್ತಮ ।**
**ಶುಕೋ ವದತಿ ಯತ್ಸತ್ಯಂ ತತ್ಸರ್ವಂ ಕುರು ಕೇಶವ ॥ 167 ॥**

**ಇತ್ಯಾಶಿಷ ಸ್ಸಂತು ಮಹಾನುಭಾವ ತೇ ಸಮಸ್ತಕಲ್ಯಾಣಗುಣಾರ್ಣವ ಪ್ರಭೋ ।**
**ನಿತ್ಯಾಯ ಸತ್ಯಾಯ ಸುಖಸ್ವರೂಪಿಣೇ ಸಮಸ್ತಲೋಕಪ್ರಭುವೇ ಮಹಾತ್ಮನೇ ॥ 168 ॥**

**ಇತ್ಥಂ ಲಿಖಿತ್ವಾ ವರಪತ್ರಿಕಾಂ ಶುಭಾಮಾಕಾಶರಾಜೋ ಜಗದೀಶ ಸನ್ನಿಧಿಮ್ ।**
**ಸಂಪ್ರೇಷಯಾಮಾಸ ಶುಕಂ ಮಹಾಂತಂ ಸಪುತ್ರಮಿತ್ರಃ ಸಹ ಬಾಂಧವಾನುಗಃ ॥ 169 ॥**

**ಕ್ರೋಶಮಾತ್ರಮುಪಾಗಮ್ಯ ಶುಕಂ ವಚನಮಬ್ರವೀತ್ ।**

ರಾಜೋವಾಚ-

**ಯೇನ ಕೇನ ಪ್ರಕಾರೇಣ ತಸ್ಯ ಚಿತ್ತಂ ವಶಂಕುರು ॥ 170 ॥**

ಪುರುಷೋತ್ತಮ = ಪುರುಷೋತ್ತಮನಾದ, ತೇ = ನಿನಗೆ, ಅಧಿಕಂ ಲೇಖನೀಯಂ = ಹೆಚ್ಚು ಬರೆಯುವುದು, ಕಿಮಸ್ತಿ = ಏನಿದೆ? ಕೇಶವ = ಬ್ರಹ್ಮರುದ್ರಾದಿನಿಯಾಮಕನೇ, ಶುಕೋ = ಶುಕಮುನಿಯು, ಯತ್ = ಯಾವ ವಿಚಾರವನ್ನು, ವದತಿ = ಹೇಳುತ್ತಾನೆಯೋ, ತತ್ಸರ್ವಂ = ಅವೆಲ್ಲವನ್ನು, ಸತ್ಯಂ ಕುರು = ಸತ್ಯವನ್ನಾಗಿ ಮಾಡುವವನಾಗು ॥ 167 ॥

ಸಮಸ್ತಲೋಕಪ್ರಭುವೇ = ಸಮಸ್ತ ಪ್ರಪಂಚಕ್ಕೆ ಸ್ವಾಮಿಯಾದ, ಮಹಾತ್ಮನೇ = ಮಹಾಮಹಿಮನಾದ, ನಿತ್ಯಾಯ = ನಿತ್ಯನಾದ, ಸತ್ಯಾಯ = ಸತ್ಯ ಸ್ವರೂಪನಾದ, ಸಮಸ್ತಕಲ್ಯಾಣಗುಣಾರ್ಣವ = ಸಕಲ ಕಲ್ಯಾಣಗುಣಸಾಗರನಾದ, ಮಹಾನುಭಾವ = ಮಹನೀಯನಾದ, ಪ್ರಭೋ = ಸರ್ವರಿಗೂ ಪ್ರಭುವಾದ ಶ್ರೀನಿವಾಸ, ತೇ = ನಿನಗೆ, ಇತಿ = ಇಂತು, ಆಶಿಷಃ = ಆಶೀರ್ವಾದಗಳು, ಸಂತು = ಇರಲಿ, ಇತ್ಥಂ = ಈ ರೀತಿಯಾಗಿ, ಶುಭಾಂ = ಮಂಗಳಕರವಾದ, ವರಪತ್ರಿಕಾಂ = ಶ್ರೇಷ್ಠ ಲಗ್ನಪತ್ರಿಕೆಯನ್ನು, ಲಿಖಿತ್ವಾ = ಬರೆದು, ಬಾಂಧವಾನುಗಃ = ಅನುಸರಿಸಿ ಬರುತ್ತಿರುವ ಬಾಂಧವರುಳ್ಳ, ಸಪುತ್ರಮಿತ್ರಃ = ಪುತ್ರಮಿತ್ರರಿಂದ ಸಹಿತನಾದ, ಆಕಾಶರಾಜಃ = ಆಕಾಶರಾಜನು, ಜಗದೀಶಸನ್ನಿಧಿಂ = ಜಗದೀಶ್ವರನಾದ ಶ್ರೀನಿವಾಸನ ಸನ್ನಿಧಿಗೆ (ಸನ್ನಿಧಿಯನ್ನು ಕುರಿತು), ಮಹಾಂತಂ = ಮಹಾತ್ಮನಾದ, ಶುಕಂ = ಶುಕಮುನಿಯನ್ನು (ಲಗ್ನಪತ್ರಿಕೆಯೊಡನೆ), ಸಂಪ್ರೇಷಯಾಮಾಸ = ಕಳುಹಿಸಿದನು ॥ 169 ॥ ಕ್ರೋಶಮಾತ್ರಂ = ಒಂದು ಹರಿದಾರಿ ದೂರದವರೆಗೆ, ಉಪಾಗಮ್ಯ = ಶುಕಮುನಿಯನ್ನು ಅನುಸರಿಸಿ ಹೋಗಿ, ಶುಕಂ = ಶುಕಾಚಾರ್ಯನನ್ನು ಕುರಿತು, ವಚನಮಬ್ರವೀತ್ = ಮಾತು ಹೇಳಿದನು. ರಾಜೋವಾಚ = ಆಕಾಶರಾಜನು ಇಂತೆಂದನು - ಯೇನಕೇನಪ್ರಕಾರೇಣ = ಹೇಗಾದರೂ ಮಾಡಿ (ಯಾವುದೇ ಕ್ರಮದಿಂದಾಗಲೀ), ತಸ್ಯಚಿತ್ತಂ = ಶ್ರೀನಿವಾಸನ ಮನಸ್ಸನ್ನು, ವಶಂಕುರು = ವಶಪಡಿಸಿಕೋ ॥ 170 ॥

**ಅಯುತಂ ಸ್ವರ್ಣಲಕ್ಷಂ ವಾ ಕೋಟಿಂ ವಾರ್ಬುದಮೇವ ವಾ ।**
**ದಾಸ್ಯಾಮಿ ದ್ರವ್ಯನಿಚಯಂ ನಾತ್ರ ಕಾರ್ಯಾ ವಿಚಾರಣಾ ॥ 171 ॥**

**ಏವಮುಕ್ತೋ ಮಹೀದೇವೋ ಗತಶ್ಶೇಷಾಚಲಂ ಪ್ರತಿ ।**
**ಗಮನಾಯ ಮತಿಂ ಚಕ್ರೇ ಶ್ರೀನಿವಾಸ ದಿದೃಕ್ಷಯಾ ॥**
**ಮಧ್ಯಂ ಗತೇ ಭಾನುಮತೋ *ಮಹಾತ್ಮಾ ಸಮಾಗತ ಸ್ತತ್ರ**
**ಶುಕಸ್ಯ ಶಿಷ್ಯಃ... ॥ 172 ॥**

**ಹರೇರ್ಜನನ್ಯಾನುಗತೋ ವಿರಾಗೀ ತದ್ದರ್ಶನಾಹ್ಲಾದಗತಾಧ್ವ ಶೇಷಃ ।**
**ದೂರಾದಾಯಾಂತಮಾವೀಕ್ಷ್ಯ ವೇಂಕಟಾದ್ರಿಶಿಖಾಮಣಿಃ ॥ 173 ॥**

**ಮಾತಾ ಚ ನಾಗತಾ ಕಸ್ಮಾದಿತಿ ಚಿಂತಾಪರೋ ಹರಿಃ ।**
**ಏತಸ್ಮಿನ್ನೇವ ಕಾಲೇತು ಕೃಷ್ಣದ್ವೈಪಾಯನಾತ್ಮಜಮ್ ॥ 174 ॥**

**ದದರ್ಶ ಸಶಿರಃ +ಪಾಣಿಂ ಕೃತಕಾರ್ಯವಿನಿಶ್ಚಯಮ್ ।**
**ಶುಕಂ ಪ್ರಾಹ ವಿಭಕ್ತ್ಯೈವ ಚಾಸನಾದುತ್ಥಿತೋ ಹರಿಃ ॥ 175 ॥**

ಅಯುತಂ - ಸ್ವರ್ಣಲಕ್ಷಂ ವಾ = ಹತ್ತು ಸಾವಿರ ಲಕ್ಷ ಸುವರ್ಣವಾಗಲಿ, ಕೋಟಿಂ ವಾ = ಒಂದು ಕೋಟಿಯಾಗಲಿ, ಅರ್ಬುದಮೇವ ವಾ = ಅರ್ಬುದ ಸುವರ್ಣವನ್ನಾಗಲಿ ಸರಿ, ದ್ರವ್ಯನಿಚಯಂ = ಧನಸಮೂಹವನ್ನು, ದಾಸ್ಯಾಮಿ = ಕೊಡುತ್ತೇನೆ. ಅತ್ರ = ಈ ವಿಷಯದಲ್ಲಿ, ವಿಚಾರಣಾ ನ ಕಾರ್ಯಾ = ಆಲೋಚನೆ ಮಾಡಬೇಕಾಗಿಲ್ಲ ॥ 171 ॥ ಏವಮುಕ್ತಃ = ರಾಜನಿಂದ ಹೀಗೆ ಹೇಳಲ್ಪಟ್ಟ, ಮಹೀದೇವಃ = ಭೂಸುರನಾದ ಶುಕಮುನಿಯು, ಶ್ರೀನಿವಾಸದಿದೃಕ್ಷಯಾ = ಶ್ರೀನಿವಾಸನ ದರ್ಶನಮಾಡುವ ಅಪೇಕ್ಷೆಯಿಂದ, ಶೇಷಾಚಲಂ ಪ್ರತಿ = ಶೇಷಗಿರಿಯನ್ನು ಕುರಿತು, ಗಮನಾಯ = ಪ್ರಯಾಣಬೆಳೆಸಲು,

*ಪಾ :- ಚಿತ್ರಭಾನೌ, + ಪಾ :- ಕಂಪಂ

ಮತಿಂಚಕ್ರೇ = ಮನಸ್ಸು ಮಾಡಿದನು. (ಶೇಷಾಚಲಂಪ್ರತಿ ಗತಃ = ಶೇಷಗಿರಿಯನ್ನು ಕುರಿತು ಹೊರಟನು) ಭಾನುಮತೋ = ಸೂರ್ಯದೇವನು (ಪಾ - ಚಿತ್ರಭಾನೌ = ಸೂರ್ಯನು) ಮಧ್ಯಂಗತೇ = ಮಧ್ಯಭಾಗಕ್ಕೆ ಬರಲು (ಮಧ್ಯಾಹ್ನವಾಗಲು), ಮಹಾತ್ಮಾ = ಮಹಾತ್ಮನಾದ, ಶುಕಃ = ಶುಕಮುನಿಯು, ಹರೇಃ = ಶ್ರೀನಿವಾಸನ, ಜನನ್ಯಾ ಅನುಗತಃ = ತಾಯಿಯಾದ ಬಕುಳೆಯಿಂದ ಅನುಸರಿಸಲ್ಪಟ್ಟವನಾಗಿ (ಬಕುಳೆಯು ಹಿಂಬಾಲಿಸಿ ಬರುತ್ತಿರಲು), ತದ್ದರ್ಶನಾಹ್ಲಾದಗತಾಧ್ವಶೇಷಃ = ಶ್ರೀನಿವಾಸನ ದರ್ಶನದಿಂದುಂಟಾದ ಸಂತೋಷದಿಂದ ಪರಿಹೃತವಾದ ಮಾರ್ಗಾಯಾಸವುಳ್ಳವನಾದ, ವಿರಾಗಿ = ವೈರಾಗ್ಯಶಾಲಿಯಾದ, ಶುಕಃ = ಶುಕಮುನಿಯು, ಸಶಿಷ್ಯಃ = ಶಿಷ್ಯರಿಂದೊಡಗೂಡಿ, ತತ್ರ = ವೇಂಕಟಗಿರಿಗೆ, ಸಮಾಗತಃ = ಬಂದನು. ವೇಂಕಟಾದ್ರಿಶಿಖಾಮಣಿಃ = ವೇಂಕಟಶೈಲಕ್ಕೆ ಶಿಖರಪ್ರಾಯನಾದ, ಹರಿಃ = ಶ್ರೀನಿವಾಸನು, ದೂರಾತ್ = ದೂರದಿಂದ, ಆಯಾಂತಂ = ಬರುತ್ತಿರುವ ಶುಕಮುನಿಯನ್ನು, ಆವೀಕ್ಷ್ಯ = ಕಂಡು, ಕಸ್ಮಾತ್ = ಏತಕ್ಕಾಗಿ, ಮಾತಾಚ = ತಾಯಿಯು, ನಾಗತಾ = ಬರಲಿಲ್ಲ, ಇತಿ = ಹೀಗೆ, ಚಿಂತಾಪರಃ = ಚಿಂತಾಕ್ರಾಂತನು (ಅಭೂತ್ = ಆದನು). ಏತಸ್ಮಿನ್ನೇವ ಕಾಲೇತು = ಅದೇ ಸಮಯದಲ್ಲಿ, ಕೃತಕಾರ್ಯನಿಶ್ಚಯಂ = ಕಾರ್ಯಸಾಫಲ್ಯವನ್ನು ನಿಶ್ಚಯಿಸುವ, ಸಶಿರಃಪಾಣಿಃ = ತಲೆಯ ಮೇಲೆ ಕೈಜೋಡಿಸಿರುವ (ಬರುತ್ತಿರುವ) (ಪಾ - ಸಶಿರಃ ಕಂಪಂ = ತಲೆದೂಗುತ್ತಾ ಬರುತ್ತಿರುವ), ಕೃಷ್ಣದ್ವೈಪಾಯನಾತ್ಮಜಂ = ಶ್ರೀವೇದವ್ಯಾಸದೇವರ ಪುತ್ರನಾದ ಶುಕಮುನಿಯನ್ನು, ದದರ್ಶ = ಕಂಡನು. ಆಸನಾದುತ್ಥಿತಃ = ಆಸನದಿಂದ ಮೇಲೆದ್ದ, ಹರಿಃ = ಶ್ರೀನಿವಾಸನು, ವಿಭಕ್ತ್ಯೈವ = ವಿಶೇಷಭಕ್ತಿಯಿಂದಲೇ, ಶುಕಂ = ಶುಕಮುನಿಯನ್ನು ಕುರಿತು, ಪ್ರಾಹ = ಹೇಳಿದನು ॥ 172-175 ॥

*ಶ್ರೀನಿವಾಸ ಉವಾಚ -*

**ಕಾರ್ಯಂ ಮದೀಯಂ ವಿಪ್ರೇಂದ್ರ! ಪಕ್ವಂ ವಾಪಕ್ವಮೇವವಾ ॥ 176 ॥**

*ಶ್ರೀಶುಕ ಉವಾಚ -*

**ಕಾರ್ಯಂ ತವ ಕೃಪಾಸಿಂಧೋ ಪಕ್ವಮೇವ ನ ಸಂಶಯಃ ।**
**ಶುಭಂ ವಾಕ್ಯಮಿತಿ ಶ್ರುತ್ವಾ ದಂಡವತ್ಪ್ರಣಿಪತ್ಯ ತಮ್ ॥ 177 ॥**

**ಸಮಾಲಿಂಗ್ಯ ಶುಕಂ ಕೃಷ್ಣೋ ಭಕ್ತ್ಯಾ ಹರ್ಷವಶಂಗತಃ ।**
**ಅತಿ ಚಿತ್ರಚರಿತ್ರಾತ್ಮಾ ಶುಕಮಾಹ ಮಹೀಪತೇ ॥ 178 ॥**

*ಶ್ರೀನಿವಾಸ ಉವಾಚ -*

**ವದಂತಿ ಲೋಕಾ ಅನೃತಾನ್ ಸಹಸ್ರಾನ್ ವಿವಾಹಕಾಮಾ ನರಜನ್ಮನೋ ಯೇ ।**
**ತೇ ಯಾಂತಿ ಮದ್ಧಾಮ ಕಿಮತ್ರವಾಚ್ಯಂ ಜಗತ್ಕುಟುಂಬಸ್ಯ ವಿವಾಹಕಾಮಾ ॥ 179 ॥**

**ನರೋ ಬಿಭರ್ತಿ ಸ್ವಸುತಂ ಸ್ವಭಾರ್ಯಾಂ ಸ್ವಜನಂಗೃಹಮ್ ।**
**ಬ್ರಹ್ಮಾಂಡಂ ಭವನಂ ವಿದ್ವನ್ (ಪಾ-ಬಿಭ್ರನ್) ಬ್ರಹ್ಮಾ ಮೇ ನಾಭಿಸಂಭವಃ ॥ 180 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಿದನು - ವಿಪ್ರೇಂದ್ರ = ಬ್ರಾಹ್ಮಣೋತ್ತಮನೇ, ಮದೀಯಂ = ನನಗೆ ಸಂಬಂಧಿಸಿದ, ಕಾರ್ಯಂ = ಕೆಲಸವು, ಪಕ್ವಂ ವಾ = ಸಫಲವೇ (ಹಣ್ಣಾಯಿತೇ), ಅಪಕ್ವಂ ವಾ = ಅಸಫಲವೇ

(ಹಣ್ಣಾಗಲಿಲ್ಲವೇ?) ॥ 176 ॥ ಶುಕ ಉವಾಚ = ಶುಕಾಚಾರ್ಯನು ಹೇಳುತ್ತಲಿದ್ದಾನೆ – ಕೃಪಾಸಿಂಧೋ = ಕರುಣಾಸಾಗರ! ತವಕಾರ್ಯಂ = ನಿನ್ನ ಕೆಲಸವು, ಪಕ್ವಮೇವ = ಹಣ್ಣೇ ಆಗಿದೆ (ಸಫಲವಾಗಿದೆ), ನ ಸಂಶಯಃ = ಸಂದೇಹವಿಲ್ಲ, ಕೃಷ್ಣಃ = ಶ್ರೀಹರಿಯು, ಇತಿ = ಹೀಗೆಂಬ, ಶುಭವಾಕ್ಯಂ = ಶುಭವಚನವನ್ನು, ಶ್ರುತ್ವಾ = ಕೇಳಿ, ತಂ (ಪ್ರತಿ)= ಶುಕಮುನಿಯನ್ನು ಕುರಿತು (ಶುಕಮುನಿಗೆ), ದಂಡವತ್ಪ್ರಣಮತ್ಯ = ಸಾಷ್ಟಾಂಗ ನಮಸ್ಕಾರಮಾಡಿ, ಶುಕಂ = ಶುಕಾಚಾರ್ಯನನ್ನು, ಭಕ್ತ್ಯಾ = ಭಕುತಿಯಿಂದ, ಸಮಾಲಿಂಗ್ಯ = ಆಲಿಂಗಿಸಿ, ಹರ್ಷವಶಂಗತಃ = ಆನಂದದಿಂದ ಮೈಮರೆತನು. ಮಹೀಪತೇ = ಎಲೈ ಜನಕಮಹಾರಾಜ! ಅತಿಚಿತ್ರಚರಿತ್ರಾऽऽತ್ಮಾ = ಅತ್ಯಂತ ಆಶ್ಚರ್ಯಕರ ಚರಿತ್ರೆಯುಳ್ಳವನಾದ ಶ್ರೀನಿವಾಸನು, ಶುಕಮಾಹ = ಶುಕಮುನಿಯನ್ನು ಕುರಿತು ಹೇಳಿದನು ॥ 177-178 ॥ ಶ್ರೀನಿವಾಸ ಉವಾಚ = ಶ್ರೀನಿವಾಸನು ಇಂತೆಂದನು – ನರಜನ್ಮನಃ = ಮಾನವರಾಗಿ ಜನಿಸಿದವರಿಗೆ, ವಿವಾಹಕಾಮಾಃ = ಮದುವೆ ಮಾಡಿಸಲು ಅಪೇಕ್ಷಿಸುವ, ಯೇ = ಯಾರು, ಸಹಸ್ರಾನ್ = ಸಾವಿರಾರು, ಅನೃತಾನ್ = ಸುಳ್ಳುಗಳನ್ನು (ಪಾ- ಆರ್ಷ ಪ್ರಯೋಗ), ವದಂತಿ = ಹೇಳುವರೋ, ತೇ = ಅಂಥವರು, ಮದ್ಧಾಮ = ನನ್ನ ಮನೆಯಾದ ವೈಕುಂಠಕ್ಕೆ, ಯಾಂತಿ = ಹೋಗುವರು, ಜಗತ್ಕುಟುಂಬಸ್ಯ = ಜಗತ್ ಕುಟುಂಬಿಯಾದ ನನಗೆ, ವಿವಾಹಕಾಮಾಃ = ವಿವಾಹ ಮಾಡಿಸಲಪೇಕ್ಷಿಸಿದವರನ್ನು, ಅತ್ರ = ಮೋಕ್ಷಪಡೆಯುವರೆಂದು, ವಾಚ್ಯಂ ಕಿಂ = ಪ್ರತ್ಯೇಕವಾಗಿ ಹೇಳಬೇಕೇನು? ॥ 179 ॥ ನರಃ = ಮಾನವನು, ಸ್ವಸುತಂ = ತನ್ನ ಮಗನನ್ನು, ಸ್ವಭಾರ್ಯಾಂ = ತನ್ನ ಹೆಂಡತಿಯನ್ನು, ಸ್ವಜನಂ = ತನ್ನನ್ನು ಆಶ್ರಯಿಸಿಕೊಂಡಿರುವ ಜನರನ್ನು, ಗೃಹಂ = ತನ್ನ ಮನೆಯನ್ನು, ಬಿಭರ್ತಿ = ಧರಿಸುತ್ತಾನೆ (ಪೋಷಿಸುತ್ತಾನೆ), ವಿದ್ವಾನ್ = ಪಂಡಿತನಾದ ಶುಕಮುನಿಯೇ, ಮೇ = ನನಗೆ, ಬ್ರಹ್ಮಾಂಡಂ = ಅಖಂಡ ಬ್ರಹ್ಮಾಂಡವೇ, ಭವನಂ = ಮನೆಯು, ಬ್ರಹ್ಮಾ = ಬ್ರಹ್ಮದೇವನು, ನಾಭಿಸಂಭವಃ = ನನ್ನ ನಾಭಿಕಮಲದಿಂದ ಜನಿಸಿದ ಮಗನು, ॥ 180 ॥

**ಯಾ ಲಕ್ಷ್ಮೀರ್ಮಮ ಕಲ್ಯಾಣೀ ಯೇಚಾನ್ಯೇ ಮಮ ಚೌರಸಾಃ ।**
**ಚತುರ್ನವತಿ ಲಕ್ಷಾಣಿ ಜೀವಾಸ್ಸಂತಿ ಹ್ಯಸಂಖ್ಯಕಾಃ ॥ 181 ॥**

**ಏತೇಷಾಂ ರಕ್ಷಣೇ ಬದ್ಧದೀಕ್ಷೋऽಹಂ ಮುನಿಸತ್ತಮ ॥ 182 ॥**

**ಮಹಾಕುಟುಂಬಯುಕ್ತಸ್ಯ ಮಮ ಕಲ್ಯಾಣಕಾರಣಾತ್ ।**
**ಯನ್ಮಿಥ್ಯಾ ಭಾಷಿತಂ ರಾಜ್ಞಸ್ತ್ವಯಾದ್ಯ ಮುನಿಸತ್ತಮ ॥ 183 ॥**

**ತ್ವತ್ಕೃತಸ್ಯೋಪಕಾರಸ್ಯ ಪ್ರತಿದಾತುಂ ನ ವಿದ್ಯತೇ ।**
**ತಥಾಪಿ ತವ ದಾಸ್ಯಾಮಿ ಶರೀರಾಲಿಂಗನಂ ಮುನೇ ॥ 184 ॥**

**ಮಚ್ಛರೀರಾದ್ವರಿಷ್ಯಂತು ನ ವಿಜಾನಾಮಿ ತೇ ಶುಭಮ್ ।**
**ಏವಮುಕ್ತ್ವಾಂಗಸಂಗಂ ಚ ತಸ್ಮಾದಾತ್ ಪುರುಷೋತ್ತಮಃ ॥ 185 ॥**

ಯಾ ಲಕ್ಷ್ಮೀಃ = ಯಾವ ಲಕ್ಷ್ಮೀದೇವಿಯು ಇದ್ದಾಳೆಯೋ ಅವಳು, ಮಮ = ನನಗೆ, ಕಲ್ಯಾಣೀ = (ಲಗ್ನವಾದ) ಮಡದಿಯು, ಚ = ಮತ್ತು, ಯೇ ಚಾನ್ಯೇ = ಇನ್ನಿತರರು, ಮಮ = ನನಗೆ, ಔರಸಾಃ = ಔರಸ ಪುತ್ರರು. ಚತುರ್ನವತಿ ಲಕ್ಷಾಣಿ = ತೊಂಭತ್ನಾಲ್ಕು ಲಕ್ಷ (ಯೋನಿಗಳಷ್ಟು), ಜೀವಾಃ = ಜೀವರು, ಅಸಂಖ್ಯಾಃ = ಎಣಿಸಲಾಗದಷ್ಟು ಜನರು, ಸಂತಿ = ಇರುವರು ॥ 181 ॥ ಮುನಿಸತ್ತಮ = ಮನನಶೀಲರಲ್ಲಿ ಶ್ರೇಷ್ಠನಾದ ಶುಕಾಚಾರ್ಯನೇ! ಅಹಂ = ನಾನು, ಏತೇಷಾಂ = ಇವರೆಲ್ಲರ , ರಕ್ಷಣೆ = ಕಾಪಾಡುವ ವಿಷಯದಲ್ಲಿ, ಬದ್ಧದೀಕ್ಷಃ = ದೀಕ್ಷೆವಹಿಸಿದ್ದೇನೆ ॥ 182 ॥ ಮಹಾಕುಟುಂಬಯುಕ್ತಸ್ಯ

= ಇಂತಹ ದೊಡ್ಡ ಕುಟುಂಬವುಳ್ಳ, ಮಮ = ನನ್ನ, ಕಲ್ಯಾಣಕಾರಣಾತ್ = ಮದುವೆಯ (ನಿಮಿತ್ತ) ಕಾರಣದಿಂದಾಗಿ, ಅದ್ಯ = ಈಗ, ತಸ್ಯರಾಜ್ಞಃ = ಆ ಆಕಾಶರಾಜನಿಗೆ, ತ್ವಯಾ = ನಿನ್ನಿಂದ, ಯನ್ನಿಥ್ಯಾ = ಯಾವ ಸುಳ್ಳುಗಳು (ಎಷ್ಟು ಸುಳ್ಳುಗಳು), ಭಾಷಿತಂ (ಸ್ಯಾತ್) = ಹೇಳಲ್ಪಟ್ಟಿರಬಹುದು? ।। 183 ।। ತ್ವತ್ಕೃತಸ್ಯ = ಇಂತು ನಿನ್ನಿಂದ ಮಾಡಲ್ಪಟ್ಟ, ಉಪಕಾರಸ್ಯ = ಉಪಕಾರಕ್ಕೆ, ಪ್ರತಿಯಾಗಿ ಕೊಡಲು (ಪ್ರತ್ಯುಸಕಾರ ರೂಪವಾಗಿ ನೀಡಲು), ನ ವಿದ್ಯತೇ = (ನನ್ನಲ್ಲಿ) ಏನೂ ಇರುವುದಿಲ್ಲ, ತಥಾಪಿ = ಹೀಗಿದ್ದರೂ, ಮುನೇ = ಶುಕಮುನಿಯೇ, ತವ = ನಿನಗೆ, ಶರೀರಾಲಿಂಗನಂ = ನನ್ನ ಶರೀರದ ಆಲಿಂಗನವನ್ನು, ದಾಸ್ಯಾಮಿ = ಕೊಡುತ್ತೇನೆ ।। 184 ।। ಮಚ್ಛರೀರಾತ್ = ನನ್ನ ಶರೀರಕ್ಕಿಂತಲೂ, ತೇ = ನಿನಗೆ, ವರಿಷ್ಠಂತು = ಶ್ರೇಷ್ಠವಾದುದು, ಶುಭಂ = ಶುಭಕರವಾದುದು, ನ ವಿಜಾನಾಮಿ = ತಿಳಿಯದವನಾಗಿದ್ದೇನೆ. ಪುರುಷೋತ್ತಮಃ = ಶ್ರೀನಿವಾಸನು, ಏವಮುಕ್ತ್ವಾ = ಇಂತು ನಿರೂಪಿಸಿ, ಅಂಗಸಂಗಂ ಚ = ತನ್ನ ಶರೀರಾಲಿಂಗನವನ್ನು, ತಸ್ಯ = ಶುಕಮುನಿಗೆ, ಅದಾತ್ = ದಯಪಾಲಿಸಿದನು ।। 185 ।।

**ತ್ವತ್ಪುಣ್ಯಸ್ಯಾವಧಿರ್ನಾಸ್ತಿ ಮತ್ಸಂಗಸ್ತವ ಪುಣ್ಯಜಃ ।**
**ಯಥಾ ತ್ವಯಾ ಕೃತಂ ಕರ್ಮ ತಥಾ ಪೂರ್ವಂ ಕಪೀಶ್ವರಃ ।। 186 ।।**

**ಸೀತಾನಿಮಿತ್ತಂ ಯತ್ಕರ್ಮ ಕೃತವಾನ್ಮಾರುತಾತ್ಮಜಃ ।**
**ತಸ್ಮೈಪ್ರಾದಾಂ ಮಹೀದೇವ! ಸಂತುಷ್ಟಸ್ಸಹಭೋಜನಮ್ ।। 187 ।।**

**ಸತ್ಯಲೋಕಾಧಿಪತ್ಯಂ ಚ ಸೀತಾವಾರ್ತಾವಲಂಬಿನೇ ।**
**ತಸ್ಮಾದ್ವರಿಷ್ಠಂ ತೇ ಕರ್ಮ ಮುನೇ ತಾಪಸಪುಂಗವ ।। 188 ।।**

**ಏವಮುಕ್ತ್ವಾ ಸುಭದ್ರಾಣಿ ವಾಕ್ಯಾನಿ ವಿವಿಧಾನಿ ಚ ।**
**ತತಃ ಪ್ರೋವಾಚ ಭಗವಾನ್ ಕಕ್ಷ್ಯೇ ಕಿಂ ಭಾತಿ ಭಾನುವತ್ ।। 189 ।।**

*ಶ್ರೀ ಶುಕ ಉವಾಚ -*

**ರಾಜರಾಜೇನ ಲಿಖಿತಾ ಪತ್ರಿಕಾ ಪುರುಷೋತ್ತಮ ।। 190 ।।**

**ಪ್ರೋಕ್ತಂ ತೇ ಚ ಮಹಾಭಾಗ ಪೂರ್ವಮೇವಾಸ್ಯ ಕಾರಣಮ್ ।**
**ಇತ್ಯುಕ್ತಸ್ಸನ್ ರಮಾಕಾಂತಃ ಪತ್ರಿಕಾಂ ಶಿರಸಾ ದಧೌ ।। 191 ।।**

ತ್ವತ್ಪುಣ್ಯಸ್ಯ = ನೀನು ಮಾಡಿದ ಪುಣ್ಯಕ್ಕೆ, ಅವಧಿಃ = ಮೇರೆಯು, ನಾಸ್ತಿ = ಇಲ್ಲ, ತವ = ನಿನಗೆ, ಮತ್ಸಂಗಃ = ನನ್ನ ಅಂಗಸಂಗವು, ಪುಣ್ಯಜಃ = ನೀನು ಮಾಡಿದ ಪುಣ್ಯದಿಂದಲೇ ಉಂಟಾಯಿತು. ತ್ವಯಾ = ನಿನ್ನಿಂದ, ಯಥಾ = ಹೇಗೆ, ಕರ್ಮ = ಕಾರ್ಯವು, ಕೃತಂ = ಮಾಡಲ್ಪಟ್ಟಿತೋ, ತಥಾ = ಹಾಗೆಯೇ, ಪೂರ್ವಂ = ಹಿಂದೆ, ಕಪೀಶ್ವರಃ = ಆಂಜನೇಯನು, (ಕೃತವಾನ್ = ಮಾಡಿದನು) ।। 186 ।। ಮಾರುತಾತ್ಮಜಃ = ವಾಯುಕುಮಾರನಾದ ಹನುಮಂತನು, ಸೀತಾನಿಮಿತ್ತಂ = ಸೀತಾದೇವಿಯ ನಿಮಿತ್ತವಾಗಿ, ಯತ್ಕರ್ಮ = ಸಮುದ್ರೋಲ್ಲಂಘನ ಸೀತಾನ್ವೇಷಣ, ಕುಶಲವಾರ್ತಾ ನಿರೂಪಣ, ಮುದ್ರಾ ಪ್ರದಾನ, ಚೂಡಾಮಣಿಯೊಡನೆ ಬಂದು ಸೀತೆಯ ಕುಶಲವನ್ನು ನಿರೂಪಿಸುವುದೇ ಮೊದಲಾದ ಕಾರ್ಯವನ್ನು, ಕೃತವಾನ್ = ಮಾಡಿದನು. ಮಹೀದೇವ = ಎಲೈ ಭೂಸುರನೇ, ಸಂತುಷ್ಟಃ = ಹನುಮಂತನ ಈ

ಬಗೆಯಾದ ಸೇವೆಯಿಂದ ಹರ್ಷಗೊಂಡ ನಾನು, ತಸ್ಮೈ = ಆಂಜನೇಯನಿಗೆ, ಸಹಭೋಜನಂ = ಜೊತೆಯಲ್ಲಿ ಕುಳಿತು ನನ್ನೊಡನೆ ಭೋಜನ ಮಾಡುವ ಭಾಗ್ಯವನ್ನು, ಪ್ರಾದಾಂ = ಪ್ರದಾನ ಮಾಡಿದೆನು. ।। 187 ।। ಸೀತಾವಾರ್ತಾವಲಂಬಿನೇ = ಸೀತೆಯ ಸಮಾಚಾರವನ್ನು ತಿಳಿದು ಬಂದ ಹನುಮಂತನಿಗೆ, ಸತ್ಯಲೋಕಾಧಿಪತ್ಯಂ ಚ = ಸತ್ಯಲೋಕಾಧಿಪತ್ಯವನ್ನು (ಭಾವಿ ಬ್ರಹ್ಮಪದವನ್ನು), ಪ್ರಾದಾಂ = ಕೊಟ್ಟೆನು. ತಾಪಸಪುಂಗವ = ತಪಸ್ವಿಗಳಲ್ಲಿ ಶ್ರೇಷ್ಠನಾದ, ಮುನೇ = ಶುಕಮುನಿಯೇ, ತೇ = ನಿನ್ನ, ಕರ್ಮ = ಈ ಕಾರ್ಯವು, ತಸ್ಮಾತ್ = ಹನುಮಂತನು ಮಾಡಿದಕ್ಕಿಂತಲೂ, ವರಿಷ್ಠಂ = ಶ್ರೇಷ್ಠವಾದುದು ।। 188 ।। ಏವಂ = ಹೀಗೆ, ಸುಭದ್ರಾಣಿ = ಮಂಗಳಕರಗಳಾದ, ಚ = ಮತ್ತು, ವಿವಿಧಾನಿ = ಬಗೆಬಗೆಯ, ವಾಕ್ಯಾನಿ = ಮಾತುಗಳನ್ನು, ಉಕ್ತ್ವಾ = ಹೇಳಿ, ಭಗವಾನ್ = ಪೂಜ್ಯನಾದ ಶ್ರೀನಿವಾಸನು, ಕಕ್ಷ್ಯೇ = ನಿನ್ನ ಕಂಕಳಿನಲ್ಲಿ, ಭಾನುವತ್ = ಸೂರ್ಯನಂತೆ, ಕಿಂಭಾತಿ = ಪ್ರಕಾಶಿಸುತ್ತಿರುವುದೇನು? (ಇತಿ = ಹೀಗೆ), ಪ್ರೋವಾಚ = ಕೇಳಿದನು. ।। 189 ।। ಶ್ರೀಶುಕ ಉವಾಚ = ಶ್ರೀಶುಕಾಚಾರ್ಯನು ಹೇಳಹತ್ತಿದನು. ಪುರುಷೋತ್ತಮ = ಪುರುಷೋತ್ತಮನಾದ, ಮಹಾಭಾಗ = ಮಹನೀಯನಾದ ಶ್ರೀನಿವಾಸ! ಇದು, ರಾಜರಾಜೇನ = ಆಕಾಶರಾಜನಿಂದ, ಲಿಖಿತಾ = ಬರೆಯಲ್ಪಟ್ಟ, ಪತ್ರಿಕಾ = ಲಗ್ನಪತ್ರಿಕೆಯು, ಅಸ್ಯ ಕಾರಣಂ = ಇದರ ಕಾರಣವು, ತೇ = ನಿನಗೆ, ಪೂರ್ವಮೇವ = ಹಿಂದೆಯೇ, ಪ್ರೋಕ್ತಂ ಚ = ನನ್ನಿಂದ ಹೇಳಲ್ಪಟ್ಟಿರುತ್ತದೆ. ಇತ್ಯುಕ್ತಸ್ಸನ್ = ಹೀಗೆ ಶುಕಮುನಿಯಿಂದ ಹೇಳಲ್ಪಟ್ಟವನಾಗಿ, ರಮಾಕಾಂತಃ = ಶ್ರೀನಿವಾಸನು, ಪತ್ರಿಕಾಂ = ಲಗ್ನಪತ್ರಿಕೆಯನ್ನು, ಶಿರಸಾ ದಧೌ = ಶಿರಸಾ ಧರಿಸಿದನು ।। 190–191 ।।

*ಶ್ರೀನಿವಾಸ ಉವಾಚ –*

**ಕುಶಲೀ ವರ್ತತೇ ರಾಜಾ ಭಾರ್ಯಾ ತಸ್ಯ ಪತಿವ್ರತಾ ।**
**ಭ್ರಾತಾ ತಸ್ಯ ಮಹಾಭಾಗಃ ಪುತ್ರಸ್ತಸ್ಯ ವಿಶಾಂಪತೇಃ? ।। 192 ।।**

*ಶ್ರೀಶುಕ ಉವಾಚ –*

**ಸರ್ವಂತು ಕುಶಲಂ ತಸ್ಯ ಭಗವಾನ್! ಭೂತಭಾವನ! ।। 193 ।।**

**ಏವಮುಕ್ತಃ ಪಪಾಠಾಥ ಪತ್ರಿಕಾಂ ಪುರುಷೋತ್ತಮಃ ।**
**ಪಠನ್ ಹೃಷ್ಟಮನಾ ಭೂತ್ವಾ ವಾಚಮೂಚೇ ರಮಾಪತಿಃ ।। 194 ।।**

*ಶ್ರೀನಿವಾಸ ಉವಾಚ –*

**ಪತ್ರಿಕಾ ಲಿಖ್ಯತೇ ವಿಪ್ರ ಮಯಾಽಽಕಾಶನೃಪಾಯ ಚ ।**
**ತ್ವದ್ವಚನಮನುಸೃತ್ಯೈವ ರಾಜ್ಞಃ ಪ್ರೀತಿವಿಧಾಯಕಾ ।। 195 ।।**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಿದನು – ರಾಜಾ = ಆಕಾಶರಾಜನು, ಪತಿವ್ರತಾ = ಸಾಧ್ವಿಯಾದ, ತಸ್ಯಭಾರ್ಯಾ = ಅವನ ಪತ್ನಿಯು, ತಸ್ಯ = ರಾಜನ, ಭ್ರಾತಾ = ತಮ್ಮನಾದ ತೋಂಡಮಾನನು, ವಿಶಾಂಪತೇಃ = ವೈಶ್ಯರಿಗೆ ಸ್ವಾಮಿಯಾದ, ತಸ್ಯ = ರಾಜನ, ಪುತ್ರಃ = ಮಗನಾದ ವಸುಧಾನನು, ಕುಶಲೀ ವರ್ತತೇ = ಕ್ಷೇಮದಿಂದಿದ್ದಾರೆಯೆ? ।। 192 ।। ಶುಕ ಉವಾಚ = ಶುಕಮುನಿಯು ಹೇಳಿದನು – ಭಗವಾನ್ = ಪೂಜ್ಯನಾದ, ಭೂತಭಾವನ = ಶ್ರೀನಿವಾಸ! ತಸ್ಯ = ಆಕಾಶರಾಜನ, ಸರ್ವಂ = ಸಂಬಂಧಿಸಿದವರೆಲ್ಲರೂ, ಕುಶಲಂ = ಸೌಖ್ಯದಿಂದಿರುವರು ।। 193 ।। ಏವಮುಕ್ತಃ = ಹೀಗೆ ಹೇಳಲ್ಪಟ್ಟವನಾದ, ಪುರುಷೋತ್ತಮಃ = ಶ್ರೀನಿವಾಸನು, ಅಥ = ತರುವಾಯ, ಪತ್ರಿಕಾಂ = ಆ ಲಗ್ನಪತ್ರಿಕೆಯನ್ನು,

ಪಪಾಠ = ಓದಿದನು. ರಮಾಪತಿಃ = ಲಕ್ಷ್ಮೀರಮಣನು, ಪಠನ್ = ಲಗ್ನಪತ್ರಿಕೆಯನ್ನು ಓದಿ, ಹೃಷ್ಟಮನಾಃ = ಸಂತುಷ್ಟಮನಸ್ಸುಳ್ಳವನು, ಭೂತ್ವಾ = ಆಗಿ, ವಾಚಮೂಚೇ = ಮಾತನಾಡಿದನು ॥ 194 ॥ ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಿದನು – ವಿಪ್ರ = ಶುಕಮುನಿಯೇ, ರಾಜ್ಞಃ = ರಾಜನಾದ, ಆಕಾಶನೃಪಾಯ = ಆಕಾಶರಾಜನಿಗೆ, ತ್ವದುಕ್ತಮನುಸೃತ್ಯೈವ = ನೀನು ಹೇಳಿದ್ದನ್ನು ಅನುಸರಿಸಿಯೇ, ಮಯಾ = ನನ್ನಿಂದ, ಪ್ರೀತಿವಿಧಾಯಕಾ = ಅವನಿಗೆ ಪ್ರೀತಿಯನ್ನುಂಟುಮಾಡುವ, ಪತ್ರಿಕಾ = ಲಗ್ನಪತ್ರಿಕೆಯು, ಲಿಖ್ಯತೇ = ಬರೆಯಲ್ಪಡುತ್ತದೆ. ॥ 195 ॥

**ತತಃ ಸಪತ್ರಂ ಪುರುಹೂತ ಮಿತ್ರಂ ಸ್ವಯಂ ಲಿಲೇಖಾಥ ಮಹಾರ್ಥಸಂಯುತ್ ।**
**ಅತ್ಯಂತ ಸಂಹೃಷ್ಟ ಮನಃ ಪ್ರಸೂಚಕಂ ಕೃಷ್ಣಾವತಾರೇ ಪ್ರತಿ ರುಕ್ಮಿಣೀಮಿವ ॥ 196 ॥**

**''ರಾಜಾಧಿರಾಜ ಪೂಜ್ಯಾಯ ಸುಧರ್ಮತನಯಾಯ ಚ ।**
**ನಮೋ ನಮೋಽತಿ ಭಕ್ತ್ಯೈವ ಕೃತ್ವೇಯಂ ಪತ್ರಿಕಾಧುನಾ ॥ 197 ॥**

**ಲಿಖ್ಯತೇ ಶ್ರೀನಿವಾಸೇನ ಶುಭವಿಜ್ಞಪ್ತಿಗರ್ಭಿಣೀ ।**
**ಶ್ರೀಮದ್ರಾಜಾಧಿರಾಜೇಂದ್ರ ಕಿರೀಟಾಘೃಷ್ಟಪಾದುಕ ॥ 198 ॥**

**ಅಸ್ಮದ್ಬಂಧುವರೇಣ್ಯಾಢ್ಯ ಗುಣಪೂರ್ಣಸಮೃದ್ಧಿಮನ್ ।**
**ಸುಧರ್ಮತನಯಾಽಽಕಾಶನಾಮ್ನಾಶಾಸು ಸುಕೀರ್ತಿಮನ್ ॥ 199 ॥**

**ನಮೋ ನಮೋಽಸ್ತು ತೇ ರಾಜನ್ ಶ್ರೀನಿವಾಸಸ್ಯ ಶಾರ್ಙ್ಗಿಣಃ ।**
**ಶ್ರೀನಿವಾಸೇನ ಬಾಲೇನ ವಿಜ್ಞಪ್ತಿಃ ಕ್ರಿಯತೇ ತ್ವಿಯಮ್ ॥ 200 ॥**

ತತಃ = ಅನಂತರ, ಪುರುಹೂತಮಿತ್ರಂ (ಪ್ರತಿ) = ಇಂದ್ರನ ಮಿತ್ರನಾದ ಆಕಾಶರಾಜನನ್ನು ಕುರಿತು, ಮಹಾರ್ಥಸಂಯುತ್ = ಬಹ್ವರ್ಥಗರ್ಭಿತವಾದ, ಅತ್ಯಂತಸಂಹೃಷ್ಟಮನಃಪ್ರಸೂಚಕಂ = ಅತಿಶಯವಾಗಿ ಮನಸ್ಸಿಗೆ ಸಂತೋಷವಾದುದನ್ನು ಸೂಚಿಸುವ, ಪತ್ರಂ = ಲಗ್ನಪತ್ರಿಕೆಯನ್ನು, ಅಥ = ಅನಂತರ, ಸಃ = ಶ್ರೀನಿವಾಸನು, ಕೃಷ್ಣಾವತಾರೇ = ಕೃಷ್ಣಾವತಾರ ಕಾಲದಲ್ಲಿ, ರುಕ್ಮಿಣೀಂಪ್ರತಿ (ಇವ) = ರುಕ್ಮಿಣಿಯನ್ನು ಕುರಿತು ಬರೆದಂತೆ, ಸ್ವಯಂ = ಸ್ವತಃ, ಲಿಲೇಖ = ಬರೆದನು ॥ 196 ॥ ''ರಾಜಾಧಿರಾಜಪೂಜ್ಯಾಯ = ರಾಜಾಧಿರಾಜರಿಂದ ಪೂಜಿತನಾದ, ಸುಧರ್ಮತನಯಾಯ ಚ = ಸುಧರ್ಮನ ಮಗನಾದ ಆಕಾಶರಾಜನಿಗೆ, ಅತಿಭಕ್ತ್ಯೈವ = ಅತ್ಯಂತ ಭಕ್ತಿಪೂರ್ವಕವಾಗಿ, ನಮೋ ನಮಃ = ನಮನ ವಂದನೆಗಳನ್ನು, ಕೃತ್ವಾ = ಮಾಡಿ, (ಸಮರ್ಪಿಸಿ), ಅಧುನಾ = ಈವಾಗ, ಶ್ರೀನಿವಾಸೇನ = ಶ್ರೀನಿವಾಸನಿಂದ, ಶುಭ ವಿಜ್ಞಪ್ತಿಗರ್ಭಿಣೀ = ಮಂಗಳಕರವಿಜ್ಞಾಪನೆಯಿಂದ ಕೂಡಿರುವ, ಇಯಂಪತ್ರಿಕಾ = ಈ ಲಗ್ನಪತ್ರಿಕೆಯು, ಲಿಖ್ಯತೇ = ಬರೆಯಲ್ಪಡುತ್ತದೆ. ಶ್ರೀಮದ್ರಾಜಾಧಿರಾಜೇಂದ್ರ ಕಿರೀಟಾಘೃಷ್ಟಪಾದುಕ – ಶ್ರೀಮತ್ = ಕಾಂತಿಸಂಪನ್ನರಾದ, ಸಂಪದ್ಯುಕ್ತರಾದ, ರಾಜಾಧಿರಾಜೇಂದ್ರ = ರಾಜಮಹಾರಾಜರ, ಕಿರೀಟ = ಮುಕುಟಗಳಿಂದ (ಕಿರೀಟಗಳಿಂದ), ಘೃಷ್ಟ = ಘಟ್ಟಿಸಲ್ಪಟ್ಟ (ಸ್ಪೃಷ್ಟವಾದ), ಪಾದುಕ = ಪಾದವುಳ್ಳ (ಪಾದುಕೆಯುಳ್ಳ), ಗುಣಪೂರ್ಣಸಮೃದ್ಧಿಮನ್ = ಸಂಪೂರ್ಣಗುಣಸಮೃದ್ಧಿಯುಳ್ಳ, ಆಶಾಸು = ದಿಕ್ಕು ದಿಕ್ಕುಗಳಲ್ಲಿ ಹರಡಿರುವ, ಸುಕೀರ್ತಿಮನ್ = ಸತ್ಕೀರ್ತಿಯುಳ್ಳ, ಅಸ್ಮದ್ಬಂಧುವರೇಣ್ಯಾಢ್ಯ = ನಮ್ಮ ಶ್ರೇಷ್ಠ ಬಂಧುಗಳಾಗಿ ಆಢ್ಯರಾದ, ಸುಧರ್ಮತನಯ = ಸುಧರ್ಮರಾಜನ ಮಕ್ಕಳಾದ, ಆಕಾಶನಾಮಾ = ಆಕಾಶನಾಮಕನಾದ, ರಾಜನ್ = ದೊರೆಯೇ, ಶಾರ್ಙ್ಗಿಣಃ = ಶಾರ್ಙಪಾಣಿಯಾದ, ಶ್ರೀನಿವಾಸಸ್ಯ =

ಶ್ರೀನಿವಾಸನ, ನಮೋ ನಮಃ = ನಮಸ್ಕಾರಗಳು, ತೇ = ನಿನಗೆ, ಅಸ್ತು = ಆಗಲಿ (ಇರಲಿ), ಬಾಲೇನ = ಬಾಲಕನಾದ, ಶ್ರೀನಿವಾಸೇನ = ಶ್ರೀನಿವಾಸನಿಂದ, ಇಯಂತು ವಿಜ್ಞಾಪ್ತಿಃ = ಈ ವಿಜ್ಞಾಪನೆಯು, ಕ್ರಿಯತೇ = ಮಾಡಲ್ಪಡುತ್ತದೆ ॥ 197-200 ॥

**ಭವದ್ಭಿರ್ಲಿಖಿತಂ ದೃಷ್ಟ್ವಾ ಸಂತೋಷೋಹ್ಯಭವನ್ಮಮ ।**
**ವೈಶಾಖ ಶುಕ್ಲದಶಮೀ ಭೃಗುವಾರೇ ಮಹೋತ್ಸವೇ ॥ 201 ॥**

**ಅಂಗೀಕರೋಮಿ ರಾಜೇಂದ್ರ! ಕನ್ಯಾಂ ತವ ವಿಶಾಂಪತೇ ।**
**ಯಥಾ ಪುರಾ ಸಾಗರೋ ಮೇ ಕನ್ಯಾದಾನ ಸುಕೀರ್ತಿಮಾನ್ ॥ 202 ॥**

**ತಥಾ ದತ್ವಾತು ಮೇ ಕನ್ಯಾಂ ಭವೇಸ್ತ್ವಂ ಬಹುಕೀರ್ತಿಮಾನ್ ।**
**ಯಥಾ ವೈ ಸಾಗರಾನ್ ಪೂರ್ವಾನ್ ಕಪಿಲೇನ ನಿಪಾತಿತಾನ್ ॥ 203 ॥**

**ಭಗೀರಥೋ ಮಹಾರಾಜೋ ಗಂಗಾಮಾದಾಯ ತಾನ್ ಪುರಾ ।**
**ಉದ್ಧೃತ್ಯ ಕೀರ್ತಿಮಾಪೇದೇ ತಥಾ ತ್ವಂ ರಾಜಸತ್ತಮ ॥ 204 ॥**

**ದತ್ವಾ ಮೇ ಸುಭಗಾಂ ಕನ್ಯಾಂ ತವ ಪೂರ್ವೋತ್ತರಂ ಕುಲಮ್ ।**
**ಉದ್ಧೃತ್ಯ ಬಹುಲಾಂ ಕೀರ್ತಿಂ ಲಭಸ್ವೇತರ ದುರ್ಲಭಾಮ್ ॥ 205 ॥**

ಭವದ್ಭಿಃ = ನಿಮ್ಮಿಂದ, ಲಿಖಿತಂ = ಬರೆಯಲ್ಪಟ್ಟ ಪತ್ರವನ್ನು, ದೃಷ್ಟ್ವಾ = ಅವಲೋಕಿಸಿ, ಮಮ = ನನಗೆ, ಸಂತೋಷಃ = ಹರ್ಷವು, ಅಭವತ್ = ಉಂಟಾಯಿತು, ಹಿ = ಪ್ರಸಿದ್ಧವು, ವಿಶಾಂಪತೇ = ವೈಶ್ಯರಿಗೆ ಸ್ವಾಮಿಯಾದ, ರಾಜೇಂದ್ರ = ಆಕಾಶರಾಜನೇ, ವೈಶಾಖಶುಕ್ಲದಶಮಿ ಭೃಗುವಾರೇ = ವೈಶಾಖಮಾಸದ, ಶುಕ್ಲಪಕ್ಷದ, ದಶಮಿ ತಿಥಿಯ, ಶುಕ್ರವಾರದ ದಿನ, ಮಹೋತ್ಸವೇ = ಜರುಗಲಿರುವ ಕಲ್ಯಾಣಮಹೋತ್ಸವದಲ್ಲಿ ॥ 201 ॥ ತವ = ನಿನ್ನ, ಕನ್ಯಾಂ = ಕನ್ಯೆಯಾದ ಪದ್ಮಾವತಿಯನ್ನು, ಅಂಗೀಕರೋಮಿ = ಸ್ವೀಕರಿಸುತ್ತೇನೆ. ಪುರಾ = ಪೂರ್ವದಲ್ಲಿ, ಯಥಾ = ಹೇಗೆ, ಸಾಗರಃ = ಸಮುದ್ರರಾಜನು, ಮೇ = ನನಗೆ, ಕನ್ಯಾದಾನ ಸುಕೀರ್ತಿಮಾನ್ = ಲಕ್ಷ್ಮೀದೇವಿಯನ್ನು ಮದುವೆ ಮಾಡಿಕೊಟ್ಟು ಕೀರ್ತಿಗಳಿಸಿದನೋ ॥ 202 ॥ ತಥಾ = ಅದರಂತೆಯೇ, ತ್ವಂ = ನೀನು, ಮೇ = ನನಗೆ, ಕನ್ಯಾಂ = ಪದ್ಮಾವತಿಯನ್ನು, ದತ್ವಾತು = ವಿವಾಹ ಮಾಡಿಕೊಟ್ಟು, ಬಹುಕೀರ್ತಿಮಾನ್ = ಅತಿಶಯ ಕೀರ್ತಿಯುಳ್ಳವನು, ಭವ = ಆಗು. ರಾಜಸತ್ತಮ = ರಾಜಶ್ರೇಷ್ಠನೇ, ಯಥಾ ವೈ = ಹೇಗೆ, ಕಪಿಲೇನ = ಕಪಿಲಋಷಿಯಿಂದ, ನಿಪಾತಿತಾನ್ = (ಜ್ಞಾನಕಣ್ಣಿನ ಜ್ವಾಲೆಯಿಂದ) ಭಸ್ಮವಾಗಿ ಬೀಳಿಸಲ್ಪಟ್ಟ, ಪೂರ್ವಾನ್ = ಪೂರ್ವಿಕರಾದ, ಸಾಗರಾನ್ = ಸಗರ ಚಕ್ರವರ್ತಿಯ ಅರವತ್ತು ಸಾವಿರ ಪುತ್ರರನ್ನು, ಮಹಾರಾಜೋ = ಮಹಾರಾಜನಾದ, ಭಗೀರಥಃ = ಭಗೀರಥನು, ಪುರಾ = ಹಿಂದೆ, ಗಂಗಾಂ = ಗಂಗೆಯನ್ನು, ಆದಾಯ = ಕರೆತಂದು, ತಾನ್ = ಸಗರ ಪುತ್ರರನ್ನು, ಉದ್ಧೃತ್ಯ = ಉದ್ಧರಿಸಿ, ಕೀರ್ತಿಂ = ಕೀರ್ತಿಯನ್ನು, ಆಪೇದೇ = ಪಡೆದನೋ, ತಥಾ = ಹಾಗೆಯೇ, ತ್ವಂ = ನೀನು ॥ 203-204 ॥ ಮೇ = ನನಗೆ, ಸುಭಗಾಂಕನ್ಯಾಂ = ಸುಭಗಳಾದ ಪದ್ಮಾವತಿಯನ್ನು, ದತ್ವಾ = ಕೊಟ್ಟು, ತವ = ನಿನ್ನ, ಪೂರ್ವೋತ್ತರಂಕುಲಂ = ಹಿಂದಿನ ಮುಂದಿನ ಕುಲವನ್ನು (ವಂಶಸಂಜಾತರನ್ನು), ಉದ್ಧೃತ್ಯ = ಉದ್ಧಾರಮಾಡಿ, ಇತರ ದುರ್ಲಭಾಂ = ಮತ್ತೊಬ್ಬರಿಂದ ಪಡೆಯಲಸದಳವಾದ, (ಬೇರೆಯವರಿಗೆ ದೊರಕದ), ಬಹುಲಾಂ = ಹೆಚ್ಚಾದ, ಕೀರ್ತಿಂ = ಯಶಸ್ಸನ್ನು, ಲಭಸ್ವ = ಹೊಂದುವವನಾಗು ॥ 205 ॥

**ಲಿಖಿತವ್ಯಂ ವಿಶೇಷೇಣ ಕಿಂ ತೇऽಸ್ತಿ ನೃಪಸತ್ತಮ ।**
**ವಿಶೇಷಜ್ಞೋऽಸಿ ಧರ್ಮಾತ್ಮಾ ವೇತ್ತಿ ಸರ್ವಂ ಶುಕೋಮುನಿಃ ॥ 206 ॥**

**ಇತಿ ವಿಜ್ಞಾಪನಂ ಜ್ಞೇಯಂ ಮಮ ಪ್ರಣತಿಪೂರ್ವಕಮ್ ।''**
**ಇತ್ಥಂ ಲಿಖಿತ್ವಾ ವರ ಪತ್ರಿಕಾಂ ಶುಭಾಂಶೇಷಾದ್ರಿನಾಥೋ ಮುನಿನಾ ಶುಕೇನ ॥ 207 ॥**

**ಸಂಪ್ರೇಷಯಾಮಾಸ ಸುರೇಂದ್ರ ಪೂಜ್ಯ ಪುರಂ ನೃಪೇಂದ್ರಸ್ಯ ವಿಯನ್ನೃಪಸ್ಯ ।**

*ಶ್ರೀನಿವಾಸ ಉವಾಚ -*

**ಅವಿದಿತ್ವಾ ಕುಲಂ ಗೋತ್ರಂ ನಾಮ ಸಂಸ್ಥಾನ ಮಂದಿರಮ್ ॥ 208 ॥**

**ಕಥಂ ದಾಸ್ಯತಿ ರಾಜೇಂದ್ರಃ ಕನ್ಯಾಂ ಮಮ ಮಹೀಸುರ ।**

*ಶ್ರೀಶುಕ ಉವಾಚ -*

**ನ ಕುಲಂ ನ ಚ ಗೋತ್ರಂ ತೇ ನ ಜನ್ಮ ಮರಣೇ ಹರೆ ॥ 209 ॥**

**ನ ಜರಾ ನ ಚ ವೃದ್ಧಿಶ್ಚ ನ ಚ ಸ್ಥಾನಂ ನ ಚಾಶ್ರಯಃ ।**
**ವಿಡಂಬಮಾತ್ರಂ ಗೋವಿಂದ ಕುರುಷೇ ಪುರುಷೋತ್ತಮ ॥ 210 ॥**

ನೃಪಸತ್ತಮ = ಎಲೈ ನೃಪೋತ್ತಮ! ವಿಶೇಷಜ್ಞೋऽಸಿ = ವಿಶೇಷವಾಗಿ ಎಲ್ಲವನ್ನು ತಿಳಿದವನಾಗಿದ್ದೀಯೆ? ತೇ = ನಿನಗೆ, ವಿಶೇಷೇಣ = ಹೆಚ್ಚಾಗಿ, ಲಿಖಿತವ್ಯಂ = ಬರೆಯಬೇಕಾದುದು, ಕಿಮಸ್ತಿ = ಏನಿದೆ? ಧರ್ಮಾತ್ಮಾ = ಧರ್ಮಾತ್ಮನಾದ, ಶುಕೋ ಮುನಿಃ = ಶುಕಮುನಿಯು, ಸರ್ವಂ = ನನ್ನ ಎಲ್ಲಾ ಸಮಾಚಾರಗಳನ್ನು (ನನ್ನ ಅಭಿಪ್ರಾಯವನ್ನು), ವೇತ್ತಿ = ತಿಳಿದಿದ್ದಾನೆ ॥ 206 ॥ ಇತಿ = ಹೀಗೆ, ಮಮ = ನನ್ನ, ಪ್ರಣತಿಪೂರ್ವಕಂ = ಪ್ರಣಾಮಪೂರ್ವಕವಾದ, ವಿಜ್ಞಾಪನಂ = ವಿಜ್ಞಾಪನೆಯು, ಜ್ಞೇಯಂ = ತಿಳಿಯಲ್ಪಡಬೇಕು.'' ಸುರೇಂದ್ರಪೂಜ್ಯಃ = ಇಂದ್ರನಿಂದ ಆರಾಧ್ಯನಾದ, ಶೇಷಾದ್ರಿನಾಥಃ = ಶೇಷಾಚಲಕ್ಕೆ ಸ್ವಾಮಿಯಾದ ಶ್ರೀನಿವಾಸನು, ಇತ್ಥಂ = ಇಂತು, ಶುಭಾಂ = ಮಂಗಳಕರವಾದ, ಪತ್ರಿಕಾಂ = ಲಗ್ನಪತ್ರಿಕೆಯನ್ನು, ಲಿಖಿತ್ವಾ = ಬರೆದು, ನೃಪೇಂದ್ರಸ್ಯ = ರಾಜಾಧಿರಾಜನಾದ, ವಿಯನ್ನೃಪಸ್ಯ = ಆಕಾಶರಾಜನ, ಪುರಂ (ಪ್ರತಿ) = ಪಟ್ಟಣವನ್ನು ಕುರಿತು, ಶುಕೇನ ಮುನಿನಾ = ಶುಕಮುನಿಯ ಮೂಲಕ, ಸಂಪ್ರೇಷಯಾಮಾಸ = ಕಳುಹಿಸಿದನು. (ಕಪಟನಾಟಕಸೂತ್ರಧಾರನಾದ ಶ್ರೀಹರಿಯು, ಲಗ್ನನಿಶ್ಚಯವಾಗಿ ತಾನೂ ಕನ್ಯಾಸ್ವೀಕಾರಮಾಡುವುದಾಗಿ ಅಭಯವಿತ್ತು ಆಕಾಶರಾಜನಿಗೆ ಲಗ್ನಪತ್ರಿಕೆಯನ್ನು ಬರೆದುಕೊಟ್ಟಮೇಲೂ ಸಹ, ವಿಡಂಬನ ಮಾಡುತ್ತಾ ಲೀಲಾವಿಲಾಸವನ್ನು ತೋರುತ್ತಿದ್ದಾನೆ!!) ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳುತ್ತಿದ್ದಾನೆ - ಮಹೀಸುರ = ಎಲೈ ಭೂಸುರನಾದ ಶುಕಮುನಿಯೇ, ರಾಜೇಂದ್ರಃ = ಆಕಾಶರಾಜನು, ಮಮ = ನನ್ನ, ಕುಲಂ = ವಂಶವನ್ನೂ, ಗೋತ್ರಂ = ಗೋತ್ರವನ್ನೂ, ಸಂಸ್ಥಾನಮಂದಿರಂ = ರಾಜ್ಯಕೋಶ ಮನೆ ಮುಂತಾದವನ್ನು ॥ 207-208 ॥ ಅವಿದಿತ್ವಾ = ತಿಳಿಯದಲೇ, ಕನ್ಯಾಂ = ತನ್ನ ಮಗಳನ್ನು, (ಮೇ = ನನಗೆ), ಕಥಂ = ಹೇಗೆ, ದಾಸ್ಯತಿ = ಕೊಡುತ್ತಾನೆ? ಶ್ರೀಶುಕ ಉವಾಚ = ಶ್ರೀಶುಕಮುನಿಯು ಮಾತನಾಡಿದನು. ಹರೇ = ಶ್ರೀನಿವಾಸ! ತೇ = ನಿನಗೆ, ಕುಲಂ ನ = ಕುಲವಿಲ್ಲ, ಗೋತ್ರಂ ನ = ಗೋತ್ರವಿಲ್ಲ, ಜನ್ಮಮರಣೇ = ಹುಟ್ಟುಸಾವುಗಳೂ, ನ = ಇಲ್ಲ

II 209 II ಜರಾ ನ = ವೃದ್ಧಾಪ್ಯವಿಲ್ಲ, ಚ = ಮತ್ತು ವೃದ್ಧಿಶ್ಚ = ವೃದ್ಧಿಯಾಗಲೀ, ನ = ಇಲ್ಲವು, ಚ = ಮತ್ತು, ಸ್ಥಾನಂ = ಸ್ಥಾನವು, ನ = ಇಲ್ಲ, ಆಶ್ರಯವೂ, (ನೀನೇ ಸರ್ವರಿಗೂ ಆಶ್ರಯನಾಗಿರುವುದರಿಂದ ನಿನಗೆ ಆಶ್ರಯವೆಂಬುದು) ನ = ಇಲ್ಲ, ಪುರುಷೋತ್ತಮ = ಎಲೈ ಪುರಾಣಪುರುಷೋತ್ತಮನಾದ, ಗೋವಿಂದ = ಶ್ರೀವಿಷ್ಣುವೇ! ವಿಡಂಬ ಮಾತ್ರಂ = ವಿಡಂಬನೆಯನ್ನು ಮಾತ್ರ, ಕುರುಷೇ = ಮಾಡುತ್ತಿರುವೆ II 210 II

**ನ ತೇಽಪೇಕ್ಷ್ಯಂ (ನ ಚಾಪೇಕ್ಷ್ಯಂ) ಕುಲಂ ಗೋತ್ರಂ ವಿದಿತಸ್ಯ ಜಗತ್ಪತೇ ।**
**ಮಮ ವಾಕ್ಯಾದ್ವಿಯದ್ರಾಜಃ ಕನ್ಯಾಂ ತೇ ಸಂಪ್ರದಾಸ್ಯತಿ II 211 II**

**ಮಮ ವಾಕ್ಯಾಜ್ಜಗನ್ನಾಥ ದಯಾಂ ಕೃತ್ವಾ ವಿಯನ್ನೃಪೇ ।**
**ಇಯಂ ಚ ಕನ್ಯಾ ಗೋವಿಂದ ಸ್ವೀಕಾರ್ಯಾ ಕೃಪಯಾ ತ್ವಯಾ II 212 II**

**ಇತಿ ಸ್ತುತ್ವಾ ಶುಕಸ್ತೀವ್ರಂ ವಿಸೃಷ್ಟೋ ಹರಿಣಾ ಪುನಃ ।**
**ಹರಿಸಂದರ್ಶನಾಲ್ಲಬ್ಧಹರ್ಷೋ ರಾಜಪುರಂ ಯಯೌ II 213 II**

**ಗತೇ ತು ಮುನಿಶಾರ್ದೂಲೇ ಭಗವಾನ್ ಭಕ್ತವತ್ಸಲಃ ।**
**ಮಾತರಂ ಸಂದದರ್ಶಾಥ ಮಾರ್ಗಶ್ರಾಂತಾಂ ವಯೋಗತಾಮ್ II 214 II**

**ಬಕುಲಾಂ ಪ್ರಣಿಪತ್ಯಾಥ ಮಾಧವೋ ವಾಕ್ಯಮಬ್ರವೀತ್ II 215 II**

ವಿದಿತಸ್ಯ = ಅಖಂಡ ಬ್ರಹ್ಮಾಂಡದಲ್ಲಿ ವೇದಾದಿಶಾಸ್ತ್ರಗಳಿಂದ ವೇದ್ಯನೂ, ವಿಖ್ಯಾತನೂ ಆದ, ಜಗತ್ಪತೇ = ಸಮಸ್ತ ಜಗತ್ತಿಗೇ ಪ್ರಭುವಾದ, ತೇ = ನಿನಗೆ, ಕುಲಂ ಗೋತ್ರಂ = ಕುಲ-ಗೋತ್ರಗಳು, ನಾಪೇಕ್ಷ್ಯಂ = ಅಪೇಕ್ಷಣೀಯವಲ್ಲ! (ನಚಾಪೇಕ್ಷ್ಯಂ = ಅಪೇಕ್ಷಿಸುವವೇ ಅಲ್ಲವು). ವಿಯದ್ರಾಜಃ = ಆಕಾಶರಾಜನು, ಮಮ = ನನ್ನ, ವಾಕ್ಯಾತ್ = ಮಾತಿನಿಂದ, ತೇ = ನಿನಗೆ, ಕನ್ಯಾಂ = ಮಗಳನ್ನು, ಸಂಪ್ರದಾಸ್ಯತಿ = ಕೊಡುತ್ತಾನೆ II 211 II ಜಗನ್ನಾಥ = ಜಗತ್ಪ್ರಭುವೇ, ಮಮ = ನನ್ನ, ವಾಕ್ಯಾತ್ = ಮಾತಿನಿಂದ, (ನನ್ನ ಮಾತನ್ನು ಮನ್ನಿಸಿ), ವಿಯನ್ನೃಪೇ = ಆಕಾಶರಾಜನಲ್ಲಿ, ದಯಾಂ ಕೃತ್ವಾ = ಕಾರುಣ್ಯಬೀರಿ, ಗೋವಿಂದ = ಶ್ರೀಹರಿಯೇ, ತ್ವಯಾ = ನಿನ್ನಿಂದ, ಇಯಂ ಚ ಕನ್ಯಾ = ಕನ್ಯೆಯಾದ ಪದ್ಮಾವತಿಯು, ದಯಯಾ = ದಯೆಯಿಂದ, ಸ್ವೀಕಾರ್ಯಾ = ಅಂಗೀಕರಿಸಲ್ಪಡಬೇಕು II 212 II ಇತಿ = ಇಂತು, ಸ್ತುತ್ವಾ = ಸ್ತೋತ್ರಮಾಡಿ, ಶುಕಃ = ಶುಕಮುನಿಯು, ಹರಿಣಾ = ಶ್ರೀನಿವಾಸನಿಂದ, ವಿಸೃಷ್ಟಃ = ಬಿಡಲ್ಪಟ್ಟವನಾಗಿ (ಬೀಳ್ಕೊಂಡು), ಪುನಃ = ಮತ್ತೆ, ಹರಿದರ್ಶನಾಲ್ಲಬ್ಧಹರ್ಷಃ = ವಿಷ್ಣುವಿನ ದರ್ಶನದಿಂದ ಉಂಟಾದ ಸಂತೋಷವುಳ್ಳವನಾಗಿ, ತೀವ್ರಂ = ಬೇಗನೆ, ರಾಜಪುರಂ (ಪ್ರತಿ) = ರಾಜಧಾನಿಯಾದ ನಾರಾಯಣಪುರವನ್ನು ಕುರಿತು, ಯಯೌ = ಹೋದರು II 213 II ಮುನಿಶಾರ್ದೂಲೇ = ಮುನಿವರ್ಯನಾದ ಶುಕಾಚಾರ್ಯನು, ಗತೇ ತು = ಹೊರಟಮೇಲೆ, ಭಕ್ತವತ್ಸಲಃ = ಭಕ್ತರಲ್ಲಿ ವಾತ್ಸಲ್ಯವುಳ್ಳ, ಭಗವಾನ್ = ಪೂಜ್ಯನಾದ ಶ್ರೀಹರಿಯು, ಅಥ = ಆನಂತರ, ಮಾರ್ಗಶ್ರಾಂತಾಂ = ಮಾರ್ಗಾಯಾಸದಿಂದ ಬಳಲಿದ, ವಯೋಗತಾಂ = ವೃದ್ಧಳಾದ, ಮಾತರಂ = ತಾಯಿಯಾದ ಬಕುಳೆಯನ್ನು, ಸಂದದರ್ಶ = ನೋಡಿದನು II 214 II ಅಥ = ತರುವಾಯ, ಮಾಧವಃ = ಶ್ರೀಹರಿಯು, ಬಕುಲಾಂ = ಬಕುಳಾದೇವಿಯನ್ನು, ಪ್ರಣಿಪತ್ಯ = ನಮಸ್ಕರಿಸಿ, ವಾಕ್ಯಮಬ್ರವೀತ್ = ಮಾತನಾಡಿದನು II 215 II

*ಶ್ರೀನಿವಾಸ ಉವಾಚ -*

**ಅಂಬ ಕಾಲವಿಲಂಬಸ್ತೇ ಕಿಮರ್ಥಂ ಕಮಲಾನನೆ ।**
**ಕಾ ತತ್ರ ವಾರ್ತಾ ನಗರೇ ತನ್ಮಮಾಚಕ್ಷ್ವ ಭಾಮಿನಿ** **॥ 216 ॥**

*ಬಕುಲೋವಾಚ-*

**ಸಾಧಿತಾ ಬಹುಯತ್ನೇನ ಕನ್ಯಾ ತೇ ಪುರುಷೋತ್ತಮ ।**
**ದೈವಮೇವ ಪರಂ ಮನ್ಯೇ ಪೌರುಷಂ ನೈವ ಕಾರಣಮ್** **॥ 217 ॥**

**ನಾರಾಯಣಾಶ್ರಮಾತ್ ಕೃಷ್ಣ! ಧರ್ಮದೇವೀ ಸಮಾಗತಾ ।**
**ದೈವಯೋಗೇನ ಸಾ ಭದ್ರಾ ಸಂಪ್ರಾಪ್ತಾ ರಾಜಮಂದಿರಮ್** **॥ 218 ॥**

**ಉವಾಚ ತಾಂ ಭವದ್ದಾನಯೋಗ್ಯಾಂ ಕನ್ಯಾಂ ನೃಪಾತ್ಮಜಾಮ್ ।**
**ಕನ್ಯಾಪಿ ತ್ವದೃತಾನ್ಯಂ ಸಾ ನೈವ ಕಾಂಕ್ಷತಿ ಲೌಕಿಕಮ್** **॥ 219 ॥**

**ತಯೋರ್ವಾಕ್ಯಂ ಸಮಾಕರ್ಣ್ಯ ದಾತುಂ ತೇ ಸೋಽನ್ವಮನ್ಯತ ।**
**ಇಮಾಂ ದಾಸ್ಯಾಮಹೇ ಪುತ್ರೀಂ ವೇಂಕಟಾದ್ರಿನಿವಾಸಿನೇ** **॥ 220 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಿದನು - ಕಮಲಾನನೇ = ಕಮಲಮುಖಿಯಾದ, ಅಂಬ = ತಾಯಿಯೇ, ತೇ = ನಿನಗೆ, ಕಾಲವಿಲಂಬಃ = ಬರಲು ತಡವು, ಕಿಮರ್ಥಂ = ಏಕಾಯಿತು? ಭಾಮಿನಿ = ಬಕುಳಾ ದೇವಿ, ತತ್ರ ನಗರೇ = ಆ ರಾಜಧಾನಿಯಾದ, ನಾರಾಯಣಪುರೇ = ನಾರಾಯಣಪುರಗಳಲ್ಲಿ, ವಾರ್ತಾ ಕಾ = ಸಮಾಚಾರವೇನು? ತತ್ = ಆ ಸಮಾಚಾರವನ್ನು, ಮಮ = ನನಗೆ, ಆಚಕ್ಷ್ವ = ಹೇಳುವವಳಾಗು ॥ 216 ॥ ಬಕುಲೋವಾಚ = ಬಕುಳಾದೇವಿಯು ಹೇಳಹತ್ತಿದಳು - ಪುರುಷೋತ್ತಮ = ಎಲೈ ಪುರುಷೋತ್ತಮನೇ, ಬಹುಯತ್ನೇನ = ಬಹಳ ಪ್ರಯತ್ನದಿಂದ, ತೇ = ನಿನಗೆ, ಕನ್ಯಾ = ಪದ್ಮಾವತಿಯು, ಸಾಧಿತಾ = ಸಾಧಿಸಲ್ಪಟ್ಟಳು. ದೈವಮೇವ = ದೈವೇಚ್ಛೆಯೇ, ಪರಂ = ಹೆಚ್ಚಿನದು (ಶ್ರೇಷ್ಠವಾದುದು) ಎಂದು, ಮನ್ಯೇ = ತಿಳಿಯುತ್ತೇನೆ. ಪೌರುಷಂ = ಪುರುಷಪ್ರಯತ್ನವು, ನೈವಕಾರಣಂ = ಕಾರ್ಯಸಾಧನೆಗೆ ಕಾರಣವಲ್ಲ! ॥ 217 ॥ ಕೃಷ್ಣ = ಶ್ರೀಕೃಷ್ಣ! ನಾರಾಯಣಾಶ್ರಮಾತ್ = ನಾರಾಯಣಾಶ್ರಮದಿಂದ (ಬದರಿಯಿಂದ), ಧರ್ಮದೇವಿ = ಧರ್ಮದೇವಿಯು, ಸಮಾಗತಾ = ಬಂದಳು, ಸಾ ಭದ್ರಾ = ಆ ಮಂಗಲಕರಳು, ದೈವಯೋಗೇನ = ದೈವೇಚ್ಛೆಯಿಂದ, ರಾಜಮಂದಿರಂ = ರಾಜಭವನವನ್ನು ಕುರಿತು, ಸಂಪ್ರಾಪ್ತಾ = ಬರುವವಳಾದಳು ॥ 218 ॥ ತಾಂ (ಪ್ರತಿ) = ಧರಣೀದೇವಿಯನ್ನು ಕುರಿತು, ನೃಪಾತ್ಮಜಾಂ = ದೊರೆಯ ಮಗಳಾದ ಪದ್ಮಾವತಿಯನ್ನು, ಭವದ್ದಾನಯೋಗ್ಯಾಂ = ನಿನಗೆ ಮದುವೆಮಾಡಿಕೊಡುವುದು ಯೋಗ್ಯವೆಂದು, ಉವಾಚ = ಹೇಳಿದಳು. ಸಾ ಕನ್ಯಾಪಿ = ಆ ಪದ್ಮಾವತಿಯೂ ಸಹ, ತ್ವದೃತಾದನ್ಯಂ = ನಿನ್ನನ್ನು ಬಿಟ್ಟು ಮತ್ತೊಬ್ಬರನ್ನು, ಅಂದರೆ, ಲೌಕಿಕಂ = ಲೌಕಿಕನಾದ ಪುರುಷನನ್ನು, ನೈವ ಕಾಂಕ್ಷತಿ = ಅಪೇಕ್ಷಿಸುವುದಿಲ್ಲ ॥ 219 ॥ ತಯೋಃ = ಧರ್ಮದೇವೀ - ಪದ್ಮಾವತಿಯರ, ವಾಕ್ಯಂ = ಮಾತನ್ನು, ಸಮಾಕರ್ಣ್ಯ = ಕೇಳಿ, ಸಃ = ಆಕಾಶರಾಜನು, ತೇ = ನಿನಗೆ, ದಾತುಂ = ಮಗಳನ್ನು ಕೊಡಲು, ಅನ್ವಮನ್ಯತ = ಒಪ್ಪಿದನು. ಇಮಾಂಪುತ್ರೀ = ನನ್ನೀ ಮಗಳನ್ನು ಪದ್ಮಾವತಿಯನ್ನು, ವೇಂಕಟಾದ್ರಿನಿವಾಸಿನೇ = ವೇಂಕಟಾಚಲವಾಸಿಯಾದ ಶ್ರೀನಿವಾಸನಿಗೆ, ದಾಸ್ಯಾಮಹೇ = ಕೊಡುತ್ತೇವೆ ॥ 220 ॥ ಇತ್ಥ = ಈ ಪ್ರಕಾರವಾಗಿ

**ಇತ್ಥಂ ಸಂಕಲ್ಪಯಾಮಾಸ ಸಭಾಮಧ್ಯೇ ಮುದಾ ನೃಪಃ ।**
**ತ್ವಯ್ಯೈವ ಜಾತಮೇತದ್ಧಿ ನ ದೈವಂ ಭವತಃ ಪರಮ್ ॥ 221 ॥**

***ಇತಿ ಮಾತೃವಚಃ +ಶ್ರುತ್ವಾ ಕಿಂಚಿದ್ಧಾಸ್ಯಮುಖೋ ಹರಿಃ ।**
**ಮಾತರಂ ಪ್ರತಿನಂದ್ಯಾಥ ಚಿಂತಯನ್ ವಾಕ್ಯಮಬ್ರವೀತ್ ॥ 222 ॥**

ನೃಪಃ = ಆಕಾಶರಾಜನು, ಸಭಾಮಧ್ಯೇ = ರಾಜಸಭೆಯ ಮಧ್ಯದಲ್ಲಿ, ಮುದಾ = ಸಂತೋಷದಿಂದ, ಸಂಕಲ್ಪಯಾಮಾಸ = ಸಂಕಲ್ಪ ಮಾಡಿದನು. ಭವತಃ ಪರಃ = ನಿನ್ನನ್ನು ಬಿಟ್ಟು ಬೇರೊಬ್ಬ, ದೈವಂ ನ = ದೇವನಿಲ್ಲ ; ಏತದ್ಧಿ = ಇವೆಲ್ಲವೂ, ತ್ವಯ್ಯೈವ = ನಿನ್ನಿಂದಲೇ, ಜಾತಂ = ಉಂಟಾಯಿತು ॥ 221 ॥

(ಬಕುಲಾ = ಬಕುಳಮಾಲಿಕೆಯು, ಇತ್ಯೇವಂ = ಹೀಗೆಂದು, ದೇವಂ = ಭಗವಂತನನ್ನು ಕುರಿತು, ಉಕ್ತ್ವಾ = ಹೇಳಿ; ಮಹೋತ್ಸವಂ = ಶ್ರೀನಿವಾಸನ ಕಲ್ಯಾಣ ಮಹೋತ್ಸವವನ್ನು, ಕದಾ ಪಶ್ಯೇ = ಯಾವಾಗ ನೋಡುವೆನೋ (ಇತಿ = ಹೀಗೆ) ಆನಂದ ನಿರ್ಭರಾ = ಸಂತೋಷಭರಿತಳಾದ, ಸಾ = ಆ ಬಕುಳಾದೇವಿಯು, ಆತ್ಮಾನಂ = ತನ್ನನ್ನು, (ತನ್ನ ಜನ್ಮವು), ಕೃತಾರ್ಥಂ = ಕೃತಕೃತ್ಯವಾಯಿತೆಂದು, ಮೇನೇ = ತಿಳಿದಳು ॥

ಇತಿ = ಹೀಗೆ, ಮಾತೃವಚಃ = ತಾಯಿಯ ನುಡಿಯನ್ನು (ಪಾ - ಸ ಮಾತೃ ವಚನಂ - ಸಃ = ಶ್ರೀನಿವಾಸನು, ಮಾತೃವಚನಂ, ತಾಯಿಯ ಮಾತನ್ನು,) ಶ್ರುತ್ವಾ = ಕೇಳಿ, ಕಿಂಚಿತ್ = ಸ್ವಲ್ಪ, ಹಾಸ್ಯಮುಖಃ = ಮಂದಹಾಸ ವದನನಾದ, ಹರಿಃ = ಶ್ರೀನಿವಾಸನು, ಅಥ = ಆ ತರುವಾಯ, ಮಾತರಂ = ತಾಯಿಯನ್ನು, ಪ್ರತಿನಂದ್ಯ = ಸಂಭಾವಿಸಿ, ಚಿಂತಯನ್ = ಆಲೋಚಿಸುತ್ತಾ, ವಾಕ್ಯಮಬ್ರವೀತ್ = ಮಾತನಾಡಿದನು ॥ 222 ॥

## ಕಥಾಸಾರ

ನೈಮಿಷಾರಣ್ಯದಲ್ಲಿ ಸೂತರು ಶೌನಕಾದಿಗಳನ್ನು ಕುರಿತು ಹೇಳಿದ ಶ್ರೀವೇಂಕಟೇಶಮಹಾತ್ಮ್ಯೆಯನ್ನು ಶತಾನಂದ ಮುನಿಗಳು ಜನಕಮಹಾರಾಜನಿಗೆ ವಿಸ್ತಾರವಾಗಿ ನಿರೂಪಿಸುತ್ತಾ ಈಗ ಮುಂದಿನ ಕಥಾಭಾಗವನ್ನು ಹೇಳಲಾರಂಭಿಸಿದರು.

ಶತಾನಂದ:- ಜನಕಮಹಾರಾಜ, ಶ್ರೀನಿವಾಸನು ಕೊರವಂಜಿಯ ವೇಷಧರಿಸಿ ಧರ್ಮದೇವಿಯೆಂಬ ಹೆಸರಿನಿಂದ ನಾರಾಯಣಪುರಿಗೆ ಬಂದು ಧರಣಿದೇವಿಗೆ ಕಣಿಹೇಳಲಾರಂಭಿಸಿದ್ದು ಸರಿಯಷ್ಟೇ? ಆ ಧರ್ಮದೇವಿಯು ಈಗ ಮಹಾರಾಣಿಗೆ ಕಣಿಯನ್ನು ಹೇಳಲಾರಂಭಿಸಿದಳು. ಭೋಜನವನ್ನು ಮಾಡಿದ ಮೇಲೆ ಕೊರವಂಜಿಯು ತನ್ನ ಕುಲಪರಂಪರೆಯಿಂದ ಪೂಜಿತರಾದ ದೇವತೆಗಳನ್ನು ಧ್ಯಾನಿಸಲಾರಂಭಿಸಿದಳು. ಅವಳು ಮೊದಲು ಶ್ರೀಮನ್ನಾರಾಯಣನನ್ನೂ ಅನಂತರ ಶ್ರೀ ಲಕ್ಷ್ಮೀದೇವಿಯನ್ನೂ ತರುವಾಯ ಕ್ರಮವಾಗಿ ಬ್ರಹ್ಮ, ಸರಸ್ವತಿ, ರುದ್ರ, ಪಾರ್ವತಿ, ಇಂದ್ರರನ್ನು ಸ್ಮರಿಸಿದಳು. *(ಪಾ:- ಗರುಡ, ಆದಿಶೇಷ, ವರಾಹ, ಚಂಡಿಕೇಶ್ವರನನ್ನು ಧ್ಯಾನಿಸಿ)*, ಇಂದ್ರಾಣಿ, ಅಗ್ನಿ, ಯಮಾದಿಗಳು, ಸಪತ್ನೀಕರಾದ ಅಷ್ಟದಿಕ್ಪಾಲಕರು, ಕುಬೇರ, ವಾಯು, ವರುಣ, ವಾಸುಕೀ, ದೇವರ್ಷಿ ನಾರದರು, ಪಿತೃದೇವತೆಗಳು, ಗಂಧರ್ವರು, ನಳ,

---

* ಬೇರೆ ಗ್ರಂಥಪ್ರತಿಯಲ್ಲಿರುವ ಹೆಚ್ಚಿನ ಶ್ಲೋಕ -
ಇತ್ಯೇವಮುಕ್ತ್ವಾ ಸಾ ದೇವಂ ಬಕುಲಾಽಽನಂದ ನಿರ್ಭರಾ ।
ಮೇನೇ ಕೃತಾರ್ಥಮಾತ್ಮಾನಂ ಕದಾ ಪಶ್ಯೇ ಮಹೋತ್ಸವಮ್ ॥

\+ ಪಾಃ - ಸಮಾತೃವಚನಂ

ಮಾಂಧಾತಾದಿ ರಾಜಶ್ರೇಷ್ಠರುಗಳನ್ನೂ, ಧ್ಯಾನಮಾಡಿದಳು, ಅನಂತರ ಕಾಶಿಯ ವಿಶ್ವನಾಥ ಮತ್ತು ಬಿಂದುಮಾಧವ, ಗಯಾ ಕ್ಷೇತ್ರದಲ್ಲಿರುವ ಶ್ರೀವಿಷ್ಣುಪಾದ, ವಿಂಧ್ಯವಾಸಿನಿಯಾದ, ಶ್ರೀ ಕೃಷ್ಣಸಹೋದರಿ ದುರ್ಗಾದೇವಿ, ಪ್ರಯಾಗಕ್ಷೇತ್ರ, ಅಂದರೆ ಅಲ್ಲಿರುವ ಗಂಗಾ-ಯಮುನಾ-ಸರಸ್ವತೀ ತ್ರಿವೇಣಿ ಸಂಗಮವನ್ನೂ, ಗೋದಾವರೀ ತೀರದಲ್ಲಿರುವ ಶ್ರೀರಾಮಚಂದ್ರ, ತ್ರಯ್ಯಂಬಕೇಶ್ವರ, ಗುಂಜಾನಾರಸಿಂಹ, ಜಗನ್ನಾಥಸ್ವಾಮಿಯನ್ನೂ, ಪಂಢರಪುರದ ಶ್ರೀಪಾಂಡುರಂಗ, ಪಂಪಾಪತಿಯಾದ ವಿರೂಪಾಕ್ಷ, ಪುಣ್ಯಾರಣ್ಯಶೋಭಿತವಾದ ಶ್ರೀಶೈಲದಲ್ಲಿರುವ ಮಲ್ಲಿಕಾರ್ಜುನ ಮತ್ತು ಭ್ರಮರಾಂಬೆಯರನ್ನೂ ಧ್ಯಾನಿಸಿದಳು.

ಆ ತರುವಾಯ ಕೊರವಂಜಿಯು, ವೇದಪ್ರತಿಪಾದ್ಯಮಹಿಮನೂ, ವೇಂಕಟಗಿರಿಯಾಧೀಶನೂ ಆದ ಶ್ರೀವರಾಹ ಸ್ವಾಮಿ (ಶ್ರೀನಿವಾಸ), ಇವರನ್ನು ಧ್ಯಾನ ಮಾಡಿದಳು, ತದನಂತರ ಕಾಳಹಸ್ತೀಶ್ವರ ಘಟಿಕಾಚಲದಲ್ಲಿರುವ ಚತುರ್ಭುಜ ಮೂರ್ತಿ ಶ್ರೀಆಂಜನೇಯ, ವೃದ್ಧಾಚಲದ ಶ್ರೀವಿಷ್ಣು, ಮತ್ತು ರುದ್ರರನ್ನೂ, ಸರ್ವಲೋಕಗಳಿಗೆ ಸ್ವಾಮಿಯಾದ ಶ್ರೀವರದರಾಜ, ಶ್ರೀರಂಗನಾಥ, ಕುಂಭಕೋಣದ ಕುಂಭೇಶ್ವರ, ಸಾರಂಗಪಾಣಿ, ಚಕ್ರಪಾಣಿಗಳನ್ನೂ, ಮಧುರೆಯ ಶ್ರೀಕೃಷ್ಣನನ್ನೂ ಧ್ಯಾನ ಮಾಡಿದಳು.

ಜನಕಮಹಾರಾಜ, ನಂತರ ರಾಮಸೇತು, ರಾಮೇಶ್ವರ, ದರ್ಭಶಯನ ರಾಮಚಂದ್ರ, ಪರ್ವತವರ್ಧಿನಿ, ಅನಂತಶಯನದ ಅನಂತಪದ್ಮನಾಭ, ಸುಬ್ರಹ್ಮಣ್ಯ, ಕುಮಾರಧಾರೆಯ ಬಳಿ ಇರುವ ಕುಮಾರಸ್ವಾಮಿಯನ್ನೂ ಮತ್ತು ಮಧುಸೂದನ ಶಂಕರರನ್ನೂ, ಚಂದ್ರೇಶ್ವರ, ಗೋಕರ್ಣದ ರುದ್ರದೇವ, ತುಂಗಾತೀರದಲ್ಲಿರುವ ಹರಿಹರೇಶ್ವರರನ್ನೂ ಧ್ಯಾನಿಸಿದಳು, ಅನಂತರ ಅಂತರಗಂಗೆ, ಆಕಾಶಗಂಗೆ (ವಿಯದ್ಗಂಗೆ), ಪಾತಾಳ ಗಂಗೆಯರನ್ನೂ, ಸಪ್ತರ್ಷಿಗಳ ಹೆಸರಿನಿಂದ ಏಳು ಭಾಗವಾಗಿ ಹರಿಯುತ್ತಿರುವ ಗೋದಾವರಿ ನದಿಯನ್ನೂ, ಕೃಷ್ಣವೇಣಿ, ಪಾಪನಾಶಿನಿ, ತುಂಗಭದ್ರಾ ಮತ್ತು ಕಾವೇರಿ, ಕಪಿಲಾ, ಕ್ಷೀರವೇಣೀ ಮತ್ತು ಕ್ಷೀರಾವತಿ, ಸುವರ್ಣಮುಖರೀ ನದಿಗಳನ್ನೂ, ಅದರಂತೆ ಮೂಕಾಂಬಿಕಾ, ಕಾಲಭೈರವ, ಕಂಚಿಯ ಕಾಮಾಕ್ಷೀ, ಕಾಶಿಯ ವಿಶಾಲಾಕ್ಷೀ, ಹಿಮಾಲಯದಲ್ಲಿರುವ ವರದಾಯಕಳಾದ ಕಮಲಾಕ್ಷೀ ಇವರುಗಳನ್ನು ಕೊರವಂಜಿಯು ಸ್ಮರಣೆ ಮಾಡಿ ಅನಂತರದಲ್ಲಿ ಕೊಲ್ಲಾಪುರದಲ್ಲಿರುವ ಕೊಲ್ಲಾಪುರಕ್ಕೆ ಸ್ವಾಮಿನಿಯಾದ ಹೇ ಲಕ್ಷ್ಮೀದೇವಿ! ಪರದೇಶದಲ್ಲಿರುವ ನನ್ನನ್ನು ಕಾಪಾಡು ಎಂದು ಭಕ್ತಿ ಶ್ರದ್ಧೆಗಳಿಂದ ಧ್ಯಾನಿಸಿ ಸುಮಧುರ ಧ್ವನಿಯಿಂದ ಇಂತು ನುಡಿದಳು.

ಧರ್ಮದೇವಿ:- ಧರಣೀದೇವಿ ನಾನು ವಿಸ್ತಾರವಾಗಿ ಹೇಳುವುದನ್ನು ಆಲಿಸು. ಕಣಿಯನ್ನು ಹೇಳುವ ಈ ಬುಟ್ಟಿ ನನ್ನ ಈ ಪುತ್ರ ಇವರ ಮೇಲೆ ಆಣೆಯಿಡುತ್ತೇನೆ, ಬದರಿಯಲ್ಲಿರುವ ನನ್ನ ಪತಿ, ತಂದೆ ತಾಯಿ, ಗುರು ಹಾಗೂ ನನ್ನ ಮೇಲೂ ಸಹ ಆಣೆ ಇಟ್ಟು ಹೇಳುತ್ತೇನೆ. ಕೇಳು ಮಹಾರಾಣಿ ನಾನು ಹೇಳುವುದೆಲ್ಲವೂ ಸತ್ಯವೆಂದು ತಿಳಿ. ದೇವಿ ನನಗೆ ತಾಂಬೂಲವನ್ನು ಕೊಡು ಅದು ಹೇಗಿರಬೇಕು ಗೊತ್ತೇ? ಏಲಕ್ಕಿ, ಲವಂಗ, ಪಚ್ಚಕರ್ಪೂರ, ಜಾಕಾಯಿ, ಅಡಿಕೆ, ವಿಳ್ಯೇದೆಲೆಗಳಿಂದ ಕೂಡಿರಬೇಕು ಇಂತಹ ತಾಂಬೂಲವನ್ನು ನನಗೆ ದಯಪಾಲಿಸು.

ಧರಣೀದೇವಿ (ಅದರಂತೆ ತಾಂಬೂಲವನ್ನಿತ್ತು) ಪ್ರಾಜ್ಞಳಾದ ಧರ್ಮದೇವಿ! ನನ್ನ ಸಕಲ ದುಃಖ ಪರಿಹಾರಕ್ಕಾಗಿ ಸತ್ಯವನ್ನೇ ನುಡಿಯಮ್ಮ. ನೋಡಿಲ್ಲಿ ನಿನಗಾಗಿ ಈ ಮರದಲ್ಲಿ ಮೂರು ರಾಶಿ ಮುತ್ತುಗಳನ್ನಿಟ್ಟಿರುವೆನು ಸತ್ಯವನ್ನು ನುಡಿ.

ಇಂತು ಧರಣಿದೇವಿಯ ಮಾತನಾಲಿಸಿ ಭಾಗೀರಥಿಯ ಪಿತನಾದ ಕೊರವಂಜಿಯ ವೇಷದ ಶ್ರೀನಿವಾಸನು ನುಡಿದನು. ಮತ್ತು ಪ್ರಿಯಕರಳಾದ ಪದ್ಮಾವತಿಯ ಪ್ರೀತಿಗೆ ಕಾರಣವಾದ ಅಂದರೆ ಪದ್ಮಾವತಿಗೆ ಹಿತಕರವಾದ ಶ್ರೇಷ್ಠವಾದ ಕಣಿ ಹೇಳುವ ಕೈಗೋಲವನ್ನು ಕರದಲ್ಲಿ ಹಿಡಿದು ಹೇಳಹತ್ತಿದಳು.

ಧರ್ಮದೇವಿ:- ಮಂಗಳಾಂಗಿ, ನಿನ್ನ ಕುವರಿಯ ಅಂಗಶೋಷಣೆಗೆ ಕಾರಣವನ್ನು ಹೇಳುವೆನು ಕೇಳು, ರಾಜನರಸಿ, ಮನ್ಮಥನಿಗೆ ಸಮಾನವಾದ ರೂಪಲಾವಣ್ಯಮಂಡಿತನಾದ ಪುರುಷನೊಬ್ಬನು ಪದ್ಮಾವತಿಯು ಇರುವಲ್ಲಿಗೆ ಬಂದ ವಿಚಾರವನ್ನು ವಿಶದವಾಗಿ ವಿವರಿಸುವೆನು ಚಿತ್ತೈಸು, ನೆನ್ನೆಯ ದಿನ ಪದ್ಮಾವತಿಯು ಇದ್ದ ಪುಷ್ಪೋದ್ಯಾನಕ್ಕೆ ಶ್ರೇಷ್ಠಕುದುರೆಯನ್ನೇರಿದ ಪುರುಷನೋರ್ವನು ಬಂದನು. ಅವನನ್ನು ಕಂಡು ನಿನ್ನ ಮಗಳು ಮೋಹಪರವಶಳಾದಳು. ಆದರಿಂದಲೇ ನಿನ್ನ ಕುಮಾರಿಗೀಗ ದೇಹಶೋಷಣೆಯಾಗಿದೆ. ಮನ್ಮಥಾಕಾರನಾದ ಆ ಸುರಸುರಾಂಗನನ್ನು ನೋಡಿ ಮೋಹಿತಳಾದ ಪದ್ಮಾವತಿಯು ಕಾಮಜ್ವರಪೀಡಿತಳಾಗಿದ್ದಾಳೆ. ಅಂತೆಯೇ ಅವಳಿಗೆ ಅಂಗಶೋಷಣೆ ಅರಸಿ! ಅದು ಪರಿಹಾರವಾಗಬೇಕಾಗಿದ್ದಲ್ಲಿ, ನಿನ್ನ ಮಗಳಾದ ಪದ್ಮಾವತಿಯನ್ನು ಆ ನವಮೋಹನಾಂಗನಿಗೆ ಮದುವೆ ಮಾಡಿಕೊಡಬೇಕು, ಅದೊಂದೇ ಇದಕ್ಕೆ ಪರಿಹಾರ ಮಾರ್ಗ ಬೇರೆ ದಾರಿಯಿಲ್ಲ.

ಕೊರವಂಜಿಯ ಮಾತು ಕೇಳಿ ಧರಣಿದೇವಿಯು ''ಅಮ್ಮಾ ಕೊರವಂಜಿ, ನನ್ನ ಕುಮಾರಿಯ ದೇಹಶೋಷಣೆಗೆ ಕಾರಣನಾದ ಆ ಕಿರಾತರೂಪಿ ಪುರುಷನು ಎಲ್ಲಿರುವನು? ಅವನ ಹೆಸರೇನು ಹೇಳು. ನೀನು ಅಪೇಕ್ಷಿಸುವ ಕೊಡುಗೆಯನ್ನು ನೀಡುತ್ತೇನೆ'' ಎನಲು ಧರ್ಮದೇವಿಯು ಹೇಳಲಾರಂಭಿಸಿದಳು :-

ಧರ್ಮದೇವಿ:- ಮಹಾರಾಣಿ, ಆತನು ಸಾಮಾನ್ಯನಲ್ಲ ಸಾಕ್ಷಾತ್ ಶ್ರೀವೈಕುಂಠಪತಿಯಾದ ವಾಸುದೇವನೇ ವೇಂಕಟ- ಗಿರಿಯಲ್ಲಿದ್ದಾನೆ. ಅಲ್ಲಿ ವಾಸಿಸುವ ಅವನು ಶ್ರೀನಿವಾಸನೆಂದು ಪ್ರಖ್ಯಾತನಾಗಿದ್ದಾನೆ. ಆತನು ಬಹುಮೇಧಾವಿ, ಬುದ್ಧಿವಂತ, ಶ್ರೀಮಂತ ಹಾಗೂ ಪ್ರಬಲಪರಾಕ್ರಮಿ. ನಿನ್ನ ಕುವರಿಯು ಅವನ ಹಯವನ್ನು ಕೊಂದಳು, ಆ ಕುದುರೆಯು ಪುಷ್ಪೋದ್ಯಾನದ ಬಾಗಿಲಿನಲ್ಲಿ ಬಿದ್ದು ಮೃತವಾಯಿತು. ಬೇಕಾದರೆ ಇದನ್ನು ಪದ್ಮಾವತಿಯ ಸಖಿಯರನ್ನು ಪ್ರಶ್ನಿಸಿ ಮನವರಿಕೆ ಮಾಡಿಕೋ. ಮಹಾನುಭಾವನಾದ ಆ ಪುರುಷನು ಕುದುರೆಯನ್ನು ಸಂಹರಿಸಿ ದೊಡ್ಡ ಅಪರಾಧ ಮಾಡಿದ ನಿನ್ನ ಮಗಳ ಈ ಕಾರ್ಯವನ್ನು ಸಹಿಸಿ ಉದಾರ ಹೃದಯದಿಂದ ಕ್ಷಮಿಸಿದ್ದಾನೆ. ನೀನೀಗ ನಿನ್ನ ಮಗಳನ್ನು ಆತನಿಗೇ ನೀಡಿದಲ್ಲಿ ಪದ್ಮಾವತಿಯು ಸುಖಿಯಾಗುವಳು. ನನ್ನ ನುಡಿಯು ಸುಳ್ಳಾಗಲಾರದು. ನಾನು ಹೇಳಿದಂತೆ ನೀನು ಮಾಡದಿದ್ದರೆ. ಈ ಒಂದು ದಿನದಲ್ಲಿಯೇ ಪದ್ಮಾವತಿಯು ಮರಣವನ್ನಪ್ಪುವಳು. ಇದರಲ್ಲಿ ಸಂದೇಹವಿಲ್ಲ.

ಅಮಂಗಳಕರ ನುಡಿಯನಾಲಿಸಿ ನಿಡುಸುಯಿದು ಸ್ವಲ್ಪ ವ್ಯಥೆಗೊಂಡು ಕಲ್ಯಾಣಿ! ನನಗೆ ದುಃಖಾಸ್ಪದ ವಚನವನ್ನು ನುಡಿಯುತ್ತಿರುವೆಯಲ್ಲ! ಎಂದಾಗ ಧರ್ಮದೇವಿಯು ''ಮಹಿಷಿ, ನನ್ನ ಮಾತು ಮಿಥ್ಯೆಯಲ್ಲ. ಈ ವಿಷಯವನ್ನು ಮೊದಲೇ ನಾನು ನಿನಗೆ ತಿಳಿಸಿರುವೆನು'' ಎಂದಳು. ಆಗ ರಾಣಿಯು ಅವಳ ನುಡಿಯಿಂದ ಭಯಗೊಂಡು ಇಂತೆಂದಳು.

ಧರಣಿ :- ಅಮ್ಮಾ, ಕನ್ಯೆಯನ್ನು ಕೇಳದಲೇ ನಾನು ಹೇಗೆ ಕನ್ಯಾದಾನ ಮಾಡಲಿ ಹೇಳಮ್ಮ.

ಧರ್ಮದೇವಿ :- ರಾಣಿ ಕೇಳು. ಇನ್ನೊಂದು ಘಳಿಗೆಯಲ್ಲಿಯೇ ಧರ್ಮಾರ್ಥ ಮುಂತಾದ ಪುರುಷಾರ್ಥಗಳಲ್ಲಿ ಚತುರಳಾದ ಬಹುವೃದ್ಧಳಾದ ಸ್ತ್ರೀಯೋರ್ವಳು ಇಲ್ಲಿಗೆ ಕನ್ಯೆಯನ್ನು ಕೇಳಲು ಬರುವಳು. ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು ನಿನ್ನ ಪತಿಗೆ ವಿಚಾರವನ್ನು ತಿಳಿಸಿ ಕಾರ್ಯೋನ್ಮುಖನಾಗುವಂತೆ ಜಾಗೃತಗೊಳಿಸು. ಆಕಾಶರಾಜನ ಅನುಜನಾದ ತೋಂಡಮಾನರಾಜ ಮತ್ತು ಬಂಧುಮಿತ್ರರಿಗೂ ಇದನ್ನು ಅರುಹು. ಎಲೈ ರಾಜನರಸಿ! ನೀನೀಗ ಸಾಧುಮಾರ್ಗವನ್ನು ಆಶ್ರಯಿಸು. ಈಗ ನನ್ನೆದುರು ಕನ್ಯಾದಾನ ಮಾಡುವುದಾಗಿ ಸಂಕಲ್ಪ ಮಾಡು. ಆದರಿಂದ ನಿಮಗೆ ಶ್ರೇಯಸ್ಸಾಗುವುದು.

ಧರಣಿ :- ಏನಾದರಾಗಲಿ, ನನ್ನ ಕುಮಾರಿಯು ಬದುಕಿದರೆ ಸಾಕು, ಧರ್ಮದೇವಿ! ನೀನು ಹೇಳಿದಂತೆ ಈ ಗಿರಿಗಹ್ವರವಾಸಿಯಾದ ಶ್ರೀನಿವಾಸನಿಗೆ ಪದ್ಮಾವತಿಯನ್ನು ನೀಡಿ ಮದುವೆ ಮಾಡಿಸುವೆನು. ಇದು ಸತ್ಯ.

ಧರ್ಮದೇವಿ :- ಮಹಾರಾಣಿ, ನೀನಿಂತು ವರ್ತಿಸಿದೆಯಾದರೆ ನಿನ್ನ ಕುಮಾರಿಯು ಜೀವಿಸುವಳು. ಇದರಲ್ಲಿ ಸಂಶಯವಿಲ್ಲ ದೇವಿ, ನಾನಿನ್ನು ನನ್ನ ಪತಿಯ ಬಳಿಗೆ ತೆರಳುವೆನು. ನಿನಗೆ ಶುಭವಾಗಲಿ.

ಧರ್ಮದೇವಿಯು ಇಂತು ನುಡಿದು ಧರಣಿದೇವಿಯಿಂದ ಬೀಳ್ಕೊಂಡು ನಾರಾಯಣಪುರದಿಂದ ಹೊರನಡೆದಳು. ಜನಕಮಹಾರಾಜ, ಧರ್ಮದೇವಿಯು ಬಿದಿರಿನ ಬುಟ್ಟಿಯಲ್ಲಿ ಬಂಗಾರದಮರ, ಮುತ್ತುರತ್ನಗಳನ್ನಿಟ್ಟು ಮಗನನ್ನೂ ಕೂಡಿಸಿ, ವಸ್ತ್ರದಿಂದ ಅದನ್ನು ಹೆಗಲಿಗೆ ಬಿಗಿದು ಉತ್ತರಾಭಿಮುಖವಾಗಿ ಪ್ರಯಾಣ ಬೆಳೆಸಿದಳು. ಕೊರವಂಜಿಯು ನಿಷ್ಕ್ರಮಿಸಿದ ಮೇಲೆ ರಾಣಿಯು ದುಃಖಿತಳಾಗಿ ಕಣ್ಣೀರು ಸುರಿಸುತ್ತಾ ಕನ್ಯಾಂತಃಪುರಕ್ಕೇ ನಡೆತಂದು ಕುಮಾರಿಯನ್ನು ಅವಲೋಕಿಸಿ ಇಂತೆಂದಳು.

ಧರಣಿ :- ಮಂಗಳಕರಳಾದ ಪದ್ಮಾವತಿ, ನಿನ್ನ ಮನೋಗತವೇನು ಹೇಳು. ನನಗೆ ಹೇಳಲೇಕೆ ಹಿಂಜರಿಯುತ್ತಿರುವೆ? ತಾಯಿಗೆ ಸಮರಾದ ಮಿತ್ರರು ಬೇರೊಬ್ಬರಿಲ್ಲ. ಮಾಡುವುದು ಅಥವಾ ಮಾಡಬಾರದ್ದು ಅದೇನಿದ್ದರೂ ನನಗೆ ತಿಳಿಸು. ನಿನ್ನ ಮನೋಭೀಷ್ಟವನ್ನು ಪೂರೈಸುವೆನು. ವ್ಯರ್ಥವಾಗಿ ಏಕಿಂತು ದೇಹಶೋಷಣ ಮಾಡಿಕೊಳ್ಳುತ್ತಿರುವೆ. ಅದರಿಂದ ಫಲವೇನಮ್ಮ, ಮಹಾರಾಣಿಯಾಗಿದ್ದರೂ ನಾನೆಂತಹ ನಿರ್ಭಾಗ್ಯಳು. ನಿನ್ನ ಮನದಿಚ್ಛೆಯನ್ನು ತಿಳಿಸದಿದ್ದರೆ ನಾನು ವಿಷಪಾನ ಮಾಡುತ್ತೇನೆ.

ಆಗ ದುಃಖಿತಳೂ ದೀನಳೂ ಆದ ಪದ್ಮಾವತಿಯು ರೋದಿಸುತ್ತ ವ್ಯಥೆಗೊಂಡ ಜನನಿಯನ್ನು ನೋಡಿ ತನ್ನ ಮನದಲ್ಲಿರುವುದನ್ನು ಮೆಲ್ಲನೆ ಹೇಳಲಾರಂಭಿಸಿದಳು.

ಪದ್ಮಾವತಿ :- ಜನನಿ! ನಾನೇನು ಹೇಳಲಿ? ಪ್ರಸವವೇದನೆಯಾಗುತ್ತಿದೆಯೆನ್ನಲೇ? ಅಥವಾ ಪುತ್ರನುದಯಿಸಿದನೆಂದು ಹೇಳಲೇ? ಕೇಳಮ್ಮಾ, ಮುಚ್ಚುಮರೆ ಮಾಡುವಂತಹ, ಮಾಡಬಾರದ ಅಂಥಾ ಕಾರ್ಯವೇನೂ ಜರುಗಿಲ್ಲ. ನನ್ನ ಮಾನಸಿಕ ಅಭಿಪ್ರಾಯವನ್ನು ನಾನಾಗಿ ನಿರೂಪಿಸಲು ಅಶಕ್ತಳಾಗಿದ್ದೇನೆ. ಆದರೂ ನೀನು ತಾಯಿಯಾಗಿರುವುದರಿಂದ ಹೇಳುವೆನು ಕೇಳು. ತಾಯಿ! ನಿನ್ನೆಯದಿನ ನಾನು ನಿನ್ನ ಅನುಮತಿ ಪಡೆದು ಹೂ ತರಲು ಸಖಿಯರೊಡನೆ ಉದ್ಯಾನವನಕ್ಕೆ ತೆರಳಿದೆನಷ್ಟೇ? ನಾವು ಪುಷ್ಪಾವಚಯನಮಾಡುತ್ತಿರುವಾಗ ಅಲ್ಲಿಗೆ ಪುರಾಣಪುರುಷೋತ್ತಮನೂ, ಅನಾದಿನಿತ್ಯನೂ ಆದ, ಪರಮಪುರುಷನಾದ ಸಾಕ್ಷಾತ್ ಶ್ರೀಹರಿಯು ಬಂದನು. ಕಮಲದಳಾಯತಾಕ್ಷನಾದ ಆ ದೇವನ ಸುಂದರವದನಾರವಿಂದವನ್ನು ಕಂಡೆನು. ಆ ಸುರಸುಂದರಮುಖವೇ ನನ್ನ ಚಿತ್ತಭಿತ್ತಿಯಲ್ಲಿ ನೆಲೆನಿಂತುಬಿಟ್ಟಿದೆ. ಅದನ್ನೇ ನಾನು ಧ್ಯಾನಿಸುತ್ತಿದ್ದೇನೆ. ಅವನ ಹೊರತು ನಾನು ಜೀವಿಸಿರಲಾರೆ. ಇದು ಸತ್ಯವೆಂದು ತಿಳಿ. ಆ ಮಹನೀಯನಾದ ಶ್ರೀಕೃಷ್ಣನ ಚರಿತೆಯನ್ನು ದೇವತೆಗಳು ಮತ್ತು ಜ್ಞಾನಿಗಳು ತಿಳಿದಿರುವರು. ಪಾಪಾಶ್ರಯರಾದ ಹುಲುಮಾನವರು ಶ್ರೀಹರಿಪರಮಾತ್ಮನ ಉತ್ಕೃಷ್ಟ ಮಹಿಮಾತಿಶಯವನ್ನು ಖಂಡಿತ ತಿಳಿಯಲಾರರು. ಅವನು ಸಾಮಾನ್ಯನಲ್ಲ. ಅವನು ಸಕಲದೇವತಾಸಾರ್ವಭೌಮನಾದ ಸಾಕ್ಷಾತ್ ಪುರುಷೋತ್ತಮನು. ಇದು ದಿಟ. ಅವನ ಬಲಕರದಲ್ಲಿ ವರ ಸುದರ್ಶನ ಚಕ್ರವು ರಾರಾಜಿಸುತ್ತಿದೆ. ಎಡಕರದಲ್ಲಿ ಚಂದ್ರನಂತೆ ಕಾಂತಿಯುಕ್ತವಾದ ಶಂಖವು ಬೆಡಗುಗೊಂಡಿದೆ. ಅವನ ಕಂಠದಲ್ಲಿ ಕೌಸ್ತುಭಮಣಿಯೂ, ಕರ್ಣಗಳಲ್ಲಿ ಮಕರಕುಂಡಲಗಳೂ ಶೋಭಿಸುವುವು. ಹಿಂದೆ ಶ್ರೀಹರಿಯ ಚಕ್ರದ ಪ್ರಭಾವದಿಂದ ಕಾಶೀಪಟ್ಟಣವು ಭಸ್ಮವಾಯಿತು. ಯಾವ ಶ್ರೀವಾಸುದೇವನ ಶಾರ್ಙಧನುಸ್ಸಿನ ಠೇಂಕಾರ ಧ್ವನಿ (ಪಾಂಚಜನ್ಯದ ಮಹಾಧ್ವನಿಯನ್ನು) ಕೇಳಿ ದೈತ್ಯ-ದಾನವ-ರಾಕ್ಷಸಾದಿಗಳು ದಿಕ್ಕು ದಿಕ್ಕುಗಳಿಗೆ ಓಡಿಹೋಗುವರೋ, ಅಂತಹ ಮಹನೀಯನ ಸುಂದರ ವದನವು ನನ್ನ ಮನದಲ್ಲಿ ಅಚ್ಚಳಿಯದೇ ನಿಂತು ಬಿಟ್ಟಿದೆಯಮ್ಮಾ. ಅದನ್ನೇ ನಾನು ಸ್ಮರಿಸುತ್ತಿರುವೆನು.

ಜನನಿ! ಇನ್ನು ಶ್ರೀಹರಿಯ ಭಕ್ತರ ಲಕ್ಷಣವನ್ನು ಹೇಳುವೆನು ಆಲಿಸು. ಯಾರು ವೇದಶಾಸ್ತ್ರಾದಿಗಳಲ್ಲಿ ಆಸಕ್ತರೋ ಧರ್ಮಸಂಪಾದಕ ನಿಯಮದಲ್ಲಿ ಶ್ರದ್ಧಾವಂತರಾಗಿರುವರೋ, ವೇದೋದಿತ ಸತ್ಕರ್ಮಾಚರಣರತರಾರೋ, ಅಂತಹ

ಶ್ರೀವಿಷ್ಣುನಿಷ್ಠರಾದವರನ್ನು ಶ್ರೀಹರಿಭಕ್ತರೆಂದು ತಿಳಿ. ಯಾರು ತಮ್ಮ ಭುಜಗಳಲ್ಲಿ ತಪ್ತಮುದ್ರಾಂಕಿತರಾಗಿ ಚಕ್ರಶಂಖಚಿನ್ಹೆಗಳನ್ನು ಧಾರಣಮಾಡಿರುವರೋ, ಊರ್ಧ್ವಪುಂಡ್ರಧಾರಿಗಳಾರೋ, ಯಾರು ಎಂದಿಗೂ ಸುಳ್ಳು ನುಡಿಯುವುದಿಲ್ಲವೋ, ತಂದೆ ತಾಯಿಯರ ಸೇವಾರೂಪವ್ರತದಲ್ಲಿ ಯಾರು ಅಭಿವೃದ್ಧಿಸುತ್ತಿರುವರೋ, ಅಂಥವರು ಶ್ರೀಹರಿಭಕ್ತರು. ಇವು ಶ್ರೀಹರಿಭಕ್ತರ ಲಕ್ಷಣವು. ಇಂತಹ ಶ್ರೀಹರಿಯನ್ನು ಬಿಟ್ಟು ಯಾರು ತಾನೇ ಜೀವಿಸಲಿಚ್ಛಿಸುವರು.

ಪದ್ಮಾವತಿಯ ನುಡಿಗಳನ್ನಾಲಿಸಿ ಧರಣಿದೇವಿಯು ಆನಂದಾಶ್ಚರ್ಯಚಕಿತಳಾದಳು. ತನ್ನ ಸಂದೇಹನಿವೃತ್ತಿಗಾಗಿ ಮಗಳನ್ನು ಕುರಿತು ''ಕುಮಾರಿ, ಇದು ನಿನ್ನ ಭ್ರಮೆಯೋ ಅಥವಾ ಜ್ವರದತಾಪದಿಂದ ಹೀಗೆ ಬಡಬಡಿಸುತ್ತಿರುವೆಯೋ? ಸತ್ಯವಾಗಿ ಹೇಳಮ್ಮ!'' ಎಂದಳು. ಆಗ ಪದ್ಮಾವತಿಯು ಜನನಿ, ನಾನು ಸತ್ಯವನ್ನೇ ಹೇಳುತ್ತಿರುವೆನು. ಆ ಮಹಾನುಭಾವನನ್ನು ನಾನು ಕಣ್ಣಾರೆ ಕಂಡೆನು. ಪುನಃ ಅವನ ದರ್ಶನಾಕಾಂಕ್ಷೆಯಿಂದ ನನಗೀಗ ದೇಹಶೋಷಣೆಯಾಗಿದೆ, ಎಂದರುಹಿದಳು. (ಶತಾನಂದ ಋಷಿಗಳು ಜನಕಮಹಾರಾಜನಿಗೆ ಹೇಳುತ್ತಿದ್ದಾರೆ).

ಶತಾನಂದ :- ಮಹಾರಾಜ! ಧರಣಿದೇವಿಯು ಶುಭಕರಳಾದ ಪದ್ಮಾವತಿಯನ್ನು ಸಮಾಧಾನಗೊಳಿಸಿ ಪರಮಾನಂದಭರಿತಳಾಗಿ ಪಾಕ ನಿರ್ವಹನೆಗಾಗಿ ಪತಿಯ ಅರಮನೆಗೆ ಆಗಮಿಸಿದಳು. ಮಗಳ ಅಂಗಶೋಷಣೆಯಿಂದ ಕ್ಷುಬ್ಧನಾಗಿ ಅನ್ನ ನೀರುಗಳನ್ನು ತ್ಯಜಿಸಿ ಕೊರಗುತ್ತಿರುವ ಪತಿಯನ್ನು ಕಂಡು ರಾಣಿಯು ಪತಿಗೆ ಮಗಳ ವ್ಯಥೆಯ ಕಾರಣವನ್ನೂ ಧರ್ಮದೇವಿಯು ಹೇಳಿದ ವೃತ್ತಾಂತವನ್ನೂ ನಿರೂಪಿಸಿ ಕುಮಾರಿಯ ಸಂಕಟಪರಿಹಾರವಾಗಬೇಕಾದರೆ ಏನು ಮಾಡಬೇಕೆಂಬುದನ್ನೂ ಮತ್ತು ಪದ್ಮಾವತಿಯ ಮನೋಕಾಮನೆಯನ್ನೂ ವಿವರವಾಗಿ ನಿರೂಪಿಸಿದಳು.

ಅದೇ ಸಮಯಕ್ಕೆ ಸರಿಯಾಗಿ ಬಕುಳಮಾಲಿಕೆಯೊಡನೆ ಅರಮನೆಯ ಕನ್ಯೆಯರು ಅಗಸ್ತ್ಯೇಶ್ವರನಿಗೆ ರುದ್ರಾಭಿಷೇಕವನ್ನು ನೆರವೇರಿಸಿ ಬ್ರಾಹ್ಮಣರಿಂದೊಡಗೂಡಿ, ದೇವರ ಪ್ರಸಾದವನ್ನು ತಲೆಯಮೇಲಿರಿಸಿಕೊಂಡು ಪುರೋಹಿತರಿಂದ ಯುಕ್ತರಾದ ಭೂಸುರರೊಡನೆ ರಾಣೀವಾಸಕ್ಕೆ ಬಂದು ಸೇರಿದರು. ಆಕಾಶರಾಜನು ಎಲ್ಲ ಬ್ರಾಹ್ಮಣರನ್ನೂ ಗಂಧ, ಹೂವು, ಮಂತ್ರಾಕ್ಷತೆಗಳಿಂದಲೂ, ವಸ್ತ್ರಾಭರಣ, ದಕ್ಷಿಣೆಗಳಿಂದಲೂ, ಶಾಸ್ತ್ರೋಕ್ತಪ್ರಕಾರವಾಗಿ ಪೂಜಿಸಿ, ಭೂಸುರರು ಹೇಳುವ ಆಶೀರ್ವಾದ ಮಂತ್ರಗಳಿಂದ ಮಗಳಿಗೆ ಪ್ರೋಕ್ಷಣ ಮಾಡಿ, ಭೂಸುರರಿಗೆ ಭೋಜನ ಮಾಡಿಸಿ, ಆ ತರುವಾಯ ರಾಜನು ಭೂಸುರರ ಅಪ್ಪಣೆ ಪಡೆದು ಭೋಜನ ಮಾಡಿದನು. ಧರಣಿಯೂ ಭೋಜನವನ್ನು ಮುಗಿಸಿ ಹೊರಬಂದಳು.

ಜನಕ ಮಹಾರಾಜ! ಧರಣೀದೇವಿಯು ನೂತನ ರೂಪರಂಜಿತಳಾದ ಬಕುಳಾದೇವಿಯನ್ನು ನೋಡಿದಳು. ಆಗ ರಾಣಿಗೆ ಧರ್ಮದೇವಿಯು ಹೇಳಿದ ಮಾತು ನೆನಪಿಗೆ ಬಂದಿತು. ಹರ್ಷಗೊಂಡು ಬಕುಳಾದೇವಿಯ ಬಳಿಗೆ ಬಂದು, ರಾಣಿಯು ಸಖಿಯರನ್ನು ಕುರಿತು ''ಸಖಿಯರೇ, ಈ ದೇವಿಯು ಯಾರು? ಅವಳು ಬಂದಿರುವ ಕಾರಣವೇನು? ಇವಳನ್ನು ನೋಡಿದರೆ ಪೂಜಾರ್ಹಳಂತೆ ಕಾಣುವಳು'' ಎಂದಳು. ಆಗ ರಾಣಿಯ ಆಜ್ಞಾಕಾರಕಳಾದ ಓರ್ವಕನ್ಯೆಯು ''ದೇವಿ, ಶೇಷಗಿರಿಯಲ್ಲಿ ವಾಸಮಾಡುತ್ತಿದ್ದೇನೆ. ವೇಂಕಟಾಚಲಕ್ಕೆ ಸ್ವಾಮಿಯಾದ ಶ್ರೀನಿವಾಸನು ನನ್ನ ಪ್ರಭುವಾಗಿದ್ದಾನೆ. ರಾಣಿಯ ಬಳಿ ಅವಶ್ಯವಾದ ಕಾರ್ಯವಿದೆ ನಿಮ್ಮೊಡನೆ ನಾನೂ ಬರುವೆನೆಂದು ಹೇಳಿದಳು. ರಾಣಿ ಅದಕ್ಕಾಗಿ ಇವಳನ್ನು ಜೊತೆಗೆ ಕರೆತಂದಿದ್ದೇವೆ. ಅವಳು ಬಂದ ಕಾರಣವನ್ನು ನೀನೇ ಕೇಳಿ ತಿಳಿದುಕೋ'' ಎಂದು ಹೇಳಿದಳು.

ಆಗ ಧರಣೀದೇವಿಯು ಸಖಿಯ ಮಾತನ್ನು ಅನುಮೋದಿಸಿ ಬಕುಳೆಯನ್ನು ಕುರಿತು 'ಮಂಗಳಾಂಗಿ, ಈ ರತ್ನಪೀಠದಲ್ಲಿ ಕುಳಿತುಕೋ' ಎಂದು ಹೇಳಿದಳು ಮತ್ತು ಬಕುಳಾದೇವಿಯನ್ನು ಭದ್ರಪೀಠದಲ್ಲಿ ಕೂಡಿಸಿ ತನ್ನ ಜನ್ಮ ಸಫಲವಾಯಿತು ಕೃತಾರ್ಥಳಾದೆ ಎಂದು ಹಿಗ್ಗಿ ದೇವಮಾತೆಯನ್ನು ಕುರಿತು ಇಂತೆಂದಳು.

ಧರಣಿ :- ಮಹಾನುಭಾವಳೇ, ನಿನಗೆ ಸ್ವಾಗತವು. ನೀನು ಬಂದುದು ನಮ್ಮ ಪುಣ್ಯಕ್ಕೇ ಕಾರಣವಾಗಿದೆ. ಸಜ್ಜನಳಾದ ನಿನ್ನ ಸಂಗಮದಿಂದ ನಾನು ಕೃತಕೃತ್ಯಳಾದೆ. ತಾಯಿ, ನೀನು ಬಂದ ಉದ್ದೇಶವೇನು? ನನ್ನಿಂದ ನಿನಗೇನಾಗಬೇಕು? ತಿಳಿಸು. ನಿನ್ನ ಕಾರ್ಯವನ್ನು ನೆರವೇರಿಸಿಕೊಡುತ್ತೇನೆ.

ರಾಣಿಯ ನುಡಿಕೇಳಿ ಬಕುಳೆಯು 'ದೇವಿ, ಕನ್ಯಾಪೇಕ್ಷೆಯು ಮುಖ್ಯಕಾರಣವಾಗಿದೆ. ಇನ್ನು ಬೇರೆ ನೂರು ಕಾರ್ಯಗಳಿಂದೇನು ಪ್ರಯೋಜನ' ಎಂದಳು. ಮುಖ್ಯಕಾರ್ಯವನ್ನು ಅರಿತು ಧರಣಿಯು ಹೀಗೆಂದಳು.

ಧರಣಿ :- ಸಂತೋಷ. ಸಾಧುವಿಚಾರವನ್ನು ಹೇಳಿದೆ. ನಮಗೂ ವರನು ಬೇಕಾಗಿದ್ದಾನೆ. ನೀನು ಹೇಳಿದ ವರನಾರು? ಅವನ ದೇಶವಾವುದು? ಗೋತ್ರ-ನಕ್ಷತ್ರಗಳೇನು? ಅವನ ತಾಯಿ, ತಂದೆ ಯಾರು? ವಂಶವಾವುದು? ಅವನು ಯಾವ ವರ್ಣಕ್ಕೆ ಸೇರಿದವನು ಅವನ ಆಚಾರ ವ್ಯವಹಾರಗಳೇನು?.

ಬಕುಳೆ :- ಮಹಾರಾಣಿ, ವರನ ಗೋತ್ರ-ನಕ್ಷತ್ರ-ಬಾಂಧವ್ಯಾದಿಗಳನ್ನು ನಿರೂಪಿಸುವೆನು ಕೇಳು. ಶ್ರೀನಿವಾಸನ ತಾಯಿ ದೇವಕಿಯು, ಶೂರನಂದನನಾದ ವಸುದೇವನು ತಂದೆಯು. ಅವನದು ಚಂದ್ರವಂಶ. ಹೆಸರು ಕೃಷ್ಣನೆಂದು. ವಸಿಷ್ಠ ಋಷಿಗಳ ಗೋತ್ರದಲ್ಲಿ ಅವನು ಜನಿಸಿದ್ದಾನೆ. ನಕ್ಷತ್ರ ಶ್ರವಣ, ವೇಂಕಟಾಚಲವು ಅವನ ವಾಸಸ್ಥಳ. ಶ್ರೀನಿವಾಸನು ಅತಿಬುದ್ಧಿಶಾಲಿ, ಸಿರಿವಂತ, ಮಹಾಪರಾಕ್ರಮಿ, ಬಹುವಿಧ ಆಚಾರಶೀಲನು. ಇಪ್ಪತ್ತೈದುವರ್ಷ ವಯಸ್ಸಿನ ತರುಣನು. ಇದೀಗ ಅವನು ಮದುವೆಯಾಗಲು ಸರಿಯಾದ ಸಮಯ. ನಿನ್ನ ಕುಮಾರಿಯನ್ನು ಅವನಿಗೆ ಕೊಟ್ಟೆಯಾದರೆ ಅವಳು ಸುಖಿಯಾಗುವಳು. ಹೆಚ್ಚು ಹೇಳುವುದೇನಿದೆ. ರಾಣಿ, ಅವನ ದರ್ಶನದಿಂದ ನಿನಗೆ ಸಂತೋಷವಾಗುವುದು.

ಧರಣಿ :- (ಆನಂದದಿಂದ), ಮಂಗಳಾಂಗಿ! ನಿನ್ನ ಮಾತನ್ನು ಕೇಳಿ ನನಗೊಂದು ಸಂದೇಹ ಉಂಟಾಗಿದೆ. ನೀನು ಹೇಳಿದಂತೆ ಶ್ರೀನಿವಾಸನು ಭಾಗ್ಯವಂತ, ಸತ್ಕುಲ ಪ್ರಸೂತನಾಗಿರುವನು. ಪ್ರಜ್ಞಾಶಾಲಿಯೂ, ತರುಣನೂ, ಪರಾಕ್ರಮಿಯೂ, ವಾಗ್ಮಿಯೂ ಆಗಿದ್ದಾನೆ ; ಹೀಗಿದ್ದೂ ಇಷ್ಟು ದಿನವಾದರೂ ಅವನಿಗೆ ವಿವಾಹವೇಕೆ ಮಾಡಿಲ್ಲ?

ಧರಣಿಯ ವಚನವನ್ನಾಲಿಸಿ ಬಕುಳಾದೇವಿಯು ಮನಸ್ಸಿನಲ್ಲಿ ''ಹೀಗೆ ಹೇಳಬೇಕು'' ಎಂದು ನಿಶ್ಚಯಿಸಿ, ಧೈರ್ಯವಾಗಿ ಹೇಳಿದಳು.

ಬಕುಳೆ :- ಧರಣೀದೇವಿ! ಭಾಗೀರಥಿಯ ಜನಕನಾದ ನಮ್ಮ ಶ್ರೀನಿವಾಸನಿಗೆ ಬಾಲ್ಯದಲ್ಲಿಯೇ ವಿವಾಹ ಮಾಡಿದ್ದೆವು. ಆ ವಿವಾಹದಿಂದ, ಆ ಕನ್ಯೆಯಲ್ಲಿ ಸಂತಾನವಾಗಲಿಲ್ಲ. ಆದುದರಿಂದ ಈಗ ಎರಡನೆಯ ಲಗ್ನ ಮಾಡಲು ಉದ್ಯುಕ್ತರಾಗಿದ್ದೇವೆ. ಅಷ್ಟೇ ಹೊರತು ನಿರಾಮಯನಾದ ಶ್ರೀನಿವಾಸನಲ್ಲಿ ಬೇರಾವ ದೋಷವನ್ನೂ ತಿಳಿಯದಿರು.

ಜನಕಮಹಾರಾಜ! ಶ್ರೀನಿವಾಸನ ಸಮಸ್ತ ಸಮಾಚಾರವನ್ನರಿತು, ಬಕುಳಾದೇವಿಯನ್ನು ಗೌರವದಿಂದ ಸತ್ಕರಿಸಿ ಧರಣೀದೇವಿಯು ಆಕಾಶರಾಜನನ್ನು ಕರೆತರಲು ಮಗನನ್ನು ಕಳುಹಿದಳು. ಮಗನಿಂದ ವಿಷಯವರಿತ ಮಹಾರಾಜನು ಸಂತಸದಿಂದ ರಾಣಿಯ ಅಂತಃಪುರಕ್ಕೆ ಬಂದನು. ರಾಣಿಯು ಏಕಾಂತದಲ್ಲಿ ಪತಿಗೆ ಇಂತು ಹೇಳಿದಳು.

ಧರಣಿ :- ಮಹಾಪ್ರಭು! ವೇಂಕಟಾಚಲದಿಂದ ಸಾಧ್ವಿಯಾದ ಬಕುಳಾದೇವಿಯು ಕನ್ಯಾಪೇಕ್ಷೆಯಿಂದ ಬಂದಿರುವಳು. ಆದುದರಿಂದ ಕುಮಾರ ವಸುಧಾನನನ್ನು ಕಳುಹಿಸಿ ಪುರೋಹಿತರನ್ನು ಕರೆಯಿಸಿರಿ. ವೇದಪಾರಗರಾದ ಬ್ರಾಹ್ಮಣರಿಂದ ವರನ ವಂಶ, ವಿದ್ಯಾ, ಪರಾಕ್ರಮ ಹಾಗೂ ಗೋತ್ರನಕ್ಷತ್ರಾನುಕೂಲಗಳನ್ನೂ ವಿಮರ್ಶಿಸಿ, ವಧೂವರರ ಯೋನಿಕೂಟ-ನಾಡಿಕೂಟಗಳ ಹೊಂದಾಣಿಕೆಯನ್ನೂ ವಿವೇಚಿಸಿ, ಕನ್ಯಾದಾನ ಮಾಡಿರಿ. ನಾನು ಪದ್ಮಾವತಿಯ ಅಭಿಪ್ರಾಯವನ್ನೂ

ತಿಳಿದುಕೊಂಡಿದ್ದೇನೆ. ಅವಳೂ ಶ್ರೀನಿವಾಸನನ್ನೇ ಮದುವೆಯಾಗಬಯಸಿದ್ದಾಳೆ. ಇದು ಸತ್ಯ ವಿಚಾರ. ದೇವ! ಆದ್ದರಿಂದ ಈ ಮಂಗಳೋತ್ಸವವನ್ನು ತ್ವರೆಯಿಂದ ನೆರವೇರಿಸಿ.

ಮಹಾರಾಣಿಯ ವಚನವನ್ನಾಲಿಸಿ ಪರಮಾನಂದತುಂದಿಲನಾದ ಆಕಾಶ ಭೂಪತಿಯು ಇಂತೆಂದನು :-

ಆಕಾಶರಾಜ :- ಆಹಾ; ಬಕುಳಾದೇವಿಯ ಆಗಮನವು ನಮಗೆ ಪರಮ ಮಂಗಳಪ್ರದವಾಯಿತು! ನಾವು ಹಿಂದೆ ಮಾಡಿದ ಪುಣ್ಯದ ಫಲವು ನಮಗೀಗ ಬಂದೊದಗಿತು. ನಮ್ಮ ಪಿತೃಗಳು ಕೃತಾರ್ಥರೂ, ಮೋಕ್ಷಭಾಗಿಗಳೂ ಆದರು. ಬಕುಳಾದೇವಿಯ ವಚನವೆಂಬ ಅಮೃತಪ್ರಾಶನದಿಂದ ನನಗೆ ರೋಮಾಂಚನವಾಗುತ್ತಿದೆ! ವಧೂವರರ ಸಮಾಗಮ, ಕಲ್ಯಾಣಮಹೋತ್ಸವವನ್ನು ನಾನು ಯಾವಾಗ ಕಂಡೇನು? ಬಂಧುಬಾಂಧವರ ಮಧ್ಯೆ ಸುವರ್ಣಸಿಂಹಾಸನದಲ್ಲಿ ಪತಿಯೊಡನೆ ವಿರಾಜಿಸಿದ ಪದ್ಮಾವತಿಯನ್ನು ನೋಡುವ ಭಾಗ್ಯ ನನ್ನ ನೇತ್ರಗಳಿಗೆ ಯಾವಾಗ ದೊರಕೀತು?

ಹೀಗೆ ಉದ್ಗರಿಸಿದ ಆಕಾಶರಾಜನು ಮಗಳ ಮೇಲಿನ ವಾತ್ಸಲ್ಯದಿಂದ ಪತ್ನಿಯೊಡನೆ ಕನ್ಯಾಂತಃಪುರಕ್ಕೆ ತೆರಳಿ, ವಿಶ್ವಾಸದಿಂದ, ಕುಮಾರಿಯನ್ನು ಸಮಾಧಾನಗೊಳಿಸಿ ''ಪದ್ಮಾವತಿ! ಇನ್ನು ನಿನ್ನ ಮನದ ವ್ಯಥೆಯನ್ನು ಬಿಟ್ಟು ಬಿಡು. ನಿನ್ನ ಮನದ ಬಯಕೆಯನ್ನು ಅರುಹು. ಅದನ್ನು ಖಂಡಿತ ಪೂರ್ಣಮಾಡುವೆನು. ಇದರಲ್ಲಿ ಸಂಶಯವಿಲ್ಲ'' ಎಂದು ನುಡಿದನು. ಆಗ ಪದ್ಮಾವತಿಯು ತಾಯಿಯತ್ತ ತಿರುಗಿ, ''ಜನನಿ! ನಿನಗೆ ಸಮಸ್ತ ವಿಚಾರವನ್ನೂ ಹೇಳಿರುವೆನು. ಅದನ್ನು ನೀನೇ ಜನಕನಿಗೆ ತಿಳಿಸು. ನಾನೇ ಹೇಳಲು ನಾಚಿಕೆಯಾಗುತ್ತದೆ'' ಎಂದಳು. ಧರಣೀದೇವಿಯು ''ಪ್ರಭು! ಇನ್ನು ತಡಮಾಡುವುದು ಉಚಿತವಲ್ಲ. ಬೇಗನೆ ಕಾರ್ಯಪ್ರವೃತ್ತನಾಗು. ಈ ಮಂಗಳ ಕಾರ್ಯವನ್ನು ಯಶಸ್ವಿಗೊಳಿಸು. ಶುಭಾನನ! ಶುಭಕಾರ್ಯದಲ್ಲಿ ತಡಮಾಡುವುದು ವಿಹಿತವಲ್ಲ'' ಎಂದು ಕೋರಿದಳು. ಆಕಾಶರಾಜನು ಮುದಗೊಂಡು ''ವತ್ಸೇ, ಪದ್ಮಾವತಿ! ರಮಾದೇವಿಗೆ ಆಶ್ರಯನಾದ ಶ್ರೀಕೃಷ್ಣನಿಗೇ ನಿನ್ನನ್ನು ಕೊಟ್ಟು ವಿವಾಹಮಾಡುತ್ತೇನೆ. ಚಿಂತಿಸದಿರು'' ಎಂದು ಕುವರಿಯನ್ನು ಮೃದುಮಧುರ ನುಡಿಗಳಿಂದ ಸಂತೋಷಗೊಳಿಸಿ ಕುಲಪುರೋಹಿತರಾದ ಬೃಹಸ್ಪತ್ಯಾಚಾರ್ಯರನ್ನು ಕರೆತರಲು ಮಗನನ್ನು ಇಂದ್ರನಗರಿಗೆ ಕಳುಹಿಸಿದನು. ರಾಜನು ಪದ್ಮಾವತಿಯ ವಿವಾಹಸೂಚಕ ಪತ್ರವನ್ನು ಬರೆದು ವಸುಧಾನನೊಡನೆ ಕಳಿಸಿದನು.

ಜನಕಮಹಾರಾಜ! ವಸುಧಾನನು ಚಂದ್ರಾಂಶನಾದ್ದರಿಂದ ಅತಿಶೀಘ್ರವಾಗಿ ಸ್ವರ್ಗಲೋಕಕ್ಕೆ ಪ್ರಯಾಣ ಬೆಳೆಸಿ, ಇಂದ್ರಗುರು ಬೃಹಸ್ಪತ್ಯಾಚಾರ್ಯರಿಗೆ ನಮಿಸಿ ತಂದೆಯು ಬರೆದ ಪತ್ರವನ್ನು ಅವರ ಮುಂದಿಟ್ಟು ವಿಧೇಯತೆ-ಯಿಂದ ನಿಂತನು. ಬೃಹಸ್ಪತ್ಯಾಚಾರ್ಯರು ರಾಜಕುಮಾರನನ್ನೂ, ಪತ್ರವನ್ನೂ ಪರಿಕಿಸಿ, ಮುದಗೊಂಡು ರಾಜನ ಪತ್ರವನ್ನು ಓದಿ, ವಸುಧಾನನೊಡನೆ ರಾಜನರಮನೆಗೆ ಆಗಮಿಸಿದನು. ಜನಕ ಮಹಾರಾಜ! ಆಕಾಶರಾಜನು ದೇವಗುರುಗಳನ್ನು ಆದರದಿಂದ ಸ್ವಾಗತಿಸಿ, ಸಕ್ರಮವಾಗಿ ಸತ್ಕರಿಸಿ, ನಮಸ್ಕರಿಸಿ, ಕಾಲೋಚಿತರೀತಿಯಿಂದ ಕುಶಲಪ್ರಶ್ನೆ ಮಾಡಿ ಹೀಗೆ ಹೇಳಿದನು.

ಆಕಾಶರಾಜ :- ಗುರುವರ್ಯ! ನನ್ನ ಕುಮಾರಿಯಾದ ಪದ್ಮಾವತಿಯ ವಿವಾಹವನ್ನು ನಿಮ್ಮ ಅಪ್ಪಣೆ ಪಡೆದು ನೆರವೇರಿಸಲು ಆಶಿಸಿದ್ದೇನೆ. ತ್ರಿಲೋಕವಿಖ್ಯಾತನಾದ ಶ್ರೀನಿವಾಸನೊಡನೆ ವೈವಾಹಿಕ ಸಂಬಂಧವನ್ನು ಬೆಳೆಸುವುದು ಪ್ರಶಸ್ತವೆಂದು ಭಾವಿಸುವೆನು. ಆಚಾರ್ಯ! ಶ್ರೀನಿವಾಸನ ವೃತ್ತಾಂತವು ನಿಮಗೆ ತಿಳಿದಿರಬಹುದು. ಬಕುಳಮಾಲಿಕೆಯು ಶ್ರೀಕೃಷ್ಣನಿಗೆ ಪದ್ಮಾವತಿಯನ್ನು ಬಯಸಿ ಬಂದಿರುವಳು. ವರನ ಗೋತ್ರ ನಾಮಾದಿಗಳು ತಿಳಿದಿವೆ. ಆದರೂ ನೀವು ಸಮ್ಮತಿಸುವುದಾದರೆ ಪದ್ಮಾವತಿಯನ್ನು ಶ್ರೀನಿವಾಸನಿಗಿತ್ತು ಮಂಗಳ ವಿವಾಹಮಹೋತ್ಸವವನ್ನು ವೈಭವದಿಂದ ಜರುಗಿಸಲು ಉತ್ಸುಕನಾಗಿದ್ದೇನೆ.

ಬೃಹಸ್ಪತಿ :- ರಾಜನ್! ಫಲಭರಿತವಾದ ವೃಕ್ಷವನ್ನು ಆಶ್ರಯಿಸಿ ಜಗತ್ತಿನಲ್ಲಿ ಅನೇಕ ಪ್ರಾಣಿಗಳು ಜೀವಿಸುವುವು. ಅದರಂತೆ ನಾವು ನಿನ್ನ ಭಾಗ್ಯವನ್ನು ಅವಲಂಬಿಸಿ ಬದುಕುತ್ತಿದ್ದೇವೆ. ಪ್ರಭು! ನಾನು ಈ ಭೂತಲಕ್ಕೆ ಯಾವಾಗಲಾದರೊಮ್ಮೆ ಬರುತ್ತಿರುವೆನು. ಆದುದರಿಂದ ಶ್ರೀನಿವಾಸನ ವಿಚಾರಗಳು ನನಗೆ ಅಷ್ಟಾಗಿ ತಿಳಿದಿಲ್ಲ. ಅದನ್ನು ಶುಕಮುನಿಗಳು ಬಲ್ಲರು. ಅವರು ಇಲ್ಲಿಯೇ ಒಂದು ಹರಿದಾರಿ ದೂರದಲ್ಲಿಯೇ ಇದ್ದಾರೆ. ನೀನು ಅವರನ್ನು ಕರೆಯಿಸಿಕೊಂಡು ವಿಚಾರ ಮಾಡು. ಅವರು ನಿನಗೆ ಸುಖವಾಗುವಂತೆ ಸಕಲ ವಿಚಾರಗಳನ್ನೂ ತಿಳಿಸುವರು.

ಬೃಹಸ್ಪತ್ಯಾಚಾರ್ಯರ ಸಲಹೆಯನ್ನು ಕೇಳಿ ಆಕಾಶರಾಜನು ಬ್ರಾಹ್ಮಣರಲ್ಲಿ ವಿಶ್ವಾಸವುಳ್ಳ, ತನ್ನ ಸಹೋದರನಾದ ತೋಂಡಮಾನರಾಜನನ್ನು ಶುಕಾಚಾರ್ಯರನ್ನು ಕರೆದು ತರಲು ಶುಕಾಶ್ರಮಕ್ಕೆ ಕಳುಹಿಸಿದನು. ತೋಂಡಮಾನನು ಸೂರ್ಯನ ಕಾಂತಿಯಂತೆ ಬೆಳಗುವ ರಥದಲ್ಲಿ ಕುಳಿತು ವಾಯುವೇಗದಿಂದ ತೆರಳಿ ತಪಸ್ವಿಗಳಾದ ಶುಕಮುನಿಗಳ ಆಶ್ರಮಕ್ಕೆ ಆಗಮಿಸಿದನು. ಆಗತಾನೆ ಧ್ಯಾನಸಮಾಧಿಯಿಂದ ಮೇಲೆದ್ದ ಮುನಿಕುಲೋತ್ತಮರಾದ ಶುಕಾಚಾರ್ಯರಿಗೆ ವಂದಿಸಿ, ಆಕಾಶರಾಜನು ವಿವಾಹಾರ್ಹಳಾದ ಪದ್ಮಾವತಿಯನ್ನು ಶ್ರೀನಿವಾಸನಿಗಿತ್ತು ಲಗ್ನ ಆಡಲು ಇಚ್ಛಿಸಿರುವುದನ್ನೂ, ಆ ವಿಚಾರವಾಗಿ ಮಾತನಾಡಿ ನಿರ್ಧಾರಕ್ಕೆ ಬರಲು ರಾಜಧಾನಿಗೆ ಬರಬೇಕೆಂದು ರಾಜನು ಪ್ರಾರ್ಥಿಸಿರುವುದನ್ನೂ ತಿಳಿಸಿ ''ಗುರುದೇವ! ಸಾವಕಾಶ ಮಾಡದಲೇ ತಾವು ನನ್ನೊಡನೆ ನಾರಾಯಣಪುರಕ್ಕೆ ಬರಬೇಕು'' ಎಂದು ಕೋರಿದನು.

ತೋಂಡಮಾನನ ಮಾತನ್ನು ಕೇಳಿ ಆಚಾರ್ಯ ಶುಕರು ಸಂತೋಷ ಸಂಭ್ರಮಗಳಿಂದ ಮೇಲೆದ್ದು ಭ್ರಮಾಧೀನರಂತೆ ಅತ್ತಿತ್ತ ಕುಣಿದಾಡಿದರು. ತಮ್ಮ ಕಮಂಡಲವನ್ನು ಮುರಿದು ಹಾಕಿದರು. ಧರಿಸಿದ್ದ ಕೃಷ್ಣಾಜಿನವನ್ನು ಹರಿದು ಹಾಕಿದರು, ಕೊರಳಲ್ಲಿ ಧರಿಸಿದ್ದ ತುಳಸೀಮಣಿ, ಕಮಲಾಕ್ಷಮಣಿಮಾಲೆಗಳನ್ನು ಕಿತ್ತೆಸೆದು ತಾಪಸಶಾರ್ದೂಲರಾದ ಶುಕಮುನಿಗಳು ನರ್ತಿಸಲಾರಂಭಿಸಿದರು! ಇಂತು ಕ್ಷಣಕಾಲ ಅವರು ಹುಚ್ಚರಂತೆ ಮೈಮರೆತು ವರ್ತಿಸಿದರು. ಅನಂತರ ಬುದ್ಧಿಯು ಒಂದು ಸ್ಥಿಮಿತಕ್ಕೆ ಬಂದಮೇಲೆ, ವೇದವ್ಯಾಸದೇವರ ಕುಮಾರರಾದ ಶುಕಾಚಾರ್ಯರು ತೋಂಡಮಾನನನ್ನು ಕುರಿತು ಹೇಳಹತ್ತಿದರು.

ಶ್ರೀಶುಕ :- ಉದಾರವಿಕ್ರಮ, ಪ್ರಿಯ ತೋಂಡಮಾನರಾಜ! ಸಾಧು ಸಮ್ಮತವಾದ ಶುಭವಾರ್ತೆಯನ್ನು ಹೇಳಿದ್ದೀಯೆ. ಶ್ರೀವೇಂಕಟಾಚಲನಿವಾಸಿಯಾದ ಶ್ರೀಹರಿಗೆ ಪದ್ಮಾವತಿಯನ್ನು ಕೊಟ್ಟು ವಿವಾಹ ಮಾಡುವುದು ಚತುರ್ವಿಧ ಪುರುಷಾರ್ಥ ಸಾಧನವಾಗಿದೆ. ಅದು ಸಮಸ್ತ ಪ್ರಪಂಚದ ಪಾವಿತ್ರ್ಯತೆ, ಮತ್ತು ಉದ್ಧಾರಕ್ಕೆ ಕಾರಣವಾಗಿದೆ. ಆಹಾ! ಆಕಾಶರಾಜನೆಂತಹ ಸುಕೃತಶಾಲಿಯು!. ಆಕಾಶರಾಜನ ಬುದ್ಧಿಯು ಶ್ರೀನಿವಾಸನ ಕೃಪಾಬಲದಿಂದ ಮಹಾದಾನ ಮಾಡುವುದರಲ್ಲಿ ಆಸಕ್ತವಾಗಲಿ!

ಆಚಾರ್ಯ ಶುಕರು ಇಂತು ಪ್ರಶಂಸಾ ನುಡಿಗಳಿಂದ ಆಕಾಶರಾಜನನ್ನು ಆಶೀರ್ವದಿಸಿ; ಪದ್ಮಸರೋವರದಲ್ಲಿ ಅವಗಾಹನಸ್ನಾನ ಮಾಡಿ, ಮಾಧ್ಯಾಹ್ನಿಕ ಸಂಧ್ಯೆಯನ್ನಾಚರಿಸಿ, ತಾವು ಧರಿಸಿದ್ದ ಜೀರ್ಣವಾದ ಅಲಂಕಾರಗಳನ್ನು ತೆಗೆದುಹಾಕಿ, ಹೊಸದಾದ ಕುಶಾಗ್ರಗಳನ್ನು ಕತ್ತರಿಸಿ, ಅವುಗಳಿಂದ ಶಿರೋಭೂಷಣವಾದ ಕಿರೀಟವನ್ನು ಮಾಡಿ ಧರಿಸಿದರು. ದರ್ಭಾಗ್ರಕುಸುಮಗಳಿಂದ ಕವಚವನ್ನು ನಿರ್ಮಿಸಿ ಧರಿಸಿದರು. ತರುವಾಯ ತುಳಸೀಮಣಿ, ಹಾರಗಳಿಂದ ಕೊರಳು-ಕರ್ಣಗಳನ್ನು ಅಲಂಕರಿಸಿಕೊಂಡರು. ನಂತರ ಕಾಲಿನವರೆಗೂ ಉದ್ದವಾದ ಜಿಂಕೆಯ ಚರ್ಮದಿಂದ ತಯಾರಿಸಿದ ಕಂಚುಕವನ್ನು ಧರಿಸಿ, ಜ್ಞಾನವೆಂಬ ಅಶ್ವವನ್ನೇರಿ, ತೋಂಡಮಾನರಾಜನೊಡನೆ ರಾಜಧಾನಿಗೆ ಹೊರಟರು.

ಶುಕಮುನಿಗಳು ಬರುತ್ತಿರುವ ವಾರ್ತೆಯನ್ನು ಅರಿತು ಆಕಾಶರಾಜನು ರಥ-ಗಜ-ತುರುಗ-ಪದಾತಿಗಳೆಂಬ ಚತುರಂಗಬಲಸಮೇತನಾಗಿ ಸುವರ್ಣ ತಾಂಬಾಣದಲ್ಲಿ ದರ್ಭಾಗ್ರ, ಗೆಡ್ಡೆ, ಗೆಣಸು, ಫಲ, ಪುಷ್ಪ, ಉದಕಪೂರಿತವಾದ

ಪೂರ್ಣಕುಂಭ, ಮಂಗಳವಾದ್ಯಗಳೊಡನೆ ಕುಲಗುರುಗಳನ್ನು ಮುಂದೆ ಮಾಡಿಕೊಂಡು ಶ್ರೀಶುಕಮುನಿಗಳನ್ನು ಎದುರುಗೊಳ್ಳಲು ಸಂಭ್ರಮದಿಂದ ಹೊರಟನು. ಇದರಿಂದ ರಾಜ ಮತ್ತು ಪುರಜನರು ಮುದಗೊಂಡರು. ದೂರದಲ್ಲಿ ಶುಕಮುನಿಗಳು ಬರುತ್ತಿರುವುದನ್ನು ಕಂಡು ರಾಜನು ರಥದಿಂದಿಳಿದು ಶುಕಮುನಿಗಳ ಬಳಿಗೆ ಬಂದು ಸಾಷ್ಟಾಂಗವೆರಗಿ, ಶುಕಾಚಾರ್ಯರನ್ನು ಆನೆಯ ಮೇಲೆ ಮಂಡಿಸಿ ಮೆರವಣಿಗೆ ಹೊರಡಿಸಿ, ರಾಜಧಾನಿಗೆ ಗೌರವದಿಂದ ಕರೆದು ತಂದನು. ಅನಂತರ ಅರಮನೆಯ ಅಂತರ್ಭವನದಲ್ಲಿ ಅವರನ್ನು ಭದ್ರಪೀಠದಲ್ಲಿ ಕೂಡಿಸಿ, ಶ್ರೀಹರಿಧ್ಯಾನರತರಾದ ವಿದ್ಯಾಗುರುಗಳೂ, ಜ್ಞಾನಗುರುಗಳೂ ಆದ ಶುಕಮುನಿಗಳಿಗೆ ನಮಸ್ಕರಿಸಿ ಪೂಜಿಸಿ, ಬೃಹಸ್ಪತ್ಯಾಚಾರ್ಯರ ಸಮಕ್ಷ ಕನ್ಯಾದಾನ ವಿಚಾರವನ್ನು ಪ್ರಸ್ತಾಪಿಸಿದನು.

ಆಕಾಶರಾಜ :- ಗುರುದೇವ! ತಮ್ಮ ಮತ್ತು ಬೃಹಸ್ಪತಿಗಳ ಸಮ್ಮತಿಯನ್ನು ಪಡೆದು ಶ್ರೀಲಕ್ಷ್ಮೀದೇವಿಗೆ ಆವಾಸಭೂತನಾದ ಶ್ರೀಕೃಷ್ಣನಿಗೆ ನನ್ನ ಕುಮಾರಿಯನ್ನು ಕೊಟ್ಟು ವಿವಾಹವನ್ನು ನೆರವೇರಿಸಲು ನಿಶ್ಚಯಿಸಿದ್ದೇನೆ. ನನ್ನಲ್ಲಿ ಕೃಪೆ ಮಾಡಿರಿ.

ಜನಕಮಹಾರಾಜ! ಆಕಾಶರಾಜನ ನುಡಿಕೇಳಿ, ಶುಕಮುನಿಗಳು ಪದ್ಮಾವತಿಯಲ್ಲಿ ಕರುಣಾನ್ವಿತರಾಗಿ, ರಾಜನಿಗೆ ಇಂತು ಹೇಳಿದರು.

ಶ್ರೀ ಶುಕ :- ರಾಜೇಂದ್ರ! ನೀನು ಮಹಾಭಾಗ್ಯಶಾಲಿ! ಶ್ರೀನಿವಾಸನಿಗೆ ಕನ್ಯಾದಾನ ಮಾಡುವ ವಿಷಯದಲ್ಲಿ ಸಂದೇಹ ಪಡಬೇಡ. ನೀನು ನಿಜವಾಗಿ ಧನ್ಯನು! ನಿಮ್ಮ ವಂಶವು ಪಾವನವಾಯಿತು. ನಿಮ್ಮ ಪಿತೃಗಳು ಸ್ವರ್ಗಭಾಗಿಗಳಾದರು. ಇದರಲ್ಲಿ ಸಂದೇಹವಿಲ್ಲ. ರಾಜನ್! ಪೂರ್ವಜನ್ಮದಲ್ಲಿ ನೀನು ಅದೆಷ್ಟು ಪುಣ್ಯ ಮಾಡಿರುವೆಯೋ ನಾನರಿಯೆ. ಸುಜನಪಾಲಕನಾದ ಷಡ್ಗುಣೈಶ್ವರ್ಯ ಸಂಪನ್ನನಾದ ಅರವಿಂದಾಕ್ಷನಾದ ಶ್ರೀನಿವಾಸನು, ನಿನಗೆ ಅಳಿಯನಾಗುತ್ತಿರುವನಲ್ಲ! ಅಹಹ! ಶ್ರೀಹರಿಯನ್ನು ಅಳಿಯನಾಗಿ ಪಡೆಯುವ ನಿನಗೆ ಸಮಾನರು ಈ ಜಗತ್ತಿನಲ್ಲಿ ಬೇರಾರೂ ಇಲ್ಲ! ಸಾವಕಾಶ ಮಾಡಬೇಡ, ವಿವಾಹ ಮಂಗಳಮಹೋತ್ಸವವನ್ನು ಬೇಗ ನೆರವೇರಿಸು. ನರೇಂದ್ರ! ನಿನ್ನ ಸಹವಾಸದಿಂದ ನಾವೂ ಧನ್ಯರಾಗಿದ್ದೇವೆ. ನಮ್ಮ ಮನೋರಥದ್ರುಮವು ಫಲಿಸಿತು! ಕೇಳು, ಮಹಾರಾಜ! ನಾವು ಕಂದಮೂಲ, ಫಲಗಳನ್ನು ಸೇವಿಸುವವರು. ಸರ್ವಸಂಗಪರಿತ್ಯಾಗ ಮಾಡಿದವರು. ಸದಾ ಕಠಿಣ ತಪಸ್ಸಿನಲ್ಲಿ ಮಗ್ನರಾಗಿ, ಪರಮಾತ್ಮನನ್ನು ಆರಾಧಿಸುತ್ತೇವೆ. ಆದರೂ ಸರ್ವೋತ್ತಮನಾದ ಆ ಪ್ರಭುವನ್ನು ಕಾಣದವರಾಗಿದ್ದೇವೆ. ಈಗ ನಿನ್ನ ಸಹವಾಸದಿಂದ ಶ್ರೀ ರೂಪಿಣಿಯಾದ ಪದ್ಮಾವತೀ ಸಹಿತನಾದ ಶ್ರೀನಿವಾಸನನ್ನು ನೋಡಲಿದ್ದೇವೆ! ನಿನ್ನ ಸಂಗವು ನಮಗೆ ಜನ್ಮ ಜನ್ಮಗಳಲ್ಲಿಯೂ ದೊರಕಲಿ!

ಇಂತು ನುಡಿದು ಶುಕಮುನಿಗಳು ಮೌನವಹಿಸಿದರು. ವೇದವ್ಯಾಸರ ವರಕುಮಾರರ ಶುಭನುಡಿಯನ್ನು ಕೇಳಿ, ಮುದಗೊಂಡ ಆಕಾಶರಾಜನು ತಾನು ಕೃತಾರ್ಥನಾದೆನೆಂದು ಭಾವಿಸಿದನು. ಅನಂತರ ಶುಕಮುನಿಗಳಿಗೊಂದಿಸಿ, ಪ್ರಶಂಸಿಸಿ, ಬೃಹಸ್ಪತ್ಯಾಚಾರ್ಯರನ್ನು ಕುರಿತು ಹೇಳಿದನು :

ಆಕಾಶರಾಜ :- ಪಿತೃತುಲ್ಯರಾದ ಆಚಾರ್ಯರೇ, ಶ್ರೀನಿವಾಸ - ಪದ್ಮಾವತಿಯರ ಯೋಗಗಳು, ಗ್ರಹಗಳ ಸ್ಥಿತಿಗಳನ್ನು ವಿಚಾರಮಾಡಿರಿ. ವಧೂವರರ ನಕ್ಷತ್ರಯೋಗ, ಜಾತಕ ಬಲಾಬಲಗಳನ್ನು ಪರಿಶೀಲಿಸಿರಿ.

ಜ್ಯೋತಿಷಶಾಸ್ತ್ರವಿಶಾರದರಾದ ದೇವಗುರುಗಳು ಸಂಭ್ರಮದಿಂದ ಬಕುಳಾದೇವಿಯನ್ನು ನೋಡಿ ''ತಾಯಿ, ಶ್ರೀನಿವಾಸನ ಗೋತ್ರ-ನಕ್ಷತ್ರಗಳನ್ನು ತಿಳಿಸು'' ಎನಲು ಸ್ವಲ್ಪ ಕೋಪಗೊಂಡ ಬಕುಳಮಾಲಿಕೆಯು ''ಮಹಾರಾಜ, ಬ್ರಾಹ್ಮಣರು ಸತ್ಯಸಂಪನ್ನರು, ಸತ್ಯಮಾರ್ಗಾವಲಂಬಿಗಳು. ಆದರೆ ಈ ಕಲಿಯುಗದಲ್ಲಿ ಭೂಸುರರು ಮಿಥ್ಯಾವಾದಿಗಳಾಗಿದ್ದಾರೆ! ಎಲ್ಲ ವಿಚಾರಗಳನ್ನು ಬಲ್ಲವರಾದರೂ, ಹಿತಾಹಿತಗಳನ್ನು ನುಡಿಯುವುದಿಲ್ಲ'' ಎಂದಳು. ಆಗ ಶುಕಮುನಿಗಳು ''ಮಂಗಳಾಂಗಿ!

ಈಗ ಕ್ಷತ್ರಿಯರಿಗೆ ಬ್ರಾಹ್ಮಣರಲ್ಲಿ ವಿಶ್ವಾಸವಿಲ್ಲವಮ್ಮಾ. ತಾನಾಗಿ ವರನ ವಿಚಾರವನ್ನು ಹೇಳಿದಲ್ಲಿ ರಾಜರು ಅದನ್ನು ಸಂದೇಹಿಸುವರು. ಅದರಿಂದಾಗಿ ಆಗ ಧರ್ಮವು ಅಧರ್ಮವಾಗಿಯೂ, ಅಧರ್ಮವೇ ಧರ್ಮವೂ ಆಗುವುದು. ಆದುದರಿಂದ ಮಹನೀಯಳೇ, ನೀನು ದಯಮಾಡಿ ಹಿತಾಹಿತಗಳನ್ನು ತಿಳಿಸಮ್ಮ'' ಎಂದರು.

ಬಕುಳೆ :- ಮತ್ಸ್ಯ-ಕೂರ್ಮ-ಕೃಷ್ಣಾದಿ ಅವತಾರಗಳನ್ನೆತ್ತಿದ ಶ್ರೀನಿವಾಸನು ಹುಟ್ಟಿದ ನಕ್ಷತ್ರವು ಶ್ರವಣವೆಂದೂ, ವಸಿಷ್ಠಗೋತ್ರಜನೆಂದೂ ಪ್ರಾಚೀನರು ಹೇಳುವರು.

ಆಕಾಶರಾಜ :- ಸಂತೋಷ, ಸೀತಾ-ಸತ್ಯಭಾಮಾದಿರೂಪಳಾದ ನಮ್ಮ ಪದ್ಮಾವತಿಯದು ಅತ್ರಿಗೋತ್ರವು. ಅವಳು ಮೃಗಶಿರಾ ನಕ್ಷತ್ರದಲ್ಲಿ ಜನಿಸಿದವಳೆಂದು ಪಂಡಿತರು ಹೇಳುವರು.

ಅವರೀರ್ವರ ಮಾತು ಕೇಳಿ ಬೃಹಸ್ಪತ್ಯಾಚಾರ್ಯರು ವಧೂವರರ ಯೋಗಾದಿಗಳನ್ನು ಚೆನ್ನಾಗಿ ಪರಿಶೀಲಿಸಿ, ಆನಂದ ಮನಸ್ಕರಾಗಿ ಇಂತು ನುಡಿದರು.

ಬೃಹಸ್ಪತಿ :- ನಾನು ಪರಿಶೀಲಿಸಿದ್ದರಲ್ಲಿ ವಿಶೇಷವಾಗಿ ವಧೂವರರ ನಾಡಿಕೂಟ, ಮಾಂಗಲ್ಯಕೂಟ, ಯೋನಿಕೂಟಗಳು ಅತ್ಯಂತ ಅನುಕೂಲರಾಗಿರುವುವು. ಎಲ್ಲ ಗ್ರಹಗಳು ಮಂಗಳದೃಷ್ಟಿಬೀರುತ್ತಿವೆ. ಮಹಾರಾಜ, ಇವೆಲ್ಲವನ್ನೂ ವಿವೇಚಿಸಿ, ನೀನು ಗುರುಹಿರಿಯರು ಬಾಂಧವರಲ್ಲಿ ಆರ್ಯಭಾವವನ್ನು ತಾಳಿ ಬಂಧುಮಿತ್ರರೊಡನೆ ವಿಚಾರವಿನಿಮಯ ಮಾಡಿಕೊಂಡು ಕನ್ಯಾದಾನ ಮಾಡು.

ದೇವಗುರುಗಳ ವಚನವನ್ನು ಆಲಿಸಿ ಆಕಾಶರಾಜನು ಪರಮಭಕ್ತಿಯಿಂದ ಕುಲವೃದ್ಧರಾದ ತನ್ನ ಗುರು ಹಿರಿಯರು ಬಾಂಧವರಲ್ಲಿ ಪೂಜ್ಯಭಾವವನ್ನು ವಹಿಸಿ ಜ್ಞಾತಿಗಳು, ಬಾಂಧವರು, ಸಂಬಂಧಿಗಳು, ಹಿತೈಷಿ, ಮಿತ್ರರು ಇನ್ನಿತರ ಪೌರಜಾನಪದರೊಡನೆ ಕಲೆತು ಕನ್ಯಾದಾನ ವಿಚಾರವಾಗಿ ಮಂತ್ರಾಲೋಚನೆ ಮಾಡಿದನು. ಅವನ ಸಮಸ್ತ ಬಂಧುವರ್ಗದವರು ಆಕಾಶರಾಜನನ್ನು ಪ್ರಶಂಸಿಸಿ, ಗೌರವಿಸಿ ಕನ್ಯಾದಾನಕ್ಕೆ ತಮ್ಮ ಸಮ್ಮತಿಯನ್ನು ಆನಂದದಿಂದ ನೀಡಿದರು.

ಅನಂತರ ಆಕಾಶರಾಜನು ರಾಜಸಭೆಯನ್ನೇರ್ಪಡಿಸಿ ರತ್ನಸಿಂಹಾಸನದಲ್ಲಿ ಕುಳಿತು ಕನ್ಯಾನಿಶ್ಚಯ ನಿಮಿತ್ತವಾಗಿ ಮಂತ್ರಪಠಣಪೂರ್ವಕವಾಗಿ ಪುಣ್ಯಾಹವನ್ನಾಚರಿಸಿ ಆ ಮಹಾಸಭೆಯಲ್ಲಿ ಎದ್ದು ನಿಂತು ಬಲತೋಳನ್ನು ಮೇಲೆತ್ತಿ ''ಶ್ರೀರಮಾದೇವಿಗೆ ಆಶ್ರಯನಾದ ಸಾರಂಗಪಾಣಿಯಾದ ಶ್ರೀಹರಿಗೆ ನನ್ನ ಪುತ್ರಿಯಾದ ಪದ್ಮಾವತಿಯನ್ನು ಕೊಟ್ಟು ವಿವಾಹವನ್ನು ನೆರವೇರಿಸುತ್ತೇನೆ. ಈ ಮಹಾಮಂಗಳಕಾರ್ಯದಲ್ಲಿ ಬಂಧುವರ್ಗದ ನೀವೆಲ್ಲರೂ ನನ್ನಲ್ಲಿ ಕರುಣೆಬೀರಿರಿ'' ಎಂದು ಪ್ರತಿಜ್ಞೆಮಾಡಿ, ಗುರುಜನರಲ್ಲಿ ವಿಶ್ವಾಸವುಳ್ಳ ಆಕಾಶರಾಜನು ದೇವಗುರು ಬೃಹಸ್ಪತ್ಯಾಚಾರ್ಯರನ್ನು ಉದ್ದೇಶಿಸಿ ''ಸ್ವಾಮಿ, ತಮ್ಮ ಆಣತಿಯಂತೆ ಕನ್ಯಾದಾನ ಸಂಕಲ್ಪವನ್ನು ಮಾಡಿದೆನು. ಈಗ ಮುಂದೇನು ಮಾಡಬೇಕೆಂಬುದನ್ನು ತಿಳಿಸಿರಿ'' ಎಂದನು.

ಅಂಗಿರಸಕುಮಾರರಾದ ಬೃಹಸ್ಪತ್ಯಾಚಾರ್ಯರು ''ರಾಜನ್, ನೀನು ಈಗ ಶ್ರೀನಿವಾಸನಿಗೆ ಲಗ್ನಪತ್ರಿಕೆಯನ್ನು ಬರೆದು ವಿಪ್ರರ ದ್ವಾರಾ ಶ್ರೀಹರಿಗೆ ಕಳುಹಿಸು'' ಎಂದರು. ಆಗ ಆಕಾಶರಾಜನು ''ಬುಧೋತ್ತಮರೇ, ಮಾನವರಂತೆ ಹೇಯವಾದ ಶರೀರರಹಿತನಾದ ಅಂದರೆ ಅಪ್ರಾಕೃತನಾದ ಶ್ರೀಹರಿಪರಮಾತ್ಮನಿಗೆ ಪ್ರಾಕೃತಶರೀರಿಗಳಾದ ನಾವು ಬರೆಯುವುದೇನಿದೆ? ಆದರೂ ಗುರುವರ್ಯ, ಏನು ಬರೆಯಬೇಕೆಂಬುದನ್ನು ತಿಳಿಸಿರಿ'' ಎನಲು, ಬೃಹಸ್ಪತ್ಯಾಚಾರ್ಯರು ಲಗ್ನಪತ್ರಿಕೆಯಲ್ಲಿ ಬರೆಯಬೇಕಾದ ಅಂಶವನ್ನು ಆದರದಿಂದ ನರಪತಿಗೆ ಹೇಳಿದರು. ಆಕಾಶರಾಜನು ಗುರುಗಳ ಉಪದೇಶದಂತೆ ಶ್ರೀನಿವಾಸನಿಗೆ ಹೀಗೆ ಲಗ್ನಪತ್ರಿಕೆಯನ್ನು ಬರೆದನು.

ಪೂರ್ಣಕುಂಭ, ಮಂಗಳವಾದ್ಯಗಳೊಡನೆ ಕುಲಗುರುಗಳನ್ನು ಮುಂದೆ ಮಾಡಿಕೊಂಡು ಶ್ರೀಶುಕಮುನಿಗಳನ್ನು ಎದುರುಗೊಳ್ಳಲು ಸಂಭ್ರಮದಿಂದ ಹೊರಟನು. ಇದರಿಂದ ರಾಜ ಮತ್ತು ಪುರಜನರು ಮುದಗೊಂಡರು. ದೂರದಲ್ಲಿ ಶುಕಮುನಿಗಳು ಬರುತ್ತಿರುವುದನ್ನು ಕಂಡು ರಾಜನು ರಥದಿಂದಿಳಿದು ಶುಕಮುನಿಗಳ ಬಳಿಗೆ ಬಂದು ಸಾಷ್ಟಾಂಗವೆರಗಿ, ಶುಕಾಚಾರ್ಯರನ್ನು ಆನೆಯ ಮೇಲೆ ಮಂಡಿಸಿ ಮೆರವಣಿಗೆ ಹೊರಡಿಸಿ, ರಾಜಧಾನಿಗೆ ಗೌರವದಿಂದ ಕರೆದು ತಂದನು. ಅನಂತರ ಅರಮನೆಯ ಅಂತರ್ಭವನದಲ್ಲಿ ಅವರನ್ನು ಭದ್ರಪೀಠದಲ್ಲಿ ಕೂಡಿಸಿ, ಶ್ರೀಹರಿಧ್ಯಾನರತರಾದ ವಿದ್ಯಾಗುರುಗಳೂ, ಜ್ಞಾನಗುರುಗಳೂ ಆದ ಶುಕಮುನಿಗಳಿಗೆ ನಮಸ್ಕರಿಸಿ ಪೂಜಿಸಿ, ಬೃಹಸ್ಪತ್ಯಾಚಾರ್ಯರ ಸಮಕ್ಷ ಕನ್ಯಾದಾನ ವಿಚಾರವನ್ನು ಪ್ರಸ್ತಾಪಿಸಿದನು.

ಆಕಾಶರಾಜ :- ಗುರುದೇವ! ತಮ್ಮ ಮತ್ತು ಬೃಹಸ್ಪತಿಗಳ ಸಮ್ಮತಿಯನ್ನು ಪಡೆದು ಶ್ರೀಲಕ್ಷ್ಮೀದೇವಿಗೆ ಆವಾಸಭೂತನಾದ ಶ್ರೀಕೃಷ್ಣನಿಗೆ ನನ್ನ ಕುಮಾರಿಯನ್ನು ಕೊಟ್ಟು ವಿವಾಹವನ್ನು ನೆರವೇರಿಸಲು ನಿಶ್ಚಯಿಸಿದ್ದೇನೆ. ನನ್ನಲ್ಲಿ ಕೃಪೆ ಮಾಡಿರಿ.

ಜನಕಮಹಾರಾಜ! ಆಕಾಶರಾಜನ ನುಡಿಕೇಳಿ, ಶುಕಮುನಿಗಳು ಪದ್ಮಾವತಿಯಲ್ಲಿ ಕರುಣಾನ್ವಿತರಾಗಿ, ರಾಜನಿಗೆ ಇಂತು ಹೇಳಿದರು.

ಶ್ರೀ ಶುಕ :- ರಾಜೇಂದ್ರ! ನೀನು ಮಹಾಭಾಗ್ಯಶಾಲಿ! ಶ್ರೀನಿವಾಸನಿಗೆ ಕನ್ಯಾದಾನ ಮಾಡುವ ವಿಷಯದಲ್ಲಿ ಸಂದೇಹ ಪಡಬೇಡ. ನೀನು ನಿಜವಾಗಿ ಧನ್ಯನು! ನಿಮ್ಮ ವಂಶವು ಪಾವನವಾಯಿತು. ನಿಮ್ಮ ಪಿತೃಗಳು ಸ್ವರ್ಗಭಾಗಿಗಳಾದರು. ಇದರಲ್ಲಿ ಸಂದೇಹವಿಲ್ಲ. ರಾಜನ್! ಪೂರ್ವಜನ್ಮದಲ್ಲಿ ನೀನು ಅದೆಷ್ಟು ಪುಣ್ಯ ಮಾಡಿರುವೆಯೋ ನಾನರಿಯೆ. ಸುಜನಪಾಲಕನಾದ ಷಡ್ಗುಣೈಶ್ವರ್ಯ ಸಂಪನ್ನನಾದ ಅರವಿಂದಾಕ್ಷನಾದ ಶ್ರೀನಿವಾಸನು, ನಿನಗೆ ಅಳಿಯನಾಗುತ್ತಿರುವನಲ್ಲ! ಅಹಹ! ಶ್ರೀಹರಿಯನ್ನು ಅಳಿಯನಾಗಿ ಪಡೆಯುವ ನಿನಗೆ ಸಮಾನರು ಈ ಜಗತ್ತಿನಲ್ಲಿ ಬೇರಾರೂ ಇಲ್ಲ! ಸಾವಕಾಶ ಮಾಡಬೇಡ, ವಿವಾಹ ಮಂಗಳಮಹೋತ್ಸವವನ್ನು ಬೇಗ ನೆರವೇರಿಸು. ನರೇಂದ್ರ! ನಿನ್ನ ಸಹವಾಸದಿಂದ ನಾವೂ ಧನ್ಯರಾಗಿದ್ದೇವೆ. ನಮ್ಮ ಮನೋರಥದ್ರುಮವು ಫಲಿಸಿತು! ಕೇಳು, ಮಹಾರಾಜ! ನಾವು ಕಂದಮೂಲ, ಫಲಗಳನ್ನು ಸೇವಿಸುವವರು. ಸರ್ವಸಂಗಪರಿತ್ಯಾಗ ಮಾಡಿದವರು. ಸದಾ ಕಠಿಣ ತಪಸ್ಸಿನಲ್ಲಿ ಮಗ್ನರಾಗಿ, ಪರಮಾತ್ಮನನ್ನು ಆರಾಧಿಸುತ್ತೇವೆ. ಆದರೂ ಸರ್ವೋತ್ತಮನಾದ ಆ ಪ್ರಭುವನ್ನು ಕಾಣದವರಾಗಿದ್ದೇವೆ. ಈಗ ನಿನ್ನ ಸಹವಾಸದಿಂದ ಶ್ರೀ ರೂಪಿಣಿಯಾದ ಪದ್ಮಾವತೀ ಸಹಿತನಾದ ಶ್ರೀನಿವಾಸನನ್ನು ನೋಡಲಿದ್ದೇವೆ! ನಿನ್ನ ಸಂಗವು ನಮಗೆ ಜನ್ಮ ಜನ್ಮಗಳಲ್ಲಿಯೂ ದೊರಕಲಿ!

ಇಂತು ನುಡಿದು ಶುಕಮುನಿಗಳು ಮೌನವಹಿಸಿದರು. ವೇದವ್ಯಾಸರ ವರಕುಮಾರರ ಶುಭನುಡಿಯನ್ನು ಕೇಳಿ, ಮುದಗೊಂಡ ಆಕಾಶರಾಜನು ತಾನು ಕೃತಾರ್ಥನಾದೆನೆಂದು ಭಾವಿಸಿದನು. ಅನಂತರ ಶುಕಮುನಿಗಳಿಗೊಂದಿಸಿ, ಪ್ರಶಂಸಿಸಿ, ಬೃಹಸ್ಪತ್ಯಾಚಾರ್ಯರನ್ನು ಕುರಿತು ಹೇಳಿದನು :

ಆಕಾಶರಾಜ :- ಪಿತೃತುಲ್ಯರಾದ ಆಚಾರ್ಯರೇ, ಶ್ರೀನಿವಾಸ - ಪದ್ಮಾವತಿಯರ ಯೋಗಗಳು, ಗ್ರಹಗಳ ಸ್ಥಿತಿಗಳನ್ನು ವಿಚಾರಮಾಡಿರಿ. ವಧೂವರರ ನಕ್ಷತ್ರಯೋಗ, ಜಾತಕ ಬಲಾಬಲಗಳನ್ನು ಪರಿಶೀಲಿಸಿರಿ.

ಜ್ಯೋತಿಷಶಾಸ್ತ್ರವಿಶಾರದರಾದ ದೇವಗುರುಗಳು ಸಂಭ್ರಮದಿಂದ ಬಕುಳಾದೇವಿಯನ್ನು ನೋಡಿ ''ತಾಯಿ, ಶ್ರೀನಿವಾಸನ ಗೋತ್ರ-ನಕ್ಷತ್ರಗಳನ್ನು ತಿಳಿಸು'' ಎನಲು ಸ್ವಲ್ಪ ಕೋಪಗೊಂಡ ಬಕುಳಮಾಲಿಕೆಯು ''ಮಹಾರಾಜ, ಬ್ರಾಹ್ಮಣರು ಸತ್ಯಸಂಪನ್ನರು, ಸತ್ಯಮಾರ್ಗಾವಲಂಬಿಗಳು. ಆದರೆ ಈ ಕಲಿಯುಗದಲ್ಲಿ ಭೂಸುರರು ಮಿಥ್ಯಾವಾದಿಗಳಾಗಿದ್ದಾರೆ! ಎಲ್ಲ ವಿಚಾರಗಳನ್ನು ಬಲ್ಲವರಾದರೂ, ಹಿತಾಹಿತಗಳನ್ನು ನುಡಿಯುವುದಿಲ್ಲ'' ಎಂದಳು. ಆಗ ಶುಕಮುನಿಗಳು ''ಮಂಗಳಾಂಗಿ!

ಈಗ ಕ್ಷತ್ರಿಯರಿಗೆ ಬ್ರಾಹ್ಮಣರಲ್ಲಿ ವಿಶ್ವಾಸವಿಲ್ಲವಮ್ಮಾ. ತಾನಾಗಿ ವರನ ವಿಚಾರವನ್ನು ಹೇಳಿದಲ್ಲಿ ರಾಜರು ಅದನ್ನು ಸಂದೇಹಿಸುವರು. ಆದರಿಂದಾಗಿ ಆಗ ಧರ್ಮವು ಅಧರ್ಮವಾಗಿಯೂ, ಅಧರ್ಮವೇ ಧರ್ಮವೂ ಆಗುವುದು. ಆದುದರಿಂದ ಮಹನೀಯಳೇ, ನೀನು ದಯಮಾಡಿ ಹಿತಾಹಿತಗಳನ್ನು ತಿಳಿಸಮ್ಮ'' ಎಂದರು.

ಬಕುಳೆ :- ಮತ್ಸ್ಯ-ಕೂರ್ಮ-ಕೃಷ್ಣಾದಿ ಅವತಾರಗಳನ್ನೆತ್ತಿದ ಶ್ರೀನಿವಾಸನು ಹುಟ್ಟಿದ ನಕ್ಷತ್ರವು ಶ್ರವಣವೆಂದೂ, ವಸಿಷ್ಠಗೋತ್ರಜನೆಂದೂ ಪ್ರಾಚೀನರು ಹೇಳುವರು.

ಆಕಾಶರಾಜ :- ಸಂತೋಷ, ಸೀತಾ-ಸತ್ಯಭಾಮಾದಿರೂಪಳಾದ ನಮ್ಮ ಪದ್ಮಾವತಿಯದು ಅತ್ರಿಗೋತ್ರವು. ಅವಳು ಮೃಗಶಿರಾ ನಕ್ಷತ್ರದಲ್ಲಿ ಜನಿಸಿದವಳೆಂದು ಪಂಡಿತರು ಹೇಳುವರು.

ಅವರೀರ್ವರ ಮಾತು ಕೇಳಿ ಬೃಹಸ್ಪತ್ಯಾಚಾರ್ಯರು ವಧೂವರರ ಯೋಗಾದಿಗಳನ್ನು ಚೆನ್ನಾಗಿ ಪರಿಶೀಲಿಸಿ, ಆನಂದ ಮನಸ್ಕರಾಗಿ ಇಂತು ನುಡಿದರು.

ಬೃಹಸ್ಪತಿ :- ನಾನು ಪರಿಶೀಲಿಸಿದ್ದರಲ್ಲಿ ವಿಶೇಷವಾಗಿ ವಧೂವರರ ನಾಡಿಕೂಟ, ಮಾಂಗಲ್ಯಕೂಟ, ಯೋನಿಕೂಟಗಳು ಅತ್ಯಂತ ಅನುಕೂಲರಾಗಿರುವುವು. ಎಲ್ಲ ಗ್ರಹಗಳು ಮಂಗಳದೃಷ್ಟಿಬೀರುತ್ತಿವೆ. ಮಹಾರಾಜ, ಇವೆಲ್ಲವನ್ನೂ ವಿವೇಚಿಸಿ, ನೀನು ಗುರುಹಿರಿಯರು ಬಾಂಧವರಲ್ಲಿ ಆರ್ಯಭಾವವನ್ನು ತಾಳಿ ಬಂಧುಮಿತ್ರರೊಡನೆ ವಿಚಾರವಿನಿಮಯ ಮಾಡಿಕೊಂಡು ಕನ್ಯಾದಾನ ಮಾಡು.

ದೇವಗುರುಗಳ ವಚನವನ್ನು ಆಲಿಸಿ ಆಕಾಶರಾಜನು ಪರಮಭಕ್ತಿಯಿಂದ ಕುಲವೃದ್ಧರಾದ ತನ್ನ ಗುರು ಹಿರಿಯರು ಬಾಂಧವರಲ್ಲಿ ಪೂಜ್ಯಭಾವವನ್ನು ವಹಿಸಿ ಜ್ಞಾತಿಗಳು, ಬಾಂಧವರು, ಸಂಬಂಧಿಗಳು, ಹಿತೈಷಿ, ಮಿತ್ರರು ಇನ್ನಿತರ ಪೌರಜಾನಪದರೊಡನೆ ಕಲೆತು ಕನ್ಯಾದಾನ ವಿಚಾರವಾಗಿ ಮಂತ್ರಾಲೋಚನೆ ಮಾಡಿದನು. ಅವನ ಸಮಸ್ತ ಬಂಧುವರ್ಗದವರು ಆಕಾಶರಾಜನನ್ನು ಪ್ರಶಂಸಿಸಿ, ಗೌರವಿಸಿ ಕನ್ಯಾದಾನಕ್ಕೆ ತಮ್ಮ ಸಮ್ಮತಿಯನ್ನು ಆನಂದದಿಂದ ನೀಡಿದರು.

ಅನಂತರ ಆಕಾಶರಾಜನು ರಾಜಸಭೆಯನ್ನೇರ್ಪಡಿಸಿ ರತ್ನಸಿಂಹಾಸನದಲ್ಲಿ ಕುಳಿತು ಕನ್ಯಾನಿಶ್ಚಯ ನಿಮಿತ್ತವಾಗಿ ಮಂತ್ರಪಠಣಪೂರ್ವಕವಾಗಿ ಪುಣ್ಯಾಹವನ್ನಾಚರಿಸಿ ಆ ಮಹಾಸಭೆಯಲ್ಲಿ ಎದ್ದು ನಿಂತು ಬಲತೋಳನ್ನು ಮೇಲೆತ್ತಿ ''ಶ್ರೀರಮಾದೇವಿಗೆ ಆಶ್ರಯನಾದ ಸಾರಂಗಪಾಣಿಯಾದ ಶ್ರೀಹರಿಗೆ ನನ್ನ ಪುತ್ರಿಯಾದ ಪದ್ಮಾವತಿಯನ್ನು ಕೊಟ್ಟು ವಿವಾಹವನ್ನು ನೆರವೇರಿಸುತ್ತೇನೆ. ಈ ಮಹಾಮಂಗಳಕಾರ್ಯದಲ್ಲಿ ಬಂಧುವರ್ಗದ ನೀವೆಲ್ಲರೂ ನನ್ನಲ್ಲಿ ಕರುಣೆಬೀರಿರಿ'' ಎಂದು ಪ್ರತಿಜ್ಞೆಮಾಡಿ, ಗುರುಜನರಲ್ಲಿ ವಿಶ್ವಾಸವುಳ್ಳ ಆಕಾಶರಾಜನು ದೇವಗುರು ಬೃಹಸ್ಪತ್ಯಾಚಾರ್ಯರನ್ನು ಉದ್ದೇಶಿಸಿ ''ಸ್ವಾಮಿ, ತಮ್ಮ ಆಣತಿಯಂತೆ ಕನ್ಯಾದಾನ ಸಂಕಲ್ಪವನ್ನು ಮಾಡಿದೆನು. ಈಗ ಮುಂದೇನು ಮಾಡಬೇಕೆಂಬುದನ್ನು ತಿಳಿಸಿರಿ'' ಎಂದನು.

ಅಂಗಿರಸಕುಮಾರರಾದ ಬೃಹಸ್ಪತ್ಯಾಚಾರ್ಯರು ''ರಾಜನ್, ನೀನು ಈಗ ಶ್ರೀನಿವಾಸನಿಗೆ ಲಗ್ನಪತ್ರಿಕೆಯನ್ನು ಬರೆದು ವಿಪ್ರರ ದ್ವಾರಾ ಶ್ರೀಹರಿಗೆ ಕಳುಹಿಸು'' ಎಂದರು. ಆಗ ಆಕಾಶರಾಜನು ''ಬುಧೋತ್ತಮರೇ, ಮಾನವರಂತೆ ಹೇಯವಾದ ಶರೀರರಹಿತನಾದ ಅಂದರೆ ಅಪ್ರಾಕೃತನಾದ ಶ್ರೀಹರಿಪರಮಾತ್ಮನಿಗೆ ಪ್ರಾಕೃತಶರೀರಿಗಳಾದ ನಾವು ಬರೆಯುವುದೇನಿದೆ? ಆದರೂ ಗುರುವರ್ಯ, ಏನು ಬರೆಯಬೇಕೆಂಬುದನ್ನು ತಿಳಿಸಿರಿ'' ಎನಲು, ಬೃಹಸ್ಪತ್ಯಾಚಾರ್ಯರು ಲಗ್ನಪತ್ರಿಕೆಯಲ್ಲಿ ಬರೆಯಬೇಕಾದ ಅಂಶವನ್ನು ಆದರದಿಂದ ನರಪತಿಗೆ ಹೇಳಿದರು. ಆಕಾಶರಾಜನು ಗುರುಗಳ ಉಪದೇಶದಂತೆ ಶ್ರೀನಿವಾಸನಿಗೆ ಹೀಗೆ ಲಗ್ನಪತ್ರಿಕೆಯನ್ನು ಬರೆದನು.

''ಅಪ್ರಾಕೃತನೂ ಅನಾದಿನಿತ್ಯನೂ ಸಚ್ಚಿದಾನಂದಸ್ವರೂಪನೂ ಆದ ಸರ್ವಸ್ವತಂತ್ರನಾದ(ಯಾವುದೇ ವಿಚಾರದಲ್ಲಿಯೂ ಮತ್ತೊಬ್ಬರ ಸಹಾಯವಿಲ್ಲದೆ ಸ್ವತಂತ್ರನಾಗಿ ನೆರವೇರಿಸಲು ಶಕ್ತನಾದ) ಏಕಮೇವಾ-ದ್ವಿತೀಯನಾದ ಅನಂತರೂಪ ವಿರಾಜಿತನೂ ಸಾರಂಗ ಧನುರ್ಧರನೂ ದೇವತೆಗಳಲ್ಲಿ ಶ್ರೇಷ್ಠರಾದ ಗರುಡ-ಶೇಷ-ರುದ್ರ ಮೊದಲಾದವರಿಂದ ಪೂಜಿತನಾದ, ಬ್ರಹ್ಮದೇವರಿಂದ ಆರಾಧ್ಯನಾದ, ವೇದ್ಯೋಪಾದೇಯರೂಪನೂ, ಭಕ್ತಪ್ರಿಯನೂ, ವ್ಯಾಪಕನೂ (ವಿಷ್ಣು) ಆದ, ಸಕಲ ಅಂಗಗಳಿಂದ ಸಹಿತವಾದ ವೇದ ಉಪನಿಷತ್ -ಪುರಾಣ-ಪಾಂಚರಾತ್ರಾದಿ ಆಗಮಗಳಿಂದ ತಿಳಿಯಲ್ಪಟ್ಟ (ತಿಳಿಯಲು ಅಸಾಧ್ಯನಾದ), ಅನಂತಕಲ್ಯಾಣ ಗುಣಗಳಿಂದಲೂ, ಅಪ್ರತಿಹತಕಾರ್ಯಗಳಿಂದಲೂ ಶೋಭಿಸುವ, ವೇಂಕಟಗಿರಿಯಲ್ಲಿ ವಾಸಮಾಡುತ್ತಿರುವ, ಶ್ರೀಲಕ್ಷ್ಮೀದೇವಿಯನ್ನು ಹೃದಯದಲ್ಲಿ ಧರಿಸಿರುವ ಶ್ರೀಕೃಷ್ಣನಾಮಕ ಶ್ರೀನಿವಾಸನಿಗೆ ಆಕಾಶರಾಜನಾಮಕನಾದ ನಾನು ಬಂಧುವಾದುದರಿಂದ ಸಲುಗೆಯಿಂದ ನಿನಗೆ ಆಶೀರ್ವಾದ ಮಾಡುತ್ತಿದ್ದೇನೆ.

ಹೇ ದೇವತಾಸಾರ್ವಭೌಮ! ನಿನ್ನ ಕಮನೀಯ ಚರಣಕಮಲಗಳ ಸಂದರ್ಶನಾಕಾಂಕ್ಷಿಯಾದ ನಾನು, ಭೋ ಮಾಧವ, ನಿನ್ನ ಮಹದಾಶ್ರಯವನ್ನು ಬಯಸುತ್ತಾ ಶುಭಾಶಂಸನ ಪೂರ್ವಕವಾಗಿ ಈ ಮಂಗಳ ಲಗ್ನಪತ್ರಿಕೆಯನ್ನು ಬರೆಯುತ್ತಿದ್ದೇನೆ. ದೇವ! ಪತ್ನೀ-ಪುತ್ರ-ಸಹೋದರರಿಂದೊಡಗೂಡಿ ನಾವು ಕುಶಲದಿಂದಿದ್ದೇವೆ. ಕೇವಲ ನಿನ್ನ ಪ್ರಸಾದ ಮಾತ್ರದಿಂದಲೇ ನಾರಾಯಣಪುರದಲ್ಲಿ ಸುಖವಾಗಿ ವಾಸವಾಗಿದ್ದೇವೆ. ಅಲ್ಲಿ ನಿಮ್ಮೆಲ್ಲರ ಕ್ಷೇಮವಾರ್ತೆಯನ್ನು ತಿಳಿಸುವ ಕೃಪೆಮಾಡು. ಶ್ರೀನಿವಾಸ! ಈ ಶುಭಪತ್ರಿಕೆಯನ್ನು ಚೈತ್ರಶುಕ್ಲ ತ್ರಯೋದಶಿ ದಿನದಂದು ಬರೆಯುತ್ತಿದ್ದೇನೆ.

ಪ್ರಭು! ನನ್ನ ಕುಮಾರಿಯಾದ ಪದ್ಮಾವತಿಯನ್ನು ನಿನಗೆ ವಿವಾಹಮಾಡಿಕೊಡಲು ಆಶಿಸಿದ್ದೇನೆ. ಗೋವಿಂದ, ದಯಮಾಡಿ ನನ್ನ ಪುತ್ರಿಯಾದ ಪದ್ಮಾವತಿಯನ್ನು ವಿವಾಹ ವಿಧಿಪೂರ್ವಕವಾಗಿ ಅಂಗೀಕರಿಸಿ ನಮ್ಮಲ್ಲಿ ಪರಮಾನುಗ್ರಹ ಮಾಡು. ನನ್ನ ಮನದ ಆಶಯವನ್ನೆಲ್ಲಾ ಪೂಜ್ಯ ಶುಕಮುನಿಗಳು ತಿಳಿದಿದ್ದಾರೆ. ಪುರುಷೋತ್ತಮ, ಕನ್ಯಾದಾನ ವಿಷಯದ ಬಗೆಗೆ ಸಂಶಯಪಡಬೇಡ. ಇದೇ ವೈಶಾಖ ಶುಕ್ಲ ದಶಮಿ ಶುಕ್ರವಾರದ ದಿವಸ ಬಂಧು-ಬಾಂಧವರು-ದೇವತಾಸಮೂಹದೊಡನೆ ಇಲ್ಲಿಗೆ ಆಗಮಿಸಿ ಸಂತೋಷದಿಂದ ಪದ್ಮಾವತಿಯ ಕರಪಿಡಿದು ನನ್ನನ್ನು ಉದ್ಧರಿಸಬೇಕೆಂದು ಪ್ರಾರ್ಥಿಸುತ್ತೇನೆ. ಪುರುಷೋತ್ತಮನಾದ ನಿನಗೆ ಹೆಚ್ಚು ಬರೆಯುವುದೇನಿದೆ. ಬ್ರಹ್ಮರುದ್ರಾದಿನಿಯಾಮಕನಾದ ಸ್ವಾಮಿ, ಶುಕಮುನಿಗಳು ವಿಜ್ಞಾಪಿಸುವುದನ್ನು ಮನಸ್ಸಿಗೆ ತಂದುಕೊಂಡು ಆ ಕಾರ್ಯವನ್ನು ನೆರವೇರಿಸು.

ಸಮಸ್ತ ಪ್ರಪಂಚಕ್ಕೆ ಸ್ವಾಮಿಯಾದ, ಮಹಾಮಹಿಮನಾದ, ನಿತ್ಯನೂ ಸತ್ಯಸ್ವರೂಪನೂ, ಅನಂತಕಲ್ಯಾಣ ಗುಣಾರ್ಣವನೂ, ಸರ್ವರಿಗೂ ಪ್ರಭುವೂ ಆದ ಶ್ರೀನಿವಾಸ! ಇಂತು ಮಂಗಳಾಶೀರ್ವಾದಗಳು.

**ಚೈತ್ರಶುಕ್ಲತ್ರಯೋದಶಿ** ನಿನ್ನ ಆಗಮನಾಕಾಂಕ್ಷಿಯಾದ
**ನಾರಾಯಣಪುರ** ಆಕಾಶರಾಜ''

ಇಂತು ಮಂಗಳಲಗ್ನಪತ್ರಿಕೆಯನ್ನು ಬರೆದು ಹಿಂಬಾಲಿಸಿ ಬರುತ್ತಿರುವ ಬಾಂಧವ-ಪುತ್ರ-ಮಿತ್ರರಿಂದೊಡಗೂಡಿ ಆಕಾಶರಾಜನು, ಶುಭಲಗ್ನಪತ್ರಿಕೆಯೊಡನೆ ಮಹಾತ್ಮರಾದ ಶುಕಾಚಾರ್ಯರನ್ನು ಜಗದೀಶ್ವರನಾದ ಶ್ರೀ ಶ್ರೀನಿವಾಸನ ಸನ್ನಿಧಿಗೆ ಕಳುಹಿಸಿಕೊಟ್ಟನು.

ಅನಂತರ ಒಂದು ಹರಿದಾರಿಯವರೆಗೆ ಶುಕಾಚಾರ್ಯರನ್ನು ಹಿಂಬಾಲಿಸಿ ಹೋಗಿ ರಹಸ್ಯವಾಗಿ ಶುಕಮುನಿಗಳನ್ನು ಕುರಿತು ''ಗುರುವರ್ಯ! ಹೇಗಾದರೂ ಮಾಡಿ ಶ್ರೀನಿವಾಸನ ಮನಸ್ಸನ್ನು ವಶಪಡಿಸಿಕೊಳ್ಳಿರಿ. ಶ್ರೀನಿವಾಸನಿಗೆ ನಾನು ವರದಕ್ಷಿಣೆಯ ರೂಪವಾಗಿ ಹತ್ತು ಸಾವಿರ ಲಕ್ಷ ಸುವರ್ಣವಾಗಲೀ, ಒಂದು ಕೋಟಿ, ಅಷ್ಟೇ ಏಕೆ ಒಂದು ಅರ್ಬುದ ಸುವರ್ಣನಾಣ್ಯವಾದರೂ ಸರಿ, ನಾನು ಕೊಡಲು ಸಿದ್ಧನಿದ್ದೇನೆ ಇದರಲ್ಲಿ ಸಂದೇಹವಿಲ್ಲ. ಹೇಗಾದರೂ ಅವನ ಮನಸ್ಸನ್ನು ಗೆದ್ದು ಈ ಶುಭಕಾರ್ಯವನ್ನು ಯಶಸ್ವಿಗೊಳಿಸಿ ಅನುಗ್ರಹಿಸಿರಿ'' ಎಂದು ಹೇಳಿದನು. ಶುಕಮುನಿಗಳು ''ಮಹಾರಾಜ ನಿನ್ನಿಷ್ಟದಂತೆಯೇ ಮಾಡುತ್ತೇನೆ'' ಎಂದು ಭರವಸೆಕೊಟ್ಟು ಶ್ರೀನಿವಾಸನ ದರ್ಶನ ಕುತೂಹಲದಿಂದ ಶೇಷಗಿರಿಯತ್ತ ಪ್ರಯಾಣ ಬೆಳೆಸಿದರು. ಸೂರ್ಯನು ಮಧ್ಯಭಾಗಕ್ಕೆ ಬರುತ್ತಿರಲು (ಮಧ್ಯಾಹ್ನವಾಗಲು) ಶ್ರೀನಿವಾಸನ ತಾಯಿಯಾದ ಬಕುಳಾದೇವಿಯು ತನ್ನನ್ನು ಅನುಸರಿಸಿ ಬರುತ್ತಿರಲು ಶಿಷ್ಯಸಹಿತರಾಗಿ ಶ್ರೀನಿವಾಸನ ದರ್ಶನದಿಂದುಂಟಾಗುವ ಸಂತೋಷದಿಂದ ಮಾರ್ಗಾಯಾಸವನ್ನು ಗಣನೆಗೆ ತಾರದೇ ವೈರಾಗ್ಯನಿಧಿಗಳಾದ ಶುಕಾಚಾರ್ಯರು ವೇಂಕಟಗಿರಿಗೆ ದಯಮಾಡಿಸಿದರು.

ಶ್ರೀವೇಂಕಟೇಶ್ವರನು ದೂರದಲ್ಲಿ ಶುಕಮುನಿಗಳು ಬರುತ್ತಿರುವುದನ್ನು ಕಂಡು ಇಷ್ಟು ಹೊತ್ತಾದರೂ ನನ್ನ ತಾಯಿಯು ಏಕೆ ಇನ್ನೂ ಬರಲಿಲ್ಲ ಎಂದು ಚಿಂತಿಸುತ್ತಿರಲು ಶುಕಾಚಾರ್ಯರು ಸಮೀಪಕ್ಕೆ ಬರಹತ್ತಿದರು. ತಲೆಯ ಮೇಲೆ ಕರಜೋಡಿಸಿ ಶಿರಃ ಕಂಪನ ಮಾಡುತ್ತಾ ಬರುತ್ತಿರುವ ಶುಕಮುನಿಗಳನ್ನು ನೋಡಿ ಶ್ರೀನಿವಾಸನು ತನ್ನ ಕಾರ್ಯವು ಸಫಲವಾಯಿತೆಂದು ಭಾವಿಸಿದನು. ಆಸನದಿಂದ ದಿಗ್ಗನೆ ಮೇಲೆದ್ದ ಶ್ರೀನಿವಾಸನು ಭಕ್ತಿಯಿಂದ ಶುಕಮುನಿಗಳನ್ನುದ್ದೇಶಿಸಿ ''ಭೂಸುರೋತ್ತಮರೇ, ನನ್ನ ಕಾರ್ಯವು ಹಣ್ಣಾಯಿತೇ ಅಥವಾ ಹಣ್ಣಾಗಲಿಲ್ಲವೇ?'' ಎಂದು ತವಕದಿಂದ ಪ್ರಶ್ನಿಸಿದನು.

ಶುಕಾಚಾರ್ಯರು ಮಂದಹಾಸಬೀರುತ್ತಾ ''ಕರುಣಾಸಾಗರ, ನಿನ್ನ ಕಾರ್ಯವು ಸಫಲವಾಗಿದೆ. ಇದರಲ್ಲಿ ಸಂಶಯವಿಲ್ಲ'' ಎಂದರು. ಶ್ರೀನಿವಾಸನು ಆಚಾರ್ಯ ಶುಕರ ಮುಖದಿಂದ ಶುಭನುಡಿಯನ್ನಾಲಿಸಿ, ಅವರಿಗೆ ಸಾಷ್ಟಾಂಗ ಪ್ರಣಾಮಗಳನ್ನರ್ಪಿಸಿ ಪ್ರೀತಿಯಿಂದ ಆಲಿಂಗಿಸಿ ಹರ್ಷದಿಂದ ಮೈಮರೆತನು.

ಜನಕಮಹಾರಾಜ! ಅತ್ಯಂತಾಶ್ಚರ್ಯಕರ ಶುಭಚರಿತ್ರನಾದ ಶ್ರೀನಿವಾಸನು ಶುಕರನ್ನು ಕುರಿತು ಹೇಳಿದನು.

ಶ್ರೀನಿವಾಸ :- ಮುನೀಂದ್ರ, ಒಬ್ಬ ಸಾಮಾನ್ಯ ಮಾನವನಿಗೆ ಮದುವೆ ಮಾಡಿಸಲಾಶಿಸುವವರು ಸಹಸ್ರಾರು ಸುಳ್ಳುಗಳನ್ನು ಹೇಳುವರು. ಇಂತು ಸುಳ್ಳು ಹೇಳಿ ಲಗ್ನ ಮಾಡಿಸಿದವರು ನನ್ನ ಶುಭ ವೈಕುಂಠಧಾಮವನ್ನು ಸೇರುವರು. ಅಂದಮೇಲೆ ಜನತ್ಕುಟುಂಬಿಯಾದ ನನಗೆ ವಿವಾಹ ಮಾಡಿಸಲು ಸಹಾಯಮಾಡಿದ ನಿಮ್ಮ ವಿಷಯ ಹೇಳುವುದೇನಿದೆ. ಮಾನವನು ತನ್ನ ಹೆಂಡತಿ ಮಕ್ಕಳು ಆಶ್ರಯಿಸಿರುವ ಜನರು ಮತ್ತು ಮನೆಯನ್ನು ಮಾತ್ರ ರಕ್ಷಿಸಿ ಪೋಷಿಸುವನು. ನಾನಾದರೋ ಜಗತ್ಕುಟುಂಬಿಯಾಗಿದ್ದೇನೆ. ಬ್ರಹ್ಮಾಂಡವೇ ನನ್ನ ಮನೆ, ಬ್ರಹ್ಮನು ನಾಭಿಕಮಲದಿಂದ ಜನಿಸಿದ ಪುತ್ರನು. ಸಂಪದಭಿಮಾನಿನಿಯಾದ ಸಾಕ್ಷಾತ್ ಲಕ್ಷ್ಮೀದೇವಿಯು ನನ್ನ ಪತ್ನಿ. ಇನ್ನಿತರ ದೇವತಾದಿಗಳು ನನ್ನ ಔರಸರು. ತೊಂಭತ್ತಾರು ಲಕ್ಷಯೋನಿಗಳಲ್ಲಿ ಅಸಂಖ್ಯಾತ ಜೀವರು ನನ್ನನ್ನು ಆಶ್ರಯಿಸಿದ್ದಾರೆ. ಮುನಿವರ್ಯರಾದ ಶುಕಾಚಾರ್ಯರೇ, ಇವರೆಲ್ಲರ ರಕ್ಷಣೆ, ಪೋಷಣೆಗಳಲ್ಲಿ ನಾನು ದೀಕ್ಷಾಬದ್ಧನಾಗಿದ್ದೇನೆ. ಇಂತು ಮಹಾಕುಟುಂಬಿಯಾದ ನನ್ನ ವಿವಾಹ ಮಾಡಿಸಲು ನೀವು ಆಕಾಶರಾಜನಿಗೆ ಅದೆಷ್ಟು ಸುಳ್ಳು ಹೇಳಿದಿರೋ ನಾನರಿಯೆ. ನಿಮ್ಮ ಉಪಕಾರಕ್ಕೆ ಪ್ರತ್ಯುಪಕಾರವಾಗಿ ಕೊಡಲು ನನ್ನ ಬಳಿ ಏನೂ ಇಲ್ಲ. ಆದ್ದರಿಂದ ನಿಮಗೆ ನನ್ನ ಶರೀರಾಲಿಂಗನವನ್ನು ದಯಪಾಲಿಸುವೆನು. ನನ್ನ ಶರೀರಕ್ಕಿಂತಲೂ ಶ್ರೇಷ್ಠವೂ ಶುಭಕರವೂ ಆದುದು ಬೇರೊಂದಿಲ್ಲ.

ಇಂತು ನುಡಿದು ಶ್ರೀನಿವಾಸನು ಶುಕಮುನಿಗಳಿಗೆ ತನ್ನ ಶರೀರಾಲಿಂಗನವನ್ನು ಕರುಣಿಸಿದನು. ಮುಂದುವರೆದು ಶ್ರೀನಿವಾಸನು ಇಂತೆಂದನು.

ಶ್ರೀನಿವಾಸ :- ಮುನಿವರ್ಯ, ನಿಮ್ಮ ಪುಣ್ಯಕ್ಕೆ ಮೇರೆಯೇ ಇಲ್ಲ. ನನ್ನ ಅಂಗಸಂಗವು ನಿಮಗೆ ನೀವು ಮಾಡಿದ ಪುಣ್ಯದಿಂದಲೇ ದೊರಕಿತೆಂದು ತಿಳಿಯಿರಿ. ಪೂರ್ವದಲ್ಲಿ ಪವನನಂದನನಾದ ಹನುಮಂತನು ಸೀತಾ ನಿಮಿತ್ತವಾಗಿ ಸೀತಾನ್ವೇಷಣ ಸಮುದ್ರಲಂಘನ, ಮುದ್ರಾಂಗುಲೀಕಪ್ರದಾನ, ನನ್ನ ಕುಶಲವಾರ್ತಾನಿರೂಪಣ, ಸೀತೆಯು ನೀಡಿದ ಚೂಡಾಮಣಿಯನ್ನು ತಂದುಕೊಟ್ಟು ಸೀತೆಯ ಕುಶಲವಾರ್ತೆಯನ್ನು ಅರುಹಿ ಮಹಾಕಾರ್ಯವನ್ನು ಮಾಡಿದನು. ಆಗ ನಾನು ಹನುಮಂತನಿಗೆ ಸಹಭೋಜನವನ್ನೂ ಸತ್ಯಲೋಕಾಧಿಪತ್ಯ (ಭಾವೀ ಬ್ರಹ್ಮಪದ)ವನ್ನು ಅನುಗ್ರಹಿಸಿದೆನು. ನೀವೂ ಸಹ ಅದೇ ರೀತಿಯ ಮಹತ್ಕಾರ್ಯವನ್ನು ಮಾಡಿರುವಿರಿ. ತಾಪಸ ವರೇಣ್ಯರೇ, ಅಷ್ಟೇ ಏಕೆ, ನೀವು ಮಾಡಿದ ಈ ಕಾರ್ಯವು ಹನುಮಂತನೆಸಗಿದ ಕಾರ್ಯಕ್ಕಿಂತಲೂ ಬಹು ಶ್ರೇಷ್ಠವಾದುದು.

ಹೀಗೆ ಶ್ರೀಹರಿಯು ಶುಭಕರಗಳಾದ ಬಗೆಬಗೆಯ ವಚನವಿನ್ಯಾಸಗಳಿಂದ ಶುಕಮುನಿಗಳನ್ನು ಮುದಗೊಳಿಸಿ, ಅನಂತರ ''ಶುಕಮುನೀಂದ್ರರೇ, ನಿಮ್ಮ ಕಂಕಳಿನಲ್ಲಿ ಸೂರ್ಯನಂತೆ ಪ್ರಕಾಶಿಸುತ್ತಿದೆಯಲ್ಲ, ಅದೇನು'' ಎಂದು ಪ್ರಶ್ನಿಸಲು ಶುಕಾಚಾರ್ಯರು ''ಮಹನೀಯನಾದ ಪುರುಷೋತ್ತಮ, ಇದು ಆಕಾಶಭೂಪತಿಯು ನಿನಗೆ ಬರೆದಿರುವ ಲಗ್ನಪತ್ರಿಕೆಯು. ಇದರ ಬಗೆಗೆ ನಾನು ಹಿಂದೆಯೇ ನಿನ್ನ ಕಾರ್ಯವು ಹಣ್ಣಾಯಿತು ಎಂದು ಹೇಳಿದಾಗ ಮನವರಿಕೆ ಮಾಡಿಕೊಟ್ಟಿರುವೆನು'' ಎಂದು ಹೇಳಿ ಲಗ್ನಪತ್ರಿಕೆಯನ್ನು ಶ್ರೀನಿವಾಸನಿಗೆ ಸಮರ್ಪಿಸಿದರು. ಶ್ರೀನಿವಾಸನು ಲಗ್ನಪತ್ರಿಕೆಯನ್ನು ಶಿರಸಾಧಾರಣಮಾಡಿ, ''ಋಷಿವರ್ಯ ಆಕಾಶರಾಜನು ಕುಶಲಿಯೇ? ಅವನ ಪತ್ನಿ, ಸಹೋದರನಾದ ತೋಂಡಮಾನರಾಜ, ಅವನ ಪುತ್ರ ವಸುಧಾನ-ಇವರೆಲ್ಲರೂ ಕ್ಷೇಮದಿಂದಿರುವರೇ'' ಎಂದು ಕೇಳಲು ಶುಕಾಚಾರ್ಯರು ''ಭಗವನ್, ನಿನ್ನ ಅನುಗ್ರಹದಿಂದ ಆಕಾಶರಾಜ ಅವನ ಬಂಧುವರ್ಗದವರೆಲ್ಲರೂ ಕುಶಲದಿಂದಿರುವರು'' ಎಂದು ವಿಜ್ಞಾಪಿಸಿದರು.

ಆ ತರುವಾಯ ಶ್ರೀವಾಸುದೇವನು ಆಕಾಶರಾಜನು ಬರೆದ ಲಗ್ನಪತ್ರಿಕೆಯನ್ನು ಓದಿ ಹರ್ಷಪುಲಕಿತನಾಗಿ ''ಸ್ವಾಮಿ, ಶುಕಮುನಿಗಳೇ,ನಾನೂ ಆಕಾಶರಾಜನಿಗೆ ಲಗ್ನಪತ್ರಿಕೆಯನ್ನು ಬರೆಯುವೆನು. ತಾವು ದಯಮಾಡಿ ಬರೆಯುವ ಕ್ರಮವನ್ನು ನಿರೂಪಿಸಿರಿ. ಅದರಂತೆ ಬರೆಯುವೆನು'' ಎಂದು ಹೇಳಿ ಇಂದ್ರಸಖನಾದ ಆಕಾಶರಾಜನಿಗೆ ಬಹ್ವರ್ಥಗರ್ಭಿತವಾದ ತನ್ನ ಸಂತೋಷಸೂಚಕವಾದ ಶುಭಪತ್ರವನ್ನು ಹಿಂದೆ ಕೃಷ್ಣಾವತಾರ ಕಾಲದಲ್ಲಿ ರುಕ್ಮಿಣಿಗೆ ಬರೆದಂತೆ ಸ್ವತಃ ಹೀಗೆ ಬರೆದನು.

*''ರಾಜಾಧಿರಾಜರಿಂದ ಪೂಜ್ಯನಾದ ಸುಧರ್ಮರಾಜನ ಕುಮಾರನಾದ, ಆಕಾಶರಾಜನಿಗೆ ಅತಿಭಕ್ತಿಪೂರ್ವಕ ವಂದನೆಗಳನ್ನು ಸಲ್ಲಿಸುತ್ತಾ ಶ್ರೀನಿವಾಸನಾದ ನಾನು ಮಂಗಳಕರ ವಿಜ್ಞಾಪನಾಗರ್ಭಿತವಾದ ಈ ಶುಭ ಲಗ್ನಪತ್ರಿಕೆಯನ್ನು ಬರೆಯುತ್ತಿದ್ದೇನೆ.*

*ಕಾಂತಿ-ಸಂಪದ್ಯುಕ್ತರಾದ ರಾಜಮಹಾರಾಜರ ರತ್ನಖಚಿತಕಿರೀಟಗಳಿಂದ ಸ್ಪೃಷ್ಟವಾದ ಪಾದಕಮಲ ಶೋಭಿತನಾದ ಸಂಪೂರ್ಣಗುಣಸಮೃದ್ಧಿಯುಳ್ಳ ದಶದಿಕ್ಕುಗಳಲ್ಲಿಯೂ ಹರಡಿರುವ ಸತ್ಕೀರ್ತಿಯಿಂದ ಕಂಗೊಳಿಸುವ, ನನ್ನ ಬಂಧುವರೇಣ್ಯನಾದ ಸುಧರ್ಮರಾಜನ ಪುತ್ರನಾದ ಆಕಾಶರಾಜನಾಮಕನಾದ ಪ್ರಭುವೇ, ನಿನಗೆ ಶಾರ್ಙ್ಗಪಾಣಿಯಾದ ಬಾಲಕ ಶ್ರೀನಿವಾಸನು ನಮನ ಪೂರ್ವಕವಾಗಿ ವಿಜ್ಞಾಪಿಸುವುದೇನೆಂದರೆ.*

*ರಾಜೇಂದ್ರ! ನೀನು ನನಗೆ ಬರೆದ ಪತ್ರವನ್ನು ಓದಿ ಪರಮಾನಂದವಾಯಿತು. ವೈಶಾಖ ಶುಕ್ಲದಶಮಿ ಶುಕ್ರವಾರದಂದು ಜರುಗುವ ಕಲ್ಯಾಣಮಹೋತ್ಸವದಲ್ಲಿ ನಾನು ನಿನ್ನ ಕುವರಿಯಾದ ಪದ್ಮಾವತಿಯನ್ನು ಸ್ವೀಕರಿಸುವೆನು. ಹಿಂದೆ ಸಮುದ್ರರಾಜನಾದ ವರುಣನು ತನ್ನ ಪುತ್ರಿಯಾದ ಲಕ್ಷ್ಮೀದೇವಿಯನ್ನು ನನಗೆ ಮದುವೆ ಮಾಡಿಕೊಟ್ಟು ಕೀರ್ತಿಶಾಲಿಯಾದನು. ನೀನೂ ಅದರಂತೆ ನನಗೆ ಪದ್ಮಾವತಿಯನ್ನು ವಿವಾಹ ಮಾಡಿಕೊಟ್ಟು ಅತಿಶಯ ಕೀರ್ತಿ ಗೌರವಗಳನ್ನು ಗಳಿಸಿ ಕಂಗೊಳಿಸು.*

*ನರೇಂದ್ರ! ಪೂರ್ವದಲ್ಲಿ ಕಪಿಲಮುನಿಯ ಜ್ಞಾನಚಕ್ಷುವಿನ ಅಗ್ನಿಯಿಂದ ಧರೆಗೊರಗಿ ಮೃತರಾಗಿ ಭಸ್ಮರಾದ ಸಗರ ಚಕ್ರವರ್ತಿಯ ಪುತ್ರರಾದ ಅರವತ್ತು ಸಾವಿರ ಜನರನ್ನು ಭಗೀರಥ ಮಹಾರಾಜನು ಗಂಗೆಯನ್ನು ಕರೆತಂದು ಆ ಸಗರ ಪುತ್ರರನ್ನು ಉದ್ಧರಿಸಿ ಕೀರ್ತಿಗಳಿಸಿದನು. ನೀನೂ ಸಹ ಅದರಂತೆಯೇ ನನಗೆ ನಿನ್ನ ಮಗಳಾದ ಪದ್ಮಾವತಿಯನ್ನು ಪ್ರದಾನಮಾಡಿ ನಿನ್ನ ಹಿಂದಿನ ಮುಂದಿನ ಕುಲವನ್ನು, ವಂಶಸಂಜಾತವನ್ನು ಉದ್ಧಾರಮಾಡಿ ಬೇರೊಬ್ಬರಿಂದ ಪಡೆಯಲಸದಳವಲ್ಲದ ಅತಿಶಯಕೀರ್ತಿಯನ್ನು ಹೊಂದು.*

*ರಾಜನ್ ವಿಶೇಷವಾಗಿ ಎಲ್ಲ ವಿಚಾರಗಳನ್ನೂ ಬಲ್ಲವನಾದ ನಿನಗೆ ಹೆಚ್ಚು ಬರೆಯುವುದೇನಿದೆ? ಧರ್ಮಾತ್ಮನಾದ ಶುಕಮುನಿಯು ನನ್ನೆಲ್ಲ ಸಮಾಚಾರಗಳನ್ನೂ ತಿಳಿದಿರುವನು. ಇಂತು ಶ್ರೀನಿವಾಸನ ಪ್ರಣತಿ ಪರಂಪರಾಪೂರ್ವಕ ವಿಜ್ಞಾಪನೆಗಳು.*

ನಿನ್ನ ದರ್ಶನಕಾಂಕ್ಷಿ
ಶ್ರೀ ವೇಂಕಟಗಿರಿನಿವಾಸಿಯಾದ
ಶ್ರೀನಿವಾಸ''

ಸುರೇಂದ್ರನಿಂದ ಆರಾಧ್ಯನಾದ ಶೇಷಾದ್ರಿನಾಥನಾದ ಶ್ರೀನಿವಾಸನು ಇಂತು ಶುಭಲಗ್ನಪತ್ರಿಕೆಯನ್ನು ಬರೆದು ಆಕಾಶರಾಜನಿಗೆ ತಲುಪಿಸಲು ಶುಕಮುನಿಗಳಿಗೆ ಕೊಟ್ಟು ಅವರನ್ನು ನಾರಾಯಣಪುರಿಗೆ ಕಳಿಸಿದನು. ಅನಂತರ ಹೊರಟುನಿಂತ ಶುಕಾಚಾರ್ಯರನ್ನು ತಡೆದು ನಿಲ್ಲಿಸಿಕೊಂಡು ಕಪಟನಾಟಕಸೂತ್ರಧಾರಿಯಾದ ಶ್ರೀಹರಿಯು ಲಗ್ನ ನಿಶ್ಚಯವಾಗಿ ಕನ್ಯೆಯನ್ನು ಸ್ವೀಕರಿಸುವುದಾಗಿ ಒಪ್ಪಿ ತಾನೂ ಆಕಾಶರಾಜನಿಗೆ ಲಗ್ನಪತ್ರಿಕೆಯನ್ನು ಬರೆದು ಶುಕಮುನಿಗಳಿಗೆ ಕೊಟ್ಟು ಎಲ್ಲವೂ ತೀರ್ಮಾನವಾದಮೇಲೆ ವಿಡಂಬನ ಮಾಡುತ್ತಾ ತನ್ನ ಲೀಲಾವಿಲಾಸವನ್ನು ತೋರುತ್ತಾ ಶುಕಮುನಿಗಳಿಗೆ ಹೇಳಿದನು.

ಶ್ರೀನಿವಾಸ :- ಶುಕಮುನಿಗಳೇ, ಆಕಾಶರಾಜನು ನನ್ನ ವಂಶ, ಗೋತ್ರ, ರಾಜ್ಯ, ಕೋಶ, ಮನೆ ಮುಂತಾದುದನ್ನು ಅರಿಯದೆ ಅದೇಂತು ನನಗೆ ಕನ್ಯಾಪ್ರದಾನ ಮಾಡುವನು.

ಶುಕಾಚಾರ್ಯರು :- ಪರಮಾತ್ಮಾ ಶ್ರೀಹರಿ! ಇದೇನು ನಿನ್ನ ವಿಡಂಬನೆ! ನಿನಗಾವ ಕುಲಗೋತ್ರಗಳೂ ಇಲ್ಲ. ಜನನಮರಣಗಳಿಲ್ಲ, ವೃದ್ಧಾಪ್ಯ ಅಭಿವೃದ್ಧಿಗಳಿಲ್ಲ, ಸಕಲ ಜಗತ್ತನ್ನೂ ವ್ಯಾಪಿಸಿರುವ ನಿನಗೆ ಸ್ಥಾನವೇಕೆ? ಸಕಲರಿಗೂ ಆಶ್ರಯನಾದ ನಿನಗೆ ಮತ್ತೊಬ್ಬರ ಆಶ್ರಯದಹಂಗುಂಟೆ? ಪುರಾಣಪುರುಷೋತ್ತಮ, ಹೇ ಗೋವಿಂದ ಸರ್ವೋತ್ತಮನಾದ ವಿಷ್ಣುವೇ, ಹೀಗೇಕೆ ವಿಡಂಬ ಮಾಡುತ್ತಿರುವೆ? ಅಖಂಡ ಬ್ರಹ್ಮಾಂಡದಲ್ಲಿ ವೇದಾದಿಶಾಸ್ತ್ರಗಳಿಂದ ಗೇಗೀಯಮಾನನಾಗಿ ವಿಖ್ಯಾತನಾದ, ಸಕಲಜಗತ್ತಿಗೇ ಪ್ರಭುವಾದ, ನಿನಗೆ ಕುಲಗೋತ್ರಗಳ ಅಪೇಕ್ಷೆಯಿದೆಯೆ, ಅದಾವುದರ ಅವಶ್ಯಕತೆಯೂ ನಿನಗಿಲ್ಲ. ಸ್ವಾಮಿ, ಆಕಾಶರಾಜನು ನಿನ್ನ ಭಕ್ತನಾದ ನನ್ನ ಮಾತನ್ನು ಕೇಳಿ ಕನ್ಯಾಪ್ರದಾನಮಾಡುವನು. ಜಗನ್ನಾಥ, ನನ್ನ ಮನವಿಯನ್ನು ಮನ್ನಿಸಿ, ನನಗಾಗಿ ನೀನು ಆಕಾಶರಾಜನಲ್ಲಿ ಕರುಣೆ ಬೀರಿ ಪದ್ಮಾವತಿಯನ್ನು ಪರಿಗ್ರಹಿಸಬೇಕು.

ಹೀಗೆ ಪರಮಾತ್ಮನನ್ನು ಸ್ತೋತ್ರಮಾಡಿ ಶ್ರೀನಿವಾಸನಿಂದ ಬೀಳ್ಕೊಂಡು ಹರಿದರ್ಶನದಿಂದುಂಟಾದ ಹರ್ಷದಿಂದ ಶುಕಮುನಿಗಳು ನಾರಾಯಣಪುರಿಗೆ ಪ್ರಯಾಣ ಬೆಳೆಸಿದರು.

ಶುಕಾಚಾರ್ಯರು ಹೊರಟ ಮೇಲೆ ಭಕ್ತವತ್ಸಲನಾದ ಭಗವಾನ್ ಶ್ರೀಹರಿಯು ಮಾರ್ಗಾಯಾಸದಿಂದ ಬಳಲಿರುವ ವಯೋವೃದ್ಧಳಾದ ತಾಯಿ ಬಕುಳಾದೇವಿಯು ಬರುವುದನ್ನು ಕಂಡು ಮಾಧವನು ಬಕುಳಮಾಲಿಕೆಗೆ ವಂದಿಸಿ,

''ತಾಯಿ, ಕಮಲಮುಖಿ ನೀನು ಬರಲು ತಡವೇಕಾಯಿತು? ನಾರಾಯಣಪುರದಲ್ಲಿ ವಿಶೇಷ ಸಮಾಚಾರವೇನು? ಎಲ್ಲವನ್ನೂ ನನಗೆ ತಿಳಿಸು'' ಎಂದನು.

ಬಕುಳೆ :- ಹೇ ಪುರುಷೋತ್ತಮ, ಬಹುಶ್ರಮಪಟ್ಟು ಪ್ರಯತ್ನಿಸಿ, ನಿನಗೆ ಪದ್ಮಾವತಿಯನ್ನು ನಿಶ್ಚಯಿಸಿಕೊಂಡು ಬಂದಿದ್ದೇನೆ. ನಿನ್ನ ಕಾರ್ಯವನ್ನು ಸಾಧಿಸಿದ್ದೇನೆ. ಹೂಂ, ನಾನೇನು ಸಾಧಿಸಿದ್ದು? ಶ್ರೀನಿವಾಸ! ದೇವೇಚ್ಛೆಗಿಂತ ಮಿಗಿಲಾದುದಿಲ್ಲ. ಯಾವುದೇ ಒಂದು ಕಾರ್ಯದ ಸಫಲತೆಗೆ ಪುರುಷಪ್ರಯತ್ನವು ಖಂಡಿತ ಕಾರಣವಲ್ಲ. ಇದು ನನ್ನ ಅನುಭವದಿಂದ ಹೇಳುತ್ತಿರುವ ಮಾತು. ಶ್ರೀಕೃಷ್ಣ, ಬದರಿಯ ನಾರಾಯಣಾಶ್ರಮದಿಂದ ಧರ್ಮದೇವಿಯು ಬಂದಳು. ದೈವೇಚ್ಛೆಯಿಂದಲೇ ಮಂಗಳಾಂಗಿಯು ರಾಜಮಂದಿರಕ್ಕೂ ಆಗಮಿಸಿದಳು. ನಾನೇನು ಹೇಳಲಿ, ಮಾಧವ! ಆ ಧರ್ಮದೇವಿಯು ರಾಜಪುತ್ರಿಯಾದ ಪದ್ಮಾವತಿಯನ್ನು ನಿನಗೇ ವಿವಾಹ ಮಾಡಿಕೊಡಬೇಕೆಂದು ರಾಜಪತ್ನಿಗೆ ಖಡಾಖಂಡಿತವಾಗಿ ಹೇಳಿ ನನ್ನ ಕೆಲಸವನ್ನು ಹಗುರಮಾಡಿದಳು. ಆಶ್ಚರ್ಯವೆಂದರೆ ದೇವ! ಆ ಪದ್ಮಾವತಿಯೂ ನಿನ್ನನ್ನು ಬಿಟ್ಟು ಬೇರಾವ ಸಾಮಾನ್ಯ ಮಾನವನನ್ನೂ ಅಪೇಕ್ಷಿಸುತ್ತಿಲ್ಲ. ಧರ್ಮದೇವಿಯ ಮಾತು, ಪದ್ಮಾವತಿಯ ದೃಢನಿರ್ಧಾರ ಇವೆಲ್ಲವನ್ನೂ ವಿವೇಚಿಸಿ ಆಕಾಶರಾಜನು ನಿನಗೇ ಪದ್ಮಾವತಿಯನ್ನು ಕೊಡಲು ಸಮ್ಮತಿಸಿದನು ಮತ್ತು ''ನನ್ನ ಕುಮಾರಿಯಾದ ಪದ್ಮಾವತಿಯನ್ನು ವೇಂಕಟಾಚಲವಾಸಿಯಾದ ಶ್ರೀನಿವಾಸನಿಗೆ ವಿವಾಹಮಾಡಿ ಕೊಡುತ್ತೇನೆ'' ಎಂದು ರಾಜಸಭೆಯಲ್ಲಿ ಸಂತೋಷದಿಂದ ಘೋಷಿಸಿ ಸಂಕಲ್ಪ ಮಾಡಿದನು. ನಿಜ, ಇದೆಲ್ಲವೂ ನಿನ್ನದೇ ಲೀಲೆ ನಿನ್ನನ್ನು ಬಿಟ್ಟು ಬೇರಾವ ದೈವವೂ ಇಲ್ಲ. ಇವೆಲ್ಲವೂ ನಿನ್ನಿಂದಲೇ ಸಂಭವಿಸಿತು.''

ಇಂತು ನುಡಿದು ಬಕುಳಾದೇವಿಯು ಪರಮಾನಂದ ತುಂಬಿದವಳಾಗಿ ಶ್ರೀನಿವಾಸ-ಪದ್ಮಾವತಿಯರ ಕಲ್ಯಾಣ ಮಹೋತ್ಸವವನ್ನು ನನ್ನ ಕಣ್ಣಾರೆ ಯಾವಾಗ ನೋಡುವೆನೋ ಎಂದು ಉತ್ಸುಕಳಾಗಿ ಆನಂದಿದಂದ ತನ್ನ ಜನ್ಮವು ಸಫಲವಾಯಿತು ತಾನು ಕೃತಾರ್ಥಳಾದೆನೆಂದು ತಿಳಿದಳು.

ಇಂತು ತಾಯಿಯ ಮಂಗಳಕರನುಡಿಗಳನ್ನಾಲಿಸಿ ಶ್ರೀ ಶ್ರೀನಿವಾಸನು ಮಂದಹಾಸ ವದನನಾದನು. ಆ ತರುವಾಯ ಏನೋ ಯೋಚಿಸಿ ಬಕುಳಾದೇವಿಯನ್ನು ಕುರಿತು ಮಾತನಾಡಿದನು.

*ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೇಂಕಟೇಶಮಹಾತ್ಮೆಯಲ್ಲಿ*
*ಒಂಭತ್ತನೆಯ ಅಧ್ಯಾಯವು ಮುಗಿದುದು*

*॥ ಶ್ರೀವೇಂಕಟೇಶನಿಗೆ ಅರ್ಪಿತವಾಗಲಿ ॥*

# ಹತ್ತನೆಯ ಅಧ್ಯಾಯ

*ಮೂಲ— ಜನಕ ಉವಾಚ -*

**ಮಾತುರ್ವಚನಮಾಕರ್ಣ್ಯ ಕೃತವಾನ್ ಕಿಂ ರಮಾಪತಿಃ ।**
**ತನ್ಮಮಾಚಕ್ಷ್ವ ಭಗವನ್ ಸವಿಸ್ತಾರಂ ಸತಾಂ ಪ್ರಿಯಃ ॥ 1 ॥**

ಜನಕ ಉವಾಚ = ಜನಕರಾಜನು ಹೇಳಿದನು, ಭಗವನ್ = ಎಲೈ ಪೂಜ್ಯರಾದ ಶತಾನಂದ ಋಷಿಗಳೇ, ಸತಾಂಪ್ರಿಯಃ = ಸಜ್ಜನರಿಗೆ ಪ್ರಿಯನಾದ, ರಮಾಪತಿಃ = ಲಕ್ಷ್ಮೀಕಾಂತನು, ಮಾತುಃ = ತಾಯಿಯಾದ ಬಕುಳಾದೇವಿಯ, ವಚನಂ = ನುಡಿಯನ್ನು, ಆಕರ್ಣ್ಯ = ಕೇಳಿದವನಾಗಿ, ಕಿಂ ಕೃತವಾನ್ = ಏನು ಮಾಡಿದನು? ತತ್ = ಅದನ್ನು, ಮಮ = ನನಗೆ, ಆಚಕ್ಷ್ವ = ಹೇಳುವವನಾಗು ॥ 1 ॥

*ಶತಾನಂದ ಉವಾಚ -*

**ತ್ವಂ ಹರೇರಸಿ ಭಕ್ತೇಷು ಪ್ರಥಮೋಽತಿಪ್ರಿಯಃ ಸದಾ ।**
**ತಸ್ಮಾದ್ಧರಿಕಥಾಸಕ್ತಮನಾಸ್ತೇ ತು ವದಾಮಿ ತತ್ ॥ 2 ॥**

ಶತಾನಂದ ಉವಾಚ = ಶತಾನಂದ ಹೇಳಿದರು, ಸದಾ = ಯಾವಾಗಲೂ, ಹರಿಕಥಾಸಕ್ತಮನಾಃ = ಶ್ರೀಹರಿಯ ಕಥೆಯಲ್ಲಿ ಆಸಕ್ತವಾದ ಮನಸ್ಸುಳ್ಳವನಾದ, ತ್ವಂ = ನೀನು, ಹರೇಃ = ಹರಿಯ, ಭಕ್ತೇಷು = ಭಕ್ತರಲ್ಲಿ, ಅತಿಪ್ರಿಯಃ = ಅತ್ಯಂತ ಪ್ರೀತ್ಯಾಸ್ಪದರೊಳಗೆ, ಪ್ರಥಮಃ ಅಸಿ = ಮೊದಲಿಗನಾಗಿದ್ದೀಯೆ, ತಸ್ಮಾತ್ = ಆದಕಾರಣದಿಂದ, ತತ್ = ಶ್ರೀಹರಿಯ ಕಥೆಯನ್ನು, ತೇತು = ನಿನಗೆ, ವದಾಮಿ = ಹೇಳುವೆನು. ॥ 2 ॥

**ಸ್ವಯಮಾನಂದಪೂರ್ಣೋಽಪಿ ಕರ್ಮಭುಜ್ನರವದ್ಧರಿಃ ।***
**ಮಾತ್ರಾಚೋದಿತಮಾಕರ್ಣ್ಯ ತಾಮೂಚೇ ಮಧುರಂ ವಚಃ ॥ 3 ॥**

ಹರಿಃ = ಶ್ರೀ ವಿಷ್ಣುವು, ಸ್ವಯಂ = ಸ್ವತಃ, ಆನಂದಪೂರ್ಣೋಽಪಿ = ನಿರವಧಿಕಾನಂದಪೂರ್ಣನಾಗಿದ್ದರೂ ಸಹ, ಕರ್ಮಭುಕ್ = ಕರ್ಮವನ್ನು ಅನುಭವಿಸುವ, ನರವತ್ = ಮಾನವನಂತೆ (ನಟಿಸುತ್ತಾ) (ಪಾ-ಕರ್ಮಭುಂಜನ್ = ಕರ್ಮವನ್ನು ಅನುಭವಿಸುವವನಾಗಿ, ತದಾ = ಆವಾಗ) ಮಾತ್ರಾ = ತಾಯಿಯಿಂದ, ಉದಿತಂಚ = ಹೇಳಲ್ಪಟ್ಟಿದ್ದನ್ನು, ಆಕರ್ಣ್ಯ = ಕೇಳಿದವನಾಗಿ, ತಾಂ = ಅವಳನ್ನು ಕುರಿತು, ಮಧುರಂ ವಚಃ = ಮಧುರವಾದ ಮಾತನ್ನು, ಊಚೇ = ಹೇಳಿದನು ॥ 3 ॥

*ಶ್ರೀನಿವಾಸ ಉವಾಚ -*

**ಮಹೋತ್ಸವಂ ವಿಧಾತುಂ ಹಿ ಮಮ ಬುದ್ಧಿರ್ನಜಾಯತೇ ।**
**ಅಬಂಧೋರ್ಬಂಧುಯುಕ್ತಸ್ಯ ಸಂಬಂಧೋ ನ ಪ್ರಶಸ್ಯತೇ ॥ 4 ॥**

---
* ಪಾ :- ಕರ್ಮ ಭುಂಜನ್ ತದಾ ಹರಿಃ

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳುತ್ತಿದ್ದಾನೆ – ಮಹೋತ್ಸವಂ = ವಿವಾಹ ಮಹೋತ್ಸವವನ್ನು, ವಿಧಾತುಂ = ನೆರವೇರಿಸಲು (ಮಾಡಿಕೊಳ್ಳಲು), ಮಮ = ನನ್ನ, ಬುದ್ಧಿಃ = ಬುದ್ಧಿಯು, ನ ಜಾಯತೇ = ಉಂಟಾಗುವುದಿಲ್ಲ (ಉಂಟಾಗುತ್ತಿಲ್ಲ), ಅಬಂಧೋಃ = ಬಾಂಧವರಿಲ್ಲದವರಿಗೆ, ಬಂಧುಯುಕ್ತಸ್ಯ = ಬಂಧುಬಾಂಧವರುಳ್ಳವರೊಡನೆ, ಸಂಬಂಧಃ = ಸಂಬಂಧವು, ನ ಪ್ರಶಸ್ಯತೇ = ಪ್ರಶಸ್ತವಾಗುವುದಿಲ್ಲ, ಹಿ = ಇದು ಪ್ರಸಿದ್ಧವು ॥ 4 ॥

**ಯಯೋರೇವ ಸಮಂ ವಿತ್ತಂ ಯಯೋರೇವ ಸಮೋಽನ್ವಯಃ ।**
**ತಯೋರ್ವಿವಾಹೋ ಮೈತ್ರೀ ಚ ನೋತ್ತಮಾಧಮಯೋರಪಿ ॥ 5 ॥**

ಯಯೋರೇವ = ಯಾರು ಯಾರಿಗೆ, ಸಮಂ ವಿತ್ತಂ = ಸಮಾನವಾದ ಸಂಪತ್ತಿರುವುದೋ, ಯಯೋರೇವ = ಯಾರು ಯಾರಿಗೆ, ಅನ್ವಯಃ = ವಂಶವು, ಸಮಃ = ಸಮಾನವಾಗಿರುವುದೋ, ತಯೋಃ = ಅವರವರಿಗೇ (ಅವರವರಲ್ಲಿಯೇ) ವಿವಾಹಃ = ಮದುವೆಯು, ಸ ಚ = ಮತ್ತು, ಮೈತ್ರಿ = ಸ್ನೇಹವು, (ಪ್ರಶಸ್ಯತೇ = ಪ್ರಶಸ್ತವಾಗಿರುವುದು), ಅಪಿ = ಮತ್ತು, ಉತ್ತಮಾಧಮಯೋಃ = ಉತ್ತಮರು ಅಧಮರಾದವರಲ್ಲಿ, ನ = ಯುಕ್ತವಾಗುವುದಿಲ್ಲ ॥ 5 ॥

**ವಿವಾಹಶ್ಚ ವಿವಾದಶ್ಚ ಸಮಯೋರೇವ ಶೋಭತೇ ।**
**ಅಹಮೇಕಃ ಸೋಽಪಿ ಬಂಧುಸಮೇತೋ ಧರಣೀಪತಿಃ ॥ 6 ॥**

ಸಮಯೋರೇವ = ಸಮಾನಸ್ಕಂಧರಿಗೇ, ವಿವಾಹಶ್ಚ = ಮದುವೆಯೂ, ವಿವಾಹವೂ ಕೂಡ, ಶೋಭತೇ = ಶೋಭಿಸುವುದು, ಅಹಂ = ನಾನು, ಏಕಃ = ಬಂಧುಬಾಂಧವರಿಲ್ಲದ ಒಬ್ಬೊಂಟಿಗನು, ಧರಣೀಪತಿಃ = ಭೂಪತಿಯಾದ, ಸೋಽಪಿ = ಅವನು (ಅವನಾದರೋ), ಬಂಧುಸಮೇತಃ = ಬಾಂಧವರೊಡಗೂಡಿದವನಾಗಿದ್ದಾನೆ ॥ 6 ॥

**ಕಥಂ ನೃಪಸ್ಯಾಸ್ಯ ಮಯೋಚಿತಃ ಸ್ಯಾ-ದಬಂಧುನಾ ಬಂಧುಯುತಸ್ಯ ಸಂಗಃ ।**
**ಭವೇತ್ಸುಖಂ ನೇತಿ ವದಂತಿ ಸಂತಃ ಇತ್ಯದ್ಯ ಚಿಂತಾ ಖಲು ಬಾಧತೇ ಮಾಮ್ ॥ 7 ॥**

ಬಂಧುಯುತಸ್ಯ = ಬಂಧುಗಳಿಂದ ಸಹಿತನಾದ, ಅಸ್ಯ ನೃಪಸ್ಯ = ಈ ಆಕಾಶರಾಜನೊಡನೆ, ಅಬಂಧುನಾ = ಬಾಂಧವರಿಲ್ಲದ, ಮಯಾ = ನನ್ನಿಂದ (ಮಯಾ ಸಹ = ನನ್ನೊಡನೆ), ಸಂಗಃ = ಸಂಬಂಧವು, ಕಥಂ = ಹೇಗೆ ತಾನೆ, ಉಚಿತಃ ಸ್ಯಾತ್ = ಉಚಿತವಾಗುವುದು? ಸುಖಂ = ಅದರಿಂದ ಸುಖವು, ನ ಭವೇತ್ = ಉಂಟಾಗುವುದಿಲ್ಲ, ಇತಿ = ಹೀಗೆ, ಸಂತಃ = ಸಜ್ಜನರು, ವದಂತಿ = ಹೇಳುತ್ತಾರೆ, ಇತಿ = ಈ ಪ್ರಕಾರವಾಗಿ, ಅದ್ಯ = ಈಗ, ಮಾಂ = ನನ್ನನ್ನು, ಚಿಂತಾ ಖಲು = ಚಿಂತೆಯು, ಬಾಧತೇ = ಬಾಧಿಸುವುದು ॥ 7 ॥

**ಬಂಧುಹೀನಸ್ಯ ಮೇ ರಾಜಾ ಕಥಂ ಕನ್ಯಾಂ ಪ್ರದಾಸ್ಯತಿ ।**
**ವಾಸುದೇವವಚಃ ಶ್ರುತ್ವಾ ಬಕುಲಾ ವಾಕ್ಯಮಬ್ರವೀತ್ ॥ 8 ॥**

ಬಂಧುಹೀನಸ್ಯ = ಬಾಂಧವರಿಲ್ಲದ, ಮೇ = ನನಗೆ, ರಾಜಾ = ಆಕಾಶರಾಜನು, ಕಥಂ = ಹೇಗೆ, ಕನ್ಯಾಂ = ಮಗಳಾದ ಪದ್ಮಾವತಿಯನ್ನು, ಪ್ರದಾಸ್ಯತಿ = ಕೊಡುತ್ತಾನೆ? ಬಕುಲಾ = ಬಕುಳಮಾಲಿಕೆಯು, ವಾಸುದೇವ ವಚಃ = ಶ್ರೀಕೃಷ್ಣನ ಮಾತನ್ನು, ಶ್ರುತ್ವಾ = ಕೇಳಿ, ವಾಕ್ಯಮಬ್ರವೀತ್ = ಮಾತನಾಡಿದಳು ॥ 8 ॥

*ಬಕುಲೋವಾಚ-*

**ತ್ವಾದೃಶಃ ಪುರುಷೋ ಲೋಕೇ ನಾಸತ್ಯಂ ವದತಿ ಕ್ವಚಿತ್ ।**
**ಸತ್ಯಮೇವ ಪ್ರಶಸ್ಯಂತಿ ಮುನಯೋ ವೀತಕಲ್ಮಷಾಃ** ॥ 9 ॥

**ಶುಕಸ್ತ್ವತ್ಕಾರ್ಯನಿಷ್ಠಸ್ತುದೇವಾನಾಂಗುರುರಂಗಿರಾಃ +**
**ಸದ್ಧರ್ಮಿಣೋ ಮಹೀಶಸ್ಯ ತಸ್ಯಾಶಾಂ ಮಾ ವೃಥಾ ಕುರು** ॥ 10 ॥

**ಸ್ಮರ ಬಂಧೂನ್ ಸುರಾನ್ ಸರ್ವಾನ್ ಬ್ರಹ್ಮರುದ್ರಪುರೋಗಮಾನ್ ।**
**ಪುತ್ರಾನ್ ಪೌತ್ರಾನ್ ತಥಾ ಭ್ರಾತ್ರೂನ್ ಸ್ನುಷಾಶ್ಚ ಪುರುಷೋತ್ತಮ** ॥ 11 ॥

ಬಕುಲೋವಾಚ = ಬಕುಳೆಯು ಹೇಳಿದಳು : ಲೋಕೇ = ಜಗತ್ತಿನಲ್ಲಿ, ತ್ವಾದೃಶಃ = ನಿನ್ನಂಥ, ಪುರುಷಃ = ಪುರುಷನು, ಕ್ವಚಿತ್ = ಸ್ವಲ್ಪವೂ, ಅಸತ್ಯಂ = ಸುಳ್ಳನ್ನು, ನ ವದತಿ = ಹೇಳುವುದಿಲ್ಲ. ವೀತಕಲ್ಮಷಾಃ = ಪಾಪರಹಿತರಾದ, ಮುನಯಃ = ಋಷಿಗಳು, ಸತ್ಯಮೇವ = ಸತ್ಯವನ್ನೇ, ಪ್ರಶಂಸಂತಿ = ಹೊಗಳುವರು (ಶ್ಲಾಘಿಸುವರು). ಶುಕಸ್ತು = ಶುಕಾಚಾರ್ಯರು, ತ್ವತ್ಕಾರ್ಯನಿಷ್ಠಃ = ನಿನ್ನ ವಿವಾಹ ಕಾರ್ಯದಲ್ಲಿ ನಿಷ್ಠೆಯುಳ್ಳವರಾಗಿದ್ದಾರೆ, ದೇವಾನಾಂ ಗುರುಃ = ದೇವತೆಗಳಿಗೆ ಉಪದೇಶಕರಾದ, ಅಂಗಿರಾಃ = ಅಂಗಿರಸಪುತ್ರರಾದ ಬೃಹಸ್ಪತ್ಯಾಚಾರ್ಯರು, (ತ್ವತ್ಕಾರ್ಯನಿಷ್ಠಃ = ನಿನ್ನ ಈ ಕಾರ್ಯದಲ್ಲಿ ನಿಷ್ಠೆವಹಿಸಿದ್ದಾರೆ (ಪಾ- ದೇವಾನಾಂ ಗುರುಃ = ದೇವತೆಗಳಿಗೆ ಗುರುಗಳಾದ, ಬೃಹಸ್ಪತ್ಯಾಚಾರ್ಯರು, ಈಶ್ವರಃ = ಈ ಲಗ್ನಕಾರ್ಯದ ನಿಯಾಮಕರಾಗಿದ್ದಾರೆ), ಸದ್ಧರ್ಮಿಣಃ = ಧರ್ಮಶೀಲನಾದ, ತಸ್ಯ = ಆ, ಮಹೀಶಸ್ಯ = ಆಕಾಶರಾಜನ, ಆಶಾಂ = ಆಸೆಯನ್ನು (ಇಚ್ಛೆಯನ್ನು), ವೃಥಾ ಮಾಕುರು = ವ್ಯರ್ಥ ಮಾಡಬೇಡ ॥ 10 ॥ ಪುರುಷೋತ್ತಮ = ಹೇ ಪುರುಷೋತ್ತಮನೇ, (ಬ್ರಹ್ಮರುದ್ರಪುರೋಗಮಾನ್ = ಬ್ರಹ್ಮದೇವರು, ರುದ್ರದೇವರೇ ಮೊದಲಾದ), ಸರ್ವಾನ್ = ಸಮಸ್ತರಾದ, ಬಂಧೂನ್ = ಬಂಧುಗಳಾದ, ಸುರಾನ್ = ದೇವತೆಗಳನ್ನೂ, ಪುತ್ರಾನ್ = ಮಕ್ಕಳನ್ನೂ, ಪೌತ್ರಾನ್ = ಮೊಮ್ಮಕ್ಕಳನ್ನೂ, ಭ್ರಾತ್ರೂನ್ = ಸಹೋದರರನ್ನೂ, ತಥಾ = ಹಾಗೆಯೇ, ಸ್ನುಷಾಶ್ಚ = ಸೊಸೆಯರನ್ನೂ, ಸ್ಮರ = ಸ್ಮರಿಸು ॥ 11 ॥

**ತೇಷಾಂ ಗತಿಸ್ತು ಗೋವಿಂದ ದುರ್ಲಭಾ ಚ ಕಲೌ ಯುಗೇ ।**
**ಸೋಽಪಿ ಪಶ್ಯತು ರಾಜರ್ಷಿ ಸ್ತತ್ಸಂಬಂಧಿಜನಾನಿಹ** ॥ 12 ॥

ಗೋವಿಂದ = ಶ್ರೀಹರಿಯೇ, ಕಲೌಯುಗೇ = ಕಲಿಯುಗದಲ್ಲಿ, ತೇಷಾಂ ಗತಿಃ = ಅವರ ಗಮನವು (ಭೂಮಿಗೆ ಆಗಮಿಸುವುದು), ದುರ್ಲಭವು, ಸೋಽಪಿ = ಆ, ರಾಜರ್ಷಿಃ = ರಾಜರ್ಷಿಯಾದ ಆಕಾಶರಾಜನು, ಇಹ = ಈ ಭೂತಳದಲ್ಲಿ, ತತ್ = ಆ ನಿನ್ನ, ಸಂಬಂಧಿಜನಾನ್ = ಬಂಧುಗಳಾದ ದೇವಾನುದೇವತೆಗಳನ್ನು, ಪಶ್ಯತು = ನೋಡಲಿ ॥ 12 ॥

**ಮಾತುರ್ವಚನಮಾಕರ್ಣ್ಯ ಮನಸಾ ಶೇಷಪಕ್ಷಿಣೌ ।**
**ಸಸ್ಮಾರ ಪೃಥಿವೀಪಾಲ ಶ್ರೀನಿವಾಸ ಸ್ಸತಾಂ ಗತಿಃ** ॥ 13 ॥

ಪೃಥಿವೀಪಾಲ = ಎಲೈ ಜನಕಮಹಾರಾಜ! ಸತಾಂಗತಿಃ = ಸಜ್ಜನರಿಗೆ ರಕ್ಷಕನಾದ, ಶ್ರೀನಿವಾಸಃ = ಶ್ರೀನಿವಾಸನು, ಮಾತುಃ = ತಾಯಿಯ, ವಚನಂ = ಮಾತನ್ನು, ಆಕರ್ಣ್ಯ = ಕೇಳಿ, ಮನಸಾ = ಮನದಲ್ಲಿ, ಶೇಷಪಕ್ಷಿಣೌ = ಶೇಷದೇವ – ಗರುಡದೇವರನ್ನು, ಸಸ್ಮಾರ = ಸ್ಮರಿಸಿದನು ॥ 13 ॥

---

+ ಪಾ :- ಗುರುರೀಶ್ವರಃ ।

**ತಾವಾಗತೌ ಶೇಷವಿಯಚ್ಚರೌ ತದಾ ಕ್ಷಣೇನ ಶೇಷಾಚಲವಲ್ಲಭಾಂತಿಕಮ್ ।**
**ದದರ್ಶ ಭಕ್ತ್ಯಾ ಪುರತಃ ಸ್ಥಿತಾ ವಿಮೌ ನಿದೇಶಯಾಮಾಸ ಪುರಾಣ ಪುರುಷಃ ॥ 14 ॥**

ತದಾ = ಆವಾಗ, ತೌ = ಆ, ಶೇಷವಿಯಚ್ಚರೌ = ಶೇಷ-ಗರುಡರು, ಕ್ಷಣೇನ = ಒಂದು ಕ್ಷಣದಲ್ಲಿ, ಶೇಷಾಚಲವಲ್ಲಭಾಂತಿಕಂ = ಶೇಷಗಿರಿಗೆ ಸ್ವಾಮಿಯಾದ ಶ್ರೀನಿವಾಸನ ಬಳಿಗೆ, ಆಗತೌ = ಬಂದರು. ಪುರಾಣಪುರುಷಃ = ಅನಾದಿ ಪರಮಪುರುಷನಾದ ಶ್ರೀಹರಿಯು, ಪುರತಃ = ತನ್ನ ಮುಂಭಾಗದಲ್ಲಿ, ಭಕ್ತ್ಯಾ = ಭಕ್ತಿಯಿಂದ, ಸ್ಥಿತೌ = ನಿಂತ ಗರುಡಶೇಷರನ್ನು, ದದರ್ಶ = ನೋಡಿದನು, ಮತ್ತು ಇಮೌ = ಇವರನ್ನು ಕುರಿತು, ನಿರ್ದೇಶಯಾಮಾಸ = ಆದೇಶ ಮಾಡಿದನು. ॥ 14 ॥

*ಶ್ರೀನಿವಾಸ ಉವಾಚ -*

**ಪಕ್ಷಿರಾಡ್ಗಚ್ಛ ಮೇ ಪುತ್ರಂ ಸತ್ಯಲೋಕೇಶ್ವರಂ ಪ್ರಿಯಮ್ ।**
**ಗಚ್ಛಾಹಿಭೂಷಣಂ ಶೇಷ ಮಮ ಪೌತ್ರಮುಮಾಪತಿಮ್ ॥ 15 ॥**

ಶ್ರೀನಿವಾಸ ಉವಾಚ = ಶ್ರೀನಿವಾಸ ಹೇಳಿದನು : ಪಕ್ಷಿರಾಟ್ = ಪಕ್ಷಿಗಳಿಗೆ ರಾಜನಾದ ಗರುಡ! ಸತ್ಯಲೋಕೇಶ್ವರಂ = ಸತ್ಯಲೋಕಾಧಿಪತಿಯಾದ, ಮೇ = ನನಗೆ (ನನ್ನ), ಪ್ರಿಯಂ = ಪ್ರೀತಿಪಾತ್ರನಾದ, ಪುತ್ರಂ (ಪ್ರತಿ) = ಮಗನನ್ನು ಕುರಿತು, ಗಚ್ಛ = ಹೋಗುವವನಾಗು, ಶೇಷ = ಶೇಷದೇವ, ಮಮ = ನನ್ನ, ಪೌತ್ರಂ = ಮೊಮ್ಮಗನಾದ, ಉಮಾಪತಿಂ = ಪಾರ್ವತಿಪತಿಯಾದ, ಅಹಿಭೂಷಣಂ (ಪ್ರತಿ) = ಸರ್ಪಾಭರಣನಾದ ಶಂಕರನನ್ನು ಕುರಿತು, ಗಚ್ಛ = ಹೋಗುವವನಾಗು ॥ 15 ॥

**ಇತ್ಯುಕ್ತ್ವಾ ಪತ್ರಿಕಾಂ ತಾಭ್ಯಾಂ ವಿಲಿಖ್ಯಾದಾಚ್ಛುಭಾತ್ಮಿಕಾಮ್ ।**
**ಪ್ರಣಿಪತ್ಯಾಥ ವಿಶ್ವೇಶಂ ಖಗಮಾರ್ಗೇಣ ಜಗ್ಮತುಃ ॥ 16 ॥**

ಇತ್ಯುಕ್ತ್ವಾ = ಹೀಗೆ ಹೇಳಿ, ಶುಭಾತ್ಮಿಕಾಂ = ಮಂಗಳ ವಿಷಯಗರ್ಭಿತವಾದ, ಪತ್ರಿಕಾಂ = ಪತ್ರಿಕೆಯನ್ನು, ವಿಲಿಖ್ಯಂ = ಬರೆದು, ತಾಭ್ಯಾಂ = ಅವರಿಬ್ಬರಿಗೂ, ಅದಾತ್ = ಕೊಟ್ಟನು. ಅಥ = ಅನಂತರ, (ತೌ = ಅವರು), ವಿಶ್ವೇಶಂ = ಜಗತ್ಪ್ರಭುವಾದ ಶ್ರೀನಿವಾಸನಿಗೆ, ಪ್ರಣಿಪತ್ಯ = ನಮಸ್ಕಾರ ಮಾಡಿ, ಖಗಮಾರ್ಗೇಣ = ಪಕ್ಷಿಗಳ ಮಾರ್ಗವಾದ ಆಕಾಶಮಾರ್ಗವಾಗಿ, ಜಗ್ಮತುಃ = ಹೋದರು ॥ 16 ॥

**ಸತ್ಯಲೋಕಂ ತತೋ ಗತ್ವಾ ಬ್ರಹ್ಮಾಣಂ ಭಾಸ್ಕರೋಪಮಮ್ ।**
**ದೃಷ್ಟ್ವಾ ನತ್ವಾಥ ಭಕ್ತ್ಯೈವ ಪಕ್ಷಿರಾಟ್ ಪತ್ರಿಕಾಮದಾತ್ ॥ 17 ॥**

ತತಃ = ಆ ವೇಂಕಟಾಚಲದಿಂದ, ಪಕ್ಷಿರಾಟ್ = ಗರುಡನು, ಸತ್ಯಲೋಕಂ = ಸತ್ಯಲೋಕವನ್ನು ಕುರಿತು, ಗತ್ವಾ = ಹೋಗಿ, ಭಾಸ್ಕರೋಪಮಂ = ಸೂರ್ಯಸದೃಶನಾದ, ಬ್ರಹ್ಮಾಣಂ = ಬ್ರಹ್ಮದೇವನನ್ನು, ದೃಷ್ಟ್ವಾ = ನೋಡಿ, ಅಥ = ತರುವಾಯ, ಭಕ್ತ್ಯೈವ = ಭಕ್ತಿಪೂರ್ವಕವಾಗಿ, ನತ್ವಾ = ವಂದಿಸಿ, ಪತ್ರಿಕಾಂ = ಶ್ರೀನಿವಾಸನು ಬರೆದುಕೊಟ್ಟ ಪತ್ರವನ್ನು, ಅದಾತ್ = ಕೊಟ್ಟನು ॥ 17 ॥

**ಪಿತಾಮಹಸ್ತು ತಂ ದೃಷ್ಟ್ವಾ ಗರುಡಂ ಪ್ರತ್ಯಭಾಷತ ।**

*ಬ್ರಹ್ಮೋವಾಚ-*

**ಚಿರಕಾಲೇನ ಸಂಪ್ರಾಪ್ತಃ ಪಕ್ಷಿರಾಟ್ ಕಶ್ಯಪಾತ್ಮಜ *** **॥ 18 ॥**

ಪಿತಾಮಹಃ = ಬ್ರಹ್ಮದೇವನು, ತಂ = ಗರುಡನನ್ನು, ದೃಷ್ಟ್ವಾ ತು = ನೋಡಿದವನಾಗಿ, ಗರುಡಂ ಪ್ರತಿ = ಗರುಡನನ್ನು ಕುರಿತು, ಅಭಾಷತ = ಮಾತನಾಡಿದನು : ಬ್ರಹ್ಮೋವಾಚ = ಬ್ರಹ್ಮದೇವನು ಹೇಳಿದನು : ಕಾಶ್ಯಪಾತ್ಮಜ = ಕಶ್ಯಪಪುತ್ರನಾದ, (ಪಾ : ವಿಷ್ಣುವಾಹನ = ಶ್ರೀಹರಿಗೆ ವಾಹನನಾದ), ಪಕ್ಷಿರಾಟ್ = ಎಲೈ ಗರುಡ, ಚಿರಕಾಲೇನ = ಬಹಳಕಾಲದ ಮೇಲೆ, ಸಂಪ್ರಾಪ್ತಃ (ಅಸಿ) = ಬಂದಿದ್ದೀಯೆ; ॥ 18 ॥

**ಕುತ್ರಾಸ್ತಿ ಶ್ರೀನಿವಾಸ ಸ್ಸ ವಾಸುದೇವಃ ಪಿತಾ ಮಮ ।**
**ಪಿತಾಮಹವಚಃ ಶ್ರುತ್ವಾ ಪಕ್ಷಿರಾಟ್ ವಾಕ್ಯಮಬ್ರವೀತ್** **॥ 19 ॥**

ಮಮ = ನನ್ನ, ಪಿತಾ = ತಂದೆಯಾದ, ಸಃ ವಾಸುದೇವಃ = ಆ ಕೃಷ್ಣನು, ಕುತ್ರ = ಎಲ್ಲಿ, ಅಸ್ತಿ = ಇದ್ದಾನೆ? ಪಕ್ಷಿರಾಟ್ = ಗರುಡನು, ಪಿತಾಮಹವಚಃ = ಬ್ರಹ್ಮದೇವನ ವಚನವನ್ನು, ಶ್ರುತ್ವಾ = ಕೇಳಿದವನಾಗಿ, ವಾಕ್ಯಮಬ್ರವೀತ್ = ಮಾತನಾಡಿದನು. ॥ 19 ॥

*ಗರುಡ ಉವಾಚ -*

**ವಾಸುದೇವೋ ವಸತ್ಯಂಗ ವೈಕುಂಠಗಿರಿಮೂರ್ಧನಿ ।**
**ತದ್ವಿವಾಹಾರ್ಥಮಾಯಾಂತಂ ಮಾಂ ವಿದ್ಧಿ ಚತುರಾನನ** **॥ 20 ॥**

ಗರುಡ ಉವಾಚ = ಗರುಡನು ಹೇಳುತ್ತಿದ್ದಾನೆ : ಅಂಗ! = ಪ್ರಿಯನೇ, ವಾಸುದೇವಃ = ಶ್ರೀನಿವಾಸನು, ವೈಕುಂಠ ಮೂರ್ಧನಿ = ವೇಂಕಟಾಚಲದ ಮೇಲ್ಭಾಗದಲ್ಲಿ (ಶಿರೋಭಾಗದಲ್ಲಿ), ವಸತಿ = ವಾಸಮಾಡುತ್ತಿದ್ದಾನೆ. ಚತುರಾನನ = ಎಲೈ ನಾಲ್ಮೊಗನೇ, ಮಾಂ = ನನ್ನನ್ನು, ತದ್ವಿವಾಹಾರ್ಥಂ = ಅವನ ಮದುವೆಯ ವಿಷಯವಾಗಿ, ಅಯಾಂತಂ = ಬಂದವನನ್ನಾಗಿ, ವಿದ್ಧಿ = ತಿಳಿ ॥ 20 ॥

**ನಾರಾಯಣೇನ ಲಿಖಿತಾಂ ಪತ್ರಿಕಾಮವಲೋಕಯ ।**
**ಪತ್ರಿಕಾಂ ಕೀರ್ತಯಾಮಾಸ ವಾಯುಸ್ಸರ್ವಾತ್ಮಗೋಚರಃ** **॥ 21 ॥**

ನಾರಾಯಣೇನ = ಶ್ರೀಹರಿಯಿಂದ, ಲಿಖಿತಾಂ = ಬರೆಯಲ್ಪಟ್ಟ, ಪತ್ರಿಕಾಂ = ಪತ್ರವನ್ನು, ಅವಲೋಕಯ = ನೋಡು, ಸರ್ವಾತ್ಮಗೋಚರಃ = ಸಕಲ ಜೀವರಲ್ಲಿಯೂ ನೆಲೆಸಿರುವ (ಸರ್ವಜೀವಾಂತರ್ಗತನಾದ), ವಾಯುಃ = ವಾಯುದೇವನು, ಪತ್ರಿಕಾಂ = ಪತ್ರವನ್ನು, ಕೀರ್ತಯಾಮಾಸ = ಓದುವವನಾದನು ॥ 21 ॥

**ಚಿರಂಜೀವಾಯ ಪುತ್ರಾಯ ಬ್ರಹ್ಮಣೇ ನಾಭಿಜನ್ಮನೇ ।**
**ಶ್ರೀವೇಂಕಟಾದ್ರಿನಾಥಸ್ಯ ಶ್ರೀನಿವಾಸಸ್ಯ ಮಂಗಲಾಃ** **॥ 22 ॥**

---

*ಪಾ:- ವಿಷ್ಣುವಾಹನ

**ವೈದಿಕ್ಯ ಆಶಿಷಸ್ಸರ್ವಾಃ ಸರ್ವದಾ ಸಂತು ಪುಷ್ಕಲಾಃ ।**
**ಕಲಾವಾಕಾಶರಾಜೋ ಮೇ ಕನ್ಯಾದಾನಂ ಕರಿಷ್ಯತಿ ॥ 23 ॥**

ಚಿರಂಜೀವಾಯ = ಚಿರಂಜೀವಿಯಾದ, ನಾಭಿಜನ್ಮನೇ = ನಾಭಿಕಮಲದಿಂದ ಉದ್ಭವಿಸಿದ, ಪುತ್ರಾಯ = ಮಗನಾದ, ಬ್ರಹ್ಮಣೇ = ಚತುರ್ಮುಖ ಬ್ರಹ್ಮದೇವನಿಗೆ, ಶ್ರೀವೇಂಕಟಾದ್ರಿನಾಥಸ್ಯ = ಶ್ರೀವೇಂಕಟಾಚಲಕ್ಕೆ ಪ್ರಭುವಾದ, ಶ್ರೀನಿವಾಸಸ್ಯ = ಶ್ರೀನಿವಾಸನ, ಪುಷ್ಕಲಾಃ = ಬಹುವಾದ, ಸರ್ವಾಃ = ಸಮಸ್ತವಾದ, ವೈದಿಕ್ಯ = ವೇದೋಕ್ತವಾದ, ಮಂಗಲಾಃ = ಮಂಗಳಕರವಾದ, ಆಶಿಷಃ = ಆಶೀರ್ವಾದಗಳು, ಸರ್ವದಾ = ಯಾವಾಗಲೂ, ಸಂತು = ಆಗಲಿ (ಇರಲಿ). ಕಲೌ = ಕಲಿಯುಗದಲ್ಲಿ, ಆಕಾಶರಾಜಃ = ಆಕಾಶರಾಜನು, ಮೇ = ನನಗೆ, ಕನ್ಯಾದಾನಂ = ಕನ್ಯಾಪ್ರದಾನವನ್ನು, ಕರಿಷ್ಯತಿ = ಮಾಡುವನು ॥ 22-23 ॥

**ಪತ್ರಿಕಾದರ್ಶನಾದೇವ ಸಪುತ್ರಸ್ಸಪರಿಗ್ರಹಃ ।**
**ಸಲೋಕಪಾಲಃ ಸಸ್ತ್ರೀಕಃ ಸಗಂಧರ್ವಸ್ಸಹೋರಗಃ ॥ 24 ॥**

ಪತ್ರಿಕಾದರ್ಶನಾದೇವ = ಈ ಪತ್ರವನ್ನು ಆಲೋಕಿಸಿದೊಡನೆಯೇ, ಸಪರಿಗ್ರಹಃ = ಸಕಲ ಸಾಮಗ್ರಿಗಳೊಡನೆ, ಸಪುತ್ರಃ = ಪುತ್ರಸಹಿತವಾಗಿ, ಸಲೋಕಪಾಲಃ = ಸರ್ವಲೋಕಪಾಲಕರಿಂದೊಡಗೂಡಿ, ಸಸ್ತ್ರೀಕಃ = ಪತ್ನಿಯರೊಡನೆ, ಸಗಂಧರ್ವಃ = ಗಂಧರ್ವರಿಂದ ಯುಕ್ತನಾಗಿ, ಸಹೋರಗಃ = ನಾಗರರಿಂದೊಡಗೂಡಿದವನಾಗಿ ॥ 24 ॥

**ಸಮಾಗತ್ಯಾಶು ಕಲ್ಯಾಣಂ ದೃಷ್ಟ್ವಾ ಗಚ್ಛ ಯಥಾಸುಖಮ್ ।**
**ಪತ್ರಿಕಾರ್ಥಮಿತಿ ಜ್ಞಾತ್ವಾ ಕಿಂಚಿದ್ಧಾಸ್ಯಮುಖಾನ್ವಿತಃ ॥ 25 ॥**

**ಸಂತೋಷಮತುಲಂ ಲೇಭೇ ವಿಧಿಃ ಕಲ್ಯಾಣಕೌತುಕೀ ।**
**ದ್ವಾರಪಾಲಾನ್ ಸಮಾಹೂಯ ಚೇದಂ ವಚನಮಬ್ರವೀತ್ ॥ 26 ॥**

ಆಶು = ಜಾಗ್ರತೆಯಾಗಿ, ಸಮಾಗತ್ಯ = ಬಂದು, ಕಲ್ಯಾಣಂ = ನನ್ನ ವಿವಾಹವನ್ನು, ದೃಷ್ಟ್ವಾ = ನೋಡಿಕೊಂಡು, ಯಥಾಸುಖಂ = ಸುಖವಾಗಿ, ಗಚ್ಛ = ಹೋಗುವವನಾಗು. ಪತ್ರಿಕಾರ್ಥಂ = ಪತ್ರದ ಅಭಿಪ್ರಾಯವು, ಇತಿ = ಹೀಗೆಂಬುದಾಗಿ, ಜ್ಞಾತ್ವಾ = ತಿಳಿದು, ಕಿಂಚಿತ್ = ಸ್ವಲ್ಪ, ಹಾಸ್ಯಮುಖಾನ್ವಿತಃ = ಮಂದಹಾಸಯುಕ್ತಮುಖವುಳ್ಳವನಾಗಿ ॥ 25 ॥ ಕಲ್ಯಾಣಕೌತುಕೀ = ಶ್ರೀಹರಿಯ ವಿವಾಹವನ್ನು ನೋಡುವ ಕುತೂಹಲದಿಂದ, ವಿಧಿಃ = ಪಿತಾಮಹನು, ಅತುಲಂ = ತುಲನೆಮಾಡಲಸದಳವಾದ, ಸಂತೋಷಂ = ಆನಂದವನ್ನು, ಲೇಭೇ = ಹೊಂದಿದನು ; ದ್ವಾರಪಾಲಾನ್ = ದ್ವಾರಪಾಲಕರನ್ನು, ಸಮಾಹೂಯ = ಕರೆದು, ಇದಂವಚನಂ = ಈ ಮಾತನ್ನು, ಅಬ್ರವೀತ್ = ಹೇಳಿದನು ॥ 26 ॥

**ಭೇರೀ ದುಂದುಭಯಶ್ಚಾದ್ಯ ವಾದ್ಯಂತಾಂ ಸರ್ವತೋಮುಖಮ್ ।**
**ಭವದ್ಭಿರ್ಮೇ ಖ್ಯಾಪಯದ್ಭಿರ್ಗಮನಂ ಧರಣೀತಲೇ ॥ 27 ॥**

ಅದ್ಯ = ಈಗ, ಧರಣೀತಲೇ = ಭೂತಳದಲ್ಲಿ, ಮೇ = ನನ್ನ, ಗಮನಂ = ಹೋಗುವಿಕೆಯನ್ನು, ಖ್ಯಾಪಯದ್ಭಿಃ = ಪ್ರಕಟಿಸುವವರಾದ, ಭವದ್ಭಿಃ = ನಿಮ್ಮಿಂದ, ಸರ್ವತೋಮುಖಂ = ಎಲ್ಲ ಕಡೆಯಲ್ಲಿಯೂ, ಭೇರೀದುಂದುಭಯಶ್ಚ = ನಗಾರಿ ದುಂದುಭಿಗಳು, ವಾದ್ಯಂತಾಂ = ಹೊಡೆಯಲ್ಪಡಲಿ ॥ 27 ॥

**ಇತ್ಯುಕ್ತಾ ದ್ವಾರಪಾಲಾಸ್ತೇ ವಾದ್ಯಾನಿ ಸಮವಾದಯನ್ ।**
**ಬ್ರಹ್ಮಾಣಂ ಪ್ರಣಿಪತ್ಯಾಥ ನಿದೇಶಜ್ಞೋ ವಚೋಽಬ್ರವೀತ್ ॥ 28 ॥**

ಇತ್ಯುಕ್ತಾಃ = ಹೀಗೆ ಉಕ್ತರಾದ (ಹೇಳಲ್ಪಟ್ಟ), ತೇ ದ್ವಾರಪಾಲಾಃ = ಆ ದ್ವಾರಪಾಲಕರು, ವಾದ್ಯಾನಿ = ವಾದ್ಯಗಳನ್ನು, ಸಮವಾದಯನ್ = ಚೆನ್ನಾಗಿ ಬಾರಿಸುವವರಾದರು. ಅಥ = ಆ ತರುವಾಯ, ನಿದೇಶಜ್ಞಃ = ಆದೇಶವನ್ನರಿತವನೊಬ್ಬನು (ಆಜ್ಞಾಕಾರಿಯಾದ ಸೇನಾನಾಯಕನು), ಬ್ರಹ್ಮಾಣಂ = ಬ್ರಹ್ಮದೇವನನ್ನು ಕುರಿತು, ಪ್ರಣಿಪತ್ಯ = ನಮಸ್ಕರಿಸಿ, ವಚೋಽಬ್ರವೀತ್ = ಇಂತು ನುಡಿದನು : ॥ 28 ॥

**ಪ್ರಯಾಣಭೇರೀ ನಿನದಃ ಸುಮಂಗಲಃ ಸಂಶ್ರೂಯತೇ ಸರ್ವಜನೈಃ ಕುತೂಹಲಾತ್ ।**
**ಕಂ ದೇಶಮುದ್ದಿಶ್ಯ ಪಿತಾಮಹಾದ್ಯ ಸಂತಾಡ್ಯತೇ ವಾದ್ಯಗಣೋ ವದಾದ್ಯ ॥ 29 ॥**

ಅದ್ಯ = ಈಗ, ಸುಮಂಗಲಃ = ಮಂಗಳಕರವಾದ, ಪ್ರಯಾಣಭೇರೀನಿನದಃ = ದಿಗ್ವಿಜಯ ಯಾತ್ರೆಯನ್ನು ಸೂಚಿಸುವ ನಗಾರಿಯ ಧ್ವನಿಗಳು, ಕೌತೂಹಲಾತ್ = ಕುತೂಹಲದಿಂದ ಸರ್ವಜನೈಃ = ಸರ್ವಜನರಿಂದಲೂ, ಸಂಶ್ರೂಯತೇ = ಕೇಳಲ್ಪಡುತ್ತಿದೆ, ಪಿತಾಮಹ = ಬ್ರಹ್ಮದೇವ! ಅದ್ಯ = ಈಗ, ಕಂ ದೇಶಮುದಿಶ್ಯ = ಯಾವದೇಶವನ್ನು ಕುರಿತು, ವಾದ್ಯರಣಃ = ರಣವಾದ್ಯವು, ವಾದ್ಯತೇ = ಹೊಡೆಯಲ್ಪಡುವುದು, ವದ = ಹೇಳು ॥ 29 ॥

*ಚತುರ್ಮುಖ ಉವಾಚ –*

**ಭಾರತೇಽಸ್ಮಿನ್ಮಹಾವರ್ಷೇ ಜಂಬೂದ್ವೀಪಸ್ಯ ದಕ್ಷಿಣೇ ।**
**ಶೇಷಾಚಲಂ ಸಮುದ್ದಿಶ್ಯ ನಿಯುಂಕ್ಷ್ವ ಚತುರಂಗಿಣೀಮ್ ॥ 30 ॥**

ಚತುರ್ಮುಖ ಉವಾಚ = ಚತುರ್ಮುಖ ಬ್ರಹ್ಮನು ಹೇಳಿದನು : ಅಸ್ಮಿನ್ ಭಾರತೇ ಮಹಾವರ್ಷೇ = ಈ ಭಾರತ ವರ್ಷದಲ್ಲಿ, ಜಂಬೂದ್ವೀಪಸ್ಯ = ಜಂಬೂದ್ವೀಪದ, ದಕ್ಷಿಣೇ = ದಕ್ಷಿಣದಿಗ್ಭಾಗದಲ್ಲಿರುವ, ಶೇಷಾಚಲಂ ಸಮುದ್ದಿಶ್ಯ = ಶೇಷಪರ್ವತವನ್ನು ಕುರಿತು, ಮೇ = ನನ್ನ, ಪರಾಂ = ಶ್ರೇಷ್ಠವಾದ, ಚತುರಂಗಿಣೀಂ ಸೇನಾಂ = ಚತುರಂಗಸೇನೆಯನ್ನು, ನಿಯುಂಕ್ಷ್ವ = ನಿಯೋಜಿಸು (ನಿರ್ದೇಶಿಸು), ॥ 30 ॥

**ಸೇನಾಂ ಪರಾಂ ಮಮೇತ್ಯುಕ್ತ್ವಾ ಸೇನಾಪತಿಮಥಾಬ್ರವೀತ್ ।**
**ಸ್ಕಂದಾಹ್ವಯ ಸುರಾನ್ ಸರ್ವಾನ್ ಸರ್ವಾನ್ ದಿಕ್ಪಾಲಕಾನಿತಿ ॥ 31 ॥**

ಇತ್ಯುಕ್ತ್ವಾ = ಹೀಗೆ ಹೇಳಿ, ಅಥ = ಅನಂತರ, ಸೇನಾಪತಿಂ = ದೇವಸೇನಾಪತಿಯಾದ ಷಣ್ಮುಖನನ್ನು ಕುರಿತು, ಸ್ಕಂದ = ಎಲೈ ಷಣ್ಮುಖನೇ, ಸರ್ವಾನ್ ಲೋಕಪಾಲಾನ್ = ಸಮಸ್ತ ಲೋಕಪಾಲಕರನ್ನೂ, ಸರ್ವಾನ್ ಸುರಾನ್ = ಸಕಲದೇವತೆಗಳನ್ನೂ, ಆಹ್ವಯ = ಇಲ್ಲಿಗೆ ಆಹ್ವಾನಿಸು. ಇತಿ = ಇಂತು, ಅಬ್ರವೀತ್ = ಹೇಳಿದನು ॥ 31 ॥

**ಸತ್ಯಲೋಕಜನಾನ್ ಸರ್ವಾನ್ ಸ್ವಯಮಾಹ ಪಿತಾಮಹಾ ।**
**ಭವಂತೋ ರಸಿಕಾ ಸ್ಸರ್ವೇ ಕಲ್ಯಾಣಾರ್ಥಂ ಕಲೌಯುಗೇ ॥ 32 ॥**

**ಶ್ರೀನಿವಾಸಸ್ಯ ಕೃಷ್ಣಸ್ಯ ಪಿತುರ್ಮೇ ಪುರುಷೋತ್ತಮಾಃ ।**
**ಸಮಾಗಚ್ಛಂತು ಸರ್ವೇ ಮೇ ಸೇನಾಧೀಶಾ ಮಯಾ ಸಹ ॥**
**ಇತಿ ಬ್ರಹ್ಮವಚಃ ಶ್ರುತ್ವಾ ಸೇನಾನಾಥಾಸ್ತಮಬ್ರುವನ್ ॥ 33 ॥**

ಪಿತಾಮಹಾ = ಬ್ರಹ್ಮದೇವನು, ಸರ್ವಾನ್ = ಸಮಸ್ತರಾದ, ಸತ್ಯಲೋಕಜನಾನ್ = ಸತ್ಯಲೋಕದ ಜನರನ್ನು ಕುರಿತು, ಸ್ವಯಂ = ಸ್ವತಃ, ಆಹ = ಹೇಳಿದನು : ಕಲೌಯುಗೇ = ಕಲಿಯುಗದಲ್ಲಿ, ಮೇ = ನನ್ನ, ಪಿತುಃ = ತಂದೆಯಾದ, ಶ್ರೀನಿವಾಸಸ್ಯ = ಲಕ್ಷ್ಮೀದೇವಿಗೆ ಆಶ್ರಯನಾದ, ಕೃಷ್ಣಸ್ಯ = ಶ್ರೀಕೃಷ್ಣನ, ಕಲ್ಯಾಣಾರ್ಥಂ = ವಿವಾಹಮಹೋತ್ಸವಕ್ಕಾಗಿ, ರಸಿಕಾಃ = ರಸಿಕರಾದ, ಪುರುಷೋತ್ತಮಾಃ = ಪುರುಷಶ್ರೇಷ್ಠರಾದ, ಭವಂತಃ ಸರ್ವೇ = ನೀವೆಲ್ಲರೂ, ಮೇ = ನನ್ನ, ಸರ್ವೇಸೇನಾಧೀಶಾಃ = ಸೇನಾನಾಯಕರೂ ಸಹ, ಸಮಾಗಚ್ಛಂತು = ಬರುವವರಾಗಿರಿ, ಇತಿ = ಈ ಪ್ರಕಾರವಾಗಿ ಹೇಳಿದ, ಬ್ರಹ್ಮವಚಃ = ಬ್ರಹ್ಮದೇವರ ಮಾತನ್ನು, ಶ್ರುತ್ವಾ = ಕೇಳಿ, ಸೇನಾನಾಥಾಃ = ಸೇನಾಧಿಪತಿಗಳು, ತಂ = ಬ್ರಹ್ಮನನ್ನು ಕುರಿತು, ಅಬ್ರುವನ್ = ಹೇಳಿದರು ॥ 32-33 ॥

*ಸೇನಾಪತಯ ಊಚುಃ ॥*

**ವಾರ್ಷಿಕಂ ದೇಹಿ ನೋ ಬ್ರಹ್ಮನ್ನಾಗಚ್ಛಾಮಸ್ತ್ವಯಾ ಸಹ ॥ 34 ॥**

ಸೇನಾಪತಯ ಊಚುಃ = ಸೇನಾಪತಿಗಳು ಹೇಳಿದರು : ಬ್ರಹ್ಮನ್ = ಬ್ರಹ್ಮದೇವ! ನೋ = ನಮಗೆ, ವಾರ್ಷಿಕಂ = ವರ್ಷಾಶನವನ್ನು (ವಾರ್ಷಿಕ ಸಂಬಳವನ್ನು), ದೇಹಿ = ಕೊಡು, ತ್ವಯಾ ಸಹ = ನಿನ್ನೊಡನೆ, ಆಗಚ್ಛಾಮಃ = ಬರುತ್ತೇವೆ ॥ 34 ॥

**ಏವಮುಕ್ತೋ ಧನಂ ತೇಷಾಂ ದತ್ತವಾನ್ ಸ ಪಿತಾಮಹಃ ।**
**ವಾಹನಾನಿ ವಿಚಿತ್ರಾಣಿ ರಥಾಂಶ್ಚ ವಿವಿಧಾನಪಿ ॥ 35 ॥**

**ಭೂಷಣಾನಿ ಚ ವಸ್ತ್ರಾಣಿ ರತ್ನಾನಿ ವಿವಿಧಾನಿ ಚ ।**
**ಪತ್ನೀಸ್ಸಂದೇಶಯಾಮಾಸ ವಿವಾಹಾರ್ಥಂ ಪಿತಾಮಹಃ ॥ 36 ॥**

ಏವಮುಕ್ತಃ = ಸೇನೆಯ ನಾಯಕರಿಂದ ಇಂತು ಹೇಳಲ್ಪಟ್ಟವನಾದ, ಸಃ = ಆ, ಪಿತಾಮಹಃ = ಬ್ರಹ್ಮದೇವನು, ದತ್ತವಾನ್ = ಅವರೆಲ್ಲರಿಗೂ ವಾರ್ಷಿಕ ಸಂಬಳವನ್ನೂ, ವಿಚಿತ್ರಾಣಿ = ವಿಚಿತ್ರವಾದ, ವಾಹನಾನಿ = ವಾಹನಗಳನ್ನೂ, ವಿವಿಧಾನ್ಯಪಿ = ಬಗೆಬಗೆಯಾದ, ರಥಾಂಶ್ಚ = ರಥಗಳನ್ನೂ, ಚ = ಮತ್ತು ವಿವಿಧಾನಿ = ವಿಧವಿಧಗಳಾದ, ರತ್ನಾನಿ = ರತ್ನಗಳನ್ನೂ, ವಸ್ತ್ರಾಣಿ = ವಸ್ತ್ರಗಳನ್ನೂ, ಭೂಷಣಾನಿ ಚ = ಅಲಂಕಾರಗಳನ್ನೂ ಸಹ, ದತ್ತವಾನ್ = ನೀಡಿದನು, (ಅನಂತರ), ಪಿತಾಮಹಃ = ಬ್ರಹ್ಮದೇವನು, ಪತ್ನೀಃ = ಪತ್ನಿಯರನ್ನೂ, ವಿವಾಹಾರ್ಥಂ = ಶ್ರೀನಿವಾಸನ ಲಗ್ನಕ್ಕೆ ಬರಲು, ಸಂದೇಶಯಾಮಾಸ = ಹೇಳಿಕಳಿಸಿದನು. ॥ 35 - 36 ॥

**ಸ್ವಯಮಂತರ್ಗತಃ ಶ್ರೀಮಾನಾತ್ಮಾನಂ ಸಮಭೂಷಯತ್ ।**
**ದಧಾರ ಶಿರಸಾ ಶೀಘ್ರಂ ಕಿರೀಟಂ ಪಶ್ಚಿಮೇನ ತು ॥ 37 ॥**

ಶ್ರೀಮಾನ್ = ಸಂಪತ್ತು-ಕಾಂತಿಗಳಿಂದಯುಕ್ತನಾದ, ವೇದಪ್ರತಿಪಾದ್ಯ ಮಹಿಮನಾದ ಬ್ರಹ್ಮದೇವನು, ಅಂತರ್ಗತಃ = ಅಂತಃಪುರಕ್ಕೆ ಹೋದವನಾಗಿ, ಸ್ವಯಂ = ತಾನೂ ಸಹ, ಆತ್ಮಾನಂ = ತನ್ನನ್ನು, ಸಮಭೂಷಯತ್ = ಅಲಂಕಾರ

ಮಾಡಿಕೊಂಡನು. ಪಶ್ಚಿಮೇನ ಶಿರಸಾ = ಪಶ್ಚಿಮಭಾಗದ ಶಿರಸ್ಸಿನಲ್ಲಿ, ಕಿರೀಟಂತು = ಮುಕುಟವನ್ನು, ದಧಾರ = ಧರಿಸಿದನು ॥ 37 ॥

**ಅನ್ಯೇನ ಶಿರಸಾ ಧಾತಾ ರಕ್ತೋಷ್ಣೀಷಮಧಾರಯತ್ ।**
**ದಕ್ಷಿಣೇನೋತ್ತಮಾಂಗೇನ ಶಿರೋವೇಷ್ಟಮಬಂಧಯತ್ ॥ 38 ॥**

ಧಾತಾ = ವಿಧಾತನು, ಅನ್ಯೇನ ಶಿರಸಾ = ಬೇರೊಂದು ಶಿರದಲ್ಲಿ, ರಕ್ತೋಷ್ಣೀಷಂ = ಕೆಂಪು ಶಾಲನ್ನು (ಪೇಟವನ್ನು), ಅಧಾರಯತ್ = ಧಾರಣ ಮಾಡಿದನು. ದಕ್ಷಿಣೇನ = ಬಲಭಾಗದ, ಉತ್ತಮಾಂಗೇನ = ಶಿರಸ್ಸಿನಲ್ಲಿ, ಶಿರೋವೇಷ್ಟಂ = ರುಮಾಲನ್ನು, ಅಬಂಧಯತ್ = ಕಟ್ಟಿಕೊಂಡನು ॥ 38 ॥

**ಕುಶಕೇತುಃ ಕುಶಶ್ರೇಷ್ಠೈ ರ್ಧೃತವಾನನ್ಯಮೂರ್ಧನಿ ।**
**ನೀಲಮೌಕ್ತಿಕ ವೈಢೂರ್ಯಯುತೇ ಮಕರಕುಂಡಲೇ ॥**
**ಕರ್ಣಯೋರ್ಭೂಷಯಾಮಾಸ ಕರೌ ಕನಕಕಂಕಣೈಃ ॥ 39 ॥**

ಕುಶಕೇತುಃ = ಕುಶಪತಾಕೆಯುಳ್ಳ ಬ್ರಹ್ಮದೇವನು, ಅನ್ಯಮೂರ್ಧನಿ = ಮತ್ತೊಂದು ಶಿರಸ್ಸಿನಲ್ಲಿ, ಕುಶಶ್ರೇಷ್ಠೈಃ = ಶ್ರೇಷ್ಠದರ್ಭೆಗಳಿಂದ (ಕಿರೀಟವನ್ನು ಮಾಡಿಕೊಂಡು), ಅಬಂಧಯತ್ = ಕಟ್ಟಿಕೊಂಡನು. ನೀಲಮೌಕ್ತಿಕ ವೈಢೂರ್ಯಯುತೇ = ನೀಲಮಣಿ, ಮುತ್ತು, ವೈಢೂರ್ಯಗಳಿಂದ ಬೆಡಗುಗೊಂಡ, ಮಕರ ಕುಂಡಲೇ = ಎರಡು ಮಕರ ಕುಂಡಲಗಳನ್ನು, ಕರ್ಣಯೋಃ = ಕಿವಿಗಳನ್ನೂ, ಕರೌ = ಎರಡು ಕೈಗಳನ್ನು, ಕನಕಕಂಕಣೈಃ = ಸುವರ್ಣ ಕಡಗ (ಕಂಕಣ)ಗಳಿಂದಲೂ, ಭೂಷಯಾಮಾಸ = ಅಲಂಕರಿಸಿದನು ॥ 39 ॥

**ಕವಚಂ ಧಾರಯಾಮಾಸ ನವರತ್ನಸಮಾಕುಲಮ್ ।**
**ಕಾಂಚೀದಾಮ ಸಮಾಬಧ್ಯ ಮುಕ್ತಾಮಣಿವಿಭೂಷಿತಮ್ ॥ 40 ॥**

(ರೇಷ್ಮೆಯ ಮಡಿಯನ್ನುಟ್ಟು ಅದರ ಮೇಲೆ) ಮುಕ್ತಾಮಣಿ ವಿಭೂಷಿತಂ = ಮುತ್ತು, ಮಾಣಿಕ್ಯ ಖಚಿತವಾದ, ಕಾಂಚೀದಾಮ = ಬಂಗಾರದ ಉಡುದಾರವನ್ನು, ಸಮಾಬಧ್ಯ = ಕಟ್ಟಿಕೊಂಡು, ನವರತ್ನಸಮಾಕುಲಂ = ನವರತ್ನಖಚಿತವಾದ, ಕವಚಂ = ಕವಚವನ್ನು, ಧಾರಯಾಮಾಸ = ಧರಿಸಿದನು ॥ 40 ॥

**ಸರಸ್ವತೀಂ ಚ ಸಾವಿತ್ರೀಂ ಗಾಯತ್ರೀಂ ವೈ ತತಃ ಪರಮ್ ॥ 41 ॥**

**ಪುತ್ರಪೌತ್ರಾಂಸ್ತಥಾ ಸರ್ವಾನ್ ಸವಾಜಿರಥಕುಂಜರಾನ್ ।**
**ಮನಃಪುತ್ರಾನ್ ವೀರ್ಯಪುತ್ರಾನ್ ಸಮಾಹೂಯ ಪಿತಾಮಹಃ ॥ 42 ॥**

**ಅಲಂಕಾರಯುತಾನ್ ಕೃತ್ವಾ ಗಮನಾಭಿಮುಖೋಽಭವತ್**
**ಸ್ವಸೇನಾಂ ಪುರತಃ ಕೃತ್ವಾ ನಾಭಿಜೋ ನಿರ್ಯಯೌ ಪುರಾತ್ ॥ 43 ॥**

ಪಿತಾಮಹಃ = ಬ್ರಹ್ಮದೇವನು, ತನ್ನ ಪತ್ನಿಯರಾದ, ಸರಸ್ವತೀಂ = ಸರಸ್ವತಿಯನ್ನೂ, ಚ = ಮತ್ತು, ಸಾವಿತ್ರೀಂ = ಸಾವಿತ್ರಿಯನ್ನೂ, ಗಾಯತ್ರೀಂ ವೈ = ಗಾಯತ್ರಿಯನ್ನೂ ಸಹ, ತತಃ ಪರಂ = ಅವರ ತರುವಾಯ, ಪುತ್ರಾನ್ = ಮಕ್ಕಳನ್ನೂ,

ಪೌತ್ರಾನ್ = ಮೊಮ್ಮಕ್ಕಳನ್ನೂ, ತಥಾ = ಅದರಂತೆಯೇ, ಮನಃ ಪುತ್ರಾನ್ = ಮನಸ್ಸಿನಿಂದ ಜನಿಸಿದ ಪುತ್ರರು, ವೀರ್ಯ ಪುತ್ರಾನ್ = ವೀರ್ಯದಿಂದ (ತೇಜಸ್ಸಿನಿಂದ) ಜನಿಸಿದ ಮಕ್ಕಳು ; ಹೀಗೆ, ಸರ್ವಾನ್ = ಸಕಲರನ್ನೂ (ಅದರಂತೆಯೇ), ಸವಾಜಿರಥಕುಂಜರಾನ್ = ಕುದುರೆಗಳಿಂದ ಯುಕ್ತವಾದ ರಥ ಮತ್ತು ಆನೆಗಳನ್ನೂ, ಸಮಾಹೂಯ = ಆಹ್ವಾನಿಸಿ, (ತಾನ್ = ಅವರನ್ನೂ) ಅಲಂಕಾರಯುತಾನ್ = ಅಲಂಕರಿಸಲ್ಪಟ್ಟವರನ್ನಾಗಿ, ಕೃತ್ವಾ = ಮಾಡಿ, ಗಮನಾಭಿ ಮುಖಃ ಅಭವತ್ = ಹೊರಡಲು ಅಣಿಯಾದನು. ನಾಭಿಜಃ = ಭಗವಂತನ ನಾಭಿಕಮಲದಿಂದ ಅವತರಿಸಿದ ಬ್ರಹ್ಮದೇವನು, ಸ್ವಸೇನಾಂ = ತನ್ನ ಸೇನೆಯನ್ನು, ಪುರತಃ ಕೃತ್ವಾ = ಮುಂದೆ ಮಾಡಿಕೊಂಡು, ಪುರಾತ್ = ಸತ್ಯಲೋಕದಿಂದ, ನಿರ್ಯಯೌ = ಹೊರಟನು || 41-42-43 ||

**ಹಂಸಂ ಚಂದ್ರಪ್ರತೀಕಾಶಮಾರುರೋಹ ಪಿತಾಮಹಃ ।**
**ವಿಮಾನಾನಿ ವಿಚಿತ್ರಾಣಿ ವಧ್ವ ಆರುರುಹುಸ್ತದಾ || 44 ||**

ಪಿತಾಮಹಃ = ಬ್ರಹ್ಮದೇವನು, ಚಂದ್ರಪ್ರತೀಕಾಶಂ = ಚಂದ್ರನಿಗೆ ಸಮಾನವಾದ, ಹಂಸಂ = ತನ್ನ ವಾಹನವಾದ ಹಂಸವನ್ನು, ಆರುರೋಹ = ಹತ್ತಿದನು. ತದಾ = ಆಗ, ವಿಚಿತ್ರಾಣಿ = ಆಶ್ಚರ್ಯಕರಗಳಾದ, ವಿಮಾನಾನಿ = ವಿಮಾನಗಳನ್ನು, ವಧ್ವಃ = ಬ್ರಹ್ಮನ ಪತ್ನೀ ಮೊದಲಾದ ಸ್ತ್ರೀಯರು, ಆರುರುಹುಃ = ಹತ್ತಿ ಕುಳಿತರು || 44 ||

**ಘಂಟಾಚಾಮರನಿರ್ಘೋಷೈಃ ಸಹಿತಾ ನೃಪ ರೇಜಿರೇ ।**
**ಶೂರಾ ವಿರಾಸನಾ ಧೀರಾ ಗಜಾಶ್ವರಥಸಂಸ್ಥಿತಾಃ || 45 ||**

**ಸಮುಚ್ಛ್ರಿತೈರ್ಧ್ವಜೈರ್ದೀರ್ಘಪತಾಕೈ ಸ್ಸಮಲಂಕೃತಾಃ ।**
**ನಾನಾಯುಧಧರಾ ವೀರಾಸ್ತೇಷಾಂ ಮಧ್ಯೇ ಪಿತಾಮಹಃ || 46 ||**

**ರರಾಜ ಚಂದ್ರಮಾ ರಾಜಂಸ್ತಾರಾಭಿರ್ಗಗನೇ ಯಥಾ ।**
**ಶ್ವೇತಛತ್ರಂ ಹೇಮದಂಡಂ ರತ್ನಕುಂಭಮಹೋಜ್ವಲಮ್ || 47 ||**

**ಯೋಜನತ್ರಯವಿಸ್ತೀರ್ಣಂ ದಶಲಕ್ಷಜನೈರ್ಧೃತಮ್ ।**
**ನಭಃ ಪ್ರಕಾಶಯಾಮಾಸ ದೇವದೇವಸ್ಯ ವೈ ತದಾ || 48 ||**

ನೃಪ = ಎಲೈ ಜನಕಮಹಾರಾಜ! ಘಂಟಾಚಾಮರನಿರ್ಘೋಷೈಃ = ಘಂಟಾಚಾಮರಾದಿ ವಾದ್ಯಗಳ ಭೋರ್ಗರೆಯುವ ಧ್ವನಿಗಳಿಂದ, ಸಹಿತಾಃ = ಯುಕ್ತರಾದವರಾಗಿ, ನಾನಾಯುಧಧರಾಃ = ಬಗೆ ಬಗೆಯ ಆಯುಧಗಳನ್ನು ಹಿಡಿದಿರುವ, ವೀರಾಃ = ವೀರರು, ಸಮುಚ್ಛ್ರಿತೈಃ = ಎತ್ತಿಹಿಡಿಯಲ್ಪಟ್ಟ, ಧ್ವಜೈಃ = ಧ್ವಜಗಳಿಂದಲೂ, ದೀರ್ಘಪತಾಕೈಃ = ಉದ್ದವಾದ ಪತಾಕೆಗಳಿಂದಲೂ, ಸಮಲಂಕೃತಾಃ = ಅಲಂಕೃತರಾಗಿ, ವೀರಾಸನಾಃ = ವೀರಾಸನದಲ್ಲಿ ಕುಳಿತು, ಶೂರಾಃ = ಪರಾಕ್ರಮಿಗಳು, ಗಜಾಶ್ವರಥ ಸಂಸ್ಥಿತಾಃ = ಆನೆ, ಕುದುರೆ ರಥಗಳಲ್ಲಿ ಕುಳಿತು, ಧೀರಾಃ = ಸಾಮರ್ಥ್ಯಶಾಲಿಗಳು, ರೇಜಿರೇ = ಪ್ರಕಾಶಿಸಿದರು. ರಾಜನ್ = ಜನಕಮಹಾರಾಜ, ತೇಷಾಂ = ಅವರ, ಮಧ್ಯೇ = ಮಧ್ಯಭಾಗದಲ್ಲಿ, ಗಗನೇ = ಆಕಾಶದಲ್ಲಿ, ತಾರಾಭಿಃ = ನಕ್ಷತ್ರಗಳಿಂದಯುಕ್ತನಾದ, ಚಂದ್ರಮಾಃ ಯಥಾ = ಚಂದ್ರನು ಹೇಗೋ, (ತಥಾ = ಹಾಗೆ), ಪಿತಾಮಹಃ = ಬ್ರಹ್ಮದೇವನು, ರರಾಜ = ರಾರಾಜಿಸಿದನು. ದೇವದೇವಸ್ಯ ವೈ = ಬ್ರಹ್ಮದೇವನಿಗೆ ಹಿಡಿದಂಥ, ಯೋಜನತ್ರಯವಿಸ್ತೀರ್ಣಂ = ಮೂರು

ಗಾವುದ ವಿಸ್ತಾರವಾದ, ದಶಲಕ್ಷಜನೈಃ = ಹತ್ತುಲಕ್ಷ ಜನರಿಂದ, ಧೃತಂ = ಹಿಡಿಯಲ್ಪಟ್ಟ, ರತ್ನಕುಂಭಮಹೋಜ್ವಲಂ = ರತ್ನ ಕುಂಭ(ಕಳಸ)ದಿಂದ ಅತ್ಯಂತ ಉಜ್ವಲವಾದ, ಹೇಮದಂಡಂ = ಬಂಗಾರದ ಕೋಲಿನಿಂದಯುಕ್ತವಾದ, (ದೇವದೇವಸ್ಯ ವೈ = ಬ್ರಹ್ಮದೇವರಿಗೆ ಹಿಡಿದ), ಶ್ವೇತಛತ್ರಂ = ಶ್ವೇತಛತ್ರವು, ನಭಃ = ಅಂತರಿಕ್ಷವನ್ನು (ಆಕಾಶವನ್ನು), ಪ್ರಕಾಶಯಾಮಾಸ = ಅತ್ಯಂತ ಪ್ರಕಾಶಗೊಳಿಸಿತು || 45-48 ||

**ಅವಾದಯನ್ಮಹಾರಾಜ ವಾದ್ಯಾನಿ ವಿವಿಧಾನಿ ಚ |**
**ಭೇರೀಶ್ಚ ನವಸಾಹಸ್ರಂ ದುಂದುಭೀನಾಂ ಶತತ್ರಯಮ್ || 49 ||**

**ಮೃದಂಗಪಣವಾನ್ ಢಕ್ಕಾಮಡ್ಡುನಿಸ್ಸಣ ಡಿಂಡಿಮಾನ್ |**
**ಗೋಮುಖಾನ್ಮುರಜಾನ್ವೀಣಾಂಸ್ತಥಾ ವೈ ಝುರ್ಝುರಾದಿಕಾನ್ || 50 ||**

**ಬರ್ಬರೈಶ್ಶತಶೃಂಗೈಶ್ಚ ದೀರ್ಘಶೃಂಗೈಶ್ಚ ಸಸ್ವರೈಃ |**
**ಸಪ್ತಸ್ವರೈ ಸ್ಸಪ್ತರಾಗೈ ಸ್ಸರ್ಪಾಣಾಮಪಿ ಮೋಹಕೈಃ || 51 ||**

**ಫೂತ್ಕಾರೈಶ್ಚ ವಷಟ್ಕಾರೈ ರ್ಧ್ವನಯದ್ಭಿಶ್ಚ ವಾರಿಜಾನ್ |**
**ಗಂಧರ್ವೈರ್ಗಾನನಿಪುಣೈಃ ಸ್ವರಭೇದವಿಚಕ್ಷಣೈಃ |**
**ವೀಣಾದಂಡಸ್ಥಸೂತ್ರೈಶ್ಚ ವಾದಯದ್ಭಿಸ್ಸುಖಾವಹೈಃ |**
**ನರ್ತಕೈರ್ನಟಕೈಶ್ಚೈವ ಹಾಹಾಹೂಹೂಮುಖ್ಯೈರ್ವೃತಮ್ || 53 ||**

**ಸ್ತೂಯಮಾನಾಸ್ತುಂಬುರುಣಾ ಸೂತಮಾಗಧಬಂದಿಭಿಃ |**
**ಸುರಾಸ್ಸರ್ವೇ ಶ್ರೀನಿವಾಸಮಹೋತ್ಸವ ದಿದೃಕ್ಷವಃ || 54 ||**

**ಅನುಜಗ್ಮುರ್ಮಹಾರಾಜನ್ ಬ್ರಹ್ಮಾಣಂ ಯಾಂತಮಗ್ರತಃ |**
**ಸತ್ಯಲೋಕೇ ತಪೋಲೋಕೇ ಜನಲೋಕೇ ತತಃಪರಮ್ || 55 ||**

**ಮಹರ್ಲೋಕೇ ಸುವರ್ಲೋಕೇ ಸ್ವರ್ಗಲೋಕೇ ಮಹೀತಲೇ |**
**ಏವಂ ಕ್ರಮಾನ್ಮಹಾಭಾಗಂ ಬ್ರಹ್ಮಾಣಂ ದದೃಶುರ್ಜನಾಃ || 56 ||**

ಮಹಾರಾಜ = ಎಲೈ ಜನಕಭೂಪತಿಯೇ! ನವಸಾಹಸ್ರಂ = ಒಂಭತ್ತು ಸಾವಿರ ಸಂಖ್ಯಾಕವಾದ, ಭೇರೀಶ್ಚ = ನಗಾರಿಗಳೂ, ದುಂದುಭೀನಾಂ ಶತತ್ರಯಂ = ಮೂರು ನೂರು ದುಂದುಭಿಗಳೂ, ಮೃದಂಗಪಣವಾನ್ = ಮೃದಂಗ, ಪಣವ ವಾದ್ಯಗಳನ್ನೂ, ಢಕ್ಕಾಮಡ್ಡು ನಿಸ್ಸಣ ಡಿಂಡಿಮಾನ್ = ಢಕ್ಕಾ, ಮಡ್ಡುಕ, ನಿಸ್ಸಣ, ಡಿಂಡಿಮಾದಿ ವಾದ್ಯಗಳನ್ನೂ, ಗೋಮುಖಾನ್ = ಗೋಮುಖವಾದ್ಯ, ಮುರಜ = ಮುರಜವಾದ್ಯ, ವೀಣಾನ್ = ವೀಣೆಗಳನ್ನೂ, ತಥಾ = ಅದರಂತೆಯೇ, ಝುರ್ಝುರಾದಿಕಾನ್ = ಝುರ್ಝುರ ವಾದ್ಯಗಳನ್ನೂ, ಹೀಗೆ, ಸಸ್ವರೈಃ = ಸ್ವರಯುಕ್ತವಾದ, ವಿವಿಧಾನಿ = ವಿಧವಿಧಗಳಾದ, ವಾದ್ಯಾನಿಚ = ವಾದ್ಯಗಳನ್ನೂ, ಅವಾದಯನ್ = ವಾದನ ಮಾಡುವವರಾದರು, ಸಸ್ವರೈಃ = ಸ್ವರಯುಕ್ತವಾದ, ಬರ್ಬರೈಃ = ಬರ್ಬರವಾದ್ಯಗಳಿಂದ, ಶತಶೃಂಗೈಶ್ಚ = ಶತಶೃಂಗವಾದ್ಯಗಳಿಂದಲೂ, ದೀರ್ಘಶೃಂಗೈಃ ಚ = ದೀರ್ಘಶೃಂಗವಾದ್ಯಗಳಿಂದಲೂ, ಸರ್ಪಾಣಾಮಪಿ = ಸರ್ಪಗಳನ್ನೂ, ಮೋಹಕೈಃ = ಮೋಹಗೊಳಿಸುವ, ಸಪ್ತಸ್ವರೈಃ = ಏಳು ಸ್ವರಗಳಿಂದ, ಸಪ್ತರಾಗೈಃ = ಏಳು

ವಿಧರಾಗಗಳಿಂದಲೂ, ಪೂತ್ಕಾರೈಶ್ಚ ವಷಟ್ಕಾರೈಃ = ಪೂತ್ಕಾರವಷಟ್ಕಾರಗಳಿಂದ, ಧ್ವನಯದ್ಭಿಃ = ಧ್ವನಿಗೊಳಿಸುತ್ತಿರುವ, ಸ್ವರಭೇದ ವಿಚಕ್ಷಣೈಃ = ಸ್ವರಭೇದಗಳಲ್ಲಿ ಕುಶಲರಾದ, ಗಾನನಿಪುಣೈಃ = ಗಾನವಿಶಾರದರಾದ, ಗಂಧರ್ವೈಃ = ಗಂಧರ್ವರಿಂದಲೂ, ವಾರಿಜಾನ್ = ನೀರಿನಿಂದ, ಧ್ವನಯದ್ಭಿಃ = ಧ್ವನಿಮಾಡುವ ಜಲತರಂಗವಾದ್ಯಗಳಿಂದಲೂ, ಸುಖಾವಹೈಃ = ಕಿವಿಗಿಂಪಾದ, ವೀಣಾದಂಡಸ್ಥಸೂತ್ರೈಶ್ಚ = ವೀಣೆಯ ದಂಡದಲ್ಲಿರುವ ತಂತಿಗಳಿಂದ, ವಾದಯದ್ಭಿಃ = ವಾದನ ಮಾಡುವವರಿಂದಲೂ, ಹಾಹಾಹೂಹೂಮುಖ್ಯೈಃ = ಹಾಹಾಹೂಹೂ ಮುಂತಾದ ಗಂಧರ್ವರಿಂದಲೂ, ನರ್ತಕೈಃ = ನರ್ತಕಗಣದಿಂದಲೂ, ನಟಕೈಶ್ಚೈವ = ನಟನವಿಶಾರದರಿಂದಲೂ, ವೃತಂ = ಕೂಡಿರುವ, ತುಂಬುರುಣಾ = ತುಂಬುರನಿಂದ, ಮತ್ತು, ಸೂತಮಾಗಧಬಂದಿಭಿಃ = ಸೂತರು, ಮಾಗಧರು, ವಂದಿಜನರಿಂದ, ಸ್ತೂಯಮಾನಾಃ = ಸ್ತುತ್ಯರಾದ, ಶ್ರೀನಿವಾಸಮಹೋತ್ಸವ ದಿದೃಕ್ಷವಃ = ಶ್ರೀನಿವಾಸನ ವಿವಾಹಮಹೋತ್ಸವವನ್ನು ನೋಡಲಪೇಕ್ಷಿಸಿದ, ಸರ್ವೇ = ಸಮಸ್ತರಾದ, ಸುರಾಃ = ದೇವತೆಗಳು, ಮಹಾರಾಜನ್ = ಎಲೈ ಜನಕಮಹಾರಾಜನೇ, ಅಗ್ರತಃ ಯಾಂತಂ = ಮುಂದಾಗಿ ಹೋಗುತ್ತಿರುವ, ಬ್ರಹ್ಮಾಣಂ = ಬ್ರಹ್ಮದೇವರನ್ನು, ಅನುಜಗ್ಮುಃ = ಅನುಸರಿಸಿ ಹೋಗುವವರಾದರು. ಸತ್ಯಲೋಕೇ = ಸತ್ಯಲೋಕದಲ್ಲಿ, ತಪೋಲೋಕೇ = ತಪೋಲೋಕದಲ್ಲಿ, ಜನೋಲೋಕೇ = ಜನೋಲೋಕದಲ್ಲಿ, ತತಃಪರಂ = ಅಲ್ಲಿಂದ ಮುಂದೆ, ಮಹೋಲೋಕೇ = ಮಹರ್ಲೋಕದಲ್ಲಿ, ಸುವರ್ಲೋಕೇ = ಸುವರ್ಲೋಕದಲ್ಲಿ, ಸ್ವರ್ಗಲೋಕೇ = ಸ್ವರ್ಗಲೋಕದಲ್ಲಿ, ಮಹೀತಲೇ = ಭೂಲೋಕದಲ್ಲಿ ; ಏವಂ = ಈ ರೀತಿಯಾಗಿ, ಕ್ರಮಾತ್ = ಕ್ರಮವಾಗಿ, ಜನಾಃ = ಸಕಲ ಜನರೂ, ಮಹಾಭಾಗಂ = ಮಹನೀಯನಾದ, ಬ್ರಹ್ಮಾಣಂ = ಬ್ರಹ್ಮದೇವನನ್ನು, ದದೃಶುಃ = ನೋಡಿದರು ।। 49 - 56 ।।

**ಋಷಯಸ್ಸತ್ವಸಂಪನ್ನಾಃ ತದಾತ್ಯದ್ಭುತದರ್ಶನಮ್ ।**
**ವಾಸುದೇವ ಸಮಾಕಾರಂ ವೈಶ್ವಾನರಸಮಾನನಮ್ ।। 57 ।।**

ತದಾ = ಆಗ, ಸತ್ವಸಂಪನ್ನಾಃ = ತಪಶ್ಶಕ್ತಿ ಸಂಪನ್ನರಾದ, ಋಷಯಃ = ಋಷಿಮುನಿಗಳು, ಅತ್ಯದ್ಭುತದರ್ಶನಂ = ಅತಿ ಅದ್ಭುತವಾಗಿ ಕಂಗೊಳಿಸುತ್ತಿರುವ, ವಾಸುದೇವ ಸಮಾಕಾರಂ = ಶ್ರೀಹರಿಗೆ ಸಮಾನವಾದ ರೂಪವುಳ್ಳ, ವೈಶ್ವಾನರಸಮಾನನಂ = ಅಗ್ನಿದೇವನಿಗೆ ಸದೃಶವಾದ ಮುಖವುಳ್ಳ ।। 57 ।।

**ದದೃಶುಃ ಸರ್ವಲೋಕೇಶಂ ಸಾಕ್ಷಾದ್ಬ್ರಹ್ಮಾಣಮಗ್ರಜಮ್ ।**
**ಕೇಚಿನ್ನಾರಾಯಣಂ ತಂ ಹಿ ಗಾಂಭೀರ್ಯಾದಬ್ರುವಂಸ್ತದಾ ।। 58 ।।**

**ಕೇಚಿನ್ನಾರಾಯಣೋ ನಾಯಂ ವದನಾನಾಂ ವಿಪರ್ಯಯಾತ್ ।**
**ಇತ್ಯಬ್ರುವಂಸ್ತತಸ್ಸರ್ವೇ ಮತ್ವಾ ತಂ ಚತುರಾನನಮ್ ।। 59 ।।**

**ಹಂಸಸ್ಥಂ ಭೂಷಣೈರ್ಯುಕ್ತಂ ಕವಚಾಡಂಬರಾನ್ವಿತಮ್ ।**
**ಅಪೃಚ್ಛಂಸ್ತೇ ಮಹೀದೇವಾ ಬ್ರಹ್ಮಣೋನುಚರಾನ್ ಜನಾನ್ ।। 60 ।।**

ಸರ್ವಲೋಕೇಶಂ = ಸಕಲಲೋಕಗಳಿಗೂ ಸ್ವಾಮಿಯಾದ, ಅಗ್ರಜಂ = ಸೃಷ್ಟಿಕಾಲದಲ್ಲಿ ಮೊದಲು ಜನಿಸಿದ, ಸಾಕ್ಷಾತ್ ಬ್ರಹ್ಮಾಣಂ = ಪ್ರತ್ಯಕ್ಷವಾಗಿ ಬ್ರಹ್ಮದೇವನನ್ನು, ದದೃಶುಃ = ನೋಡಿದರು. ತಂ ಹಿ = ಆ ಬ್ರಹ್ಮದೇವನನ್ನು, ಗಾಂಭೀರ್ಯಾತ್ = ಅವನ ಗಾಂಭೀರ್ಯವನ್ನು ಕಂಡು, ಕೇಚಿತ್ = ಕೆಲವರು, ನಾರಾಯಣಂ = ನಾರಾಯಣನೆಂದು, ಅಬ್ರುವನ್ = ಹೇಳಿದರು, ತದಾ = ಆಗ, ಕೇಚಿತ್ = ಮತ್ತೆ ಕೆಲವರು, ವದನಾನಾಂ = ಮುಖಗಳ, ವಿಪರ್ಯಯಾತ್ = ವಿಪರ್ಯಾಸದಿಂದ, ಅಯಂ =

ಈತನು, ನಾರಾಯಣೋ ನ = ನಾರಾಯಣನಲ್ಲ, ಇತ್ಯಬ್ರುವನ್ = ಈ ಪ್ರಕಾರವಾಗಿ ಹೇಳಿದರು. ಕವಚಾಡಂಬರಾನ್ವಿತಂ = ಕವಚಾದಿ ಆಡಂಬರಯುಕ್ತನಾದ, ಭೂಷಣೈಃ = ಆಭರಣಗಳಿಂದ, ಯುಕ್ತಂ = ಯುಕ್ತನಾದ, ಹಂಸಸ್ಥಂ = ಹಂಸದ ಮೇಲೆ ಕುಳಿತಿರುವ, ತಂ = ಅವನನ್ನು, ಸರ್ವೇ = ಸಕಲರೂ, ಚತುರಾನನಂ = ಚತುರ್ಮುಖ ಬ್ರಹ್ಮದೇವನೆಂದು, ಮತ್ವಾ = ತಿಳಿದವರಾಗಿ, ತೇ ಮಹೀದೇವಾಃ = ಆ ಭೂಸುರರು, ಬ್ರಹ್ಮಣೋ = ಬ್ರಹ್ಮನ, ಅನುಚರಾನ್ = ಸೇವಕರಾದ, ಜನಾನ್ = ಜನರನ್ನು, ಅಪೃಚ್ಛನ್ = ಪ್ರಶ್ನಿಸಿದರು ॥ 57-60 ॥

*ಮಹೀದೇವಾ ಊಚುಃ-*

**ಕಂ ವಾ ದೇಶಂಪ್ರತಿ ಜನಾಃ ಕುತೋ ವಾ ಗಮನಂ ವಿಧೇಃ ।**

*ಜನಾ ಊಚುಃ-*

**ಗಚ್ಛಾಮೋಽದ್ಯ ವಿವಾಹಾರ್ಥಂ ಶ್ರೀನಿವಾಸಸ್ಯ ಭೂತಲಮ್ ॥ 61 ॥**

**ತೇನೈವಾವಾಹಿತಾ ಸ್ಸರ್ವೇ ಸತ್ಯಲೋಕಾನ್ಮಹೀಸುರಾಃ ।**
**ತಚ್ಛ್ರುತ್ವಾ ವಚನಂ ತೇಷಾಮನುಜಗ್ಮುರ್ಮಹರ್ಷಯಃ ॥ 62 ॥**

**ಸಾಗ್ನಿಹೋತ್ರಾಸ್ಸಪುತ್ರಾಶ್ಚ ಸಶಿಷ್ಯಾ ಸ್ಸಪರಿಗ್ರಹಾಃ ।**
**ಏವಂ ವಿಭವಮಾಸ್ಥಾಯ ಬ್ರಹ್ಮಾಗಾದ್ವೇಂಕಟಾಚಲಮ್ ॥ 63 ॥**

ಮಹೀದೇವಾಃ ಊಚುಃ = ಭೂಸುರರು ಮಾತನಾಡಿದರು : ಜನಾಃ = ಎಲೈ ಜನರೇ (ವಿಧೇಃ = ಬ್ರಹ್ಮನ, ಗಮನಂ = ಈ ಪಯಣವು), ಕಂ ವಾ = ಯಾವ, ದೇಶಂಪ್ರತಿ = ದೇಶವನ್ನು ಕುರಿತು? ಕುತೋವಾ = ಯಾವ ಉದ್ದೇಶದಿಂದ? ವಿಧೇಃ = ಬ್ರಹ್ಮದೇವನ, ಗಮನಂ = ಪಯಣವು? (ಆಗ) ಜನಾ ಊಚುಃ = ಬ್ರಹ್ಮದೇವರ ಸೇವಕ ಜನರು ಹೇಳಿದರು : ಮಹೀಸುರಾಃ = ಎಲೈ ಬ್ರಾಹ್ಮಣರೇ, ಶ್ರೀನಿವಾಸಸ್ಯ = ಶ್ರೀಲಕ್ಷ್ಮೀದೇವಿಗೆ ಆವಾಸಭೂತನಾದ ಶ್ರೀಹರಿಯ, ವಿವಾಹಾರ್ಥಂ = ಲಗ್ನಮಹೋತ್ಸವಕ್ಕಾಗಿ, ತೇನೈವ = ಅವನಿಂದಲೇ, ಆವಾಹಿತಾಃ = ಆಹ್ವಾನಿತರಾದ, ಸರ್ವೇ = ನಾವೆಲ್ಲರೂ, ಸತ್ಯಲೋಕಾತ್ = ಸತ್ಯಲೋಕದಿಂದ, ಭೂತಲಂ (ಪ್ರತಿ) = ಭೂಲೋಕವನ್ನು ಕುರಿತು, ಅದ್ಯ = ಈಗ, ಗಚ್ಛಾಮಃ = ಹೋಗುತ್ತೇವೆ, ತೇಷಾಂ = ಸತ್ಯಲೋಕವಾಸಿಜನರ, ತತ್ ವಚನಂ = ಆ ಮಾತನ್ನು, ಶ್ರುತ್ವಾ = ಕೇಳಿ, ಸಾಗ್ನಿಹೋತ್ರಾಃ = ಅಗ್ನಿಹೋತ್ರದ ಅಗ್ನಿಸಹಿತರಾಗಿ, ಸಪುತ್ರಾಶ್ಚ = ಪುತ್ರರಿಂದೊಡಗೂಡಿ, ಸಶಿಷ್ಯಾಶ್ಚ = ಶಿಷ್ಯಜನರಿಂದ ಸಹಿತರಾಗಿ, ಸಪರಿಗ್ರಹಾಃ = ಸಮಸ್ತ ಸಾಮಗ್ರಿಯೊಡನೆ, ಮಹರ್ಷಯಃ = ಋಷಿಮುನಿಗಳು, ಅನುಜಗ್ಮುಃ = ಅವರನ್ನು ಹಿಂಬಾಲಿಸಿ ಹೊರಟರು. ಏವಂ = ಹೀಗೆ, ವಿಭವಮಾಸ್ಥಾಯ = ವೈಭವೋಪೇತನಾಗಿ, ಬ್ರಹ್ಮಾ = ಬ್ರಹ್ಮದೇವನು, ವೇಂಕಟಾಚಲಂ (ಪ್ರತಿ) = ವೇಂಕಟಶೈಲವನ್ನು ಕುರಿತು, ಅಗಾತ್ = ಬಂದವನಾದನು ॥ 61-63 ॥

**ವಾದಿತ್ರಾಣಾಂ ಸ್ವನೇನೈವ ದುಂದುಭೀನಾಂ ಚ ನಿಃಸ್ವನೈಃ ।**
**ಆಪೂರಿತಂ ಜಗದಿದಂ ಸಶೈಲವನಕಾನನಮ್ ॥ 64 ॥**

ಸಶೈಲವನಕಾನನಂ = ಬೆಟ್ಟ, ಗುಡ್ಡ, ಉದ್ಯಾನ, ಕಾಡುಗಳಿಂದ ಸಹಿತವಾದ, ಇದಂ ಜಗತ್ = ಈ ಜಗತ್ತು, ವಾದಿತ್ರಾಣಾಂ = ವಿವಿಧ ವಾದ್ಯಗಳ, ಸ್ವನೇನೈವ = ನಾದದಿಂದಲೇ, ಚ = ಮತ್ತು, ದುಂದುಭೀನಾಂ = ನಗಾರಿಗಳ, ನಿಃ ಸ್ವನೈಃ = ಧ್ವನಿಗಳಿಂದ, ಆಪೂರಿತಂ = ತುಂಬಿಹೋಯಿತು ॥ 64 ॥

**ಏತಸ್ಮಿನ್ನೇವ ಕಾಲೇ ತು ಭಗವಾನ್ ಲೌಕಿಕೈಸ್ಸಮಃ ।**
**ಅದೃಷ್ಟ್ವಾ ಖಗರಾಜಂ ತಂ ಮಾತರಂ ವಾಕ್ಯಮಬ್ರವೀತ್ ॥ 65 ॥**

ಏತಸ್ಮಿನ್ನೇವಕಾಲೇ ತು = ಅದೇ ಸಮಯದಲ್ಲಿ, ಲೌಕಿಕೈಸ್ಸಮಃ = ಪ್ರಾಕೃತಶರೀರಿಗಳಾದ ಸಾಮಾನ್ಯ ಮಾನವನಂತೆ, ಭಗವಾನ್ = ವೇದಪ್ರತಿಪಾದ್ಯಮಹಿಮನಾದ ಶ್ರೀನಿವಾಸನು, ತಂ = ತಾನು ಕಳುಹಿಸಿದ, ಖಗರಾಜಂ = ಪಕ್ಷಿರಾಜನಾದ ಗರುಡನನ್ನು, ಅದೃಷ್ಟ್ವಾ = ಕಾಣದಲೇ, ಮಾತರಂ = ತಾಯಿಯಾದ, ಬಕುಳಾ ದೇವಿಯನ್ನು ಕುರಿತು, ವಾಕ್ಯಮಬ್ರವೀತ್ = ಮಾತನಾಡಿದನು ॥ 65 ॥

*ಶ್ರೀನಿವಾಸ ಉವಾಚ –*

**ಕಿಂ ನಾಗತೋಂಬ ಖಗರಾಟ್ ಪುತ್ರಾರ್ಥಂ ಪ್ರೇಷಿತೋ ಮಯಾ ।**
**ಮಾರ್ಗೇ ನಿರೋಧಿತಃ ಕೇನ ಕಿಂ ವಾ ಸ್ಯಾತ್ಕಾರಣಂ ವದ ॥ 66 ॥**

**ಏವಂ ವದತಿ ಗೋವಿಂದೇ ಚಾರೋ ದೃಷ್ಟಿಪಥಂ ಗತಃ ।**
**ಚಾರಂ ದೃಷ್ಟ್ವಾತಿಸಂತೋಷಂ ಸ ಲೇಭೇ ಪುರುಷೋತ್ತಮಃ ॥ 67 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಿದನು : ಅಂಬ = ತಾಯಿಯೇ, ಪುತ್ರಾರ್ಥಂ = ಬ್ರಹ್ಮನನ್ನು ಕರೆತರಲು, ಮಯಾ = ನನ್ನಿಂದ, ಪ್ರೇಷಿತಃ = ಕಳಿಸಲ್ಪಟ್ಟ, ಖಗರಾಟ್ = ಪಕ್ಷಿರಾಜನಾದ ಗರುಡನು, ಕಿಂ ನಾಗತಃ = ಏತಕ್ಕೆ ಬರಲಿಲ್ಲ? ಮಾರ್ಗೇ = ದಾರಿಯಲ್ಲಿ, ಕೇನ ವಾ = ಯಾರಿಂದಾದರೂ, ನಿರೋಧಿತಃ ಕಿಂ = ತಡೆಯಲ್ಪಟ್ಟನೇನು? ಅವನಿನ್ನೂ ಬರದಿರಲು, ಕಿಂ ಕಾರಣಂ ಸ್ಯಾತ್ = ಏನು ಕಾರಣವಿರಬಹುದು? ವದ = ಹೇಳು ॥ 66 ॥ ಏವಂ = ಹೀಗೆ, ಗೋವಿಂದೇ = ಶ್ರೀಹರಿಯು, ವದತಿ (ಸತಿ) = ಹೇಳುತ್ತಿರಲಾಗಿ, ಚಾರಃ = ಓರ್ವ ಸೇವಕನು, ದೃಷ್ಟಿಪಂಥಗತಃ = ಕಣ್ಣಿಗೆ ಕಂಡನು. ಪುರುಷೋತ್ತಮಃ = ಪುರುಷೋತ್ತಮನಾದ, ಸಃ = ಶ್ರೀನಿವಾಸನು, ಚಾರಂ = ಸೇವಕನನ್ನು, ದೃಷ್ಟ್ವಾ = ನೋಡಿ, ಅತಿಸಂತೋಷಂ = ಅತ್ಯಾನಂದವನ್ನು, ಲೇಭೇ = ಹೊಂದಿದನು ॥ 67 ॥

**ಕ್ವ ಚಾರ ಮಮ ಪುತ್ರಸ್ತು ಕೇನ ವೈ ಪ್ರೇಷಿತೋ ಭವಾನ್ ।**

*ಚಾರ ಉವಾಚ –*

**ಆಗಮಿಷ್ಯತಿ ಗೋವಿಂದ ಗಂಗಾಂ ತರತಿ ತೇ ಸುತಃ ॥ 68 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಿದನು : ಚಾರ = ಎಲೈ ಭೃತ್ಯನೇ, ಭವಾನ್ = ನೀನು, ಕೇನ ವೈ = ಯಾರಿಂದ, ಪ್ರೇಷಿತಃ = ಕಳಿಸಲ್ಪಟ್ಟಿದ್ದೀಯೆ? ಮಮ = ನನ್ನ, ಪುತ್ರಸ್ತು = ಮಗನು, ಕ್ವ = ಎಲ್ಲಿದ್ದಾನೆ? ಚಾರ ಉವಾಚ = ಸೇವಕನು ಇಂತೆಂದನು – ಗೋವಿಂದ = ಶ್ರೀಹರಿಯೇ, ತೇ ಸುತಃ = ನಿನ್ನ ಮಗನಾದ ಬ್ರಹ್ಮದೇವನು, ಆಗಮಿಷ್ಯತಿ = ಬರುತ್ತಿದ್ದಾನೆ (ಬರುವನು), ಗಂಗಾಂ = ಅವನೀಗ ಗಂಗಾನದಿಯನ್ನು, ತರತಿ = ದಾಟಿದನು (ದಾಟುತ್ತಿದ್ದಾನೆ) ॥ 68 ॥

**ಏವಂ ವದತಿ ತಚ್ಚಾರೇ ಪುನರೇಕೋಽಭ್ಯಭಾಷತ ।**

*ದ್ವಿತೀಯ ಚಾರ ಉವಾಚ –*

**ಗೋದಾವರೀಂ ತರತಿ ತೇ ಪುತ್ರಃ ಪೌರಜನೈಸ್ಸಹ ॥ 69 ॥**

ತಚ್ಚಾರೇ = ಆ ಸೇವಕನು, ಏವಂ = ಹೀಗೆ, ವದತಿ(ಸತಿ) = ಹೇಳುತ್ತಿರಲು, ಪುನರೇಕಃ = ಮತ್ತೊಬ್ಬ ಸೇವಕನು, ಅಭ್ಯಭಾಷತ = ಹೇಳಿದನು, ದ್ವಿತೀಯ ಚಾರ ಉವಾಚ = ಎರಡನೆಯ ಚಾರನು ಹೇಳಿದನು : ತೇ ಪುತ್ರಃ = ನಿನ್ನ ಕುಮಾರನಾದ ಬ್ರಹ್ಮದೇವನು, ಪೌರಜನೈಸ್ಸಹ = ಪುರಜನರೊಡನೆ, ಗೋದಾವರೀಂ = ಗೋದಾವರಿ ನದಿಯನ್ನು, ತರತಿ = ದಾಟುತ್ತಿರುವನು ।। 69 ।।

**ಸ ದೂತವಚನಂ ಶ್ರುತ್ವಾ ಕಿಂಚಿದ್ಧಾಸ್ಯಮುಖೋಽಭವತ್ ।**
**ತದಾಽಽಜಗಾಮ ಗರುಡಃ ಪಕ್ಷಿರಾಟ್ ಬ್ರಹ್ಮಚೋದಿತಃ ।। 70 ।।**

ದೂತವಚನಂ = ಆ ದೂತನ ಮಾತನ್ನು, ಶ್ರುತ್ವಾ = ಕೇಳಿ, ಸಃ = ಶ್ರೀನಿವಾಸನು, ಕಿಂಚಿತ್ = ಸ್ವಲ್ಪ, ಹಾಸ್ಯಮುಖೋ = ಹಾಸ್ಯಮುಖನು, ಅಭವತ್ = ಆದನು, ತದಾ = ಆಗ, ಬ್ರಹ್ಮಚೋದಿತಃ = ಬ್ರಹ್ಮನಿಂದ ಪ್ರೇರಿತನಾದ, ಪಕ್ಷಿರಾಟ್ = ಪಕ್ಷಿರಾಜನಾದ, ಗರುಡಃ = ವೈನತೇಯನು, ಆಜಗಾಮ (ಜಗಾಮ) = ಬಂದು ಸೇರಿದನು ।। 70 ।।

**ಪ್ರಣಿಪತ್ಯ ಶ್ರೀನಿವಾಸಂ ಪ್ರೋವಾಚ ಚ ವಚಸ್ತದಾ ।**

*ಗರುಡ ಉವಾಚ –*

**ಕೃಷ್ಣಾಂ ತೀರ್ತ್ವಾ ತು ತೇ ಪುತ್ರಃ ಶ್ರೀಶೈಲಮುಪಗಮ್ಯ ಚ ।। 71 ।।**

ಶ್ರೀನಿವಾಸಂ = ಶ್ರೀನಿವಾಸನಿಗೆ, ಪ್ರಣಿಪತ್ಯ = ನಮಸ್ಕಾರಮಾಡಿ, ಚ = ಮತ್ತು, ತದಾ = ಆಗ, ವಚಃ = ಮಾತನ್ನು, ಪ್ರೋವಾಚ = ಹೇಳಿದನು. ಗರುಡ ಉವಾಚ = ಗರುಡನು ಹೇಳುತ್ತಿದ್ದಾನೆ. ತೇ ಪುತ್ರಃ = ನಿನ್ನ ಸುತನು, ಕೃಷ್ಣಾಂ = ಕೃಷ್ಣಾನದಿಯನ್ನು, ತೀರ್ತ್ವಾತು = ದಾಟಿದವನಾಗಿ, ಚ = ಮತ್ತು, ಶ್ರೀಶೈಲಮುಪಗಮ್ಯ = ಶ್ರೀಶೈಲವನ್ನು ಕುರಿತು (ಸೇರಿ) ಬಂದವನಾಗಿ ।। 71 ।।

**ಅಹೋಬಲಂ ಚಾಸಸಾದ ತತ್ರಾಜ್ಞಪ್ತೋಽಹಮಾಗತಃ ।**
**ಇತ್ಯೇವಮುಚ್ಯಮಾನೇತು ಗರುಡೇನ ಮಹಾತ್ಮನಾ ।। 72 ।।**

ಅಹೋಬಲಂ ಚ = ಅಹೋಬಲವನ್ನೂ ಸಹ, ಆಸಸಾದ = ಬಂದು ಸೇರಿದನು, ಅಹಂ = ನಾನು , ತತ್ರ = ಅಲ್ಲಿ, ಆಜ್ಞಪ್ತಃ = ಆಜ್ಞಾಪಿಸಲ್ಪಟ್ಟವನಾಗಿ, ಆಗತಃ = ಬಂದೆನು, ಮಹಾತ್ಮನಾ = ಮಹನೀಯನಾದ, ಗರುಡೇನ = ಗರುಡನಿಂದ, ಇತ್ಯೇವಂ = ಈ ರೀತಿಯಾಗಿ, ಉಚ್ಯಮಾನೇ ತು = ಹೇಳಲ್ಪಟ್ಟವನಾಗುತ್ತಿರಲು ।। 72 ।।

**ತತ್ ಕ್ಷಣೇನೈವ ರಾಜೇಂದ್ರ ವಿಶ್ವಕ್ಸೇನೋಽಭಿವಂದ್ಯ ಚ ।**
**ವಿನೀತೋ ವಾಚಮೂಚೇಽಥ ಶ್ರೀನಿವಾಸಂ ಪರಾತ್ಪರಮ್ ।। 73 ।।**

ರಾಜೇಂದ್ರ = ಎಲೈ ಜನಕಮಹಾರಾಜ, ತತ್‌ಕ್ಷಣೇನೈವ = ಆ ಕ್ಷಣವೇ (ಆಗತಃ = ಬಂದ), ವಿಶ್ವಕ್ಸೇನಃ = ವಿಶ್ವಕ್ಸೇನನು, ಅಭಿವಂದ್ಯ ಚ = ಶ್ರೀಹರಿಗೆ ನಮಸ್ಕರಿಸಿದವನಾಗಿ, ಅಥ = ಅನಂತರ, ಪರಾತ್ಪರಂ = ಸರ್ವೋತ್ತಮನಾದ, ಶ್ರೀನಿವಾಸಂ (ಪ್ರತಿ) = ಶ್ರೀನಿವಾಸನನ್ನು ಕುರಿತು, ವಿನೀತಃ = ವಿನಯದಿಂದ, ವಾಚಮೂಚೇ = ಮಾತನಾಡಿದನು ।। 73 ।।.

*ವಿಶ್ವಕ್ಸೇನ ಉವಾಚ -*

**ತುಂಬುರೋಸ್ತೀರ್ಥಮಾಸಾದ್ಯ ಹರೇ! ತತ್ರಾವಗಾಹತೇ ।**
**ಪುತ್ರಸ್ತವ ಮಹಾರಾಜಃ ಪರಮಾತ್ಮಾ ಚತುರ್ಮುಖಃ ॥ 74 ॥**

ವಿಶ್ವಕ್ಸೇನ ಉವಾಚ = ವಿಶ್ವಕ್ಸೇನನು ಹೇಳಿದನು - ಹರೇ = ಶ್ರೀ ಹರಿಯೇ, ಪರಮಾತ್ಮಾ ** = ಶ್ರೀಮನ್ನಾರಾಯಣ ಮತ್ತು ಲಕ್ಷ್ಮೀದೇವಿಯರನ್ನು ಮನಸ್ಸಿನಲ್ಲಿ ಧರಿಸಿರುವ, ಪರಮಾತ್ಮಾ, ಮಹಾರಾಜಃ = ತ್ರಿಲೋಕಾಧಿಪತಿಯಾದ (ಸತ್ಯಲೋಕಕ್ಕೆ ಮಹಾರಾಜನಾದ), ತವ ಪುತ್ರಃ = ನಿನ್ನ ಮಗನಾದ, ಚತುರ್ಮುಖಃ = ನಾಲ್ಮೊಗನಾದ ಬ್ರಹ್ಮದೇವನು, ತುಂಬುರೋಸ್ತೀರ್ಥಂ = ತುಂಬುರು ತೀರ್ಥವನ್ನು, ಆಸಾದ್ಯ = ಸೇರಿ, ತತ್ರ = ಆ ತುಂಬುರು ತೀರ್ಥದಲ್ಲಿ, ಅವಗಾಹತೇ = ಅವಗಾಹನ ಸ್ನಾನ ಮಾಡುತ್ತಿದ್ದಾನೆ. ॥ 74 ॥

**ಪುತ್ರಸ್ತವಾಗಚ್ಛತೀಹ ಭವದ್ದರ್ಶನಕೌತುಕೀ ।**
**ಸೇನಾಪತೌ ವದತ್ಯೇವಂ ಭಗವಾನುತ್ಥಿತೋ ಮುದಾ ॥ 75 ॥**

ಭವದ್ದರ್ಶನಕೌತುಕೀ = ನಿನ್ನ ಸಂದರ್ಶನ ಮಾಡಬೇಕೆಂಬ ಕುತೂಹಲವುಳ್ಳ, ತವಪುತ್ರಃ = ನಿನ್ನ ಮಗನು, ಇಹ = ಇಲ್ಲಿಗೆ, ಆಗಚ್ಛತಿ = ಬರುತ್ತಾನೆ. ಭೂಮಿಪ = ಎಲೈ ಜನಕಮಹಾರಾಜ ! ಏವಂ = ಇಂತು, ಸೇನಾಪತೌ = ಸೇನಾಪತಿಯು, ವದತಿ (ಸತಿ) = ಹೇಳುತ್ತಿರಲು, ಮುದಾ = ಸಂತೋಷದಿಂದ, ಉತ್ಥಿತಃ = ಮೇಲೆದ್ದ, ಭಗವಾನ್ = ನಿರವಧಿಕ ಷಡ್ಗುಣೈಶ್ವರ್ಯಪೂರ್ಣನಾದ ॥ 75 ॥

**ಗರುಡಸ್ಕಂಧಮಾರೂಢಃ ಪ್ರಯಾಣಾಭಿಮುಖೋ ಹರಿಃ ।**
**ಉತ್ತರಾಭಿಮುಖಃ ಪ್ರಾಯಾತ್ಪುತ್ರಸ್ನೇಹೇನ ಭೂಮಿಪ ॥ 76 ॥**

ಹರಿಃ = ಶ್ರೀವಿಷ್ಣುವು, ಪ್ರಯಾಣಾಭಿಮುಖಃ = ಹೊರಡಲನುವಾಗಿ, ಗರುಡಸ್ಕಂಧಮಾರೂಢಃ = ಗರುಡನ ಭುಜದ ಮೇಲೆ ಕುಳಿತವನಾಗಿ, ಪುತ್ರಸ್ನೇಹೇನ = ಮಗನ ಮೇಲಿನ ವಾತ್ಸಲ್ಯದಿಂದ, ಉತ್ತರಾಭಿಮುಖಃ = ಉತ್ತರದಿಕ್ಕಿಗೆ ಅಭಿಮುಖವಾಗಿ, ಪ್ರಾಯಾತ್ = ಪಯಣಿಸಿದನು ॥ 76 ॥

**ವಿಶ್ವಕ್ಸೇನೋಽತಿವೇಗೇನ ಬ್ರಹ್ಮಾಣಮುಪಗಮ್ಯ ಚ ।**
**ಆನಮ್ಯ ಶಿರಸಾ ಭಕ್ತ್ಯಾ ಪ್ರೋವಾಚ ವಚನಂ ವಿಧಿಮ್ ॥ 77 ॥**

ವಿಶ್ವಕ್ಸೇನಃ = ವಿಶ್ವಕ್ಸೇನನು, ಬ್ರಹ್ಮಾಣಂ = ಬ್ರಹ್ಮದೇವರನ್ನು ಕುರಿತು, ಉಪಗಮ್ಯ ಚ = (ಶೀಘ್ರವಾಗಿ) ಹೊಂದಿದವನಾಗಿ, ವಿಧಿಂ = ಬ್ರಹ್ಮದೇವನನ್ನು, ಭಕ್ತ್ಯಾ = ಭಕ್ತಿಯಿಂದ, ಆನಮ್ಯ = ವಂದಿಸಿ, ವಚನಂ = ಮಾತನ್ನು, ಪ್ರೋವಾಚ = ಹೇಳಿದನು. ॥ 77 ॥

**ಭಗವಾನರವಿಂದಾಕ್ಷಸ್ತವ ದರ್ಶನಲಾಲಸಃ ।**
**ಗರುಡಸ್ಕಂಧಮಾರುಹ್ಯ ಸಮಾಗಚ್ಛತಿ ತೇಽಂತಿಕಮ್ ॥ 78 ॥**

ವಿಶ್ವಕ್ಸೇನ ಉವಾಚ = ವಿಶ್ವಕ್ಸೇನನು ಹೇಳುತ್ತಿದ್ದಾನೆ. ಅರವಿಂದಾಕ್ಷಃ = ಕಮಲನಯನನಾದ, ಭಗವಾನ್ = ಪೂಜ್ಯನಾದ ಶ್ರೀನಿವಾಸನು, ತವ = ನಿನ್ನ, ದರ್ಶನಲಾಲಸಃ = ದರ್ಶನಾಕಾಂಕ್ಷಿಯಾಗಿ, ಗರುಡಸ್ಕಂಧಮಾರುಹ್ಯ = ಗರುಡನ ಹೆಗಲೇರಿ, ತವಾಂತಿಕಮ್ = ನಿನ್ನ ಸನಿಹಕ್ಕೆ, ಆಗಚ್ಛತಿ = ಬರುತ್ತಿದ್ದಾನೆ (ಬರುವನು) ॥ 78 ॥

** ಪರಶ್ಚ ಮಾ ಚ ಪರಮೇ, ತೇ ಉಭೇ ಆತ್ಮನಿ ಯಸ್ಯ ಸಃ -

**ತಚ್ಛ್ರುತ್ವಾ ವಚನಂ ತಸ್ಯ ವಿಶ್ವಕ್ಸೇನಸ್ಯ ಧೀಮತಃ ।**
**ಚಂದ್ರಬಿಂಬನಿಭಾದ್ಧಂಸಾದವರುಹ್ಯ ಪಿತಾಮಹಃ ॥ 79 ॥**

ಧೀಮತಃ = ಬುದ್ಧಿಶಾಲಿಯಾದ, ತಸ್ಯ ವಿಶ್ವಕ್ಸೇನಸ್ಯ = ಆ ವಿಶ್ವಕ್ಸೇನನ, ತತ್ = ಶ್ರೀಹರಿಯು ಬರುತ್ತಿರುವನೆಂಬ, ವಚನಂ = ನುಡಿಯನ್ನು, ಶ್ರುತ್ವಾ = ಕೇಳಿ, ಪಿತಾಮಹಃ = ಬ್ರಹ್ಮದೇವನು, ಚಂದ್ರಬಿಂಬನಿಭಾತ್ = ಚಂದ್ರಬಿಂಬದಂತೆ ಬಿಳುಪಾದ, ಹಂಸಾತ್ = ಹಂಸದಿಂದ, ಅವರುಹ್ಯ = ಕೆಳಗಿಳಿದು ॥ 79 ॥

**ಪಾದಾಭ್ಯಾಮಾಗಮಚ್ಛೀಘ್ರಂ ಯತ್ರಾಗಚ್ಛತಿ ಕೇಶವಃ ।**
**ಸ ದದರ್ಶ ಮಹಾರಾಜ ಜನಕಂ ಚತುರಾನನಃ ॥ 80 ॥**

ಕೇಶವಃ = ಶ್ರೀ ಹರಿಯು, ಯತ್ರಾಗಚ್ಛತಿ = ಎಲ್ಲಿ ಬರುತ್ತಿರುವನೋ ಅಲ್ಲಿಗೆ, ಶೀಘ್ರಂ = ವೇಗವಾಗಿ, ಪಾದಾಭ್ಯಾಂ = ಕಾಲುನಡಿಗೆಯಿಂದ, ಆಗಮತ್ = ಬಂದನು (ಬಂದು ಸೇರಿದನು), ಮಹಾರಾಜ = ಜನಕ ಭೂಪತಿಯೇ, ಚತುರಾನನಃ = ಚತುರ್ಮುಖನಾದ, ಸಃ = ಬ್ರಹ್ಮದೇವನು, ಜನಕಂ = ತಂದೆಯಾದ ಶ್ರೀನಿವಾಸನನ್ನು, ದದರ್ಶ = ನೋಡಿದನು ॥ 80 ॥

**ದಂಡವತ್ಪ್ರಣಿಪತ್ಯಾಥ ಚಾಗ್ರೇ ಬಧ್ವಾ ಕರೌ ಸ್ಥಿತಃ ।**
**ಸ ಚಾವರುಹ್ಯ ಗರುಡಾದಾಸಸಾದ ಪಿತಾಮಹಮ್ ॥ 81 ॥**

ಅಥ = ಆ ಬಳಿಕ, ದಂಡವತ್ಪ್ರಣಿಪತ್ಯ = ದಂಡಪ್ರಣಾಮಮಾಡಿ, ಅಗ್ರೇ = ಮುಂದೆ, ಕರೌ = ಎರಡು ಕರಗಳನ್ನು, ಬಧ್ವಾ = ಜೋಡಿಸಿ, ಸ್ಥಿತಃ = ನಿಂತನು. ಸ ಚ = ಶ್ರೀನಿವಾಸನೂ ಕೂಡ, ಗರುಡಾದವರುಹ್ಯ = ಗರುಡನ ಹೆಗಲಿನಿಂದ ಕೆಳಗಿಳಿದು, ಪಿತಾಮಹಂ = ಬ್ರಹ್ಮದೇವನನ್ನು, ಆಸಸಾದ = ಬಂದು ಸೇರಿದನು (ಹೊಂದಿದವನಾದನು) ॥ 81 ॥

**ಉತ್ಥಾಪ್ಯಾಲಿಂಗ್ಯ *ಚಾಪ್ಯೇನಂ ಉವಾಚ ಮಧುಸೂದನಃ ।**

*ಶ್ರೀನಿವಾಸ ಉವಾಚ -*

**ಉತ್ತಿಷ್ಠ ತಾತ ಭದ್ರಂ ತೇ ಪಶ್ಯ ಮಾಮಾತುರಂ ಕೃಶಮ್ ॥ 82 ॥**

**ಬಹುಕಾಲೇನ ತೇ ಬುದ್ಧಿರ್ಮಮದರ್ಶನಲಾಲಸಾ ।**
**ತದೇವ ಪರಮಂ ಮನ್ಯೇ ತ್ವದ್ಬುದ್ಧಿರ್ಮಮ ದರ್ಶನೇ ॥ 83 ॥**

**ಕೌತೂಹಲಂ ನೋಪನೀತಾ ಕದಾಚಿದಪಿ ಯೇನ ವೈ ।**
**ನ ಕಶ್ಚಿದ್ವಿದ್ಯತೇ ವಸ್ತು ತ್ವಾಂ ವಿನಾ ಚತುರಾನನ ॥ 84 ॥**

ಮಧುಸೂದನಃ = ಶ್ರೀಹರಿಯು, ಏನಂ = ಬ್ರಹ್ಮದೇವನನ್ನು, (ಪಾ:-ಸಸ್ನೇಹಾತ್ = ಪ್ರೀತಿಪೂರ್ವಕವಾಗಿ), ಉತ್ಥಾಪ್ಯ = ಮೇಲೆಬ್ಬಿಸಿ, ಅಪಿ ಚ = ಮತ್ತು, ಆಲಿಂಗ್ಯ = ಆಲಿಂಗನ ಮಾಡಿಕೊಂಡು, ಉವಾಚ = ಹೇಳಿದನು. ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಿದನು - ತಾತ = ಎಲೈ ತಂದೆಯೇ (ಪ್ರೀತಿಯಿಂದ ಮಗನನ್ನು ತಾತ ಎನ್ನುವುದು ಕಂಡುಬಂದಿದೆ), ತೇ = ನಿನಗೆ, ಭದ್ರಂ = ಮಂಗಳವು. ಆತುರಂ = ನಿನ್ನನ್ನು ಕಾಣಲು ಆತುರವುಳ್ಳ, ಕೃಶಂ = ಕೃಶನಾಗಿರುವ, ಮಾಂ = ನನ್ನನ್ನು, ಪಶ್ಯ

*ಪಾ :- ಸಸ್ನೇಹಾದುವಾಚ

= ನೋಡು ॥ 82 ॥ (ಬಹುಕಾಲೇನ = ಬಹಳ ಕಾಲವಾದಮೇಲೆ, ತೇ = ನಿನ್ನ, ಬುದ್ಧಿಃ = ಬುದ್ಧಿಯು, ಮಮ = ನನ್ನ, ದರ್ಶನಲಾಲಸಾ = ದರ್ಶನ ಮಾಡುವ ವಿಷಯದಲ್ಲಿ ಉತ್ಸುಕವಾಯಿತು!) ಯೇನ ವೈ = ಯಾವ ಕಾರಣದಿಂದಲಾದರೂ, ತ್ವದ್ಬುದ್ಧಿಃ = ನಿನ್ನ ಬುದ್ಧಿಯು, ಕದಾಚಿದಪಿ = ಒಮ್ಮೆಯಾದರೂ, ಮಮ = ನನ್ನ, ದರ್ಶನೇ = ನೋಡಬೇಕೆಂದು, ಕೌತೂಹಲಂ = ಕುತೂಹಲವನ್ನು, ನೋಪನೀತಾ = ಪಡಲಿಲ್ಲವಲ್ಲ, ಬಹುಕಾಲೇನ = ಬಹಳಕಾಲವಾದಮೇಲಾದರೂ, ತೇ ಬುದ್ಧಿಃ = ನಿನ್ನ ಬುದ್ಧಿಯು, ಮಮ = ನನ್ನ, ದರ್ಶನಲಾಲಸಾ = ದರ್ಶನ ಮಾಡಲುತ್ಸುಕವಾಯಿತಲ್ಲ, ತದೇವ = ಅದುವೇ, ಪರಮಂ ಮನ್ಯೇ = ದೊಡ್ಡದೆಂದು ಭಾವಿಸುವೆನು. ಚತುರಾನನ = ಬ್ರಹ್ಮದೇವ, ತ್ವಾಂ ವಿನಾ = ನಿನ್ನನ್ನು ಬಿಟ್ಟು, ಕಶ್ಚಿತ್ ವಸ್ತು = ಬೇರೊಂದು ಹೆಚ್ಚಿನದಾದ ವಸ್ತುವು, ನ ವಿದ್ಯತೇ = ಇಲ್ಲ ॥ 83-84 ॥

**ವದತ್ಯೇವಂ ಹೃಷೀಕೇಶೇ ನೋವಾಚ ಚತುರಾನನಃ ।**
**ಮುಹೂರ್ತದ್ವಯಮಾತ್ರಂತು ಶ್ರೀನಿವಾಸೋಽಪಿ ನೋಚಿವಾನ್ ॥ 85 ॥**

ಹೃಷೀಕೇಶೇ = ಶ್ರೀನಿವಾಸನು, ಏವಂ = ಹೀಗೆ, ವದತಿ (ಸತಿ) = ಹೇಳುತ್ತಿರಲು, ಚತುರಾನನಃ = ಬ್ರಹ್ಮದೇವನು, ನೋವಾಚ = ಮಾತನಾಡಲಿಲ್ಲ, ಶ್ರೀನಿವಾಸೋಽಪಿ = ಶ್ರೀನಿವಾಸನೂ ಕೂಡ, ನೋಚಿವಾನ್ = ಮಾತನಾಡಲಿಲ್ಲ ॥ 85 ॥

**ಆನಂದಬಾಷ್ಪಸಂದಿಗ್ಧನಯನೌ ತೌ ಪರಸ್ಪರಮ್ ।**
**ಸ್ನೇಹಾತ್ಪ್ರಫುಲ್ಲವದನೌ ಮುಖಂ ದದೃಶತುರ್ಮುದಾ ॥ 86 ॥**

ಆನಂದಬಾಷ್ಪ ಸಂದಿಗ್ಧನಯನೌ = ಆನಂದಾಶ್ರುಪೂರಿತ ಕಣ್ಣುಳ್ಳವರಾದ, ತೌ = ಶ್ರೀನಿವಾಸ-ಬ್ರಹ್ಮರು, ಸ್ನೇಹಾತ್ = ಪ್ರೇಮದಿಂದ, ಪ್ರಫುಲ್ಲವದನೌ = ವಿಕಸಿತಮುಖವುಳ್ಳವರಾಗಿ, ಮುಹೂರ್ತಮಾತ್ರದ್ವಯಂತು = ಎರಡು ಮುಹೂರ್ತದವರೆಗೆ, ಪರಸ್ಪರಂ = ಒಬ್ಬರಿಗೊಬ್ಬರು, ಮುದಾ = ಸಂತೋಷದಿಂದ, ಮುಖಂ = ಪರಸ್ಪರ ಮುಖವನ್ನು, ದದೃಶತುಃ = ನೋಡುವವರಾದರು ॥ 86 ॥

**ಪಿತುರ್ಮುಖಂ ಸುತೋಽಪಶ್ಯತ್ಸುತವಕ್ತ್ರಂ ಹರಿಸ್ತಥಾ ।**
**ತತಃ ಸಂತುಷ್ಟಮನಸೌ ಲೇಭಾತೇ ಪರಮಾಂ ಮುದಮ್ ॥ 87 ॥**

**ತೌ ಕ್ರಿಡಂತೌ ಶ್ರೀನಿವಾಸಬ್ರಹ್ಮಾಣೌ ದೇವಸಂಸದಿ ।**
**ಪಿತೃಪುತ್ರೌ ತದಾ ದೃಷ್ಟ್ವಾ ಸತ್ಯಲೋಕನಿವಾಸಿನಃ ॥ 88 ॥**

**ಲೇಭಿರೇ ಪರಮಾನಂದಂ ತನ್ಮಾಯಾಮೋಹಿತಾಸ್ಸುರಾಃ ।**

*ದೇವಾ ಊಚುಃ ।*

**ನ ತೇನ ಸದೃಶಃ ಪುತ್ರೋ ನ ತೇನ ಜನಕೋ ಭುವಿ ॥ 89 ॥**

ಪಿತುರ್ಮುಖಂ = ತಂದೆಯ ಮುಖವನ್ನು, ಸುತಃ = ಮಗನು, ಅಪಶ್ಯತ್ = ನೋಡಿದನು, ತಥಾ = ಅದರಂತೆ, ಹರಿಃ = ಶ್ರೀಹರಿಯು, ಸುತವಕ್ತ್ರಂ = ಮಗನ ಮುಖವನ್ನು, ಅಪಶ್ಯತ್ = ನೋಡಿದನು. ತತಃ = ಅನಂತರ, ದೇವಸಂಸದಿ = ದೇವತೆಗಳ ಸಭೆಯಲ್ಲಿ, ಸಂತುಷ್ಟಮನಸೌ = ಸಂತೋಷಮನಸ್ಕರಾದ, ತೌ ಶ್ರೀನಿವಾಸಬ್ರಹ್ಮಾಣೌ = ಶ್ರೀನಿವಾಸ ಬ್ರಹ್ಮದೇವರು, ಕ್ರೀಡಂತೌ = (ಇಂತು) ಕ್ರೀಡಿಸುವವರಾಗಿ, ಪರಮಾಂ ಮುದಂ = ಅತಿಶಯ ಆನಂದವನ್ನು, ಲೇಭಾತೇ

= ಪಡೆದರು. ತದಾ = ಆವಾಗ, ತನ್ಮಾಯಾಮೋಹಿತಾಃ = ಶ್ರೀಹರಿಯ ಮಾಯೆಯಿಂದ ಮೋಹಿತರಾದ, ಸುರಾಃ = ದೇವತೆಗಳು, ಸತ್ಯಲೋಕನಿವಾಸಿನಃ = ಸತ್ಯಲೋಕದಲ್ಲಿ ವಾಸಿಸುವ ಜನರು, ಪಿತೃಪುತ್ರೌ = ತಂದೆ ಮಕ್ಕಳನ್ನು, ದೃಷ್ಟ್ವಾ = ನೋಡಿ, ಪರಮಾನಂದಂ = ಅತಿಶಯ ಸಂತೋಷವನ್ನು, ಲೇಭಿರೇ = ಹೊಂದಿದರು. ದೇವಾ ಊಚುಃ = ದೇವತೆಗಳು ಹೇಳುತ್ತಲಿದ್ದಾರೆ. ತೇನ ಸದೃಶಃ = ಬ್ರಹ್ಮದೇವನಿಗೆ ಸಮರಾದ, ಪುತ್ರಃ = ಮಗನು, ನ = ಇಲ್ಲವು, ತೇನ ಸದೃಶಃ = ಶ್ರೀಹರಿಗೆ ಸಮಾನರಾದ, ಜನಕಃ = ತಂದೆಯು, ನ = ಇಲ್ಲವು || 87-89 ||

**ಇತ್ಯೇವಂ ಪ್ರಶಶಂಸುಸ್ತೇ ಭಕ್ತಿಸ್ನೇಹವಶಂಗತಾಃ ।**
**ತತಸ್ಸುತಂ ಸಮಾಶ್ವಾಸ್ಯ ಪರಿಮೃಜ್ಯಾಕ್ಷಿಜಂ ಜಲಮ್ || 90 ||**

**ಬ್ರಹ್ಮಣಃ ಪಾಣಿ ಮುದ್ಧೃತ್ಯ ಸ್ವನೇತ್ರಜಲಮುನ್ಮೃಜನ್ ।**
**ವಲ್ಮೀಕಸ್ಥಾನಮಾಶ್ರಿತ್ಯ *ಪುತ್ರೇಣ ಸಹ ತಸ್ಥಿವಾನ್ || 91 ||**

ಇತ್ಯೇವಂ = ಈ ಪ್ರಕಾರವಾಗಿ, ಭಕ್ತಿಸ್ನೇಹವಶಂಗತಾಃ = ಭಕ್ತಿವಾತ್ಸಲ್ಯವಶರಾದ, ತೇ = ದೇವತೆಗಳು, ಪ್ರಶಶಂಸುಃ = ಶ್ಲಾಘನೆ ಮಾಡಿದರು, ತತಃ = ಅನಂತರ, ಸುತಂ = ಮಗನನ್ನು, ಸಮಾಶ್ವಾಸ್ಯ = ಸಮಾಧಾನಪಡಿಸಿ, (ಬ್ರಹ್ಮಣಃ = ಬ್ರಹ್ಮನ), ಪಾಣಿಮುದ್ಧೃತ್ಯ = ಕರವನ್ನು ಕೈಯಲ್ಲಿ ಹಿಡಿದು ಮೇಲೆತ್ತಿ, ಸ್ವನೇತ್ರಜಲಂ = ತನ್ನ ಕಣ್ಣೀರನ್ನು, ಉನ್ಮೃಜನ್ (ಸನ್) = ಒರೆಸಿಕೊಂಡವನಾಗಿ, ವಲ್ಮೀಕಸ್ಥಾನಂ = ವಲ್ಮೀಕದ ಸ್ಥಳವನ್ನು, ಆಶ್ರಿತ್ಯ = ಆಶ್ರಯಿಸಿ, (ಪಾ:- ಆಸಾದ್ಯ = ಸೇರಿ), ಪುತ್ರೇಣ ಸಹ = ಮಗನೊಡನೆ, ತಸ್ಥಿವಾನ್ = ಇರುವವನಾದನು (ನಿಂತನು) || 90-91 ||

**ತತ್ರ ಚ ಶ್ರೀನಿವಾಸಸ್ತಮುವಾಚ ಪುರುಷೋತ್ತಮಃ ।**

*ಶ್ರೀಭಗವಾನುವಾಚ-*

**ಕಚ್ಚಿತ್ತೇ ಕುಶಲಂ ತಾತ ಸ್ನುಷಾಯಾ ಮಮ ಸಂಪ್ರತಿ || 92 ||**

ತತ್ರ ಚ = ಅಲ್ಲಿ ಕುಳಿತಮೇಲೆ, ಶ್ರೀನಿವಾಸಃ = ಲಕ್ಷ್ಮೀದೇವಿಗೆ ಆವಾಸಭೂತನಾದ, ಪುರುಷೋತ್ತಮಃ = ಶ್ರೀಹರಿಯು, ತಂ (ಪ್ರತಿ) = ಬ್ರಹ್ಮನನ್ನು ಕುರಿತು, ಉವಾಚ = ಹೇಳಿದನು. ಶ್ರೀಭಗವಾನುವಾಚ = ಪೂಜ್ಯನಾದ ಶ್ರೀನಿವಾಸನು ಹೇಳಹತ್ತಿದನು. ತಾತ = ಕುಮಾರ, ಸಂಪ್ರತಿ = ಈಗ, ತೇ = ನಿನಗೆ, ಮಮ = ನನ್ನ, ಸ್ನುಷಾಯಾಃ = ಸೊಸೆಯಾದ ಸರಸ್ವತೀದೇವಿಗೆ, ಕಚ್ಚಿತ್ಕುಶಲಂ = ಸೌಖ್ಯವೇ (ನೀವು ಕ್ಷೇಮದಿಂದಿದ್ದೀರಾ? || 92 ||

**ಪುತ್ರಪೌತ್ರಪ್ರಪೌತ್ರಾಣಾಂ ಕ್ಷೇಮಂ ಪ್ರಬ್ರೂಹಿ ಮೇ ಸುತ ।**

ಬ್ರಹ್ಮೋವಾಚ-

**ಸರ್ವಂ ಮಂಗಲಮಸ್ಮಾಕಂ ತ್ವತ್ಪ್ರಸಾದೇನ ಕೇಶವ || 93 ||**

ಸುತ = ಎಲೈ ಮಗನೇ, ಮೇ = ನನ್ನ), ಪುತ್ರಪೌತ್ರಪ್ರಪೌತ್ರಾಣಾಂ = ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳುಗಳ, ಕ್ಷೇಮಂ = ಕುಶಲವನ್ನು, ಪ್ರಬ್ರೂಹಿ = ಹೇಳುವವನಾಗು. ಬ್ರಹ್ಮೋವಾಚ = ಬ್ರಹ್ಮದೇವನು ಹೇಳಿದನು. ಕೇಶವ =

★ ಪಾ :- ಆಸಾದ್ಯ

ಶ್ರೀಹರಿಯೇ, ತ್ವತ್ಪ್ರಸಾದೇನ = ನಿನ್ನ ಅನುಗ್ರಹದಿಂದ, ಅಸ್ಮಾಕಂ = ನಮ್ಮೆಲ್ಲರಿಗೂ, ಸರ್ವಂ = ಎಲ್ಲವೂ, ಮಂಗಳಂ = ಶುಭವು ॥ 93 ॥

**ತಾತ ಮೇ ವದ ತೇ ಕ್ಷೇಮಂ ಪುರಾಣ ಪುರುಷೋತ್ತಮ ।**

ತಾತ = ಎಲೈ ಜನಕನೇ, ಪುರಾಣಪುರುಷೋತ್ತಮ = ಅನಾದಿಯಾದ ಪುರುಷಶ್ರೇಷ್ಠನೇ, ತೇ = ನಿನ್ನ, ಕ್ಷೇಮಂ = ಕುಶಲವನ್ನು, ಮೇ = ನನಗೆ, ವದ = ಹೇಳು.

*ಶ್ರೀಭಗವಾನುವಾಚ-*

**ದ್ವಾಪರಾಂತೇ ಕೃತಂ ಕರ್ಮ ಶೃಣು ಪುತ್ರ ಸಮಾಧಿಮತ್ + ॥ 94 ॥**

ಶ್ರೀಭಗವಾನುವಾಚ = ವೇದಪ್ರತಿಪಾದ್ಯಮಹಿಮನಾದ, ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಯು ಹೇಳಲಾರಂಭಿಸಿದನು. ಸಮಾಧಿಮತ್ = ಸಮಾಧಿನಿರತನಾಗಿ ಕೇಳು (ಅಂದರೆ ಮನಸ್ಸಿಟ್ಟು ಕೇಳುವವನಾಗು), ದ್ವಾಪರಾಂತೇ = ದ್ವಾಪರಯುಗದ ಅಂತ್ಯಭಾಗದಲ್ಲಿ, ಕೃತಂ = ಮಾಡಲ್ಪಟ್ಟ, ಕರ್ಮ = ಕೆಲಸವನ್ನು (ಪಾ :- ಸಮಾಧಿನಾ = ಒಂದೇ ಮನಸ್ಸಿನಿಂದ), ಶೃಣು = ಕೇಳುವವನಾಗು ॥ 94 ॥

**ವೈಕುಂಠೇ ಶೇಷತಲ್ಪಸ್ಥಂ ಭೃಗುಃ ಪಾದತಲೇನ ಮಾಮ್ ।**
**ತತಾಡೋರಸಿ ತೇ ಮಾತುರಾಸ್ಪದೇ ಕಮಲಾಸನ ॥ 95 ॥**

ಕಮಲಾಸನ = ಕಮಲವೇ ಆಸನವಾಗಿ ಉಳ್ಳ ಬ್ರಹ್ಮದೇವ, ವೈಕುಂಠೇ = ವೈಕುಂಠದಲ್ಲಿ, ಶೇಷತಲ್ಪಸ್ಥಂ = ಶೇಷತಲ್ಪದಲ್ಲಿ ಪವಡಿಸಿದ್ದ, ಮಾಂ = ನನ್ನನ್ನು, ತೇ ಮಾತುಃ = ನಿನ್ನ ತಾಯಿಯಾದ ಲಕ್ಷ್ಮೀದೇವಿಗೆ, ಆಸ್ಪದೇ = ವಾಸಸ್ಥಳವಾದ, ಉರಸಿ = ವಕ್ಷಸ್ಥಳದಲ್ಲಿ, ಭೃಗುಃ = ಭೃಗುಋಷಿಯು, ಪಾದತಲೇನ = ಅಂಗಾಲಿನಿಂದ, ತತಾಡ = ಒದ್ದನು (ಹೊಡೆದನು) ॥ 95 ॥

**ತದಾ ತೇ ಜನನೀ ಪುತ್ರ ಕರವೀರಪುರಂ ಗತಾ ।**
**ತೇನ ದುಃಖೇನ ಸಂತಪ್ತಸ್ತ್ಯಕ್ತ್ವಾ ವೈಕುಂಠಮುತ್ತಮಮ್ ॥ 96 ॥**

ಪುತ್ರ = ಮಗನೇ, ತದಾ = ಆವಾಗ, ತೇ = ನಿನ್ನ, ಜನನೀ = ತಾಯಿಯಾದ ಲಕ್ಷ್ಮೀದೇವಿಯು, ಕರವೀರಪುರಂ (ಪ್ರತಿ) = ಕೊಲ್ಹಾಪುರವನ್ನು ಕುರಿತು, ಗತಾ = ಹೊರಟುಹೋದಳು, ತೇನ ದುಃಖೇನ = ಲಕ್ಷ್ಮಿಯ ವಿರಹದ ದುಃಖದಿಂದ, ಸಂತಪ್ತಃ = ಪೀಡಿತನಾಗಿ, ಉತ್ತಮಂ = ಶ್ರೇಷ್ಠವಾದ, ವೈಕುಂಠಂ = ವೈಕುಂಠವನ್ನು, ತ್ಯಕ್ತ್ವಾ = ತ್ಯಜಿಸಿ ॥ 96 ॥

**ಇಹಾಗತೋ ವೇಂಕಟಾದ್ರಿಂ ನಾತ್ರಾಪಶ್ಯಂ ನಿಕೇತನಮ್ ।**
**ಅತ್ರ ವಲ್ಮೀಕಗಂ ನಿತ್ಯಂ ಚೋಲಭೃತ್ಯಃ ಕುಠಾರತಃ ॥ 97 ॥**

**ಪ್ರಾಹರನ್ಮಾಂ ರಾಜಭಾರ್ಯಾತಾಡಿತೋ ಧೇನುಕೋಪತಃ ।**
**ಬೃಹಸ್ಪತೇಃ ಪ್ರಸಾದೇನ ಜೀವಾಮಿ ಕರುಣಾನಿಧೇಃ[1] ॥ 98 ॥**

---

+ ಪಾ :- ಸಮಾಧಿನಾ.

[1] ಪಾ:- ತವಕಾರಣಾತ್

ವೇಂಕಟಾದ್ರಿಂ (ಪ್ರತಿ) = ವೇಂಕಟಾಚಲವನ್ನು ಕುರಿತು, ಆಗತಃ = ಬಂದೆನು. ಇಹ = ಇಲ್ಲಿ, ನಿಕೇತನಂ = ವಾಸಮಾಡಲು ಮನೆಯನ್ನು, ನಾಪಶ್ಯಂ = ಕಾಣಲಿಲ್ಲ (ಆದ್ದರಿಂದ), ಅತ್ರ = ಇಲ್ಲಿ, ನಿತ್ಯಂ = ಸದಾ, ವಲ್ಮೀಕಗಂ = ಹುತ್ತದಲ್ಲಿ ವಾಸಿಸುತ್ತಿದ್ದ, ಮಾಂ = ನನ್ನನ್ನು, ರಾಜಭಾರ್ಯಾತಾಡಿತಃ = ರಾಜನ ಮಡದಿಯಿಂದ ಹೊಡೆಯಲ್ಪಟ್ಟ, ಚೋಲಭೃತ್ಯಃ = ಚೋಳರಾಜನ ಸೇವಕನಾದ ಗೋರಕ್ಷಕನು, ಧೇನುಕೋಪತಃ = ಆಕಳಿನ ಮೇಲಿನ ಸಿಟ್ಟಿನಿಂದ, (ಮಾಂ = ನನ್ನನ್ನು), ಕುಠಾರತಃ = ಕೊಡಲಿಯಿಂದ, ಪ್ರಾಹರತ್ = ಹೊಡೆದನು. ಕರುಣಾನಿಧೇಃ = ದಯಾನಿಧಿಯಾದ, ಬೃಹಸ್ಪತೇಃ = ಬೃಹಸ್ಪತ್ಯಾಚಾರ್ಯನ, ಪ್ರಸಾದೇನ = ಅನುಗ್ರಹದಿಂದ, (ಪಾ :- ತವ ಕಾರಣಾತ್ = ನಿನ್ನನ್ನು ನೋಡುವ ಮನಸ್ಸಿನಿಂದ ನಿನಗಾಗಿ), ಜೀವಾಮಿ = ಬದುಕಿದ್ದೇನೆ ।। 97-98 ।।

**ಅಭಿವಾದಯ ಕಲ್ಯಾಣೀಂ ಮಾತರಂ ಮಮ ನಂದನ ।**
**ಇತ್ಯುಕ್ತೋ ಬಕುಲಾಂ ಬ್ರಹ್ಮಾ ವವಂದೇ ಹರಿಮಾತರಮ್ ।। 99 ।।**

ನಂದನ = ಕುಮಾರ, ಮಮ = ನನ್ನ, ಕಲ್ಯಾಣೀಂ = ಮಂಗಳಕರಳಾದ, ಮಾತರಂ = ತಾಯಿಯನ್ನು, ಅಭಿವಾದಯ = ನಮಸ್ಕರಿಸು, ಇತ್ಯುಕ್ತಃ = ಹೀಗೆ ಹೇಳಿಸಿಕೊಳ್ಳಲ್ಪಟ್ಟ, ಬ್ರಹ್ಮಾ = ಬ್ರಹ್ಮದೇವನು, ಹರಿ ಮಾತರಂ = ಶ್ರೀಹರಿಯ ಜನನಿಯಾದ ಬಕುಳಾದೇವಿಯನ್ನು, ವವಂದೇ = ವಂದಿಸಿದನು ।। 99 ।।

*ಬ್ರಹ್ಮೋವಾಚ ।*

**ಜನನೀ ತವ ಗೋವಿಂದ ಕುತ್ರೇಯಂ ಜನಿತಾ ಪುರಾ ।**
**ಏತದಾಖ್ಯಾಹಿ ಭಗವನ್ ಶ್ರೋತುಂ ಕೌತೂಹಲಂ ಹಿ ಮೇ ।। 100 ।।**

ಬ್ರಹ್ಮೋವಾಚ = ಬ್ರಹ್ಮದೇವನು ಹೇಳಿದನು - ಭಗವನ್ = ಪೂಜ್ಯನಾದ, ಗೋವಿಂದ = ಶ್ರೀಹರಿ! ತವ = ನಿನ್ನ, ಇಯಂ ಜನನೀ = ಈ ತಾಯಿಯು, ಪುರಾ = ಹಿಂದೆ, ಕುತ್ರ ಜನಿತಾ = ಎಲ್ಲಿ ಹುಟ್ಟಿದಳು? ಏತತ್ = ಇದನ್ನು, ಆಖ್ಯಾಹಿ = ಹೇಳುವವನಾಗು, ಮೇ = ನನಗೆ, ಶ್ರೋತುಂ = ಕೇಳಲು, ಕೌತೂಹಲಂ = ಕುತೂಹಲವಾಗಿದೆ, ಹಿ = ಪ್ರಸಿದ್ಧವು ।। 100 ।।

*ಶ್ರೀ ಭಗವಾನುವಾಚ-*

**ಯಶೋದಾ ಬಕುಲಾ ಭೂತ್ವಾ ವರ್ತತೇ ವೇಂಕಟಾಚಲೇ ।**
**ರಕ್ಷಿತೋಽಹಂ ತಯಾ ಭದ್ರ ಬಹುಕಾಲಂ ಪಿತಾಮಹ ।। 101 ।।**

ಶ್ರೀಭಗವಾನುವಾಚ = ಶ್ರೀಭಗವಂತನು ಹೇಳಿದನು - ಭದ್ರ = ಮಂಗಳಕರನೇ, ಪಿತಾಮಹ = ಬ್ರಹ್ಮದೇವ! ಯಶೋದಾ = (ದ್ವಾಪರದಲ್ಲಿ ನನಗೆ ತಾಯಿಯಾಗಿದ್ದ) ಯಶೋದಾದೇವಿಯು, ಬಕುಲಾಭೂತ್ವಾ = ಈಗ ಬಕುಳಾ ದೇವಿಯಾಗಿ, ವೇಂಕಟಾಚಲೇ = ಈ ವೇಂಕಟಗಿರಿಯಲ್ಲಿ, ವರ್ತತೇ = ಇದ್ದಾಳೆ. ತಯಾ = ಅವಳಿಂದ, ಬಹುಕಾಲಂ = ಬಹಳ ಕಾಲದಿಂದ, ಅಹಂ = ನಾನು, ರಕ್ಷಿತಃ = ಕಾಪಾಡಲ್ಪಟ್ಟಿದ್ದೇನೆ ।। 101 ।।

**ಆಪತ್ಕಾಲೇತು ಯೋ ರಕ್ಷೇತ್ತಂ ವಿಂದ್ಯಾತ್ಪಿತರಂ ಗುರುಮ್ ।**
**ಕದಾಚಿನ್ಮೃಗಯಾಸಕ್ತಃ ಪದ್ಮತೀರ್ಥಸಮೀಪತಃ ।। 102 ।।**

**ಅಗಾಮಹಂ ತತ್ರ ಪುಷ್ಪವನೇ ಕನ್ಯಾ ಉಪಾಗಮನ್ ।**
**ತಾಸಾಂ ಮಧ್ಯೇ ವಿರಾಜಂತೀ ಕನ್ಯಾ ಕಾಚಿದುಪಾಗಮತ್ ॥ 103 ॥**

ಆಪತ್ಕಾಲೇ ತು = ವಿಪತ್ಕಾಲದಲ್ಲಿ, ಯಃ = ಯಾವನು (ಯಾರು), ರಕ್ಷೇತ್ = ಕಾಪಾಡುವರೋ, ತಂ = ಅವನನ್ನು, ಗುರುಂ = ಪೂಜ್ಯನಾದ, ಪಿತರಂ = ತಂದೆಯನ್ನಾಗಿ, ವಿಂದ್ಯಾತ್ = ತಿಳಿಯಬೇಕು. ಕದಾಚಿತ್ = ಒಂದಾನೊಂದು ದಿನ, (ಅಹಂ = ನಾನು), ಮೃಗಯಾಸಕ್ತಃ (ಸನ್) = ಬೇಟೆಯಾಡಲು ಇಚ್ಛಿಸಿದವನಾಗಿ, ಪದ್ಮತೀರ್ಥಸಮೀಪತಃ = ಪದ್ಮಸರೋವರದ ಬಳಿಯಲ್ಲಿ ॥ 102 ॥ ಅಗಾಂ = ಬಂದೆನು, ತತ್ರ ಪುಷ್ಪವನೇ = ಅಲ್ಲಿರುವ ಉದ್ಯಾನವನಕ್ಕೆ (ದಲ್ಲಿ), ಕನ್ಯಾಃ = ಕನ್ಯೆಯರು, ತಾಸಾಂ ಮಧ್ಯೇ = ಆ ಕನ್ನಿಕೆಯರ ಮಧ್ಯದಲ್ಲಿ, ವಿರಾಜಂತೀ = ರಾರಾಜಿಸುತ್ತಾ, ಕಾಚಿತ್ ಕನ್ಯಾ = ಓರ್ವ ಕನ್ಯೆಯು, ಉಪಾಗಮತ್ = ಬಂದಳು ॥ 103 ॥

**ಯಾಮಾಕಾಶ ಪ್ರಭೋಃ ಪುತ್ರೀಂ ನಾಮ್ನಾ ಪದ್ಮಾವತೀಂವಿದುಃ ।**
**ತಾಮವೇಕ್ಷ್ಯಾತಿ ಮೋಹಾನ್ಮೇ ಮನಸ್ತಾಮೇವ ಕಾಂಕ್ಷತೇ ॥ 104 ॥**

ಯಾಂ = ಯಾವಳು ಬಂದಳೋ ಅವಳನ್ನು, ಆಕಾಶಪ್ರಭೋಃ = ಆಕಾಶರಾಜನ, ಪುತ್ರೀಂ = ಪುತ್ರಿಯಾದ, ನಾಮ್ನಾ = ಹೆಸರಿನಿಂದ, ಪದ್ಮಾವತೀಂ = ಪದ್ಮಾವತಿಯನ್ನಾಗಿ, ವಿದುಃ = ತಿಳಿಯುವರು, ತಾಂ = ಅವಳನ್ನು, ಅವೇಕ್ಷ್ಯ = ನೋಡಿ, ಮೋಹಾತ್ = ಮೋಹದಿಂದ, ಮೇ ಮನಃ = ನನ್ನ ಮನಸ್ಸು, ತಾಮೇವ = ಅವಳನ್ನೇ, ಕಾಂಕ್ಷತೇ = ಬಯಸುವುದು ॥ 104 ॥

**ತಾಮೇವ ಘಟಯಾಶು ತ್ವಂ ಪುತ್ರೋಽಸಿ ಪರಮೋ ಮಮ ।**
**ವದತ್ಯೇವಂ ಹೃಷೀಕೇಶೇ ಶುಶ್ರುವೇ ದುಂದುಭಿಸ್ವನಃ ॥ 105 ॥**

ತ್ವಂ = ನೀನು, ಮಮ = ನನ್ನ, ಪರಮಃ = ಶ್ರೇಷ್ಠನಾದ, ಪುತ್ರೋಽಸಿ = ಪುತ್ರನಾಗಿದ್ದೀಯೇ (ಆದ್ದರಿಂದ) ತಾಮೇವ = ಅವಳನ್ನೇ, ಆಶು = ಬೇಗನೇ, ಘಟಯ = ವಿವಾಹವಾಗುವಂತೆ ಘಟನೆ ಮಾಡಿಸು (ಅಥವಾ ತ್ವಂ = ನೀನು, ಮೇ = ನನ್ನ, ಪರಮೋಪುತ್ರಃ = ಉತ್ತಮನಾದ, ಪುತ್ರಃ ಅಸಿ (ಚೇತ್) = ಮಗನು ಆಗಿದ್ದ ಪಕ್ಷದಲ್ಲಿ, ತಾಮೇವ = ಅವಳನ್ನೇ, ಆಶು = ಶೀಘ್ರವಾಗಿ, ಘಟಯ = ಘಟನೆ ಮಾಡಿಸು), ಏವಂ = ಹೀಗೆ, ಹೃಷೀಕೇಶೇ = ಶ್ರೀಹರಿಯು, ವದತಿ (ಸತಿ) = ಹೇಳುತ್ತಿರಲಾಗಿ, ದುಂದುಭಿಧ್ವನಿಃ = ದುಂದುಭಿಯ ನಿನಾದವು, ಶುಶ್ರುವೇ = ಕೇಳಿಸಿತು ॥ 105 ॥

**ಕಸ್ಯ ವಾದ್ಯಮಿದಂ ಬ್ರಹ್ಮನ್ ಕಶ್ಚ ಮಾಮುಪಗಚ್ಛತಿ ।**
**ವದತ್ಯೇವಂ ಪರೇಧಾಮ್ನಿ ವಾಯುಸ್ತಮಭಿಪದ್ಯತ ॥ 106 ॥**

ಶ್ರೀ ಭಗವಾನುವಾಚ = ಶ್ರೀಹರಿಯು ಮಾತನಾಡಿದನು – ಬ್ರಹ್ಮನ್ = ಬ್ರಹ್ಮದೇವ, ಇದಂ ವಾದ್ಯಂ = ಈ ವಾದ್ಯವು, ಕಸ್ಯ = ಯಾರದು? ಕಶ್ಚ = ಯಾವನು? ಮಾಂ = ನನ್ನನ್ನು ಕುರಿತು, ಉಪಗಚ್ಛತಿ = ಬರುತ್ತಿರುವವನು? ಪರೇಧಾಮ್ನಿ = ವೈಕುಂಠಪತಿಯಾದ ವಿಷ್ಣುವು, ಏವಂ = ಹೀಗೆ, ವದತಿ (ಸತಿ) = ಹೇಳುತ್ತಿರುವಾಗ, ತಂ = ಶ್ರೀನಿವಾಸನನ್ನು ಕುರಿತು, ವಾಯುಃ = ವಾಯುದೇವನು, ಅಭಿಪದ್ಯತ = ಹೊಂದಿದನು (ಬಂದು ಸೇರಿದನು) ॥ 106 ॥

**ಏಣಂ ಸಮಾರುಹ್ಯ ಸ ಭಾರತೀಶೋ ಸುಗಂಧಮಾದಾಯ ಯಯೌ ಗಿರೀಂದ್ರಮ್ ।**
**ಜ್ಯೇಷ್ಠಂ ಸುತಂ ಶ್ರೇಷ್ಠಗುಣಂ ಜನಾರ್ದನಃ ಕ್ಷ್ಮಾಮಾವಲಂಬಂ ದದೃಶೇ**
**ಮುದಾನ್ವಿತಃ ॥ 107 ॥**

ಸಃ ಭಾರತೀಶಃ = ಭಾರತೀರಮಣನಾದ ಶ್ರೀಮುಖ್ಯಪ್ರಾಣನು (ವಾಯುವು), ಏಣಂ = ಜಿಂಕೆಯನ್ನು, ಸಮಾರುಹ್ಯ = ಹತ್ತಿಕೊಂಡವನಾಗಿ, ಸುಗಂಧಮಾದಾಯ = ಸುವಾಸನೆಯನ್ನು ತೆಗೆದುಕೊಂಡು, ಗಿರೀಂದ್ರಂ = ವೇಂಕಟಗಿರಿಯನ್ನು ಕುರಿತು, ಯಯೌ = ಹೋದನು. ಜನಾರ್ದನಃ = ಶ್ರೀಹರಿಯು, ಶ್ರೇಷ್ಠಗುಣಂ = ಉತ್ತಮಗುಣವಂತನಾದ, ಕ್ಷೇಮಾವಲಂಬಂ = ಜಗತ್ತಿನ ಕ್ಷೇಮವನ್ನು ಅನುಸರಿಸಿರುವ (ಜಗತ್ತಿನ ಕ್ಷೇಮಕ್ಕೆ ಆಶ್ರಯನಾದ), ಜ್ಯೇಷ್ಠಸುತಂ = ಹಿರಿಯ ಮಗನಾದ ವಾಯುವನ್ನು, ಮುದಾನ್ವಿತಃ = ಸಂತಸದಿಂದ, ದದೃಶೇ = ನೋಡಿದನು ॥ 107 ॥

**ಸ್ಥೀಯತಾಮಿತಿ ತಂ ವಾಯುಂ ಸಾಧು ಸಾಧ್ವಿತ್ಯಭಾಷತ ।**

*ಶ್ರೀನಿವಾಸ ಉವಾಚ -*

**ಪುತ್ರಾಣಾಂ ಮಮ ಕಲ್ಯಾಣಂ[1] ಗರೀಯೋ ಭಾರತೀ ಪತೇ ॥ 108 ॥**

ತಂ = ಆ, ವಾಯುಂ = ವಾಯುದೇವನನ್ನು, ಸಾಧು ಸಾಧು = ನೀನು ವಿವಾಹ ಸಮಯಕ್ಕೆ ಬಂದುದು ಯೋಗ್ಯವಾಯಿತು, ಸ್ಥೀಯತಾಂ ಇತಿ = ಕುಳಿತುಕೋ ಎಂದು, ಅಭ್ಯಭಾಷತ = ಹೇಳಿದನು. ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳುತ್ತಲಿದ್ದಾನೆ - ಕಲ್ಯಾಣ = ಮಂಗಳಕರನಾದ, ಭಾರತೀಪತೇ = ಶ್ರೀಭಾರತೀದೇವಿಯ ರಮಣನಾದ ವಾಯುವೇ, ಮಮ = ನನ್ನ, ಪುತ್ರಾಣಾಂ = ಮಕ್ಕಳಲ್ಲಿ, ಗರೀಯಃ = ಶ್ರೇಷ್ಠನಾಗಿದ್ದೀಯೆ ॥ 108 ॥

**ಭಾರತೀ ಸರ್ವಲೋಕೇಷು ವಿಶ್ರುತಾ ಪ್ರತಿಭಾತಿ ಮೇ ।**
**ಏವಮುಕ್ತೇ ಶ್ರೀನಿವಾಸೇ ನೀಲಕಂಠೋ[2]ನ್ವಪದ್ಯತ ॥ 109 ॥**

**ಪಿತಾಮಹಂ ಚ ಪಿತರಂ ವವಂದೇ ವಸುಧಾಧಿಪ ।**
**ಪಾರ್ವತ್ಯಾ ಷಣ್ಮುಖೇನಾಪಿ ಪ್ರಮಥಾಧಿಪ ಸೇವಕೈಃ ॥ 110 ॥**

ಸರ್ವಲೋಕೇಷು = ಎಲ್ಲಾ ಲೋಕಗಳಲ್ಲಿ, ಭಾರತೀ = ಭಾರತೀದೇವಿಯು, ಮೇ = ನನಗೆ, ವಿಶ್ರುತಾ ಪ್ರತಿಭಾತಿ = ವಿಶೇಷ ಖ್ಯಾತಳಂತೆ ಭಾಸವಾಗುವುದು, ಶ್ರೀನಿವಾಸೇ = ಶ್ರೀನಿವಾಸನು, ಏವಮುಕ್ತೇ (ಸತಿ) = ಇಂತು ನುಡಿಯುತ್ತಿರಲು, ಪಾರ್ವತ್ಯಾ = ಪಾರ್ವತೀದೇವಿ, ಷಣ್ಮುಖೇನಾಪಿ = ಷಣ್ಮುಖನಿಂದಲೂ, ಪ್ರಮಥಾಧಿಪಸೇವಕೈಃ = ಪ್ರಮಥಗಣನಾಯಕರು, ಸೇವಕರೊಡನೆ, ನೀಲಕಂಠಃ = ರುದ್ರದೇವನು, ಅಭ್ಯಪದ್ಯತ = ಬಂದನು (ಪಾ :- ಅನ್ವಪದ್ಯತ = ವಾಯುದೇವನನ್ನು ಹಿಂಬಾಲಿಸಿ ಬಂದನು), ವಸುಧಾಧಿಪ = ಭೂಮೀಶ್ವರನಾದ ಜನಕರಾಜ! (ನೀಲಕಂಠಃ = ರುದ್ರದೇವನು), ಪಿತರಂ = ತಂದೆಯಾದ ಬ್ರಹ್ಮದೇವನನ್ನೂ, ಪಿತಾಮಹಂ ಚ = ತಾತನಾದ ಶ್ರೀಹರಿಯನ್ನೂ, ವವಂದೇ = ನಮಸ್ಕರಿಸಿದನು (ಅಥವಾ - ನೀಲಕಂಠಃ = ರುದ್ರದೇವನು, ಪಾರ್ವತ್ಯಾ = ಪಾರ್ವತಿ, ಷಣ್ಮುಖೇನಾಪಿ = ಷಣ್ಮುಖನಿಂದಲೂ, ಪ್ರಮಥಾಧಿಪಸೇವಕೈಃ = ಪ್ರಮಥಗಳಾಧಿಪತಿಗಳು ಮತ್ತು ಸೇವಕರೊಡನೆ ಸಹಿತನಾಗಿ, ಪಿತರಂ = ತಂದೆಯಾದ ಬ್ರಹ್ಮ, ಪಿತಾಮಹಂ ಚ = ಅಜ್ಜನಾದ ವಿಷ್ಣುವನ್ನೂ ಸಹ, ವವಂದೇ = ನಮಸ್ಕಾರ ಮಾಡಿದನು) ॥ 109-110 ॥

**ತಮಾಲಿಂಗ್ಯ ಹೃಷೀಕೇಶಃ ಪ್ರಾಹ ಶಂಕರಮಾಗತಮ್ ।**
**ವತ್ಸಾಸ್ತ್ರಾಯಾಹಿ ನಿಕಟಂ ತಿಷ್ಠಭದ್ರ ವರಾಸನೇ ॥ 111 ॥**

---

1. ಪಾ:- ಕಲ್ಯಾಣ 2. ಪಾ:- ಅಭ್ಯಪದ್ಯತ

ಹೃಷೀಕೇಶಃ = ಶ್ರೀನಿವಾಸನು, ಆಗತಂ = ಬಂದಂಥಾ, ತಂ = ಶಂಕರನನ್ನು, ಆಲಿಂಗ್ಯ = ಅಲಂಗಿಸಿಕೊಂಡು ಶಂಕರಂ = ರುದ್ರದೇವನನ್ನು ಕುರಿತು, ಪ್ರಾಹ = ಹೇಳಿದನು. ಭದ್ರ = ಮಂಗಳಕರನಾದ, ವತ್ಸ = ಮಗು ರುದ್ರ, ಅತ್ರ = ಇಲ್ಲಿ, ಮೇ = ನನ್ನ, ನಿಕಟಂ = ಹತ್ತಿರ, ಆಯಾಹಿ = ಬಾ, ವರಾಸನೇ = ಶ್ರೇಷ್ಠವಾದ ಆಸನದಲ್ಲಿ, ತಿಷ್ಠ = ಕೂಡುವವನಾಗು ॥ 111 ॥

**ಏವಂ ಸಂಭಾಷಮಾಣೇತು ನೀಲಕಂಠೇನ ಕೇಶವೇ ।**
**ತತಃ ಸಮಾಗಮತ್ಸದ್ಯಃ ಕುಬೇರೋ ನರವಾಹನಃ ॥ 112 ॥**

**ಯಕ್ಷೇಂದ್ರಪುತ್ರಭೃತ್ಯೈಶ್ಚ[3] ಭಾರ್ಯಾಬಂಧುಭಿರನ್ವಿತಃ ।**
**ತಮಾಯಾಂತಮುಪಾಲಕ್ಷ್ಯ ಭಗವಾನಾಹ ಭೂಮಿಪ ॥ 113 ॥**

ಕೇಶವೇ = ಶ್ರೀಹರಿಯು, ನೀಲಕಂಠೇನ (ಸಹ) = ನೀಲಕಂಠನೊಡನೆ, ಏವಂ = ಇಂತು ಸಂಭಾಷಮಾಣೇ ತು = ಮಾತನಾಡುತ್ತಿರಲು, ತತಃ ಸದ್ಯಃ = ಆ ಕೂಡಲೇ, ನರವಾಹನಃ = ನರನೇ ವಾಹನವಾಗುಳ್ಳ, ಕುಬೇರಃ = ಕುಬೇರನು, ಬಾರ್ಯಾಬಂಧುಭಿರನ್ವಿತಃ = ಪತ್ನೀಬಂಧುಗಳೊಡಗೂಡಿ, ಯಕ್ಷೇಂದ್ರಪುತ್ರಭೃತ್ಯೈಶ್ಚ = ಶ್ರೇಷ್ಠ ಯಕ್ಷರು, ಪುತ್ರರು, ಭೃತ್ಯರುಗಳೊಡನೆ, (ಪಾ :- ಯಕ್ಷೈಃ = ಯಕ್ಷರಿಂದಲೂ, ಸಪುತ್ರೈಶ್ಚ = ಮಕ್ಕಳಿಂದ ಸಹಿತನಾಗಿ, ಭೃತ್ಯೈಶ್ಚ = ಸೇವಕರಿಂದ ಸಹಿತನಾಗಿ,) ಸಮಾಗಮತ್ = ಬಂದನು. ಭೂಮಿಪ = ಎಲೈ ಜನಕರಾಜ, ಆಯಾಂತಂ = ಬಂದಂಥಾ, ತಂ = ಕುಬೇರನನ್ನು, ಉಪಾಲಕ್ಷ್ಯ = ಗಮನಿಸಿ, ಭಗವಾನ್ = ಪೂಜ್ಯನಾದ ಶ್ರೀಹರಿಯು, ಆಹ = ಹೇಳಿದನು ॥ 112-113 ॥

**ಧನಾಧಿಪ ಮಹಾಪ್ರಾಜ್ಞ ಧನವಾನ್ ಭವ ಸರ್ವದಾ ।**
**ಇತ್ಯಾಶಿಷಾ ನಂದಯತಿ ಹೃಷೀಕೇಶೇ ಧನೇಶ್ವರಮ್ ॥ 114 ॥**

ಮಹಾಪ್ರಾಜ್ಞ = ಬಹುಬುದ್ಧಿಶಾಲಿಯಾದ, ಧನಾಧಿಪ = ಧನಾದಿಪತಿಯಾದ ಕುಬೇರ! ಸರ್ವದಾ = ಯಾವಾಗಲೂ, (ತ್ವಂ = ನೀನು), ಧನವಾನ್ ಭವ = ಬಹುಧನವಂತನಾಗು, ಇತಿ = ಈ ಪ್ರಕಾರವಾಗಿ, ಹೃಷೀಕೇಶೇ = ಶ್ರೀನಿವಾಸನು, ಧನೇಶ್ವರಂ = ಕುಬೇರನನ್ನು, ಆಶಿಷಾ = ಆಶೀರ್ವಾದಪೂರ್ವಕ, ನಂದಯತಿ (ಸತಿ) = ಆನಂದಗೊಳಿಸುತ್ತಿರಲು ॥ 114 ॥

**ಸ್ವಾಹಾಸ್ವಧಾಭ್ಯಾಂ ಸಹಿತಃ ಆರೂಢೋ ಮೇಷವಾಹನಮ್ ।**
**ಅಗ್ನಿಶ್ಚಾಗಾತ್ಸಪುತ್ರಶ್ಚ ಸಬಂಧುರ್ವೇಂಕಟಾಚ(ಲಮ್)ಲೇ ॥ 115 ॥**

ಅಗ್ನಿಃ = ಅಗ್ನಿಯು, ಮೇಷವಾಹನಃ = ಕುರಿಯ ಮೇಲೆ, ಆರೂಢಃ (ಸನ್) = ಕುಳಿತವನಾಗಿ, ಸ್ವಾಹಾಸ್ವಧಾಭ್ಯಾಂ ಸಹಿತಃ = ಸ್ವಾಹಾದೇವಿ, ಸ್ವಧಾದೇವಿಯರಿಂದ ಸಹಿತನಾಗಿ, ಸಪುತ್ರಶ್ಚ = ಪುತ್ರರಿಂದೊಡಗೂಡಿ, ಸಬಂಧುಃ = ಬಂಧುಜನರಿಂದೊಡಗೂಡಿ, ವೇಂಕಟಾಚಲೇ = ಆ ವೇಂಕಟಾಚಲದಲ್ಲಿ, (ವೇಂಕಟಾಚಲಂ) ಪ್ರತಿ = ವೇಂಕಟಶೈಲವನ್ನು ಕುರಿತು, ಅಗಾತ್ = ಬಂದನು ॥ 115 ॥

**ಸ ಜಾತವೇಧಸಂ ದೃಷ್ಟ್ವಾ ಜಾತಾಹ್ಲಾದೋ ಜಗತ್ಪತಿಃ ।**
**ತಮಾಲಿಂಗ್ಯಾತಿವೇಗೇನ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ 116 ॥**

3. ಪಾ:- ಯಕ್ಷೈಸ್ಸಭೃತ್ಯೈಃ ಪುತ್ರೈಶ್ಚ

ಜಗತ್ಪತಿಃ = ಜಗದೊಡೆಯನಾದ, ಸಃ = ಶ್ರೀನಿವಾಸನು, ಜಾತವೇಧಸಂ = ವೈಶ್ವಾನರನನ್ನು, ದೃಷ್ಟ್ವಾ = ನೋಡಿ, ಜಾತಾಹ್ಲಾದಃ = ಉಂಟಾದ ಆನಂದದಿಂದ, ತಂ = ಅಗ್ನಿಯನ್ನು, ವೇಗೇನ = ಭರದಿಂದ, ಆಲಿಂಗ್ಯ = ಆಲಿಂಗನ ಮಾಡಿಕೊಂಡು, ತಿಷ್ಠ ತಿಷ್ಠ = ಕೂಡು ಕೂಡು, ಇತಿ ಚ = ಹೀಗೆಂದು, ಅಬ್ರವೀತ್ = ಹೇಳಿದನು ।। 116 ।।

**ತತಃ ಪ್ರೇತಪತಿಶ್ಚಾಪಿ ಸ್ವದೂತೈಶ್ಚ ಸ್ವಭಾರ್ಯಯಾ ।**
**ಸ್ವವಾಹನಂ ಸಮಾರುಹ್ಯ ಪ್ರಾಪ್ತ ಶೇಷಗಿರಿಂ ಸ್ವಯಮ್[4] ।। 117 ।।**

ತತಃ = ಆ ತರುವಾಯ, ಪ್ರೇತಪತಿಶ್ಚಾಪಿ = ಪ್ರೇತಪತಿಯಾದ ಯಮಧರ್ಮರಾಜನೂ ಸಹ, ಸ್ವಭಾರ್ಯಯಾ = ತನ್ನ ಹೆಂಡತಿಯಿಂದ, ಸ್ವದೂತೈಶ್ಚ = ತನ್ನ ದೂತರಿಂದಲೂ ಸಹಿತನಾಗಿ, ಸ್ವತಃ = ತಾನು, ಸ್ವವಾಹನಂ = ತನ್ನ ವಾಹನವಾದ ಕೋಣದ ಮೇಲೆ, ಸಮಾರುಹ್ಯ = ಕುಳಿತುಕೊಂಡು, ಶೇಷಗಿರಿಂ (ಪ್ರತಿ) = ಶೇಷಾಚಲವನ್ನು ಕುರಿತು (ಪಾ :- ಶೇಷಗಿರೀಶ್ವರಂ = ಶೇಷಗಿರಿಗೆ ಸ್ವಾಮಿಯಾದ ಶ್ರೀನಿವಾಸನನ್ನು ಕುರಿತು), ಪ್ರಾಪ = ಬಂದು ಸೇರಿದನು ।। 117 ।।

**ಚಿತ್ರಗುಪ್ತೋ ಮಹಾಪ್ರಾಜ್ಞಃ ಸಂಪ್ರಾಪ್ತೋ ರಾಜಸತ್ತಮ ।**
**ತತೋ ಜಲಪತಿಶ್ಚಾಗಾನ್ನಕ್ರಮಾರುಹ್ಯ ಭಕ್ತಿಮಾನ್ ।। 118 ।।**

**ಭಾರ್ಯಯಾ ಬಹುರತ್ನಾಢ್ಯೋ ನಾರಾಯಣಗಿರಿಂಪ್ರತಿ ।**
**ಆರುಹ್ಯ ಗಜರಾಜಾನಮಿಂದ್ರಃ ಸಾಕ್ಷಾಚ್ಛಚೀಪತಿಃ ।। 119 ।।**

**ಭೋಗಿರಾಜಗಿರಿಂ ರಾಜನ್ ಸರ್ವಭೋಗಾಲಯೋ ಮಹಾನ್ ।**
**ಪೋಲೋಮ್ಯಾಸಹ ಪುತ್ರೇಣ ಸಂಪ್ರಾಪ್ತಸ್ತ್ರಿದಿವೇಶ್ವರಃ ।**
**ಯಥಾರ್ಹಂ ಶ್ರೀನಿವಾಸೇನ ಸತ್ಕೃತೋ ನಿಷಸಾದ ಚ ।। 120 ।।**

ರಾಜಸತ್ತಮ = ರಾಜಶ್ರೇಷ್ಠನಾದ ಜನಕಮಹಾರಾಜ! ಮಹಾಪ್ರಾಜ್ಞಃ = ಅತಿಶಯಬುದ್ಧಿವಂತನಾದ, ಚಿತ್ರಗುಪ್ತಃ = ಚಿತ್ರಗುಪ್ತನು, ಸಂಪ್ರಾಪ್ತಃ = ಬಂದನು. ತತಃ = ಆ ತರುವಾಯ, ಭಕ್ತಿಮಾನ್ = ಭಕ್ತಿಯುಕ್ತನಾದ, ಬಹುರತ್ನಾಢ್ಯಃ = ಬಹುರತ್ನಗಳೆಂಬ ಸಂಪತ್ತುಳ್ಳ, ಜಲಪತಿಃ = ವರುಣನು, ಸ್ವಭಾರ್ಯಯಾ = ತನ್ನ ಪತ್ನಿಯೊಡನೆ, ನಕ್ರಂ = ತನ್ನ ವಾಹನವಾದ ಮೊಸಳೆಯನ್ನು, ಆರುಹ್ಯ = ಏರಿಕೊಂಡು, ನಾರಾಯಣಗಿರಿಂ ಪ್ರತಿ = ವೈಕುಂಠಪರ್ವತವನ್ನು ಕುರಿತು, ಆಗಾತ್ = ಬಂದನು. ರಾಜನ್ = ಎಲೈ ಜನಕಮಹಾರಾಜ! ಸರ್ವಭೋಗಾಲಯಃ = ಸಕಲ ಭೋಗಗಳಿಗೆ ಆಶ್ರಯನಾದ, ತ್ರಿದಿವೇಶ್ವರಃ = ಮೂರುಲೋಕಗಳಿಗೆ ಪ್ರಭುವಾದ, ಮಹಾನ್ = ಶ್ರೇಷ್ಠನಾದ, ಶಚೀಪತಿಃ = ಶಚೀಪತಿಯಾದ, ಸ್ವಯಮಿಂದ್ರಃ = ಸ್ವತಃ ದೇವೇಂದ್ರನು, ಸಾಕ್ಷಾತ್ = ಪ್ರತ್ಯಕ್ಷವಾಗಿ, ಭಾರ್ಯಯಾ = ಹೆಂಡತಿಯಾದ, ಪೋಲೋಮ್ಯಾ ಸಹ = ಶಚೀದೇವಿಯಿಂದೊಡಗೂಡಿ, ಪುತ್ರೇಣ = ಮಗನೊಡನೆ, ಗಜರಾಜಾನಂ = ಐರಾವತವನ್ನು, ಆರುಹ್ಯ = ಏರಿಕೊಂಡು, ಭೋಗಿರಾಜಗಿರಿಂ (ಪ್ರತಿ) = ಶೇಷಾಚಲವನ್ನು ಕುರಿತು, ಸಂಪ್ರಾಪ್ತಃ = ಬರುವವನಾದನು. ಚ = ಮತ್ತು, ಶ್ರೀನಿವಾಸೇನ = ಶ್ರೀನಿವಾಸನಿಂದ, ಯಥಾರ್ಹಂ = ಯಥೋಚಿತವಾಗಿ, ಸತ್ಕೃತಃ = ಸತ್ಕರಿಸಲ್ಪಟ್ಟವನಾಗಿ, ನಿಷಸಾದ = ಕುಳಿತುಕೊಂಡನು ।। 118-120 ।।

---

4. ಪಾ : ಶೇಷಗಿರೀಶ್ವರಂ

**ಏತಸ್ಮಿನ್ನೇವ ಕಾಲೇತು ಸಂಪ್ರಾಪ್ತೌ ಚಂದ್ರಭಾಸ್ಕರೌ ।**
**ಮನ್ಮಥೋ ಮೂಲರೂಪೇಣ ಸರತಿಸ್ತುರಗೋಪರಿ[5] ॥ 121 ॥**

ಮಹಾರಾಜ = ಎಲೈ ಜನಕರಾಜ, ಏತಸ್ಮಿನ್ನೇವ ಕಾಲೇತು = ಅದೇ ವೇಳೆಗೆ ಸರಿಯಾಗಿ, ಚಂದ್ರಭಾಸ್ಕರೌ = ಚಂದ್ರ-ಸೂರ್ಯರು, ಸಂಪ್ರಾಪ್ತೌ = ಬಂದರು. ಸರತಿಃ = ರತೀದೇವಿಯಿಂದ ಸಹಿತನಾಗಿ, ಮೂಲರೂಪೇಣ = ಮೂಲರೂಪದಿಂದ, ಮನ್ಮಥಃ = ಮನ್ಮಥನು, ತುರಗೋಪರಿ = ಕುದುರೆಯ ಮೇಲೆ ಕುಳಿತು, (ಪಾ:- ಸರತಿಸ್ತು ಶುಕೋಪರಿ = ರತಿಯೊಡನೆ ಗಿಳಿಯ ಮೇಲೆ ಕುಳಿತು) ॥ 121 ॥

**ಮುನಯಶ್ಚ ಮಹಾರಾಜ ಸಮಾಜಗ್ಮುರ್ಮಹಾಗಿರಿಮ್ ।**
**ಕಶ್ಯಪೋತ್ರಿಭರದ್ವಾಜೋ ವಾಮದೇವಶ್ಚ ಗೌತಮಃ ॥ 122 ॥**

ಚ = ಮತ್ತು, ಮಹಾರಾಜ = ಜನಕರಾಯ, ಮುನಯಶ್ಚ = ಋಷಿಮುನಿಗಳೂ ಸಹಿತ, ಮಹಾಗಿರಿಂ (ಪ್ರತಿ) = ವೇಂಕಟಗಿರಿಯನ್ನು ಕುರಿತು, ಸಮಾಜಗ್ಮುಃ = ಬಂದರು, ಮಹಾರಾಜ = ಜನಕಭೂಪತಿಯೇ, ಕಶ್ಯಪೋರ್ತಿ ಭರದ್ವಾಜಃ = ಕಶ್ಯಪರು ಅತ್ರಿ ಋಷಿಗಳು, ಭರದ್ವಾಜರು, ಚ = ಮತ್ತು, ವಾಮದೇವಃ = ವಾಮದೇವ ಋಷಿಗಳು, ಗೌತಮಃ = ಗೌತಮ ಋಷಿಗಳು ॥ 122 ॥

**ವಿಶ್ವಾಮಿತ್ರೋ ವಸಿಷ್ಠಶ್ಚ ವಾಲ್ಮೀಕಿರ್ಜಮದಗ್ನಿಜಃ ।**
**ಪುಲಸ್ತ್ಯಶ್ಚ ದಧೀತಿಶ್ಚ ಶುನಶ್ಯೇಪಶ್ಚ ಗಾಲವಃ ॥ 123 ॥**

ವಿಶ್ವಾಮಿತ್ರಃ = ವಿಶ್ವಾಮಿತ್ರರು, ವಸಿಷ್ಠಶ್ಚ = ವಸಿಷ್ಠಮಹರ್ಷಿಗಳೂ, ವಾಲ್ಮೀಕಿಃ = ವಾಲ್ಮೀಕಿಮುನಿಗಳು, ಜಮದಗ್ನಿಃ (ಜಮದಗ್ನಿಜಃ) = ಜಮದಗ್ನಿ ಋಷಿಗಳು (ಜಾಮದಗ್ನಿಗಳು) ಚ = ಮತ್ತು, ಪುಲಸ್ತ್ಯಃ = ಪುಲಸ್ತ್ಯರು, ದಧೀತಿಃ = ದಧೀತಿ ಋಷಿಗಳು, ಚ = ಹಾಗೂ, ಶುನಸ್ಯೇಪಃ = ಶುನಶ್ಯೇಪರು ಮತ್ತು, ಗಾಲವಃ = ಗಾಲವರೂ ॥ 123 ॥

**ಗಾರ್ಗ್ಯಃ ಕೃಷ್ಣೋ ಮಹಾರಾಜ ಸಪುತ್ರಾಸ್ಸಪರಿಗ್ರಹಾಃ ।**
**ಗಂಧರ್ವಾಪ್ಸರಸಶ್ಚೈವ ಸರ್ವೇ[6] ಸಿದ್ಧಾಸ್ಸಹೋರಗಾಃ[7] ॥ 124 ॥**

ಗಾರ್ಗ್ಯಃ = ಗಾರ್ಗ್ಯರು, ಕೃಷ್ಣಃ = ಕೃಷ್ಣ ಋಷಿಗಳು (ವೇದವ್ಯಾಸರು?), ಮಹಾರಾಜ = ಜನಕರಾಯನೇ, ಸಪುತ್ರಾಃ = ಪುತ್ರರಿಂದ ಕೂಡಿಕೊಂಡು, ಸಪರಿಗ್ರಾಹಾ = ಸಕಲ ಸಾಮಗ್ರಿಗಳೊಡನೆಯೂ, ಗಂಧರ್ವಾಪ್ಸರಸಶ್ಚೈವ (ಪಾ:-ಗಂಧರ್ವಾಪ್ಸರಸಃ ಸರ್ವಾಃ) = ಸಮಸ್ತ ಗಂಧರ್ವರು, ಅಪ್ಸರಸರೂಸಹ, ಸರ್ವೇಸಿದ್ಧಾಸ್ಸಹೋರಗಾಃ = ಸಕಲಸಿದ್ಧರು ನಾಗರಿಂದೊಡಗೂಡಿದವರಾಗಿ, (ಪಾ: - ಪಿತರಸ್ಸಿದ್ಧ ಚಾರಾಣಾಃ = ಪಿತೃಗಳೂ ಸಿದ್ಧರು, ಚಾರಣರೂ ಸಹ) ॥ 124 ॥

**ಏವಂ ಮಹರ್ಷಯೋ ದೇವಾ ರಾಜಾನಶ್ಚ ಸಮಾಗತಾಃ ।**
**ವಿವಾಹಾರ್ಥಂ ಸಮಾಜಗ್ಮು ಸರ್ವೇ ಸಂಭ್ರಮಕಾತರಾಃ ॥ 125 ॥**

ಏವಂ = ಈ ಪ್ರಕಾರವಾಗಿ, ಮಹರ್ಷಯಃ = ಮಹರ್ಷಿಗಳು, ದೇವಾಃ = ದೇವತೆಗಳು, ರಾಜಾನಶ್ಚ = ರಾಜರುಗಳೂ ಸಹ, ಸಮಾಗತಾಃ = ಬಂದರು, ವಿಷ್ಣುಭಕ್ತಾಃ = ಶ್ರೀಹರಿಭಕ್ತರಾದ, ತೇಪಿ ರಾಜಾನಃ = ಆ ರಾಜರುಗಳೂ ಕೂಡ, ತತ್ರ =

---

5. ಪಾ : ಸರತಿಸ್ತು ಶುಕೋಪರಿ, 6. ಪಾ : ಗಂಧರ್ವಾಪ್ಸರಸ್ತಸ್ಸರ್ವಾಃ, 7. ಪಾ : ಪಿತರಸ್ಸಿದ್ಧಚಾರಣಾಃ,

ವೇಂಕಟಾಚಲಕ್ಕೆ ಸಮಾಗತಾಃ = ಬಂದವರಾದರು. ಸಂಭ್ರಮಕಾತರಾಃ = ಸಂಭ್ರಮಕಾತರ ತವಕಗಳಿಂದ, ವಿವಾಹಾರ್ಥಂ = ಶ್ರೀನಿವಾಸನ ವಿವಾಹಮಹೋತ್ಸವಕ್ಕಾಗಿ ಸರ್ವೇಸಮಸ್ತರೂ, ಸಮಾಜಗ್ಮುಃ = ಬರುವವರಾದರು ॥ 125 ॥

**ಸಮಾಶ್ವಾಸ್ಯಾಥ ಗೋವಿಂದೋ ಯಥಾಯೋಗ್ಯಂ ತಥಾ ನೃಪ ।**
**ಸ್ಥೀಯತಾಮಿತಿ ಚೋವಾಚ ಸರ್ವೇಷಾಂ ಪುರತೋ ಹರಿಃ ॥ 126 ॥**

ಅಥ = ಎಲ್ಲರೂ ಬಂದ ಅನಂತರ, ನೃಪ = ಜನಕಾಯನೇ, ಗೋವಿಂದ = ಶ್ರೀಹರಿಯು, ಯಥಾಯೋಗ್ಯಂ ತಥಾ = ಅವರವರ ಯೋಗ್ಯತೆ, ಸ್ಥಾನಗಳಿಗೆ ತಕ್ಕಂತೆ, ಹರಿಃ = ಶ್ರೀನಿವಾಸನು, ಸಮಾಶ್ವಾಸ್ಯ = ಆದರದಿಂದ ಸಮಾಧಾನಪಡಿಸಿ, ಸರ್ವೇಷಾಂ = ಸಮಸ್ತರ, ಪುರತಃ = ಮುಂಭಾಗದಲ್ಲಿ, ಸ್ಥೀಯತಾಃ = ಕುಳಿತುಕೊಳ್ಳಿರಿ, ಇತಿ ಚ = ಹೀಗೆಂದೂ, ಉವಾಚ = ಹೇಳಿದನು ॥ 126 ॥

**ತತೋ ಭೂದ್ವಾಸುದೇವಸ್ಯ ವಿಶ್ವಕರ್ಮಾಕ್ಷಿಗೋಚರಃ ।**
**ತಮಾಲೋಕ್ಯ ಹೃಷೀಕೇಶಃ ಇಂದ್ರಮಾಹಸ್ಮ ಮನ್ಯುಮಾನ್[8] ॥ 127 ॥**

ತತಃ = ಇಷ್ಟಾದ ಮೇಲೆ, ವಿಶ್ವಕರ್ಮಾ = ದೇವಬಡಗಿಯಾದ ವಿಶ್ವಕರ್ಮನು, ವಾಸುದೇವಸ್ಯ = ಶ್ರೀಕೃಷ್ಣನ, ಅಕ್ಷಿಗೋಚರಃ ಅಭೂತ್ = ಕಣ್ಣಿಗೆ ಕಾಣಸಿದನು. ಹೃಷೀಕೇಶಃ = ಶ್ರೀಹರಿಯು, ತಂ = ವಿಶ್ವಕರ್ಮನನ್ನು, ಆಲೋಕ್ಯ = ನೋಡಿ, ಮನ್ಯುಮಾನ್ = ಕುಪಿತನಾಗಿ, ಇಂದ್ರಮಾಹ = ಇಂದ್ರನನ್ನು ಕುರಿತು ಹೇಳಿದನು (ಪಾ : ಇದಂ ಪ್ರಾಹಾತಿ ಮನ್ಯುಮಾನ್ = ಅತಿಕೋಪಿಷ್ಠನಾಗಿ, ಇದಮಾಹ = ಹೀಗೆಂದನು) ॥ 127 ॥

*ಶ್ರೀಭಗವಾನುವಾಚ-*

**ಇಂದ್ರಾಸ್ಯ ಗರ್ವಬಾಹುಲ್ಯಂ ಪಶ್ಯ ವಿಶ್ವಕೃತೋಽಧುನಾ ।**
**ಭ್ರಾತುರ್ಬಾಹುಬಲಾದೇವ ನ ಜಾನಾತಿ ಹಿತಾಹಿತಮ್ ॥ 128 ॥**

ಶ್ರೀಭಗವಾನುವಾಚ = ಪೂಜ್ಯನಾದ ಪರಮಾತ್ಮನು ಹೇಳಿದನು, ಇಂದ್ರ = ದೇವೇಂದ್ರನೇ, ಅಧುನಾ = ಈಗ, ಅಸ್ಯ ವಿಶ್ವಕೃತೋಃ = ಈ ವಿಶ್ವಕರ್ಮನ, ಗರ್ವಬಾಹುಲ್ಯಂ = ಹೆಚ್ಚಾದ ಅಹಂಕಾರವನ್ನು, ಪಶ್ಯ = ನೋಡು, ಭ್ರಾತುಃ = ಅಣ್ಣನ, ಬಾಹುಬಲಾದೇವ = ಬಾಹುಬಲದಿಂದಲೇ, ಹಿತಾಹಿತಂ = ಒಳ್ಳೆಯದು ಕೆಟ್ಟದ್ದನ್ನು, ನ ಜಾನಾತಿ = ತಿಳಿಯುತ್ತಿಲ್ಲ (ತಿಳಿಯದವನಾಗಿದ್ದಾನೆ) ॥ 128 ॥

**ಪಶ್ಯತ್ಯಥೇತರಾನಿಂದ್ರ ತಥಾ ಮಾಮಪಿ ಪಶ್ಯತಿ ।**
**ಸಾಧು ಜಾತಂ ಸುರಶ್ರೇಷ್ಠ ತ್ಯಜೈನಮಸಮಂಜಸಮ್ ॥ 129 ॥**

ಇಂದ್ರ = ಎಲೈ ಶಚೀಪತಿಯೇ, ಇತರಾನ್ = ಸಾಮಾನ್ಯರಾದ ಬಾಕೀ ಜನರನ್ನು, ಯಥಾ = ಹೇಗೆ, ಪಶ್ಯತಿ = ನೋಡುವನೋ, ತಥಾ = ಹಾಗೆಯೇ, ಮಾಮಪಿ = ಜಗದೊಡೆಯನಾದ ನನ್ನನ್ನೂ, ಪಶ್ಯತಿ = ಕಾಣುವನು, ಸುರಶ್ರೇಷ್ಠ = ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನೇ, ಸಾಧುಜಾತಂ = ಒಳ್ಳೆಯದಾಯಿತು. ಅಸಮಂಜಸಂ = ತಾರತಮ್ಯವನ್ನು ತಿಳಿಯದ ಸರಿಯಾಗಿಲ್ಲದ, ಏನಂ = ಇವನನ್ನು , ತ್ಯಜ = ಬಿಟ್ಟು ಬಿಡು ॥ 129 ॥

---

8. ಪಾ : ಇದಂ ಪ್ರಾಹಾತಿಮನ್ಯುಮಾನ್

**ಅನ್ಯಂ ಶಾಲಾಕರ್ಮರತಂ ಶುದ್ಧಂ ಮದ್ಭಕ್ತಿಸಂಯುತಮ್ ।**
**ನಿಯೋಜಯ ಸುರಶ್ರೇಷ್ಠ ದೇವತಾಗೃಹಕರ್ಮಣಿ ॥ 130 ॥**

ಶುದ್ಧಂ = ಪರಿಶುದ್ಧನಾದ, ಮದ್ಭಕ್ತಿಸಂಯುತಂ = ನನ್ನಲ್ಲಿ ಭಕ್ತಿಯುಳ್ಳ, ಶಾಲಾಕರ್ಮರತಂ = ಮನೆಕಟ್ಟುವ ಕೆಲಸದಲ್ಲಿ ಆಸಕ್ತನಾದ, ಅನ್ಯಂ = ಬೇರೊಬ್ಬನನ್ನು, ದೇವತಾಗೃಹಕರ್ಮಣಿ = ದೇವತೆಗಳ ಮಂದಿರ ನಿರ್ಮಾಣಕ್ಕಾಗಿ, ಸುರಶ್ರೇಷ್ಠ = ಎಲೈ ದೇವೇಂದ್ರನೇ, ನಿಯೋಜಯ = ನಿಯೋಜಿಸು (ವ್ಯವಸ್ಥೆ ಮಾಡು) ॥ 130 ॥

**ಇತ್ಯಪ್ರಿಯಂ ವಚಃ ಶ್ರುತ್ವಾ ವಿಶ್ವಕರ್ಮಾ ನರೇಶ್ವರ ।**
**ಪ್ರಣಿಪತ್ಯಾಹ ಗೋವಿಂದಂ ವರ್ಧಕೀ ಭಯವಿಹ್ವಲಃ ॥ 131 ॥**

ನರೇಶ್ವರ = ಎಲೈ ನರಪತಿಯಾದ ಜನಕರಾಯ, ಇತಿ = ಹೀಗೆ ಭಗವಂತನಾಡಿದ, ಅಪ್ರಿಯಂ = ಪ್ರಿಯವಲ್ಲದ, ವಾಕ್ಯಂ = ಮಾತನ್ನು, ಶ್ರುತ್ವಾ = ಕೇಳಿ, ವಿಶ್ವಕರ್ಮಾ = ವಿಶ್ವಕರ್ಮನು, ಭಯವಿಹ್ವಲಃ = ಭಯದಿಂದ ತಲ್ಲಣಿಸಿ, ವರ್ಧಕೀ = ಆ ದೇವಬಡಗಿಯು, ಗೋವಿಂದಂ = ಶ್ರೀನಿವಾಸನನ್ನು ಕುರಿತು, ಪ್ರಣಿಪತ್ಯ = ನಮಸ್ಕಾರ ಮಾಡಿದವನಾಗಿ, ಆಹ = ಹೇಳಿದನು ॥ 131 ॥

*ವರ್ಧಕ್ಯುವಾಚ-*

**ಭಗವಂಸ್ತ್ವದಭೀಷ್ಟಂ ಯದಜ್ಞಾನಾನ್ನ ಮಯಾ ಕೃತಮ್ ।**
**ಕ್ಷಮಸ್ವ ಮಮ ದೌರಾತ್ಮ್ಯಂ ಭಗವಾನ್ ಕರುಣಾನಿಧೇ ॥ 132 ॥**

ವರ್ಧಕ್ಯುವಾಚ = ವಿಶ್ವಕರ್ಮನು ಇಂತೆಂದನು - ಭಗವನ್ = ಪೂಜ್ಯನಾದ ಶ್ರೀಹರಿಯೇ, ತ್ವದಭೀಷ್ಟಂ = ನಿನಗೆ ಅಭೀಪ್ಸಿತವಾದ, ಯತ್ = ಯಾವುದು, ಅಜ್ಞಾನಾತ್ = ಅಜ್ಞಾನದಿಂದ, ಮಯಾ = ನನ್ನಿಂದ, ಅಕೃತಂ = ಮಾಡಲ್ಪಡಲಿಲ್ಲವೋ ಅಂತಹ, ಮಮ = ನನ್ನ, ದೌರಾತ್ಮ್ಯಂ = ದುಷ್ಟತನವನ್ನು, ಕರುಣಾನಿಧೇ = ಕಾರುಣ್ಯನಿಧಿಯಾದ, ಭಗವನ್ = ನಿರವಧಿಕಷಡ್ಗುಣಪೂರ್ಣನಾದ ಶ್ರೀಹರಿಯೇ, ಕ್ಷಮಸ್ವ = ಕ್ಷಮಿಸುವವನಾಗು ॥ 132 ॥

**ದೇವಾದಿದೇವ ದೇವೇಶ ಅಲ್ಪಸ್ಯ ಮಮ ಕಾರಣಾತ್ ।**
**ಇಯಾನ್ ಕೋಪಃ ಕಿಮರ್ಥಂ ತೇ ಸಂಜಾತೋ ಭಗವನ್ ಹರೇ ॥ 133 ॥**

ದೇವಾಧಿದೇವ = ಎಲ್ಲ ದೇವತೆಗಳಿಗೂ ಆದಿದೇವನಾದ, ದೇವೇಶ = ಸಕಲದೇವತೆಗಳಿಗೂ ಪ್ರಭುವಾದ, ಭಗವನ್ = ಪೂಜ್ಯನಾದ, ಹರೇ = ಶ್ರೀಹರಿಯೇ, ಅಲ್ಪಸ್ಯ = ಅಲ್ಪನಾದ, ಮಮ = ನನ್ನ, ಕಾರಣಾತ್ = ಕಾರಣದಿಂದಾಗಿ, ಇಯಾನ್ = ಇಷ್ಟೊಂದು, ಕೋಪಃ = ಕೋಪವು, ತೇ = ನಿನಗೆ, ಕಿಮರ್ಥಂ = ಏತಕ್ಕಾಗಿ ಸ್ವಾಮಿ? ॥ 133 ॥

**ಏವಂ ಸಂಪ್ರಾರ್ಥಿತಃ ಶಕ್ರಂ ಶ್ರೀನಿವಾಸ ಉವಾಚ ಹ ।**
**ಸಭಾಂ ಕಾರಯ ದೇವೇಂದ್ರ, ದೇವಾರ್ಥಂ ಮುನಿಕಾರಣಾತ್ ॥ 134 ॥**

ಏವಂ = ಹೀಗೆ, ಸಂಪ್ರಾರ್ಥಿತಃ = ವಿಶ್ವಕರ್ಮನಿಂದ ಪ್ರಾರ್ಥಿತನಾದ, ಶ್ರೀನಿವಾಸಃ = ಶ್ರೀನಿವಾಸನು, ಶಕ್ರಂ (ಪ್ರತಿ) = ದೇವೇಂದ್ರನನ್ನು ಕುರಿತು, ಉವಾಚ = ಹೇಳಿದನು, ದೇವೇಂದ್ರ = ಎಲೈ ಇಂದ್ರನೇ, ದೇವಾರ್ಥಂ = ದೇವತೆಗಳಿಗಾಗಿ, ಮುನಿಕಾರಣಾತ್ = ಸಕಲಋಷಿಗಳ ನಿಮಿತ್ತವಾಗಿ, ॥ 134 ॥

**ಪಂಚಾಶದ್ಯೋಜನಗಣವಿಶಾಲಾಂ ಸುಮನೋಹರಾಮ್ ।**
**ಸುವಿಚಿತ್ರಾಂ ಚ ಮಹತೀಂ ತ್ರಿಂಶದ್ಯೋಜನಮಾಯತಾಮ್ ॥ 135 ॥**

ಪಂಚಾಶದ್ಯೋಜನಗಣ ವಿಶಾಲಾಂ = ಐವತ್ತು ಯೋಜನದಷ್ಟು ವಿಸ್ತಾರವಾದ, ತ್ರಿಂಶದ್ಯೋಜನಮಾಯತಾಂ = ಮೂವತ್ತು ಯೋಜನದಷ್ಟು ಅಗಲವಾದ, ಸುಮನೋಹರಾಂ = ಶ್ರೇಷ್ಠವೂ ಮನೋಹರವೂ, ಮಹತೀಂ = ಅತಿದೊಡ್ಡದಾದ, ಸುವೀಚಿತ್ರಾಂ ಚ = ಅತ್ಯಂತ ಆಶ್ಚರ್ಯಕರವೂ ಆದ, ಸಭಾಂ = ಸಭಾಭವನವನ್ನು, ಕಾರಯ = ಮಾಡಿಸುವವನಾಗು ॥ 135 ॥

**ಇತ್ಯೇವಂ ಶಾಸಿತಃ ಶಕ್ರಸ್ತೇನ ವರ್ಧಕಿನಾ ತದಾ ।**
**ಕಾರಯಾಮಾಸ ವಿಪುಲಾಂ ವಿಚಿತ್ರಾಂ ಮಹತೀಂ ಸಭಾಮ್ ॥ 136 ॥**

ಇತ್ಯೇವಂ = ಈ ರೀತಿಯಾಗಿ, ಶಾಸಿತಃ = ಶ್ರೀನಿವಾಸನಿಂದ ಅಜ್ಞಪ್ತನಾದ, ಶಕ್ರಃ = ಇಂದ್ರನು, ತೇನ ವರ್ಧಕಿನಾ = ಆ ವಿಶ್ವಕರ್ಮನಿಂದ, ತದಾ = ಆವಾಗ, ವಿಪುಲಾಂ = ವಿಸ್ತಾರವಾದ (ಪುಷ್ಕಲವಾದ) ಮಹತೀಂ = ದೊಡ್ಡದಾದ, ವಿಚಿತ್ರಾಂ = ಆಶ್ಚರ್ಯವನ್ನುಂಟುಮಾಡುವ, ಸಭಾಂ = ಸಭಾಮಂದಿರವನ್ನು, ಕಾರಯಾಮಾಸ = ತಯಾರುಮಾಡಿಸಿದನು (ನಿರ್ಮಾಣ ಮಾಡಿಸಿದನು) ॥ 136 ॥

**ಚಕ್ರೇ ಶಕ್ರಾಜ್ಞಯಾ ತತ್ರ ವಿಶ್ವಕರ್ಮಾ ಮಯಾಗ್ರಜಃ ।**
**ಅನಂತರಂ ವಾಕ್ಯಮೂಚೇ ಶತಕ್ರತುಮನಾಮಯಮ್ ॥ 137 ॥**

ಮಮಾಗ್ರಜಃ (ಮಯಾಗ್ರಜಃ) = ಮಯನ ಅಗ್ರಜನಾದ ವಿಶ್ವಕರ್ಮನು, ಶಕ್ರಾಜ್ಞಯಾ = ಇಂದ್ರನ ಅಪ್ಪಣೆಯಂತೆ, ತತ್ರ = ಅಲ್ಲಿ (ಸಭಾಂ), ಚಕ್ರೇ = ಸಭೆಯನ್ನು ನಿರ್ಮಿಸಿದನು. ನಂತರಂ = ಆದಾದ ಮೇಲೆ, ಅನಾಮಯಂ = ರೋಗಾದ್ಯುಪದ್ರವವಿಲ್ಲದ, ಶತಕ್ರತುಂ = ನೂರು ಯಜ್ಞಗಳನ್ನು ಮಾಡಿದ ಇಂದ್ರನನ್ನು ಕುರಿತು, ವಾಕ್ಯಮೂಚೇ = ಮಾತನಾಡಿದನು ॥ 137 ॥

*ಶ್ರೀಭಗವಾನುವಾಚ-*

**ಆಕಾಶರಾಜನಗರಂ ಶೀಘ್ರಂ ಗಚ್ಛ ಶಚೀಪತೇ ।**
**ರಾಜಾನಂ ಸಾಂತ್ವವಚನೈಃ ಕಾರ್ಯೇ ಕರ್ಮಣಿ ಬೋಧಯ ॥ 138 ॥**

ಶ್ರೀ ಭಗವಾನುವಾಚ = ಶ್ರೀ ಹರಿಯು ಹೇಳುತ್ತಿದ್ದಾನೆ, ಶಚೀಪತೇ = ಇಂದ್ರನೇ, ಶೀಘ್ರಂ = ಬೇಗನೆ, ಆಕಾಶನಗರಂ = ನಾರಾಯಣಪುರವನ್ನು ಕುರಿತು, ಗಚ್ಛ = ಹೋಗುವವನಾಗು, ರಾಜಾನಂ = ಆಕಾಶರಾಜನನ್ನು, ಸಾಂತ್ವವಚನೈಃ = ಸಮಾಧಾನಕರ ವಾಕ್ಯಗಳಿಂದ, ಕಾರ್ಯೇ = ಮಾಡಬೇಕಾಗಿರುವ, ಕರ್ಮಣಿ = ಕೆಲಸದಲ್ಲಿ (ಕಾರ್ಯವನ್ನು) ಬೋಧಯ = ತಿಳಿಸಿ ಹೇಳು ॥ 138 ॥

**ತತ್ರಾಪ್ಯನೇನ ಕರ್ತವ್ಯಂ ಸಭಾಗೇಹಾದಿ ಕಾರಯ ।**
**ವಾಸುದೇವಸ್ಯ ವಾಕ್ಯಾನಿ ಶ್ರುತ್ವಾ ತಸ್ಯ ಶಚೀಪತಿಃ ॥ 139 ॥**

**ಜಗಾಮ ರಾಜನಗರಂ ಸಹಿತೋ ವಿಶ್ವಕರ್ಮಣಾ ।**
**ವಿಸ್ತಾರ್ಯ ನಗರಂ ರಾಜ್ಞಃ ಪರಿತೋ ಬಹುಯೋಜನಮ್ ॥ 140 ॥**

**ಅನ್ಯಂ ಶಾಲಾಕರ್ಮರತಂ ಶುದ್ಧಂ ಮದ್ಭಕ್ತಿಸಂಯುತಮ್ ।**
**ನಿಯೋಜಯ ಸುರಶ್ರೇಷ್ಠ ದೇವತಾಗೃಹಕರ್ಮಣಿ ॥ 130 ॥**

ಶುದ್ಧಂ = ಪರಿಶುದ್ಧನಾದ, ಮದ್ಭಕ್ತಿಸಂಯುತಂ = ನನ್ನಲ್ಲಿ ಭಕ್ತಿಯುಳ್ಳ, ಶಾಲಾಕರ್ಮರತಂ = ಮನೆಕಟ್ಟುವ ಕೆಲಸದಲ್ಲಿ ಆಸಕ್ತನಾದ, ಅನ್ಯಂ = ಬೇರೊಬ್ಬನನ್ನು, ದೇವತಾಗೃಹಕರ್ಮಣಿ = ದೇವತೆಗಳ ಮಂದಿರ ನಿರ್ಮಾಣಕ್ಕಾಗಿ, ಸುರಶ್ರೇಷ್ಠ = ಎಲೈ ದೇವೇಂದ್ರನೇ, ನಿಯೋಜಯ = ನಿಯೋಜಿಸು (ವ್ಯವಸ್ಥೆ ಮಾಡು) ॥ 130 ॥

**ಇತ್ಯಪ್ರಿಯಂ ವಚಃ ಶ್ರುತ್ವಾ ವಿಶ್ವಕರ್ಮಾ ನರೇಶ್ವರ ।**
**ಪ್ರಣಿಪತ್ಯಾಹ ಗೋವಿಂದಂ ವರ್ಧಕೀ ಭಯವಿಹ್ವಲಃ ॥ 131 ॥**

ನರೇಶ್ವರ = ಎಲೈ ನರಪತಿಯಾದ ಜನಕರಾಯ, ಇತಿ = ಹೀಗೆ ಭಗವಂತನಾಡಿದ, ಅಪ್ರಿಯಂ = ಪ್ರಿಯವಲ್ಲದ, ವಾಕ್ಯಂ = ಮಾತನ್ನು, ಶ್ರುತ್ವಾ = ಕೇಳಿ, ವಿಶ್ವಕರ್ಮಾ = ವಿಶ್ವಕರ್ಮನು, ಭಯವಿಹ್ವಲಃ = ಭಯದಿಂದ ತಲ್ಲಣಿಸಿ, ವರ್ಧಕೀ = ಆ ದೇವಬಡಗಿಯು, ಗೋವಿಂದಂ = ಶ್ರೀನಿವಾಸನನ್ನು ಕುರಿತು, ಪ್ರಣಿಪತ್ಯ = ನಮಸ್ಕಾರ ಮಾಡಿದವನಾಗಿ, ಅಹ = ಹೇಳಿದನು ॥ 131 ॥

*ವರ್ಧಕ್ಯುವಾಚ-*

**ಭಗವಂಸ್ತ್ವದಭೀಷ್ಟಂ ಯದಜ್ಞಾನಾನ್ನ ಮಯಾ ಕೃತಮ್ ।**
**ಕ್ಷಮಸ್ವ ಮಮ ದೌರಾತ್ಮ್ಯಂ ಭಗವಾನ್ ಕರುಣಾನಿಧೇ ॥ 132 ॥**

ವರ್ಧಕ್ಯುವಾಚ = ವಿಶ್ವಕರ್ಮನು ಇಂತೆಂದನು - ಭಗವನ್ = ಪೂಜ್ಯನಾದ ಶ್ರೀಹರಿಯೇ, ತ್ವದಭೀಷ್ಟಂ = ನಿನಗೆ ಅಭೀಪ್ಸಿತವಾದ, ಯತ್ = ಯಾವುದು, ಅಜ್ಞಾನಾತ್ = ಅಜ್ಞಾನದಿಂದ, ಮಯಾ = ನನ್ನಿಂದ, ಅಕೃತಂ = ಮಾಡಲ್ಪಡಲಿಲ್ಲವೋ ಅಂತಹ, ಮಮ = ನನ್ನ, ದೌರಾತ್ಮ್ಯಂ = ದುಷ್ಟತನವನ್ನು, ಕರುಣಾನಿಧೇ = ಕಾರುಣ್ಯನಿಧಿಯಾದ, ಭಗವನ್ = ನಿರವಧಿಕಷಡ್ಗುಣಪೂರ್ಣನಾದ ಶ್ರೀಹರಿಯೇ, ಕ್ಷಮಸ್ವ = ಕ್ಷಮಿಸುವವನಾಗು ॥ 132 ॥

**ದೇವಾದಿದೇವ ದೇವೇಶ ಅಲ್ಪಸ್ಯ ಮಮ ಕಾರಣಾತ್ ।**
**ಇಯಾನ್ ಕೋಪಃ ಕಿಮರ್ಥಂ ತೇ ಸಂಜಾತೋ ಭಗವನ್ ಹರೇ ॥ 133 ॥**

ದೇವಾಧಿದೇವ = ಎಲ್ಲ ದೇವತೆಗಳಿಗೂ ಆದಿದೇವನಾದ, ದೇವೇಶ = ಸಕಲದೇವತೆಗಳಿಗೂ ಪ್ರಭುವಾದ, ಭಗವನ್ = ಪೂಜ್ಯನಾದ, ಹರೇ = ಶ್ರೀಹರಿಯೇ, ಅಲ್ಪಸ್ಯ = ಅಲ್ಪನಾದ, ಮಮ = ನನ್ನ, ಕಾರಣಾತ್ = ಕಾರಣದಿಂದಾಗಿ, ಇಯಾನ್ = ಇಷ್ಟೊಂದು, ಕೋಪಃ = ಕೋಪವು, ತೇ = ನಿನಗೆ, ಕಿಮರ್ಥಂ = ಏತಕ್ಕಾಗಿ ಸ್ವಾಮಿ? ॥ 133 ॥

**ಏವಂ ಸಂಪ್ರಾರ್ಥಿತಃ ಶಕ್ರಂ ಶ್ರೀನಿವಾಸ ಉವಾಚ ಹ ।**
**ಸಭಾಂ ಕಾರಯ ದೇವೇಂದ್ರ, ದೇವಾರ್ಥಂ ಮುನಿಕಾರಣಾತ್ ॥ 134 ॥**

ಏವಂ = ಹೀಗೆ, ಸಂಪ್ರಾರ್ಥಿತಃ = ವಿಶ್ವಕರ್ಮನಿಂದ ಪ್ರಾರ್ಥಿತನಾದ, ಶ್ರೀನಿವಾಸಃ = ಶ್ರೀನಿವಾಸನು, ಶಕ್ರಂ (ಪ್ರತಿ) = ದೇವೇಂದ್ರನನ್ನು ಕುರಿತು, ಉವಾಚ = ಹೇಳಿದನು, ದೇವೇಂದ್ರ = ಎಲೈ ಇಂದ್ರನೇ, ದೇವಾರ್ಥಂ = ದೇವತೆಗಳಿಗಾಗಿ, ಮುನಿಕಾರಣಾತ್ = ಸಕಲಋಷಿಗಳ ನಿಮಿತ್ತವಾಗಿ, ॥ 134 ॥

**ಪಂಚಾಶದ್ಯೋಜನಗಣವಿಶಾಲಾಂ ಸುಮನೋಹರಾಮ್ ।**
**ಸುವಿಚಿತ್ರಾಂ ಚ ಮಹತೀಂ ತ್ರಿಂಶದ್ಯೋಜನಮಾಯತಾಮ್ ॥ 135 ॥**

ಪಂಚಾಶದ್ಯೋಜನಗಣ ವಿಶಾಲಾಂ = ಐವತ್ತು ಯೋಜನದಷ್ಟು ವಿಸ್ತಾರವಾದ, ತ್ರಿಂಶದ್ಯೋಜನಮಾಯತಾಂ = ಮೂವತ್ತು ಯೋಜನದಷ್ಟು ಅಗಲವಾದ, ಸುಮನೋಹರಾಂ = ಶ್ರೇಷ್ಠವೂ ಮನೋಹರವೂ, ಮಹತೀಂ = ಅತಿದೊಡ್ಡದಾದ, ಸುವೀಚಿತ್ರಾಂ ಚ = ಅತ್ಯಂತ ಆಶ್ಚರ್ಯಕರವೂ ಆದ, ಸಭಾಂ = ಸಭಾಭವನವನ್ನು, ಕಾರಯ = ಮಾಡಿಸುವವನಾಗು ॥ 135 ॥

**ಇತ್ಯೇವಂ ಶಾಸಿತಃ ಶಕ್ರಸ್ತೇನ ವರ್ಧಕಿನಾ ತದಾ ।**
**ಕಾರಯಾಮಾಸ ವಿಪುಲಾಂ ವಿಚಿತ್ರಾಂ ಮಹತೀಂ ಸಭಾಮ್ ॥ 136 ॥**

ಇತ್ಯೇವಂ = ಈ ರೀತಿಯಾಗಿ, ಶಾಸಿತಃ = ಶ್ರೀನಿವಾಸನಿಂದ ಅಜ್ಞಪ್ತನಾದ, ಶಕ್ರಃ = ಇಂದ್ರನು, ತೇನ ವರ್ಧಕಿನಾ = ಆ ವಿಶ್ವಕರ್ಮನಿಂದ, ತದಾ = ಆವಾಗ, ವಿಪುಲಾಂ = ವಿಸ್ತಾರವಾದ (ಪುಷ್ಕಲವಾದ) ಮಹತೀಂ = ದೊಡ್ಡದಾದ, ವಿಚಿತ್ರಾಂ = ಆಶ್ಚರ್ಯವನ್ನುಂಟುಮಾಡುವ, ಸಭಾಂ = ಸಭಾಮಂದಿರವನ್ನು, ಕಾರಯಾಮಾಸ = ತಯಾರುಮಾಡಿಸಿದನು (ನಿರ್ಮಾಣ ಮಾಡಿಸಿದನು) ॥ 136 ॥

**ಚಕ್ರೇ ಶಕ್ರಾಜ್ಞಯಾ ತತ್ರ ವಿಶ್ವಕರ್ಮಾ ಮಯಾಗ್ರಜಃ ।**
**ಅನಂತರಂ ವಾಕ್ಯಮೂಚೇ ಶತಕ್ರತುಮನಾಮಯಮ್ ॥ 137 ॥**

ಮಮಾಗ್ರಜಃ (ಮಯಾಗ್ರಜಃ) = ಮಯನ ಅಗ್ರಜನಾದ ವಿಶ್ವಕರ್ಮನು, ಶಕ್ರಾಜ್ಞಯಾ = ಇಂದ್ರನ ಅಪ್ಪಣೆಯಂತೆ, ತತ್ರ = ಅಲ್ಲಿ (ಸಭಾಂ), ಚಕ್ರೇ = ಸಭೆಯನ್ನು ನಿರ್ಮಿಸಿದನು. ನಂತರಂ = ಅದಾದ ಮೇಲೆ, ಅನಾಮಯಂ = ರೋಗಾದ್ಯುಪದ್ರವವಿಲ್ಲದ, ಶತಕ್ರತುಂ = ನೂರು ಯಜ್ಞಗಳನ್ನು ಮಾಡಿದ ಇಂದ್ರನನ್ನು ಕುರಿತು, ವಾಕ್ಯಮೂಚೇ = ಮಾತನಾಡಿದನು ॥ 137 ॥

*ಶ್ರೀಭಗವಾನುವಾಚ-*

**ಆಕಾಶರಾಜನಗರಂ ಶೀಘ್ರಂ ಗಚ್ಛ ಶಚೀಪತೇ ।**
**ರಾಜಾನಂ ಸಾಂತ್ವವಚನೈಃ ಕಾರ್ಯೇ ಕರ್ಮಣಿ ಬೋಧಯ ॥ 138 ॥**

ಶ್ರೀ ಭಗವಾನುವಾಚ = ಶ್ರೀ ಹರಿಯು ಹೇಳುತ್ತಿದ್ದಾನೆ, ಶಚೀಪತೇ = ಇಂದ್ರನೇ, ಶೀಘ್ರಂ = ಬೇಗನೆ, ಆಕಾಶನಗರಂ = ನಾರಾಯಣಪುರವನ್ನು ಕುರಿತು, ಗಚ್ಛ = ಹೋಗುವವನಾಗು, ರಾಜಾನಂ = ಆಕಾಶರಾಜನನ್ನು, ಸಾಂತ್ವವಚನೈಃ = ಸಮಾಧಾನಕರ ವಾಕ್ಯಗಳಿಂದ, ಕಾರ್ಯೇ = ಮಾಡಬೇಕಾಗಿರುವ, ಕರ್ಮಣಿ = ಕೆಲಸದಲ್ಲಿ (ಕಾರ್ಯವನ್ನು) ಬೋಧಯ = ತಿಳಿಸಿ ಹೇಳು ॥ 138 ॥

**ತತ್ರಾಪ್ಯನೇನ ಕರ್ತವ್ಯಂ ಸಭಾಗೇಹಾದಿ ಕಾರಯ ।**
**ವಾಸುದೇವಸ್ಯ ವಾಕ್ಯಾನಿ ಶ್ರುತ್ವಾ ತಸ್ಯ ಶಚೀಪತಿಃ ॥ 139 ॥**

**ಜಗಾಮ ರಾಜನಗರಂ ಸಹಿತೋ ವಿಶ್ವಕರ್ಮಣಾ ।**
**ವಿಸ್ತಾರ್ಯ ನಗರಂ ರಾಜ್ಞಃ ಪರಿತೋ ಬಹುಯೋಜನಮ್ ॥ 140 ॥**

ತತ್ರಾಪಿ = ಅಲ್ಲಿಯೂ ಸಹ, ಕರ್ತವ್ಯಂ = ಮಾಡಬೇಕಾದ, ಸಭಾಗೇಹಾದಿ = ಸಭೆಗಳನ್ನು, ಮನೆಗಳನ್ನು, ಅನೇನ = ಇವನಿಂದ, ಕಾರಯ = ನಿರ್ಮಾಣ ಮಾಡಿಸು. ಶಚೀಪತಿಃ = ದೇವೇಂದ್ರನು, ತಸ್ಯ ವಾಸುದೇವಸ್ಯ = ಆ ಶ್ರೀವಾಸುದೇವನ, ವಾಕ್ಯಾನಿ = ಮಾತುಗಳನ್ನು, ಶ್ರುತ್ವಾ = ಕೇಳಿದವನಾಗಿ, ವಿಶ್ವಕರ್ಮಣಾ = ವಿಶ್ವಕರ್ಮನಿಂದ, ಸಹಿತಃ = ಕೂಡಿಕೊಂಡು, ರಾಜನಗರಂ = ಆಕಾಶರಾಜನ ಪಟ್ಟಣವನ್ನು ಕುರಿತು, ಜಗಾಮ = ಹೋದನು. ಮಹಾರಾಜ = ಎಲೈ ಜನಕರಾಯ, ರಾಜ್ಞಃ ನಗರಂ = ಆಕಾಶರಾಜನಪಟ್ಟಣವನ್ನು, ಪರಿತಃ = ಸುತ್ತಲೂ, ಬಹುಯೋಜನಂ = ಅನೇಕಯೋಜನಗಳವರೆಗೆ, ವಿಸ್ತಾರ್ಯ = ವಿಸ್ತರಿಸಿ ॥ 140 ॥

**ಸಂಛಿದ್ಯ ಚ ಮಹಾರಾಜ ವನಾನಿ ಗಿರಿಗಹ್ವರಾನ್ ।**
**ವಿಷಮಾಂ ಚ ಸಮಾಂ ಚಕ್ರೇ ಧರಾಂ ತಾಂ ಧರಣೀಪತೇಃ ।**
**ಗೃಹಾಣಿ ಚ ವಿಚಿತ್ರಾಣಿ ಸಭಾಶ್ಚ ಉಟಜಾಸ್ತಥಾ ॥ 141 ॥**

ವನಾನಿ = ಅರಣ್ಯಗಳನ್ನು, ಚ = ಮತ್ತು, ಗಿರಿಗಹ್ವರಾನ್ = ಬೆಟ್ಟಗುಡ್ಡಗುಹೆಗಳನ್ನೂ, ಸಂಛಿದ್ಯ = ಕಡಿದು ಹಾಕಿ, ಧರಣೀಪತೇಃ = ಭೂಮಿಶ್ವರನಾದ ಆಕಾಶರಾಜನ, ವಿಷಾಮಾಂಚ = ತಗ್ಗುಮಿಟ್ಟೆಗಳಿಂದ ಕೂಡಿದ್ದ, ತಾಂ ಧರಾಂ = ಆ ಭೂಮಿಯನ್ನು, ಸಮಾಂ = ಒಂದೇ ಸಮಾನಾಗಿರುವಂತೆ, ಚಕ್ರೇ = ಮಾಡಿದನು, ಚ = ಮತ್ತು, ವಿಚಿತ್ರಾಣಿ = ಆಶ್ಚರ್ಯಕರಗಳಾದ, ಗೃಹಾಣಿ = ಮನೆಗಳನ್ನೂ, ಸಭಾಶ್ಚ = ಸಭಾಮಂಟಪಗಳನ್ನೂ, ತಥಾ = ಅದರಂತೆ, ಉಟಜಾಃ = ಪರ್ಣಶಾಲೆಗಳನ್ನೂ ॥ 141 ॥

**ಕಲ್ಯಾಣವೇದಿಂ ಕಮನೀಯ ರತ್ನೈಃ ಸಂಪೂರ್ಣಕಕ್ಷ್ಯೈ ಸುಕೃತಾಂ ವಿಚಿತ್ರಾಮ್ ।**
**ಸ್ತಂಭೈರ್ಯುತಾಂ ಮೌಕ್ತಿಕರತ್ನನಿರ್ಮಿತೈಃ ನಾರಾಯಣಸ್ಯೈವ**
**ನೃಪೇಣ ನಿರ್ಮಿತಾಮ್ ॥ 142 ॥**

**ವಾಸುದೇವಸ್ಯ ಭವನಂ ವಾಸವೋ ವಿಶ್ವಕರ್ಮಣಾ ।**
**ಕಾರಯಾಮಾಸ ರಾಜೇಂದ್ರ ಸರತ್ನಸ್ತಂಭಗೋಪುರಮ್ ॥ 143 ॥**

**ಧನಧಾನ್ಯಸಮಾಕೀರ್ಣಂ ರತ್ನತೋರಣಮಂಡಿತಮ್ ।**
**ವಾಪೀಕೂಪಶತಂ ವಾಜಿಗಜಾನಾಂ ಭವನಂ ತಥಾ ॥ 144 ॥**

ಕಮನೀಯರತ್ನೈಃ = ಮನೋಹರರತ್ನಗಳಿಂದ ಸಹಿತವಾದ, ಸಂಪೂರ್ಣಕಕ್ಷಃ = ಕೊಠಡಿಗಳಿಂದ ಕೂಡಿದ, ಸುಕೃತಾಂ = ಪುಣ್ಯಕರಗಳಾದ, ವಿಚಿತ್ರಾಂ = ಆಶ್ಚರ್ಯಜನಕಗಳಾದ, ಮೌಕ್ತಿಕರತ್ನನಿರ್ಮಿತೈಃ = ಮುತ್ತುರತ್ನಗಳಿಂದ ತಯಾರಿಸಲ್ಪಟ್ಟ, ಸ್ತಂಭೈಃ = ಕಂಬಗಳಿಂದ, ಯುತಾಂ = ಕೂಡಿರುವಂಥಾ, ನೃಪೇಣ = ಆಕಾಶರಾಜನ ಅಪ್ಪಣೆಯಂತೆ, ನಾರಾಯಣಸ್ಯೈವ = ಶ್ರೀಹರಿಗಾಗಿ, ನಿರ್ಮಿತಾಂ = ನಿರ್ಮಿಸಲ್ಪಟ್ಟಂಥ (ಸಭಾದಿಗಳನ್ನೂ) ॥ 142 ॥ ರಾಜೇಂದ್ರ = ಎಲೈ ಜನಕರಾಜ, ಸರತ್ನಸ್ತಂಭಗೋಪುರಂ = ರತ್ನಮಯಸ್ತಂಭಗಳು, ಗೋಪುರಗಳಿಂದ ಶೋಭಿಸುವ, ಧನಧಾನ್ಯಸಮಾಕೀರ್ಣಂ = ದ್ರವ್ಯ ಧಾನ್ಯಾದಿಗಳಿಂದ ತುಂಬಿದ, ರತ್ನತೋರಣಶೋಭಿತಂ = ರತ್ನಖಚಿತತೋರಣಗಳಿಂದ ಕಂಗೊಳಿಸುವ, ವಾಸುದೇವಸ್ಯ ಭವನಂ = ಶ್ರೀವಾಸುದೇವನ ಮಂದಿರವನ್ನು, ತಥಾ = ಹಾಗೆಯೇ, ವಾಪೀಕೂಪಶತಂ = ನೂರಾರು ಬಾವಿ ಕೂಪ (ಸರಸ್ಸು)ಗಳನ್ನೂ, ವಾಜಿಗಜಾನಾಂ = ಕುದುರೆ, ಆನೆಗಳ, ಭವನಂ = ಮಂದಿರವನ್ನೂ, ವಾಸವಃ = ದೇವೇಂದ್ರನು, ವಿಶ್ವಕರ್ಮಣಾ = ವಿಶ್ವಕರ್ಮನಿಂದ, ಕಾರಯಾಮಾಸ = ನಿರ್ಮಾಣ ಮಾಡಿಸಿದನು ॥ 143-144 ॥

## ಕಥಾಸಾರ

ಶತಾನಂದ ಋಷಿಗಳು ಶ್ರೀನಿವಾಸನ ಕಲ್ಯಾಣಮಹೋತ್ಸವವು ನಿಶ್ಚಿತವಾದ ವಿಚಾರವನ್ನು ನಿರೂಪಿಸಿದಾಗ ಜನಕಮಹಾರಾಜನು ಪರಮಾನಂದ ತುಂದಿಲನಾಗಿ ''ಗುರುವರ್ಯ! ಶ್ರೀಭಗವಂತನ ಚರಿತಾಮೃತಪಾನಮಾಡಿಸಿ ನನ್ನನ್ನು ಧನ್ಯನನ್ನಾಗಿಸಿರುವಿರಿ'' ಎಂದು ಅವರನ್ನು ಪ್ರಶಂಸಿಸಿ ಮತ್ತೆ ಅವರನ್ನು ಪ್ರಶ್ನಿಸಿದನು.

ಜನಕ :- ಪೂಜ್ಯ ಶತಾನಂದರೇ! ಸಜ್ಜನರಿಗೆ ಪ್ರಿಯನಾದ ಶ್ರೀರಮಾಧವನು ತಾಯಿಯಾದ ಬಕುಳಾದೇವಿಯ ವಚನವನ್ನಾಲಿಸಿ ಏನು ಮಾಡಿದನು? ದಯಮಾಡಿ ತಿಳಿಸಿರಿ.

ಶತಾನಂದ :- ಮಹಾರಾಜ, ನೀನು ಸರ್ವದಾ ಶ್ರೀಹರಿಯ ಕಥೆಯಲ್ಲಿ ಆಸಕ್ತನಾಗಿದ್ದೀಯೆ. ಆದುದರಿಂದ ನೀನು ಶ್ರೀಹರಿಗೆ ಪ್ರಿಯರಾದ ಭಕ್ತರಲ್ಲಿ ಮೊದಲಿಗನಾಗಿರುವೆ. ಆದಕಾರಣ ನಾನು ನಿನಗೆ ಶ್ರೀಹರಿಯ ಲೀಲಾವಿಲಾಸಕಥೆಯನ್ನು ಹೇಳುವೆನು. ಗಮನವಿಟ್ಟು ಕೇಳು. ರಾಜನ್! ನಿರವಧಿಕಾನಂದಪೂರ್ಣನಾಗಿದ್ದರೂ ಶ್ರೀಹರಿಯು ಕರ್ಮಾನುಭೋಗಿಯಾದ ಸಾಮಾನ್ಯ ಮಾನವನಂತೆ ನಟಿಸುತ್ತಾ ಬಕುಳಾದೇವಿಯನ್ನು ಅವಲೋಕಿಸಿ ಇಂತು ಹೇಳಲಾರಂಭಿಸಿದನು.

ಶ್ರೀನಿವಾಸ:- ತಾಯಿ! ನನಗೀ ವಿವಾಹವು ಬೇಡವೆನಿಸಿದೆ. ನನ್ನ ಮನವು ವಿವಾಹ ಮಾಡಿಕೊಳ್ಳಲು ಒಪ್ಪುತ್ತಿಲ್ಲ. ಏಕೆ ಗೊತ್ತೇನಮ್ಮ? ಬಂಧುಬಾಂಧವರಿಲ್ಲದವರಿಗೆ ಬಂಧುಯುಕ್ತರಾದವರೊಡನೆ ಸಂಬಂಧವು ಯುಕ್ತವಲ್ಲ ; ಸಿರಿ ಸಂಪತ್ತು ಸ್ಥಾನ-ಮಾನ ಕುಲೀನತೆ ಇದೆಲ್ಲವೂ ಸರಿಸಮಾನವಾಗಿರುವವರಲ್ಲಿ ಮಾತ್ರ ವಿವಾಹ ಸ್ನೇಹಗಳು ಪ್ರಶಸ್ತವು. ಈ ವಿಷಯದಲ್ಲಿ ಉತ್ತಮ-ಅಧಮರಾದವರಲ್ಲಿ ಅದು ಉಚಿತವಲ್ಲ. ಸಮಾನಸ್ಕಂಧರಾದವರಲ್ಲಿಯೇ ವಿವಾಹ ಮತ್ತು ವಿವಾದಗಳು ಶೋಭಿಸುವುದು. ನಾನು ಒಬ್ಬಂಟಿಗ, ಬಂಧುಹೀನ, ಆಕಾಶರಾಜನಾದರೋ ಧರಣೀಪತಿಯಾದ ಮಹಾರಾಜನು. ಅವನಿಗೆ ಅತಿಶಯ ಬಂಧು-ಬಳಗ-ಮಿತ್ರರು, ಹೀಗೆ ಎಲ್ಲರೂ ಇದ್ದಾರೆ. ಬಂಧು ಬಳಗವಿಲ್ಲದ ನನಗೆ ಅವನೊಡನೆ ಸಂಬಂಧವು ಅದೆಂತು ಉಚಿತವಾದೀತು? ಈ ಸಂಬಂಧದಿಂದ ಖಂಡಿತ ಸುಖವಾಗದು. ಸಜ್ಜನರು ಹೀಗೆ ಹೇಳುವರು. ಅಂತೆಯೇ ನಾನೀಗ ಚಿಂತಾಕ್ರಾಂತನಾಗಿದ್ದೇನೆ. ಬಂಧುಹೀನನಾದ ನನಗೆ ಆಕಾಶರಾಜನು ತನ್ನ ಪ್ರೇಮದ ಕುವರಿಯಾದ ಪದ್ಮಾವತಿಯನ್ನು ಅದೆಂತು ವಿವಾಹ ಮಾಡಿಕೊಡುವನು?

ಬಕುಳಮಾಲಿಕೆಯು ಶ್ರೀವೇಂಕಟೇಶನ ಈ ಬಗೆಯ ಮಾತನ್ನು ಕೇಳಿ ಹೇಳಲಾರಂಭಿಸಿದಳು.

ಬಕುಳೆ :- ಶ್ರೀನಿವಾಸ! ಇದೇನು ನಿನ್ನ ವಾದಸರಣಿ! ಈ ಜಗತ್ತಿನಲ್ಲಿ ನಿನ್ನಂಥ ಪುರುಷರು ಒಮ್ಮೆಯೂ ಸುಳ್ಳು ಹೇಳುವುದಿಲ್ಲ! ಹೇಳಬಾರದೂ ಸಹ. ನೀನು ಈಗ ಹೇಳುತ್ತಿರುವುದೆಲ್ಲವೂ ಬರೀ ಸುಳ್ಳು! ಪಾಪರಹಿತರಾದ ಋಷಿಮುನಿಗಳು ಸತ್ಯವನ್ನೇ, ಸತ್ಯವನ್ನು ಹೇಳುವವರನ್ನೇ ಪ್ರಶಂಸಿಸುವರು. ಶುಕಮುನಿಗಳಂಥವರು, ನಿನ್ನ ಪರಮಭಕ್ತರು! ನಿನ್ನ ಈ ವಿವಾಹ ಕಾರ್ಯದಲ್ಲಿ ನಿಷ್ಠರಾಗಿದ್ದಾರೆ. ದೇವತೆಗಳ ಗುರುಗಳಾದ ಬೃಹಸ್ಪತ್ಯಾಚಾರ್ಯರಂತೂ ನಿನ್ನೀ ವಿವಾಹ ವಿಷಯದಲ್ಲಿ ಉತ್ಸುಕರೂ ನಿಯಾಮಕರೂ ಆಗಿರುವರು. ಇನ್ನು ಆಕಾಶರಾಜನು ಮಹಾಧರ್ಮಿಷ್ಠನು, ನಿನಗೆ ತನ್ನ ಕುವರಿಯನ್ನಿತ್ತು ಕಲ್ಯಾಣವನ್ನು ನೆರವೇರಿಸಲು ತಹತಹಿಸುತ್ತಿದ್ದಾನೆ. ಆ ಮಹಾರಾಜನ ಆಶೆಯನ್ನು ವ್ಯರ್ಥಗೊಳಿಸಬೇಡ. ದೇವ! ಇನ್ನು ನೀನು ಬಂಧುಬಾಂಧವರಿಲ್ಲವೆಂದೆಯಲ್ಲವೇ? ಇದೆಂತಹ ಚೋದ್ಯ! ನೀನೇ ಶುಕಮುನಿಗಳಿಗೆ ಹೇಳಿಕೊಂಡಂತೆ ನೀನು ಜಗತ್ಕುಟುಂಬಿ! ಬ್ರಹ್ಮರುದ್ರಾದಿ ದೇವಾನುದೇವತೆಗಳೇ ನಿನ್ನ ಪುತ್ರ ಪೌತ್ರಾದಿ ಪರಿವಾರ! ಜಗತ್ತಿನ ಸುಜೀವರೆಲ್ಲರೂ ನಿನ್ನ ಬಂಧುಬಾಂಧವರು. ಇಂತಹ ನೀನು ''ನಾನು ಒಬ್ಬೊಂಟಿಗ ನನಗಾರು ಬಂಧುಗಳಿಲ್ಲ'' ಎಂದೇಕೆನಟಿಸುವೇ? ಶ್ರೀನಿವಾಸ, ನಿನ್ನೀ ಕಪಟನಾಟಕವನ್ನು ಸಾಕು ಮಾಡು. ನಿನ್ನ ಪುತ್ರಪೌತ್ರರಾದ ಬ್ರಹ್ಮರುದ್ರಾದಿದೇವತೆಗಳನ್ನೂ ಬಂಧುಬಾಂಧವರಾದ ದೇವಾದಿದೇವತೆಗಳನ್ನೂ ಸ್ಮರಿಸು! ನಿನ್ನ ಸೊಸೆಯರು ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳು ಇವರೆಲ್ಲರನ್ನೂ ಸ್ಮರಿಸು! ಗೋವಿಂದ! ಕಲಿಯುಗದಲ್ಲಿ ದೇವಾನುದೇವತೆಗಳು, ನಿನ್ನ ಪರಿವಾರ ಇವರ ದರ್ಶನವು ಅತಿ ದುರ್ಲಭವು. ಆಕಾಶರಾಜ ಮತ್ತು ಈ ಭೂತಲದ ಜನರು ನಿನ್ನ ಬಂಧುಬಾಂಧವರನ್ನು ಕಣ್ಣಾರೆ ಕಂಡು ಧನ್ಯರಾಗಲಿ.

ಹೇ ಜನಕ ಮಹಾರಾಜ! ಸುಜನಪಾಲಕನಾದ ಶ್ರೀನಿವಾಸನು ಜನನಿಯ ನುಡಿಯನ್ನಾಲಿಸಿ, ಮನದಲ್ಲಿ ಗರುಡಶೇಷರನ್ನು ಸ್ಮರಿಸಿದನು. ಕೂಡಲೇ ಅವರು ಶ್ರೀಹರಿಯ ಬಳಿಗೆ ಬಂದು ಭಕ್ತಿವಿನಯಗಳಿಂದ ಶ್ರೀನಿವಾಸನ ಮುಂದೆ ನಿಂತರು. ಅವರನ್ನು ಅವಲೋಕಿಸಿ ಅರವಿಂದಾಕ್ಷನಿಂತೆಂದನು.

ಶ್ರೀನಿವಾಸ :- ಪಕ್ಷಿರಾಜ, ಗರುಡ! ನೀನು ನನ್ನ ಪ್ರಿಯ ಕುಮಾರನಾದ ಬ್ರಹ್ಮದೇವನ ಬಳಿಗೆ ಹೋಗಿ ನನ್ನ ವಿವಾಹ ವಿಚಾರವನ್ನರುಹಿ, ಲಗ್ನಕ್ಕೆ ಬರುವಂತೆ ಆಹ್ವಾನಿಸು. ಶೇಷ! ನೀನು ನನ್ನ ಮೊಮ್ಮಗನಾದ ಪಾರ್ವತೀಪತಿ ರುದ್ರದೇವನ ಬಳಿಗೆ ಹೋಗಿ ಅವನನ್ನು ಆಹ್ವಾನಿಸಿ ಬಾ.

ಹೀಗೆ ಹೇಳಿ ಶ್ರೀಹರಿಯು ಬ್ರಹ್ಮ-ರುದ್ರರಿಗೆ ತನ್ನ ಶುಭವಿವಾಹ ವಿಷಯ ಸೂಚಕ ಪತ್ರಗಳನ್ನು ಬರೆದು ಗರುಡ - ಶೇಷರಿಗಿತ್ತು ಕೊಟ್ಟು ಕಳುಹಿಸಿದನು. ಗರುಡ-ಶೇಷರು ಜಗತ್ಪ್ರಭುವಿಗಾನಮಿಸಿ ವೇಂಕಟಾಚಲದಿಂದ ಆಕಾಶಮಾರ್ಗವಾಗಿ ತೆರಳಿದರು. ಗರುಡನು ಸತ್ಯಲೋಕಕ್ಕೆ ತೆರಳಿ ಅಲ್ಲಿ ಸೂರ್ಯನ ಕಾಂತಿಯಿಂದ ಬೆಳಗುತ್ತಿರುವ ಬ್ರಹ್ಮದೇವನನ್ನು ಕಂಡು ಭಕ್ತಿಯಿಂದ ವಂದಿಸಿ ಶ್ರೀನಿವಾಸನು ಕೊಟ್ಟ ಪತ್ರವನ್ನು ಅರ್ಪಿಸಿದನು. ಗರುಡನನ್ನು ಕಂಡ ಬ್ರಹ್ಮನು ಮಾತನಾಡಿದನು.

ಬ್ರಹ್ಮ :- ಕಶ್ಯಪಕುಮಾರ (ವಿಷ್ಣುವಾಹನ) ಗರುಡ! ಬಹಳ ಕಾಲದ ಮೇಲೆ ಬಂದಿದ್ದೀಯೆ. ನನ್ನ ಜನಕನಾದ ಶ್ರೀವಾಸುದೇವ ಈಗ ಎಲ್ಲಿರುವನು?

ಗರುಡ :- ಪಿತಾಮಹ! ಶ್ರೀನಿವಾಸನು ಈಗ ವೇಂಕಟಾಚಲದ ಮೇಲ್ಭಾಗದಲ್ಲಿ ವಾಸಮಾಡುತ್ತಿದ್ದಾನೆ. ಪೂಜ್ಯ ಚತುರಾನನ! ಶ್ರೀನಿವಾಸನ ವಿವಾಹಮಂಗಳ ಮಹೋತ್ಸವದ ವಿಚಾರವಾಗಿ ನಾನು ಬಂದಿದ್ದೇನೆ. ಶ್ರೀಹರಿಯು ನಿನಗೆ ಬರೆದಿರುವ ಪತ್ರವನ್ನು ಅವಲೋಕಿಸಿ ಕಾರ್ಯತತ್ಪರನಾಗಬೇಕೆಂದು ಬೇಡುತ್ತೇನೆ.

ಆಗ ಸರ್ವಜೀವಾಂತರ್ಗತನಾದ ಶ್ರೀವಾಯುದೇವನು ಶ್ರೀನಿವಾಸನ ಪತ್ರವನ್ನು ಓದಲಾರಂಭಿಸಿದನು - ''ಚಿರಂಜೀವಿಯಾದ ನನ್ನ ನಾಭಿಕಮಲದಿಂದ ಜನಿಸಿದ ಚತುರ್ಮುಖ ಬ್ರಹ್ಮದೇವನಿಗೆ ವೇಂಕಟಾಚಲಪತಿಯಾದ ಶ್ರೀನಿವಾಸನು ಮಾಡುವ ಮಂಗಳಕರ ವೇದೋಕ್ತ ಆಶೀರ್ವಾದಗಳು. ಈ ಕಲಿಯುಗದಲ್ಲಿ ನಾರಾಯಣಪುರಾಧೀಶನಾದ ಆಕಾಶರಾಜನು ತನ್ನ ಮಗಳಾದ ಪದ್ಮಾವತಿಯನ್ನು ನನಗೆ ವಿವಾಹಮಾಡಿಕೊಡುವನು. ಈ ಪತ್ರ ಕಂಡೊಡನೆಯೇ ಬ್ರಹ್ಮದೇವ, ನೀನು ಪತ್ನೀಪುತ್ರರು, ಸಕಲ ಲೋಕಪಾಲಕರು, ಅವರ ಕುಟುಂಬ, ಪರಿವಾರ, ಗಂಧರ್ವರು, ನಾಗರು ಮತ್ತು ಸಕಲಸಾಮಗ್ರಿಗಳೊಡನೆ ಶೀಘ್ರವಾಗಿ ಹೊರಟುಬಂದು ವಿವಾಹವನ್ನು ನೋಡಿಕೊಂಡು ಸುಖವಾಗಿ ಹೋಗಬೇಕು''. ಪತ್ರಾಭಿಪ್ರಾಯವನ್ನು ಅರಿತ ಪಿತಾಮಹನು ಮಂದಹಾಸಲಸಿತ ಮುಖಾರವಿಂದನಾಗಿ, ಶ್ರೀವಾಸುದೇವನ ವಿವಾಹಮಹೋತ್ಸವವನ್ನು ಕಂಡಾನಂದಿಸುವ ಕುತೂಹಲದಿಂದ ಅತಿಶಯವಾಗಿ ಮುದಿಸಿದನು. ಅನಂತರ ದ್ವಾರಪಾಲಕರನ್ನು ಕರೆದು ''ನಾನು ಭೂಲೋಕಕ್ಕೆ ಪ್ರಯಾಣ ಬೆಳೆಸಲಿದ್ದೇನೆ. ಇದನ್ನು ಭೇರೀ ದುಂದುಭಿಗಳನ್ನು ಬಾರಿಸಿ ಎಲ್ಲ ಕಡೆ ಪ್ರಚುರಪಡಿಸಿರಿ'' ಎಂದು ಆಜ್ಞಾಪಿಸಿದನು. ಬ್ರಹ್ಮದೇವನ ಆಣತಿಯಂತೆ ದ್ವಾರಪಾಲಕರು ಬ್ರಹ್ಮದೇವನ ದಿಗ್ವಿಜಯ ವಾರ್ತೆಯನ್ನು ಭೇರೀದುಂದುಭಿಗಳ ತಾಡನದೊಡನೆ ಸರ್ವತ್ರ ಘೋಷಿಸಿದರು. ಆಗ ಓರ್ವ ನಿರ್ದೇಶಜ್ಞನು (ಸೇನಾಪತಿಯು) ಚತುರವದನನಿಗಾನಮಿಸಿ ''ದೇವ! ದಿಗ್ವಿಜಯ ಸೂಚಕ ಭೇರೀ ದುಂದುಭಿ ಧ್ವನಿಗಳನ್ನು ಸಕಲ ಜನರೂ ಕುತೂಹಲದಿಂದ ಕೇಳುತ್ತಿರುವರು. ಪಿತಾಮಹ ! ತಾವು ಯಾವ ದೇಶದತ್ತ ಪಯಣಿಸಲು ಈ ರಣವಾದ್ಯಗಳು ಮೊಳಗುತ್ತಿವೆ'' ಎಂದು ಪ್ರಶ್ನಿಸಿದನು.

ಬ್ರಹ್ಮ :- ಪ್ರೀತಿಯ ಸೇನಾಪತಿಯೇ! ಭರತವರ್ಷದಲ್ಲಿ ಜಂಬೂದ್ವೀಪಕ್ಕೆ ದಕ್ಷಿಣದಲ್ಲಿರುವ ಶೇಷಾಚಲಕ್ಕೆ ನನ್ನ ಶ್ರೇಷ್ಠವಾದ ಚತುರಂಗ ಬಲಸಹಿತವಾದ ಸೇನೆಯನ್ನು ಹೊರಡಿಸು.

ಇಂತುನುಡಿದ ಪ್ರಜಾಪತಿಯು ದೇವಸೇನಾನಿಯಾದ ಸ್ಕಂದನನ್ನು ಕರೆದು ''ಷಣ್ಮುಖ! ಸಕಲಲೋಕಪಾಲಕರು ಮತ್ತು ನಿಖಿಲ ದೇವತೆಗಳನ್ನೂ ಇಲ್ಲಿಗೆ ಕರೆದುಕೊಂಡು ಬಾ'' ಎಂದು ನಿರೂಪಿಸಿ, ಆ ತರುವಾಯ ಅಲ್ಲಿಗೆ ಆಗಮಿಸಿದ ಸರ್ವರನ್ನೂ ಕಂಡು ''ಈ ಕಲಿಯುಗದಲ್ಲಿ ನನ್ನ ತಂದೆಯಾದ ಶ್ರೀಮಹಾಲಕುಮಿಗೆ ಆಶ್ರಯನಾದ ಶ್ರೀಹರಿಯ ವಿವಾಹ ಮಹೋತ್ಸವವು ಭೂತಲದ ನಾರಾಯಣಪುರದಲ್ಲಿ ನೆರವೇರುವುದು, ಪುರುಷಶ್ರೇಷ್ಠರೂ, ರಸಿಕರೂ, ಸತ್ಯಲೋಕನಿವಾಸಿಗಳೂ ಆದ ನೀವೆಲ್ಲರೂ, ಸಕಲ ಸೇನಾನಾಯಕರೂ ಸಹ, ನನ್ನ ಜನಕನಾದ, ಶ್ರೀನಿವಾಸನ ಮಂಗಳ ವಿವಾಹಮಹೋತ್ಸವಕ್ಕೆ ಆಗಮಿಸಿ ಕೃತಾರ್ಥರಾಗಬೇಕು'' ಎಂದು ಸ್ವತಃ ತಾನೇ ಎಲ್ಲರನ್ನೂ ಆಹ್ವಾನಿಸಿದನು. ಆಗ ಸಕಲ ಸೇನಾಧಿಪತಿಗಳೂ ''ಬ್ರಹ್ಮದೇವ! ನೀನು ನಮಗೆ ವಾರ್ಷಿಕ ಸಂಬಳವನ್ನು ದಯಪಾಲಿಸು. ನಾವೆಲ್ಲರೂ ನಿನ್ನೊಡನೆ ಬರುತ್ತೇವೆ'' ಎಂದರುಹಿದರು. ಆಗ ಕಮಲಸಂಭವನಾದ ವಿಧಾತನು ಅವರೆಲ್ಲರಿಗೂ ವರ್ಷಾಶನವನ್ನು ನೀಡಿದನು ಮತ್ತು ಸಕಲರಿಗೂ ಚಿತ್ರ ವಿಚಿತ್ರ ವಾಹನಗಳು, ರಥಗಳು, ಬಗೆ ಬಗೆಯ ರತ್ನಗಳು, ವಸ್ತ್ರಾಭರಣಗಳನ್ನು ನೀಡಿದನು. ಅನಂತರ ಶ್ರೀನಿವಾಸನ ಕಲ್ಯಾಣಮಹೋತ್ಸವಕ್ಕೆ ಹೊರಡಲು ಸಿದ್ಧರಾಗುವಂತೆ ತನ್ನ ಸತಿಯರಿಗೆ ಹೇಳಿಕಳುಹಿದನು. ಆ ತರುವಾಯ ಕಾಂತಿ-ಸಂಪದ್ಭರಿತನೂ, ವೇದಪ್ರತಿಪಾದ್ಯಮಹಿಮನೂ ಆದ ಬ್ರಹ್ಮದೇವನು ಅಂತಃಪುರಕ್ಕೆ ಬಂದು ತಾನೂ ಅಲಂಕೃತನಾದನು. ಮೊದಲು ಅವನು ಪಶ್ಚಿಮಭಾಗದ ಶಿರಸ್ಸಿನಲ್ಲಿ ಮಣಿಮಯ ಕಿರೀಟವನ್ನು ಧರಿಸಿದನು. ಬೇರೊಂದು ಶಿರದಲ್ಲಿ ಕೆಂಪುವರ್ಣದ ಉಷ್ಣೀಷವನ್ನು ಧರಿಸಿದನು. ಮತ್ತೊಂದು ಉತ್ತಮಾಂಗದಲ್ಲಿ ರುಮಾಲನ್ನಿಟ್ಟುಕೊಂಡನು. ನಾಲ್ಕನೆಯ ಶಿರಸ್ಸಿನಲ್ಲಿ ಶ್ರೇಷ್ಠದರ್ಭೆಗಳಿಂದ ತಯಾರಿಸಿದ ಕಿರೀಟವನ್ನೂ ಧರಿಸಿದನು. ತರುವಾಯ ನೀಲಮಣಿ, ಮುತ್ತು, ವೈಢೂರ್ಯಗಳಿಂದ ಬೆಳಗುವ ಮಕರಕುಂಡಲಗಳನ್ನು ತನ್ನೆರಡೂ ಕಿವಿಗಳಿಗೆ ಇಟ್ಟುಕೊಂಡನು. ಕನಕಮಾಯ ಕಂಕಣ (ಕಡಗ-ತೋಡೆ)ಗಳಿಂದ ಎರಡು ಕರಗಳನ್ನು ಅಲಂಕರಿಸಿಕೊಂಡನು. ರೇಷ್ಮೆಯ ಜರಿಯ ಮಡಿಯನ್ನುಟ್ಟು, ಅದರ ಮೇಲೆ ಮುತ್ತುಮಾಣಿಕ್ಯ ಖಚಿತವಾದ ಬಂಗಾರದ ಉಡುದಾರವನ್ನು ಕಟ್ಟಿಕೊಂಡು, ನವರತ್ನಖಚಿತ ಕವಚವನ್ನು ತೊಟ್ಟು ಸರ್ವಾಲಂಕಾರ ವಿಭೂಷಿತನಾದನು.

ಆ ಬಳಿಕ ಪದ್ಮಯೋನಿಯು ತನ್ನ ಪ್ರಿಯ ಸತಿಯರಾದ ಸರಸ್ವತೀದೇವಿ, ಸಾವಿತ್ರೀದೇವಿ, ಗಾಯತ್ರೀದೇವಿಯರನ್ನೂ, ತನ್ನ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಮನಸ್ಸಿನಿಂದ ಜನಿಸಿದ, ತೇಜಸ್ಸಿನಿಂದ ವೀರ್ಯದಿಂದ ಜನಿಸಿದ, ಪುತ್ರರುಗಳನ್ನೂ ಕರೆಸಿಕೊಂಡು ಎಲ್ಲರನ್ನೂ ವಿವಿಧಾಭರಣಗಳಿಂದ ಶೃಂಗರಿಸಿದನು. ಎಲೈ ಜನಕ ಮಹಾರಾಜ, ಅನಂತರ ಆನೆ, ಕುದುರೆ, ರಥಗಳಿಗೂ ಅಲಂಕಾರ ಮಾಡಿಸಿ, ದಿಗ್ವಿಜಯ ಯಾತ್ರೆಗೆ ಅಣಿಯಾದನು. ಭಗವಂತನ ನಾಭಿಕಮಲದಿಂದುದ್ಭವಿಸಿದ ಬ್ರಹ್ಮದೇವನು ತನ್ನ ಅಗಾಧ ಸೇನೆಯನ್ನು ಮುಂದೆ ಮಾಡಿಕೊಂಡು ಸತ್ಯಲೋಕದಿಂದ ಪಯಣಿಸಿದನು. ಬ್ರಹ್ಮದೇವನು ಚಂದ್ರನಂತೆ ಬೆಳಗುವ ಹಂಸವನ್ನೇರಿ ಕುಳಿತನು. ಅವನ ಪತ್ನೀ ಮುಂತಾದ ಸ್ತ್ರೀಯರು ಆಶ್ಚರ್ಯಕರ ವಿಮಾನಗಳನ್ನು ಹತ್ತಿಕುಳಿತರು. ಘಂಟಾಚಾಮರಾದಿವಾದ್ಯಗಳು ಮೊಳಗುತ್ತಿರಲು, ನಾನಾವಿಧ ಆಯುಧಪಾಣಿಗಳಾದ ವೀರರು ಎತ್ತಿಹಿಡಿದ ಧ್ವಜಗಳು ಮತ್ತು ಉದ್ದನೆಯ ಪತಾಕೆಗಳಿಂದ ಅಲಂಕೃತರಾದ ಶೂರರು ರಥ-ತುರಗ-ಗಜಗಳ ಮೇಲೆ ವೀರಾಸನದಲ್ಲಿ ಕುಳಿತರು. ಆಗ ಆ ಪರಾಕ್ರಮಿಗಳು ಪ್ರಕಾಶಮಾನರಾಗಿ ಶೋಭಿಸಿದರು. ಅವರ ಮಧ್ಯದಲ್ಲಿ ಹಂಸವಾಹನನಾದ ಬ್ರಹ್ಮದೇವನು ಆಕಾಶದಲ್ಲಿ ನಕ್ಷತ್ರಗಳಿಂದ ಯುಕ್ತನಾದ ಚಂದ್ರನಂತೆ ಕಂಗೊಳಿಸಿದನು. ದೇವಾಧಿದೇವನಾದ ಬ್ರಹ್ಮದೇವನಿಗೆ ಆಗ ಸೇವಕರು ಚಕ್ರವರ್ತಿ ಪದ ಸೂಚಕವಾದ ಶ್ವೇತಛತ್ರವನ್ನು ಹಿಡಿದರು. ಮೂರು ಯೋಜನ ವಿಸ್ತಾರವಾಗಿದ್ದ ಆ ಶ್ವೇತಛತ್ರವು ರತ್ನಕಳಶ ಸುವರ್ಣ ದಂಡದಿಂದ ಶೋಭಾಯಮಾನವಾಗಿದ್ದಿತು. ಅದನ್ನು ಹತ್ತು ಲಕ್ಷ ಜನರು ಹಿಡಿದಿದ್ದರು. ಇಂತು ಅತ್ಯದ್ಭುತವಾದ ಆ ಶ್ವೇತಛತ್ರವು ಅಂತರಿಕ್ಷವನ್ನೆಲ್ಲಾ ಪ್ರಕಾಶಗೊಳಿಸಿತು.

ಜನಕಮಹಾರಾಜ! ಆಗ ಒಂಭತ್ತು ಸಾವಿರ ನಗಾರಿಗಳು, ಮೂರುನೂರು ದುಂದುಭಿಗಳು, ಸಾವಿರಾರು ಕಹಳೆಗಳು, ಮೊಳಗಿದವು. ಇದರಂತೆ ಮೃದಂಗ, ಢಕ್ಕಾ, ಮಡ್ಡುಕ, ನಿಸ್ಸಣ, ಡಿಂಡಿಮಾದ್ಯನೇಕ ವಾದ್ಯಗಳು, ಗೋಮುಖವಾದ್ಯ,

ಹೇ ಜನಕ ಮಹಾರಾಜ! ಸುಜನಪಾಲಕನಾದ ಶ್ರೀನಿವಾಸನು ಜನನಿಯ ನುಡಿಯನ್ನಾಲಿಸಿ, ಮನದಲ್ಲಿ ಗರುಡಶೇಷರನ್ನು ಸ್ಮರಿಸಿದನು. ಕೂಡಲೇ ಅವರು ಶ್ರೀಹರಿಯ ಬಳಿಗೆ ಬಂದು ಭಕ್ತಿವಿನಯಗಳಿಂದ ಶ್ರೀನಿವಾಸನ ಮುಂದೆ ನಿಂತರು. ಅವರನ್ನು ಅವಲೋಕಿಸಿ ಅರವಿಂದಾಕ್ಷನಿಂತೆಂದನು.

ಶ್ರೀನಿವಾಸ :- ಪಕ್ಷಿರಾಜ, ಗರುಡ! ನೀನು ನನ್ನ ಪ್ರಿಯ ಕುಮಾರನಾದ ಬ್ರಹ್ಮದೇವನ ಬಳಿಗೆ ಹೋಗಿ ನನ್ನ ವಿವಾಹ ವಿಚಾರವನ್ನರುಹಿ, ಲಗ್ನಕ್ಕೆ ಬರುವಂತೆ ಆಹ್ವಾನಿಸು. ಶೇಷ! ನೀನು ನನ್ನ ಮೊಮ್ಮಗನಾದ ಪಾರ್ವತೀಪತಿ ರುದ್ರದೇವನ ಬಳಿಗೆ ಹೋಗಿ ಅವನನ್ನು ಆಹ್ವಾನಿಸಿ ಬಾ.

ಹೀಗೆ ಹೇಳಿ ಶ್ರೀಹರಿಯು ಬ್ರಹ್ಮ-ರುದ್ರರಿಗೆ ತನ್ನ ಶುಭವಿವಾಹ ವಿಷಯ ಸೂಚಕ ಪತ್ರಗಳನ್ನು ಬರೆದು ಗರುಡ – ಶೇಷರಿಗಿತ್ತು ಕೊಟ್ಟು ಕಳುಹಿಸಿದನು. ಗರುಡ-ಶೇಷರು ಜಗತ್ಪ್ರಭುವಿಗಾನಮಿಸಿ ವೇಂಕಟಾಚಲದಿಂದ ಆಕಾಶಮಾರ್ಗವಾಗಿ ತೆರಳಿದರು. ಗರುಡನು ಸತ್ಯಲೋಕಕ್ಕೆ ತೆರಳಿ ಅಲ್ಲಿ ಸೂರ್ಯನ ಕಾಂತಿಯಿಂದ ಬೆಳಗುತ್ತಿರುವ ಬ್ರಹ್ಮದೇವನನ್ನು ಕಂಡು ಭಕ್ತಿಯಿಂದ ವಂದಿಸಿ ಶ್ರೀನಿವಾಸನು ಕೊಟ್ಟ ಪತ್ರವನ್ನು ಅರ್ಪಿಸಿದನು. ಗರುಡನನ್ನು ಕಂಡ ಬ್ರಹ್ಮನು ಮಾತನಾಡಿದನು.

ಬ್ರಹ್ಮ :- ಕಶ್ಯಪಕುಮಾರ (ವಿಷ್ಣುವಾಹನ) ಗರುಡ! ಬಹಳ ಕಾಲದ ಮೇಲೆ ಬಂದಿದ್ದೀಯೆ. ನನ್ನ ಜನಕನಾದ ಶ್ರೀವಾಸುದೇವ ಈಗ ಎಲ್ಲಿರುವನು?

ಗರುಡ :- ಪಿತಾಮಹ! ಶ್ರೀನಿವಾಸನು ಈಗ ವೇಂಕಟಾಚಲದ ಮೇಲ್ಭಾಗದಲ್ಲಿ ವಾಸಮಾಡುತ್ತಿದ್ದಾನೆ. ಪೂಜ್ಯ ಚತುರಾನನ! ಶ್ರೀನಿವಾಸನ ವಿವಾಹಮಂಗಳ ಮಹೋತ್ಸವದ ವಿಚಾರವಾಗಿ ನಾನು ಬಂದಿದ್ದೇನೆ. ಶ್ರೀಹರಿಯು ನಿನಗೆ ಬರೆದಿರುವ ಪತ್ರವನ್ನು ಅವಲೋಕಿಸಿ ಕಾರ್ಯತತ್ಪರನಾಗಬೇಕೆಂದು ಬೇಡುತ್ತೇನೆ.

ಆಗ ಸರ್ವಜೀವಾಂತರ್ಗತನಾದ ಶ್ರೀವಾಯುದೇವನು ಶ್ರೀನಿವಾಸನ ಪತ್ರವನ್ನು ಓದಲಾರಂಭಿಸಿದನು – ''ಚಿರಂಜೀವಿಯಾದ ನನ್ನ ನಾಭಿಕಮಲದಿಂದ ಜನಿಸಿದ ಚತುರ್ಮುಖ ಬ್ರಹ್ಮದೇವನಿಗೆ ವೇಂಕಟಾಚಲಪತಿಯಾದ ಶ್ರೀನಿವಾಸನು ಮಾಡುವ ಮಂಗಳಕರ ವೇದೋಕ್ತ ಆಶೀರ್ವಾದಗಳು. ಈ ಕಲಿಯುಗದಲ್ಲಿ ನಾರಾಯಣಪುರಾಧೀಶನಾದ ಆಕಾಶರಾಜನು ತನ್ನ ಮಗಳಾದ ಪದ್ಮಾವತಿಯನ್ನು ನನಗೆ ವಿವಾಹಮಾಡಿಕೊಡುವನು. ಈ ಪತ್ರ ಕಂಡೊಡನೆಯೇ ಬ್ರಹ್ಮದೇವ, ನೀನು ಪತ್ನೀಪುತ್ರರು, ಸಕಲ ಲೋಕಪಾಲಕರು, ಅವರ ಕುಟುಂಬ, ಪರಿವಾರ, ಗಂಧರ್ವರು, ನಾಗರು ಮತ್ತು ಸಕಲಸಾಮಗ್ರಿಗಳೊಡನೆ ಶೀಘ್ರವಾಗಿ ಹೊರಟುಬಂದು ವಿವಾಹವನ್ನು ನೋಡಿಕೊಂಡು ಸುಖವಾಗಿ ಹೋಗಬೇಕು''. ಪತ್ರಾಭಿಪ್ರಾಯವನ್ನು ಅರಿತ ಪಿತಾಮಹನು ಮಂದಹಾಸಲಸಿತ ಮುಖಾರವಿಂದನಾಗಿ, ಶ್ರೀವಾಸುದೇವನ ವಿವಾಹಮಹೋತ್ಸವವನ್ನು ಕಂಡಾನಂದಿಸುವ ಕುತೂಹಲದಿಂದ ಅತಿಶಯವಾಗಿ ಮುದಿಸಿದನು. ಆನಂತರ ದ್ವಾರಪಾಲಕರನ್ನು ಕರೆದು ''ನಾನು ಭೂಲೋಕಕ್ಕೆ ಪ್ರಯಾಣ ಬೆಳೆಸಲಿದ್ದೇನೆ. ಇದನ್ನು ಭೇರೀ ದುಂದುಭಿಗಳನ್ನು ಬಾರಿಸಿ ಎಲ್ಲ ಕಡೆ ಪ್ರಚುರಪಡಿಸಿರಿ'' ಎಂದು ಆಜ್ಞಾಪಿಸಿದನು. ಬ್ರಹ್ಮದೇವನ ಆಣತಿಯಂತೆ ದ್ವಾರಪಾಲಕರು ಬ್ರಹ್ಮದೇವನ ದಿಗ್ವಿಜಯ ವಾರ್ತೆಯನ್ನು ಭೇರೀದುಂದುಭಿಗಳ ತಾಡನದೊಡನೆ ಸರ್ವತ್ರ ಘೋಷಿಸಿದರು. ಆಗ ಓರ್ವ ನಿರ್ದೇಶಜ್ಞನು (ಸೇನಾಪತಿಯು) ಚತುರವದನನಿಗಾನಮಿಸಿ ''ದೇವ! ದಿಗ್ವಿಜಯ ಸೂಚಕ ಭೇರೀ ದುಂದುಭಿ ಧ್ವನಿಗಳನ್ನು ಸಕಲ ಜನರೂ ಕುತೂಹಲದಿಂದ ಕೇಳುತ್ತಿರುವರು. ಪಿತಾಮಹ ! ತಾವು ಯಾವ ದೇಶದತ್ತ ಪಯಣಿಸಲು ಈ ರಣವಾದ್ಯಗಳು ಮೊಳಗುತ್ತಿವೆ'' ಎಂದು ಪ್ರಶ್ನಿಸಿದನು.

ಬ್ರಹ್ಮ :- ಪ್ರೀತಿಯ ಸೇನಾಪತಿಯೇ! ಭರತವರ್ಷದಲ್ಲಿ ಜಂಬೂದ್ವೀಪಕ್ಕೆ ದಕ್ಷಿಣದಲ್ಲಿರುವ ಶೇಷಾಚಲಕ್ಕೆ ನನ್ನ ಶ್ರೇಷ್ಠವಾದ ಚತುರಂಗ ಬಲಸಹಿತವಾದ ಸೇನೆಯನ್ನು ಹೊರಡಿಸು.

ಇಂತುನುಡಿದ ಪ್ರಜಾಪತಿಯು ದೇವಸೇನಾನಿಯಾದ ಸ್ಕಂದನನ್ನು ಕರೆದು ''ಷಣ್ಮುಖ! ಸಕಲಲೋಕಪಾಲಕರು ಮತ್ತು ನಿಖಿಲ ದೇವತೆಗಳನ್ನೂ ಇಲ್ಲಿಗೆ ಕರೆದುಕೊಂಡು ಬಾ'' ಎಂದು ನಿರೂಪಿಸಿ, ಆ ತರುವಾಯ ಅಲ್ಲಿಗೆ ಆಗಮಿಸಿದ ಸರ್ವರನ್ನೂ ಕಂಡು ''ಈ ಕಲಿಯುಗದಲ್ಲಿ ನನ್ನ ತಂದೆಯಾದ ಶ್ರೀಮಹಾಲಕುಮಿಗೆ ಆಶ್ರಯನಾದ ಶ್ರೀಹರಿಯ ವಿವಾಹ ಮಹೋತ್ಸವವು ಭೂತಲದ ನಾರಾಯಣಪುರದಲ್ಲಿ ನೆರವೇರುವುದು, ಪುರುಷಶ್ರೇಷ್ಠರೂ, ರಸಿಕರೂ, ಸತ್ಯಲೋಕನಿವಾಸಿಗಳೂ ಆದ ನೀವೆಲ್ಲರೂ, ಸಕಲ ಸೇನಾನಾಯಕರೂ ಸಹ, ನನ್ನ ಜನಕನಾದ, ಶ್ರೀನಿವಾಸನ ಮಂಗಳ ವಿವಾಹಮಹೋತ್ಸವಕ್ಕೆ ಆಗಮಿಸಿ ಕೃತಾರ್ಥರಾಗಬೇಕು'' ಎಂದು ಸ್ವತಃ ತಾನೇ ಎಲ್ಲರನ್ನೂ ಆಹ್ವಾನಿಸಿದನು. ಆಗ ಸಕಲ ಸೇನಾಧಿಪತಿಗಳೂ ''ಬ್ರಹ್ಮದೇವ! ನೀನು ನಮಗೆ ವಾರ್ಷಿಕ ಸಂಬಳವನ್ನು ದಯಪಾಲಿಸು. ನಾವೆಲ್ಲರೂ ನಿನ್ನೊಡನೆ ಬರುತ್ತೇವೆ'' ಎಂದರುಹಿದರು. ಆಗ ಕಮಲಸಂಭವನಾದ ವಿಧಾತನು ಅವರೆಲ್ಲರಿಗೂ ವರ್ಷಾಶನವನ್ನು ನೀಡಿದನು ಮತ್ತು ಸಕಲರಿಗೂ ಚಿತ್ರ ವಿಚಿತ್ರ ವಾಹನಗಳು, ರಥಗಳು, ಬಗೆ ಬಗೆಯ ರತ್ನಗಳು, ವಸ್ತ್ರಾಭರಣಗಳನ್ನು ನೀಡಿದನು. ಅನಂತರ ಶ್ರೀನಿವಾಸನ ಕಲ್ಯಾಣಮಹೋತ್ಸವಕ್ಕೆ ಹೊರಡಲು ಸಿದ್ಧರಾಗುವಂತೆ ತನ್ನ ಸತಿಯರಿಗೆ ಹೇಳಿಕಳುಹಿದನು. ಆ ತರುವಾಯ ಕಾಂತಿ-ಸಂಪದ್ಭರಿತನೂ, ವೇದಪ್ರತಿಪಾದ್ಯಮಹಿಮನೂ ಆದ ಬ್ರಹ್ಮದೇವನು ಅಂತಃಪುರಕ್ಕೆ ಬಂದು ತಾನೂ ಅಲಂಕೃತನಾದನು. ಮೊದಲು ಅವನು ಪಶ್ಚಿಮಭಾಗದ ಶಿರಸ್ಸಿನಲ್ಲಿ ಮಣಿಮಯ ಕಿರೀಟವನ್ನು ಧರಿಸಿದನು. ಬೇರೊಂದು ಶಿರದಲ್ಲಿ ಕೆಂಪುವರ್ಣದ ಉಷ್ಣೀಷವನ್ನು ಧರಿಸಿದನು. ಮತ್ತೊಂದು ಉತ್ತಮಾಂಗದಲ್ಲಿ ರುಮಾಲನ್ನಿಟ್ಟುಕೊಂಡನು. ನಾಲ್ಕನೆಯ ಶಿರಸ್ಸಿನಲ್ಲಿ ಶ್ರೇಷ್ಠದರ್ಭೆಗಳಿಂದ ತಯಾರಿಸಿದ ಕಿರೀಟವನ್ನೂ ಧರಿಸಿದನು. ತರುವಾಯ ನೀಲಮಣಿ, ಮುತ್ತು, ವೈಢೂರ್ಯಗಳಿಂದ ಬೆಳಗುವ ಮಕರಕುಂಡಲಗಳನ್ನು ತನ್ನೆರಡೂ ಕಿವಿಗಳಿಗೆ ಇಟ್ಟುಕೊಂಡನು. ಕನಕಮಾಯ ಕಂಕಣ (ಕಡಗ-ತೋಡೆ)ಗಳಿಂದ ಎರಡು ಕರಗಳನ್ನು ಅಲಂಕರಿಸಿಕೊಂಡನು. ರೇಷ್ಮೆಯ ಜರಿಯ ಮಡಿಯನ್ನುಟ್ಟು, ಅದರ ಮೇಲೆ ಮುತ್ತುಮಾಣಿಕ್ಯ ಖಚಿತವಾದ ಬಂಗಾರದ ಉಡುದಾರವನ್ನು ಕಟ್ಟಿಕೊಂಡು, ನವರತ್ನಖಚಿತ ಕವಚವನ್ನು ತೊಟ್ಟು ಸರ್ವಾಲಂಕಾರ ವಿಭೂಷಿತನಾದನು.

ಆ ಬಳಿಕ ಪದ್ಮಯೋನಿಯು ತನ್ನ ಪ್ರಿಯ ಸತಿಯರಾದ ಸರಸ್ವತೀದೇವಿ, ಸಾವಿತ್ರೀದೇವಿ, ಗಾಯತ್ರೀದೇವಿಯರನ್ನೂ, ತನ್ನ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಮನಸ್ಸಿನಿಂದ ಜನಿಸಿದ, ತೇಜಸ್ಸಿನಿಂದ ವೀರ್ಯದಿಂದ ಜನಿಸಿದ, ಪುತ್ರರುಗಳನ್ನೂ ಕರೆಸಿಕೊಂಡು ಎಲ್ಲರನ್ನೂ ವಿವಿಧಾಭರಣಗಳಿಂದ ಶೃಂಗರಿಸಿದನು. ಎಲೈ ಜನಕ ಮಹಾರಾಜ, ಅನಂತರ ಆನೆ, ಕುದುರೆ, ರಥಗಳಿಗೂ ಅಲಂಕಾರ ಮಾಡಿಸಿ, ದಿಗ್ವಿಜಯ ಯಾತ್ರೆಗೆ ಅಣಿಯಾದನು. ಭಗವಂತನ ನಾಭಿಕಮಲದಿಂದುದ್ಭವಿಸಿದ ಬ್ರಹ್ಮದೇವನು ತನ್ನ ಅಗಾಧ ಸೇನೆಯನ್ನು ಮುಂದೆ ಮಾಡಿಕೊಂಡು ಸತ್ಯಲೋಕದಿಂದ ಪಯಣಿಸಿದನು. ಬ್ರಹ್ಮದೇವನು ಚಂದ್ರನಂತೆ ಬೆಳಗುವ ಹಂಸವನ್ನೇರಿ ಕುಳಿತನು. ಅವನ ಪತ್ನೀ ಮುಂತಾದ ಸ್ತ್ರೀಯರು ಆಶ್ಚರ್ಯಕರ ವಿಮಾನಗಳನ್ನು ಹತ್ತಿಕುಳಿತರು. ಘಂಟಾಚಾಮರಾದಿವಾದ್ಯಗಳು ಮೊಳಗುತ್ತಿರಲು, ನಾನಾವಿಧ ಆಯುಧಪಾಣಿಗಳಾದ ವೀರರು ಎತ್ತಿಹಿಡಿದ ಧ್ವಜಗಳು ಮತ್ತು ಉದ್ದನೆಯ ಪತಾಕೆಗಳಿಂದ ಅಲಂಕೃತರಾದ ಶೂರರು ರಥ-ತುರಗ-ಗಜಗಳ ಮೇಲೆ ವೀರಾಸನದಲ್ಲಿ ಕುಳಿತರು. ಆಗ ಆ ಪರಾಕ್ರಮಿಗಳು ಪ್ರಕಾಶಮಾನರಾಗಿ ಶೋಭಿಸಿದರು. ಅವರ ಮಧ್ಯದಲ್ಲಿ ಹಂಸವಾಹನನಾದ ಬ್ರಹ್ಮದೇವನು ಆಕಾಶದಲ್ಲಿ ನಕ್ಷತ್ರಗಳಿಂದ ಯುಕ್ತನಾದ ಚಂದ್ರನಂತೆ ಕಂಗೊಳಿಸಿದನು. ದೇವಾಧಿದೇವನಾದ ಬ್ರಹ್ಮದೇವನಿಗೆ ಆಗ ಸೇವಕರು ಚಕ್ರವರ್ತಿ ಪದ ಸೂಚಕವಾದ ಶ್ವೇತಛತ್ರವನ್ನು ಹಿಡಿದರು. ಮೂರು ಯೋಜನ ವಿಸ್ತಾರವಾಗಿದ್ದ ಆ ಶ್ವೇತಛತ್ರವು ರತ್ನಕಳಶ ಸುವರ್ಣ ದಂಡದಿಂದ ಶೋಭಾಯಮಾನವಾಗಿದ್ದಿತು. ಅದನ್ನು ಹತ್ತು ಲಕ್ಷ ಜನರು ಹಿಡಿದಿದ್ದರು. ಇಂತು ಅತ್ಯದ್ಭುತವಾದ ಆ ಶ್ವೇತಛತ್ರವು ಅಂತರಿಕ್ಷವನ್ನೆಲ್ಲಾ ಪ್ರಕಾಶಗೊಳಿಸಿತು.

ಜನಕಮಹಾರಾಜ! ಆಗ ಒಂಭತ್ತು ಸಾವಿರ ನಗಾರಿಗಳು, ಮೂರುನೂರು ದುಂದುಭಿಗಳು, ಸಾವಿರಾರು ಕಹಳೆಗಳು, ಮೊಳಗಿದವು. ಇದರಂತೆ ಮೃದಂಗ, ಢಕ್ಕಾ, ಮಡ್ಡುಕ, ನಿಸ್ಸಾಣ, ಡಿಂಡಿಮಾದ್ಯನೇಕ ವಾದ್ಯಗಳು, ಗೋಮುಖವಾದ್ಯ,

ಮುರಜವಾದ್ಯ , ವೀಣೆಗಳು, ಝುರ್ಝುರವಾದ್ಯ ಮುಂತಾಗಿ ಅನೇಕವಾದ್ಯಗಳು ಸುಸ್ವರವಾಗಿ ಧ್ವನಿಸಿದವು. ಬರ್ಬರವಾದ್ಯ , ಶತಶೃಂಗ, ದೀರ್ಘಶೃಂಗವಾದ್ಯಗಳು, ವೇಣು, ವೀಣಾಜಲತರಂಗ, ಸ್ವರಮಂಡಲಾದಿ ವಾದ್ಯಗಳನ್ನು ಸರ್ವಗಳನ್ನೂ ಪರವಶಗೊಳಿಸುವ ಸಪ್ತಸ್ವರ-ರಾಗಗಳಿಂದ ಪೂತ್ಕಾರ-ವಷಟ್ಕಾರಗಳಿಂದ ಸ್ವರಭೇದವಿಚಕ್ಷಣರಾದ ಹಾಹಾಹೂಹೂ ಮುಂತಾದ ಗಂಧರ್ವರು ಗಾನಮಾಡುತ್ತಿರಲು ಅಪ್ಸರರು ನರ್ತಕ ನರ್ತಕಿಯರು, ನಟನಕಲಾವಿಶಾರದರು, ಸರ್ವರನ್ನೂ ಆಕರ್ಷಿಸುತ್ತಾ ನರ್ತಿಸುತ್ತಿರಲು ತುಂಬುರನು ಶ್ರೀಹರಿಯ ಮಹಿಮಾಲೀಲಾವಿಲಾಸಗಳನ್ನು ಸ್ತುತಿಸುತ್ತಿರಲು ಸೂತ-ವಂದಿ-ಮಾಗಧರು ಬಿರುದಾವಳಿಗಳನ್ನು ಉಚ್ಚಕಂಠದಿಂದ ಘೋಷಿಸುತ್ತಿರಲು ಜಗತ್ಪ್ರಭುವಾದ ಶ್ರೀನಿವಾಸನ ಕಲ್ಯಾಣಮಹೋತ್ಸವ ದರ್ಶನಾಕಾಂಕ್ಷಿಗಳಾದ ಸಕಲ ದೇವತೆಗಳು ಶ್ರೀಬ್ರಹ್ಮದೇವನನ್ನು ಸಂಭ್ರಮದಿಂದ ಹಿಂಬಾಲಿಸಿ ಹೊರಟರು.

ಇಂತು ವೈಭವಪೂರ್ಣವಾದ ಬ್ರಹ್ಮದೇವರ ದಿಗ್ವಿಜಯದ ದಿಬ್ಬಣವು ಮುಂದುವರೆದಂತೆಲ್ಲಾ ಸತ್ಯಲೋಕ ತಪೋಲೋಕ ಜನೋಲೋಕ ಅಲ್ಲಿಂದ ಮುಂದೆ ಮಹರ್ಲೋಕ, ಸುವರ್ಲೋಕ, ಸ್ವರ್ಗಲೋಕ ಮತ್ತು ಭೂಲೋಕ ಹೀಗೆ ಸಪ್ತಲೋಕಗಳ ಜನರು ಮಹನೀಯನಾದ ಪಿತಾಮಹ ಬ್ರಹ್ಮದೇವನ ದರ್ಶನಮಾಡಿ ಆನಂದತುಂದಿಲರಾದರು. ಸರ್ವಲೋಕ ಪಿತಾಮಹನೂ ಸೃಷ್ಟಿಕಾಲದಲ್ಲಿ ಭಗವಂತನ ನಾಭಿಕಮಲದಿಂದ ಮೊದಲು ಜನಿಸಿದವನೂ, ಶ್ರೀವಾಸುದೇವನಿಗೆ ಸಮಾನವಾದ ಆಕಾರವುಳ್ಳವನೂ ಅಗ್ನಿದೇವನಿಗೆ ಸದೃಶ ಕಾಂತಿವಿರಾಜಿತನೂ ಆದ ಸಾಕ್ಷಾತ್ ಬ್ರಹ್ಮದೇವನನ್ನು ಸರ್ವರೂ ಅವಲೋಕಿಸಿದರು. ಅತಿಗಾಂಭೀರ್ಯಪೂರ್ಣನಾದುದರಿಂದ ಕೆಲವರು ಅವನನ್ನು ನಾರಾಯಣನೆಂದರು. ವದನಗಳ ವಿಪರ್ಯಾಸದಿಂದಾಗಿ ಅವನು ನಾರಾಯಣನಲ್ಲವೆಂದು ಮತ್ತೆ ಕೆಲವರು ಹೇಳಿದರು. ಕಿರೀಟಕರ್ಣಕುಂಡಲಕವಚಗಳಿಂದಲೂ, ವಿವಿಧಾಭರಣಗಳಿಂದ ಭೂಷಿತನೂ ಆಗಿ ಹಂಸವಾಹನನಾಗಿರುವುದರಿಂದ ಸಕಲರೂ ಅವನು ಚತುರ್ಮುಖ ಬ್ರಹ್ಮದೇವನೆಂದು ತಿಳಿದರು. ಆಗ ಕೆಲ ಭೂಸುರರು ಬ್ರಹ್ಮದೇವನ ಪರಿವಾರದವರನ್ನು ''ಸ್ವಾಮಿ, ಪೂಜ್ಯ ಬ್ರಹ್ಮದೇವನು ಎತ್ತ ಕಡೆಗೆ ಪ್ರಯಾಣ ಬೆಳೆಸುತ್ತಿರುವನು'' ಎಂದು ಪ್ರಶ್ನಿಸಲು ಆ ಬ್ರಹ್ಮಾನುಚರರು ''ಎಲೈ, ಭೂಸುರರೇ ಶ್ರೀಲಕ್ಷ್ಮೀದೇವಿಗೆ ಆವಾಸಭೂತನಾದ ಶ್ರೀಹರಿಯ ಕಲ್ಯಾಣಮಹೋತ್ಸವಕ್ಕೆ ಅವನಿಂದಲೇ ಆಹ್ವಾನಿತರಾದ ನಾವು ಸತ್ಯಲೋಕದಿಂದ ಭೂತಲಕ್ಕೆ ಹೊರಟಿದ್ದೇವೆ'' ಎಂದು ನಿರೂಪಿಸಿದರು. ಸತ್ಯಲೋಕನಿವಾಸಿಗಳ ವಚನವನ್ನಾಲಿಸಿ ಸಕಲ ಋಷಿಮುನಿಗಳೂ ಅಗ್ನಿಹೋತ್ರಸಹಿತರಾಗಿ ಪತ್ನೀಪುತ್ರರು, ಶಿಷ್ಯಜನರಿಂದ ಸಹಿತರಾಗಿ ಸಕಲ ಸಾಮಗ್ರಿಗಳೊಡನೆ ಬ್ರಹ್ಮಲೋಕದ ಜನರನ್ನು ಹಿಂಬಾಲಿಸಿ ತಾವೂ ಹೊರಟರು. ಇಂತು ವೈಭವೋಪೇತನಾಗಿ ಬ್ರಹ್ಮದೇವನು ವೇಂಕಟಗಿರಿಗೆ ದಯಮಾಡಿಸಿದನು. ಬೆಟ್ಟ, ಗುಡ್ಡ, ಗಹ್ವರ, ಉದ್ಯಾನವನಗಳಿಂದ ಪರಿಶೋಭಿಸುವ ಸಮಸ್ತ ಜಗತ್ತೂ ವಿವಿಧ ವಾದ್ಯ ನಿನದ-ನಗಾರಿ-ದುಂದುಭಿ-ಕಹಳೆಗಳ ಅದ್ಭುತ ಧ್ವನಿಗಳಿಂದ ತುಂಬಿಹೋಯಿತು.

ಇತ್ತ ಅದೇ ಸಮಯದಲ್ಲಿ ಶ್ರೀನಿವಾಸನು ತನ್ನ ಕುಮಾರನನ್ನು ಆಹ್ವಾನಿಸಲು ತಾನು ಕಳುಹಿಸಿದ ಗರುಡನು ಇನ್ನೂ ಬರದಿರುವುದನ್ನು ಗಮನಿಸಿ ಸಾಮಾನ್ಯ ಮಾನವನಂತೆ ವಿಡಂಬನ ಮಾಡುತ್ತಾ ಬಕುಳಾದೇವಿಯನ್ನುದ್ದೇಶಿಸಿ ''ಅಮ್ಮಾ, ಬ್ರಹ್ಮದೇವನನ್ನು ಕರೆದು ತರಲು ಕಳುಹಿಸಿದ ಗರುಡನೇಕೆ ಇನ್ನೂ ಬರಲಿಲ್ಲ? ಮಾರ್ಗಮಧ್ಯದಲ್ಲಿ ಯಾರಾದರೂ ಅವನನ್ನು ತಡೆದಿರಬಹುದೇ? ಗರುಡನಿನ್ನೂ ಬರದಿರುವ ಕಾರಣವೇನಿರಬಹುದು ತಿಳಿಸು'' ಎಂದು ಪ್ರಶ್ನಿಸಿದನು. ಶ್ರೀನಿವಾಸನಿಂತು ಹೇಳುತ್ತಿರುವಂತೆಯೇ ಚಾರನೊಬ್ಬನು ಶ್ರೀಹರಿಗೆ ದೃಗ್ಗೋಚರನಾದನು. ಚಾರನನ್ನು ಕಂಡು ಶ್ರೀನಿವಾಸನಿಗೆ ಬಹಳ ಹರುಷವಾಯಿತು. ಆ ಸೇವಕನನ್ನು ಕರೆದು ಶ್ರೀನಿವಾಸನು ''ಎಲೈ ಚಾರನೇ, ನಿನ್ನನ್ನು ಕಳಿಸಿದವರಾರು ನನ್ನ ಕುಮಾರನೀಗ ಎಲ್ಲಿರುವನು?'' ಎಂದು ಪ್ರಶ್ನಿಸಿದನು. ಆಗ ಆ ಸೇವಕನು ''ದೇವದೇವ, ಗೋವಿಂದ, ನಿನ್ನ ಸುತನಾದ ಬ್ರಹ್ಮದೇವನು ಗಂಗಾನದಿಯನ್ನು ದಾಟುತ್ತಿರುವನು'' ಎಂದು ಹೇಳುತ್ತಿರುವಾಗಲೇ ಅಲ್ಲಿಗೆ ಬಂದ ಮತ್ತೊಬ್ಬ ಸೇವಕನು ''ಪ್ರಭು, ನಿನ್ನ ಮಗನು

ಪುರಜನರಿಂದ ಸಹಿತನಾಗಿ ಗೋದಾವರೀ ನದಿಯನ್ನು ದಾಟಿಬರುತ್ತಿದ್ದಾನೆ'' ಎಂದು ವಿಜ್ಞಾಪಿಸಲು ಶ್ರೀನಿವಾಸನ ಮುಖವು ಮಂದಹಾಸಾನಂದಗಳಿಂದ ವಿಕಸಿತವಾಯಿತು. ಅಷ್ಟರಲ್ಲಿ ಪಿತಾಮಹನ ಆಣತಿಯಂತೆ ಆಗಮಿಸಿದ ಗರುಡನು ಶ್ರೀನಿವಾಸನಿಗೆ ಅಭಿವಂದಿಸಿ ''ದೇವ, ನಿನ್ನ ಕುಮಾರನು ಕೃಷ್ಣಾನದಿಯನ್ನು ದಾಟಿ, ಶ್ರೀಶೈಲಕ್ಕೆ ಬಂದು ಅಲ್ಲಿಂದ ಅಹೋಬಿಲಕ್ಷೇತ್ರಕ್ಕೆ ಬಂದು ಸೇರಿರುವನು. ಅಲ್ಲಿಂದ ನಾನು ಚತುರ್ಮುಖನ ಅಪ್ಪಣೆಯಂತೆ ಅದನ್ನು ವಿಜ್ಞಾಪಿಸಲು ಬಂದಿದ್ದೇನೆ'' ಎಂದು ಹೇಳಿದನು.

ಎಲೈ ಜನಕರಾಯ, ಅದೇ ಸಮಯಕ್ಕೆ ಅಲ್ಲಿಗೆ ಬಂದ ವಿಷ್ವಕ್ಸೇನನು ಸರ್ವೋತ್ತಮನಾದ ಶ್ರೀಹರಿಗೆ ನಮಸ್ಕರಿಸಿ ''ಚತುರ್ಮುಖ ಪರಮಾತ್ಮನು (ಶ್ರೀಹರಿಲಕ್ಷ್ಮಿಯರನ್ನು ಹೃದಯದಲ್ಲಿ ಧರಿಸಿರುವನು ಎಂಬರ್ಥದಲ್ಲಿ ಇಲ್ಲಿ ಪರಮಾತ್ಮಾ ಎಂದು ಬ್ರಹ್ಮದೇವರಿಗೆ ವಿಶೇಷಣ ಕೊಟ್ಟಿರುವರೆಂದು ತಿಳಿಯಬೇಕು) ಅಂದರೆ ದೇವ, ಸಮಸ್ತಲೋಕಕ್ಕೆ ಅಧಿಪತಿಯಾದ ನಿನ್ನ ಪುತ್ರ ಬ್ರಹ್ಮದೇವನು ತುಂಬುರುತೀರ್ಥಕ್ಕೆ ಬಂದು ಆ ಪವಿತ್ರತೀರ್ಥದಲ್ಲಿ ಅವಗಾಹನ ಸ್ನಾನಮಾಡುತ್ತಿರುವನು. ನಿನ್ನ ದರ್ಶನಮಾಡಬೇಕೆಂಬ ಬಯಕೆಯಿಂದ ನಿನ್ನ ಕುಮಾರನು ಇನ್ನೇನು, ಇಲ್ಲಿಗೆ ಬರುವನು'' ಎಂದು ವಿಜ್ಞಾಪಿಸಿದನು. ಆ ಸೇನಾಧಿಪತಿಯ ನುಡಿಯನ್ನು ಕೇಳಿ ದಿಗ್ಗನೆ ಮೇಲೆದ್ದು ಗರುಡನಭುಜದ ಮೇಲೆ ಕುಳಿತು ಷಡ್ಗುಣೈಶ್ವರ್ಯಪೂರ್ಣನಾದ ಶ್ರೀಹರಿಯು ಸಂತೋಷದಿಂದ ತನ್ನ ಮಗನ ಮೇಲಿನ ಮಮತೆಯಿಂದ ಅವನನ್ನು ಕಾಣಲು ಉತ್ತರ ದಿಕ್ಕಿಗೆ ಅಭಿಮುಖನಾಗಿ ಹೊರಟನು. ಅಷ್ಟರಲ್ಲಿ ವಿಷ್ವಕ್ಸೇನನು ಭರದಿಂದ ಬ್ರಹ್ಮದೇವನ ಬಳಿ ಬಂದು ಅವನಿಗೆ ನಮಿಸಿ ''ಕಮಲಾಸನ! ಕಮಲನಯನನಾದ ಕಮಲಾಪತಿಯು ನಿನ್ನ ದರ್ಶನಲಾಲಸೆಯಿಂದ ಗರುಡನ ಹೆಗಲೇರಿ ಇತ್ತಲೇ ಬರುತ್ತಿರುವನು'' ಎಂದು ಅರುಹಿದನು. ಶ್ರೀಹರಿಯು ಬರುತ್ತಿರುವುದನ್ನು ಕೇಳಿ ಬ್ರಹ್ಮದೇವನು ಚಂದ್ರಬಿಂಬದಂತೆ ಬಿಳುಪಾದ ಹಂಸದಿಂದ ಕೆಳಗಿಳಿದು ಶ್ರೀನಿವಾಸನು ಬರುತ್ತಿರುವಲ್ಲಿಗೆ ಕಾಲುನಡಿಗೆಯಿಂದ ಬಂದು ತಂದೆಯ ದರ್ಶನ ಮಾಡಿದನು. ಆನಂತರ ದಂಡ ಪ್ರಣಾಮಮಾಡಿ ಕರಜೋಡಿಸಿ ನಿಂತನು. ಪ್ರಿಯ ಕುಮಾರನನ್ನು ಕಂಡು ಕಮಲಾಸಹಾಯನು ಗರುಡನ ಭುಜದಿಂದಿಳಿದು ಬ್ರಹ್ಮದೇವನ ಬಳಿಗೆ ಧಾವಿಸಿದನು.

ಶ್ರೀಹರಿಯು ಸಾಷ್ಟಾಂಗವೆರಗಿದ ಕುಮಾರನಾದ ಬ್ರಹ್ಮದೇವನನ್ನು ಪ್ರೀತಿಯಿಂದ ಹಿಡಿದು ಮೇಲೆಬ್ಬಿಸಿ, ಭರದಿಂದ ಆಲಿಂಗಿಸಿ, ''ಕುಮಾರ, ನಿನಗೆ ಮಂಗಳವಾಗಲಿ, ನಿನ್ನನ್ನು ಕಾಣುವ ಆತುರದಿಂದ ಕೃಶನಾಗಿರುವ ನನ್ನನ್ನು ನೋಡು. ಬಹುಕಾಲವಾದ ಮೇಲೆ ನನ್ನ ದರ್ಶನ ಮಾಡುವ ಬಯಕೆಯುಂಟಾಯಿತಲ್ಲವೇ. ಒಮ್ಮೆಯಾದರೂ ನನ್ನನ್ನು ನೋಡಬೇಕೆಂಬ ಕುತೂಹಲವು ನಿನಗಾಗಲಿಲ್ಲವಲ್ಲ! ಹೂಂ ಈಗಲಾದರೂ ನಿನ್ನ ಬುದ್ಧಿಯು ನನ್ನ ದರ್ಶನವನ್ನು ಬಯಸಿತಲ್ಲ. ಅದೇ ದೊಡ್ಡದು. ವತ್ಸ, ಬ್ರಹ್ಮದೇವ! ನಿನ್ನನ್ನು ಬಿಟ್ಟು ನನಗೆ ಈ ಜಗತ್ತಿನಲ್ಲಿ ಹೆಚ್ಚಿನದಾದ ಬೇರಾವ ವಸ್ತುವೂ ಇಲ್ಲವಪ್ಪ'' ಎಂದೆನಲು ಬ್ರಹ್ಮದೇವನು ಮಾತನಾಡದೆ ವಿಧೇಯನಾಗಿ ನಿಂತನು. ಶ್ರೀನಿವಾಸನೂ ಮುಂದೆ ಮಾತನಾಡಲಿಲ್ಲ. ಆನಂದದ ಕಣ್ಣೀರು ಹರಿಯುತ್ತಿರಲು ಶ್ರೀನಿವಾಸ ಮತ್ತು ಬ್ರಹ್ಮದೇವರು ಎರಡು ಮುಹೂರ್ತಕಾಲ ಪರಸ್ಪರ ಮುಖಗಳನ್ನು ಸಂತೋಷದಿಂದ ನೋಡುತ್ತಾ ನಿಂತುಬಿಟ್ಟರು. ತಂದೆಯ ಮುಖವನ್ನು ಮಗನೂ, ಪುತ್ರನ ಮುಖವನ್ನು ಜನಕನೂ ನೋಡಹತ್ತಿದರು. ಆಗ ದೇವತೆಗಳ ಸಭೆಯಲ್ಲಿ ಶ್ರೀನಿವಾಸ ಚತುರಾನನರು ಆನಂದತುಂದಿಲರಾಗಿ ಕ್ರೀಡಿಸಿದರು. ಸತ್ಯಲೋಕ ನಿವಾಸಿಗಳಾದ ದೇವತೆಗಳು ತಂದೆಮಕ್ಕಳ ಈ ಪ್ರೇಮಸಮ್ಮಿಲನವನ್ನು ಕಂಡು ಅತಿಶಯ ಸಂತೋಷಭರಿತರಾದರು ಆಗ ದೇವತೆಗಳು ''ಆಹಾ ಬ್ರಹ್ಮದೇವನಿಗೆ ಸಮಾನನಾದ ಮಗನಿಲ್ಲ; ಶ್ರೀಹರಿಗೆ ಸದೃಶನಾದ ತಂದೆಯಿಲ್ಲ'' ಎಂದು ಭಕ್ತಿಸ್ನೇಹಪರವಶರಾಗಿ ತಂದೆ ಮಕ್ಕಳನ್ನು ಶ್ಲಾಘಿಸಿದರು.

ಆ ತರುವಾಯ ಶ್ರೀನಿವಾಸನು ಬ್ರಹ್ಮದೇವನನ್ನು ಸಾಂತ್ವನಗೊಳಿಸಿ ಅವನ ಕಣ್ಣೀರನ್ನು ಒರೆಸಿ ಅವನ ಕರವನ್ನು ಹಿಡಿದು ತನ್ನ ಕಣ್ಣೀರನ್ನು ಒರೆಸಿಕೊಂಡು ಮಗನೊಡನೆ ವಲ್ಮೀಕದ ಬಳಿಬಂದು ಪುತ್ರನೊಡನೆ ಆಸನಾಸೀನನಾದನು. ನಂತರ ಕುಮಾರನನ್ನು ಪ್ರಶ್ನಿಸಿದನು.

ಶ್ರೀನಿವಾಸ :- ವತ್ಸ, ನೀನು ಕುಶಲದಿಂದಿರುವೆಯಾ? ನನ್ನ ಸೊಸೆಯಾದ ಸರಸ್ವತಿಯು ಕ್ಷೇಮದಿಂದಿರುವಳೇ? ನನ್ನ ಪುತ್ರರು, ಪೌತ್ರರು ಮತ್ತು ನನ್ನ ಮರಿಮಕ್ಕಳುಗಳ ಕ್ಷೇಮ ಸಮಾಚಾರವನ್ನು ತಿಳಿಸು.

ಬ್ರಹ್ಮ :- ಕೇಶವ, ನಿನ್ನ ಅನುಗ್ರಹ ಬಲದಿಂದ ನಮ್ಮೆಲ್ಲರಿಗೂ ಮಂಗಳವು! ನಾವೆಲ್ಲರೂ ಕುಶಲದಿಂದಿರುವೆವು. ಜನಕ, ಅನಾದಿಪುರುಷೋತ್ತಮನಾದ ನಿನ್ನ ಕುಶಲವಾರ್ತೆಯನ್ನು ನನಗೆ ತಿಳಿಸು.

ಶ್ರೀನಿವಾಸ :- ಕುಮಾರ! ಪದ್ಮಾಸನ, ನಾನು ಹೇಳುವುದನ್ನು ಮನವಿಟ್ಟು ಕೇಳು. ದ್ವಾಪರಯುಗದ ಅಂತ್ಯಭಾಗದಲ್ಲಿ ಜರುಗಿದ ವಿಚಾರವನ್ನು ಹೇಳುವೆನು. ಆಲಿಸು. ಬ್ರಹ್ಮದೇವ, ವೈಕುಂಠದಲ್ಲಿ ಶೇಷತಲ್ಪದಲ್ಲಿ ನಾನು ಪವಡಿಸಿದ್ದಾಗ ಅಲ್ಲಿಗೆ ಬಂದ ಭೃಗುಋಷಿಯು ನಿನ್ನ ಮಾತೆಯಾದ ಲಕ್ಷ್ಮೀದೇವಿಯ ವಾಸಸ್ಥಳವಾದ ನನ್ನ ವಕ್ಷಸ್ಥಳವನ್ನು ತನ್ನ ಅಂಗಾಲಿನಿಂದ ಒದ್ದು ಬಿಟ್ಟನು. ಅದರಿಂದ ಅಸಮಾಧಾನ ಹೊಂದಿದ ನಿನ್ನ ತಾಯಿಯು ನನ್ನೊಡನೆ ಪ್ರಣಯಕಲಹವನ್ನಾಡಿ ತನ್ನ ತವರುಮನೆಯಾದ ಕೊಲ್ಲಾಪುರಕ್ಕೆ ಹೊರಟು ಹೋದಳು. ಅವಳ ವಿರಹದಿಂದ ಪೀಡಿತನಾದ ನಾನು ಖತಿಗೊಂಡು ಉತ್ತಮವಾದ ವೈಕುಂಠವನ್ನು ತ್ಯಜಿಸಿ ಈ ವೇಂಕಟಗಿರಿಗೆ ಬಂದೆನು. ಇಲ್ಲಿ ನಾನು ವಾಸಮಾಡಲು ಸೂಕ್ತವಾದ ಮನೆಯನ್ನು ಕಾಣದಲೇ ಈ ವಲ್ಮೀಕವನ್ನೇ ಆವಾಸಸ್ಥಾನವನ್ನಾಗಿ ಮಾಡಿಕೊಂಡು ನಿತ್ಯವೂ ಇಲ್ಲಿ ವಾಸಿಸುತ್ತಿರುವಾಗ ಚೋಳರಾಜನ ಮಡದಿಯಿಂದ ತಾಡಿತನಾದ ಚೋಳರಾಜನ ಭೃತ್ಯನಾದ ಗೋಪಾಲಕನು ಗೋವಿನ ಮೇಲಿನ ಕೋಪದಿಂದ ತನ್ನ ಹರಿತವಾದ ಕುಠಾರದಿಂದ ನನ್ನ ತಲೆಗೆ ಹೊಡೆದುಬಿಟ್ಟನು. ಅನಂತರ ನಾನು ಕರುಣಾಳುವಾದ ಬೃಹಸ್ಪತ್ಯಾಚಾರ್ಯನ ದಯದಿಂದ ನಿನ್ನನ್ನು ಕಾಣುವ ತವಕದಿಂದ ಹೇಗೋ ಜೀವಿಸಿದ್ದೇನೆ. ಮಗು ನೋಡಿಲ್ಲಿ, ಮಂಗಳಕರಳಾದ ನನ್ನ ತಾಯಿಯಾದ ಈ ಬಕುಳಾದೇವಿಗೆ ನಮಸ್ಕಾರ ಮಾಡಪ್ಪ.

ಬ್ರಹ್ಮದೇವನು ಹರಿಯ ಅಪ್ಪಣೆಯಂತೆ ಬಕುಳಾದೇವಿಗೆ ನಮಸ್ಕರಿಸಿ, ನಂತರ ''ಗೋವಿಂದ! ಇವಳಾರು! ನಿನ್ನ ಹೊಸ ತಾಯಿ. ನಿನ್ನೀ ಜನನಿಯು ಹಿಂದೆ ಎಲ್ಲಿ ಹುಟ್ಟಿದ್ದಳು ಅದನ್ನು ಹೇಳು, ಕೇಳಲು ಕುತೂಹಲವಾಗಿದೆ'' ಎಂದು ವಿಜ್ಞಾಪಿಸಲು ಶ್ರೀಹರಿಯು ಹೇಳಿದನು.

ಶ್ರೀನಿವಾಸ :- ಭದ್ರ, ದ್ವಾಪರದಲ್ಲಿ ಕೃಷ್ಣಾವತಾರಕಾಲದಲ್ಲಿ ನನಗೆ ತಾಯಿಯಾಗಿದ್ದ ಯಶೋದಾದೇವಿಯೇ ಈಗ ಬಕುಳಾದೇವಿಯಾಗಿ ಈ ವೇಂಕಟಗಿರಿಯಲ್ಲಿರುವಳು. ಇವಳು ನನ್ನನ್ನು ಬಹುಕಾಲದಿಂದ ಕಾಪಾಡುತ್ತಿದ್ದಾಳೆ. ಆಪತ್ಕಾಲದಲ್ಲಿ ರಕ್ಷಿಸಿದವರನ್ನು ಪೂಜ್ಯ ತಂದೆತಾಯಿಯಂತೆ ತಿಳಿಯಬೇಕೆಂದು ದೊಡ್ಡವರು ಹೇಳುವರು.

ಕುಮಾರ! ಒಂದಾನೊಂದು ದಿನ ನಾನು ಬೇಟೆಯಾಡಲು ಆಶಿಸಿ ಪದ್ಮಸರೋವರದ ಬಳಿಗೆ ಬಂದೆನು. ಅಲ್ಲಿನ ಒಂದು ಪುಷ್ಪಾರಾಮದಲ್ಲಿ ಅನೇಕ ಕನ್ಯೆಯರಿದ್ದರು. ಅವರ ಮಧ್ಯದಲ್ಲಿ ವಿರಾಜಿಸುತ್ತಾ ಓರ್ವ ಸುಂದರ ಕನ್ಯೆಯು ಬಂದಳು. ಅವಳು ಆಕಾಶಭೂಪತಿಯ ಪ್ರಿಯಕುಮಾರಿಯಾದ ಪದ್ಮಾವತಿಯೆಂದು ಹೇಳುವರು. ಸುರಸುಂದರಿಯಾದ ಅವಳನ್ನು ಕಂಡು ನಾನು ಮೋಹಿತನಾದೆನು. ಪದ್ಮಸಂಭವ! ನನ್ನ ಮನಸ್ಸು ಅವಳನ್ನೆ ಬಯಸುವುದು. ನೀನು ನನ್ನ ಶ್ರೇಷ್ಠಕುಮಾರನಾಗಿದ್ದೀಯೆ. ವಿಧಾತ ಅವಳನ್ನೇ ನಾನು ಕರಪಿಡಿಯುವಂತೆ ಘಟನೆ ಮಾಡಿಸು (ಅಥವಾ ಪುತ್ರ! ನೀನು ನನ್ನ ಉತ್ತಮ ಪುತ್ರನೇ ಆಗಿದ್ದಲ್ಲಿ ಪದ್ಮಾವತಿಯು ನನ್ನ ಪತ್ನಿಯಾಗುವಂತೆ ಘಟನೆಮಾಡಿಸು).

ಶ್ರೀಹರಿಯು ಇಂತು ಹೇಳುತ್ತಿರಲು ದುಂದುಭಿಯ ಧ್ವನಿ ಕೇಳಿಸಿತು. ಆಗ ಶ್ರೀನಿವಾಸನು ''ವತ್ಸ, ಇದು ಯಾರು ಬರುವುದನ್ನು ಸೂಚಿಸುವ ವಾದ್ಯ ಧ್ವನಿಯು? ನನ್ನ ಬಳಿಗೆ ಯಾರು ಆಗಮಿಸುತ್ತಿರುವರು?'' ಎಂದು ಕೇಳುತ್ತಿರುವಾಗ ಶ್ರೀಭಾರತೀರಮಣನಾದ ಮುಖ್ಯಪ್ರಾಣನು(ವಾಯುದೇವನು) ಜಂಕೆಯನ್ನು ಏರಿಕೊಂಡು ಸುವಾಸನೆಯನ್ನು ತೆಗೆದುಕೊಂಡು ವೇಂಕಟಗಿರಿಗಾಗಮಿಸಿದನು. ಶ್ರೇಷ್ಠಗುಣಮಂಡಿತನೂ ಜಗತ್ಕ್ಷೇಮಾಶ್ರಯನೂ ಆದ ಜ್ಯೇಷ್ಠಪುತ್ರನಾದ

ವಾಯುದೇವನನ್ನು ಸಂತಸದಿಂದವಲೋಕಿಸಿ ''ವಾಯುದೇವ! ನಿನಗೆ ಸ್ವಾಗತವು. ವಿವಾಹ ಸಮಯಕ್ಕೆ ಬಂದುದು ಬಹುಯೋಗ್ಯ. ಆನಂದವಾಯಿತು. ಇಲ್ಲಿ ಕುಳಿತುಕೋ, ಮಂಗಳಕರನಾದ ಭಾರತೀಶ, ನನ್ನ ಪುತ್ರರಲ್ಲಿ ನೀನು ಜ್ಯೇಷ್ಠನು. ಭಾರತೀದೇವಿಯು ಸಮಸ್ತಲೋಕಗಳಲ್ಲಿಯೂ ಬಹುವಿಖ್ಯಾತಳಾಗಿರುವಂತೆ ನನಗೆ ಭಾಸವಾಗುತ್ತಿದೆ'' ಎಂದು ಹೇಳುತ್ತಿರಲು ರುದ್ರದೇವನು ಅಲ್ಲಿಗೆ ಬಂದನು. ಪಾರ್ವತೀದೇವಿ ಷಣ್ಮುಖ ಪ್ರಮಥಗಣಾಧೀಶರು (ಗಣಪತಿ) ಮತ್ತು ಸೇವಕರಿಂದ ಸಹಿತನಾದ ನೀಲಕಂಠನು ಅಲ್ಲಿಗೆ ಬಂದು ತಂದೆಯಾದ ಬ್ರಹ್ಮನಿಗೆ, ತಾತನಾದ ಶ್ರೀಹರಿಗೆ ನಮಸ್ಕರಿಸಿದನು.

ಎಲೈ ಜನಕರಾಜ, ಆಗ ಶ್ರೀನಿವಾಸನು ಶಂಕರನನ್ನು ಆಲಿಂಗಿಸಿ ''ಮಂಗಳಕರನಾದ ವತ್ಸ, ರುದ್ರದೇವ! ಬಾ, ಇಲ್ಲಿ ನನ್ನ ಸಮೀಪದಲ್ಲಿ ಶ್ರೇಷ್ಠವಾದ ಆಸನದಲ್ಲಿ ಮಂಡಿಸು'' ಎಂದು ತನ್ನ ಪಕ್ಕದಲ್ಲಿ ಕೂಡಿಸಿಕೊಂಡನು. ಅದೇ ವೇಳೆಗೆ ನರವಾಹನನಾದ ಕುಬೇರನು ಹೆಂಡತಿ, ಮಕ್ಕಳು ಬಾಂಧವರೊಡನೆ ಯಕ್ಷರು ಅವರ ಪುತ್ರರು ಸೇವಕರಿಂದೊಡಗೂಡಿ ಬಂದನು. ಭಗವಾನ್ ಶ್ರೀಹರಿಯು ''ಮತಿವಂತನಾದ ಧನಾಧಿಪನಾದ ಕುಬೇರ! ನೀನು ಸದಾ ಧನವಂತನಾಗಿರು'' ಎಂದು ಆಶೀರ್ವದಿಸಿ ಕುಬೇರನನ್ನು ಹರ್ಷಗೊಳಿಸಿದನು. ಆಗ ಸ್ವಾಹಾದೇವಿ ಸ್ವಧಾದೇವಿಯರೆಂಬ ಪತ್ನಿಯರು, ಪುತ್ರರು ಬಾಂಧವರಿಂದ ಸಹಿತನಾಗಿ ಕುರಿಯ ಮೇಲೆ ಕುಳಿತು ವೈಶ್ವಾನರನು (ಅಗ್ನಿ) ವೇಂಕಟಾಚಲಕ್ಕೆ ಬಂದನು. ಜಗದೊಡೆಯನಾದ ಶ್ರೀವಿಷ್ಣುವು ಅಗ್ನಿಯನ್ನು ಆನಂದದಿಂದ ಆಲಿಂಗಿಸಿ ''ಕೂಡು ಕೂಡು'' ಎಂದು ಉಪಚರಿಸಿದನು. ಅದೇ ವೇಳೆಗೆ ಪ್ರೇತಾಧಿ ಪತಿಯಾದ ಯಮಧರ್ಮರಾಜನು ಪತ್ನಿಯಾದ ಶ್ಯಾಮಲಾದೇವಿ ಮತ್ತು ದೂತರಿಂದ ಯುಕ್ತನಾಗಿ ತನ್ನ ವಾಹನವಾದ ಕೋಣದ ಮೇಲೆ ಕುಳಿತು ಶ್ರೀನಿವಾಸನ ಬಳಿಗೆ ಬಂದನು.

ಜನಕರಾಯ! ಆನಂತರ ಅತಿಶಯ ಮತಿವಂತನಾದ ಚಿತ್ರಗುಪ್ತನೂ ಬಂದು ಸೇರಿದನು. ಆಗ ಬಹುರತ್ನಸಂಪದ್ಭರಿತನಾದ ಭಕ್ತಿಯುಕ್ತನಾದ ಜಲಾಧಿಪತಿ ವರುಣನು ತನ್ನ ಪತ್ನಿಯೊಡನೆ ಮೊಸಳೆಯನ್ನೇರಿಕೊಂಡು ನಾರಾಯಣ ಪರ್ವತಕ್ಕೆ ಆಗಮಿಸಿದನು. ಆ ಬಳಿಕ ಸಕಲಭೋಗಗಳಿಗೆ ಆಶ್ರಯನಾದ ತ್ರಿದಿವೇಶ್ವರನಾದ ಶ್ರೇಷ್ಠನಾದ ಶಚೀಪತಿಯಾದ ಸಾಕ್ಷಾತ್ ದೇವೇಂದ್ರನು ಪತ್ನಿಯಾದ ಪೌಲೋಮಿ ಪುತ್ರರಿಂದ ಸಹಿತನಾಗಿ ಐರಾವತದ ಮೇಲೆ ಕುಳಿತು ಶೇಷಾಚಲಕ್ಕೆ ಬಂದನು ಮತ್ತು ಶ್ರೀನಿವಾಸನಿಂದ ಸತ್ಕೃತನಾಗಿ ಕುಳಿತನು. ಅದೇ ವೇಳೆಗೆ ಸೂರ್ಯ ಚಂದ್ರರು ಬಂದರು. ಆನಂತರ ಗಿಣಿಯ ಮೇಲೆ ಕುಳಿತು ಮನ್ಮಥನು ರತೀದೇವಿಯೊಡನೆ ಅಶ್ವವನ್ನೇರಿ ಮೂಳರೂಪದಿಂದ ಬಂದನು. ಸಕಲ ಋಷಿಗಳೂ ಸಹ ವೇಂಕಟಾಚಲಕ್ಕೆ ಬಂದರು.

ಕಶ್ಯಪ ಋಷಿಗಳು, ಅತ್ರಿಋಷಿಗಳು, ಭರದ್ವಾಜರು, ಗೌತಮರು, ವಿಶ್ವಾಮಿತ್ರರು, ವಸಿಷ್ಠರು, ವಾಲ್ಮೀಕಿಗಳು, ಜಮದಗ್ನಿಗಳು (ಜಮದಗ್ನಿಯ ಪುತ್ರರು), ಪುಲಸ್ತ್ಯರು, ದಧೀತಿ ಋಷಿಗಳು, ಶುನಃಶೇಪರು, ಗಾಲವರು, ಗಾರ್ಗ್ಯರು, ಕೃಷ್ಣರು ಇವರೇ ಮೊದಲಾದ ಸಮಸ್ತ ಋಷಿಮುನಿಗಳು ಸಪುತ್ರರಾಗಿ ಸಮಸ್ತಸಾಮಗ್ರಿಗಳೊಡನೆ ಆಗಮಿಸಿದರು. ಆ ತರುವಾಯ ಗಂಧರ್ವರು, ಅಪ್ಸರರು, ಸಿದ್ಧರು, ನಾಗರು (ಪಾ: ಪಿತೃಗಳು, ಸಿದ್ಧರು, ಚಾರಣರು) ಇಂತು ಮಹರ್ಷಿಗಳು, ದೇವತೆಗಳು, ರಾಜರು, ವಿಷ್ಣುಭಕ್ತರಾದ ಇನ್ನಿತರ ರಾಜ ಮಹಾರಾಜರೂ ಸಹ ಶ್ರೀನಿವಾಸನ ಕಲ್ಯಾಣಮಹೋತ್ಸವದಲ್ಲಿ ಭಾಗಿಗಳಾಗಿ ಕೃತಾರ್ಥರಾಗಲು ವೇಂಕಟಗಿರಿಗೆ ಆಗಮಿಸಿದರು. ಶ್ರೀಹರಿಯು ಅವರವರ ಸ್ಥಾನಮಾನಯೋಗ್ಯತೆಗಳಿಗೆ ತಕ್ಕಂತೆ ಸ್ವಾಗತಿಸಿ ಸತ್ಕರಿಸಿ ಸಕಲರನ್ನೂ ಕೂಡುವಂತೆ ಹೇಳಿದನು.

ಇದಾದಮೇಲೆ ದೇವಬಡಗಿಯಾದ ವಿಶ್ವಕರ್ಮನು ಪರಮಾತ್ಮನ ದೃಷ್ಟಿಗೆ ಗೋಚರಿಸಿದನು. ಅವನನ್ನು ಕಂಡು ಹುಸಿಮುನಿಸಿನಿಂದ ಶ್ರೀನಿವಾಸನು, ''ದೇವೇಂದ್ರ ಈ ವಿಶ್ವಕರ್ಮನ ಅಹಂಕಾರವನ್ನು ನೋಡಿದೆಯಾ? ಅಣ್ಣನ ಬಲದ ಹಮ್ಮಿನಿಂದ ಒಳಿತು ಕೆಡಕುಗಳನ್ನು ಇವನು ಅರಿಯದವನಾಗಿದ್ದಾನೆ. ಶಚೀಶ, ಸಾಮಾನ್ಯರಾದ ಎಲ್ಲರನ್ನೂ ಕಾಣುವವನಂತೆಯೇ ನನ್ನನ್ನೂ ಕಾಣುತ್ತಿರುವನು. ಇದು ಬಹು ಚೆನ್ನಾಯಿತು. ಇಂದ್ರ! ತಾರತಮ್ಯ ಜ್ಞಾನವಿಲ್ಲದ ದುರಹಂಕಾರಿಯಾದ ಇವನನ್ನು

ಶ್ರೀನಿವಾಸ :- ವತ್ಸ, ನೀನು ಕುಶಲದಿಂದಿರುವೆಯಾ? ನನ್ನ ಸೊಸೆಯಾದ ಸರಸ್ವತಿಯು ಕ್ಷೇಮದಿಂದಿರುವಳೇ? ನನ್ನ ಪುತ್ರರು, ಪೌತ್ರರು ಮತ್ತು ನನ್ನ ಮರಿಮಕ್ಕಳುಗಳ ಕ್ಷೇಮ ಸಮಾಚಾರವನ್ನು ತಿಳಿಸು.

ಬ್ರಹ್ಮ :- ಕೇಶವ, ನಿನ್ನ ಅನುಗ್ರಹ ಬಲದಿಂದ ನಮ್ಮೆಲ್ಲರಿಗೂ ಮಂಗಳವು! ನಾವೆಲ್ಲರೂ ಕುಶಲದಿಂದಿರುವೆವು. ಜನಕ, ಅನಾದಿಪುರುಷೋತ್ತಮನಾದ ನಿನ್ನ ಕುಶಲವಾರ್ತೆಯನ್ನು ನನಗೆ ತಿಳಿಸು.

ಶ್ರೀನಿವಾಸ :- ಕುಮಾರ! ಪದ್ಮಾಸನ, ನಾನು ಹೇಳುವುದನ್ನು ಮನವಿಟ್ಟು ಕೇಳು. ದ್ವಾಪರಯುಗದ ಅಂತ್ಯಭಾಗದಲ್ಲಿ ಜರುಗಿದ ವಿಚಾರವನ್ನು ಹೇಳುವೆನು. ಆಲಿಸು. ಬ್ರಹ್ಮದೇವ, ವೈಕುಂಠದಲ್ಲಿ ಶೇಷತಲ್ಪದಲ್ಲಿ ನಾನು ಪವಡಿಸಿದ್ದಾಗ ಅಲ್ಲಿಗೆ ಬಂದ ಭೃಗುಋಷಿಯು ನಿನ್ನ ಮಾತೆಯಾದ ಲಕ್ಷ್ಮೀದೇವಿಯ ವಾಸಸ್ಥಳವಾದ ನನ್ನ ವಕ್ಷಸ್ಥಳವನ್ನು ತನ್ನ ಅಂಗಾಲಿನಿಂದ ಒದ್ದು ಬಿಟ್ಟನು. ಅದರಿಂದ ಅಸಮಾಧಾನ ಹೊಂದಿದ ನಿನ್ನ ತಾಯಿಯು ನನ್ನೊಡನೆ ಪ್ರಣಯಕಲಹವನ್ನಾಡಿ ತನ್ನ ತವರುಮನೆಯಾದ ಕೊಲ್ಲಾಪುರಕ್ಕೆ ಹೊರಟು ಹೋದಳು. ಅವಳ ವಿರಹದಿಂದ ಪೀಡಿತನಾದ ನಾನು ಖತಿಗೊಂಡು ಉತ್ತಮವಾದ ವೈಕುಂಠವನ್ನು ತ್ಯಜಿಸಿ ಈ ವೇಂಕಟಗಿರಿಗೆ ಬಂದೆನು. ಇಲ್ಲಿ ನಾನು ವಾಸಮಾಡಲು ಸೂಕ್ತವಾದ ಮನೆಯನ್ನು ಕಾಣದಲೇ ಈ ವಲ್ಮೀಕವನ್ನೇ ಆವಾಸಸ್ಥಾನವನ್ನಾಗಿ ಮಾಡಿಕೊಂಡು ನಿತ್ಯವೂ ಇಲ್ಲಿ ವಾಸಿಸುತ್ತಿರುವಾಗ ಚೋಳರಾಜನ ಮಡದಿಯಿಂದ ತಾಡಿತನಾದ ಚೋಳರಾಜನ ಭೃತ್ಯನಾದ ಗೋಪಾಲಕನು ಗೋವಿನ ಮೇಲಿನ ಕೋಪದಿಂದ ತನ್ನ ಹರಿತವಾದ ಕುಠಾರದಿಂದ ನನ್ನ ತಲೆಗೆ ಹೊಡೆದುಬಿಟ್ಟನು. ಅನಂತರ ನಾನು ಕರುಣಾಳುವಾದ ಬೃಹಸ್ಪತ್ಯಾಚಾರ್ಯನ ದಯದಿಂದ ನಿನ್ನನ್ನು ಕಾಣುವ ತವಕದಿಂದ ಹೇಗೋ ಜೀವಿಸಿದ್ದೇನೆ. ಮಗು ನೋಡಿಲ್ಲಿ, ಮಂಗಳಕರಳಾದ ನನ್ನ ತಾಯಿಯಾದ ಈ ಬಕುಳಾದೇವಿಗೆ ನಮಸ್ಕಾರ ಮಾಡಪ್ಪ.

ಬ್ರಹ್ಮದೇವನು ಹರಿಯ ಅಪ್ಪಣೆಯಂತೆ ಬಕುಳಾದೇವಿಗೆ ನಮಸ್ಕರಿಸಿ, ನಂತರ ''ಗೋವಿಂದ! ಇವಳಾರು! ನಿನ್ನ ಹೊಸ ತಾಯಿ. ನಿನ್ನೀ ಜನನಿಯು ಹಿಂದೆ ಎಲ್ಲಿ ಹುಟ್ಟಿದ್ದಳು ಅದನ್ನು ಹೇಳು, ಕೇಳಲು ಕುತೂಹಲವಾಗಿದೆ'' ಎಂದು ವಿಜ್ಞಾಪಿಸಲು ಶ್ರೀಹರಿಯು ಹೇಳಿದನು.

ಶ್ರೀನಿವಾಸ :- ಭದ್ರ, ದ್ವಾಪರದಲ್ಲಿ ಕೃಷ್ಣಾವತಾರಕಾಲದಲ್ಲಿ ನನಗೆ ತಾಯಿಯಾಗಿದ್ದ ಯಶೋದಾದೇವಿಯೇ ಈಗ ಬಕುಳಾದೇವಿಯಾಗಿ ಈ ವೇಂಕಟಗಿರಿಯಲ್ಲಿರುವಳು. ಇವಳು ನನ್ನನ್ನು ಬಹುಕಾಲದಿಂದ ಕಾಪಾಡುತ್ತಿದ್ದಾಳೆ. ಆಪತ್ಕಾಲದಲ್ಲಿ ರಕ್ಷಿಸಿದವರನ್ನು ಪೂಜ್ಯ ತಂದೆತಾಯಿಯಂತೆ ತಿಳಿಯಬೇಕೆಂದು ದೊಡ್ಡವರು ಹೇಳುವರು.

ಕುಮಾರ! ಒಂದಾನೊಂದು ದಿನ ನಾನು ಬೇಟೆಯಾಡಲು ಆಶಿಸಿ ಪದ್ಮಸರೋವರದ ಬಳಿಗೆ ಬಂದೆನು. ಅಲ್ಲಿನ ಒಂದು ಪುಷ್ಪಾರಾಮದಲ್ಲಿ ಅನೇಕ ಕನ್ಯೆಯರಿದ್ದರು. ಅವರ ಮಧ್ಯದಲ್ಲಿ ವಿರಾಜಿಸುತ್ತಾ ಓರ್ವ ಸುಂದರ ಕನ್ಯೆಯು ಬಂದಳು. ಅವಳು ಆಕಾಶಭೂಪತಿಯ ಪ್ರಿಯಕುಮಾರಿಯಾದ ಪದ್ಮಾವತಿಯೆಂದು ಹೇಳುವರು. ಸುರಸುಂದರಿಯಾದ ಅವಳನ್ನು ಕಂಡು ನಾನು ಮೋಹಿತನಾದೆನು. ಪದ್ಮಸಂಭವ! ನನ್ನ ಮನಸ್ಸು ಅವಳನ್ನೆ ಬಯಸುವುದು. ನೀನು ನನ್ನ ಶ್ರೇಷ್ಠಕುಮಾರನಾಗಿದ್ದೀಯೆ. ವಿಧಾತ ಅವಳನ್ನೇ ನಾನು ಕರಪಿಡಿಯುವಂತೆ ಘಟನೆ ಮಾಡಿಸು (ಅಥವಾ ಪುತ್ರ! ನೀನು ನನ್ನ ಉತ್ತಮ ಪುತ್ರನೇ ಆಗಿದ್ದಲ್ಲಿ ಪದ್ಮಾವತಿಯು ನನ್ನ ಪತ್ನಿಯಾಗುವಂತೆ ಘಟನೆಮಾಡಿಸು).

ಶ್ರೀಹರಿಯು ಇಂತು ಹೇಳುತ್ತಿರಲು ದುಂದುಭಿಯ ಧ್ವನಿ ಕೇಳಿಸಿತು. ಆಗ ಶ್ರೀನಿವಾಸನು ''ವತ್ಸ, ಇದು ಯಾರು ಬರುವುದನ್ನು ಸೂಚಿಸುವ ವಾದ್ಯ ಧ್ವನಿಯು? ನನ್ನ ಬಳಿಗೆ ಯಾರು ಆಗಮಿಸುತ್ತಿರುವರು?'' ಎಂದು ಕೇಳುತ್ತಿರುವಾಗ ಶ್ರೀಭಾರತೀರಮಣನಾದ ಮುಖ್ಯಪ್ರಾಣನು(ವಾಯುದೇವನು) ಜಿಂಕೆಯನ್ನು ಏರಿಕೊಂಡು ಸುವಾಸನೆಯನ್ನು ತೆಗೆದುಕೊಂಡು ವೇಂಕಟಗಿರಿಗಾಗಮಿಸಿದನು. ಶ್ರೇಷ್ಠಗುಣಮಂಡಿತನೂ ಜಗತ್‌ಕ್ಷೇಮಾಶ್ರಯನೂ ಆದ ಜ್ಯೇಷ್ಠಪುತ್ರನಾದ

ವಾಯುದೇವನನ್ನು ಸಂತಸದಿಂದವಲೋಕಿಸಿ ''ವಾಯುದೇವ! ನಿನಗೆ ಸ್ವಾಗತವು. ವಿವಾಹ ಸಮಯಕ್ಕೆ ಬಂದುದು ಬಹುಯೋಗ್ಯ. ಆನಂದವಾಯಿತು. ಇಲ್ಲಿ ಕುಳಿತುಕೋ, ಮಂಗಳಕರನಾದ ಭಾರತೀಶ, ನನ್ನ ಪುತ್ರರಲ್ಲಿ ನೀನು ಜ್ಯೇಷ್ಠನು. ಭಾರತೀದೇವಿಯು ಸಮಸ್ತಲೋಕಗಳಲ್ಲಿಯೂ ಬಹುವಿಖ್ಯಾತಳಾಗಿರುವಂತೆ ನನಗೆ ಭಾಸವಾಗುತ್ತಿದೆ'' ಎಂದು ಹೇಳುತ್ತಿರಲು ರುದ್ರದೇವನು ಅಲ್ಲಿಗೆ ಬಂದನು. ಪಾರ್ವತೀದೇವಿ ಷಣ್ಮುಖ ಪ್ರಮಥಗಣಾಧೀಶರು (ಗಣಪತಿ) ಮತ್ತು ಸೇವಕರಿಂದ ಸಹಿತನಾದ ನೀಲಕಂಠನು ಅಲ್ಲಿಗೆ ಬಂದು ತಂದೆಯಾದ ಬ್ರಹ್ಮನಿಗೆ, ತಾತನಾದ ಶ್ರೀಹರಿಗೆ ನಮಸ್ಕರಿಸಿದನು.

ಎಲೈ ಜನಕರಾಜ, ಆಗ ಶ್ರೀನಿವಾಸನು ಶಂಕರನನ್ನು ಆಲಿಂಗಿಸಿ ''ಮಂಗಳಕರನಾದ ವತ್ಸ, ರುದ್ರದೇವ! ಬಾ, ಇಲ್ಲಿ ನನ್ನ ಸಮೀಪದಲ್ಲಿ ಶ್ರೇಷ್ಠವಾದ ಆಸನದಲ್ಲಿ ಮಂಡಿಸು'' ಎಂದು ತನ್ನ ಪಕ್ಕದಲ್ಲಿ ಕೂಡಿಸಿಕೊಂಡನು. ಅದೇ ವೇಳೆಗೆ ನರವಾಹನನಾದ ಕುಬೇರನು ಹೆಂಡತಿ, ಮಕ್ಕಳು ಬಾಂಧವರೊಡನೆ ಯಕ್ಷರು ಅವರ ಪುತ್ರರು ಸೇವಕರಿಂದೊಡಗೂಡಿ ಬಂದನು. ಭಗವಾನ್ ಶ್ರೀಹರಿಯು ''ಮತಿವಂತನಾದ ಧನಾಧಿಪನಾದ ಕುಬೇರ! ನೀನು ಸದಾ ಧನವಂತನಾಗಿರು'' ಎಂದು ಆಶೀರ್ವದಿಸಿ ಕುಬೇರನನ್ನು ಹರ್ಷಗೊಳಿಸಿದನು. ಆಗ ಸ್ವಾಹಾದೇವಿ ಸ್ವಧಾದೇವಿಯರೆಂಬ ಪತ್ನಿಯರು, ಪುತ್ರರು ಬಾಂಧವರಿಂದ ಸಹಿತನಾಗಿ ಕುರಿಯ ಮೇಲೆ ಕುಳಿತು ವೈಶ್ವಾನರನು (ಅಗ್ನಿ) ವೇಂಕಟಾಚಲಕ್ಕೆ ಬಂದನು. ಜಗದೊಡೆಯನಾದ ಶ್ರೀವಿಷ್ಣುವು ಅಗ್ನಿಯನ್ನು ಆನಂದದಿಂದ ಆಲಿಂಗಿಸಿ ''ಕೂಡು ಕೂಡು'' ಎಂದು ಉಪಚರಿಸಿದನು. ಅದೇ ವೇಳೆಗೆ ಪ್ರೇತಾಧಿಪತಿಯಾದ ಯಮಧರ್ಮರಾಜನು ಪತ್ನಿಯಾದ ಶ್ಯಾಮಲಾದೇವಿ ಮತ್ತು ದೂತರಿಂದ ಯುಕ್ತನಾಗಿ ತನ್ನ ವಾಹನವಾದ ಕೋಣದ ಮೇಲೆ ಕುಳಿತು ಶ್ರೀನಿವಾಸನ ಬಳಿಗೆ ಬಂದನು.

ಜನಕರಾಯ! ಆನಂತರ ಅತಿಶಯ ಮತಿವಂತನಾದ ಚಿತ್ರಗುಪ್ತನೂ ಬಂದು ಸೇರಿದನು. ಆಗ ಬಹುರತ್ನಸಂಪದ್ಭರಿತನಾದ ಭಕ್ತಿಯುಕ್ತನಾದ ಜಲಾಧಿಪತಿ ವರುಣನು ತನ್ನ ಪತ್ನಿಯೊಡನೆ ಮೊಸಳೆಯನ್ನೇರಿಕೊಂಡು ನಾರಾಯಣ ಪರ್ವತಕ್ಕೆ ಆಗಮಿಸಿದನು. ಆ ಬಳಿಕ ಸಕಲಭೋಗಗಳಿಗೆ ಆಶ್ರಯನಾದ ತ್ರಿದಿವೇಶ್ವರನಾದ ಶ್ರೇಷ್ಠನಾದ ಶಚೀಪತಿಯಾದ ಸಾಕ್ಷಾತ್ ದೇವೇಂದ್ರನು ಪತ್ನಿಯಾದ ಪೌಲೋಮಿ ಪುತ್ರರಿಂದ ಸಹಿತನಾಗಿ ಐರಾವತದ ಮೇಲೆ ಕುಳಿತು ಶೇಷಾಚಲಕ್ಕೆ ಬಂದನು ಮತ್ತು ಶ್ರೀನಿವಾಸನಿಂದ ಸತ್ಕೃತನಾಗಿ ಕುಳಿತನು. ಅದೇ ವೇಳೆಗೆ ಸೂರ್ಯ ಚಂದ್ರರು ಬಂದರು. ಆನಂತರ ಗಿಣಿಯ ಮೇಲೆ ಕುಳಿತು ಮನ್ಮಥನು ರತೀದೇವಿಯೊಡನೆ ಅಶ್ವವನ್ನೇರಿ ಮೂಲರೂಪದಿಂದ ಬಂದನು. ಸಕಲ ಋಷಿಗಳೂ ಸಹ ವೇಂಕಟಾಚಲಕ್ಕೆ ಬಂದರು.

ಕಶ್ಯಪ ಋಷಿಗಳು, ಅತ್ರಿಋಷಿಗಳು, ಭರದ್ವಾಜರು, ಗೌತಮರು, ವಿಶ್ವಾಮಿತ್ರರು, ವಸಿಷ್ಠರು, ವಾಲ್ಮೀಕಿಗಳು, ಜಮದಗ್ನಿಗಳು (ಜಮದಗ್ನಿಯ ಪುತ್ರರು), ಪುಲಸ್ತ್ಯರು, ದಧೀತಿ ಋಷಿಗಳು, ಶುನಃಶೇಪರು, ಗಾಲವರು, ಗಾರ್ಗ್ಯರು, ಕೃಷ್ಣರು ಇವರೇ ಮೊದಲಾದ ಸಮಸ್ತ ಋಷಿಮುನಿಗಳು ಸಪುತ್ರರಾಗಿ ಸಮಸ್ತಸಾಮಗ್ರಿಗಳೊಡನೆ ಆಗಮಿಸಿದರು. ಆ ತರುವಾಯ ಗಂಧರ್ವರು, ಅಪ್ಸರರು, ಸಿದ್ಧರು, ನಾಗರು (ಪಾ: ಪಿತೃಗಳು, ಸಿದ್ಧರು, ಚಾರಣರು) ಇಂತು ಮಹರ್ಷಿಗಳು, ದೇವತೆಗಳು, ರಾಜರು, ವಿಷ್ಣುಭಕ್ತರಾದ ಇನ್ನಿತರ ರಾಜ ಮಹಾರಾಜರೂ ಸಹ ಶ್ರೀನಿವಾಸನ ಕಲ್ಯಾಣಮಹೋತ್ಸವದಲ್ಲಿ ಭಾಗಿಗಳಾಗಿ ಕೃತಾರ್ಥರಾಗಲು ವೇಂಕಟಗಿರಿಗೆ ಆಗಮಿಸಿದರು. ಶ್ರೀಹರಿಯು ಅವರವರ ಸ್ಥಾನಮಾನಯೋಗ್ಯತೆಗಳಿಗೆ ತಕ್ಕಂತೆ ಸ್ವಾಗತಿಸಿ ಸತ್ಕರಿಸಿ ಸಕಲರನ್ನೂ ಕೂಡುವಂತೆ ಹೇಳಿದನು.

ಇದಾದಮೇಲೆ ದೇವಬಡಗಿಯಾದ ವಿಶ್ವಕರ್ಮನು ಪರಮಾತ್ಮನ ದೃಷ್ಟಿಗೆ ಗೋಚರಿಸಿದನು. ಅವನನ್ನು ಕಂಡು ಹುಸಿಮುನಿಸಿನಿಂದ ಶ್ರೀನಿವಾಸನು, ''ದೇವೇಂದ್ರ ಈ ವಿಶ್ವಕರ್ಮನ ಅಹಂಕಾರವನ್ನು ನೋಡಿದೆಯಾ? ಅಣ್ಣನ ಬಲದ ಹಮ್ಮಿನಿಂದ ಒಳಿತು ಕೆಡಕುಗಳನ್ನು ಇವನು ಅರಿಯದವನಾಗಿದ್ದಾನೆ. ಶಚೀಶ, ಸಾಮಾನ್ಯರಾದ ಎಲ್ಲರನ್ನೂ ಕಾಣುವವನಂತೆಯೇ ನನ್ನನ್ನೂ ಕಾಣುತ್ತಿರುವನು. ಇದು ಬಹು ಚೆನ್ನಾಯಿತು. ಇಂದ್ರ! ತಾರತಮ್ಯ ಜ್ಞಾನವಿಲ್ಲದ ದುರಹಂಕಾರಿಯಾದ ಇವನನ್ನು

ಕೆಲಸದಿಂದ ತೆಗೆದುಹಾಕು. ನನ್ನಲ್ಲಿ ಭಕ್ತಿಯುಳ್ಳ ಪರಿಶುದ್ಧ ಮನಸ್ಸಿನ ಬೇರೊಬ್ಬನನ್ನು ದೇವತಾಗೃಹ ನಿರ್ಮಾಣಾದಿ ಕಾರ್ಯಗಳಿಗೆ ನೇಮಿಸು'' ಎಂದನು. ಶ್ರೀಹರಿಯು ಹೇಳಿದ ಅಪ್ರಿಯವಾಕ್ಯವನ್ನು ಕೇಳಿ ಭಯವಿಹ್ವಲನಾದ ವರ್ಧಕಿಯು ಗೋವಿಂದನಿಗೆ ಸಾಷ್ಟಾಂಗವೆರಗಿ ''ಪೂಜ್ಯನಾದ ಪರಮಾತ್ಮ! ಅಜ್ಞಾನದಿಂದ ನಾನೇನಾದರೂ ನಿನಗಿಷ್ಟವಾದ ಕಾರ್ಯವನ್ನು ಮಾಡದೇ ಹೋಗಿದ್ದಲ್ಲಿ ದಯಮಾಡಿ ನನ್ನ ಆ ದುಷ್ಟತನವನ್ನು ಕ್ಷಮಿಸು ಪ್ರಭು! ಕರುಣಾಸಮುದ್ರನೂ, ಷಡ್ಗುಣೈಶ್ವರ್ಯಪೂರ್ಣನೂ ಆದ ಶ್ರೀಹರಿಯೇ, ದೇವಾಧಿದೇವ, ದೇವತಾಸಾರ್ವಭೌಮ, ಅಲ್ಪನಾದ ನನ್ನ ನಿಮಿತ್ತವಾಗಿ ಏಕಿಷ್ಟು ಕುಪಿತನಾಗುತ್ತಿರುವೆ, ನನ್ನ ಅಪರಾಧವೇನಿದ್ದರೂ ಕ್ಷಮಿಸು ತಂದೆ'' ಎಂದು ಪ್ರಾರ್ಥಿಸಿದನು.

ಆಗ ಶ್ರೀನಿವಾಸನು ''ದೇವೇಂದ್ರ! ನನ್ನ ವಿವಾಹ ಮಹೋತ್ಸವಕ್ಕಾಗಿ ಬಂದಿರುವ ದೇವತೆಗಳು, ಮಹರ್ಷಿಗಳಿಗಾಗಿ ಉತ್ತಮ ವಸತಿ ಸ್ಥಳವು ಆಗಬೇಕಾಗಿದೆ. ಆದ್ದರಿಂದ ಇಲ್ಲಿ ಐವತ್ತು ಯೋಜನ ವಿಸ್ತಾರವಾದ, ಮೂವತ್ತು ಯೋಜನ ಅಗಲವಾದ ಶ್ರೇಷ್ಠವೂ, ಮನೋಹರವೂ, ಆಶ್ಚರ್ಯಕರವೂ ಆದ ದೊಡ್ಡ ಸಭಾಮಂದಿರವನ್ನು ನಿರ್ಮಾಣ ಮಾಡಿಸು'' ಎಂದು ಆಜ್ಞಾಪಿಸಿದನು. ಕೂಡಲೇ ಇಂದ್ರನು ಭಗವಂತನ ಆದೇಶದಂತೆ ವಿಶ್ವಕರ್ಮನಿಂದ ವಿಸ್ತಾರವಾದ ವಿಚಿತ್ರವಾದ ಸಭಾಭವನವನ್ನು ನಿರ್ಮಾಣ ಮಾಡಿಸಿದನು. ಅದರಿಂದ ಸುಪ್ರೀತನಾದ ಶ್ರೀನಿವಾಸನು ''ಇಂದ್ರ! ನೀನೀಗ ತ್ವರೆಯಿಂದ ಈ ದೇವಬಡಗಿಯೊಡನೆ ಆಕಾಶರಾಜನ ಪಟ್ಟಣಕ್ಕೆ ಹೋಗಿ ಮಹಾರಾಜನನ್ನು ಸಮಾಧಾನಪಡಿಸಿ, ವಿವಾಹಾರ್ಥವಾಗಿ ನನ್ನೊಡನೆ ಬರುವ ದೇವತೆಗಳು, ಮಹರ್ಷಿಗಳಿಗೆ ಅವಶ್ಯ ಏರ್ಪಡಿಸಬೇಕಾದ ವಸತಿಸ್ಥಳಾದಿ ವಿಚಾರಗಳನ್ನು ತಿಳಿಸಿ ಅಲ್ಲಿಯೂ ವಿಶ್ವಕರ್ಮನಿಂದ ಮನೆ, ಮಂದಿರ, ಸಭಾಭವನ, ಮುಂತಾದವುಗಳನ್ನು ನಿರ್ಮಾಣಮಾಡಿಸು'' ಎಂದು ಆದೇಶವಿತ್ತನು.

ಶ್ರೀಹರಿಯ ಆಣತಿಯಂತೆ ದೇವೇಂದ್ರನು ವರ್ಧಕಿಯೊಡನೆ ನಾರಾಯಣಪುರಕ್ಕೆ ತೆರಳಿ ಆಕಾಶರಾಜನಿಗೆ ಭಗವಂತನ ಅಪ್ಪಣೆಯನ್ನು ತಿಳಿಸಿ, ಕರ್ತವ್ಯಕರ್ಮವನ್ನು ಬೋಧಿಸಿ ಅವನ ಅನುಮತಿ ಪಡೆದು ಆ ರಾಜಧಾನಿಯನ್ನು ಸುತ್ತಲೂ ಬಹುಯೋಜನಗಳವರೆಗೆ ವಿಸ್ತರಿಸಿ, ಅರಣ್ಯ, ಬೆಟ್ಟ, ಗುಡ್ಡ ಗುಹೆಗಳನ್ನೆಲ್ಲಾ ಕಡಿದು ಹಾಕಿ ತಗ್ಗು ದಿಣ್ಣೆಗಳಿಂದ ವಿಷಮವಾಗಿದ್ದ ಆ ಪ್ರದೇಶವನ್ನು ಸಮವಾಗಿರುವಂತೆ ಮಾಡಿಸಿದನು. ತರುವಾಯ ಆ ವಿಸ್ತಾರವಾದ ಪ್ರದೇಶದಲ್ಲಿ ಚಿತ್ರವಿಚಿತ್ರಗಳಾದ ಮನೆ ಮಂದಿರಗಳು, ಸಭಾಭವನಗಳು, ಪರ್ಣಶಾಲೆಗಳು, ನೂರಾರು ಕೆರೆ, ಬಾವಿ, ಕುಂಟೆ, ಸರೋವರಗಳು, ಗಜಶಾಲೆ, ಅಶ್ವಶಾಲೆಗಳನ್ನೂ ಅತಿಸುಂದರವಾಗಿರುವಂತೆ ನಿರ್ಮಾಣ ಮಾಡಿಸಿದನು. ಅನಂತರ ಆಕಾಶರಾಜನ ಅಪೇಕ್ಷೆಯಂತೆ ಮನೋಹರವಾದ ರತ್ನಗಳಿಂದ ಶೋಭಿಸುವ ಅನೇಕ ಕೊಠಡಿಗಳಿಂದ ಯುಕ್ತವಾದ, ಪುಣ್ಯಕರಗಳೂ, ಆಶ್ಚರ್ಯಕರಗಳೂ ಆದ, ಮುತ್ತುರತ್ನಗಳಿಂದ ತಯಾರಿಸಿದ ಸ್ತಂಭಗಳಿಂದ ರಾಜಿಸುವ ಕಟ್ಟಡಗಳನ್ನೂ, ಸಭಾಮಂದಿರಗಳನ್ನೂ ಸುಮನೋಹರವಾದ ಲಗ್ನಮಂಟಪವನ್ನೂ ನಿರ್ಮಾಣ ಮಾಡಿಸಿದನು. ತದನಂತರ ಪರಮಾತ್ಮನಿಗಾಗಿ ರತ್ನಮಯ ಸ್ತಂಭಗಳು, ಗೋಪುರಗಳು, ರತ್ನಖಚಿತ ತೋರಣಗಳಿಂದ ಶೋಭಾಯಮಾನವಾದ ಧನ-ಕನಕ, ವಸ್ತ್ರಾಭರಣ, ದವಸ-ಧಾನ್ಯಗಳಿಂದ ಪರಿಪೂರ್ಣವಾದ ಅತ್ಯಾಶ್ಚರ್ಯವನ್ನುಂಟುಮಾಡುವ ಶ್ರೀವಾಸುದೇವನ ಅರಮನೆಯನ್ನು ವಿಶ್ವಕರ್ಮನಿಂದ ನಿರ್ಮಾಣ ಮಾಡಿಸಿದನು.

ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೆಂಕಟೇಶಮಹಾತ್ಮೆಯಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು

*॥ ಶ್ರೀವೇಂಕಟೇಶನಿಗೆ ಅರ್ಪಿತವಾಗಲಿ ॥*

ೞ ೠ

# ಹನ್ನೊಂದನೆಯ ಅಧ್ಯಾಯ

*ಮೂಲ— ಶತಾನಂದ ಉವಾಚ -*

**ವಾಸವೇತು ಗತೇ ರಾಜನ್ ವಾಸುದೇವೋಽವದತ್ಸುರಾನ್ ।**

ಅನ್ವಯಾರ್ಥ:— ಶತಾನಂದ ಉವಾಚ = ಶತಾನಂದ ಮುನಿಗಳು ಹೇಳುತ್ತಿದ್ದಾರೆ :- ರಾಜನ್ = ಜನಕರಾಜ! ವಾಸವೇ = ಇಂದ್ರನು, ಗತೇತು = ಆಕಾಶರಾಯನ ಪಟ್ಟಣಕ್ಕೆ ಹೊರಟಮೇಲೆ, ವಾಸುದೇವಃ = ಶ್ರೀಕೃಷ್ಣನು, ಸುರಾನ್ (ಪ್ರತಿ) = ದೇವತೆಗಳನ್ನು ಕುರಿತು, ಅವದತ್ = ಹೇಳಿದನು.

*ಶ್ರೀಭಗವಾನುವಾಚ-*

**ಆಕಾಶರಾಜಸ್ಯ ಸುತಾಸ್ತಿ ಯಾ ಸುರಾಃ[1] ಇಚ್ಛಾಮಿ ಕರ್ತುಂ ಕಿಲ ತತ್ಕರಗ್ರಹಮ್ ।**
**ಅಂಗೀಕೃತಂ ಚೇದ್ಭವದೀಯಮಂಡಲೈಃ ಅಂಗೀಕರೋಮ್ಯದ್ಯ ತು ರಾಜಕನ್ಯಾಮ್॥ 1 ॥**

**ವಾಸುದೇವವಚಃ ಶುತ್ವಾ ವಾಸುದೇವಾತ್ಮಜಾದಿಕಾಃ ।**
**ವಾಕ್ಯಮಾಹುರ್ಮಹಾರಾಜ ವಾಸುದೇವಪರಾಯಣಾಃ ॥ 2 ॥**

ಶ್ರೀಭಗವಾನುವಾಚ = ಶ್ರೀಹರಿಪರಮಾತ್ಮನು ಹೇಳಿದನು:- ಸುರಾಃ = ಎಲೈ ದೇವತೆಗಳಿರಾ, ಆಕಾಶರಾಜಸ್ಯ = ಆಕಾಶರಾಜನ, ಯಾ ಸುತಾ = ಯಾವ ಮಗಳಾದ ಪದ್ಮಾವತಿಯು, ಅಸ್ತಿಕಿಲ = ಇರುವಳಷ್ಟೆ? ತತ್ಕರಗ್ರಹಂ = ಅವಳ ಪಾಣಿಗ್ರಹಣವನ್ನು, ಕರ್ತುಂ = ಮಾಡಲು, ಇಚ್ಛಾಮಿ = ಅಪೇಕ್ಷಿಸುತ್ತೇನೆ. (ಪಾ:- ಸುರೇಶ್ವರಾಃ = ದೇವತಾಶ್ರೇಷ್ಠರೇ, ಆಕಾಶರಾಜ್ಞಃ = ಆಕಾಶರಾಜನ, ತನಯಾಂ = ಮಗಳಾದ, ಪದ್ಮಜಾಂ = ಪದ್ಮಾವತಿಯ, ಪಾಣಿಗ್ರಹಣಂ = ಮದುವೆಯನ್ನು, ತತ್ರ = ನಾರಾಯಣಪುರದಲ್ಲಿ, ಕರೋಮಿ = ಮಾಡಿಕೊಳ್ಳುತ್ತೇನೆ), ಭವದೀಯಮಂಡಲೈಃ = ನಿಮ್ಮ ಸುರವೃಂದದಿಂದ, ಅಂಗೀಕೃತಂಚೇತ್ = ಅಂಗೀಕರಿಸಲ್ಪಟ್ಟಲ್ಲಿ, (ಆಶು = ಬೇಗ) (ಸು)ರಾಜಕನ್ಯಾಂ = ರಾಜಕುಮಾರಿಯಾದ ಪದ್ಮಾವತಿಯನ್ನು, ಅಂಗೀಕರೋಮಿ = ಸ್ವೀಕರಿಸುವೆನು ॥ 1 ॥ ಮಹಾರಾಜ = ಜನಕರಾಯ, ವಾಸುದೇವಾತ್ಮಜಾದಿಕಾಃ-ವಾಸುದೇವ = ಹರಿಯ, ಆತ್ಮಜ = ಪುತ್ರನಾದ ಬ್ರಹ್ಮದೇವನೇ, ಆದಿಕಾಃ = ಮೊದಲಾದವರು, ವಾಸುದೇವವಚಃ = ಶ್ರೀನಿವಾಸನ ಮಾತನ್ನು, ಶ್ರುತ್ವಾ = ಕೇಳಿ, ವಾಸುದೇವಪರಾಯಣಾಃ = ಶ್ರೀಹರಿಯನ್ನು ಆಶ್ರಯಿಸಿರುವ (ನಂಬಿರುವ, ಶ್ರೀಹರಿನಿಷ್ಠರಾದ) ಎಲ್ಲ ದೇವತೆಗಳು, ವಾಕ್ಯಮಾಹುಃ = ಮಾತನಾಡಿದರು. ॥ 2 ॥

*ಬ್ರಹ್ಮಾದಿದೇವಾ ಊಚುಃ ॥*

**ವಯಂ ತು ದಾಸಭಾವೇನ ತಿಷ್ಠಾಮಃ ಪುರುಷೋತ್ತಮ ।**
**ತ್ವತ್ಪ್ರಸಾದಾದ್ವಯಂ[2] ಸರ್ವೇ ಪಶ್ಯಾಮೋಽತ್ರ ಮಹೋತ್ಸವಮ್ ॥ 3 ॥**

---

1. ಪಾ:- ಆಕಾಶರಾಜ್ಞಸ್ತನಯಾಂಸುರೇಶ್ವರಾಃ । ಪಾಣಿಗ್ರಹಂತತ್ರ ಕರೋಮಿ ಪದ್ಮಜಾಂ ।
2. ಪಾ:- ವ್ಯಾಹರ್ತುಮಕ್ಷಮಾಃ ।

ಕೆಲಸದಿಂದ ತೆಗೆದುಹಾಕು. ನನ್ನಲ್ಲಿ ಭಕ್ತಿಯುಳ್ಳ ಪರಿಶುದ್ಧ ಮನಸ್ಸಿನ ಬೇರೊಬ್ಬನನ್ನು ದೇವತಾಗೃಹ ನಿರ್ಮಾಣಾದಿ ಕಾರ್ಯಗಳಿಗೆ ನೇಮಿಸು'' ಎಂದನು. ಶ್ರೀಹರಿಯು ಹೇಳಿದ ಅಪ್ರಿಯವಾಕ್ಯವನ್ನು ಕೇಳಿ ಭಯವಿಹ್ವಲನಾದ ವರ್ಧಕಿಯು ಗೋವಿಂದನಿಗೆ ಸಾಷ್ಟಾಂಗವೆರಗಿ ''ಪೂಜ್ಯನಾದ ಪರಮಾತ್ಮ! ಅಜ್ಞಾನದಿಂದ ನಾನೇನಾದರೂ ನಿನಗಿಷ್ಟವಾದ ಕಾರ್ಯವನ್ನು ಮಾಡದೇ ಹೋಗಿದ್ದಲ್ಲಿ ದಯಮಾಡಿ ನನ್ನ ಆ ದುಷ್ಟತನವನ್ನು ಕ್ಷಮಿಸು ಪ್ರಭು! ಕರುಣಾಸಮುದ್ರನೂ, ಷಡ್ಗುಣೈಶ್ವರ್ಯಪೂರ್ಣನೂ ಆದ ಶ್ರೀಹರಿಯೇ, ದೇವಾಧಿದೇವ, ದೇವತಾಸಾರ್ವಭೌಮ, ಅಲ್ಪನಾದ ನನ್ನ ನಿಮಿತ್ತವಾಗಿ ಏಕಿಷ್ಟು ಕುಪಿತನಾಗುತ್ತಿರುವೆ, ನನ್ನ ಅಪರಾಧವೇನಿದ್ದರೂ ಕ್ಷಮಿಸು ತಂದೆ'' ಎಂದು ಪ್ರಾರ್ಥಿಸಿದನು.

ಆಗ ಶ್ರೀನಿವಾಸನು ''ದೇವೇಂದ್ರ! ನನ್ನ ವಿವಾಹ ಮಹೋತ್ಸವಕ್ಕಾಗಿ ಬಂದಿರುವ ದೇವತೆಗಳು, ಮಹರ್ಷಿಗಳಿಗಾಗಿ ಉತ್ತಮ ವಸತಿ ಸ್ಥಳವು ಆಗಬೇಕಾಗಿದೆ. ಆದ್ದರಿಂದ ಇಲ್ಲಿ ಐವತ್ತು ಯೋಜನ ವಿಸ್ತಾರವಾದ, ಮೂವತ್ತು ಯೋಜನ ಅಗಲವಾದ ಶ್ರೇಷ್ಠವೂ, ಮನೋಹರವೂ, ಆಶ್ಚರ್ಯಕರವೂ ಆದ ದೊಡ್ಡ ಸಭಾಮಂದಿರವನ್ನು ನಿರ್ಮಾಣ ಮಾಡಿಸು'' ಎಂದು ಆಜ್ಞಾಪಿಸಿದನು. ಕೂಡಲೇ ಇಂದ್ರನು ಭಗವಂತನ ಆದೇಶದಂತೆ ವಿಶ್ವಕರ್ಮನಿಂದ ವಿಸ್ತಾರವಾದ ವಿಚಿತ್ರವಾದ ಸಭಾಭವನವನ್ನು ನಿರ್ಮಾಣ ಮಾಡಿಸಿದನು. ಅದರಿಂದ ಸುಪ್ರೀತನಾದ ಶ್ರೀನಿವಾಸನು ''ಇಂದ್ರ! ನೀನೀಗ ತ್ವರೆಯಿಂದ ಈ ದೇವಬಡಗಿಯೊಡನೆ ಆಕಾಶರಾಜನ ಪಟ್ಟಣಕ್ಕೆ ಹೋಗಿ ಮಹಾರಾಜನನ್ನು ಸಮಾಧಾನಪಡಿಸಿ, ವಿವಾಹಾರ್ಥವಾಗಿ ನನ್ನೊಡನೆ ಬರುವ ದೇವತೆಗಳು, ಮಹರ್ಷಿಗಳಿಗೆ ಅವಶ್ಯ ಏರ್ಪಡಿಸಬೇಕಾದ ವಸತಿಸ್ಥಳಾದಿ ವಿಚಾರಗಳನ್ನು ತಿಳಿಸಿ ಅಲ್ಲಿಯೂ ವಿಶ್ವಕರ್ಮನಿಂದ ಮನೆ, ಮಂದಿರ, ಸಭಾಭವನ, ಮುಂತಾದವುಗಳನ್ನು ನಿರ್ಮಾಣಮಾಡಿಸು'' ಎಂದು ಆದೇಶವಿತ್ತನು.

ಶ್ರೀಹರಿಯ ಆಣತಿಯಂತೆ ದೇವೇಂದ್ರನು ವರ್ಧಕಿಯೊಡನೆ ನಾರಾಯಣಪುರಕ್ಕೆ ತೆರಳಿ ಆಕಾಶರಾಜನಿಗೆ ಭಗವಂತನ ಅಪ್ಪಣೆಯನ್ನು ತಿಳಿಸಿ, ಕರ್ತವ್ಯಕರ್ಮವನ್ನು ಬೋಧಿಸಿ ಅವನ ಅನುಮತಿ ಪಡೆದು ಆ ರಾಜಧಾನಿಯನ್ನು ಸುತ್ತಲೂ ಬಹುಯೋಜನಗಳವರೆಗೆ ವಿಸ್ತರಿಸಿ, ಅರಣ್ಯ, ಬೆಟ್ಟ, ಗುಡ್ಡ ಗುಹೆಗಳನ್ನೆಲ್ಲಾ ಕಡಿದು ಹಾಕಿ ತಗ್ಗು ದಿಣ್ಣೆಗಳಿಂದ ವಿಷಮವಾಗಿದ್ದ ಆ ಪ್ರದೇಶವನ್ನು ಸಮವಾಗಿರುವಂತೆ ಮಾಡಿಸಿದನು. ತರುವಾಯ ಆ ವಿಸ್ತಾರವಾದ ಪ್ರದೇಶದಲ್ಲಿ ಚಿತ್ರವಿಚಿತ್ರಗಳಾದ ಮನೆ ಮಂದಿರಗಳು, ಸಭಾಭವನಗಳು, ಪರ್ಣಶಾಲೆಗಳು, ನೂರಾರು ಕೆರೆ, ಬಾವಿ, ಕುಂಟೆ, ಸರೋವರಗಳು, ಗಜಶಾಲೆ, ಅಶ್ವಶಾಲೆಗಳನ್ನೂ ಅತಿಸುಂದರವಾಗಿರುವಂತೆ ನಿರ್ಮಾಣ ಮಾಡಿಸಿದನು. ಅನಂತರ ಆಕಾಶರಾಜನ ಅಪೇಕ್ಷೆಯಂತೆ ಮನೋಹರವಾದ ರತ್ನಗಳಿಂದ ಶೋಭಿಸುವ ಅನೇಕ ಕೊಠಡಿಗಳಿಂದ ಯುಕ್ತವಾದ, ಪುಣ್ಯಕರಗಳೂ, ಆಶ್ಚರ್ಯಕರಗಳೂ ಆದ, ಮುತ್ತುರತ್ನಗಳಿಂದ ತಯಾರಿಸಿದ ಸ್ತಂಭಗಳಿಂದ ರಾಜಿಸುವ ಕಟ್ಟಡಗಳನ್ನೂ, ಸಭಾಮಂದಿರಗಳನ್ನೂ ಸುಮನೋಹರವಾದ ಲಗ್ನಮಂಟಪವನ್ನೂ ನಿರ್ಮಾಣ ಮಾಡಿಸಿದನು. ತದನಂತರ ಪರಮಾತ್ಮನಿಗಾಗಿ ರತ್ನಮಯ ಸ್ತಂಭಗಳು, ಗೋಪುರಗಳು, ರತ್ನಖಚಿತ ತೋರಣಗಳಿಂದ ಶೋಭಾಯಮಾನವಾದ ಧನ-ಕನಕ, ವಸ್ತ್ರಾಭರಣ, ದವಸ-ಧಾನ್ಯಗಳಿಂದ ಪರಿಪೂರ್ಣವಾದ ಅತ್ಯಾಶ್ಚರ್ಯವನ್ನುಂಟುಮಾಡುವ ಶ್ರೀವಾಸುದೇವನ ಅರಮನೆಯನ್ನು ವಿಶ್ವಕರ್ಮನಿಂದ ನಿರ್ಮಾಣ ಮಾಡಿಸಿದನು.

ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೇಂಕಟೇಶಮಹಾತ್ಮೆಯಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು

*॥ ಶ್ರೀವೇಂಕಟೇಶನಿಗೆ ಅರ್ಪಿತವಾಗಲಿ ॥*

ઉ ઈ

# ಹನ್ನೊಂದನೆಯ ಅಧ್ಯಾಯ

*ಮೂಲ— ಶತಾನಂದ ಉವಾಚ -*

**ವಾಸವೇತು ಗತೇ ರಾಜನ್ ವಾಸುದೇವೋಽವದತ್ಸುರಾನ್ ।**

*ಅನ್ವಯಾರ್ಥ:—* ಶತಾನಂದ ಉವಾಚ = ಶತಾನಂದ ಮುನಿಗಳು ಹೇಳುತ್ತಿದ್ದಾರೆ :- ರಾಜನ್ = ಜನಕರಾಜ! ವಾಸವೇ = ಇಂದ್ರನು, ಗತೇತು = ಆಕಾಶರಾಯನ ಪಟ್ಟಣಕ್ಕೆ ಹೊರಟಮೇಲೆ, ವಾಸುದೇವಃ = ಶ್ರೀಕೃಷ್ಣನು, ಸುರಾನ್ (ಪ್ರತಿ) = ದೇವತೆಗಳನ್ನು ಕುರಿತು, ಅವದತ್ = ಹೇಳಿದನು.

*ಶ್ರೀಭಗವಾನುವಾಚ-*

**ಆಕಾಶರಾಜಸ್ಯ ಸುತಾಸ್ತಿ ಯಾ ಸುರಾಃ[1] ಇಚ್ಛಾಮಿ ಕರ್ತುಂ ಕಿಲ ತತ್ಕರಗ್ರಹಮ್ ।**
**ಅಂಗೀಕೃತಂ ಚೇದ್ಭವದೀಯಮಂಡಲ್ಯೈಃ ಅಂಗೀಕರೋಮ್ಯದ್ಯ ತು ರಾಜಕನ್ಯಾಮ್॥ 1 ॥**

**ವಾಸುದೇವವಚಃ ಶುತ್ವಾ ವಾಸುದೇವಾತ್ಮಜಾದಿಕಾಃ ।**
**ವಾಕ್ಯಮಾಹುರ್ಮಹಾರಾಜ ವಾಸುದೇವಪರಾಯಣಾಃ ॥ 2 ॥**

ಶ್ರೀಭಗವಾನುವಾಚ = ಶ್ರೀಹರಿಪರಮಾತ್ಮನು ಹೇಳಿದನು:- ಸುರಾಃ = ಎಲೈ ದೇವತೆಗಳಿರಾ, ಆಕಾಶರಾಜಸ್ಯ = ಆಕಾಶರಾಜನ, ಯಾ ಸುತಾ = ಯಾವ ಮಗಳಾದ ಪದ್ಮಾವತಿಯು, ಅಸ್ತಿಕಿಲ = ಇರುವಳಷ್ಟೆ? ತತ್ಕರಗ್ರಹಂ = ಅವಳ ಪಾಣಿಗ್ರಹಣವನ್ನು, ಕರ್ತುಂ = ಮಾಡಲು, ಇಚ್ಛಾಮಿ = ಅಪೇಕ್ಷಿಸುತ್ತೇನೆ. (ಪಾ:- ಸುರೇಶ್ವರಾಃ = ದೇವತಾಶ್ರೇಷ್ಠರೇ, ಆಕಾಶರಾಜ್ಞಃ = ಆಕಾಶರಾಜನ, ತನಯಾಂ = ಮಗಳಾದ, ಪದ್ಮಜಾಂ = ಪದ್ಮಾವತಿಯ, ಪಾಣಿಗ್ರಹಣಂ = ಮದುವೆಯನ್ನು, ತತ್ರ = ನಾರಾಯಣಪುರದಲ್ಲಿ, ಕರೋಮಿ = ಮಾಡಿಕೊಳ್ಳುತ್ತೇನೆ), ಭವದೀಯಮಂಡಲ್ಯೈಃ = ನಿಮ್ಮ ಸುರವೃಂದದಿಂದ, ಅಂಗೀಕೃತಂಚೇತ್ = ಅಂಗೀಕರಿಸಲ್ಪಟ್ಟಲ್ಲಿ, (ಆಶು = ಬೇಗ) (ಸು)ರಾಜಕನ್ಯಾಂ = ರಾಜಕುಮಾರಿಯಾದ ಪದ್ಮಾವತಿಯನ್ನು, ಅಂಗೀಕರೋಮಿ = ಸ್ವೀಕರಿಸುವೆನು ॥ 1 ॥ ಮಹಾರಾಜ = ಜನಕರಾಯ, ವಾಸುದೇವಾತ್ಮಜಾದಿಕಾಃ-ವಾಸುದೇವ = ಹರಿಯ, ಆತ್ಮಜ = ಪುತ್ರನಾದ ಬ್ರಹ್ಮದೇವನೇ, ಆದಿಕಾಃ = ಮೊದಲಾದವರು, ವಾಸುದೇವವಚಃ = ಶ್ರೀನಿವಾಸನ ಮಾತನ್ನು, ಶ್ರುತ್ವಾ = ಕೇಳಿ, ವಾಸುದೇವಪರಾಯಣಾಃ = ಶ್ರೀಹರಿಯನ್ನು ಆಶ್ರಯಿಸಿರುವ (ನಂಬಿರುವ, ಶ್ರೀಹರಿನಿಷ್ಠರಾದ) ಎಲ್ಲ ದೇವತೆಗಳು, ವಾಕ್ಯಮಾಹುಃ = ಮಾತನಾಡಿದರು. ॥ 2 ॥

*ಬ್ರಹ್ಮಾದಿದೇವಾ ಊಚುಃ ॥*

**ವಯಂ ತು ದಾಸಭಾವೇನ ತಿಷ್ಠಾಮಃ ಪುರುಷೋತ್ತಮ ।**
**ತ್ವತ್ಪ್ರಸಾದಾದ್ವಯಂ[2] ಸರ್ವೇ ಪಶ್ಯಾಮೋಽತ್ರ ಮಹೋತ್ಸವಮ್ ॥ 3 ॥**

1. ಪಾ:- ಆಕಾಶರಾಜ್ಞಸ್ತನಯಾಂಸುರೇಶ್ವರಾಃ । ಪಾಣಿಗ್ರಹಂತತ್ರ ಕರೋಮಿ ಪದ್ಮಜಾಂ ।
2. ಪಾ:- ವ್ಯಾಹರ್ತುಮಕ್ಷಮಾಃ ।

ಬ್ರಹ್ಮಾದಿದೇವಾ ಊಚುಃ = ಬ್ರಹ್ಮಾದಿ ದೇವತೆಗಳು ಹೇಳಿದರು : ಪುರುಷೋತ್ತಮ = ಕ್ಷರಾಕ್ಷರಪುರುಷರಲ್ಲಿಶ್ರೇಷ್ಠನಾದ, ಹೇ ಶ್ರೀನಿವಾಸ, ವಯಂತು = ನಾವು, ದಾಸಭಾವೇನ = ನಿನ್ನ ಸೇವಕತನದಿಂದ, ತಿಷ್ಠಾಮಃ = ಇರುವವರಾಗಿದ್ದೇವೆ. ಸರ್ವೇ = ನಾವೆಲ್ಲರೂ, (ಪಾ :- ವ್ಯಾಹರ್ತುಮಕ್ಷಮಾಃ = ಹೇಳಲು ಸಮರ್ಥರಲ್ಲ) ತ್ವತ್ಪ್ರಸಾದಾತ್ = ನಿನ್ನ ಅನುಗ್ರಹದಿಂದ, ಅತ್ರ = ಇಲ್ಲಿ, ಮಹೋತ್ಸವಂ = ನಿನ್ನ ಕಲ್ಯಾಣಮಹೋತ್ಸವವನ್ನು, ಪಶ್ಯಾಮಃ = ನೋಡುತ್ತೇವೆ ।। 3 ।।

*ಶಂಕರ ಉವಾಚ -*

**ವಿನೋದವಚನಂ ಕೃಷ್ಣ ಭಾಷಸೇ ಪ್ರಾಕೃತೋ ಯಥಾ ।**
**ಮನಸಸ್ತೇ[3] ಪ್ರಶಸ್ತಂ ಚೇತ್[4] ಕ್ರಿಯತಾಮಿತಿ ಚಾಬ್ರವೀತ್ ।। 4 ।।**

ಶಂಕರ ಉವಾಚ = ರುದ್ರದೇವನು ಮಾತನಾಡುತ್ತಿದ್ದಾನೆ. ಕೃಷ್ಣ = ಹೇ ಶ್ರೀನಿವಾಸ, ಪ್ರಾಕೃತೋಯಥಾ = ಪ್ರಕೃತಿಗೆ ಸಂಬಂಧಪಟ್ಟ ಮಾನವನಂತೆ, ವಿನೋದವಚನಂ = ಪರಿಹಾಸವಚನವನ್ನು, ಭಾಷಸೇ = ಹೇಳುತ್ತಿದ್ದೀಯೇ! ತೇ = ನಿನ್ನ, ಮನಸಃ = ಮನಸ್ಸಿಗೆ, ಪ್ರಶಸ್ತಂ ಚೇತ್ (ಪಾ :- ಸ್ಯಾತ್) = ಪ್ರಶಸ್ತವೆನಿಸಿದರೆ (ಪ್ರಶಸ್ತವಾದಲ್ಲಿ), ಕ್ರಿಯತಾಂ = ಮಾಡುವವನಾಗು (ಮಾಡಿಕೋ), ಇತಿ ಚ = ಹೀಗೆಂದು, ಅಬ್ರವೀತ್ = ಹೇಳಿದನು ।। 4 ।।

**ಶಂಕರಸ್ಯ ವಚಃ ಶ್ರುತ್ವಾ ಪ್ರಶಶಂಸ ಹಸನ್ ಹರಿಃ ।**
**ತತಶ್ಚತುರ್ಮುಖಃ ಪ್ರಾಹ ಶೇಷಾಚಲಪತಿಂ ಪ್ರತಿ ।। 5 ।।**

ಹರಿಃ = ಶ್ರೀನಿವಾಸನು, ಶಂಕರಸ್ಯ = ರುದ್ರದೇವನ, ವಚಃ = ನುಡಿಯನ್ನು, ಶ್ರುತ್ವಾ = ಕೇಳಿ, ಹಸನ್ = ನಗುತ್ತಾ, ಪ್ರಶಂಸ = ಅವನನ್ನು ಶ್ಲಾಘಿಸಿದನು, ತತಃ = ಆ ಬಳಿಕ, ಚತುರ್ಮುಖಃ = ನಾಲ್ಮೊಗನಾದ ಬ್ರಹ್ಮದೇವನು, ಶೇಷಾಚಲ ಪತಿಂಪ್ರತಿ = ಶೇಷಗಿರಿಗೆ ಸ್ವಾಮಿಯಾದ ಶ್ರೀನಿವಾಸನನ್ನು ಕುರಿತು, ಪ್ರಾಹ = ಹೇಳಿದನು ।। 5 ।।

*ಬ್ರಹ್ಮೋವಾಚ-*

**ಸರ್ವಜ್ಞಸ್ತ್ವಂ ದಯಾಸಾರ ಸತ್ಯಸಂಕಲ್ಪವಾನಸಿ ।**
**ಅಷ್ಟವರ್ಗಂ ತತಃ ಕಾರ್ಯಂ ವಿವಾಹಾತ್ಪೂರ್ವಮೇವ ಹಿ ।। 6 ।।**

ಬ್ರಹ್ಮೋವಾಚ = ಬ್ರಹ್ಮದೇವನು ಹೇಳಿದನು : ದಯಾಸಾರ = ಕರುಣಾಶಾಲಿಯಾದ ಶ್ರೀಹರಿಯೇ, ತ್ವಂ = ನೀನು, ಸರ್ವಜ್ಞಃ = ಎಲ್ಲವನ್ನೂ ಬಲ್ಲವನು, ಸತ್ಯಸಂಕಲ್ಪವಾನ್ = ಸತ್ಯಸಂಕಲ್ಪನು, ಅಸಿ = ಆಗಿದ್ದೀಯೆ, ತತಃ = (ಆದಕಾರಣ) ಆನಂತರ, ವಿವಾಹಾತ್ = ಮದುವೆಗೆ, ಪೂರ್ವಮೇವ = ಮೊದಲೇ, ಅಷ್ಟವರ್ಗಂ = ಮಂಗಳಾಭ್ಯಂಜನ ಪೂರ್ವಕವಾಗಿ, ಗಣಪತಿಪೂಜೆ, ವರುಣ-ನವಗ್ರಹ-ನಾಂದೀದೇವತೆಗಳ ಪೂಜೆ, ಇಷ್ಟದೇವತೆ, ಕುಲದೇವತೆಗಳ ಪೂಜೆ, ಗೌದಾನಿಕವ್ರತ ಮತ್ತು ಸಮಾವರ್ತನೆಗಳೆಂಬ (ಎಂಟು ವಿಧವಾದ), ಅಷ್ಟವರ್ಗವೆಂಬ ಕರ್ಮವನ್ನು, ಕಾರ್ಯಂ = ಮಾಡಬೇಕು, ಹಿ = ಇದು ಪ್ರಸಿದ್ಧವು ।। 6 ।।

**ತಸ್ಮಾದಾಜ್ಞಾಂ ದೇಹಿ ಮಮ ಪುಣ್ಯಾಹೇ ಪುರುಷೋತ್ತಮ ।**
**ಸ ಪುತ್ರವಚನಂ ಶ್ರುತ್ವಾ ವಸಿಷ್ಠಂ ಮುನಿಮಾನಯತ್ ।। 7 ।।**

3. ಪಾ:- ಮನೋ ಯದಿ, 4. ಪಾ:- ಸ್ಯಾತ್ ।

ತಸ್ಮಾತ್ = ಆದುದರಿಂದ, ಪುರುಷೋತ್ತಮ = ಪುರುಷಶ್ರೇಷ್ಠನಾದ ಶ್ರೀಹರಿಯೇ, ಪುಣ್ಯಾಹೇ = ಪುಣ್ಯಾಹಾಚರಣ ವಿಷಯದಲ್ಲಿ, ಮಮ = ನನಗೆ, ಆಜ್ಞಾಂ = ಅಪ್ಪಣೆಯನ್ನು, ದೇಹಿ = ಕೊಡು, ಸಃ = ಶ್ರೀನಿವಾಸನು, ಪುತ್ರವಚಃ = ಮಗನ ಮಾತನ್ನು, ಶ್ರುತ್ವಾ = ಕೇಳಿ, ವಸಿಷ್ಠಂ ಮುನಿಂ = ವಸಿಷ್ಠಮುನಿಯನ್ನು, ಆನಯತ್ = ಕರೆಸಿದನು ॥ 7 ॥

**ವಸಿಷ್ಠಂ ಚ ಮಹಾಭಾಗಂ ಪೌರೋಹಿತ್ಯೇ ನ್ಯಯೋಜಯತ್ ।**
**ಯಜುಶ್ಶಾಖ್ಯೈರ್ಮಹಾಮಂತ್ರೈಃ ಕರ್ತವ್ಯಂ ಸ್ವಸ್ತಿವಾಚನಮ್ ॥ 8 ॥**

**ಸರ್ವೇಷಾಮಪಿ ದೇವಾನಾಂ ಯಜಮಾನೋ ಭವಾನಿತಿ ।**
**ದೇವಾನಾಂ ಚ ಋಷೀಣಾಂ ಚ ಮಾನನೇ ಶಂಕರಂ ನ್ಯಧಾತ್ ॥ 9 ॥**

ಚ = ಮತ್ತು, ಯಜುಶ್ಶಾಖ್ಯೈಃ = ಯಜುರ್ವೇದದಲ್ಲಿ ಉಕ್ತವಾದ, ಮಹಾಮಂತ್ರೈಃ = ವಿಶೇಷ (ಮಹಾ) ಮಂತ್ರಗಳಿಂದ, ಸ್ವಸ್ತಿವಾಚನಂ = ಪುಣ್ಯಾಹವು, ಕರ್ತವ್ಯಂ = ಮಾಡತಕ್ಕದ್ದು, ಸರ್ವೇಷಾಂ = ಸಮಸ್ತರಾದ, ದೇವಾನಾಂ = ದೇವತೆಗಳಿಗೆ, ಭವಾನ್ = ಬ್ರಹ್ಮದೇವ! ನೀನು ಯಜಮಾನನು, ಇತಿ = ಹೀಗೆ ಹೇಳಿ, ಮಹಾಭಾಗಂ = ಮಹನೀಯನಾದ, ವಸಿಷ್ಠಂ = ವಸಿಷ್ಠಮುನಿಯನ್ನು, ಪೌರೋಹಿತ್ಯೇ = ವಿವಾಹಕ್ಕೆ ಸಂಬಂಧಿಸಿದ ಪೌರೋಹಿತ್ಯ ಕಾರ್ಯದಲ್ಲಿ, ನ್ಯಯೋಜಯತ್ = ನೇಮಕ ಮಾಡಿದನು, ಚ = ಮತ್ತು, (ಶಂಕರಂ = ರುದ್ರದೇವನನ್ನು), ದೇವಾನಾಂ = ದೇವತೆಗಳನ್ನು, ಋಷೀಣಾಂಚ = ಸಕಲ ಋಷಿಗಳನ್ನೂ ಸಹ, ಮಾನನೇ = ಗೌರವಿಸುವ ಕಾರ್ಯದಲ್ಲಿ, ನ್ಯಧಾತ್ = ನಿಯಮಿಸಿ ಇಟ್ಟನು ॥ 8-9 ॥

**ದೇವಾಹ್ವಾನೇ ಕುಮಾರಂ ತು ಪ್ರತ್ಯುತ್ಥಾನೇ ಚ ಮನ್ಮಥಮ್ ।**
**ದತ್ವಾ ತೇಷಾಂ ವೀಟಿಕಾಂ ತು ಕೃಷ್ಣವರ್ತ್ಮಾನಮಾಹ್ವಯತ್ ॥ 10 ॥**

ದೇವಾಹ್ವಾನೇ = ದೇವತೆಗಳನ್ನು ಕರೆದುತರುವ ಉದ್ಯೋಗದಲ್ಲಿ, ಕುಮಾರಂ ತು = ಷಣ್ಮುಖನನ್ನೂ, ಪ್ರತ್ಯುತ್ಥಾನೇ = ಆಗಮಿಸಿದ ದೇವತೆಗಳಿಗೆ ಎದ್ದು ನಿಂತು ಮರ್ಯಾದೆ ಮಾಡುವ ಕೆಲಸದಲ್ಲಿ (ಅಥವಾ ದೇವತೆಗಳನ್ನು ಗೌರವದಿಂದ ಎಬ್ಬಿಸಿ ಬೀಳ್ಕೊಡುವ ಕಾರ್ಯದಲ್ಲಿ), ಮನ್ಮಥಂ = ಮನ್ಮಥನನ್ನು, ನ್ಯಧಾತ್ = ನಿಯಮಿಸಿಟ್ಟನು ; ತೇಷಾಂ = ವಸಿಷ್ಠ-ರುದ್ರ-ಷಣ್ಮುಖ-ಮನ್ಮಥರಿಗೆ, ವೀಟಿಕಾಂ = ಆಯಾ ಕಾರ್ಯವನ್ನು ನಿರ್ವಹಿಸಲು ತಾಂಬೂಲವನ್ನು, ದತ್ವಾ = ಕೊಟ್ಟು, ಕೃಷ್ಣವರ್ತ್ಮಾನಂ = ಅಗ್ನಿದೇವನನ್ನು, ಆಹ್ವಯತ್ = ಆಹ್ವಾನಿಸಿದನು ॥ 10 ॥

**ಗೃಹಾಣ ವೀಟಿಕಾಂ ಚಾತ್ರ ಪಾಕಾರ್ಥಂ ಹವ್ಯವಾಹನ ।**
**ಋಷೀಣಾಂ ಸರ್ವದೇವಾನಾಂ ತವ ಪಾಕಸ್ತು ಸಂಮತಃ ॥ 11 ॥**

**ತಸ್ಮಾತ್ಪಾಕಂ ಕುರುಷ್ವ ತ್ವಂ ಸ್ವಧಾಸ್ವಾಹಾಸಮನ್ವಿತಃ ।**
**ಇತಿ ಶಿಷ್ಟೋ[5] ಯಜ್ಞಮೂರ್ತಿ ಸ್ತಥಾಸ್ತ್ವಿತ್ಯಬ್ರವೀದ್ಧರಿಮ್ ॥ 12 ॥**

ಹವ್ಯವಾಹನ = ಅಗ್ನಿದೇವ, ಅತ್ರ = ಈ ಮದುವೆಯ ಸಂದರ್ಭದಲ್ಲಿ, ತ್ವಂ = ನೀನು, ಪಾಕಾರ್ಥಂ = ಅಡುಗೆ ಕಾರ್ಯ ನಿರ್ವಹಣೆಗೆ, ವೀಟಿಕಾಂ = ತಾಂಬೂಲವನ್ನು, ಗೃಹಾಣ = ಸ್ವೀಕರಿಸು, ಸರ್ವದೇವಾನಾಂ = ಸಮಸ್ತ

5. ಪಾ: ಸಂಭಾಷಿತೋ.

ದೇವತೆಗಳಿಗೆ, ಚ = ಮತ್ತು, ಋಷೀಣಾಂ = ಋಷಿಗಳಿಗೆ, ತವ = ನಿನ್ನ, ಪಾಕಸ್ತು = ಅಡುಗೆಯು, ಸಂಮತಃ = ಸಮಾಧಾನಕರವಾಗಿದೆ (ಒಪ್ಪಿಗೆಯಾಗಿರುತ್ತದೆ), ತಸ್ಮಾತ್ = ಆದುದರಿಂದ, ತ್ವಂ = ನೀನು, ಸ್ವಧಾಸ್ವಾಹಾಸಮನ್ವಿತಃ = ನಿನ್ನ ಪತ್ನಿಯರಾದ, ಸ್ವಧಾ-ಸ್ವಾಹಾದೇವಿಯರಿಂದ ಸಹಿತನಾಗಿ, ಪಾಕಂ = ಅಡುಗೆಯನ್ನು, ಕುರುಷ್ವ = ಮಾಡು, ಇತಿ = ಹೀಗೆ, ಶಿಷ್ಟಃ = ಆಜ್ಞಾಪಿಸಲ್ಪಟ್ಟ (ಪಾ:- ಸಂಶಾಸಿತಃ = ಆಜ್ಞಪ್ತನಾದ), ಯಜ್ಞಮೂರ್ತಿಃ = ವೈಶ್ವಾನರನು, ಹರಿಂ = ಶ್ರೀಹರಿಯನ್ನು ಕುರಿತು, ತಥಾಸ್ತ್ವಿತಿ = ಹಾಗೆಯೇ ಆಗಲಿ ಎಂದು, ಅಬ್ರವೀತ್ = ಹೇಳಿದನು ॥ 11-12 ॥

**ತತಸ್ಸ ಪ್ರಾಹ ವರುಣಂ ಜಲಾರ್ಥಂ ಸರ್ವದೇಹಿನಾಮ್ ।**
**ದುಷ್ಟಾನಾಂ ದಂಡನೇ ರಾಜನ್ ಶಿಷ್ಟಾನಾಂ ಪರಿಪಾಲನೇ ॥ 13 ॥**

ರಾಜನ್ = ಜನಕರಾಯ, ತತಃ = ಆ ತರುವಾಯ, ಸಃ = ಶ್ರೀನಿವಾಸನು, ಸರ್ವದೇಹಿನಾಂ = ಸಕಲಜೀವಿಗಳಿಗೂ (ಎಲ್ಲರಿಗೂ), ಜಲಾರ್ಥಂ = ನೀರಿಗೋಸ್ಕರವಾಗಿ, ವರುಣಂ = ವರುಣನನ್ನು ಕುರಿತು, ಪ್ರಾಹ = ಹೇಳಿದನು. ದುಷ್ಟಾನಾಂ = ದುಷ್ಟರಾದವರ, ದಂಡನೇ = ದಂಡಿಸುವ ಕೆಲಸದಲ್ಲಿ, ಶಿಷ್ಟಾನಾಂ = ಸಾಧುಜನರ (ಯೋಗ್ಯರ), ಪರಿಪಾಲನೇ = ಕಾಪಾಡುವ ಕೆಲಸದಲ್ಲಿ ॥ 13 ॥

**ಯಮಂ ಸಂಕಲ್ಪಯಾಮಾಸ ಸುಗಂಧೇ ವಾಯುಮಾದಿಶತ್ ।**
**ಧನದಾನೇ ಬ್ರಾಹ್ಮಣಾನಾಂ[6] ವಸ್ತ್ರಾಲಂಕಾರ ದಾಪನೇ[7] ॥ 14 ॥**

**ಕುಬೇರಂ ಯೋಜಯಾಮಾಸ ಭಗವಾನ್ ನೃಪಸತ್ತಮ ।**
**ಸ[8] ದೀಪಧಾರಣೇ ರಾಜನ್ನಿಶಾಕರಮಯೋಜಯತ್ ॥ 15 ॥**

**ವಸೂನ್ ಸಂದೇಶಯಾಮಾಸ ಭಾಂಡಾನಾಂ ಶುದ್ಧಿಕಾರಣಾತ್ ।**
**ಗ್ರಹಾಂಶ್ಚ ದ್ರೋಣಪಾತ್ರೇಷು ನ್ಯಯೋಜಯದಹಿಮರ್ದನಃ[9] ॥ 16 ॥**

ಯಮಂ = ಯಮಧರ್ಮರಾಜನನ್ನು, ಸಂಕಲ್ಪಯಾಮಾಸ = ಸಂಕಲ್ಪಿಸಿ ಗೊತ್ತು ಮಾಡಿದನು, ಸುಗಂಧೇ = ಪರಿಮಳದ್ರವ್ಯ ವಿಚಾರದಲ್ಲಿ, ವಾಯುಂ = ವಾಯುದೇವನನ್ನು, ಆದಿಶತ್ = ಆದೇಶಿಸಿದನು, ಬ್ರಾಹ್ಮಣಾನಾಂ (ಪಾ :- ಬ್ರಾಹ್ಮಣಾರ್ಥೇ) = ಬ್ರಾಹ್ಮಣರಿಗೆ, ಧನಧಾನೇ = ದಕ್ಷಿಣೆಯನ್ನು ಕೊಡುವುದು, ವಸ್ತ್ರಾಲಂಕಾರದಾಪನೆ (ಪಾ:-ಭೂಷಣೇ) = ವಸ್ತ್ರಗಳು, ಆಭರಣಗಳನ್ನು ಕೊಡುವ ಕಾರ್ಯದಲ್ಲಿ, ನೃಪಸತ್ತಮ = ಎಲೈ ಜನಕರಾಜ! ಭಗವಾನ್ = ಪೂಜ್ಯ ಹರಿಯು, ಕುಬೇರಂ = ಕುಬೇರನನ್ನು, ಯೋಜಯಾಮಾಸ = ನಿಯೋಜಿಸಿದನು, ರಾಜನ್ = ಎಲೈ ಜನಕರಾಜ, ಸಃ = ಶ್ರೀ ಹರಿಯು (ಪ್ರ)ದೀಪಧಾರಣೇ = ದೀಪ ಹಿಡಿಯುವುದೇ ಮೊದಲಾದ ಕಾರ್ಯದಲ್ಲಿ, ನಿಶಾಕರಂ = ಚಂದ್ರನನ್ನು, ಅಯೋಜಯತ್ = ನೇಮಿಸಿದನು ॥ 14-15 ॥ ಅಹಿಮರ್ದನಃ = ಕಾಳಿಂಗಮರ್ದನನಾದ (ಪಾ:-ಅರಿಂದಮಃ = ಶತ್ರುಮರ್ದಕನಾದ) ಹರಿಯು, ಭಾಂಡಾನಾಂ = ಪಾತ್ರೆಗಳ (ಭಾಂಡೆಗಳ), ಶುದ್ಧಿಕಾರಣಾತ್ = ಶುದ್ಧಗೊಳಿಸಲು (ತೊಳೆಯುವ ಕಾರ್ಯದಲ್ಲಿ), ವಸೂನ್ = ಅಷ್ಟವಸುಗಳನ್ನು, ಸಂದೇಶಯಾಮಾಸ = ನಿಯಮಿಸಿದನು (ಆಜ್ಞಾಪಿಸಿದನು), ದ್ರೋಣಪಾತ್ರೇಷು = ನಾಲ್ಕು ಕೊಳಗ ಧಾನ್ಯ ಬೇಯಿಸುವ, ಅದರ ಶುದ್ಧೀಕರಣ ವಿಷಯದಲ್ಲಿ, ಗ್ರಹಾಂಶ್ಚ = ಸೂರ್ಯಾದಿ ಗ್ರಹಗಳನ್ನು, ನ್ಯಯೋಜಯತ್ = ನಿಯೋಜಿಸಿದನು ॥ 16 ॥

6 ಪಾ: ಬ್ರಾಹ್ಮಣಾರ್ಥೇ. 7. ಪಾ: ವಸ್ತ್ರಾಲಂಕಾರಭೂಷಣೇ. 8. ಪಾ: ಪ್ರದೀಪಧಾರಣೇ. 9. ಅರಿಂದಮಃ.

**ಏವಂ ಸಂಶಾಸಿತಾಸ್ಸರ್ವೇ ಪುರಾಣಪುರುಷೇಣ ಚ ।**
**ಆಜ್ಞಾಮಾದಾಯ ನಿತರಾಂ ಸರ್ವೇ ಸ್ವಸ್ಥಾಸ್ಸ್ವಕರ್ಮಸು ॥ 17 ॥**

ಪುರಾಣಪುರುಷೇಣ = ಅನಾದಿ ಪುರುಷನಾದ ಶ್ರೀಹರಿಯಿಂದ, ಏವಂ = ಈ ಪ್ರಕಾರವಾಗಿ, ಸಂಶಾಸಿತಾಃ = ಆಜ್ಞಾಪಿತರಾದ, ಸರ್ವೇ = ಸಕಲರೂ, ಸ್ವಕರ್ಮಸು = ತಮ್ಮ ಕಾರ್ಯಗಳಲ್ಲಿ, ನಿತರಾಂಸ್ವಸ್ಥಾಃ = ಮುತುವರ್ಜಿಯಿಂದ ಇರುವವರಾದರು ॥ 17 ॥

**ತತೋ ವಾಕ್ಯಮುವಾಚೇದಂ ಬ್ರಹ್ಮಾ ಲೋಕಪಿತಾಮಹಃ ।**

*ಬ್ರಹ್ಮೋವಾಚ-*

**ಮಜ್ಜನಂ ಕುರು ಗೋವಿಂದ ಮಂಗಲಂ ಮಧುಸೂದನ ॥ 18 ॥**

ತತಃ = ಅನಂತರ, ಲೋಕಪಿತಾಮಹಃ = ಸಕಲಲೋಕ ಪಿತಾಮಹನಾದ (ಸರ್ವಜನರಿಗೆ ತಾತನಾದ), ಬ್ರಹ್ಮಾ = ಬ್ರಹ್ಮದೇವನು, ಇದಂ ವಾಕ್ಯಂ = ಈ ಮಾತನ್ನು, ಉವಾಚ = ಹೇಳಿದನು. ಬ್ರಹ್ಮೋವಾಚ = ಬ್ರಹ್ಮದೇವನು ಹೇಳಲಾರಂಭಿಸಿದನು :- ಗೋವಿಂದ = ಶ್ರೀಹರಿಯೇ, ಮಧುಸೂದನ = ಮಧುನಾಮಕ ದೈತ್ಯಸಂಹಾರಕನಾದವನೇ, ಮಂಗಳಂ ಮಜ್ಜನಂ = ಮಂಗಳ ಸ್ನಾನವನ್ನು (ಮಂಗಳಕರ ಅಭ್ಯಂಜನವನ್ನು), ಕುರು = ಮಾಡು ॥ 18 ॥

**ಪುಣ್ಯಾಹಪೂರ್ವಕರ್ಮಾಣಿ ಸ್ವೇಷ್ಟದೇವ ಪ್ರಪೂಜನಮ್[10] ।**
**ಕುಲದೇವಪ್ರತಿಷ್ಠಾಂ ಚ ಸಾಂಗಂ ಕುರು ರಮಾಪತೇ ॥ 19 ॥**

ರಮಾಪತೇ = ಶ್ರೀಲಕ್ಷ್ಮೀರಮಣ! ಪುಣ್ಯಾಹಪೂರ್ವಕರ್ಮಾಣಿ = ಪುಣ್ಯಾಹ ಮೊದಲಾದ ಕರ್ಮಗಳನ್ನು ; ಸ್ವ = ನಿನ್ನ, ಇಷ್ಟದೇವ ಪ್ರಪೂಜನಂ = ಇಷ್ಟದೇವತೆಯ ಪೂಜೆಯನ್ನೂ (ಪಾ- ನಿವೇದನಂ = ನೈವೇದ್ಯವನ್ನು) ಕುಲದೇವಪ್ರತಿಷ್ಠಾಂ ಚ = ಕುಲದೇವತೆಯ ಸ್ಥಾಪನೆಯನ್ನೂ ಸಹ, ಸಾಂಗಂ = ಸಾಂಗವಾಗಿ (ಪೂರ್ಣವಾಗಿ), ಕುರು = ಮಾಡು ॥ 19 ॥

**ಸ ಪುತ್ರವಚನಂ ಶ್ರುತ್ವಾ ಸಸ್ಮಾರ ಜಗದೀಶ್ವರಃ ।**
**ರಮಾಂ ರಾಜೀವನಯನಾಂ ಕರವೀರಪುರಾಲಯಾಮ್ ॥ 20 ॥**

ಪುತ್ರವಚನಂ = ಮಗನಾದ ಬ್ರಹ್ಮನ ಮಾತನ್ನು, ಶ್ರುತ್ವಾ = ಕೇಳಿ, ಜಗದೀಶ್ವರಃ = ಜಗತ್ತಿಗೆ ಪ್ರಭುವಾದ, ಸಃ = ಶ್ರೀನಿವಾಸನು, ಕರವೀರಪುರಾಲಯಾಂ = ಕೊಲ್ಲಾಪುರವೇ ಮನೆಯಾಗುಳ್ಳ (ಕೊಲ್ಲಾಪುರದಲ್ಲಿ ವಾಸವಾಗಿರುವ), ರಾಜೀವನಯನಾಂ = ಕಮಲನಯನಳಾದ, ರಮಾಂ = ಲಕ್ಷ್ಮೀದೇವಿಯನ್ನು, ಸಸ್ಮಾರ = ನೆನೆಸಿಕೊಂಡನು ॥ 20 ॥

**ನಿತ್ಯಾವಿಯೋಗಿನೀಂ ರಾಜನ್ನರವನ್ನರಸತ್ತಮಃ ।**
**ರುರೋದ ಲೋಕರೀತ್ಯೈವ ಭಗವಾನ್ ಲೌಕಿಕೀತನುಃ ॥ 21 ॥**

ನೃಪಸತ್ತಮ = ರಾಜಶ್ರೇಷ್ಠನಾದ, ರಾಜನ್ = ಜನಕರಾಯ, ನಿತ್ಯಾವಿಯೋಗಿನೀಂ = ಸರ್ವದಾ ಎಡೆಬಿಡದೇ ತನ್ನ ಜತೆಯಲ್ಲಿಯೇ ಇರುವ (ಪತಿಯ ವಿಯೋಗವೇ ಇಲ್ಲದಿರುವ) ಲಕ್ಷ್ಮೀದೇವಿಯನ್ನು (ಸ್ಮೃತ್ವಾ = ನೆನೆದು) ಭಗವಾನ್ =

10. ನಿವೇದನಂ

ಪೂಜ್ಯನಾದ, ಲೌಕಿಕೀತನುಃ = ಮಾನವನಂತೆ ಶರೀರ ಧರಿಸಿರುವ ಶ್ರೀನಿವಾಸನು, ನರವತ್ = ಮಾನವನಂತೆ, ರುರೋದ = ಅತ್ತನು ॥ 21 ॥

**ನ ಶೋಭತೇ ಸಭಾ ದಿವ್ಯಾ ತಯಾ ವಿರಹಿತಾ ಸುತ ।**
**ಭವಾನಹಂ ಮಹಾಪ್ರಾಜ್ಞ ದೇವಾಶ್ಚ ಸಪರಿಗ್ರಹಾಃ ॥ 22 ॥**

**ನ ಶೋಭಂತೇ ಯಥಾಕಾಶೇ ತಾರಾಸ್ತಾರಾಪತಿಂ ವಿನಾ ।**
**ಅಪಾದಪಂ ಯಥಾರಣ್ಯಮಪಕ್ಷಾಶ್ಚ ವಿಹಂಗಮಾಃ ॥ 23 ॥**

**ಅಫಲಾಶ್ಚ ಯಥಾ ವೃಕ್ಷಾಃ ಅಧನಾಃ ಸುಹೃದೋ ಯಥಾ ।**
**ತಥಾ ವಯಂ ಮಹಾಲಕ್ಷ್ಮ್ಯಾ ರಹಿತಾ ಕಮಲಾಸನ ॥ 24 ॥**

ನಂತರ, ಸುತ = ಕುಮಾರ, ಮಹಾಪ್ರಾಜ್ಞ = ಅತಿಶಯ ಬುದ್ಧಿಶಾಲಿಯಾದ ಬ್ರಹ್ಮದೇವ, ತಯಾ = ಆ ಲಕ್ಷ್ಮೀದೇವಿಯಿಂದ, ವಿರಹಿತಾ = ರಹಿತರಾಗಿರುವ (ಇಲ್ಲದಿರುವ), ದಿವ್ಯಾ = ದೇವತೆಗಳಿಗೆ ಯೋಗ್ಯವಾದ, ಸಭಾ = ಈ ಸಭೆಯು, ನಶೋಭತೇ = ಪ್ರಕಾಶಿಸುವುದಿಲ್ಲ ! ಭವಾನ್ = ನೀನು, ಅಹಂ = ನಾನು, ಸಪರಿಗ್ರಹಾಃ = ಸಕಲ ಸಾಮಗ್ರಿಗಳಿಂದ ಕೂಡಿರುವ, ದೇವಾಶ್ಚ = ದೇವತೆಗಳೂ ಸಹ, ನಶೋಭಂತೇ = ಶೋಭಿಸುವುದಿಲ್ಲ ; ಆಕಾಶೇ = ಗಗನದಲ್ಲಿ, ತಾರಾಃ = ನಕ್ಷತ್ರಗಳು, ತಾರಾಪತಿಂವಿನಾ = ಚಂದ್ರನನ್ನು ಬಿಟ್ಟು, ಯಥಾ = ಹೇಗೋ, ಯಥಾ ಅಪಾದಪಂ = ಮರಗಳಿಲ್ಲದ, ಅರಣ್ಯಂ = ಕಾಡು, ತಥಾ = ಹಾಗೆ, ನಶೋಭಂತೇ = ಪ್ರಕಾಶಿಸುವುದಿಲ್ಲ, ಅಪಕ್ಷಾಶ್ಚ = ರೆಕ್ಕೆಗಳಿಲ್ಲದಿರುವ, ವಿಹಂಗಮಾಃ = ಪಕ್ಷಿಗಳು, ಯಥಾ = ಹೇಗೋ, ಚ = ಮತ್ತು, ಅಫಲಾಃ = ಫಲಗಳಿಲ್ಲದ, ವೃಕ್ಷಾಃ = ವೃಕ್ಷಗಳು, ಯಥಾ = ಹೇಗೋ, ಅಧನಾಃ = ದುಡ್ಡಿಲ್ಲದ, ಸುಹೃದಃ = ಸ್ನೇಹಿತರು, ಯಥಾ = ಹೇಗೋ ; ಕಮಲಾಸನ = ಎಲೈ ಬ್ರಹ್ಮದೇವ! ಮಹಾಲಕ್ಷ್ಮ್ಯಾ = ಮಹಾಲಕ್ಷ್ಮಿಯಿಂದ, ರಹಿತಾಃ = ರಹಿತರಾದ, ವಯಂ = ನಾವೂ, ತಥಾ = ಹಾಗೆಯೇ, ಅಫಲಾಃ = ಪ್ರಯೋಜನವಿಲ್ಲದವರಾಗಿದ್ದೇವೆ. ॥ 22-24 ॥

**ವಾಸುದೇವವಚಃ ಶ್ರುತ್ವಾ ವಾಸುದೇವಮಭಾಷತ ।**
**ಶಂಕರಃ ಪೃಥೀವೀಪಾಲ ಸಮುತ್ತಿಷ್ಠನ್ ಮಹಾಭುಜ ॥ 25 ॥**

ಅಥ = ಆನಂತರ, ಪೃಥವೀಪಾಲ = ಭೂಪಾಲನಾದ ಜನಕರಾಜನೇ, ವಾಸುದೇವವಚಃ = ಶ್ರೀನಿವಾಸನ ಮಾತನ್ನು, ಶ್ರುತ್ವಾ = ಕೇಳಿ, ಅಥ = ಅನಂತರ, ಮಹಾಭುಜಃ = ದೀರ್ಘಬಾಹುವಾದ, ಶಂಕರಃ = ರುದ್ರದೇವನು, ಸಮುತ್ತಿಷ್ಠನ್ = ಸಭೆಯಲ್ಲಿ ಎದ್ದುನಿಂತು, ವಾಸುದೇವಂ = ಶ್ರೀಕೃಷ್ಣನನ್ನು ಕುರಿತು, ಅಭಾಷತ = ಮಾತನಾಡಿದನು ॥ 25 ॥

*ಶಂಕರ ಉವಾಚ -*

**ಕಿಮರ್ಥಂ ರೋದನಂ ತಾತ ಕಿಂ ತೇ ಕಾರ್ಯಂ ವಿಡಂಬನಮ್ ।**
**ಅಸಂಗಸ್ಯಾಪ್ರಮೇಯಸ್ಯ ಚಾಕ್ರೂರವರದಸ್ಯ ಚ ॥ 26 ॥**

ಶಂಕರ ಉವಾಚ = ಶಂಕರನು ಹೇಳಿದನು, ದೇವೇಶ = ದೇವತಾ ಸಾರ್ವಭೌಮನಾದ, ತಾತ = ಅಜ್ಜನಾದ ಶ್ರೀಹರಿಯೇ, ಕಿಮರ್ಥಂ = ಏತಕ್ಕಾಗಿ, ರೋದನಂ = ಅಳುತ್ತಿರುವೇ? (ಈ ರೋದನವು?) ಅಸಂಗಸ್ಯ = ಸಂಗರಹಿತನಾದ,

ಅಪ್ರಮೇಯಸ್ಯ = ಯಾರಿಂದಲೂ ನಿನ್ನ ಬಗೆಗೆ ಇದು ಹೀಗೆಯೇ ಎಂದು ಹೇಳಲಾಗದವನಾದ, ಅಕ್ರೂರ ವರದಸ್ಯ = ಅಕ್ರೂರನೆಂಬ ಭಕ್ತನಿಗೆ ವರವನ್ನು ಕೊಟ್ಟವನಾದ (ಕ್ರೂರಿಗಳಲ್ಲದವರಿಗೆ (ಭಕ್ತರಿಗೆ) ವರಪ್ರದನಾದ), ತೇ = ನಿನಗೆ, ವಿಡಂಬನಂ = ವಿಡಂಬನದಿಂದ, ಕಾರ್ಯಂ = ಆಗಬೇಕಾದುದು, ಕಿಂ = ಏನಿದೆ? ।। 26 ।।

**ಅಕ್ಲೇಶಕಸ್ಯ[11] ದೇವೇಶ ಕಿಮರ್ಥಂ ರೋದನಂ ವೃಥಾ ।**
**ಸ ಚ ತದ್ವಚನಂ ಶ್ರುತ್ವಾ ನೀಲಕಂಠಮಭಾಷತ ।। 27 ।।**

ಅಕ್ಲೇಶಸ್ಯ = ಕ್ಲೇಶರಹಿತನಾದ, ನಿನಗೆ, ವೃಥಾ = ವ್ಯರ್ಥವಾಗಿ, ರೋದನಂ = ಅಳುವಿಕೆಯು(ರೋದನವು), ಕಿಮರ್ಥಂ = ಏತಕ್ಕಾಗಿ? ಸ ಚ = ಆ ಶ್ರೀನಿವಾಸನು, ತದ್ವಚನಂ = ಶಂಕರನ ನುಡಿಯನ್ನು, ಶ್ರುತ್ವಾ = ಕೇಳಿ, ನೀಲಕಂಠಂ = ರುದ್ರದೇವನನ್ನು ಕುರಿತು, ಅಭಾಷತ = ಮಾತನಾಡಿದನು ।। 27 ।।

*ಶ್ರೀಭಗವಾನುವಾಚ—*

**ತ್ವಂ ನಜಾನಾಸಿ ಭೋಃ ಶಂಭೋ ಬಾಲಭಾವೇನ ಪೌತ್ರಕ ।**
**ಯದಾ ಬ್ರಹ್ಮಾವಸಾನೇ ಚ ನ ಕಿಂಚಿದವಶಿಷ್ಯತೇ ।। 28 ।।**

ಭಗವಾನುವಾಚ = ಷಡ್ಗುಣೈಶ್ವರ್ಯಪೂರ್ಣನಾದ ಶ್ರೀಹರಿಯು ಹೇಳುತ್ತಲಿದ್ದಾನೆ. ಪೌತ್ರಕ = ಮೊಮ್ಮಗನಾದ, ಭೋಃ ಶಂಭೋ = ಎಲೈ ರುದ್ರನೇ, ಬಾಲಭಾವೇನ = ಹುಡುಗತನದಿಂದ, ತ್ವಂ = ನೀನು, ನಜಾನಾಸಿ = ತಿಳಿಯದವನಾಗಿದ್ದೀಯೇ, ಬ್ರಹ್ಮಾವಸಾನೇಚ = ಬ್ರಹ್ಮದೇವನ ಅವಸಾನವಾದ ಮೇಲೆ, ಯಥಾ = ಪ್ರಳಯ ಕಾಲದಲ್ಲಿ, ಕಿಂಚಿತ್ = ಸ್ವಲ್ಪವೂ, ನಾವಶಿಷ್ಯತೇ = ಉಳಿದಿರುವುದಿಲ್ಲವೋ ।। 28 ।।

**ತದಾ ಕ್ಷೀರೋದಕೇ ಶಂಭೋ ನಿರಾಲಂಬೇ ನಿರಾಶ್ರಯೇ ।**
**ಸಾ ಮೇ ಶಯ್ಯಾ ಸಖೀ ಭೂತ್ವಾ ಕ್ರೀಡತೇ ಹಿತಕಾರಿಣೀ ।। 29 ।।**

ತದಾ = ಆವಾಗ, ಶಂಭೋ = ಎಲೈ ಶಂಕರನೇ, ನಿರಾಲಂಬೇ = ಆಲಂಬನವಿಲ್ಲದ, ನಿರಾಶ್ರಯೇ = ಆಶ್ರಯವಿಲ್ಲದ, ಕ್ಷೀರೋದಕೇ = ಕ್ಷೀರಸಮುದ್ರದಲ್ಲಿ, ಹಿತಕಾರಿಣೀ = ಹಿತವನ್ನು ಮಾಡುವವಳಾದ, ಸಾ = ಲಕ್ಷ್ಮೀದೇವಿಯು, ಮೇ = ನನಗೆ, ಶಯ್ಯಾಸಖೀ = ಹಾಸಿಗೆಯ ಗೆಳತಿಯು, ಭೂತ್ವಾ = ಆಗಿ, ಕ್ರೀಡತೇ = ನನ್ನೊಡನೆ ಕ್ರೀಡಿಸುವಳು ।। 29 ।।

**ಏತಾದೃಶೀಂ ವಿನಾ ಶಂಭೋ ಮಮ ಸೌಖ್ಯಂ ಕಥಂ ಭವೇತ್ ।**
**ವದತ್ಯೇವಂ ಜಗನ್ನಾಥೇ ವೇಧಾ ವಾಕ್ಯಮಭಾಷತ ।। 30 ।।**

ಶಂಭೋ = ರುದ್ರದೇವ! ಏತಾದೃಶೀಂ = ಇಂಥವಳಾದ ಲಕ್ಷ್ಮಿಯನ್ನು, ವಿನಾ = ಬಿಟ್ಟು, ಮಮ = ನನಗೆ, ಸೌಖ್ಯಂ = ಸುಖವು, ಕಥಂ ಭವೇತ್ = ಹೇಗುಂಟಾದೀತು? ಜಗನ್ನಾಥೇ = ಶ್ರೀನಿವಾಸನು, ಏವಂ = ಹೀಗೆ, ವದತಿ (ಸತಿ) = ಹೇಳುತ್ತಿರಲು, ವೇಧಾಃ = ಬ್ರಹ್ಮದೇವನು, ವಾಕ್ಯಂ = ಮಾತನ್ನು, ಅಭಾಷತ = ಹೇಳಿದನು ।। 30 ।।

11. ಅಕ್ಲೇಶಿತಸ್ಯ

*ಬ್ರಹ್ಮೋವಾಚ -*

**ನೋಕ್ತಂ ತ್ವಯೇದಂ ಗೋವಿಂದ ಪೂರ್ವಮೇವ ಜನಾರ್ದನ ।**
**ಅದ್ಯ ಮಾಂ ಕಮಲಾನಾಥ ರಮಾಹ್ವಾನೇ ನಿಯೋಜಯ ॥ 31 ॥**

ಬ್ರಹ್ಮೋವಾಚ = ಬ್ರಹ್ಮನು ಹೇಳಿದನು : ಜನಾರ್ದನ = ದುಷ್ಟಜನರನ್ನು ಸಂಹರಿಸುವ, ಗೋವಿಂದ = ಶ್ರೀನಿವಾಸನೇ, ತ್ವಯಾ = ನಿನ್ನಿಂದ, ಪೂರ್ವಮೇವ = ಮೊದಲೇ, ಇದಂ = ಈ ವಿಚಾರವು, ನೋಕ್ತಂ = ಹೇಳಲ್ಪಡಲಿಲ್ಲ, ಕಮಲನಾಥ = ಹೇ ಕಮಲೇಶ, ಅದ್ಯ = ಈಗ, ಮಾಂ = ನನ್ನನ್ನು, ರಮಾಹ್ವಾನೇ = ಮಹಾಲಕ್ಷ್ಮಿಯನ್ನು ಕರೆತರಲು, ನಿಯೋಜಯ = ಆಜ್ಞಾಪಿಸು (ನಿಯೋಜಿಸು) ॥ 31 ॥

**ಸೋಽಪಿ ಪುತ್ರವಚಃ ಶ್ರುತ್ವಾ ದ್ಯುಮಣಿಂ ಶೀಘ್ರಮಾಹ್ವಯತ್ ।**
**ಷಣ್ಮುಖೇನ ಮಹಾರಾಜ ಸೋಽಪಿ ತತ್ರ ಸಮಾಗತಃ ॥ 32 ॥**

ಮಹಾರಾಜ = ಜನಕರಾಜ, ಸೋಽಪಿ = ಶ್ರೀನಿವಾಸನು, ಪುತ್ರವಚಃ = ಮಗನ ವಚನವನ್ನು, ಶ್ರುತ್ವಾ = ಕೇಳಿ, ದ್ಯುಮಣಿಂ = ಸೂರ್ಯನನ್ನು, ಷಣ್ಮುಖೇನ = ಷಣ್ಮುಖನ ದ್ವಾರಾ, ಶೀಘ್ರಂ = ಬೇಗನೆ, ಆಹ್ವಯತ್ = ಕರೆಸಿದನು, ಸೋಽಪಿ = ಆ ಸೂರ್ಯನಾದರೂ, ತತ್ರ = ಶ್ರೀಹರಿಯ ಸನ್ನಿಧಿಗೆ, ಸಮಾಗತಃ = ಬಂದವನಾಗಿ ॥ 32 ॥

**ನನಾಮ ಭಕ್ತ್ಯಾ ಸ್ತುತ್ವಾಥ ಪ್ರಾಂಜಲಿಃ ಸಮುಖಸ್ಥಿತಃ ।**
**ಭಾಸ್ಕರಂ ಭಕ್ತಿನಮ್ರಾಂಗಂ ಭಗವಾನಾಹ ಹೃದ್ಗತಮ್ ॥ 33 ॥**

*ಶ್ರೀಭಗವಾನುವಾಚ-*

**ಸೃಗಾಲವಾಸುದೇವಸ್ಯ ನಗರಂ ಗಚ್ಛ ಭಾನುಮನ್ ।**
**ತತ್ರಾಸ್ತೇ ಜಗತಾಂ ಮಾತಾ ತಾಮಾನಯ ಮಮ ಪ್ರಿಯಾಮ್ ॥ 34 ॥**

ಭಕ್ತ್ಯಾ = ಭಕ್ತಿಯಿಂದ, ಸ್ತುತ್ವಾ = ಸ್ತುತಿಸಿ, ನನಾಮ = ನಮಸ್ಕರಿಸಿದನು, ಅಥ = ಅನಂತರ, ಪ್ರಾಂಜಲಿಃ = ಅಂಜಲೀಬದ್ಧನಾಗಿ, ಸುಮುಖಸ್ಥಿತಃ = ಹರಿಯ ಎದುರಿನಲ್ಲಿನಿಂತ, ಭಕ್ತಿನಮ್ರಾಂಗಂ = ಭಕ್ತಿಯಿಂದ ಬಾಗಿದ ಶರೀರವುಳ್ಳ, ಭಾಸ್ಕರಂ = ಸೂರ್ಯನನ್ನು ಕುರಿತು, ಭಗವಾನ್ = ಶ್ರೀನಿವಾಸನು, ಹೃದ್ಗತಂ = ತನ್ನ ಮನಸ್ಸಿನಲ್ಲಿರುವುದನ್ನು, ಆಹ = ಹೇಳಿದನು ॥ 33 ॥ ಶ್ರೀ ಭಗವಾನುವಾಚ = ಪೂಜ್ಯನಾದ ಶ್ರೀನಿವಾಸನು ಹೇಳಿದನು : ಭಾನುಮನ್ = ಎಲೈ ಭಾಸ್ಕರನೇ, ಸೃಗಾಲವಾಸುದೇವಸ್ಯ = ಸೃಗಾಲವಾಸುದೇವನೆಂಬ ರಾಜನ, ನಗರಂ = ಪಟ್ಟಣವಾದ ಕೊಲ್ಹಾಪುರವನ್ನು ಕುರಿತು, ಗಚ್ಛ = ಹೋಗು, ತತ್ರ = ಕೊಲ್ಹಾಪುರದಲ್ಲಿ, ಜಗನ್ಮಾತಾ = ಜಗತ್ತುಗಳಿಗೆ ತಾಯಿಯಾದ ಲಕ್ಷ್ಮೀದೇವಿಯು, ಆಸ್ತೇ = ಇದ್ದಾಳೆ, ಮಮ = ನನ್ನ, ಪ್ರಿಯಾಂ = ಪ್ರೀತಿಪಾತ್ರಳಾದ, ತಾಂ = ಅವಳನ್ನು (ಲಕ್ಷ್ಮಿಯನ್ನು), ಆನಯ = ಕರೆದುಕೊಂಡು ಬಾ ॥ 34 ॥

**ಭಾರತೀಂ ವಾಸುದೇವಸ್ಯ ಶ್ರುತ್ವಾ ಪೌತ್ರೋ ದಿವಾಕರಃ ।**
**ವಿನಯೇನ ಸಮಾಯುಕ್ತಃ ಶಿರಸಾ ನಮ್ಯ ಚಾವದತ್ ॥ 35 ॥**

ವಾಸುದೇವಸ್ಯ = ಶ್ರೀಹರಿಯ, ಭಾರತೀಂ = ಮಾತನ್ನು, ಶ್ರುತ್ವಾ = ಕೇಳಿ, ಪೌತ್ರಃ = ಮೊಮ್ಮಗನಾದ, ದಿವಾಕರಃ = ಸೂರ್ಯನು, ವಿನಯೇನ = ನಮ್ರತೆಯಿಂದ, ಸಮಾಯುಕ್ತಃ = ಕೂಡಿದವನಾಗಿ, ಚ = ಮತ್ತು, ಶಿರಸಾನಮನ್ = ಶಿರಸಾಷ್ಟಾಂಗ ನಮಸ್ಕಾರ ಮಾಡಿ, ಅವದತ್ = ಹೇಳಿದನು ॥ 35 ॥

*ಭಾನುರುವಾಚ-*

**ಕಥಂ ತಾಂ ಲೋಕಜನನೀಮಾನಯಿಷ್ಯೇ ತವಾಂತಿಕಮ್ ।**
**ತನ್ಮಮಾಚಕ್ಷ್ವ ಗೋವಿಂದ ಕಥಂ ಮಾಂ ವಿಶ್ವಸೇದ್ರಮಾ ॥ 36 ॥**

ಭಾನುರುವಾಚ = ಸೂರ್ಯನು ಹೇಳುತ್ತಿದ್ದಾನೆ. ಲೋಕಜನನೀಂ = ಜಗನ್ಮಾತೆಯಾದ, ತಾಂ = ಲಕ್ಷ್ಮೀದೇವಿಯನ್ನು, ಕಥಂ = ಹೇಗೆ, ತವಾಂತಿಕಂ = ನಿನ್ನ ಬಳಿಗೆ, ಆನಯಿಷ್ಯೇ = ಕರೆದು ತರಬಲ್ಲೇ? ಗೋವಿಂದ = ಹರಿಯೇ, ಮಾಂ = ನನ್ನನ್ನು, ರಮಾ = ಲಕ್ಷ್ಮೀದೇವಿಯು, ಕಥಂ = ಹೇಗೆ, ವಿಶ್ವಸೇತ್ = ನಂಬಿಯಾಳು?, ತತ್ = ಅದನ್ನು, ಮಮ = ನನಗೆ, ಆಚಕ್ಷ್ವ = ಹೇಳುವವನಾಗು ॥ 36 ॥

*ಶ್ರೀಭಗವಾನುವಾಚ-*

**ಅಸ್ತಿ ತಸ್ಯಾಸ್ತ್ವಯಿ ಸ್ನೇಹಃ ಸದಾ ಲೋಕಮಹೋದಯೇ ।**
**ತ್ವದಾಗಮನಸಂಹೃಷ್ಟಾ ಸಮಾಯಾತಿ ಮಮಾಂತಿಕಮ್ ॥ 37 ॥**

ಶ್ರೀಭಗವಾನುವಾಚ = ಶ್ರೀನಿವಾಸನು ಹೇಳಹತ್ತಿದನು : ತಸ್ಯಾಃ = ಲಕ್ಷ್ಮೀದೇವಿಗೆ, ಲೋಕಮಹೋದಯೇ = ಲೋಕಕ್ಕೆ ಮಹೋದಯನಾದ, ತ್ವಯಿ = ನಿನ್ನಲ್ಲಿ, ಸದಾ = ಯಾವಾಗಲೂ, ಸ್ನೇಹಃ = ವಾತ್ಸಲ್ಯವು (ಪ್ರೀತಿಯು), ಅಸ್ತಿ = ಇರುವುದು, ತ್ವದಾಗಮನಸಂಹೃಷ್ಟಾ = ನೀನು ಬಂದುದರಿಂದ ಸಂತೋಷಗೊಂಡವಳಾಗಿ, ಮಮ = ನನ್ನ, ಅಂತಿಕಂ = ಸಮೀಪವನ್ನು ಕುರಿತು, ಸಮಾಯಾತಿ = ಬರುತ್ತಾಳೆ ॥ 37 ॥

**ಉಪಾಯಂ ಪ್ರವದಿಷ್ಯಾಮಿ ತದಾಗಮನಕರ್ಮಣಿ ।**
**ಅಶ್ರು ಮುಂಚನ್ನಪಮೃಜಂ ಸ್ತದ್ವಾರನಿಕಟೇ ಸ್ಥಿತಃ ॥ 38 ॥**
**ತ್ವಾಂ ತು ದೃಷ್ಟ್ವಾ ಜಗನ್ಮಾತಾ ಸಾಂತ್ವಯಿಷ್ಯತಿ ಭಾನುಮನ್ ।**
**ಏವಂ ವದತಿ ವಾಕ್ಯಂ ತ್ವಾಂ ಕಿಂಚಿದ್ದುಃಖಸಮಾಕುಲಾ ॥ 39 ॥**

ಭಾನುಮನ್ = ಸೂರ್ಯನೇ, ತದಾಗಮನ ಕರ್ಮಣಿ = ಅವಳು ಬರುವಂತೆ ಮಾಡುವ ಕಾರ್ಯದಲ್ಲಿ, ಉಪಾಯಂ = ಯುಕ್ತಿಯನ್ನು, ಪ್ರವದಿಷ್ಯಾಮಿ = ಹೇಳುತ್ತೇನೆ, ಅಶ್ರುಮುಂಚನ್ = ಕಣ್ಣೀರು ಸುರಿಸುತ್ತಾ, ಅಪಮೃಜಂ = ಮತ್ತೆ ಅದನ್ನು ಒರೆಸಿಕೊಳ್ಳುತ್ತಾ, ತದ್ವಾರನಿಕಟೇ = ಅವಳ ಮನೆಯ ಬಾಗಿಲ ಬಳಿಯಲ್ಲಿ, ಸ್ಥಿತಃ = ಇರುವವನಾಗು, ಜಗನ್ಮಾತಾ = ಲೋಕ ಜನನಿಯು, ತ್ವಾಂತು = ನಿನ್ನನ್ನು, ದೃಷ್ಟ್ವಾ = ನೋಡಿ, ಸಾಂತ್ವಯಿಷ್ಯತಿ = ಸಮಾಧಾನಪಡಿಸುತ್ತಾಳೆ. ಕಿಂಚಿದ್ದುಃಖ ಸಮಾಕುಲಾ = ಸ್ವಲ್ಪವ್ಯಥೆಯುಳ್ಳವಳಾಗಿ, ತ್ವಾಂ (ಪ್ರತಿ) = ನಿನ್ನನ್ನು ಕುರಿತು, ಏವಂ = ಹೀಗೆ, ವಾಕ್ಯಂ = ಮಾತನ್ನು, ವದಿಷ್ಯತಿ = ಹೇಳುತ್ತಾಳೆ ॥ 38-39 ॥

**ಶಾಸನಂ ತೇ ಹೃತಂ ಕೇನ ಧರಣ್ಯಾಂ ಕಥ್ಯತಾಮಿತಿ ।**
**ತ್ವಂ ಸಮಾಚಕ್ಷ್ವ ತಾಂ ದೇವೀಮಿತ್ಥಮತ್ಯಂತದುಃಖಿತಃ ॥ 40 ॥**

(ಭಾನುಮನ್ = ಎಲೈ ಭಾಸ್ಕರನೇ), ಧರಣ್ಯಾಂ = ಭೂತಳದಲ್ಲಿ, ಕೇನ = ಯಾರಿಂದ, ತೇ = ನಿನ್ನ, ಶಾಸನಂ = ಅಧಿಕಾರವು, ಹೃತಂ = ಅಪಹರಿಸಲ್ಪಟ್ಟಿತು? ಕಥ್ಯತಾಂ = ಹೇಳಲ್ಪಡಲಿ, (ಏವಂ ವದಿಷ್ಯತಿ = ಹೀಗೆ ಹೇಳುತ್ತಾಳೆ), ತ್ವಂ = ನೀನು, ತಾಂ ದೇವೀಂ = ಆ ಲಕ್ಷ್ಮೀದೇವಿಯನ್ನು ಕುರಿತು, ಅತ್ಯಂತದುಃಖಿತಃ = ಅತಿಶಯದುಃಖಿತನಾಗಿ, ಇತ್ಥಂ = ಹೀಗೆ, ಸಮಾಚಕ್ಷ್ವ = ಹೇಳು ।। 40 ।।

**ನ ಶಾಸನಂ ಹೃತಂ ಮೇಽದ್ಯ ಮಾತಃ ಕೇನಾಪಿ ಭೂತಲೇ ।**
**ಶಯನಂ ತು ಕೃತಂ ತೇನ ತವ ಭರ್ತ್ರಾದ್ಯ ಭೂತಲೇ ।। 41 ।।**

**ಯೇನ ವೈ ಶಾಸನಂ ದತ್ತಂ ಮಾತರ್ಮೇ ಕೃಪಯೇದೃಶಮ್ ।**
**ನಿಶ್ಚೇತನೋಽದ್ಯ ಪತಿತೋ ಭರ್ತಾ ಜೀವತಿ ವಾ ನ ವಾ ।। 42 ।।**

**ಭರ್ತಾ ತವ ಜಗನ್ನಾಥಃ ತ್ವಶಕ್ತೋಽದ್ಯ ವಿಭಾತಿ ಮೇ ।**
**ಕದಾ ದ್ರಕ್ಷ್ಯಾಮಿ ದೇವೀಂ ತಾಮಿತ್ಯಾಸ್ತೇ ಪ್ರಲಪನ್ನಿತಿ ।। 43 ।।**

ಮಾತಃ = ಜನನಿ! ಭೂತಲೇ = ಭೂಮಿಯಲ್ಲಿ, ಅದ್ಯ = ಈಗ, ಕೇನಾಪಿ = ಯಾರಿಂದಲೂ, ಮೇ = ನನ್ನ, ಶಾಸನಂ = ಅಧಿಕಾರವು, ನ ಹೃತಂ = ಅಪಹರಿಸಲ್ಪಡಲಿಲ್ಲ, ಯೇನ = ಯಾವ ಶ್ರೀಹರಿಯಿಂದ, ಮೇ = ನನಗೆ, ಈದೃಶಂ = ಈ ರೀತಿಯಾದ, ಶಾಸನಂ = ಅಧಿಕಾರವು, ಕೃಪಯಾ = ಕಾರುಣ್ಯದಿಂದ, ದತ್ತಂ = ಕೊಡಲ್ಪಟ್ಟಿತೋ ಅಂಥ, ತವ = ನಿನ್ನ, ಭರ್ತಾ = ಪತಿಯಾದ ಶ್ರೀನಿವಾಸನಿಂದ, ಶಯನಂ = ಮಲಗುವಿಕೆಯು, ಕೃತಂ = ಮಾಡಲ್ಪಟ್ಟಿತು. (ಪಾ:-ಯೇನ = ಯಾವ ಶ್ರೀನಿವಾಸನಿಂದ, ಮೇ = ನನಗೆ, ಈದೃಶಂ = ಈ ರೀತಿ, ಶಾಸನಂ = ನಿನಗೆ ತಿಳಿಸುವಂತೆ ಅಪ್ಪಣೆಯು, ಕೃತಂ = ಮಾಡಲ್ಪಟ್ಟಿತ್ತೋ) ಅದ್ಯ = ಈಗ, ತೇನ-ತವಭರ್ತಾ = ಆ ನಿನ್ನ ಸ್ವಾಮಿಯು, ನಿಶ್ಚೇತನಃ = ನಿಶ್ಯಕ್ತನಾಗಿ, ಪತಿತಃ = ಬಿದ್ದಿದ್ದಾನೆ, ಜೀವತಿ ವಾ = ಬದುಕುವನೋ, ನವಾ = ಇಲ್ಲವೋ (ತಿಳಿಯದು), ತವ = ನಿನ್ನ, ಭರ್ತಾ = ಗಂಡನಾದ, ಜಗನ್ನಾಥಃ = ಶ್ರೀಹರಿಯು, ಅದ್ಯ = ಈಗ, ಅಶಕ್ತಃ = ಅಶಕ್ತನಾಗಿರುವಂತೆ, ಮೇ = ನನಗೆ, ವಿಭಾತಿ = ತೋರುತ್ತಿದೆ, ತಾಂ ದೇವೀಂ =ತನ್ನ ಪತ್ನಿಯಾದ ಲಕ್ಷ್ಮೀದೇವಿಯನ್ನು, ಕದಾ = ಯಾವಾಗ, ದ್ರಕ್ಷ್ಯಾಮಿ = ನೋಡುತ್ತೇನೆಯೋ, ಇತಿ = ಹೀಗೆ, ಪ್ರಲಪನ್ = ಪ್ರಲಪಿಸುತ್ತಾ, ಆಸ್ತೆ = ಇದ್ದಾನೆ, ಇತಿ = ಹೀಗೆ (ಆಚಕ್ಷ್ವ = ಹೇಳು) ।। 41-43 ।।

**ಸಾ ತ್ವದ್ವಚನಮಾಕರ್ಣ್ಯ ಸಮಾಯಾತಿ ನ ಸಂಶಯಃ ।**
**ಉಪಾಯಂ ತು ತತಃ ಶ್ರುತ್ವಾ ಕಿಂಚಿದ್ಧಾಸ್ಯಮುಖಾನ್ವಿತಃ ।। 44 ।।**

ಸಾ = ಲಕ್ಷ್ಮಿಯು, ತ್ವದ್ವಚನಂ = ನಿನ್ನ ಮಾತನ್ನು, ಆಕರ್ಣ್ಯ = ಕೇಳಿ, ಸಮಾಯಾತಿ = ಬರುತ್ತಾಳೆ, ನ ಸಂಶಯಃ = ಸಂದೇಹವಿಲ್ಲ, ಉಪಾಯಂತು = ಶ್ರೀನಿವಾಸನು ಹೇಳಿದ ಯುಕ್ತಿಯನ್ನು, ಶ್ರುತ್ವಾ = ಕೇಳಿ (ಸೂರ್ಯನು), ತತಃ = ಅನಂತರ, ಕಿಂಚಿತ್ = ಸ್ವಲ್ಪ, ಹಾಸ್ಯಮುಖಾನ್ವಿತಃ = ಪರಿಹಾಸದ ಮುಖದಿಂದ ।। 44 ।।

**ಬಭಾಷೇ ಭಕ್ತಿನಮ್ರಾಂಗೋ ಭಯಭಕ್ತಿಸಮನ್ವಿತಃ ।**
**ಸರ್ವಜ್ಞಾ ಸರ್ವಲೋಕೇಷು ವಿಶ್ರುತಾ ಕಮಲಾಲಯಾ ।। 45 ।।**

ಭಯಭಕ್ತಿ ಸಮನ್ವಿತಃ = ಹೆದರಿಕೆ-ಭಕ್ತಿಗಳಿಂದ ಕೂಡಿದವನಾಗಿ, ಭಕ್ತಿನಮ್ರಾಂಗಃ = ಭಕ್ತಿಯಿಂದ ವಿನಮ್ರವಾದ ದೇಹವುಳ್ಳವನಾಗಿ, ಬಭಾಷೇ = ಮಾತನಾಡಿದನು : ವಿಭೋ = ಪ್ರಭುವೇ, ಕಮಲಾಲಯಾ = ಕಮಲಸದನಳಾದ

ರಮಾದೇವಿಯು, ಸರ್ವಲೋಕೇಷು = ಸಕಲಲೋಕಗಳಲ್ಲಿ, ಸರ್ವಜ್ಞಾ = ಸಕಲವನ್ನೂ ತಿಳಿದವಳೆಂದು, ವಿಶ್ರುತಾ = ಪ್ರಸಿದ್ಧಳಾಗಿರುವಳು. ।। 45 ।।

**ಜಾನಾತಿ ಹೃದ್ಗತಂ ಕೃಷ್ಣ ಕಥಂ ಮಾಂ ವಿಶ್ವಸೇದ್ವಿಭೋ ।**
**ಅರೋಗಸ್ಯ ಚ ರೋಗಂ ಹಿ ಕಥಂ ವಕ್ಷ್ಯಾಮಿ ತೇ ಹರೇ ।। 46 ।।**

ಕೃಷ್ಣ = ಶ್ರೀನಿವಾಸನೇ, ಹೃದ್ಗತಂ = ಮನಸ್ಸಿನಲ್ಲಿರುವುದನ್ನು, ಜಾನಾತಿಚ = ತಿಳಿಯುತ್ತಾಳೆ, ಮಾಂ = ನನ್ನನ್ನು, ಕಥಂ = ಹೇಗೆ, ವಿಶ್ವಸೇತ್ = ನಂಬಿಯಾಳು? ಹರೇ = ಶ್ರೀಹರಿಯೇ, ಅರೋಗಸ್ಯಚ = ರೋಗರಹಿತನಾದ, ತೇ = ನಿನಗೆ, ರೋಗಂ = ರೋಗವನ್ನು, ಕಥಂ ಹಿ = ಹೇಗೆ ತಾನೆ, ವಕ್ಷ್ಯಾಮಿ = ಹೇಳುವೆನು? (ಹೇಳಲಿ?) ।। 46 ।।

**ಸ ಭಾನೋರ್ವಚನಂ ಶ್ರುತ್ವಾ ಭಾನುಮಾಹ ಮನೋಗತಮ್ ।**

ಸಃ = ಶ್ರೀನಿವಾಸನು, ಭಾನೋಃ = ಸೂರ್ಯನ, ವಚನಂ = ನುಡಿಯನ್ನು, ಶ್ರುತ್ವಾ = ಆಲಿಸಿ, ಭಾನುಂ = ಭಾಸ್ಕರನನ್ನು ಕುರಿತು, ಮನೋಗತಂ = ತನ್ನ ಮನಸ್ಸಿನಲ್ಲಿರುವುದನ್ನು, ಆಹ = ಹೇಳಿದನು :

*ಶ್ರೀಭಗವಾನುವಾಚ-*

**ಮನ್ಮಾಯಯಾ ಮೋಹಿತಾ ಸಾ ಭವಿಷ್ಯತಿ ನ ಸಂಶಯಃ ।। 47 ।।**

**ಇತ್ಯುಕ್ತಃ ಪ್ರಣಿಪತ್ಯಾಥ ವಾಸುದೇವ(ಂ) ರಥೇ ಸ್ಥಿತಃ ।**
**ಕರವೀರಪುರಂ ಗತ್ವಾ ಯಥೋಕ್ತಂ ತತ್ತಥಾಕರೋತ್ ।। 48 ।।**

ಶ್ರೀಭಗವಾನುವಾಚ = ಷಡ್ಗುಣೈಶ್ವರ್ಯಪೂರ್ಣನಾದ ಶ್ರೀನಿವಾಸನು ಹೇಳಹತ್ತಿದನು : ಸಾ = ಲಕ್ಷ್ಮೀದೇವಿಯು, ಮನ್ಮಾಯಯಾ = ನನ್ನ ಮಾಯೆಯಿಂದ, ಮೋಹಿತಾ = ಮೋಹಪರವಶಳು (ಭ್ರಮೆಯುಳ್ಳವಳು) ಭವಿಷ್ಯತಿ = ಆಗುತ್ತಾಳೆ, ನಸಂಶಯಃ = ಸಂದೇಹವಿಲ್ಲ ।। 47 ।। ಅಥ = ಆ ತರುವಾಯ, ಇತ್ಯುಕ್ತಃ = ಹೀಗೆ ಪರಮಾತ್ಮನಿಂದ ಹೇಳಲ್ಪಟ್ಟವನಾದ ಸೂರ್ಯನು, ವಾಸುದೇವಂ = ಶ್ರೀನಿವಾಸನನ್ನು ಕುರಿತು, ಪ್ರಣಿಪತ್ಯ = ನಮಸ್ಕರಿಸಿ, ರಥೇಸ್ಥಿತಃ = ವಾಸುದೇವನ ರಥದಲ್ಲಿ ಕುಳಿತವನಾಗಿ, ಕರವೀರಪುರಂ = ಕೊಲ್ಲಾಪುರವನ್ನು ಕುರಿತು, ಗತ್ವಾ = ಹೋಗಿ, ಯಥೋಕ್ತಂ = ಶ್ರೀನಿವಾಸನಿಂದ ಹೇಗೆ ಹೇಳಲ್ಪಟ್ಟಿತ್ತೋ, ತತ್ = ಆ ಕಾರ್ಯವನ್ನು, ತಥಾ = ಹಾಗೆಯೇ, ಅಕರೋತ್ = ಮಾಡಿದನು ।। 48 ।।

**ಸಾ ತದ್ವಚನಮಾಕರ್ಣ್ಯ ಯಥಾ ದೇಶಂ ತಥಾ ರಮಾ[12] ।**
**ರಥಮಾರುಹ್ಯ ಖೇದೇನ[13] ಭಾನುವಾಕ್ಯಾದರೇಣ ಸಾ[14] ।। 49 ।।**

ಸಾ = ಲಕ್ಷ್ಮೀದೇವಿಯು, ತದ್ವಚನಂ = ಸೂರ್ಯನ ಮಾತನ್ನು, ಆಕರ್ಣ್ಯ = ಕೇಳಿ, ತದಾ = ಆಗ, ರಮಾ = ಲಕ್ಷ್ಮಿಯು, ಯಥಾದೇಶಂ = ಆದೇಶಾನುಗುಣವಾಗಿ, (ಪಾ :- ಯಥಾ ದೇವಃ = ಪರಮಾತ್ಮನ ಆಚರಣೆಗೆ ತಕ್ಕಂತೆ, ತಥಾ = ಹಾಗೆಯೇ, ರಮಾ = ರಮಾದೇವಿಯೂ ಸಹ) ಭಾನುವಾಕ್ಯಾದರೇಣ = ಸೂರ್ಯನ ಮಾತಿನಲ್ಲಿರುವ ವಿಶ್ವಾಸದಿಂದ, ಖೇದೇನ = ವ್ಯಥೆಯಿಂದ(ವ್ಯಥೆಯನ್ನು ನಟಿಸುತ್ತಾ), ವೇಗೇನ = ಬೇಗನೆ, ರಥಮಾರುಹ್ಯ = ರಥದಲ್ಲಿ ಹತ್ತಿ ಕುಳಿತು ।।49।।

---

12. ಪಾ: ಯಥಾ ದೇವಸ್ತಥಾರಮಾ 13. ವೇಗೇನ 14. ಪಾ: ಚ.

**ಸಂಪ್ರಾಪ್ತಾ ವಾಯುವೇಗೇನ ರವಿಯುಕ್ತಾ ರಮಾಪತಿಮ್ ।**
**ತದಾಗಮನವಾರ್ತಾಂ ಚ ಶ್ರುತ್ವಾ ತಸ್ಮಿನ್ ಕ್ಷಣೇ ಹರಿಃ ॥ 50 ॥**

**ಜಗಾಮ ದರ್ಶನಾಪೇಕ್ಷೀ ಹ್ಯಶಕ್ತ ಇವ ಸಂಮುಖಮ್ ।**
**ತಾದೃಶೀಮಾಕೃತಿಂ ಪ್ರಾಪ್ಯ ತದದ್ಭುತಮಿವಾಕರೋತ್ ॥ 51 ॥**

ರವಿಯುಕ್ತಾ = ಸೂರ್ಯನಿಂದ ಸಹಿತಳಾಗಿ, ವಾಯುವೇಗೇನ = ವಾಯುವೇಗದಿಂದ, ರಮಾಪತಿಂ (ಪ್ರತಿ) = ಶ್ರೀನಿವಾಸನನ್ನು ಕುರಿತು, ಸಂಪ್ರಾಪ್ತಾ = ಬಂದಳು, ಹರಿಃ = ಶ್ರೀನಿವಾಸನು, ತದಾಗಮನವಾರ್ತಾಂ = ಲಕ್ಷ್ಮಿಯು ಬಂದ ವಾರ್ತೆಯನ್ನು, ಶ್ರುತ್ವಾ = ಕೇಳಿ, ತಸ್ಮಿನ್‌ಕ್ಷಣೇ = ಅದೇ ಕ್ಷಣದಲ್ಲಿ, ದರ್ಶನಾಕಾಂಕ್ಷೀ = ರಮಾದೇವಿಯನ್ನು ನೋಡುವ ಆಕಾಂಕ್ಷೆಯಿಂದ, ಸಮ್ಮುಖಂ = ಲಕ್ಷ್ಮಿಯು ಎದುರಿಗೆ, ಅಶಕ್ತ ಇವ = ನಿಶ್ಶಕ್ತನಾದವನಂತೆ, ತಾದೃಶೀಮಾಕೃತಿಂ = ವ್ಯಾಧಿ ಗ್ರಸ್ಥನಾದವನ ಆಕಾರವನ್ನು, ಪ್ರಾಪ್ಯ = ಹೊಂದಿ, ಜಗಾಮ = ಹೋದನು, ದೇವಾನಾಂ = ದೇವತೆಗಳಿಗೆ, ಪೂರ್ವ ದೇವಾನಾಂ = ದೈತ್ಯರುಗಳಿಗೆ, ಊರ್ಧ್ವರೇತಸಾಂ = ಊರ್ಧ್ವರೇತಸ್ಸುಳ್ಳ (ಜಿತೇಂದ್ರಿಯರಾದ) ಮುನೀನಾಂ = ಋಷಿಮುನಿಗಳಿಗೆ, ತತ್ = ತನ್ನ ರೂಪವು, ಅದ್ಭುತಮಿವ = ಆಶ್ಚರ್ಯಕರವಾಗಿರುವಂತೆ, ಅಕರೋತ್ = ಮಾಡಿದನು ॥ 50–51 ॥

**ದೇವಾನಾಂ ಪೂರ್ವದೇವಾನಾಂ ಮುನೀನಾಮೂರ್ಧ್ವರೇತಸಾಮ್ ।**
**ಭುಜೇ ಭುಜಂಗಭೂಷಸ್ಯ ವಾಮಂ ಸಂಸ್ಥಾಪ್ಯ ವೈ ಭುಜಮ್ ॥ 52 ॥**

ಸ್ವಭೂಃ = ಜನಿ ವಿಷಯದಲ್ಲಿ ಸ್ವತಂತ್ರನಾದ (ತಾನೇ ಸ್ವಾತಂತ್ರ್ಯದಿಂದ ಬೇಕಾದಾಗ ಪ್ರಾದುರ್ಭವಿಸುವ) ಶ್ರೀಹರಿಯು, ಭುಜಂಗ ಭೂಷಸ್ಯ = ಸರ್ಪಾಭರಣನಾದ ರುದ್ರನ, ಭುಜೇ = ಹೆಗಲಿನ ಮೇಲೆ, ವಾಮಂಭುಜಂ = ತನ್ನ ಎಡಭುಜವನ್ನು, ಸಂಸ್ಥಾಪ್ಯ ವೈ = ಇಟ್ಟು (ಇಡುವವನಾಗಿ) ॥ 52 ॥

**ತಥಾ ಪರಂ ಬ್ರಹ್ಮಕಂಠೇ ನಿಧಾಯಾಗಾದ್ಭುಜಂ ಸ್ವಭೂಃ ।**
**ಏವಂ ಭೂತಂ ಶ್ರೀನಿವಾಸಂ ದದರ್ಶ ಕಮಲಾಲಯಾ ॥ 53 ॥**

ತಥಾ = ಅದರಂತೆ, ಪರಂ ಭುಜಂ = ಬೇರೊಂದು ಭುಜವನ್ನು (ಬಲತೋಳನ್ನು), ಬ್ರಹ್ಮಕಂಠೇ = ಬ್ರಹ್ಮನ ಕುತ್ತಿಗೆಯಲ್ಲಿ, ನಿಧಾಯ = ಇಟ್ಟು, ಅಗಾತ್ = ಲಕ್ಷ್ಮಿಯನ್ನು ನೋಡಲು ಬಂದನು, ಕಮಲಾಲಯಾ = ಕಮಲವೇ ಮನೆಯಾಗುಳ್ಳ ರಮಾದೇವಿಯು, ಏವಂಭೂತಂ = ಈ ರೀತಿ ವೇಷ ತಾಳಿರುವ ಶ್ರೀನಿವಾಸನನ್ನು, ದದರ್ಶ = ನೋಡಿದಳು ॥ 53 ॥

**ರಥಾದುತ್ತೀರ್ಯ ವೇಗೇನ ಕಿಂಚಿದ್ಧಾಸ್ಯಮುಖಾಂಬುಜಾ ।**
**ಚಂಪಕಂ[15] ಪುಷ್ಪನಿಚಯಂ ವಿಕೀರ್ಯ ಪದಪಂಕಜೇ ॥ 54 ॥**

ವೇಗೇನ = ಜಾಗ್ರತೆಯಾಗಿ, ರಥಾತ್ = ರಥದಿಂದ, ಉತ್ತೀರ್ಯ = ಇಳಿದವಳಾಗಿ, ಕಿಂಚಿತ್ = ಸ್ವಲ್ಪ, ಹಾಸ್ಯಮುಖಾಂಬುಜಾ = ಪರಿಹಾಸಯುಕ್ತ ಮುಖಾರವಿಂದಳಾದ, ಶ್ರೀಲಕ್ಷ್ಮೀದೇವಿಯು, ಪದಪಂಕಜೇ = ಭಗವಂತನ ಪಾದಾರವಿಂದಗಳಲ್ಲಿ, ಚಾಂಪಕ ಪುಷ್ಪನಿಚಯಂ (ಚಂಪಕಂ ಪುಷ್ಪನಿಚಯಂ) = ಸಂಪಿಗೆಯ ಪುಷ್ಪಸಮೂಹವನ್ನು, ವಿಕೀರ್ಯ = ಎರಚಿ (ಸುರಿದು) ॥ 54 ॥

15. ಚಾಂಪಕಂ.

**ಸಮಾಲಿಂಗ್ಯಾತಿಭಕ್ತ್ಯೈವ ಮುಹೂರ್ತದ್ವಯಮಾಸ್ಥಿತಾ ।**
**ರಮಾಲಿಂಗನ ಮಾತ್ರೇಣ ಪುಷ್ಟಾಂಗೋ ವಿಷ್ಟರಶ್ರವಾಃ ॥ 55 ॥**

ಅತಿಭಕ್ತ್ಯೈವ = ಅತಿಶಯ ಭಕುತಿಯಿಂದಲೇ, ಮುಹೂರ್ತದ್ವಯಂ = ಎರಡು ಮುಹೂರ್ತಗಳವರೆಗೆ, ಸಮಾಲಿಂಗ್ಯ = ಶ್ರೀಹರಿಯನ್ನು ಆಲಿಂಗಿಸಿ, ಆಸ್ಥಿತಾ = ಹಾಗೆಯೇ ಇದ್ದಳು. ವಿಷ್ಟರಶ್ರವಾಃ = ಶ್ರೀನಿವಾಸನು, ರಮಾಲಿಂಗನಮಾತ್ರೇಣ = ಲಕ್ಷ್ಮಿಯ ಅಪ್ಪುಗೆಯ ಮಾತ್ರದಿಂದಲೇ, ಪುಷ್ಟಾಂಗಃ = ಪುಷ್ಟವಾದ (ಉಬ್ಬಿದ) ಸರ್ವ ಅವಯವಗಳುಳ್ಳವನಾಗಿ ॥ 55 ॥

**ಕುಶಲಂ ಪರಿಪಪ್ರಚ್ಛ ತಸ್ಯಾ ಸ್ಸಾಽಪಿಹರೇ ಸ್ತಥಾ ।**
**ಪಿತರೌ ಸರ್ವಲೋಕಾನಾಂ ರಮಾನಾರಾಯಣಾವುಭೌ ॥ 56 ॥**

**ಸಂಪ್ರಾಪ್ತೌ ಸ್ವಸ್ಥಲಂ ರಾಜನ್ ಸರ್ವದೇವ ನಮಸ್ಕೃತೌ ।**

ಶ್ರೀರಮೋವಾಚ-

**ಮಾಂ ಮೋಹಯತಿ ಗೋವಿಂದ ತವ ಮಾಯಾ ದುರತ್ಯಯಾ ॥ 57 ॥**

ತಸ್ಯಾಃ = ಲಕ್ಷ್ಮೀದೇವಿಯ, ಕುಶಲಂ = ಕ್ಷೇಮವನ್ನು, ಪರಿಪಪ್ರಚ್ಛ= ವಿಚಾರಿಸಿದನು (ಕುಶಲ ಪ್ರಶ್ನೆ ಮಾಡಿದನು), ಸಾಪಿ = ಲಕ್ಷ್ಮೀದೇವಿಯೂ ಕೂಡ, ಹರೇಃ = ಶ್ರೀನಿವಾಸನ, ಕುಶಲಂ = ಕ್ಷೇಮವನ್ನು, ಪರಿಪಪ್ರಚ್ಛ = ವಿಚಾರಿಸಿದಳು, ರಾಜನ್ = ಜನಕಮಹಾರಾಜ, ಸರ್ವದೇವ ನಮಸ್ಕೃತೌ = ಸಕಲ ದೇವತೆಗಳಿಂದ ವಂದಿತರಾದ, ಸರ್ವಲೋಕಾನಾಂ = ಸಮಸ್ತ ಲೋಕಗಳಿಗೂ, ಪಿತರೌ = ತಂದೆ ತಾಯಿಗಳಾದ, ರಮಾನಾರಾಯಣೌ = ಶ್ರೀಲಕ್ಷ್ಮೀನಾರಾಯಣರು, ಉಭೌ = ಇಬ್ಬರೂ, ಸ್ವಸ್ಥಲಂ = ವಲ್ಮೀಕ ಸ್ಥಳದ ಬಳಿಗೆ, (ಪಾ :- ಸ್ವಸ್ಥತಾಂ = ಸ್ವಸ್ಥತೆಯನ್ನು) ಸಂಪ್ರಾಪ್ತೌ = ಬರುವವರಾದರು (ಪಡೆದವರಾದರು), ಶ್ರೀರಮೋವಾಚ = ಶ್ರೀಲಕ್ಷ್ಮೀದೇವಿಯು ಹೇಳಿದಳು : ಗೋವಿಂದ = ಶ್ರೀಹರಿಯೇ, ತವ = ನಿನ್ನ, ದುರತ್ಯಯಾ = ಮೀರಲು ಸಾಧ್ಯವಿಲ್ಲದ, ಮಾಯಾ = ಮಾಯೆಯು, ಮಾಂಚ = ನನ್ನನ್ನೂ, ಮೋಹಯತಿ = ಮೋಹಗೊಳಿಸುವುದು (ಭ್ರಮೆಗೊಳಿಸುವುದು), ॥ 56-57 ॥

**ಭಾನುಮಾಮಂತ್ರ್ಯ ಗೋವಿಂದ ಕರ್ಮ ಚಿತ್ರಂ ತ್ವಯಾ ಕೃತಮ್ ।**
**ತ್ವನ್ಮಾಯಾ ಮೋಹಿತಾಸ್ಸರ್ವೇ ಬ್ರಹ್ಮೇಶಾನಾದಯಃ ಸುರಾ ॥ 58 ॥**

ಗೋವಿಂದ = ಎಲೈ ಶ್ರೀನಿವಾಸ, ಭಾನುಮಾಮಂತ್ರ್ಯ = ಸೂರ್ಯನನ್ನು ಕಳುಹಿಸಿ (ಸೂರ್ಯನೊಡನೆ ಮಾತನಾಡಿಕೊಂಡು), ಚಿತ್ರಂ = ಆಶ್ಚರ್ಯಕರವಾದ, ಕರ್ಮ = ಕೆಲಸವು, ತ್ವಯಾ = ನಿನ್ನಿಂದ, ಕೃತಂ = ಮಾಡಲ್ಪಟ್ಟಿತು, ಸರ್ವೇ = ಸಮಸ್ತರಾದ, ಬ್ರಹ್ಮೇಶಾನಾದಾಯಃ = ಬ್ರಹ್ಮ-ರುದ್ರರೇ ಮೊದಲಾದ, ಸುರಾಃ = ದೇವತೆಗಳು, ತ್ವತ್ = ನಿನ್ನ, ಮಾಯಾಮೋಹಿತಾಃ = ಮಾಯೆಯಿಂದ ಮೋಹಿತರಾಗುವರು ॥ 58 ॥

**ವದಾದೇಶಂ ವಾಸುದೇವ ಮಮಾದ್ಯಾಹ್ವಾನಕಾರಣಮ್[16] ।**
**ಸ ರಮಾ ವಚನಂ ಶ್ರುತ್ವಾ ಸಾಧ್ವೀಮಾಹ ರಮಾಪತಿಃ ॥ 59 ॥**

16. ಪಾ: ಮಮಾನಂದ ಕಾರಣಂ,

ವಾಸುದೇವ = ಎಲೈ ಶ್ರೀಕೃಷ್ಣ, ಅದ್ಯ = ಈಗ, ಮಮಾಹ್ವಾನ ಕಾರಣಂ = ನನ್ನನ್ನು ಕರೆಯಿಸಿದ ಕಾರಣವನ್ನು, (ಪಾ:- ಮಮಾನಂದಕಾರಣಂ = ನನಗೂ ಸಂತೋಷಾಸ್ಪದವಾದ ವಿಚಾರವನ್ನು ಕುರಿತು), ಆದೇಶಂ = ಅಪ್ಪಣೆಯನ್ನು, ವದ = ಹೇಳುವವನಾಗು, ರಮಾಪತಿಃ = ಲಕ್ಷ್ಮೀಪತಿಯಾದ, ಸಃ = ಶ್ರೀನಿವಾಸನು, ರಮಾವಚನಂ = ಲಕ್ಷ್ಮಿಯ ವಚನವನ್ನು, ಶ್ರುತ್ವಾ = ಕೇಳಿ, ಸಾಧ್ವೀಂ = ಪತಿವ್ರತೆಯಾದ ಲಕ್ಷ್ಮೀದೇವಿಯನ್ನು ಕುರಿತು, ಆಹ = ಹೇಳಿದನು ॥ 59 ॥

*ಶ್ರೀನಿವಾಸ ಉವಾಚ -*

**ತ್ವಯಾ ರಾಮಾವತರೇತು ಕಥಿತಂ ಸ್ಮರ ಭಾಮಿನಿ ।**
**ವೇದವತ್ಯಾ ವಿವಾಹಸ್ಯ ಸಂಪ್ರಾಪ್ತಃ ಕಾಲ ಏಷ ವೈ ॥ 60 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳುತ್ತಿರುವನು, ಭಾಮಿನಿ = ಎಲೈ ಲಕ್ಷ್ಮಿ, ರಾಮಾವತಾರೇತು = ರಾಮಾವತಾರ ಕಾಲದಲ್ಲಿ, ತ್ವಯಾ = (ಸೀತೆಯಗಿದ್ದ) ನಿನ್ನಿಂದ, ಕಥಿತಂ = ಹೇಳಲ್ಪಟ್ಟದ್ದನ್ನು, ಸ್ಮರ = ಸ್ಮರಿಸಿಕೋ, ವೇದವತ್ಯಾ = ವೇದವತಿಯ, ವಿವಾಹಸ್ಯ = ಮದುವೆಗೆ, ಏಷ ವೈಕಾಲಃ = ನಿಶ್ಚಿತವಾಗಿದ್ದ ಸಮಯವು, ಸಂಪ್ರಾಪ್ತಃ = ಈಗ ಬಂದಿದೆ ॥ 60 ॥

**ತ್ವತ್ಸನ್ನಿಧೌ ಕರ್ತುಕಾಮೋ ವಿವಾಹಂ ಚ ಕಲೌಯುಗೇ ।**
**ವದತ್ಯೇವಂ ಹೃಷೀಕೇಶೇ ಸಾ ಸ್ಮರತ್ಪೂರ್ವಿಕಾಂಗಿರಮ್ ॥ 61 ॥**

ಕಲೌಯುಗೇ = ಈ ಕಲಿಯುಗದಲ್ಲಿ, ತ್ವತ್ಸನ್ನಿಧೌ = ನಿನ್ನ ಸಾನ್ನಿಧ್ಯದಲ್ಲಿ, ವಿವಾಹಂ = ಮದುವೆಯನ್ನು, ಕರ್ತುಕಾಮಃ = ಮಾಡಿಕೊಳ್ಳಲು ಅಪೇಕ್ಷಿಸಿದ್ದೇನೆ, ಹೃಷೀಕೇಶೇ = ಶ್ರೀನಿವಾಸನು, ಏವಂ = ಹೀಗೆ, ವದತಿ (ಸತಿ) = ಹೇಳುತ್ತಿರಲು, ಪೂರ್ವಿಕಾಂ = ಹಿಂದಿನ, ಗಿರಂ = ತನ್ನ ಮಾತನ್ನು, ಸಾ = ಲಕ್ಷ್ಮೀದೇವಿಯು, ಸ್ಮರತ್ = ನೆನೆಸಿಕೊಂಡಳು ॥ 61 ॥

*ಶ್ರೀರಮೋವಾಚ-*

**ತಾಮಂಗೀಕುರು ಗೋವಿಂದ ವಿವಾಹೇ ವಿಧಿಪೂರ್ವಕಮ್[17] ।**
**[18]ಇತಿ ಮೇ ವಚನಂ ಕೃಷ್ಣ ಸಫಲಂ ಕುರು ವತ್ಸಲ ॥ 62 ॥**

ಶ್ರೀರಮೋವಾಚ = ಶ್ರೀಲಕ್ಷ್ಮೀದೇವಿಯು ಹೇಳುತ್ತಲಿದ್ದಾಳೆ : ಗೋವಿಂದ = ಶ್ರೀಹರಿಯೇ! ವಿಧಿಪೂರ್ವಕಂ = ವಿದ್ಯುಕ್ತನಾದ, ವಿವಾಹೇ = ವಿವಾಹದಲ್ಲಿ, (ಪಾ:-ವಿವಾಹ ವಿಧಿಪೂರ್ವಕಂ = ವೈವಾಹಿಕ ಪದ್ಧತಿಯನ್ನು ಅನುಸರಿಸಿ), ತಾಂ = ವೇದವತಿಯ ಅಂಶದಿಂದ ಹುಟ್ಟಿರುವ ಪದ್ಮಾವತಿಯನ್ನು, ಅಂಗೀಕುರು = ಸ್ವೀಕರಿಸು (ಪರಿಗ್ರಹಿಸು), ಇತಿ = ಹೀಗೆ ; ಕೃಷ್ಣ = ಶ್ರೀಕೃಷ್ಣನೇ, ವತ್ಸಲ = ವಾತ್ಸಲ್ಯವುಳ್ಳವನೇ, ಮೇ = ನನ್ನ, ವಚನಂ = ಮಾತನ್ನು, ಸಫಲೀಕುರು = ಸಫಲಗೊಳಿಸು, (ಪಾ:- ಭಕ್ತವತ್ಸಲ = ಭಕ್ತರಲ್ಲಿ ವಾತ್ಸಲ್ಯವುಳ್ಳ, ಕೃಷ್ಣ = ಶ್ರೀಹರಿಯೇ, ಮೇ = ನನ್ನ, ವಚನಂ = ಮಾತನ್ನು, ಸಫಲಂಕುರು = ಸಫಲವನ್ನಾಗಿ ಮಾಡು), ॥ 62 ॥

**ಇತ್ಯುಕ್ತ್ವಾ ಶ್ರೀನಿವಾಸಂ ಸಾ ನನಾಮ ಚ ಮುದಾನ್ವಿತಾ ।**
**ಹರಿಸ್ತು ಲೋಕಜನನೀಮಾನಂದಯದುದಾರಧೀಃ ॥ 63 ॥**

17. ವಿವಾಹ ವಿಧಿಪೂರ್ವಕಂ, 18. ಪಾ. ವಚನಂ ಸಫಲಂ ಕೃಷ್ಣ ಕುರುಮೇ ಭಕ್ತವತ್ಸಲ.

ಇತ್ಯುಕ್ತ್ವಾ = ಹೀಗೆ ಹೇಳಿದವಳಾಗಿ, ಸಾ = ಲಕ್ಷ್ಮೀದೇವಿಯು, ಮುದಾನ್ವಿತಾ = ಹರ್ಷಯುಕ್ತಳಾಗಿ, ಶ್ರೀನಿವಾಸಂ = ಶ್ರೀನಿವಾಸನನ್ನು ಕುರಿತು, ನನಾಮ = ನಮಸ್ಕರಿಸಿದಳು, ಉದಾರಧೀಃ = ಉದಾರ ಬುದ್ಧಿಯುಳ್ಳ, ಹರಿಃ = ಶ್ರೀನಿವಾಸನು, ಲೋಕಜನನೀಂ = ಜಗನ್ಮಾತೆಯಾದ ಮಹಾಲಕ್ಷ್ಮಿಯನ್ನು, ಆನಂದಯತ್ = ಸಂತೋಷಪಡಿಸಿದನು ।। 63 ।।

**ಸ ರಮಾ ಗಿರಿಮಾಕರ್ಣ್ಯ ಪರಿಪೂರ್ಣ ಮನೋರಥಃ ।**
**ಪರಮಾನಂದಸಂಪೂರ್ಣಃ ಉರಗಾದ್ರೌ ವ್ಯರಾಜತ ।। 64 ।।**

ಸಃ = ಶ್ರೀನಿವಾಸನು, ರಮಾಗಿರಮಾಕರ್ಣ್ಯ = ರಮಾದೇವಿಯ ಮಾತನ್ನಾಲಿಸಿ, ಪರಿಪೂರ್ಣ ಮನೋರಥಃ = ನೆರವೇರಿದ ಮನೋಕಾಮನೆಯುಳ್ಳವನಾಗಿ, ಪರಮಾನಂದ ಸಂಪೂರ್ಣಃ = ಉತ್ಕೃಷ್ಟಾನಂದ ಭರಿತನಾಗಿ, ಉರಗಾದ್ರೌ = ಶೇಷಗಿರಿಯಲ್ಲಿ, ವ್ಯರಾಜತ = ವಿರಾಜಿಸಿದನು ।। 64 ।।

**ಸಂತೋಷಸಂಸೂಚಕಸರ್ವಗಾತ್ರ ಆನಂದಬಾಷ್ಪೇಣ ಸಮೃದ್ಧನೇತ್ರಃ ।**
**ಬ್ರಹ್ಮೇಶ ಶಕ್ರಸ್ತುತಸಚ್ಚರಿತ್ರಃ ತದಾ ಬಭೌ ವೇಂಕಟಶೈಲಮಿತ್ರಃ ।। 65 ।।**

ತದಾ = ಆವಾಗ, ವೇಂಕಟಶೈಲ ಮಿತ್ರಃ = ವೇಂಕಟಗಿರಿಗೆ ಸಖನಾದ (ವೇಂಕಟಗಿರಿಯಲ್ಲಿ ಸೂರ್ಯನಂತೆ ಪ್ರಕಾಶಿಸುವ), ಬ್ರಹ್ಮೇಶ ಶಕ್ರಸ್ತುತ ಸಚ್ಚರಿತ್ರಃ = ಬ್ರಹ್ಮ = ಬ್ರಹ್ಮದೇವನೇನು, ಈಶ = ರುದ್ರದೇವನೇನು, ಶಕ್ರ = ಇಂದ್ರನು - ಇವರುಗಳಿಂದ, ಸ್ತುತ = ಸ್ತೋತ್ರ ಮಾಡಲ್ಪಟ್ಟ, ಸಚ್ಚರಿತ್ರಃ = ಸಮೀಚೀನ ಚರಿತ್ರೆಯುಳ್ಳ (ವೇದಪ್ರತಿಪಾದ್ಯವಾದ ಸಮೀಚೀನ ಚರಿತ್ರೆಯುಳ್ಳ), ಸಂತೋಷ ಸಂಸೂಚಕ ಸರ್ವಗಾತ್ರಃ = ಯಾವಾಗಲೂ ಸಂತೋಷವನ್ನೇ ಸೂಚಿಸುವ ಸಕಲ ಅವಯವಗಳುಳ್ಳ, ಆನಂದಬಾಷ್ಪೇಣ = ಆನಂದದ ಕಣ್ಣೀರಿನಿಂದ, ಸಮೃದ್ಧನೇತ್ರಃ = ತುಂಬಿದ ಕಣ್ಣುಳ್ಳವನು, ಬಭೌ = ಆದನು ।। 65 ।।

*ಪಾಠಾಂತರ :-*

**ಆನಂದಬಾಷ್ಪೇಣ ಸಮೃದ್ಧನೇತ್ರಃ । ಸ್ವಾನಂದ ಸಂವಿತ್ಪರಿಪೂರ್ಣಗಾತ್ರಃ ।।**
**ಬ್ರಹ್ಮೇಶಶಕ್ರಸ್ತುತ ಸಚ್ಚರಿತ್ರಃ । ಸ್ವಾಧಾಮ ಭೂತಾಹಿವರಾಖ್ಯಗೋತ್ರಃ ।।**

(ಪಾ :- ಸ್ವಾನಂದ = ಆತ್ಮಾನಂದ ವಿಷಯಕ, ಸಂವಿತ್ = ಬುದ್ಧಿಯಿಂದ, ಪರಿಪೂರ್ಣ = ತುಂಬಿರುವ, ಗಾತ್ರಃ = ಶರೀರವುಳ್ಳವನಾದ, ಬ್ರಹ್ಮೇಶ ಶಕ್ರಸ್ತುತ ಸಚ್ಚರಿತ್ರಃ = ಬ್ರಹ್ಮ-ರುದ್ರ-ಇಂದ್ರಾದಿದೇವತೆಗಳಿಂದ ಕೊಂಡಾಡಲ್ಪಟ್ಟ ಉತ್ತಮ ಚರಿತ್ರೆಯುಳ್ಳವನಾದ, ಸ್ವಧಾಮಭೂತಾಹಿ ವರಾಖ್ಯಗೋತ್ರಃ - ಸ್ವಧಾಮಭೂತ = ತನ್ನ ವಾಸಸ್ಥಳವಾಗಿ ಮಾಡಿಕೊಂಡಿರುವ, ಅಹಿವರ = ಶೇಷನೆಂಬ, ಆಖ್ಯ = ಹೆಸರುಳ್ಳ, ಗೋತ್ರಃ = ಪರ್ವತವುಳ್ಳ ಶ್ರೀನಿವಾಸನು, ಆನಂದಬಾಷ್ಪೇಣ = ಸಂತೋಷದಿಂದ ಉಂಟಾದ ಕಣ್ಣೀರಿನಿಂದ, ಸಮೃದ್ಧ = ತುಂಬಿರುವ, ನೇತ್ರಃ = ಕಣ್ಣುಳ್ಳವನು (ಅಭವತ್ = ಆದನು) ।। 65 ।।

## ಕಥಾಸಾರ

ಶತಾನಂದ ಋಷಿಗಳು ಜನಕರಾಜನಿಗೆ ಶ್ರೀವೇಂಕಟೇಶನ ಮಹಿಮಾತಿಶಯವನ್ನು ವಿವರಿಸುತ್ತಾ ಮುಂದುವರೆದು ''ಜನಕಮಹಾರಾಜ! ಇಂದ್ರನು ಆಕಾಶರಾಜನ ನಗರಕ್ಕೆ ಭಗವಾನ್ ಶ್ರೀನಿವಾಸನ ಆಣತಿಯಂತೆ ವಿಶ್ವಕರ್ಮನೊಡನೆ ಹೊರಟಮೇಲೆ ಶ್ರೀನಿವಾಸನು ದೇವತೆಗಳಿಗೆ ಅವರನ್ನು ಕರೆಯಿಸಿದ ಕಾರಣವನ್ನು ತಿಳಿಸುತ್ತಾ ಹೀಗೆ ಹೇಳಿದನು''

ಶ್ರೀನಿವಾಸ:- ಎಲೈ ದೇವತೆಗಳೇ! ನೀವೆಲ್ಲರೂ ಅಂಗೀಕರಿಸಿದ ಪಕ್ಷದಲ್ಲಿ ನಾನು ನಾರಾಯಣಪುರದಲ್ಲಿ ಆಕಾಶರಾಜನ ಕುಮಾರಿಯಾದ ಪದ್ಮಾವತಿಯನ್ನು ವಿವಾಹ ಮಾಡಿಕೊಳ್ಳಲು ಬಯಸಿದ್ದೇನೆ.

ಜನಕಮಹಾರಾಜ! ಶ್ರೀಹರಿಯ ನುಡಿಯನ್ನಾಲಿಸಿ ಶ್ರೀವಾಸುದೇವನ ಮಕ್ಕಳಾದ ಶ್ರೀಬ್ರಹ್ಮದೇವರೇ ಮೊದಲಾದ ದೇವತೆಗಳು ಶ್ರೀಹರಿಗೆ ಆಗಮಿಸಿ ಇಂತೆಂದರು.

ಬ್ರಹ್ಮಾದಿದೇವತೆಗಳು:- ದೇವ! ನಾವು ನಿನಗೆ ಹೇಳಲು ಅಸಮರ್ಥರು, ನಾವು ನಿನ್ನ ಸೇವಕರು. ನೀನು ಪದ್ಮಾವತಿಯ ಕರಪಿಡಿದರೆ ನಾವು ನಿನ್ನ ಭವ್ಯಕಲ್ಯಾಣ ಮಹೋತ್ಸವವನ್ನು ನೋಡಿ ಆನಂದಿಸುತ್ತೇವೆ.

ರುದ್ರ :- ಭಗವನ್! ನೀನು ಪ್ರಾಕೃತಮಾನವರಂತೆ ವಿನೋದವಚನವನ್ನಾಡುತ್ತಿದ್ದೀಯೆ. ನಿನ್ನ ಮನಸ್ಸಿಗೆ ಬಂದಿದ್ದಲ್ಲಿ, ಇದು ಯೋಗ್ಯವೆಂದು ನೀನು ಭಾವಿಸಿದ್ದಲ್ಲಿ ಲಗ್ನವಾಗು.

ಶಿವನ ಮಾತನ್ನು ಕೇಳಿ ಶ್ರೀಹರಿಯು ನಸುನಗುತ್ತಾ ಶಂಕರನನ್ನು ಪ್ರಶಂಸಿಸಿದನು. ಆಗ ಬ್ರಹ್ಮದೇವನು ಶ್ರೀಶೇಷಗಿರಿಗೆ ಅಧಿಪತಿಯಾದ ಶ್ರೀನಿವಾಸನನ್ನು ಕುರಿತು ಇಂತೆಂದನು.

ಬ್ರಹ್ಮ:- ಕರುಣಾಶೀಲ, ಶ್ರೀಹರಿ! ನೀನು ಸರ್ವಜ್ಞನು, ಸತ್ಯಸಂಕಲ್ಪನು, ನಿನ್ನಿಚ್ಛೆಯಂತೆಯೇ ಎಲ್ಲವೂ ಜರುಗುವುದು, ಆದುದರಿಂದ ನಿನ್ನ ಮಂಗಳಕರವಿವಾಹಮಹೋತ್ಸವದ ಪೂರ್ವದಲ್ಲಿಯೇ ಜರುಗಬೇಕಾದ ವಿಚಾರವನ್ನು ಅರಿಕೆ ಮಾಡುತ್ತೇನೆ. ಪುರುಷೋತ್ತಮ! ವಿವಾಹಕ್ಕೆ ಮೊದಲು ಅಷ್ಟವರ್ಗಗಳು ನೆರವೇರಬೇಕು. ಅಷ್ಟವರ್ಗವೆಂದರೆ; ಮಂಗಳಾಭ್ಯಂಜನಪೂರ್ವಕವಾಗಿ, ಗಣಪತಿಯ ಪೂಜೆ, ವರುಣ, ನವಗ್ರಹ-ನಾಂದೀದೇವತೆಗಳ ಪೂಜೆ, ಇಷ್ಟದೇವತಾ, ಕುಲದೇವತೆಗಳ ಪೂಜೆ, ಗೌದಾನಿಕವ್ರತ ಮತ್ತು ಸಮಾವರ್ತನ ಎಂಬೀ ಎಂಟು ವಿಧ ಕರ್ಮಗಳು ಜರುಗಬೇಕು. ಇದು ಶಾಸ್ತ್ರಪ್ರಸಿದ್ಧವು. ಆದ್ದರಿಂದ ದೇವ! ಪುಣ್ಯಾಹಾದಿ ಈ ಕಾರ್ಯಗಳನ್ನು ಮಾಡಲು ನನಗೆ ಅಪ್ಪಣೆಯನ್ನು ದಯಪಾಲಿಸು.

ಆಗ ಶ್ರೀನಿವಾಸನು ಮಗನ ಮಾತಿನಿಂದ ಮುದಿಸಿ ಮುನಿವರನಾದ ವಸಿಷ್ಠಮುನಿಗಳನ್ನು ಕರೆಯಿಸಿಕೊಂಡು ಅವರಿಗೆ ಹೀಗೆ ಹೇಳಿದನು. ''ಮಹಾಭಾಗ, ಮುನಿಶ್ರೇಷ್ಠ! ನನ್ನೀ ಕಲ್ಯಾಣ ಮಹೋತ್ಸವ ಸಮಾರಂಭದಲ್ಲಿ ಯಜುರ್ವೇದದಲ್ಲಿ ಹೇಳಿರುವ ಮಂತ್ರಗಳಿಂದಲೇ ಪುಣ್ಯಾಹಾದಿ ಎಲ್ಲ ಕರ್ಮಗಳು ನೆರವೇರಬೇಕು. ಬ್ರಹ್ಮದೇವ! ನೀನು ಸಕಲ ದೇವತೆಗಳಿಗೂ ಯಜಮಾನನಾಗಿರತಕ್ಕದ್ದು. ಮುನಿವರ್ಯ! ನೀವು ಸಕಲ ಋಷಿಗಳಿಗೆ ಯಜಮಾನರಾಗಿರಬೇಕು'' ಎಂದು ಲಗ್ನಪೌರೋಹಿತ್ಯಕ್ಕೆ ವಸಿಷ್ಠ ಋಷಿಗಳನ್ನು ನೇಮಿಸಿದನು. ರುದ್ರದೇವನಿಗೆ ಸಕಲ ಸುರರು, ಋಷಿವರರನ್ನು ಗೌರವಿಸುವ ಕಾರ್ಯಮಾಡುವಂತೆ ಆಜ್ಞಾಪಿಸಿದನು, ದೇವತೆಗಳನ್ನು ಆಹ್ವಾನಿಸುವ ಕಾರ್ಯದಲ್ಲಿ ಷಣ್ಮುಖನನ್ನು ನೇಮಿಸಿದನು. ಆಗಮಿಸಿದ ದೇವತೆಗಳನ್ನು ಎದ್ದುನಿಂತು ಮರ್ಯಾದೆ ಮಾಡಲೂ, ಅವರನ್ನು ಬೀಳ್ಕೊಡಲು ಮನ್ಮಥನನ್ನು ನೇಮಕ ಮಾಡಿದನು. ನಂತರ ವಸಿಷ್ಠ, ರುದ್ರ, ಷಣ್ಮುಖ, ಮನ್ಮಥರಿಗೆ ಆಯಾ ಕಾರ್ಯನಿರ್ವಹಣೆಗಾಗಿ ತಾಂಬೂಲವನ್ನು ಕೊಟ್ಟು, ತರುವಾಯ ಅಗ್ನಿದೇವನನ್ನು ಆಹ್ವಾನಿಸಿ ''ಅಗ್ನಿದೇವ! ನೀನು ಅಡಿಗೆ ಮಾಡಿದರೆ ಸಕಲ ದೇವತೆಗಳಿಗೂ, ಋಷಿಮುನಿಗಳಿಗೂ ಬಹು ಒಪ್ಪಿಗೆಯಾಗುವುದು. ಆದುದರಿಂದ ನೀನು ಸ್ವಧಾ-ಸ್ವಾಹಾದೇವಿಯರೆಂಬ ನಿನ್ನ ಪತ್ನಿಯರೊಡನೆ ಸಹಿತನಾಗಿ, ನನ್ನ ಲಗ್ನಕಾಲದಲ್ಲಿ ಅಡುಗೆಯ ಕಾರ್ಯವನ್ನು ನೆರವೇರಿಸು'' ಎಂದು ಆಜ್ಞಾಪಿಸಿದನು. ಶ್ರೀಹರಿಯ ಅಪ್ಪಣೆಯನ್ನು ಕೇಳಿ ವೈಶ್ವಾನರನು ''ತಮ್ಮ ಆಜ್ಞೆಯಂತೆ ವರ್ತಿಸುತ್ತೇನೆ'' ಎಂದನು.

ಜನಕಮಹಾರಾಜ! ಆನಂತರ ಶ್ರೀನಿವಾಸನು ಸಕಲ ಪ್ರಾಣಿಗಳಿಗೂ ನೀರನ್ನು ಒದಗಿಸಲು ವರುಣದೇವನಿಗೂ, ದುಷ್ಟರನ್ನು ದಂಡಿಸುವುದು, ಸಜ್ಜನರನ್ನು ರಕ್ಷಿಸುವುದು-ಈ ಕಾರ್ಯ ಮಾಡಲು ಯಮಧರ್ಮರಾಜನಿಗೂ,

ಪರಿಮಳದ್ರವ್ಯಗಳ ವಿಚಾರದಲ್ಲಿ ವಾಯುದೇವನಿಗೂ, ಹೀಗೆ ಕಾರ್ಯಗಳನ್ನು ವಿಂಗಡಿಸಿ ಆಯಾ ಕಾರ್ಯಮಾಡುವಂತೆ ಅಪ್ಪಣೆಮಾಡಿದನು. ಇದರಂತೆ-ಬ್ರಾಹ್ಮಣರಿಗೆ ದಕ್ಷಿಣಾಪ್ರದಾನ ಮಾಡುವುದು, ವಸ್ತ್ರ, ಆಭರಣಗಳನ್ನು ಕೊಡುವ ಕಾರ್ಯವನ್ನು ಶ್ರೀಹರಿಯು, ಧನಾಧಿಪತಿಯಾದ ಕುಬೇರನಿಗೆ ಒಪ್ಪಿಸಿದನು. ನಂತರ ಚಂದ್ರನನ್ನು ಕರೆದು ''ಚಂದ್ರ! ನೀನು ದೀಪದ ವ್ಯವಸ್ಥೆ ಮಾಡತಕ್ಕದ್ದು'' ಎಂದಾಜ್ಞಾಪಿಸಿದನು. ಕಾಳಿಂಗಮರ್ದನನಾದ ಶ್ರೀನಿವಾದಸದೇವನು, ಭಾಂಡಗಳ (ಪಾತ್ರೆಗಳ) ಶುದ್ಧೀಕರಣ ಕಾರ್ಯ ನಿರ್ವಹಣೆಯ ಜವಾಬ್ದಾರಿ (ಹೊಣೆಗಾರಿಕೆ)ಯನ್ನು ಅಷ್ಟವಸುಗಳಿಗೆ ವಹಿಸಿಕೊಟ್ಟನು ಮತ್ತು ನಾಲ್ಕು ಕೊಳಗ ಧಾನ್ಯವನ್ನು ಬೇಯಿಸುವ ಪಾತ್ರೆಗಳು, ಅದರ ಶುದ್ಧೀಕರಣಕ್ಕೆ ಸೂರ್ಯಾದಿಗ್ರಹಗಳನ್ನು ನೇಮಿಸಿದನು. ಪುರಾಣ ಪುರುಷೋತ್ತಮನಾದ ಶ್ರೀವಿಷ್ಣುವಿನಿಂದ ಹೀಗೆ ಆಜ್ಞಾಪಿತರಾದ, ನೇಮಕಗೊಂಡ ಸಕಲರೂ ತಮ್ಮ ತಮ್ಮ ಕರ್ತವ್ಯ ಕರ್ಮಗಳಲ್ಲಿ ಆಸಕ್ತರಾಗಿ ಕಾರ್ಯನಿರತರಾದರು. ಅನಂತರ ಲೋಕಪಿತಾಮಹನಾದ ಬ್ರಹ್ಮದೇವನು ಹೀಗೆ ನುಡಿದನು-

ಬ್ರಹ್ಮ:- ಮಧುನಾಮಕ ದೈತ್ಯಸಂಹಾರಿಯಾದ ಶ್ರೀಗೋವಿಂದ! ಲಕ್ಷ್ಮೀರಮಣ! ನೀನೀಗ ಮಂಗಳಾಭ್ಯಂಜನವನ್ನು ಪೂರೈಸಿ, ಪುಣ್ಯಾಹಾದಿ ಕರ್ಮಗಳು, ಸ್ವೇಷ್ಟದೇವತೆಯ ಆರಾಧನೆ, ಕುಲದೇವತಾ ಪ್ರತಿಷ್ಠೆ, ನಿವೇದನ, ಸ್ಥಾಪನೆಗಳನ್ನು, ವಿಧ್ಯುಕ್ತಕ್ರಮದಲ್ಲಿ ಸಾಂಗವಾಗಿ ನೆರವೇರಿಸು.

ಮಗನ ವಚನವನ್ನಾಲಿಸಿ ಜಗತ್ತಿಗೆ ಪ್ರಭುವಾದ ಶ್ರೀನಿವಾಸನು ಕೊಲ್ಲಾಪುರದಲ್ಲಿ ವಾಸಮಾಡುತ್ತಿರುವ ಕಮಲ-ನಯನಳಾದ ಪ್ರಿಯಪತ್ನಿ ಶ್ರೀಲಕ್ಷ್ಮೀದೇವಿಯನ್ನು ನೆನೆಸಿಕೊಂಡನು. ರಾಜಶಾರ್ದೂಲನಾದ ಎಲೈ ಜನಕಮಹಾರಾಜ! ನಿತ್ಯಾವಿಯೋಗಿನಿಯಾದ ಲಕ್ಷ್ಮೀದೇವಿಯನ್ನು ನೆನೆದು ಭಗವಾನ್ ಶ್ರೀನಿವಾಸನು, ಮಾನವಶರೀರ ಧರಿಸಿರುವ, ಸಾಮಾನ್ಯ ಮಾನವನಂತೆ ಅಳಲಾರಂಭಿಸಿದನು. ನಂತರ ಪುತ್ರನಾದ ನಾಲ್ಮೊಗನನ್ನು ನೋಡಿ ಇಂತೆಂದನು-

ಶ್ರೀನಿವಾಸ:- ಅತಿಶಯ ಮತಿವಂತನಾದ ಕುಮಾರ! ನನ್ನ ಪ್ರಿಯಳಾದ ಲಕ್ಷ್ಮೀದೇವಿಯು ಇಲ್ಲದ ದೇವತಾ ಯೋಗ್ಯವಾದ ಈ ಸಭೆಯು ಪ್ರಕಾಶಿಸುವುದಿಲ್ಲ! ವತ್ಸ, ನೀನು, ನಾನು, ಸಪರಿವಾರರಾದ ಈ ಎಲ್ಲ ದೇವತೆಗಳೂ ಪ್ರಕಾಶಹೀನರಾಗಿದ್ದೇವೆ. ಗಗನದಲ್ಲಿ ವಿರಾಜಿಸುವ ನಕ್ಷತ್ರಗಳು, ತಾರಾಪತಿಯಾದ ಚಂದ್ರನಿಲ್ಲದಿದ್ದರೆ; ಮರಗಳಿಲ್ಲದ ಅರಣ್ಯವೂ ಹೇಗೆ ಶೋಭಿಸುವುದಿಲ್ಲವೋ, ರೆಕ್ಕೆಗಳಿಲ್ಲದಿರುವ ಪಕ್ಷಿಗಳು, ಫಲಗಳಿಲ್ಲದ ವೃಕ್ಷಗಳು, ಧನರಹಿತನಾದ ಸ್ನೇಹಿತರು ಹೇಗೋ ಹಾಗೆ ಲಕ್ಷ್ಮೀದೇವಿಯಿಲ್ಲದ ಈ ಸಭೆಯೂ, ನಾವೂ ಸಹ ಕಂಗೊಳಿಸುವುದಿಲ್ಲ! ನಾವು ಪ್ರಯೋಜನಕ್ಕೆ ಬಾರದವರಾಗಿದ್ದೇವೆ.

ಜನಕರಾಜ! ಆಗ ವಾಸುದೇವನ ಮಾತನ್ನು ಕೇಳಿದ ದೀರ್ಘಬಾಹುವಾದ ರುದ್ರದೇವನು ಆ ದೇವ ಸಭೆಯಲ್ಲಿ ಎದ್ದುನಿಂತು ''ದೇವತಾ ಸಾರ್ವಭೌಮನಾದ, ನನಗೆಜ್ಜನಾದ ಶ್ರೀಹರಿಯೇ! ನೀನು ಸಂಗರಹಿತನು, ನಿನ್ನ ವಿಚಾರವನ್ನು ಇದು ಹೀಗೆಯೇ ಎಂದು ಹೇಳಲು ಯಾರಿಂದಲೂ ಸಾಧ್ಯವಿಲ್ಲ, ಅಂತೆಯೇ ನೀನು ಅಪ್ರಮೇಯನು! ಕ್ಲೇಶವೆಂಬುದು ನಿನ್ನ ಹತ್ತಿರವೂ ಸುಳಿಯಲಾರದು, ಸಾಧು ಜನರಿಗೆ ವರವೀಯುವ ಪ್ರಭುವಾದ (ಅಕ್ರೂರವರದನಾದ), ದೇವ! ಈ ಬಗೆಯ ವಿಡಂಬನೆಯಿಂದ ನಿನಗಾಗಬೇಕಾದುದು ಏನಿದೆ? ವ್ಯರ್ಥವಾಗಿ ಏಕೆ ಇಂತು ಕಣ್ಣೀರಿಡುತ್ತಿರುವೆ?'' ಆ ರುದ್ರದೇವನ ನುಡಿಯನ್ನಾಲಿಸಿ ಷಡ್ಗುಣೈಶ್ವರ್ಯಪೂರ್ಣನಾದ ಶ್ರೀನಿವಾಸನು ನೀಲಕಂಠನನ್ನು ಕುರಿತು ಇಂತೆಂದನು-

ಶ್ರೀಭಗವಾನ್ - ಪೌತ್ರ, ಶಂಭು! ನೀನಿನ್ನೂ ಹುಡುಗನಾದುದರಿಂದ ಇದನ್ನು ನೀನು ಅರಿಯದವನಾಗಿದ್ದೀಯೆ! ಚತುರಾನನನಾದ ಬ್ರಹ್ಮದೇವನ ಅವಸಾನವಾದ ಮೇಲೆ ಪ್ರಳಯಕಾಲದಲ್ಲಿ ಏನೊಂದೂ ಸ್ವಲ್ಪವೂ ಉಳಿದಿರುವುದಿಲ್ಲ, ಆಲಂಬನವಿಲ್ಲದ, ಆಶ್ರಯರಹಿತವಾದ ಆ ಪ್ರಳಯಕಾಲದ ಕ್ಷೀರಸಮುದ್ರದಲ್ಲಿ ಹಿತಕಾರಿಣಿಯಾದ ಆ ರಮಾದೇವಿಯು

ನನಗೆ ಹಾಸಿಗೆಯಾಗಿ, ಗೆಳತಿಯಾಗಿ ನನ್ನೊಡನೆ ಕ್ರೀಡಿಸುವಳು ಶಂಕರ! ಇಂತಹ ಲಕ್ಷ್ಮೀದೇವಿಯನ್ನು ಬಿಟ್ಟು ನನಗೆ ಸುಖವು ಅದೆಂತು ಉಂಟಾದೀತು?

ಶ್ರೀನಿವಾಸನು ರುದ್ರನಿಗಿಂತು ಹೇಳುತ್ತಿರುವಾಗ ಕಮಲಾಸನನು ''ಜನಾರ್ದನ! ಶ್ರೀನಿವಾಸ, ನೀನು ಈ ವಿಚಾರವನ್ನು ನನಗೆ ಮೊದಲು ಹೇಳಿರಲಿಲ್ಲ. ಕಮಲಾವಲ್ಲಭ! ನೀನು ನನಗೆ ಕಮಲಾದೇವಿಯನ್ನು ಕರೆದು ತರಲು ಆಜ್ಞಾಪಿಸು'' ಎಂದೆನಲು ಶ್ರೀಹರಿಯು ಮಗನ ಮಾತು ಕೇಳಿ ದಿನಮಣಿ(ಸೂರ್ಯ)ಯನ್ನು ಷಣ್ಮುಖನ ಮೂಲಕ ಕರೆಯಿಸಿದನು. ಸೂರ್ಯನು ಶ್ರೀಹರಿ ಸನ್ನಿಧಿಗೆ ಬಂದು ಭಕ್ತಿಯಿಂದ ಸ್ತುತಿಸಿ ನಮಸ್ಕರಿಸಿ ನಿಂತನು. ಭಕ್ತಿನಮ್ರಾಂಗನಾದ ಭಾಸ್ಕರನನ್ನು ನೋಡಿ ಶ್ರೀವಾಸುದೇವನು ತನ್ನ ಮನೋಗತವನ್ನು ಹೀಗೆ ನಿರೂಪಿಸಿದನು.

ಶ್ರೀಭಗವಾನ್:- ಭಾಸ್ಕರ, ಸೃಗಾಲವಾಸುದೇವನ ರಾಜಧಾನಿಯಾದ ಕೊಲ್ಲಾಪುರಕ್ಕೆ ಹೋಗು. ಅಲ್ಲಿ ಜಗನ್ಮಾತೆಯಾದ ಲಕ್ಷ್ಮೀದೇವಿಯು ಇರುವಳು. ನನ್ನ ಪ್ರೀತಿಪಾತ್ರಳಾದ ರಮೆಯನ್ನು ಇಲ್ಲಿಗೆ ಕರೆದುಕೊಂಡು ಬಾ.

ಭಗವಂತನ ವಚನವನ್ನಾಲಿಸಿ ಪೌತ್ರನಾದ ಭಾಸ್ಕರನು ನಮ್ರತೆಯಿಂದ ಇಂತು ವಿಜ್ಞಾಪಿಸಿದನು - ''ಪ್ರಭು! ಲೋಕಜನನಿಯಾದ ಶ್ರೀಮಹಾಲಕ್ಷ್ಮಿಯನ್ನು ನಾನೆಂತು ನಿನ್ನ ಬಳಿಗೆ ಕರೆದು ತರಬಲ್ಲೆ? ಗೋವಿಂದ, ರಮಾದೇವಿಯು ನನ್ನನ್ನು ಹೇಗೆ ನಂಬಿಯಾಳು? ಅದನ್ನು ತಿಳಿಸು''.

ಶ್ರೀಭಗವಾನ್ :- ಶ್ರೀಲಕ್ಷ್ಮೀದೇವಿಗೆ ಲೋಕಮಹೋದಯಕಾರಣನಾದ ನಿನ್ನಲ್ಲಿ ಸರ್ವದಾ ವಾತ್ಸಲ್ಯವಿದೆ. ನೀನು ಬಂದೆಯೆಂದು ಆನಂದಗೊಂಡು ಅವಳು ನನ್ನ ಬಳಿಗೆ ಖಂಡಿತ ಬರುವಳು. ಸೂರ್ಯ! ಮಹಾಲಕ್ಷ್ಮಿಯು ಬರುವಂತೆ ಮಾಡಲು ಒಂದು ಯುಕ್ತಿಯನ್ನು ಹೇಳುತ್ತೇನೆ ಕೇಳು. ನೀನು ಕಣ್ಣೀರು ಸುರಿಸುತ್ತಾ, ಒರೆಸಿಕೊಳ್ಳುತ್ತಾ, ಲಕ್ಷ್ಮೀದೇವಿಯ ಮನೆಯ ಬಾಗಿಲಿನ ಬಳಿಯಲ್ಲಿ ನಿಂತಿರು. ಕರುಣಾಮಯಿಯಾದ ರಮಾದೇವಿಯು ನೀನು ಬಂದಿರುವುದನ್ನು ಕಂಡು ನಿನ್ನ ಬಳಿಗೆ ಬಂದು ನಿನ್ನನ್ನು ಸಮಾಧಾನಪಡಿಸುತ್ತಾ ''ಸೂರ್ಯ! ಭೂಮಿಯಲ್ಲಿ ಯಾರು ನಿನ್ನ ಅಧಿಕಾರವನ್ನು ಅಪಹರಿಸಿರುವರು? ಹೇಳು'' ಎಂದು ಕೇಳುವಳು - ಆಗ ನೀನು ಅತ್ಯಂತ ದುಃಖಿತನಾಗಿ ಹೀಗೆ ಹೇಳು - ''ಜನನಿ! ಭೂತಲದಲ್ಲಿ ಈಗ ಯಾರೂ ನನ್ನ ಅಧಿಕಾರವನ್ನು ಕಸಿದುಕೊಂಡಿಲ್ಲ! ಯಾವ ಶ್ರೀಹರಿಯು ಕಾರುಣ್ಯದಿಂದ ನನಗೆ ಈ ಅಧಿಕಾರವನ್ನು ಅನುಗ್ರಹಿಸಿರುವನೋ, ಅಂತಹ ನಿನ್ನ ಪತಿಯಾದ ಶ್ರೀನಿವಾಸನು ಹಾಸಿಗೆ ಹಿಡಿದು ಮಲಗಿಬಿಟ್ಟಿದ್ದಾನೆ! ಹೀಗೆ ನಿನಗೆ ಈ ವಿಚಾರವನ್ನು ತಿಳಿಸುವಂತೆ ಆಜ್ಞಾಪಿಸಿರುವ ನಿನ್ನ ಪತಿಯಾದ ಮಹಾಪ್ರಭುವು ನಿಶ್ಶಕ್ತನಾಗಿ ಮಲಗಿ ಬಿಟ್ಟಿದ್ದಾನೆ. ಅವನು ಬದುಕುವನೋ, ಇಲ್ಲವೋ ನಾನರಿಯೆ. ಜಗತ್ಪ್ರಭುವಾದ ಶ್ರೀಹರಿಯು ಬಹಳ ಅಶಕ್ತನಾಗಿರುವಂತೆ ನನಗೆ ತೋರುತ್ತಿದೆ. ದೇವಿ! ಶ್ರೀನಿವಾಸನು ''ನನ್ನ ಪ್ರಿಯ ಪತ್ನಿಯಾದ ಲಕ್ಷ್ಮೀದೇವಿಯನ್ನು ಯಾವಾಗ ಕಂಡೇನು'' ಎಂದು ಪ್ರಲಪಿಸುತ್ತಿದ್ದಾನೆ'' ಎಂದು ಹೇಳು! ಆಗ ಲಕ್ಷ್ಮೀದೇವಿಯು ನಿನ್ನ ಮಾತು ಕೇಳಿದ ಕೂಡಲೇ ಇಲ್ಲಿಗೆ ಬಂದು ಬಿಡುತ್ತಾಳೆ. ಇದರಲ್ಲಿ ಸಂದೇಹವಿಲ್ಲ!

ಶ್ರೀನಿವಾಸನ ಮಾತುಕೇಳಿ ಪರಿಹಾಸವದನನಾಗಿ ಸೂರ್ಯನು ಭಯಭಕ್ತಿಗಳಿಂದ ನಮ್ರಾಂಗನಾಗಿ ಇಂತು ವಿಜ್ಞಾಪಿಸಿದನು-

ಸೂರ್ಯ:- ಪ್ರಭು! ಕಮಲಸದನಳಾದ ಶ್ರೀಲಕ್ಷ್ಮೀದೇವಿಯು ಸಕಲಲೋಕಗಳಲ್ಲಿಯೂ ಸರ್ವಜ್ಞಳೆಂದು (ಸಕಲವನ್ನೂ ತಿಳಿದವಳೆಂದು) ಪ್ರಖ್ಯಾತಳಾಗಿದ್ದಾಳೆ. ಶ್ರೀಕೃಷ್ಣ! ನನ್ನ ಮನಸ್ಸಿನಲ್ಲಿರುವುದನ್ನು ಆ ಮಹಾತಾಯಿ ಖಂಡಿತವಾಗಿ ತಿಳಿಯುವಳು. ಅಂದಮೇಲೆ ಅವಳು ನನ್ನನ್ನು, ನನ್ನ ಮಾತನ್ನು ಹೇಗೆ ನಂಬುವಳು? ದೇವ, ಶ್ರೀಹರಿ! ಇದರ ಮೇಲೆ ರೋಗರಹಿತನಾದ ನೀನು ರೋಗಗ್ರಸ್ತನಾಗಿರುವಿಯೆಂದು ಹೇಗೆ ತಾನೆ ಹೇಳಲಿ?

ಭಾಸ್ಕರನ ಮಾತು ಕೇಳಿ ಷಡ್ಗುಣ್ಯೈಶ್ವರ್ಯಸಂಪನ್ನನಾದ ಶ್ರೀಹರಿಯು ತನ್ನ ಮನೋಗತವನ್ನು ಹೀಗೆ ಹೇಳಲಾರಂಭಿಸಿದನು – ''ಸೂರ್ಯ! ಅದಕ್ಕಾಗಿ ನೀನು ಚಿಂತಿಸಬೇಡ. ನನ್ನ ಮಾಯೆಯಿಂದ ಲಕ್ಷ್ಮೀದೇವಿಯು ಮೋಹಪರವಶಳಾಗುವಳು. ಇದರಲ್ಲಿ ಸಂಶಯವಿಲ್ಲ. ನಾನು ಹೇಳಿದಂತೆ ಮಾಡು'' ಎಂದು ಆಜ್ಞಾಪಿಸಿದನು. ಪರಮಾತ್ಮನ ವಚನವನ್ನಾಲಿಸಿ ಸೂರ್ಯನು ವಾಸುದೇವನಿಗೆ ನಮಿಸಿ ರಥದಲ್ಲಿ ಕುಳಿತು, ಕರವೀರಪುರಕ್ಕೆ ಹೋಗಿ ಭಗವಂತನು ಹೇಳಿದಂತೆಯೇ ಮಾಡಿದನು.

ಆಗ ಲಕ್ಷ್ಮೀದೇವಿಯು ಹರಿಯ ಆದೇಶದಂತೆ ದೇಶಕಾಲಗಳಿಗೆ ತಕ್ಕಂತೆ ಶ್ರೀಹರಿಯ ಆಚರಣೆಗೆ ತಕ್ಕಂತೆ ತಾನೂ ಆಚರಿಸುತ್ತಾ, ಸೂರ್ಯನ ಮಾತನ್ನು ಸಂಬಿದವಳಂತೆ ವ್ಯಥೆಯನ್ನು ನಟಿಸುತ್ತಾ ಶೀಘ್ರವಾಗಿ ರಥದಲ್ಲಿ ಕುಳಿತು ಶ್ರೀನಿವಾಸನ ಬಳಿಗೆ ಬಂದಳು. ಶ್ರೀಲಕ್ಷ್ಮಿಯು ಬಂದ ವಿಚಾರವನ್ನು ತಿಳಿದು ಶ್ರೀಹರಿಯು ಕೂಡಲೇ ರಮಾದೇವಿಯನ್ನು ಕಾಣುವ ತವಕದಿಂದ ಅಶಕ್ತನೂ, ರೋಗಗ್ರಸ್ತನೂ ಆದವನಂತೆ ಆಕಾರಧರಿಸಿ ರಮಾದೇವಿಗೆ ಅಭಿಮುಖವಾಗಿ ಹೊರಟನು. ಪರಮಾತ್ಮನ ಆ ರೂಪವು ದೇವತೆಗಳು, ರಾಕ್ಷಸರು, ಊರ್ಧ್ವರೇತಸ್ಸುಳ್ಳ ಮುನಿಗಳು, ಹೀಗೆ ಎಲ್ಲರನ್ನೂ ಆಶ್ಚರ್ಯಗೊಳಿಸಿತು! ತನಗೆ ಬೇಕಾದಾಗ ಸ್ವತಂತ್ರನಾಗಿ ಪ್ರಾದುರ್ಭಾವ ಹೊಂದುವ ಶ್ರೀಹರಿ ಪರಮಾತ್ಮನು ಭುಜಂಗಭೂಷಣನಾದ ರುದ್ರದೇವನ ಹೆಗಲಮೇಲೆ ತನ್ನ ಎಡಭುಜವನ್ನಿಟ್ಟು, ತನ್ನ ಬಲತೋಳನ್ನು ಬ್ರಹ್ಮದೇವನ ಕುತ್ತಿಗೆಯಲ್ಲಿಟ್ಟು, ಲಕ್ಷ್ಮಿಯನ್ನು ನೋಡಲು ಬಂದನು! ಅರವಿಂದಾಸನೆಯಾದ ರಮಾದೇವಿಯು ಈ ಬಗೆಯ ವೇಷ ತಾಳಿದ ಶ್ರೀನಿವಾಸನನ್ನು ಅವಲೋಕಿಸಿದಳು. ಆಗ ಶ್ರೀಹರಿಪ್ರಿಯೆಯು ಕೂಡಲೇ ರಥದಿಂದಿಳಿದು ಮಂದಹಾಸಮುಖಾರವಿಂದಳಾಗಿ ಭಗವಂತನ ಪಾದಾರವಿಂದಗಳಲ್ಲಿ ಸಂಪಿಗೆಯ ಕುಸುಮ ಸಮೂಹವನ್ನು ಎರಚಿ ಅತಿಭಕ್ತಿಪರವಶಳಾಗಿ ಶ್ರೀನಿವಾಸನನ್ನು ಆಲಿಂಗಿಸಿಕೊಂಡು ಎರಡು ಮುಹೂರ್ತಕಾಲ ಹಾಗೆಯೇ ನಿಂತಳು. ಕಮಲಾಲಯಳಾದ ಶ್ರೀಕಮಲೆಯ ಕಮನೀಯ ಅಪ್ಪುಗೆ ಮಾತ್ರದಿಂದ ಅತಿ ಪುಷ್ಟಾಂಗನಾಗಿ ಶ್ರೀಕೃಷ್ಣನು ನಗೆಮೊಗದಿಂದ ಲಕುಮಿಯ ಕುಶಲವನ್ನು ಕೇಳಿದನು. ಶ್ರೀರಮಾದೇವಿಯೂ ಶ್ರೀವಾಸುದೇವನ ಕುಶಲ ಸಮಾಚಾರವನ್ನು ವಿಚಾರಿಸಿದಳು.

ಜನಕ ಮಹಾರಾಜ! ಸಮಸ್ತಲೋಕಗಳಿಗೂ ತಂದೆತಾಯಿಗಳಾದ ಶ್ರೀಲಕ್ಷ್ಮೀನಾರಾಯಣರು ಆ ತರುವಾಯ ವಲ್ಮೀಕದ ಬಳಿಗೆ ಬಂದು ಆಸನಾಸೀನರಾದರು. ಆಗ ಲಕ್ಷ್ಮೀದೇವಿಯು ಶ್ರೀಹರಿಯನ್ನು ನೋಡಿ ನಸುನಗುತ್ತಾ ಇಂತೆಂದಳು –

ಶ್ರೀಲಕ್ಷ್ಮೀ:- ದೇವದೇವ, ಶ್ರೀಹರಿ! ಯಾರಿಂದಲೂ ಮೀರಲು ಸಾಧ್ಯವಿಲ್ಲದ ನಿನ್ನ ಮಾಯೆಯು ನನ್ನನ್ನೂ ಮೋಹಗೊಳಿಸುವುದು! ಸೂರ್ಯನನ್ನು ಕಳುಹಿಸಿ ನೀನೆಂತಹ ಆಶ್ಚರ್ಯಕರ ಕಾರ್ಯವನ್ನು ಮಾಡಿಬಿಟ್ಟೆ! ಎಂತಹ ನಾಟಕವನ್ನಾಡಿಬಿಟ್ಟೆಯಲ್ಲ! ಪ್ರಭು; ಬ್ರಹ್ಮ-ರುದ್ರರೇ ಮೊದಲಾದ ಸಮಸ್ತದೇವತೆಗಳೂ ನಿನ್ನ ಮಾಯಾಜಾಲದಲ್ಲಿ ಸಿಲುಕಿ ಮೋಹಿತರಾಗುವರು!! ವಾಸುದೇವ, ಈಗ ಸೂರ್ಯನನ್ನು ಕಳುಹಿಸಿ ನನ್ನನ್ನು ಕರೆಯಿಸಿದ; (ನನಗೂ ಹರ್ಷಕರವಾದ) ಕಾರಣವೇನೆಂಬುದನ್ನು ಕೃಪೆಮಾಡಿ ನಿರೂಪಿಸು.

ರಮೆಯರಸನಾದ ಶ್ರೀನಿವಾಸನು ಸಾಧ್ವಿಯಾದ ಪ್ರಿಯಸತಿಯಾದ ಲಕ್ಷ್ಮೀದೇವಿಯನ್ನು ನೋಡಿ ಮಂದಹಾಸ ಬೀರಿ ಇಂತೆಂದನು.

ಶ್ರೀನಿವಾಸ:- ಕಮಲಾಲಯೆ! ರಾಮಾವತಾರ ಕಾಲದಲ್ಲಿ ಸೀತೆಯಾಗಿದ್ದ ನೀನು ಹೇಳಿದ ಮಾತನ್ನು ಸ್ಮರಿಸಿಕೋ. ನೀನು ಅಂದು ಹೇಳಿದ್ದ, ವೇದವತಿಯ ಪಾಣಿಗ್ರಹಣ ಸಮಯವೀಗ ಪ್ರಾಪ್ತವಾಗಿದೆ. ನಾನು ಹಿಂದೆ ಹೇಳಿದ್ದಂತೆ ಈ ಕಲಿಯುಗದಲ್ಲಿ ನಿನ್ನ ಸಾನ್ನಿಧ್ಯದಲ್ಲಿ ವೇದವತಿಯನ್ನು ವಿವಾಹವಾಗಲು ಅಪೇಕ್ಷಿಸಿದ್ದೇನೆ.

ಹೃಷೀಕೇಶನು ಇಂತು ನುಡಿಯುತ್ತಿರಲು ರಮಾದೇವಿಯು ರಾಮಾವತಾರ ಕಾಲದಲ್ಲಿ ತಾನು ಹೇಳಿದ್ದ ಮಾತನ್ನು ನೆನೆದು ಶ್ರೀಹರಿಯಲ್ಲಿ ಹೀಗೆ ವಿಜ್ಞಾಪಿಸಿದಳು.

ನನಗೆ ಹಾಸಿಗೆಯಾಗಿ, ಗೆಳತಿಯಾಗಿ ನನ್ನೊಡನೆ ಕ್ರೀಡಿಸುವಳು ಶಂಕರ! ಇಂತಹ ಲಕ್ಷ್ಮೀದೇವಿಯನ್ನು ಬಿಟ್ಟು ನನಗೆ ಸುಖವು ಅದೆಂತು ಉಂಟಾದೀತು?

ಶ್ರೀನಿವಾಸನು ರುದ್ರನಿಗಿಂತು ಹೇಳುತ್ತಿರುವಾಗ ಕಮಲಾಸನನು ''ಜನಾರ್ದನ! ಶ್ರೀನಿವಾಸ, ನೀನು ಈ ವಿಚಾರವನ್ನು ನನಗೆ ಮೊದಲು ಹೇಳಿರಲಿಲ್ಲ. ಕಮಲಾವಲ್ಲಭ! ನೀನು ನನಗೆ ಕಮಲಾದೇವಿಯನ್ನು ಕರೆದು ತರಲು ಆಜ್ಞಾಪಿಸು'' ಎಂದೆನಲು ಶ್ರೀಹರಿಯು ಮಗನ ಮಾತು ಕೇಳಿ ದಿನಮಣಿ(ಸೂರ್ಯ)ಯನ್ನು ಷಣ್ಮುಖನ ಮೂಲಕ ಕರೆಯಿಸಿದನು. ಸೂರ್ಯನು ಶ್ರೀಹರಿ ಸನ್ನಿಧಿಗೆ ಬಂದು ಭಕ್ತಿಯಿಂದ ಸ್ತುತಿಸಿ ನಮಸ್ಕರಿಸಿ ನಿಂತನು. ಭಕ್ತಿನಮ್ರಾಂಗನಾದ ಭಾಸ್ಕರನನ್ನು ನೋಡಿ ಶ್ರೀವಾಸುದೇವನು ತನ್ನ ಮನೋಗತವನ್ನು ಹೀಗೆ ನಿರೂಪಿಸಿದನು.

ಶ್ರೀಭಗವಾನ್:- ಭಾಸ್ಕರ, ಸೃಗಾಲವಾಸುದೇವನ ರಾಜಧಾನಿಯಾದ ಕೊಲ್ಲಾಪುರಕ್ಕೆ ಹೋಗು. ಅಲ್ಲಿ ಜಗನ್ಮಾತೆಯಾದ ಲಕ್ಷ್ಮೀದೇವಿಯು ಇರುವಳು. ನನ್ನ ಪ್ರೀತಿಪಾತ್ರಳಾದ ರಮೆಯನ್ನು ಇಲ್ಲಿಗೆ ಕರೆದುಕೊಂಡು ಬಾ.

ಭಗವಂತನ ವಚನವನ್ನಾಲಿಸಿ ಪೌತ್ರನಾದ ಭಾಸ್ಕರನು ನಮ್ರತೆಯಿಂದ ಇಂತು ವಿಜ್ಞಾಪಿಸಿದನು - ''ಪ್ರಭು! ಲೋಕಜನನಿಯಾದ ಶ್ರೀಮಹಾಲಕ್ಷ್ಮಿಯನ್ನು ನಾನೆಂತು ನಿನ್ನ ಬಳಿಗೆ ಕರೆದು ತರಬಲ್ಲೆ? ಗೋವಿಂದ, ರಮಾದೇವಿಯು ನನ್ನನ್ನು ಹೇಗೆ ನಂಬಿಯಾಳು? ಅದನ್ನು ತಿಳಿಸು''.

ಶ್ರೀಭಗವಾನ್ :- ಶ್ರೀಲಕ್ಷ್ಮೀದೇವಿಗೆ ಲೋಕಮಹೋದಯಕಾರಣನಾದ ನಿನ್ನಲ್ಲಿ ಸರ್ವದಾ ವಾತ್ಸಲ್ಯವಿದೆ. ನೀನು ಬಂದೆಯೆಂದು ಆನಂದಗೊಂಡು ಅವಳು ನನ್ನ ಬಳಿಗೆ ಖಂಡಿತ ಬರುವಳು. ಸೂರ್ಯ! ಮಹಾಲಕ್ಷ್ಮಿಯು ಬರುವಂತೆ ಮಾಡಲು ಒಂದು ಯುಕ್ತಿಯನ್ನು ಹೇಳುತ್ತೇನೆ ಕೇಳು. ನೀನು ಕಣ್ಣೀರು ಸುರಿಸುತ್ತಾ, ಒರೆಸಿಕೊಳ್ಳುತ್ತಾ, ಲಕ್ಷ್ಮೀದೇವಿಯ ಮನೆಯ ಬಾಗಿಲಿನ ಬಳಿಯಲ್ಲಿ ನಿಂತಿರು. ಕರುಣಾಮಯಿಯಾದ ರಮಾದೇವಿಯು ನೀನು ಬಂದಿರುವುದನ್ನು ಕಂಡು ನಿನ್ನ ಬಳಿಗೆ ಬಂದು ನಿನ್ನನ್ನು ಸಮಾಧಾನಪಡಿಸುತ್ತಾ ''ಸೂರ್ಯ! ಭೂಮಿಯಲ್ಲಿ ಯಾರು ನಿನ್ನ ಅಧಿಕಾರವನ್ನು ಅಪಹರಿಸಿರುವರು? ಹೇಳು'' ಎಂದು ಕೇಳುವಳು – ಆಗ ನೀನು ಅತ್ಯಂತ ದುಃಖಿತನಾಗಿ ಹೀಗೆ ಹೇಳು – ''ಜನನಿ! ಭೂತಲದಲ್ಲಿ ಈಗ ಯಾರೂ ನನ್ನ ಅಧಿಕಾರವನ್ನು ಕಸಿದುಕೊಂಡಿಲ್ಲ! ಯಾವ ಶ್ರೀಹರಿಯು ಕಾರುಣ್ಯದಿಂದ ನನಗೆ ಈ ಅಧಿಕಾರವನ್ನು ಅನುಗ್ರಹಿಸಿರುವನೋ, ಅಂತಹ ನಿನ್ನ ಪತಿಯಾದ ಶ್ರೀನಿವಾಸನು ಹಾಸಿಗೆ ಹಿಡಿದು ಮಲಗಿಬಿಟ್ಟಿದ್ದಾನೆ! ಹೀಗೆ ನಿನಗೆ ಈ ವಿಚಾರವನ್ನು ತಿಳಿಸುವಂತೆ ಆಜ್ಞಾಪಿಸಿರುವ ನಿನ್ನ ಪತಿಯಾದ ಮಹಾಪ್ರಭುವು ನಿಶ್ಶಕ್ತನಾಗಿ ಮಲಗಿ ಬಿಟ್ಟಿದ್ದಾನೆ. ಅವನು ಬದುಕುವನೋ, ಇಲ್ಲವೋ ನಾನರಿಯೆ. ಜಗತ್ಪ್ರಭುವಾದ ಶ್ರೀಹರಿಯು ಬಹಳ ಅಶಕ್ತನಾಗಿರುವಂತೆ ನನಗೆ ತೋರುತ್ತಿದೆ. ದೇವಿ! ಶ್ರೀನಿವಾಸನು ''ನನ್ನ ಪ್ರಿಯ ಪತ್ನಿಯಾದ ಲಕ್ಷ್ಮೀದೇವಿಯನ್ನು ಯಾವಾಗ ಕಂಡೇನು'' ಎಂದು ಪ್ರಲಪಿಸುತ್ತಿದ್ದಾನೆ'' ಎಂದು ಹೇಳು! ಆಗ ಲಕ್ಷ್ಮೀದೇವಿಯು ನಿನ್ನ ಮಾತು ಕೇಳಿದ ಕೂಡಲೇ ಇಲ್ಲಿಗೆ ಬಂದು ಬಿಡುತ್ತಾಳೆ. ಇದರಲ್ಲಿ ಸಂದೇಹವಿಲ್ಲ!

ಶ್ರೀನಿವಾಸನ ಮಾತುಕೇಳಿ ಪರಿಹಾಸವದನನಾಗಿ ಸೂರ್ಯನು ಭಯಭಕ್ತಿಗಳಿಂದ ನಮ್ರಾಂಗನಾಗಿ ಇಂತು ವಿಜ್ಞಾಪಿಸಿದನು–

ಸೂರ್ಯ:- ಪ್ರಭು! ಕಮಲಸದನಳಾದ ಶ್ರೀಲಕ್ಷ್ಮೀದೇವಿಯು ಸಕಲಲೋಕಗಳಲ್ಲಿಯೂ ಸರ್ವಜ್ಞಳೆಂದು (ಸಕಲವನ್ನೂ ತಿಳಿದವಳೆಂದು) ಪ್ರಖ್ಯಾತಳಾಗಿದ್ದಾಳೆ. ಶ್ರೀಕೃಷ್ಣ! ನನ್ನ ಮನಸ್ಸಿನಲ್ಲಿರುವುದನ್ನು ಆ ಮಹಾತಾಯಿ ಖಂಡಿತವಾಗಿ ತಿಳಿಯುವಳು. ಅಂದಮೇಲೆ ಅವಳು ನನ್ನನ್ನು, ನನ್ನ ಮಾತನ್ನು ಹೇಗೆ ನಂಬುವಳು? ದೇವ, ಶ್ರೀಹರಿ! ಇದರ ಮೇಲೆ ರೋಗರಹಿತನಾದ ನೀನು ರೋಗಗ್ರಸ್ತನಾಗಿರುವಿಯೆಂದು ಹೇಗೆ ತಾನೆ ಹೇಳಲಿ?

ಭಾಸ್ಕರನ ಮಾತು ಕೇಳಿ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಯು ತನ್ನ ಮನೋಗತವನ್ನು ಹೀಗೆ ಹೇಳಲಾರಂಭಿಸಿದನು - ''ಸೂರ್ಯ! ಅದಕ್ಕಾಗಿ ನೀನು ಚಿಂತಿಸಬೇಡ. ನನ್ನ ಮಾಯೆಯಿಂದ ಲಕ್ಷ್ಮೀದೇವಿಯು ಮೋಹಪರವಶಳಾಗುವಳು. ಇದರಲ್ಲಿ ಸಂಶಯವಿಲ್ಲ. ನಾನು ಹೇಳಿದಂತೆ ಮಾಡು'' ಎಂದು ಆಜ್ಞಾಪಿಸಿದನು. ಪರಮಾತ್ಮನ ವಚನವನ್ನಾಲಿಸಿ ಸೂರ್ಯನು ವಾಸುದೇವನಿಗೆ ನಮಿಸಿ ರಥದಲ್ಲಿ ಕುಳಿತು, ಕರವೀರಪುರಕ್ಕೆ ಹೋಗಿ ಭಗವಂತನು ಹೇಳಿದಂತೆಯೇ ಮಾಡಿದನು.

ಆಗ ಲಕ್ಷ್ಮೀದೇವಿಯು ಹರಿಯ ಆದೇಶದಂತೆ ದೇಶಕಾಲಗಳಿಗೆ ತಕ್ಕಂತೆ ಶ್ರೀಹರಿಯ ಆಚರಣೆಗೆ ತಕ್ಕಂತೆ ತಾನೂ ಆಚರಿಸುತ್ತಾ, ಸೂರ್ಯನ ಮಾತನ್ನು ಸಂಬಿದವಳಂತೆ ವ್ಯಥೆಯನ್ನು ನಟಿಸುತ್ತಾ ಶೀಘ್ರವಾಗಿ ರಥದಲ್ಲಿ ಕುಳಿತು ಶ್ರೀನಿವಾಸನ ಬಳಿಗೆ ಬಂದಳು. ಶ್ರೀಲಕ್ಷ್ಮಿಯು ಬಂದ ವಿಚಾರವನ್ನು ತಿಳಿದು ಶ್ರೀಹರಿಯು ಕೂಡಲೇ ರಮಾದೇವಿಯನ್ನು ಕಾಣುವ ತವಕದಿಂದ ಅಶಕ್ತನೂ, ರೋಗಗ್ರಸ್ತನೂ ಆದವನಂತೆ ಆಕಾರಧರಿಸಿ ರಮಾದೇವಿಗೆ ಅಭಿಮುಖವಾಗಿ ಹೊರಟನು. ಪರಮಾತ್ಮನ ಆ ರೂಪವು ದೇವತೆಗಳು, ರಾಕ್ಷಸರು, ಊರ್ಧ್ವರೇತಸ್ಸುಳ್ಳ ಮುನಿಗಳು, ಹೀಗೆ ಎಲ್ಲರನ್ನೂ ಆಶ್ಚರ್ಯಗೊಳಿಸಿತು! ತನಗೆ ಬೇಕಾದಾಗ ಸ್ವತಂತ್ರನಾಗಿ ಪ್ರಾದುರ್ಭಾವ ಹೊಂದುವ ಶ್ರೀಹರಿ ಪರಮಾತ್ಮನು ಭುಜಂಗಭೂಷಣನಾದ ರುದ್ರದೇವನ ಹೆಗಲಮೇಲೆ ತನ್ನ ಎಡಭುಜವನ್ನಿಟ್ಟು, ತನ್ನ ಬಲತೋಳನ್ನು ಬ್ರಹ್ಮದೇವನ ಕುತ್ತಿಗೆಯಲ್ಲಿಟ್ಟು, ಲಕ್ಷ್ಮಿಯನ್ನು ನೋಡಲು ಬಂದನು! ಅರವಿಂದಾಸನೆಯಾದ ರಮಾದೇವಿಯು ಈ ಬಗೆಯ ವೇಷ ತಾಳಿದ ಶ್ರೀನಿವಾಸನನ್ನು ಅವಲೋಕಿಸಿದಳು. ಆಗ ಶ್ರೀಹರಿಪ್ರಿಯೆಯು ಕೂಡಲೇ ರಥದಿಂದಿಳಿದು ಮಂದಹಾಸಮುಖಾರವಿಂದಳಾಗಿ ಭಗವಂತನ ಪಾದಾರವಿಂದಗಳಲ್ಲಿ ಸಂಪಿಗೆಯ ಕುಸುಮ ಸಮೂಹವನ್ನು ಎರಚಿ ಅತಿಭಕ್ತಿಪರವಶಳಾಗಿ ಶ್ರೀನಿವಾಸನನ್ನು ಆಲಿಂಗಿಸಿಕೊಂಡು ಎರಡು ಮುಹೂರ್ತಕಾಲ ಹಾಗೆಯೇ ನಿಂತಳು. ಕಮಲಾಲಯಳಾದ ಶ್ರೀಕಮಲೆಯ ಕಮನೀಯ ಅಪ್ಪುಗೆ ಮಾತ್ರದಿಂದ ಅತಿ ಪುಷ್ಟಾಂಗನಾಗಿ ಶ್ರೀಕೃಷ್ಣನು ನಗೆಮೊಗದಿಂದ ಲಕುಮಿಯ ಕುಶಲವನ್ನು ಕೇಳಿದನು. ಶ್ರೀರಮಾದೇವಿಯೂ ಶ್ರೀವಾಸುದೇವನ ಕುಶಲ ಸಮಾಚಾರವನ್ನು ವಿಚಾರಿಸಿದಳು.

ಜನಕ ಮಹಾರಾಜ! ಸಮಸ್ತಲೋಕಗಳಿಗೂ ತಂದೆತಾಯಿಗಳಾದ ಶ್ರೀಲಕ್ಷ್ಮೀನಾರಾಯಣರು ಆ ತರುವಾಯ ವಲ್ಮೀಕದ ಬಳಿಗೆ ಬಂದು ಆಸನಾಸೀನರಾದರು. ಆಗ ಲಕ್ಷ್ಮೀದೇವಿಯು ಶ್ರೀಹರಿಯನ್ನು ನೋಡಿ ನಸುನಗುತ್ತಾ ಇಂತೆಂದಳು -

ಶ್ರೀಲಕ್ಷ್ಮೀ:- ದೇವದೇವ, ಶ್ರೀಹರಿ! ಯಾರಿಂದಲೂ ಮೀರಲು ಸಾಧ್ಯವಿಲ್ಲದ ನಿನ್ನ ಮಾಯೆಯು ನನ್ನನ್ನೂ ಮೋಹಗೊಳಿಸುವುದು! ಸೂರ್ಯನನ್ನು ಕಳುಹಿಸಿ ನೀನೆಂತಹ ಆಶ್ಚರ್ಯಕರ ಕಾರ್ಯವನ್ನು ಮಾಡಿಬಿಟ್ಟೆ! ಎಂತಹ ನಾಟಕವನ್ನಾಡಿಬಿಟ್ಟೆಯಲ್ಲ! ಪ್ರಭು; ಬ್ರಹ್ಮ-ರುದ್ರರೇ ಮೊದಲಾದ ಸಮಸ್ತದೇವತೆಗಳೂ ನಿನ್ನ ಮಾಯಾಜಾಲದಲ್ಲಿ ಸಿಲುಕಿ ಮೋಹಿತರಾಗುವರು!! ವಾಸುದೇವ, ಈಗ ಸೂರ್ಯನನ್ನು ಕಳುಹಿಸಿ ನನ್ನನ್ನು ಕರೆಯಿಸಿದ; (ನನಗೂ ಹರ್ಷಕರವಾದ) ಕಾರಣವೇನೆಂಬುದನ್ನು ಕೃಪೆಮಾಡಿ ನಿರೂಪಿಸು.

ರಮೆಯರಸನಾದ ಶ್ರೀನಿವಾಸನು ಸಾಧ್ವಿಯಾದ ಪ್ರಿಯಸತಿಯಾದ ಲಕ್ಷ್ಮೀದೇವಿಯನ್ನು ನೋಡಿ ಮಂದಹಾಸ ಬೀರಿ ಇಂತೆಂದನು.

ಶ್ರೀನಿವಾಸ:- ಕಮಲಾಲಯೆ! ರಾಮಾವತಾರ ಕಾಲದಲ್ಲಿ ಸೀತೆಯಾಗಿದ್ದ ನೀನು ಹೇಳಿದ ಮಾತನ್ನು ಸ್ಮರಿಸಿಕೋ. ನೀನು ಅಂದು ಹೇಳಿದ್ದ, ವೇದವತಿಯ ಪಾಣಿಗ್ರಹಣ ಸಮಯವೀಗ ಪ್ರಾಪ್ತವಾಗಿದೆ. ನಾನು ಹಿಂದೆ ಹೇಳಿದ್ದಂತೆ ಈ ಕಲಿಯುಗದಲ್ಲಿ ನಿನ್ನ ಸಾನ್ನಿಧ್ಯದಲ್ಲಿ ವೇದವತಿಯನ್ನು ವಿವಾಹವಾಗಲು ಅಪೇಕ್ಷಿಸಿದ್ದೇನೆ.

ಹೃಷೀಕೇಶನು ಇಂತು ನುಡಿಯುತ್ತಿರಲು ರಮಾದೇವಿಯು ರಾಮಾವತಾರ ಕಾಲದಲ್ಲಿ ತಾನು ಹೇಳಿದ್ದ ಮಾತನ್ನು ನೆನೆದು ಶ್ರೀಹರಿಯಲ್ಲಿ ಹೀಗೆ ವಿಜ್ಞಾಪಿಸಿದಳು.

ಲಕ್ಷ್ಮೀ:- ಶ್ರೀಹರಿಯೇ, ನೀನು ವೇದವತಿಯ ಅಂಶದಿಂದ ಜನಿಸಿರುವ ಪದ್ಮಾವತಿಯನ್ನು ವೈದಿಕವಿಧಿಪೂರ್ವಕವಾಗಿ ಪರಿಗ್ರಹಿಸು. ಹೇ ಭಕ್ತವತ್ಸಲ! ಶ್ರೀಕೃಷ್ಣ, ನನ್ನ ಮಾತನ್ನು ಸಫಲಗೊಳಿಸಿ ನನ್ನನ್ನು ಕೃತಕೃತ್ಯಳನ್ನಾಗಿಸು.

ಇಂತು ಶ್ರೀಹರಿಯಲ್ಲಿ ಪ್ರಾರ್ಥಿಸಿ ಲಕ್ಷ್ಮೀದೇವಿಯು ಸಂತೋಷಭರಿತಳಾಗಿ ಮಾಧವನಿಗೆ ಆನಮಿಸಿದಳು. ಉದಾರಹೃದಯನಾದ ಶ್ರೀನಿವಾಸನು ರಮಾದೇವಿಯ ವಚನವನ್ನಾಲಿಸಿ, ಪರಿಪೂರ್ಣ ಮನೋರಥನಾಗಿ, ಉತ್ಕೃಷ್ಟಾನಂದ ತುಂದಿಲನಾಗಿ ಶೇಷಾಚಲದಲ್ಲಿ ವಿರಾಜಿಸಿದನು.

ಆಗ ವೇಂಕಟಗಿರಿಗೆ ಸಖನಾದ (ವೇಂಕಟಾಚಲದಲ್ಲಿ ಸೂರ್ಯನಂತೆ ಕಂಗೊಳಿಸುವ), ಬ್ರಹ್ಮ-ರುದ್ರ-ಇಂದ್ರಾದಿ ದೇವತೆಗಳಿಂದ ಸ್ತೋತ್ರಮಾಡಲ್ಪಟ್ಟ ಸಮೀಚೀನ ಚರಿತ್ರೆಯುಳ್ಳ (ವೇದಪ್ರತಿಪಾದ್ಯ ಸಚ್ಚರಿತ್ರೆಯುಳ್ಳ), ಸಂತೋಷವನ್ನು ಎತ್ತಿತೋರುವ ಸಕಲ ಅವಯವಗಳುಳ್ಳ, ಆನಂದದ ಕಣ್ಣೀರಿನಿಂದ ತುಂಬಿದ ಕಣ್ಣುಗಳಿಂದ ಲಕ್ಷ್ಮೀನಾರಾಯಣರು ಪರಿಶೋಭಿಸಿದರು.

ಪಾಠಾಂತರ:- ಆತ್ಮಾನಂದ ವಿಷಯಕವಾದ ಬುದ್ಧಿಯಿಂದ ಪರಿಪೂರ್ಣ ಶರೀರವುಳ್ಳ, ಬ್ರಹ್ಮರುದ್ರೇಂದ್ರಾದ್ಯಮರ ವೃಂದ ಸಂಸ್ತೂಯಮಾನ ಸಚ್ಚರಿತ್ರೆಯುಳ್ಳ, ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡಿರುವ ಶೇಷನೆಂಬ ಹೆಸರಿನ ಪರ್ವತವುಳ್ಳ, ಶ್ರೀನಿವಾಸನು ಪರಮಾನಂದದಿಂದ ಉಂಟಾದ ಕಣ್ಣೀರಿನಿಂದ ತುಂಬಿರುವ ನೇತ್ರಗಳಿಂದ ಲಕ್ಷ್ಮೀನಾರಾಯಣರು ಕಂಗೊಳಿಸಿದರು.

*ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೇಂಕಟೇಶಮಹಾತ್ಮೆಯಲ್ಲಿ*
ಶ್ರೀನಿವಾಸನೊಡನೆ ಶ್ರೀಲಕ್ಷ್ಮೀದೇವಿಯ ಸಮಾಗಮಯೋಗವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

*॥ ಶ್ರೀವೇಂಕಟೇಶನಿಗೆ ಅರ್ಪಿತವಾಗಲಿ ॥*

# ಹನ್ನೆರಡನೆಯ ಅಧ್ಯಾಯ

*ಮೂಲ— ಜನಕ ಉವಾಚ -*

**ತತಃ ಕಿಮಕರೋತ್ಕೃಷ್ಣಃ ಶ್ರೀನಿವಾಸ ಸ್ಸತಾಂಗತಿಃ ।**
**ತನ್ಮಮಾಚಕ್ಷ್ವ ಭಗವನ್ ವಿಸ್ತರೇಣ ಮಹಾಮುನೇ ॥ 1 ॥**

ಭಗವಾನ್ = ಪೂಜ್ಯರಾದ, ಮಹಾಮುನೇ = ಶತಾನಂದ ಮುನಿಗಳೇ, ತತಃ = ಲಕ್ಷ್ಮೀದೇವಿಯ ಸಮಾಗಮವಾದ ಮೇಲೆ, ಸತಾಂಗತಿಃ = ಸಜ್ಜನರಿಗೆ ಆಧಾರಭೂತನಾದ, ಶ್ರೀನಿವಾಸಃ = ರಮಾದೇವಿಗೆ ಆವಾಸಭೂತನಾದ, ಕೃಷ್ಣಃ = ಶ್ರೀನಿವಾಸನು, ಕಿಮಕರೋತ್ = ಏನು ಮಾಡಿದನು? ತತ್ = ಆ ವೃತ್ತಾಂತವನ್ನು, ವಿಸ್ತರೇಣ = ವಿಶದವಾಗಿ, ಮಮ = ನನಗೆ, ಆಚಕ್ಷ್ವ = ಹೇಳಿರಿ ॥ 1 ॥

*ಶತಾನಂದ ಉವಾಚ -*

**ಶ್ರೀಲಕ್ಷ್ಮೀಸಹಿತಃ ಶ್ರೀಮಾನ್ ಶ್ರೀನಿವಾಸಃ ಪಿತಾಮಹಮ್ ।**
**ಅಬ್ರವೀತ್ಪ್ರೀತಮನಸಾ ಪ್ರಯುಂಜಾನಃ ಪ್ರಯೋಜನೇ ॥ 2 ॥**

ಶತಾನಂದ ಉವಾಚ = ಶತಾನಂದ ಋಷಿಗಳು ಹೇಳುತ್ತಿದ್ದಾರೆ : ಶ್ರೀಲಕ್ಷ್ಮೀ ಸಹಿತಃ = ವೇದಪ್ರತಿಪಾದ್ಯಮಹಿಮಳಾದ ಲಕ್ಷ್ಮೀದೇವಿಯಿಂದ ಸಹಿತನಾದ, ಶ್ರೀಮಾನ್ = ವೇದಗಳಿಂದ ಪ್ರತಿಪಾದ್ಯಮಹಾಮಹಿಮನಾದ, ಕಾಂತಿಸಂಪನ್ನನಾದ, ಶ್ರೀನಿವಾಸಃ = ಶ್ರೀಹರಿಯು, ಪಿತಾಮಹಂ = ಬ್ರಹ್ಮದೇವನನ್ನು ಕುರಿತು, ಪ್ರೀತಮನಸಾ = ಪ್ರೀತಿಯುಕ್ತವಾದ ಮನಸ್ಸಿನಿಂದ, ಪ್ರಯೋಜನೇ = ಮುಂದಿನ ಕಾರ್ಯದಲ್ಲಿ, ಪ್ರಯುಂಜಾನಃ = ಬ್ರಹ್ಮದೇವನನ್ನು ನಿಯೋಜಿಸುತ್ತಾ, ಅಬ್ರವೀತ್ = ಹೇಳಿದನು ॥ 2 ॥

*ಶ್ರೀನಿವಾಸ ಉವಾಚ -*

**ಕರ್ಮಾಣಿ ಪುತ್ರ ಕಾರ್ಯಾಣಿ ಕುರು ಶೀಘ್ರಮತಂದ್ರಿತಃ ।**
**ಸ ತದ್ವಚನಮಾಕರ್ಣ್ಯ ಸಸಂತೋಷಃ ಪಿತಾಮಹಃ ॥ 3 ॥**

ಪುತ್ರ = ಕುಮಾರ! ಬ್ರಹ್ಮದೇವ, ಅತಿಂದ್ರಿತಃ = ಜಾಗರೂಕನಾಗಿ, ಕಾರ್ಯಾಣಿ = ಮುಂದೆ ಮಾಡಬೇಕಾದ, ಕರ್ಮಾಣಿ = ಮಂಗಳ ಕೆಲಸಗಳನ್ನು, ಶೀಘ್ರಂ = ಬೇಗನೆ, ಕುರು = ಮಾಡು, ಸಃ = ಆ, ಪಿತಾಮಹಃ = ಬ್ರಹ್ಮದೇವನು, ತದ್ವಚನಂ = ಹರಿಯ ಮಾತನ್ನು, ಆಕರ್ಣ್ಯ = ಕೇಳಿ, ಸಸಂತೋಷಃ = ಆನಂದಯುಕ್ತನಾಗಿ ॥ 3 ॥

**ಕಟಾಹಭಾಂಡನಿಚಯಾನಾನೇತುಂ ಪ್ರೇಷಯತ್ಸುರಾನ್ ।**
**ಗರುಡಪ್ರಮುಖಾನ್ವೀರಾನ್ನಾರಾಯಣಪರಾಯಣಾನ್ ॥ 4 ॥**

ಕಟಾಹಭಾಂಡನಿಚಯಾನ್ = ಕೊಪ್ಪರಿಗೆಗಳು, ಪಾತ್ರೆಗಳ ಸಮೂಹವನ್ನು, ಆನೇತುಂ = ತರುವುದಕ್ಕಾಗಿ, ನಾರಾಯಣ ಪರಾಯಣಾನ್ = ಶ್ರೀನಿವಾಸನಲ್ಲಿ ಭಕ್ತಿ (ನಿಷ್ಠೆ)ಯುಳ್ಳವರಾದ, ವೀರಾನ್ = ಶೂರರಾದ,

ಗರುಡಪ್ರಮುಖಾನ್ = ಗರುಡನೇ ಮೊದಲಾದ, ಸುರಾನ್ = ದೇವತೆಗಳನ್ನು, (ಚರಾನ್ = ಸೇವಕರನ್ನು) ಪ್ರೇಷಯತ್ = ಕಳುಹಿದನು ॥ 4 ॥

**ತೇ ತಸ್ಯ ವಚನಂ ಶ್ರುತ್ವಾ ಕ್ಷಣೇನ ಗರುಡಾದಯಃ ।**
**ಕಟಾಹಾದೀನ್ ಗೃಹೀತ್ವಾಥ ಸಮಾಜಗ್ಮುರನೇಕಧಾ ॥ 5 ॥**

ತಸ್ಯ = ಬ್ರಹ್ಮದೇವನ, ವಚನಂ = ಮಾತನ್ನು, ಶ್ರುತ್ವಾ = ಕೇಳಿ, ಕ್ಷಣೇನ = ಕ್ಷಣಮಾತ್ರದಲ್ಲಿ, ತೇ = ಆ, ಗರುಡಾದಯಃ = ಗರುಡನೇ ಮೊದಲಾದವರು, ಕಟಾಹಾನ್ = ಭಾಂಡೆಗಳನ್ನು, ಗೃಹೀತ್ವಾ = ತೆಗೆದುಕೊಂಡು, ಅಥ = ಅನಂತರ, ಅನೇಕಧಾ = ಬಹುಪ್ರಕಾರವಾಗಿ, ಸಮಾಜಗ್ಮುಃ = ಬಂದರು ॥ 5 ॥

**ಅಪೂರಯತ್ತತಸ್ತೇಷು ವರುಣಸ್ಸಲಿಲಾಧಿಪಃ ।**
**ಸುಗಂಧಂತೋಯನಿಚಯಂ ದಿವ್ಯತೀರ್ಥೋದ್ಭವಂ ಶುಭಮ್ ॥ 6 ॥**

ತತಃ = ತರುವಾಯ, ದಿವ್ಯತೀರ್ಥೋದ್ಭವಂ = ದೇವತಾಯೋಗ್ಯವಾದ ಪಾವನವಾದ ಸ್ಥಳಗಳಲ್ಲಿ ಉದ್ಭವಿಸಿದ, ಶುಭಂ = ಮಂಗಳಕರವಾದ, ಸುಗಂಧಂ = ಪರಿಮಳಯುಕ್ತವಾದ, ತೋಯನಿಚಯಂ = ಜಲಸಮೂಹವನ್ನು, ತೇಷು = ಆ ಪಾತ್ರೆಗಳಲ್ಲಿ, ಸಲಿಲಾಧಿಪಃ = ಜಲಾಧಿಪತಿಯಾದ, ವರುಣಃ = ವರುಣದೇವನು, ಅಪೂರಯತ್ = ತುಂಬಿಸಿದನು ॥6॥

**ತತಸ್ಸರ್ವಾ ಸ್ಸುವಾಸಿನ್ಯೋ ವಸ್ತ್ರಾಲಂಕಾರಮಂಡಿತಾಃ ।**
**ಅರುಂಧತೀಂ ಪುರಸ್ಕೃತ್ಯ ಕೃತಮಂಗಲಕೌತುಕಾಃ ॥ 7 ॥**

ತತಃ = ಅನಂತರ, ಸರ್ವಾಃ = ಸಮಸ್ತರಾದ, ಸುವಾಸಿನ್ಯಃ = ಮುತ್ತೈದೆಯರು, ವಸ್ತ್ರಾಲಂಕಾರ ಮಂಡಿತಾಃ = ವಿವಿಧ ಪೀತಾಂಬರ - ಆಭರಣಾದಿಗಳಿಂದ ಶೃಂಗರಿಸಿಕೊಂಡು, ಅರುಂಧತೀಂ = ವಸಿಷ್ಠರ ಪತ್ನಿಯಾದ ಅರುಂಧತೀದೇವಿಯನ್ನು ಪುರಸ್ಕೃತ್ಯ = ಮುಂದೆ ಮಾಡಿಕೊಂಡು, ಕೃತ ಮಂಗಲಕೌತುಕಾಃ - ಕೃತ = ಮಾಡಲ್ಪಟ್ಟ, ಮಂಗಲ = ಶುಭಸೂಚಕ ಕಾರ್ಯನಿರ್ವಹಣೆಯಲ್ಲಿ, ಕೌತುಕಾಃ = ಕುತೂಹಲಭರಿತರಾಗಿ ॥ 7 ॥

**ಸದೀಪಕಲಶಾನಾಂ ಚ ಪಾರ್ವತೀಮುಪಧಾರಣೇ ।**
**ಚಕ್ರು ಸ್ಸಮಸ್ತಾನ್ಮಾಂಗಲ್ಯಾನ್ ಸಸಾವಿತ್ರೀಪುರೋಗಮಾಃ ॥ 8 ॥**

ಸದೀಪಕಲಶಾನಾಂಚ - ಸದೀಪ = ದೀಪಯುಕ್ತವಾದ, ಕಲಶಾನಾಂ ಚ = ಕಳಶಗಳ, ಉಪಧಾರಣೇ = ಹಿಡಿಯುವ ವಿಷಯದಲ್ಲಿ, ಪಾರ್ವತೀಂ = ಪಾರ್ವತಿದೇವಿಯನ್ನು, ನಿವೇಶ್ಯ = ಇಡುವವರಾಗಿ, ಅಂದರೆ ಪಾರ್ವತಿಯನ್ನು ಕಳಶಗಿತ್ತಿಯನ್ನಾಗಿ ಮಾಡಿ, ಸಸಾವಿತ್ರೀ ಪುರೋಗಮಾಃ = ಸಾವಿತ್ರಿದೇವಿಯನ್ನು ಮುಂದು ಮಾಡಿಕೊಂಡು ಅವರೆಲ್ಲರೂ, ಸಮಸ್ತಾನ್ = ಸಕಲವಿಧವಾದ, ಮಾಂಗಲ್ಯಾನ್ = ಶುಭಕಾರ್ಯಗಳನ್ನು, ಚಕ್ರುಃ = ಮಾಡಿದರು ॥ 8 ॥

**ಗಾಯಂತ್ಯಶ್ಶುಭಗಾನಾನಿ ದಶಾಕೃತಿ ಕೃತಾನಿ ಚ ।**
**ಕೃಷ್ಣಾವತಾರ ವಿಭವಂ ಗಾಯಂತ್ಯಶ್ಚಾಮರಾಂಗನಾಃ ॥ 9 ॥**

ರಾಜೇಂದ್ರ = ಎಲೈ ಜನಕರಾಜನೇ, ವರಾಂಗನಾಃ = ಉತ್ತಮಸ್ತ್ರೀಯರಾದ ಅವರು, ದಶಾಕೃತಿಕೃತಾನಿ = ಹತ್ತು ಅವತಾರಗಳಲ್ಲಿ ಮಾಡಲ್ಪಟ್ಟ, ಶುಭಗಾನಾನಿ = ಮಂಗಳಸೂಚಕ ಹಾಡುಗಳನ್ನು, ಗಾಯಂತ್ಯಃ = ಗಾನಮಾಡುತ್ತಾ,

ಕೃಷ್ಣಾವತಾರ ವಿಭವಂ = ಶ್ರೀಕೃಷ್ಣಾವತಾರಕಾಲದ ವೈಭವವನ್ನು, ಗಾಯಂತ್ಯಃ = ಗಾನಮಾಡುತ್ತಾ, ಚ = ಮತ್ತು ಅಮರಾಂಗನಾಃ = ದೇವತಾಸ್ತ್ರೀಯರು ।। 9 ।।

**ಸಿದ್ಧಾಂಗನಾಶ್ಚ ರಾಜೇಂದ್ರ ತಥಾ ವೈಖಾನಸಾಂಗನಾಃ ।**
**ಏವಂ ಪ್ರವೃತ್ತೇ ಪುಣ್ಯೇಽಸ್ಮಿನ್ವಿವಾಹೇ ವೇಂಕಟೇಶಿತುಃ ।। 10 ।।**

ಸಿದ್ಧಾಂಗನಾಃ = ಸಿದ್ಧರ ಮಹಿಳೆಯರು, ತಥಾ = ಹಾಗೆಯೇ, ವೈಖಾನಸಾಂಗನಾಃ = ವೈಖಾನಸರ ಸ್ತ್ರೀಯರುಗಳು (ಗಾಯಂತ್ಯಃ = ಹಾಡುಹೇಳುತ್ತಲಿದ್ದರು) ವೇಂಕಟೇಶಿತುಃ = ವೇಂಕಟಾಚಲಕ್ಕೆ ಸ್ವಾಮಿಯಾದ ಶ್ರೀನಿವಾಸನ, ಪುಣ್ಯೇ = ಪುಣ್ಯಕರವಾದ, ವಿವಾಹೇ = ವಿವಾಹಮಹೋತ್ಸವವು, ಏವಂ = ಹೀಗೆ ಪ್ರವೃತ್ತೇ(ಸತಿ) = ನೆರವೇರುತ್ತಿರಲು ।। 10 ।।

**ಸ್ನುಷಾಶ್ಚ ವಾಸುದೇವಸ್ಯ ಹಸಂತ್ಯಶ್ಚಾರುಲೋಚನಾಃ ।**
**ಶ್ವಶ್ರೂಂ ಚ ಪುರತಃ ಕೃತ್ವಾ ಮಾತರಂ ಬಕುಲಾಂ ಹರೇಃ ।। 11 ।।**

ಚಾರುಲೋಚನಾಃ = ಮನೋಹರವಾದ ನೇತ್ರಗಳುಳ್ಳ, ಸ್ನುಷಾಷ್ಚ = ಶ್ರೀಹರಿಯ ಸೊಸೆಯಿಂದಿರು, ಹಸಂತ್ಯಃ = ನಗುನಗುತ್ತಾ, ವಾಸುದೇವಸ್ಯ = ಶ್ರೀನಿವಾಸನ, ಮಾತರಂ = ತಾಯಿಯಾದ, ಬಕುಲಾಂ = ಬಕುಳಾದೇವಿಯನ್ನು, ಚ = ಮತ್ತು, ಹರೇಃ = ಸ್ವಸಾರಂ = ತಂಗಿಯಾದ ಪಾರ್ವತಿಯನ್ನು, ಪುರತಃ ಕೃತ್ವಾ = ಮುಂದೆಮಾಡಿಕೊಂಡು ।। 11 ।।

**ಏವಂ ಮಹೋತ್ಸವಸ್ತತ್ರ ಸಮಭೂತ್ಸಪ್ತಮೀ ದಿನೇ ।**
**ಚತುರ್ದಿಕ್ಷು ಚ ಸಂಸ್ಥಾಪ್ಯ ಕಲಶಾನ್ ಜಲಪೂರಿತಾನ್ ।। 12 ।।**

ತತ್ರ = ವೇಂಕಟಗಿರಿಯಲ್ಲಿ, ಸಪ್ತಮೀದಿನೇ = ವೈಶಾಖ ಶುಕ್ಲಸಪ್ತಮಿಯ ದಿವಸ, ಏವಂ = ಈ ಪ್ರಕಾರವಾಗಿ, ಮಹೋತ್ಸವಃ = ಮಹೋತ್ಸವವು, ಸಮಭೂತ್ = ಉಂಟಾಯಿತು. ಮಹೀಪತೇ = ಜನಕರಾಜ, ಚತುರ್ದಿಕ್ಷು = ನಾಲ್ಕುದಿಕ್ಕುಗಳಲ್ಲಿ, ಜಲಪೂರಿತಾನ್ = ನೀರು ತುಂಬಿದ, ಕಲಶಾನ್ = ಕಳಶಗಳನ್ನು, ಸಂಸ್ಥಾಪ್ಯ = ಸ್ಥಾಪಿಸಿ ।। 12 ।।

**ಸೂತ್ರೇಣ ವೇಷ್ಟಯಿತ್ವಾ ತು ತನ್ಮಧ್ಯೇ ರತ್ನಪೀಠಿಕಾಮ್ ।**
**ಸಂಸ್ಥಾಪ್ಯ ಸಂಭ್ರಮೈರ್ಯುಕ್ತಾಃ ಇದಮಾಹುಸ್ಸುರಾಂಗನಾಃ ।। 13 ।।**

ಸೂತ್ರೇಣ = ದಾರದಿಂದ, ವೇಷ್ಟಯಿತ್ವಾ = ಸುತ್ತಿ, ತನ್ಮಧ್ಯೇತು = ಅದರ ಮಧ್ಯಭಾಗದಲ್ಲಿ, ರತ್ನಪೀಠಿಕಾಂ = ರತ್ನಮಯ ಪೀಠವನ್ನು, ಸಂಸ್ಥಾಪ್ಯ = ಇರಿಸಿ, ಸಂಭ್ರಮೈಃ = ಸಂಭ್ರಮಗಳಿಂದ, ಯುಕ್ತಾಃ = ಕೂಡಿದವರಾಗಿ, ಸುರಾಂಗನಾಃ = ದೇವತಾಸ್ತ್ರೀಯರ, ಇದಂ = ಈ ಮಾತನ್ನು, ಆಹುಃ = ಹೇಳಿದರು ।। 13 ।।

**ಉತ್ತಿಷ್ಠ ಪುರುಷಶ್ರೇಷ್ಠ ತಿಷ್ಠ ತ್ವಂ ಸೂತ್ರಮಂಡಲೇ ।**
**ಸ ಇತ್ಥಮುಕ್ತೋ ಭಗವಾನ್ಯೋಷಿತಾಂ ಪುರತೋ ಹರಿಃ ।। 14 ।।**

ಪುರುಷಶ್ರೇಷ್ಠ = ಪುರುಷೋತ್ತಮ, ಉತ್ತಿಷ್ಠ = ಎದ್ದೇಳು, ತ್ವಂ = ನೀನು, ಸೂತ್ರಮಂಡಲೇ = ದಾರದ ಮಂಡಲ ಭಾಗದಲ್ಲಿ, ತಿಷ್ಠ = ಕುಳಿತುಕೋ, ಭಗವಾನ್ = ಪೂಜ್ಯನಾದ, ಸಃ = ಶ್ರೀನಿವಾಸನು, ಇತ್ಥಂ = ಹೀಗೆ, ಉಕ್ತಃ = ಹೇಳಲ್ಪಟ್ಟವನಾದ, ಹರಿಃ = ಶ್ರೀವಿಷ್ಣುವು, ಯೋಷಿತಾಂ = ಹೆಂಗಸರ, ಪುರತಃ = ಮುಂದೆ ।। 14 ।।

**ಪ್ರೋವಾಚ ದೀನವಚನಂ[1] ಪ್ರಸ್ರವನ್ನೇತ್ರಜಂ ಜಲಮ್ ।**
**ಪಿತಾಮಹ ಮಹಾಪ್ರಾಜ್ಞ ವಿವಾಹವಿಭವೇ ಮಮ ॥ 15 ॥**

ನೇತ್ರಜಂ = ಕಣ್ಣಿನಿಂದ ಹುಟ್ಟಿದ, ಜಲಂ = ನೀರನ್ನು, ಪ್ರಸ್ರವನ್ = (ಪಾ: ಪ್ರಸ್ರಪನ್) ಸುರಿಸುತ್ತಾ, ದೀನವಚನಂ = ದೈನ್ಯನುಡಿಯನ್ನು (ಪಾ: ದೀನಃ = ದೀನನಾಗಿ, ವಚನಂ = ಮಾತನ್ನು), ಪ್ರೋವಾಚ = ಹೇಳಿದನು. ಮಹಾಪ್ರಾಜ್ಞ = ಅತಿವಿವೇಕಿಯಾದ, ಪಿತಾಮಹ = ಬ್ರಹ್ಮದೇವ, ಮಮ = ನನ್ನ, ವಿವಾಹ ವಿಭವೇ = ವಿವಾಹವೈಭವ(ಉತ್ಸವ)ದಲ್ಲಿ ॥15॥

**ಕಃ ಕರೋತ್ಯಭಿಷೇಕಂತು ತೈಲೇನಾಶೀಃ ಕ್ರಮೇಣ ವೈ ।**
**ಯಸ್ಯ ನಾಸ್ತಿ ಮಹಾರಾಜ ಮಾತಾ ವಾಪಿ ಪಿತಾ ತಥಾ ॥ 16 ॥**

**ವಿವಾಹೇ ಮರಣೇಚೈವ[2] ತಸ್ಯ ದಿಗ್ ಜನ್ಮಜೀವನಮ್ ।**
**ಭಗಿನ್ಯೋ ಭ್ರಾತರಶ್ಚೈವ ಮಾತುಲಾ ಭಾಗಿನೇಯಕಾಃ ॥ 17 ॥**

ಕ್ರಮೇಣವೈ = ಸಂಪ್ರದಾಯ ಪ್ರಕಾರವಾಗಿ, ಆಶೀಃ = ಆಶೀರ್ವಾದಪೂರ್ವಕವಾಗಿ, ತೈಲೇನ = ಎಣ್ಣೆಯಿಂದ, ಮೇ = ನನಗೆ, ಅಭಿಷೇಕಂ = ಸ್ನಾನವನ್ನು (ಅಭ್ಯಂಜನಸ್ನಾನವನ್ನು), ಕಃ = ಯಾವನು, ಕರೋತಿ = ಮಾಡುವನು, ಮಹಾರಾಜ = ಇಂದ್ರಾದಿಸಮಸ್ತದೇವತೆಗಳಿಗೆ ದೊರೆಯಾದ ಬ್ರಹ್ಮದೇವ, ಯಸ್ಯ = ಯಾವನಿಗೆ, ಮಾತಾ = ತಾಯಿಯೂ, ನಾಸ್ತಿ = ಇಲ್ಲವೊ ॥ 16 ॥ ವಿವಾಹೇ = ಮದುವೆಯಲ್ಲಿಯೂ, ಮರಣೇ ಚೈವ = ಸಾಯುವಾಗಲೂ ಸಹ, (ಪಾ : ವಿವಾಹೇ = ಮದುವೆಯ ಕಾಲದಲ್ಲಿಯೂ, ವಿಪಚ್ಚೈವ = ವಿಪತ್ಸಮಯದಲ್ಲಿಯೂ ಸಹ), ತಸ್ಯ = ಅಂಥವನ, ಜನ್ಮ = ಹುಟ್ಟುವಿಕೆಯು, ಚ = ಮತ್ತು, ಜೀವನಂ = ಜೀವನವು, ಧಿಕ್ = ಧಿಕ್ಕಾರವು (ಅಂತಹವನ ಜೀವನಕ್ಕೆ ಧಿಕ್ಕಾರವು) ಭಗಿನ್ಯೋ = ಅಕ್ಕ ತಂಗಿಯರು, ಭ್ರಾತರಶ್ಚೈವ = ಅಣ್ಣತಮ್ಮಂದಿರು, ಮಾತುಲಾಃ = ಸೋದರಮಾವಂದಿರು, ಭಾಗಿನೇಯಕಾಃ = ಸೋದರಳಿಯಂದಿರು ॥ 17 ॥

**ನ ಮೇ ಸಂತಿ ಮಹಾಪ್ರಾಜ್ಞ ಕಃ ಕರೋತ್ಯಭಿಷೇಚನಮ್ ।**
**ಮಾತಾಪಿತೃವಿಹೀನಾನಾಂ ಕಾ ಗತಿ ರ್ವೈ ಭವಿಷ್ಯತಿ ॥ 18 ॥**

ಮೇ = ನನಗೆ, ನ ಸಂತಿ = ಇಲ್ಲವು. ಮಹಾಪ್ರಾಜ್ಞ = ಬುದ್ಧಿಶಾಲಿಯಾದ, ಚತುರಾನನ! ಅಭಿಷೇಚನಂ = ಮಂಗಳಾಭಿಷೇಕ (ಸ್ನಾನ)ವನ್ನು, ಕಃ = ಯಾವನು, ಕರೋತಿ = ಮಾಡುವನು (ಮಾಡಿಸುವನು) ಮಾತಾಪಿತೃವಿಹೀನಾನಾಂ = ತಾಯಿತಂದೆಗಳಿಲ್ಲದವರಿಗೆ, ಕಾಗತಿಃ = ಯಾವಗತಿಯು, ಭವಿಷ್ಯತಿ ವೈ = ಉಂಟಾಗುವುದೋ (ನಾನರಿಯೆನು) ॥18॥

**ನ ಚ ಮಾತೃಸಮಂ ಮಿತ್ರಂ ಜನಕೇನ ಸಮಂ ಸುಖಮ್ ।**
**ನ ಭಾರ್ಯಾಸದೃಶಂ ಭಾಗ್ಯಂ ನ ಪುತ್ರೇಣ ಸಮಾ ಗತಿಃ ॥ 19 ॥**

ಮಾತೃಸಮಂ = ತಾಯಿಗೆ ಸಮನಾದ, ಮಿತ್ರಂ = ಗೆಳೆಯನು, ಜನಕೇನ ಸಮಂ = ತಂದೆಗೆ ಸಮವಾದ, ಸುಖಂ = ಸುಖವು, ನ = ಇಲ್ಲ, ಚ = ಮತ್ತು, ಭಾರ್ಯಾಸದೃಶಂ = ಪತ್ನಿಗೆ ಸಮವಾದ, ಭಾಗ್ಯಂ = ಸಂಪತ್ತು, ಪುತ್ರೇಣ = ಮಗನಿಂದ, ಸಮಾ = ಸಮಾನವಾದ, ಗತಿಃ = ಗತಿಯು (ಪುಣ್ಯಲೋಕಪ್ರಾಪ್ತಿಯು) ನ = ಇಲ್ಲವು ॥ 19 ॥

1. ಪಾ : ದೀನೋ ವಚನಂ 2. ಚ ವಿಪಚ್ಚೈವ.

**ನ ಭ್ರಾತ್ರೂಣಾಂ ಸಮಃ ಸ್ನೇಹೋ ನ ವಿಷ್ಣೋರ್ದೇವತಾ ಪರಾ ।**
**ಇತಿ ಸಂಭಾಷ್ಯ ಗೋವಿಂದೋ ಲೀಲಾಮಾನುಷವಿಗ್ರಹಃ ॥ 20 ॥**

ಭ್ರಾತ್ರೂಣಾಂ = ಅಣ್ಣತಮ್ಮಂದಿರಿಗೆ, ಸಮಃ = ಸರಿಯಾದ, ಸ್ನೇಹಃ = ಮೈತ್ರಿಯು, ನ = ಇಲ್ಲ, ವಿಷ್ಣೋಃ = ಶ್ರೀಹರಿಗಿಂತ, ಪರಾ = ಶ್ರೇಷ್ಠವಾದ, ದೇವತಾ = ದೇವತೆಯು, ನ = ಇಲ್ಲ, ಇತಿ = ಈ ಪ್ರಕಾರವಾಗಿ, ಲೀಲಾಮಾನುಷ ವಿಗ್ರಹಃ = ಕ್ರೀಡೆಗಾಗಿ ಸ್ವೀಕರಿಸಲ್ಪಟ್ಟ ಮಾನವಶರೀರವುಳ್ಳ, ಗೋವಿಂದಃ = ಶ್ರೀನಿವಾಸನು ॥ 20 ॥

**ರುರೋದ ಲೋಕರೀತ್ಯೈವ ಪಶ್ಯನ್ ಬ್ರಹ್ಮಾನನಂ ಹರಿಃ ।**
**ಉಪಧಾರ್ಯ ಹರೇರ್ವಾಕ್ಯಂ ಸ ಭವಃ ಕಂಜಸಂಭವಃ ॥ 21 ॥**

ಬ್ರಹ್ಮಾನನಂ = ಬ್ರಹ್ಮದೇವನ ಮುಖವನ್ನು, ಪಶ್ಯನ್ ಸನ್ = ನೋಡುತ್ತಿರುವವನಾಗಿ, ಹರಿಃ = ವಿಷ್ಣುವು, ಲೌಕಿಕರೀತ್ಯೈವ = ಲೋಕದಸಾಮಾನ್ಯ ಜನರಂತೆ, ರುರೋದ = ಅತ್ತನು. ಹರೇಃ = ಶ್ರೀನಿವಾಸನ, ವಾಕ್ಯಂ = ವಚನವನ್ನು, ಉಪಧಾರ್ಯ = ಗ್ರಹಿಸಿ, ಸಭವಃ = ರುದ್ರನಿಂದ ಸಹಿತನಾದ, ಕಂಜಸಂಭವಃ = ಕಮಲದಲ್ಲಿ ಜನಿಸಿದ ಬ್ರಹ್ಮದೇವನು ॥ 21 ॥

**ಸಾಂತ್ವಯನ್ವಾಸುದೇವಂ ತು ಭಾರತೀಮಾಹ ಭೂಪತೇ ।**

ಬ್ರಹ್ಮೋವಾಚ-

**ಕಿಮರ್ಥಂ ಮೋಹಯಸಿ ನೋ ಮಾಯಾಪಂಜರವಾಸಿನಃ ॥ 22 ॥**

ಭೂಪತೇ = ಎಲೈ ಜನಕರಾಯ, ವಾಸುದೇವಂ = ಶ್ರೀಹರಿಯನ್ನು, ಸಾಂತ್ವಯನ್ ತು = ಸಮಾಧಾನಪಡಿಸುತ್ತಾ, ಭಾರತೀಂ = ಮಾತನ್ನು, ಆಹ = ಹೇಳಿದನು. ಬ್ರಹ್ಮೋವಾಚ = ಬ್ರಹ್ಮದೇವನು ಹೇಳಹತ್ತಿದನು, ನಃ = ನಮ್ಮನ್ನು, ಕಿಮರ್ಥಂ = ಏತಕ್ಕಾಗಿ, ಮೋಹಯಸಿ = ಮೋಹಪಡಿಸುತ್ತೀಯೇ ॥ 22 ॥

**ಕೋಽಪಿ ನಾಸ್ತೀತಿ ಯತ್ಪ್ರೋಕ್ತಂ ತದಸತ್ಯಂ ಚತುರ್ಭುಜ ।**
**ಪುತ್ರೋಽಹಂ ತವ ಕಲ್ಯಾಣ ಪೌತ್ರಸ್ಸಾಕ್ಷಾತ್ತ್ರಿಲೋಚನಃ ॥ 23 ॥**

ಕೋಪಿ = ಯಾವನೂ, ನಾಸ್ತಿ = ಇಲ್ಲ, ಇತಿ = ಎಂಬುದಾಗಿ, ಯತ್ = ಯಾವ ಮಾತು, ಪ್ರೋಕ್ತಂ (ತ್ವಯಾ) = ನಿನ್ನಿಂದ ಹೇಳಲ್ಪಟ್ಟಿತ್ತೋ, ತತ್ = ಆ ಮಾತು, ಅಸತ್ಯಂ = ಸುಳ್ಳಾಗಿದೆ. ಕಲ್ಯಾಣ = ಮಂಗಳಕರನಾದ ಶ್ರೀಹರಿಯೇ, ಅಹಂ = ನಾನು, ಪುತ್ರಃ = ನಿನ್ನ ಮಗನು, ಸಾಕ್ಷಾತ್ ತ್ರಿಲೋಚನಃ = ಸಾಕ್ಷಾತ್ ಮುಕ್ಕಣ್ಣನಾದ ರುದ್ರನು, ಪೌತ್ರಃ = ನಿನ್ನ ಮೊಮ್ಮಗನು ॥ 23 ॥

**ಮನ್ಮಥೋಽನ್ಯಃ ಪುಮಾನ್ಪುತ್ರಃ ಪೌತ್ರಪುತ್ರಃ ಷಡಾನನಃ ।**
**ಜಗತ್ಪ್ರಾಣೋ ಜ್ಯೇಷ್ಠ ಪುತ್ರಃ ಸ್ನುಷಾ ತೇ ಭಾರತೀ ಹರೇ ॥ 24 ॥**

ಅನ್ಯಃ = ಬೇರೊಬ್ಬನಾದ, ಮನ್ಮಥಃ = ಮನ್ಮಥನು, ಪುಮಾನ್ ಪುತ್ರಃ = ಗಂಡುಮಗನು, ಪೌತ್ರ ಪುತ್ರಃ = ಮೊಮ್ಮಗನ ಮಗನು (ಮರಿಮಗನು), ಷಡಾನನಃ = ಷಣ್ಮುಖನು. ಜಗತ್ಪ್ರಾಣಃ = ವಾಯುದೇವನು, ಜ್ಯೇಷ್ಠಪುತ್ರಃ = ದೊಡ್ಡಮಗನಾಗಿದ್ದಾನೆ. ಹರೇ = ಶ್ರೀನಿವಾಸನೇ, ತೇ = ನಿನಗೆ, ಭಾರತೀ = ಭಾರತೀದೇವಿಯು, ಸ್ನುಷಾ = ಸೊಸೆಯು ॥ 24 ॥

**ಸರಸ್ವತ್ಯಾದಿಕಾಃ ಸರ್ವಾಃ ಸ್ತ್ರಿಯಸ್ತ್ವತ್ಪಾದಸೇವಿಕಾಃ ।**
**ತ್ವಂ ಪುಮಾನ್ ಪರಮಸ್ಸಾಕ್ಷಾಜ್ಜಗದ್ಧಾತ್ರೀ ತವಾಂಗನಾ ॥ 25 ॥**

ಸರಸ್ವತ್ಯಾದಿಕಾಃ = ಸರಸ್ವತೀ ಮೊದಲಾದ, ಸರ್ವಾಃ = ಸಮಸ್ತರಾದ, ಸ್ತ್ರಿಯಃ = ಹೆಂಗಸರು, ತ್ವತ್ಪಾದಸೇವಿಕಾಃ = ನಿನ್ನ ಚರಣಸೇವಕಿಯರು, ತ್ವಂ = ನೀನು, ಪರಮಃ = ಸರ್ವೋತ್ತಮನಾದ, ಪುಮಾನ್ = ಪುರುಷನಾಗಿದ್ದೀಯೇ (ಪುರುಷ ಲಿಂಗವಾಚ್ಯನಾಗಿದ್ದೀಯೇ) ತವ = ನಿನ್ನ, ಅಂಗನಾ = ಪತ್ನಿಯಾದ ಲಕ್ಷ್ಮೀದೇವಿಯಾದರೋ, ಸಾಕ್ಷಾತ್ = ಪ್ರತ್ಯಕ್ಷವಾಗಿ, ಜಗದ್ಧಾತ್ರೀ = ಸಮಸ್ತಜಗತ್ತಿಗೂ ತಾಯಿಯಾಗಿದ್ದಾಳೆ ॥ 25 ॥

**ಕ್ರೀಡಾಮಾತ್ರಮಿದಂ ಮನ್ಯೇ ತ್ವತ್ಕೃತಂ ಪುರುಷೋತ್ತಮ ।**
**ಏವಂ ವಿಭವಮಾಪನ್ನಃ ತ್ವಂ ನೋ ಮೋಹಯಸೇ ವೃಥಾ ॥ 26 ॥**

ಪುರುಷೋತ್ತಮ = ಶ್ರೀನಿವಾಸ, ತ್ವತ್ಕೃತಂ = ನಿನ್ನಿಂದ ಮಾಡಲ್ಪಟ್ಟ, ಇದಂ = ಈ ಕಾರ್ಯವು, ಕ್ರೀಡಾಮಾತ್ರಂ = ಕೇವಲ ಆಟವೆಂದು, ಮನ್ಯೇ = ತಿಳಿಯುತ್ತೇನೆ. ಏವಂ = ಹೀಗೆ, ವಿಭವಂ = ಸಕಲ ವೈಭವವನ್ನು, ಆಪನ್ನಃ = ಹೊಂದಿದವನಾದ, (ಅಥವಾ ಇಂತು ವೈಭವವನ್ನು ನೆರವೇರಿಸುತ್ತಿರುವಾಗ), ತ್ವಂ = ನೀನು, ವೃಥಾ = ವ್ಯರ್ಥವಾಗಿ, ನೋ = ನಮ್ಮನ್ನು, ಮೋಹಯಸೇ = ಮೋಹಗೊಳಿಸುತ್ತಿದ್ದೀಯೆ! ॥ 26 ॥

**ಇತ್ಥಮುಕ್ತೇ ಚತುರ್ವಕ್ತ್ರೇ ವಾಸುದೇವಂ ರಮಾಸಖಃ ।**
**ರಮಾಂ ಸಂಕೇತಯಾಮಾಸ ಸಾ ರಮಾವಾಕ್ಯಮಬ್ರವೀತ್ ॥ 27 ॥**

*ಶ್ರೀರಮೋವಾಚ-*

**ವಿದಿತಂ ಹೃದಯಂ ದೇವ ತವ ವೇಂಕಟವಲ್ಲಭ ।**
**ತೈಲಾಭ್ಯಂಗಾದಿ ಕರ್ಮಾಣಿ ಕರಿಷ್ಯೇ ಪುರುಷೋತ್ತಮ ॥ 28 ॥**

ಇತ್ಥಂ = ಈ ಪ್ರಕಾರವಾಗಿ, ಚತುರ್ವಕ್ತ್ರೇ = ಚತುರಾನನ ಬ್ರಹ್ಮದೇವನು, ವಾಸುದೇವಂ (ಪ್ರತಿ) = ಶ್ರೀನಿವಾಸನನ್ನು ಕುರಿತು, ಉಕ್ತೇ ಸತಿ = ಹೇಳುತ್ತಿರಲು, ರಮಾಸಖಃ = ಲಕ್ಷ್ಮಿಯ ಸಖನಾದ ಶ್ರೀಹರಿಯು, ರಮಾಂ = ರಮಾದೇವಿಯನ್ನು ಕುರಿತು, ಸಂಕೇತಯಾಮಾಸ = ಸಂಜ್ಞೆ ಮಾಡಿದನು. ಸಾ = ಆ, ರಮಾ = ಲಕ್ಷ್ಮೀದೇವಿಯು, ವಾಕ್ಯಮಬ್ರವೀತ್ = ಮಾತನಾಡಿದಳು. ರಮೋವಾಚ = ರಮಾದೇವಿಯು ಹೇಳುತ್ತಲಿದ್ದಾಳೆ. ವೇಂಕಟವಲ್ಲಭ = ವೇಂಕಟಾಚಲಕ್ಕೆ ಸ್ವಾಮಿಯಾದ, ದೇವ = ಶ್ರೀಹರಿಯೇ, ತವ = ನಿನ್ನ, ಹೃದಯಂ = ಮನಸ್ಸಿನಲ್ಲಿರುವುದು, ವಿದಿತಂ = ತಿಳಿಯಲ್ಪಟ್ಟಿತು. ಪುರುಷೋತ್ತಮ = ಎಲೈ ಪುರುಷೋತ್ತಮನೇ, ತೈಲಾಭ್ಯಂಗಾದಿ ಕರ್ಮಾಣಿ = ಎಣ್ಣೆಯನ್ನು ಹಚ್ಚಿ ಮಂಗಳಸ್ನಾನಮಾಡಿಸುವುದೇ ಮೊದಲಾದ ಕಾರ್ಯಗಳನ್ನು, ಕರಿಷ್ಯೇ = ಮಾಡುತ್ತೇನೆ ॥ 27-28 ॥

**ಉತ್ತಿಷ್ಠ ತ್ಯಜ ದುಃಖಂ ತೇ ಸಮಾರೋಹ ವರಾಸನಮ್ ।**
**ಸ ರಮಾಗಿರಮಾಕರ್ಣ್ಯ ಸಂತೋಷಾನ್ನಯನಾಜ್ಜಲಮ್ ॥ 29 ॥**

**ಮುಂಚನ್ಮುನಿವರಾನ್ ರಾಜನ್ ನಂದಯನ್ನರಸಾರಥಿಃ ।**
**ಕಶ್ಯಪೋಽತ್ರಿಭರದ್ವಾಜವಿಶ್ವಾಮಿತ್ರ ಪುರೋಗಮಾನ್ ॥ 30 ॥**

ಉತ್ತಿಷ್ಠ = ಏಳು, ತೇ = ನಿನ್ನ, ದುಃಖಂ = ವ್ಯಥೆಯನ್ನು, ತ್ಯಜ = ಬಿಡು, ವರಾಸನಂ = ಉತ್ತಮವಾದ ಆಸನವನ್ನು, ಸಮಾರೋಹ = ಹತ್ತುವವನಾಗು, ರಾಜನ್ = ಎಲೈ ಜನಕರಾಯ, ರಮಾಗಿರಂ = ಲಕ್ಷ್ಮಿಯ ವಚನವನ್ನು, ಆಕರ್ಣ್ಯ = ಕೇಳಿ, ಸಃ = ಶ್ರೀನಿವಾಸನು, ಸಂತೋಷಾತ್ = ಆನಂದದಿಂದ, ನಯನಾತ್ = ಕಣ್ಣಿನಿಂದ, ಜಲಂ = ನೀರನ್ನು, ಮುಂಚನ್ = ಸುರಿಸುತ್ತಾ, ನರಸಾರಥಿಃ = ಅರ್ಜುನನಿಗೆ ಸಾರಥಿಯಾದ ಶ್ರೀಕೃಷ್ಣನು, ಕಶ್ಯಪೋತ್ರಿಭಾರದ್ವಾಜವಿಶ್ವಾಮಿತ್ರ ಪುರೋಗಮಾನ್ = ಕಶ್ಯಪರು, ಅತ್ರಿಗಳು, ಭರದ್ವಾಜರು, ವಿಶ್ವಾಮಿತ್ರರು ಮೊದಲಾದ, ಮುನೀನ್ = ಋಷಿಗಳನ್ನು, ನಂದಯನ್ = ಸಂತೋಷಪಡಿಸುತ್ತಾ ॥ 29-30 ॥

**ಪ್ರಣಿಪತ್ಯ ವಸಿಷ್ಠಂ ಸ ಆಹ ವಿಶ್ವಂ ವಿಡಂಬಯನ್ ।**

*ಶ್ರೀನಿವಾಸ ಉವಾಚ-*

**ಅನುಜ್ಞಾಂ ದೇಹಿ ಮೇ ಬ್ರಹ್ಮನ್ಮಜ್ಜನಾರ್ಥಂ ಮಹಾಮುನೇ ॥ 31 ॥**

ಪ್ರಣಿಪತ್ಯ = ನಮಸ್ಕರಿಸಿ, ವಿಶ್ವಂ = ಪ್ರಪಂಚವನ್ನು, ವಿಡಂಬಯನ್ = ವಿಡಂಬಗೊಳಿಸುತ್ತಾ, ಪ್ರತಾರಣಗೊಳಿಸುತ್ತಾ (ಅಚ್ಚರಿಗೊಳಿಸುತ್ತಾ), ಸಃ = ಶ್ರೀನಿವಾಸನು, ವಸಿಷ್ಠಂ = ವಸಿಷ್ಠ ಋಷಿಗಳನ್ನು ಕುರಿತು, ಆಹ = ಹೇಳಿದನು, ಶ್ರೀನಿವಾಸ ಉವಾಚ = ಶ್ರೀನಿವಾಸನು ಮಾತನಾಡಿದನು, ಬ್ರಹ್ಮನ್ = ಬ್ರಹ್ಮಜ್ಞಾನಿಗಳಾದ (ಬ್ರಾಹ್ಮಣರಾದ) ವಸಿಷ್ಠ ಮುನಿಗಳೇ, ಮೇ = ನನಗೆ, ಮಜ್ಜನಾರ್ಥಂ = ಮಂಗಳಸ್ನಾನಮಾಡಲು, ಅನುಜ್ಞಾಂ = ಅಪ್ಪಣೆಯನ್ನು, ದೇಹಿ = ಕೊಡುವವರಾಗಿರಿ ॥ 31 ॥

**ತಥಾಸ್ತ್ವಿತ್ಯಬ್ರವೀತ್ಕೃಷ್ಣಂ ವಸಿಷ್ಠಃ ಸ ಪುರೋಹಿತಃ ।**
**ಸಪತ್ನೀಕಾನ್ಸುರಾನ್ಸರ್ವಾನ್ ಸಭಾರ್ಯಾನೃಷಿಮಂಡಲಾನ್ ॥ 32 ॥**

ಸಃ = ಆ, ಪುರೋಹಿತಃ = ಪುರೋಹಿತನಾದ, ವಸಿಷ್ಠಃ = ವಸಿಷ್ಠಮುನಿಯು, ಕೃಷ್ಣಂ = ಶ್ರೀನಿವಾಸನನ್ನು ಕುರಿತು, ತಥಾ = ಹಾಗೆಯೇ, ಅಸ್ತ್ವಿತಿ = ಆಗಲಿ ಎಂದು, ಅಬ್ರವೀತ್ = ಹೇಳಿದನು. ಸಪತ್ನಿಕಾನ್ = ಪತ್ನಿಯರಿಂದ ಸಹಿತರಾದ, ಸುರಾನ್ = ದೇವತೆಗಳನ್ನು, ಸಭಾರ್ಯಾನ್ = ಹೆಂಡತಿಯರಿಂದೊಡಗೂಡಿದ, ಋಷಿಮಂಡಲಾನ್ = ಋಷಿಗಳ ಗುಂಪುಗಳನ್ನು ಕುರಿತು ॥32॥

**ಅನುಜ್ಞಾಪ್ಯಾನುಗೈ ಸ್ಸಾರ್ಧಮುದತಿಷ್ಠತ್ಸುರೋತ್ತಮಃ ।**
**ವಿಕೀರ್ಯ ಕೇಶಪುಂಖಾನಿ ಪೂರ್ವಾಭಿಮುಖಮಾಸ್ಥಿತಃ ॥ 33 ॥**

ಅನುಜ್ಞಾಪ್ಯ = ಅಪ್ಪಣೆಪಡೆದು, ಸುರೋತ್ತಮಃ = ದೇವೋತ್ತಮನಾದ ಶ್ರೀನಿವಾಸನು, ಅನುಗೈಸ್ಸಾರ್ಧಂ = ಒಡನಾಡಿಗಳಿಂದೊಡಗೂಡಿ, ಉದತಿಷ್ಠತ್ = ಮೇಲೆದ್ದನು. ಕೇಶಪುಂಖಾನಿ = ಕೂದಲುಗಳ ತುದಿಗಳನ್ನು, ವಿಕೀರ್ಯ = ಬಿಚ್ಚಿ, ಪೂರ್ವಾಭಿಮುಖಂ = ಪೂರ್ವದಿಕ್ಕಿಗೆ ಅಭಿಮುಖವಾಗಿ, ಆಸ್ಥಿತಃ = ಕುಳಿತುಕೊಂಡನು ॥ 33 ॥

**ಆರೋಪಯನ್ ರತ್ನಪೀಠೇ ಶ್ರೀನಿವಾಸಂ ಸುಯೋಷಿತಃ ।**
**ತಾಸಾಂಮಧ್ಯೇ ಸಿಂಧುಪುತ್ರೀ ರಮಾ ಕಮಲಲೋಚನಾ ॥ 34 ॥**

ಸುರಯೋಷಿತಃ = ವೃದ್ಧರಾದ ದೇವತಾಸ್ತ್ರೀಯರು, ಶ್ರೀನಿವಾಸಂ = ಹರಿಯನ್ನು, ರತ್ನಪೀಠೇ = ನವರತ್ನಾಸನದಲ್ಲಿ, ಆರೋಪ್ಯ = ಏರಿಸಿ(ಕೂಡಿಸಿದರು), ತಾಸಾಂ = ಆ ಸ್ತ್ರೀಯರ, ಮಧ್ಯೇ = ನಡುವೆ, ಕಮಲಲೋಚನಾ = ಅಂಬುಜಾಕ್ಷಿಯಾದ, ಸಿಂಧುಪುತ್ರೀ, ಸಾಗರಕುಮಾರಿಯಾದ, ರಮಾ = ಲಕ್ಷ್ಮೀದೇವಿಯು ॥ 34 ॥

**ರುಕ್ಮಪಾತ್ರಂ ಸಮಾದಾಯ ತೈಲಪೂರಿತಮಾದರಾತ್ ।**
**ಅಭ್ಯಂಜಯತ್ತದಾ ದೇವೀ ಸ್ವಾಶೀರ್ಭಿರಭಿನಂದ್ಯ ತಮ್ ॥ 35 ॥**

ತೈಲಪೂರಿತಂ = ಎಣ್ಣೆಯಿಂದ ತುಂಬಿದ, ರುಕ್ಮಪಾತ್ರಂ = ಬಂಗಾರದ ಪಾತ್ರೆಯನ್ನು, ಸಮಾದಾಯ = ತೆಗೆದುಕೊಂಡು ಬಂದು, ಆದರಾತ್ = ವಿಶ್ವಾಸಪೂರ್ವಕವಾಗಿ, ದೇವೀ = ಶ್ರೀಲಕ್ಷ್ಮೀದೇವಿಯು, ತದಾ = ಆಗ, ಆಶೀಭಿಃ = ಆಶೀರ್ವಾದಗಳಿಂದ ಅಂದರೆ, ಶುಭಾಶಂಸನಗಳಿಂದ, ತಂ = ಶ್ರೀನಿವಾಸನನ್ನು, ಅಭಿನಂದ್ಯ = ಅಭಿನಂದಿಸಿ, ಅಭ್ಯಂಜಯತ್ = ಅಭ್ಯಂಜನ ಮಾಡಿದಳು (ಮಾಡಿಸಿದಳು) ॥ 35 ॥

ಶ್ರೀರಮೋವಾಚ-

**ದೀರ್ಘಾಯುರ್ಭವ ಗೋವಿಂದ ಬಹುಪುತ್ರೋ ಧನಾಧಿಪಃ ।**
**ಚತುರ್ದಶಾನಾಂ ಲೋಕಾನಾಮೇಕಛತ್ರಾದಿಪೋ ಭವ ॥ 36 ॥**

ಶ್ರೀರಮೋವಾಚ = ಆ ಶ್ರೀಕಮಲೆಯು ಹೇಳುತ್ತಿದ್ದಾಳೆ. ಗೋವಿಂದ = ಹೇ ಶ್ರೀನಿವಾಸ, ದೀರ್ಘಾಯುಃ = ಬಹುಕಾಲದವರೆಗೆ ಆಯುಸ್ಸುಳ್ಳವನು, ಭವ = ಆಗು, ಬಹುಪುತ್ರಃ = ಅನೇಕಪುತ್ರರುಳ್ಳವನು, ಧನವಾನ್ = ಧನ (ಸಂಪತ್) ಉಳ್ಳವನು, ಭವ = ಆಗು, ಚತುರ್ದಶಾನಾಂ ಲೋಕಾನಾ = ಹದಿನಾಲ್ಕು ಲೋಕಗಳಿಗೂ, ಏಕಛತ್ರಾದಿಪೋ = ಏಕಛತ್ರಾಧಿಪತಿಯು, ಅಂದರೆ ಒಬ್ಬನೇ (ಚಕ್ರವರ್ತಿಯು), ಭವ = ಆಗು ॥ 36 ॥

**ಏವಮುಕ್ತ್ವಾ ತದಾ ದೇವೀ ಅಭ್ಯಷಿಂಚದ್ರಮಾ ಹರಿಮ್ ।**
**ದೇವಾಂಗಂ ಮರ್ದಯಾಮಾಸ ತೈಲೇನಾತಿ ಸುಗಂಧಿನಾ ॥ 37 ॥**

ಏವಂ = ಇಂತು, ಉಕ್ತ್ವಾ = ಹೇಳಿದ, ದೇವೀ = ರಮಾದೇವಿಯು, ತದಾ = ಆಗ, ಅತಿಸುಗಂಧಿನಾ = ಅತ್ಯಂತ ಪರಿಮಳಯುಕ್ತವಾದ, ತೈಲೇನ = ಎಣ್ಣೆಯಿಂದ, ದೇವಾಂಗಂ = ಪರಮಾತ್ಮನ ಅಂಗವನ್ನು, ಮರ್ದಯಾಮಾಸ = ಒತ್ತಿಹಚ್ಚಿದವಳಾಗಿ, ಹರಿ = ಶ್ರೀನಿವಾಸನಿಗೆ, ಅಭ್ಯಂಜಯಾಮಾಸ = ಅಭ್ಯಂಜನ ಮಾಡಿದಳು ॥ 37 ॥

**ತದಾ ದದೌ ಬ್ರಹ್ಮಪತ್ನೀ *ಚಂದ್ರಕಾಶ್ಮೀರ ಕರ್ದಮಮ್ ।**
**ತೇನ ಮಾರ್ಜಾರ ತೈಲೇನ ತಥಾ ಮೃಗಮದೇನ ಚ ॥ 38 ॥**

ತದಾ = ಆಗ, ಬ್ರಹ್ಮಪತ್ನೀ = ಬ್ರಹ್ಮನ ಪತ್ನಿಯಾದ ಸರಸ್ವತಿಯು, ಚಂದ್ರಕಾಶ್ಮೀರ ಕರ್ದಮಂ = ಕೇಸರಪಚ್ಚಕರ್ಪೂರದ ರಸವನ್ನು, ದದೌ = ಕೊಟ್ಟಳು, ತೇನ = ಅದರಿಂದಲೂ, ಮಾರ್ಜಾತೈಲೇನ = ಪುನಗುಚೆಟ್ಟಿನಿಂದ ಎಣ್ಣೆಯಿಂದ, ಮೃಗಮದೇನಚ = ಕಸ್ತೂರಿಪಂಕದಿಂದಲೂ ॥ 38 ॥

**ಹರಿದ್ರಾಚೂರ್ಣಪಿಷ್ಟೇನ ನಿರ್ಮುಜ್ಯ ಚ ವೃಷಾಕಪಿಮ್ ।**
**ಸುಮಂಗಲೈರ್ವಾದ್ಯಘೋಷೈಃ ಸಹ ಸರ್ವಪರಿಚ್ಛದೈಃ ॥ 39 ॥**

**ಸಮಂತಾತ್ಸರ್ವವಿಥೀಷು ಕರಿಕುಂಭೈರುಪಾಹೃತೈಃ ।**
**ಸಮಂತಾತ್ಪುಣ್ಯತೀರ್ಥಸ್ಥ ಪುಣ್ಯತೀರ್ಥಾಭಿಪೂರಿತೈಃ ॥ 40 ॥**

*ಪಾ : ರಸಂ ಕರ್ಪೂರಕರ್ದಮಂ.

**ಸರತ್ನೈಃ ಕಾಂಚನೈಃ ಕುಂಭೈಃ[3] ಸ್ಥಾಪಿತೋದಕಮಿಶ್ರಿತೈಃ ।**
**ಅಭಿಷೇಕಂ ತತಶ್ಚಕ್ರೇ ಕಮಲಾ ಜಗದೀಶಿತುಃ ॥ 41 ॥**

ಹರಿದ್ರಾಚೂರ್ಣಪಿಷ್ಟೇನ = ಅರಿಶಿನಪುಡಿಯ ಮುದ್ದೆಯಿಂದ, ವೃಷಾಕಪಿಂ = ಶ್ರೀನಿವಾಸನನ್ನು, ನಿರ್ಮೃಜ್ಯಚ = ಉಜ್ಜಿದವಳಾಗಿ, ಸುಮಂಗಲ್ಯೈಃ = ಮಂಗಳಕರಗಳಾದ, ವಾದ್ಯಘೋಷೈಃ = ವಾದ್ಯಗಳಧ್ವನಿಗಳಿಂದ, ಸರ್ವಪರಿಚ್ಛದೈಸ್ಸಹ = ಸಕಲಮಂಗಳ ಸಾಮಗ್ರಿಗಳಿಂದಲೂ, ಸಮಂತಾತ್ = ಸುತ್ತಮುತ್ತಲಿನ, ಪುಣ್ಯತೀರ್ಥಸ್ಯ = ಪುಣ್ಯತೀರ್ಥಗಳಲ್ಲಿರುವ, ಪುಣ್ಯತೀರ್ಥಾಭಿಪೂರಿತೈಃ = ಪುಣ್ಯಕರ ಉದಕಗಳಿಂದ ತುಂಬಿದ, ಕರಿಕುಂಭೈಃ = ಆನೆಯ ಕುಂಭಸ್ಥಳದಲ್ಲಿಟ್ಟು, ವೀಥಿಷು = ಬೀದಿಗಳಲ್ಲಿ, ಸಮಂತಾತ್ = ಎಲ್ಲ ಕಡೆ, ಉಪಾಹೃತೈಃ = ಮೆರವಣಿಗೆಯಿಂದ ತರಲ್ಪಟ್ಟಂತಹ, ತತಃ = ಆನಂತರ, ತಾಪಿತೋದಕ ಮಿಶ್ರಿತೈಃ = ಕಾಯಿಸಿದ ಬಿಸಿನೀರಿನಿಂದ ಕೂಡಿರುವ, ಸರತ್ನೈಃ = ರತ್ನಗಳಿಂದ ಸಹಿತವಾದ, ಕಾಂಚನೈಃ = ಬಂಗಾರಮಯವಾದ, ಕುಂಭೈಃ = ಕೊಡಗಳಿಂದ, ಕಮಲಾ = ಲಕ್ಷ್ಮೀದೇವಿಯು, ಜಗದೀಶಿತುಃ = ಜಗತ್ಪ್ರಭುವಾದ ಶ್ರೀನಿವಾಸನಿಗೆ, ಅಭಿಷೇಕಂ = ಅಭಿಷೇಕವನ್ನು, ಚಕ್ರೇ = ಮಾಡಿದಳು ॥ 39-41 ॥

**ಆಪಾದಮೌಲಿಪರ್ಯಂತಂ ಸಾ ಕೃತ್ವೋದ್ವರ್ತನಂ ಹರೇಃ ।**
**ಮೇನೇ ಕೃತಾರ್ಥಮಾತ್ಮಾನಂ ಸೇವಯಾ ಕೇಶವಸ್ಯ ಚ ॥ 42 ॥**

ಸಾ = ರಮಾದೇವಿಯು, ಹರೇಃ = ಶ್ರೀನಿವಾಸನಿಗೆ, ಅಪಾದಮೌಲಿ ಪರ್ಯಂತಂ = ಪಾದಗಳಿಂದಾರಂಭಿಸಿ ತಲೆಯವರೆಗೆ, ಉದ್ವರ್ತನಂ = ಉಜ್ಜುವಿಕೆಯನ್ನು, ಕೃತ್ವಾ = ಮಾಡಿ, ಕೇಶವಸ್ಯ = ಶ್ರೀಹರಿಯ, ಸೇವಯಾ = ಪರಿಚಾರಿಕೆಯಿಂದ, ಆತ್ಮಾನಂ = ತನ್ನನ್ನು, ಕೃತಾರ್ಥಂ = ಕೃತಕೃತ್ಯಳಾದವಳಾಗಿ, ಮೇನೇ = ತಿಳಿದಳು ॥ 42 ॥

**ಚತಸ್ರಸ್ತು[4] ಸುವಾಸಿನ್ಯಃ ಪಾಣಿಭಿಃ ಕಳಶಾನ್ನೃಪ ।**
**ಧೃತ್ವಾ ಮೌಕ್ತಿಕತೋಯೈಸ್ತಂ ಅಭ್ಯಷಿಂಚನ್ಸುರೇಶ್ವರಮ್ ॥ 43 ॥**

ನೃಪ = ಎಲೈ ಜನಕಮಹಾರಾಜ! ಚತಸ್ರಸ್ತು (ಚತ್ವಾರಸ್ತಾಃ) = ನಾಲ್ಕು ಜನ, ಸುವಾಸಿನ್ಯಃ = ಸುಮಂಗಲೆಯರು, ಪಾಣಿಭಿಃ = ಕರಗಳಿಂದ, ಕಲಶಾನ್ = ಕಳಶಗಳನ್ನು, ಧೃತ್ವಾ = ಹಿಡಿದುಕೊಂಡು, ಮೌಕ್ತಿಕತೋಯೈಃ = ಮುತ್ತಿನ ನೀರಿನಿಂದ, ತಂ = ಆ, ಸುರೇಶ್ವರಂ = ದೇವತೆಗಳಿಗೆ ಪ್ರಭುವಾದ ಶ್ರೀನಿವಾಸನನ್ನು, ಅಭ್ಯಷಿಂಚನ್ = ಅಭಿಷೇಚಿಸಿದರು ॥ 43 ॥

**[5]ಜಲೈರ್ನೀರಾಜಯಾಮಾಸುಃ ಪುತ್ರವಾನ್ ಧನವಾನ್ ಭವ ।**
**ಇತ್ಯಾಶಿಷಾಭಿನಂದಂತ್ಯಃ ಶ್ರೀನಿವಾಸಂ ಸುರಾಂಗನಾಃ ॥ 44 ॥**

ಶ್ರೀನಿವಾಸಂ = ಶ್ರೀಹರಿಯನ್ನು, ಸುರಾಂಗನಾಃ = ಅಮರಸ್ತ್ರೀಯರು, ಪುತ್ರವಾನ್ = ಪುತ್ರರುಳ್ಳವನು, ಧನವಾನ್ = ಸಿರಿವಂತನು, ಭವ = ಆಗು, ಇತಿ = ಈ ಪ್ರಕಾರವಾಗಿ, ಆಶಿಷಾ = (ಆಶಂಸನಗಳಿಂದ) ಆಶೀರ್ವಾದಗಳಿಂದ, ಅಭಿನಂದ್ಯಂತಃ = ಅಭಿನಂದಿಸುತ್ತಾ, ಜಲೈರ್ನೀರಾಜಯಾಮಾಸುಃ = ನೀರಿನಿಂದ ದೃಷ್ಟಿತೆಗೆದರು (ಪಾ :- ದೀಪಾನ್ನಿರ್ವರ್ತಯಾಮಾಸುಃ = ದೀಪದಾರತಿಯನ್ನೆತ್ತಿದರು) ॥ 44 ॥

**ಗಾಯಂತ್ಯಃ ಶುಭಗೀತಾನಿ ಕುಂಕುಮೈಸ್ಸಲಿಲೈಸ್ತತಃ ।**
**ಆರಾರ್ತಿಕಾಂ ಮಾಂಗಲಿಕೀಂ ಸರ್ವಾಶ್ಚಕ್ರುಸ್ತಥಾಂಗನಾಃ ॥ 45 ॥**

---

3. ಪಾ : ತಾಪಿತೋದಕಮಿಶ್ರಿತೈಃ, 4. ಪಾ : ಚತ್ವಾರಸ್ತಾಃ, 5. ಪಾ : ದೀಪಾನ್ನಿರ್ವರ್ತಯಾಮಾಸುಃ

ತತಃ = ಆ ತರುವಾಯ, ಸರ್ವಾಃ = ಸಕಲರಾದ, ಅಂಗನಾಃ = ಸ್ತ್ರೀಯರು, ಶುಭಗೀತಾನಿ = ಮಂಗಳಗೀತೆಗಳನ್ನು, ಗಾಯಂತ್ಯಃ = ಹಾಡುವವರಾಗಿ, ಕುಂಕುಮೈಸ್ಸಲಿಲೈಃ = ಕುಂಕುಮಮಿಶ್ರಿತ ನೀರಿನಿಂದೊಡಗೂಡಿದ (ಕದಲಾರತಿ), ಮಾಂಗಲಕೀಂ = ಮಂಗಳಕರವಾದ, ಆರ್ತಿಕಾಂ = ಆರತಿಯನ್ನು, ಚಕ್ರುಃ = ಮಾಡಿದರು ॥ 45 ॥

**ತದಾ ದದೌ ಬ್ರಹ್ಮಪತ್ನೀ ಸಾವಿತ್ರೀ ವಸ್ತ್ರಮುತ್ತಮಮ್ ।**
**ತೇನ ವಸ್ತ್ರೇಣ ಸರ್ವಾಂಗಂ ಮಮಾರ್ಜ ವಿಧಿವದ್ರಮಾ ॥ 46 ॥**

ತದಾ = ಆವಾಗ, ಬ್ರಹ್ಮಪತ್ನೀ = ಬ್ರಹ್ಮನ ಮಡದಿಯಾದ, ಸಾವಿತ್ರೀ = ಸಾವಿತ್ರಿದೇವಿಯು, ಉತ್ತಮಂ = ಶ್ರೇಷ್ಠವಾದ, ವಸ್ತ್ರಂ = ಅಂಗವಸ್ತ್ರವನ್ನು, ದದೌ = ಕೊಟ್ಟಳು, ರಮಾ = ಲಕ್ಷ್ಮೀದೇವಿಯು, ತೇನ ವಸ್ತ್ರೇಣ = ಆ ಅಂಗವಸ್ತ್ರದಿಂದ, ವಿಧಿವತ್ = ಸಕ್ರಮವಾಗಿ, ಸರ್ವಾಂಗಂ = ಶ್ರೀನಿವಾಸನ ಸಕಲ ಅವಯವವನ್ನೂ, ಮಮಾರ್ಜ = ಒರೆಸಿದಳು ॥46॥

**ಪಾರ್ವತೀ ಧೂಪಮಾದಾಯ ದದೌ ಲಕ್ಷ್ಮೀಕರಾಂಬುಜೇ ।**
**ಧೂಪಯಿತ್ವಾ ಸುಧೂಪೇನ ವಿಕೀರ್ಯೋಜ್ಝಿತ ಬಂಧನಾತ್ ॥ 47 ॥**

**ಬಬಂಧ ಕಮಲಾದೇವೀ ಮೂರ್ಧಜಾನ್ಮಧುಘಾತಿನಃ ।**
**ಆದರ್ಶಂ ದರ್ಶಯಾಮಾಸ ಸಾವಿತ್ರೀ ಸ್ವರ್ಣಭೂಷಿತಮ್ ॥ 48 ॥**

ಪಾರ್ವತೀ = ಗಿರಿಜಾದೇವಿಯು, ಧೂಪಂ = ಹಾಲುಮಡ್ಡಿ ಮುಂತಾದ ಸುಗಂಧದ ಧೂಪವನ್ನು, ಆದಾಯ = ತಂದು, ಲಕ್ಷ್ಮೀಕರಾಂಬುಜೇ = ರಮೆಯಕರಕಮಲದಲ್ಲಿ, ದದೌ = ಕೊಟ್ಟಳು. ಕಮಲಾದೇವೀ = ಲಕ್ಷ್ಮಿಯು, ಮಧುಘಾತಿನಃ = ಮಧುನಾಮಕದೈತ್ಯನನ್ನು ಸಂಹರಿಸಿದ ಶ್ರೀನಿವಾಸನ, ಮೂರ್ಧಜಾನ್ = ಕೂದಲನ್ನು, ಬಂಧನಾತ್ = ಬಂಧನದಿಂದ, ವಿಕೀರ್ಯ = ಬಿಚ್ಚಿ ಕೆದರಿ, ಸುಧೂಪೇನ = ಸುಗಂಧದ ಧೂಪವನ್ನು ಹಾಕಿ, ಮೂರ್ಧಜಾನ್ = ಬಿಚ್ಚಿದ ತಲೆಕೂದಲನ್ನು, ಬಬಂಧ = ಕಟ್ಟಿದಳು (ಗಂಟು ಕಟ್ಟಿದಳು) ಸಾವಿತ್ರೀ = ಸಾವಿತ್ರಿ ದೇವಿಯು, ಸುವರ್ಣಭೂಷಿತಂ = ಬಂಗಾರದ ಕಟ್ಟುಹಾಕಿ ಸಿಂಗರಿಸಲ್ಪಟ್ಟ, ಆದರ್ಶಂ = ಕನ್ನಡಿಯನ್ನು, ದರ್ಶಯಾಮಾಸ = ಶ್ರೀನಿವಾಸನಿಗೆ ತೋರಿಸಿದಳು ॥ 47-48 ॥

**ರತೀ ಶಚ್ಯೌ ಚಾಮರೇ ಚ ವೀಜಂತ್ಯೌ ಚಂದ್ರಸನ್ನಿಭೇ ।**
**ಛತ್ರಂ ದಧಾರ ಸಾ ದೇವೀ ಭಾರತೀ ಭಕ್ತಿಸಂಯುತಾ ॥ 49 ॥**

ರತೀ ಶಚ್ಯೌ = ರತೀದೇವಿ ಮತ್ತು ಶಚೀದೇವಿಯರು, ಚಂದ್ರಸನ್ನಿಭೇ = ಚಂದ್ರನಂತೆ ಬಿಳುಪಾದ, ಚಾಮರೇ = ಎರಡು ಚಾಮರಗಳನ್ನು, ವೀಜಯಂತ್ಯೌ = ಬೀಸಿದವರಾದರು, ಸಾ = ಪ್ರಖ್ಯಾತಳಾದ, ಭಾರತೀದೇವೀ = ಭಾರತೀದೇವಿಯು, ಭಕ್ತಿಸಂಯುಕ್ತಾ= ಭಕ್ತಿಯುಕ್ತಳಾಗಿ, ಛತ್ರಂ = ಶ್ವೇತಛತ್ರವನ್ನು, ದಧಾರ = ಹಿಡಿದಳು ॥ 49 ॥

**ಪಾದುಕೇ ಪ್ರದದೌ ಭದ್ರಾ ಗಂಗಾ ಗಂಗಾಪಿತುಸ್ತದಾ ।**
**ನಿಧಾಯ ಪಾದೌ ವರಪಾದುಕಾದ್ವಯೇ ಯಯೌ ಪ್ರಾಪನ್ನಾರ್ತಿಹರೋ ಹರಿಃ ಸ್ವಯಮ್ ।**
**ಯಾಭ್ಯಾಂ ಪುರಾ ಪಾವನತಾಂ ಗತಾ ಮುನೇಃ ಶಾಪೇನ ಶೈಲತ್ವಮುಪಾಗತಾಬಲಾ ॥ 50 ॥**

ತದಾ = ಆಗ, ಗಂಗಾಪಿತುಃ = ಗಂಗಾಜನಕನಾದ ಶ್ರೀಹರಿಗೆ, ಭದ್ರಾ = ಮಂಗಳಕರಳಾದ, ಗಂಗಾ = ಗಂಗಾದೇವಿಯು, ಪಾದುಕೇ = ಪಾದುಕೆಗಳನ್ನು, ಪ್ರದದೌ = ಕೊಟ್ಟಳು, ಪುರಾ = ಪೂರ್ವದಲ್ಲಿ, ಮುನೇಃ = ಗೌತಮಋಷಿಯ, ಶಾಪಾತ್

= ಶಾಪದಿಂದ, ಶೈಲತ್ವಮುಪಾಗತಾ = ಶಿಲಾಭಾವವನ್ನು (ಕಲ್ಲಾಗಿದ್ದ) ಹೊಂದಿದ, ಅಬಲಾ = ಅಹಲ್ಯೆಯು, ಯಾಭ್ಯಾಂ = ಯಾವ ಪಾದಗಳಿಂದ (ಪಾದಸ್ಪರ್ಶದಿಂದ), ಪಾವನತಾಂ ಗತಾ = ಪವಿತ್ರಳಾದಳೋ(ಶಾಪವಿಮೋಚನ ಪೂರ್ವಕವಾಗಿ ಪರಿಶುದ್ಧಳಾದಳೋ) ಅಂಥ (ಪಾದಗಳುಳ್ಳ), ಪ್ರಪನ್ನಾರ್ತಿಹರಃ = ಶರಣಾಜನರ ಸಂಕಟಪರಿಹಾರಕನಾದ, ಹರಿಃ = ಶ್ರೀನಿವಾಸನು, ಸ್ವಯಂ = ಸ್ವತಃ, ವರಪಾದುಕಾದ್ವಯೇ = ಶ್ರೇಷ್ಠವಾದ ಎರಡು ಪಾದುಕೆಗಳಲ್ಲಿ, ಪಾದೌ = ತನ್ನೆರಡು ಪಾದಗಳನ್ನು, ನಿಧಾಯ = ಇಟ್ಟು, ಯಯೌ = ಹೊರಟನು ॥ 50 ॥

**ಪಾದುಕಾಭ್ಯಾಂ ಚರನ್ ಭೂಮಿಂ ವರಾಸನಮಗಾದ್ಧರಿಃ ॥ 51 ॥**

ಹರಿಃ = ಶ್ರೀನಿವಾಸನು, ಪಾದುಕಾಭ್ಯಾಂ = ಪಾದುಕೆಗಳಿಂದ, ಭೂಮಿಂ = ಧರಣಿಯನ್ನು, ಚರನ್ (ಸನ್) = ಸಂಚರಿಸುತ್ತಾ (ನಡೆಯುತ್ತಾ) ವರಾಸನಂ = ಉತ್ತಮವಾದ ಆಸನವನ್ನು ಕುರಿತು, ಅಗಾತ್ = ಬಂದನು ॥ 51 ॥

**ಬ್ರಹ್ಮಾದಯಸ್ಸುರಶ್ರೇಷ್ಠಾಃ ಇಂದ್ರಾದ್ಯಾ ಲೋಕಪಾಲಕಾಃ ।**
**ಕಶ್ಯಪಾದಿಮುನಿಶ್ರೇಷ್ಠಾ ವಸಿಷ್ಠಾದಿ ತಪೋಧನಾಃ ॥ 52 ॥**

**ಸನಕಾದ್ಯಾಶ್ಚ ಯೋಗೀಂದ್ರಾ ಭೃಗ್ವಾದ್ಯಾಶ್ಚ ಋಷೀಶ್ವರಾಃ ।**
**ಆರ್ಯಮಾದ್ಯಾಶ್ಚ ಪಿತರಃ ತುಂಬುರ್ವಾದ್ಯಾಶ್ಚ ಗಾಯಕಾಃ ॥ 53 ॥**

**ರಂಭಾದ್ಯಾಶ್ಚೈವ ನರ್ತಕ್ಯಃ ಸೂತಮಾಗಧಬಂದಿನಃ ।**
**ಉಪಾಸತಾಸನೇ ರಮ್ಯೇ ಪಶ್ಯಂತಃ ಪುರುಷೋತ್ತಮಮ್ ॥ 54 ॥**

ಸುರಶ್ರೇಷ್ಠಾಃ = ದೇವತಾಶ್ರೇಷ್ಠರಾದ, ಬ್ರಹ್ಮಾದಯಃ = ಬ್ರಹ್ಮದೇವರೇ ಮೊದಲಾದವರು, ಇಂದ್ರಾದ್ಯಾಃ = ಇಂದ್ರನೇ ಮೊದಲಾದ, ಲೋಕಪಾಲಾಃ = ಲೋಕಪಾಲಕರು, ಕಶ್ಯಪಾದಿ ಮುನಿಶ್ರೇಷ್ಠಾಃ = ಕಶ್ಯಪರೇ ಮೊದಲಾದ ಮುನಿವರ್ಯರು, ವಸಿಷ್ಠಾದಿತಪೋಧನಾಃ = ವಸಿಷ್ಠರು ಮುಂತಾದ ತಪಸ್ವಿಗಳು (ತಪೋಧನರು), ಚ = ಮತ್ತು, ಸನಕಾದ್ಯಾಃ = ಸನಕರೇ ಮುಂತಾದ, ಯೋಗೀಂದ್ರಾಃ = ಯೋಗಿವರ್ಯರು, ಭೃಗ್ವಾದ್ಯಾಶ್ಚ = ಭೃಗು ಮುಂತಾದ, ಋಷಿಶ್ರೇಷ್ಠಾಃ = ಋಷಿಶ್ರೇಷ್ಠರು, ಚ = ಮತ್ತು, ಆರ್ಯಮಾದ್ಯಾಃ = ಆರ್ಯಮರೇ ಮೊದಲಾದ, ಪಿತರಃ = ಪಿತೃ (ದೇವತೆ)ಗಳು ತುಂಬುರ್ವಾದ್ಯಾಶ್ಚ = ತುಂಬುವರೇ ಮೊದಲಾದ, ಗಾಯಕಾಃ = ಗಾಯಕರು, ರಂಭಾದ್ಯಾಶ್ಚ = ರಂಭಾ ಮುಂತಾದ, ನರ್ತಕ್ಯಃ = ನರ್ತಕಿಯರು, ಸೂತಮಾಗಧವಂದಿನಃ - ಸೂತ = ರಥನಡೆಸುವ (ಸಾರಥಿ)ವರು, ಮಾಗಧ = ವಂಶದ ಬಿರುದಾವಳಿಗಳನ್ನು ಹೊಗಳುವವರು, ವಂದಿನಃ = ಸ್ತುತಿಪಾಠಕರುಗಳು, ಪುರುಷೋತ್ತಮಂ = ಪುರುಷಶ್ರೇಷ್ಠನಾದ ಶ್ರೀನಿವಾಸನನ್ನು, ರಮ್ಯೇ = ಮನೋಹರವಾದ, ಆಸನೇ = ಸಿಂಹಾಸನದಲ್ಲಿ ಶೋಭಿಸುವುದನ್ನು, ಪಶ್ಯಂತಃ = ನೋಡುತ್ತಿರುವವರಾಗಿ, ಉಪಾಸತ = (ಉಪಾಸಂತ) = ಉಪಾಸನಮಾಡಿದರು ॥ 52-54 ॥

**ಸ್ವಾಮಿಪುಷ್ಕರಣೀತೀರೇ ದಕ್ಷಿಣೇ ಪಕ್ಷಿವಾಹನಃ ।**
**ಅಷ್ಟಮೀಂದುಕಲಾಕಾರೇ ಲಲಾಟೇ ದರ್ಪಣಸ್ಫುಟೇ ॥ 55 ॥**

**ಊರ್ಧ್ವಪುಂಡ್ರಂ ದಧಾರಾಥ ಶ್ರೀನಿವಾಸಃ ಸತಾಂಗತಿಃ ।**
**ತದಾ ಮುಹೂರ್ತಕಾಲಸ್ತು ದರ್ಶಿತೋ ದೈವಚಿಂತಕೈಃ ॥ 56 ॥**

ತತಃ = ಆ ತರುವಾಯ, ಸರ್ವಾಃ = ಸಕಲರಾದ, ಅಂಗನಾಃ = ಸ್ತ್ರೀಯರು, ಶುಭಗೀತಾನಿ = ಮಂಗಳಗೀತೆಗಳನ್ನು, ಗಾಯಂತ್ಯಃ = ಹಾಡುವವರಾಗಿ, ಕುಂಕುಮ್ಯೆಸ್ಸಲಿಲ್ಯೆಃ = ಕುಂಕುಮಮಿಶ್ರಿತ ನೀರಿನಿಂದೊಡಗೂಡಿದ (ಕದಲಾರತಿ), ಮಾಂಗಲಕೀಂ = ಮಂಗಳಕರವಾದ, ಆರ್ತಿಕಾಂ = ಆರತಿಯನ್ನು, ಚಕ್ರುಃ = ಮಾಡಿದರು ।। 45 ।।

**ತದಾ ದದೌ ಬ್ರಹ್ಮಪತ್ನೀ ಸಾವಿತ್ರೀ ವಸ್ತ್ರಮುತ್ತಮಮ್ ।**
**ತೇನ ವಸ್ತ್ರೇಣ ಸರ್ವಾಂಗಂ ಮಮಾರ್ಜ ವಿಧಿವದ್ರಮಾ ।। 46 ।।**

ತದಾ = ಆವಾಗ, ಬ್ರಹ್ಮಪತ್ನೀ = ಬ್ರಹ್ಮನ ಮಡದಿಯಾದ, ಸಾವಿತ್ರೀ = ಸಾವಿತ್ರಿದೇವಿಯು, ಉತ್ತಮಂ = ಶ್ರೇಷ್ಠವಾದ, ವಸ್ತ್ರಂ = ಅಂಗವಸ್ತ್ರವನ್ನು, ದದೌ = ಕೊಟ್ಟಳು, ರಮಾ = ಲಕ್ಷ್ಮೀದೇವಿಯು, ತೇನ ವಸ್ತ್ರೇಣ = ಆ ಅಂಗವಸ್ತ್ರದಿಂದ, ವಿಧಿವತ್ = ಸಕ್ರಮವಾಗಿ, ಸರ್ವಾಂಗಂ = ಶ್ರೀನಿವಾಸನ ಸಕಲ ಅವಯವವನ್ನೂ, ಮಮಾರ್ಜ = ಒರೆಸಿದಳು ।।46।।

**ಪಾರ್ವತೀ ಧೂಪಮಾದಾಯ ದದೌ ಲಕ್ಷ್ಮೀಕರಾಂಬುಜೇ ।**
**ಧೂಪಯಿತ್ವಾ ಸುಧೂಪೇನ ವಿಕೀರ್ಯೋಜ್ಝಿತ ಬಂಧನಾತ್ ।। 47 ।।**

**ಬಬಂಧ ಕಮಲಾದೇವೀ ಮೂರ್ಧಜಾನ್ಮಧುಘಾತಿನಃ ।**
**ಆದರ್ಶಂ ದರ್ಶಯಾಮಾಸ ಸಾವಿತ್ರೀ ಸ್ವರ್ಣಭೂಷಿತಮ್ ।। 48 ।।**

ಪಾರ್ವತೀ = ಗಿರಿಜಾದೇವಿಯು, ಧೂಪಂ = ಹಾಲುಮಡ್ಡಿ ಮುಂತಾದ ಸುಗಂಧದ ಧೂಪವನ್ನು, ಆದಾಯ = ತಂದು, ಲಕ್ಷ್ಮೀಕರಾಂಬುಜೇ = ರಮೆಯಕರಕಮಲದಲ್ಲಿ, ದದೌ = ಕೊಟ್ಟಳು. ಕಮಲಾದೇವೀ = ಲಕ್ಷ್ಮಿಯು, ಮಧುಘಾತಿನಃ = ಮಧುನಾಮಕದೈತ್ಯನನ್ನು ಸಂಹರಿಸಿದ ಶ್ರೀನಿವಾಸನ, ಮೂರ್ಧಜಾನ್ = ಕೂದಲನ್ನು, ಬಂಧನಾತ್ = ಬಂಧನದಿಂದ, ವಿಕೀರ್ಯ = ಬಿಚ್ಚಿ ಕೆದರಿ, ಸುಧೂಪೇನ = ಸುಗಂಧದ ಧೂಪವನ್ನು ಹಾಕಿ, ಮೂರ್ಧಜಾನ್ = ಬಿಚ್ಚಿದ ತಲೆಕೂದಲನ್ನು, ಬಬಂಧ = ಕಟ್ಟಿದಳು (ಗಂಟು ಕಟ್ಟಿದಳು) ಸಾವಿತ್ರೀ = ಸಾವಿತ್ರಿ ದೇವಿಯು, ಸುವರ್ಣಭೂಷಿತಂ = ಬಂಗಾರದ ಕಟ್ಟುಹಾಕಿ ಸಿಂಗರಿಸಲ್ಪಟ್ಟ, ಆದರ್ಶಂ = ಕನ್ನಡಿಯನ್ನು, ದರ್ಶಯಾಮಾಸ = ಶ್ರೀನಿವಾಸನಿಗೆ ತೋರಿಸಿದಳು ।। 47-48 ।।

**ರತೀ ಶಚ್ಯೌ ಚಾಮರೇ ಚ ವೀಜಂತ್ಯೌ ಚಂದ್ರಸನ್ನಿಭೇ ।**
**ಛತ್ರಂ ದಧಾರ ಸಾ ದೇವೀ ಭಾರತೀ ಭಕ್ತಿಸಂಯುತಾ ।। 49 ।।**

ರತೀ ಶಚ್ಯೌ = ರತೀದೇವಿ ಮತ್ತು ಶಚೀದೇವಿಯರು, ಚಂದ್ರಸನ್ನಿಭೇ = ಚಂದ್ರನಂತೆ ಬಿಳುಪಾದ, ಚಾಮರೇ = ಎರಡು ಚಾಮರಗಳನ್ನು, ವೀಜಯಂತ್ಯೌ = ಬೀಸಿದವರಾದರು, ಸಾ = ಪ್ರಖ್ಯಾತಳಾದ, ಭಾರತೀದೇವೀ = ಭಾರತೀದೇವಿಯು, ಭಕ್ತಿಸಂಯುಕ್ತಾ= ಭಕ್ತಿಯುಕ್ತಳಾಗಿ, ಛತ್ರಂ = ಶ್ವೇತಛತ್ರವನ್ನು, ದಧಾರ = ಹಿಡಿದಳು ।। 49 ।।

**ಪಾದುಕೇ ಪ್ರದದೌ ಭದ್ರಾ, ಗಂಗಾ ಗಂಗಾಪಿತುಸ್ತದಾ ।**
**ನಿಧಾಯ ಪಾದೌ ವರಪಾದುಕಾದ್ವಯೇ ಯಯೌ ಪ್ರಾಪನ್ನಾರ್ತಿಹರೋ ಹರಿಃ ಸ್ವಯಮ್ ।**
**ಯಾಭ್ಯಾಂ ಪುರಾ ಪಾವನತಾಂ ಗತಾ ಮುನೇಃ ಶಾಪೇನ ಶೈಲತ್ವಮುಪಾಗತಾಬಲಾ ।। 50 ।।**

ತದಾ = ಆಗ, ಗಂಗಾಪಿತುಃ = ಗಂಗಾಜನಕನಾದ ಶ್ರೀಹರಿಗೆ, ಭದ್ರಾ = ಮಂಗಳಕರಳಾದ, ಗಂಗಾ = ಗಂಗಾದೇವಿಯು, ಪಾದುಕೇ = ಪಾದುಕೆಗಳನ್ನು, ಪ್ರದದೌ = ಕೊಟ್ಟಳು, ಪುರಾ = ಪೂರ್ವದಲ್ಲಿ, ಮುನೇಃ = ಗೌತಮಋಷಿಯ, ಶಾಪಾತ್

= ಶಾಪದಿಂದ, ಶೈಲತ್ವಮುಪಾಗತಾ = ಶಿಲಾಭಾವವನ್ನು (ಕಲ್ಲಾಗಿದ್ದ) ಹೊಂದಿದ, ಅಬಲಾ = ಅಹಲ್ಯೆಯು, ಯಾಭ್ಯಾಂ = ಯಾವ ಪಾದಗಳಿಂದ (ಪಾದಸ್ಪರ್ಶದಿಂದ), ಪಾವನತಾಂ ಗತಾ = ಪವಿತ್ರಳಾದಳೋ(ಶಾಪವಿಮೋಚನ ಪೂರ್ವಕವಾಗಿ ಪರಿಶುದ್ಧಳಾದಳೋ) ಅಂಥ (ಪಾದಗಳುಳ್ಳ), ಪ್ರಪನ್ನಾರ್ತಿಹರಃ = ಶರಣಜನರ ಸಂಕಟಪರಿಹಾರಕನಾದ, ಹರಿಃ = ಶ್ರೀನಿವಾಸನು, ಸ್ವಯಂ = ಸ್ವತಃ, ವರಪಾದುಕಾದ್ವಯೇ = ಶ್ರೇಷ್ಠವಾದ ಎರಡು ಪಾದುಕೆಗಳಲ್ಲಿ, ಪಾದೌ = ತನ್ನೆರಡು ಪಾದಗಳನ್ನು, ನಿಧಾಯ = ಇಟ್ಟು, ಯಯೌ = ಹೊರಟನು ॥ 50 ॥

**ಪಾದುಕಾಭ್ಯಾಂ ಚರನ್ ಭೂಮಿಂ ವರಾಸನಮಗಾದ್ಧರಿಃ ॥ 51 ॥**

ಹರಿಃ = ಶ್ರೀನಿವಾಸನು, ಪಾದುಕಾಭ್ಯಾಂ = ಪಾದುಕೆಗಳಿಂದ, ಭೂಮಿಂ = ಧರಣಿಯನ್ನು, ಚರನ್ (ಸನ್) = ಸಂಚರಿಸುತ್ತಾ (ನಡೆಯುತ್ತಾ) ವರಾಸನಂ = ಉತ್ತಮವಾದ ಆಸನವನ್ನು ಕುರಿತು, ಅಗಾತ್ = ಬಂದನು ॥ 51 ॥

**ಬ್ರಹ್ಮಾದಯಸ್ಸುರಶ್ರೇಷ್ಠಾಃ ಇಂದ್ರಾದ್ಯಾ ಲೋಕಪಾಲಕಾಃ ।**
**ಕಶ್ಯಪಾದಿಮುನಿಶ್ರೇಷ್ಠಾ ವಸಿಷ್ಠಾದಿ ತಪೋಧನಾಃ ॥ 52 ॥**

**ಸನಕಾದ್ಯಾಶ್ಚ ಯೋಗೀಂದ್ರಾ ಭೃಗ್ವಾದ್ಯಾಶ್ಚ ಋಷೀಶ್ವರಾಃ ।**
**ಆರ್ಯಮಾದ್ಯಾಶ್ಚ ಪಿತರಃ ತುಂಬುರ್ವಾದ್ಯಾಶ್ಚ ಗಾಯಕಾಃ ॥ 53 ॥**

**ರಂಭಾದ್ಯಾಶ್ಚೈವ ನರ್ತಕ್ಯಃ ಸೂತಮಾಗಧಬಂದಿನಃ ।**
**ಉಪಾಸತಾಸನೇ ರಮ್ಯೇ ಪಶ್ಯಂತಃ ಪುರುಷೋತ್ತಮಮ್ ॥ 54 ॥**

ಸುರಶ್ರೇಷ್ಠಾಃ = ದೇವತಾಶ್ರೇಷ್ಠರಾದ, ಬ್ರಹ್ಮಾದಯಃ = ಬ್ರಹ್ಮದೇವರೇ ಮೊದಲಾದವರು, ಇಂದ್ರಾದ್ಯಾಃ = ಇಂದ್ರನೇ ಮೊದಲಾದ, ಲೋಕಪಾಲಾಃ = ಲೋಕಪಾಲಕರು, ಕಶ್ಯಪಾದಿ ಮುನಿಶ್ರೇಷ್ಠಾಃ = ಕಶ್ಯಪರೇ ಮೊದಲಾದ ಮುನಿವರ್ಯರು, ವಸಿಷ್ಠಾದಿತಪೋಧನಾಃ = ವಸಿಷ್ಠರು ಮುಂತಾದ ತಪಸ್ವಿಗಳು (ತಪೋಧನರು), ಚ = ಮತ್ತು, ಸನಕಾದ್ಯಾಃ = ಸನಕರೇ ಮುಂತಾದ, ಯೋಗೀಂದ್ರಾಃ = ಯೋಗಿವರ್ಯರು, ಭೃಗ್ವಾದ್ಯಾಶ್ಚ = ಭೃಗು ಮುಂತಾದ, ಋಷಿಶ್ರೇಷ್ಠಾಃ = ಋಷಿಶ್ರೇಷ್ಠರು, ಚ = ಮತ್ತು, ಆರ್ಯಮಾದ್ಯಾಃ = ಆರ್ಯಮರೇ ಮೊದಲಾದ, ಪಿತರಃ = ಪಿತೃ (ದೇವತೆ)ಗಳು ತುಂಬುರ್ವಾದ್ಯಾಶ್ಚ = ತುಂಬುವರೇ ಮೊದಲಾದ, ಗಾಯಕಾಃ = ಗಾಯಕರು, ರಂಭಾದ್ಯಾಶ್ಚ = ರಂಭಾ ಮುಂತಾದ, ನರ್ತಕ್ಯಃ = ನರ್ತಕಿಯರು, ಸೂತಮಾಗಧವಂದಿನಃ - ಸೂತ = ರಥನಡೆಸುವ (ಸಾರಥಿ)ವರು, ಮಾಗಧ = ವಂಶದ ಬಿರುದಾವಳಿಗಳನ್ನು ಹೊಗಳುವವರು, ವಂದಿನಃ = ಸ್ತುತಿಪಾಠಕರುಗಳು, ಪುರುಷೋತ್ತಮಂ = ಪುರುಷಶ್ರೇಷ್ಠನಾದ ಶ್ರೀನಿವಾಸನನ್ನು, ರಮ್ಯೇ = ಮನೋಹರವಾದ, ಆಸನೇ = ಸಿಂಹಾಸನದಲ್ಲಿ ಶೋಭಿಸುವುದನ್ನು, ಪಶ್ಯಂತಃ = ನೋಡುತ್ತಿರುವವರಾಗಿ, ಉಪಾಸತ = (ಉಪಾಸಂತ) = ಉಪಾಸನಮಾಡಿದರು ॥ 52-54 ॥

**ಸ್ವಾಮಿಪುಷ್ಕರಣೀತೀರೇ ದಕ್ಷಿಣೇ ಪಕ್ಷಿವಾಹನಃ ।**
**ಅಷ್ಟಮೀಂದುಕಲಾಕಾರೇ ಲಲಾಟೇ ದರ್ಪಣಸ್ಫುಟೇ ॥ 55 ॥**

**ಊರ್ಧ್ವಪುಂಡ್ರಂ ದಧಾರಾಥ ಶ್ರೀನಿವಾಸಃ ಸತಾಂಗತಿಃ ।**
**ತದಾ ಮುಹೂರ್ತಕಾಲಸ್ತು ದರ್ಶಿತೋ ದೈವಚಿಂತಕೈಃ ॥ 56 ॥**

ಅಥ = ಅನಂತರ, ಸ್ವಾಮಿಪುಷ್ಕರಣೀತೀರೇ = ಸ್ವಾಮಿಪುಷ್ಕರಣಿಯ ದಡದ, ದಕ್ಷಿಣೇ = ದಕ್ಷಿಣ (ಬಲ) ಭಾಗದಲ್ಲಿ, ಸತಾಂಗತಿಃ = ಸಜ್ಜನರಕ್ಷಕನಾದ, ಪಕ್ಷಿವಾಹನಃ = ಗರುಡವಾಹನನಾದ, ಶ್ರೀನಿವಾಸಃ = ಶ್ರೀಹರಿಪರಮಾತ್ಮನು, ಅಷ್ಟಮೀಂದು ಕಲಾಕಾರೇ = ಅಷ್ಟಮಿಯ ಚಂದ್ರನ ಕಲೆಯ ಆಕಾರವುಳ್ಳ, ದರ್ಪಣಸ್ಫುಟೇ = ಕನ್ನಡಿಯಂತೆ ಸುಸ್ಪಷ್ಟವಾದ (ಬೆಡಗುಗೊಂಡಿರುವ), ಲಲಾಟೇ = ಹಣೆಯಲ್ಲಿ, ಊರ್ಧ್ವಪುಂಡ್ರಂ = ಊರ್ಧ್ವಪುಂಡ್ರನಾಮವನ್ನು (ಗೋಪಿಚಂದನದಿಂದ ಉದ್ದವಾದ ನಾಮವನ್ನು), ದಧಾರ = ಧರಿಸಿದನು (ಹಚ್ಚಿಕೊಂಡನು). ತದಾ = ಆಗ, ದೈವಚಿಂತಕೈಃ = ದೈವಜ್ಞ (ಜ್ಯೋತಿಷ ಶಾಸ್ತ್ರಜ್ಞ)ರಿಂದ, ಮುಹೂರ್ತಕಾಲಸ್ತು = ಶುಭಮುಹೂರ್ತಕಾಲವು, ದರ್ಶಿತಃ = ತೋರಿಸಲ್ಪಟ್ಟಿತು ॥ 55 – 56 ॥

**ತದಾಹ ಭಾರತೀಂ ರಾಜನ್ ಬಕುಲಾ ಲೋಕಮಾತರಮ್ ।**
**ಲೇಪನಂ ಕುರು ಕಲ್ಯಾಣಿ ಲಲಾಟೇ ಕುಂಕುಮೇನ ತು ॥ 57 ॥**

ತದಾ = ಆಗ ಬಕುಲಾ = ಬಕುಳಾದೇವಿಯು, ಲೋಕಮಾತರಂ = ಜಗನ್ಮಾತೆಯಾದ ಶ್ರೀಲಕ್ಷ್ಮಿಯನ್ನು ಕುರಿತು, ಬಾರತೀಂ = ಮಾತನ್ನು, ಆಹ = ಹೇಳಿದಳು, ಕಲ್ಯಾಣಿ = ಮಂಗಳಾಂಗಿ, ಲಲಾಟೇ = ಶ್ರೀನಿವಾಸನ ಹಣೆಯಲ್ಲಿ, ಕುಂಕುಮೇನ = ಕಸ್ತೂರಿ ಕುಂಕುಮದಿಂದ, ಲೇಪನಂ = ತಿಲಕವನ್ನು, ಕುರು = ಮಾಡು (ಹಚ್ಚು) ॥ 57 ॥

**ಏವಮುಕ್ತಾ ದೇವಮಾತ್ರಾ ರಮಾ ಕುಂಕುಮಮಾಲಿಖತ್ ॥ 58 ॥**

ದೇವಮಾತ್ರಾ = ಭಗವಂತನ ತಾಯಿಯಿಂದ, ಏವಮುಕ್ತಾ = ಹೀಗೆ ಹೇಳಲ್ಪಟ್ಟವಳಾದ, ರಮಾ = ಲಕ್ಷ್ಮೀದೇವಿಯು, ಕುಂಕುಮಂ = ಕುಂಕುಮವನ್ನು, ಆಲಿಖತ್ = ಹಚ್ಚಿದಳು (ತಿಲಕವನ್ನು ಬರೆದಳು) ॥ 58 ॥

**ಭೂಷಣಾನಿ ಸ್ವಪುತ್ರಸ್ಯ ಪ್ರದದೌ ಜಗದೀಶಿತುಃ ॥ 59 ॥**

ಸ್ವಪುತ್ರಸ್ಯ = (ಬಕುಳೆಯ) ಮಗನಾದ, ಜಗದೀಶಿತುಃ = ಜಗದೀಶನಾದ ಶ್ರೀಹರಿಗೆ, ಭೂಷಣಾನಿ = ಆಭರಣಗಳನ್ನು, ಪ್ರದದೌ = ಕೊಟ್ಟಳು ॥ 59 ॥

**ಯಾಚಯಿತ್ವಾ ಮಹಾರಾಜ ಕುಬೇರಮಥ ಸಾ ರಮಾ ।**
**ಆದಾಯ ತಾಂ ದದರ್ಶಾಥ ಭಗವಾನಾಹ ಮಾಂ ನೃಪ ॥ 60 ॥**

ಮಹಾರಾಜ = ಎಲೈ ಜನಕರಾಯ, ಅಥ = ಆ ತರುವಾಯ, ಸಾ ರಮಾ = ಆ ಲಕ್ಷ್ಮೀದೇವಿಯು, ಕುಬೇರಂ = ಕುಬೇರನನ್ನು, ಯಾಚಯಿತ್ವಾ = ಕೇಳಿ, ಭೂಷಣಾನಿ = ಆಭರಣಗಳನ್ನು, ಆದಾಯ = ತಂದು, ತಾಂ = ಅದನ್ನು, ದದರ್ಶ = ಶ್ರೀನಿವಾಸನಿಗೆ ತೋರಿಸಿದಳು. ಅಥ = ಅನಂತರ, ಭಗವಾನ್ = ಶ್ರೀನಿವಾಸನು, ಮಾಂ = ಲಕ್ಷ್ಮಿಯನ್ನು ಕುರಿತು, ಆಹ = ಹೇಳಿದನು ॥ 60 ॥

*ಶ್ರೀಭಗವಾನುವಾಚ-*

**ಸಂಭೂಷಯ ವರಾರೋಹೇ ಭೂಷಣೈರ್ಮಾಂ ವರಾನನೇ ।**
**ಏವಮುಕ್ತಾ ಹಸಂತೀ ಸಾ ಭೂಷಣೈಸ್ತಮಭೂಷಯತ್ ॥ 61 ॥**

ಭಗವಾನುವಾಚ = ಭಗವಂತನಿಂತೆಂದನು, ವರಾನನೇ = ಶ್ರೇಷ್ಠಮುಖವುಳ್ಳ, ವರಾರೋಹೇ = ಲಕ್ಷ್ಮಿ, ಮಾಂ = ನನ್ನನ್ನು, ಭೂಷಣೈಃ = ಆಭರಣಗಳಿಂದ, ಸಂಭೂಷಯ = ಚೆನ್ನಾಗಿ ಅಲಂಕರಿಸು, ಏವಮುಕ್ತಾ = ಹೀಗೆ ಹೇಳಲ್ಪಟ್ಟವಳಾದ,

ಸಾ = ಲಕ್ಷ್ಮಿಯು, ಹಸಂತೀ = ನಗುತ್ತಾ, ತಂ = ಶ್ರೀನಿವಾಸನನ್ನು, ಭೂಷಣೈಃ = ಆಭರಣಗಳಿಂದ, ಅಭೂಷಯತ್ = ಅಲಂಕರಿಸಿದಳು ॥ 61 ॥

**ಪೀತಾಂಬರಂ ದಧಾರಾಶು ಕಟಿಸೂತ್ರಮನರ್ಘ್ಯಕಮ್ ।**
**ಸ್ವರ್ಣೈರಾಭರಣೈರ್ವಸ್ತ್ರೈಃ ಭೂಷಿತಸ್ತು ತತೋ ಹರಿಃ ॥ 62 ॥**

ತತಃ = ಆ ಬಳಿಕ, ಹರಿಃ = ಶ್ರೀನಿವಾಸನು, ಆಶು = ಬೇಗನೆ, ಪೀತಾಂಬರಂ = ಹಳದಿಯ ಜರಿಯ ಮಡಿಯನ್ನು, ದಧಾರ = ಉಟ್ಟನು (ಧರಿಸಿದನು), ಅನರ್ಘ್ಯಕಂ = ಅತಿಬೆಲೆಬಾಳುವ, ಕಟಿಸೂತ್ರಂ = ಉಡುದಾರವನ್ನು, ದಧಾರ = ಧರಿಸಿದನು. ಸ್ವರ್ಣೈಃ = ಕನಕಮಯವಾದ, ವಸ್ತ್ರೈಃ = ವಸ್ತ್ರಗಳಿಂದ, ಆಭರಣೈಃ = ಭೂಷಣಗಳಿಂದ, ಭೂಷಿತಸ್ತು = ಅಲಂಕರಿಸಿಕೊಂಡವನಾಗಿ ॥ 62 ॥

**ಕಶ್ಯಪೋತ್ರಿಭರದ್ವಾಜವಸಿಷ್ಠಾದಿ ಮಹಾಮುನೀನ್ ।**
**ನಮಶ್ಚಕ್ರೇ ವಿರಿಂಚೇಶವಿನುತೋಽಪಿ ವಿಡಂಬಯನ್ ॥ 63 ॥**

ಕಶ್ಯಪೋತ್ರಿಭರದ್ವಾಜವಸಿಷ್ಠಾದಿ ಮಹಾಮುನೀನ್ = ಕಶ್ಯಪರು, ಅತ್ರಿಗಳು, ಭರದ್ವಾಜರು, ವಸಿಷ್ಠರು ಮೊದಲಾದ ಶ್ರೇಷ್ಠಋಷಿಗಳನ್ನು, ವಿರೀಂಚೇಶನುತೋಪಿ = ಬ್ರಹ್ಮರುದ್ರರಿಂದ ನಮಸ್ಕೃತನಾಗಿದ್ದರೂ ಸಹ, ವಿಡಂಬಯನ್ = ಲೋಕವಿಡಂಬನಮಾಡುತ್ತಾ, ನಮಶ್ಚಕ್ರೇ = ನಮಸ್ಕರಿಸಿದನು ॥ 63 ॥

**ಸಂಧ್ಯಾಮುಪಾಸ್ಯ ವಿಧಿವ ತ್ಕೃತ್ವಾ ತಾತ್ಕಾಲಿಕೀಃ ಕ್ರಿಯಾಃ ।**
**ವಸಿಷ್ಠಮಾಹೂಯೋವಾಚ ಸಂತೋಷೋದ್ರಿಕ್ತಮಾನಸಃ ॥ 64 ॥**

ಸಂಧ್ಯಾಮುಪಾಸ್ಯ = ಸಂಧ್ಯೋಪಾಸನ ಮಾಡಿ, ತಾತ್ಕಾಲಿಕೀಃ ಕ್ರಿಯಾಃ = ತತ್ಕಾಲಿಕ ಕರ್ಮಗಳನ್ನು, ಕಾರ್ಯಗಳನ್ನು, ವಿಧಿವತ್ = ನಿಯಮದಂತೆ, ಕೃತ್ವಾ = ನೆರವೇರಿಸಿ, ಸಂತೋಷೋದ್ರಿಕ್ತಮಾನಸಃ = ಆನಂದದಿಂದ ಉಬ್ಬಿದ ಮನಸ್ಸುಳ್ಳವನಾಗಿ, ವಸಿಷ್ಠಂ = ವಸಿಷ್ಠಋಷಿಯನ್ನು, ಆಹೂಯ = ಕರೆದು, ಉವಾಚ = ಹೇಳಿದನು ॥ 64 ॥

**ಮುನಿಶ್ರೇಷ್ಠ ವಸಿಷ್ಠ ತ್ವಮುತ್ತರಂ ಕಾರ್ಯಮಾಚರ ।**
**ವಾಸುದೇವ ವಚಃ ಶ್ರುತ್ವಾ ವಸಿಷ್ಠೋ ವದತಾಂ ವರಃ ॥ 65 ॥**

ಶ್ರೀಭಗವಾನುವಾಚ = ಶ್ರೀನಿವಾಸನು ಹೇಳಿದನು. ಮುನಿಶ್ರೇಷ್ಠ = ಮುನಿವರ್ಯನಾದ, ವಸಿಷ್ಠ = ವಸಿಷ್ಠ ಋಷಿಯೇ, ತ್ವಂ = ನೀನು, ಉತ್ತರಂ = ಮುಂದಿನ, ಕಾರ್ಯಂ = ಕೆಲಸವನ್ನು, ಆಚರ = ಮಾಡು, ವದತಾಂ ವರಃ = ಮಾತನಾಡುವವರಲ್ಲಿ ಶ್ರೇಷ್ಠನಾದ, ವಸಿಷ್ಠಃ = ವಸಿಷ್ಠನು, ವಾಸುದೇವ ವಚಃ = ಶ್ರೀಕೃಷ್ಣನ ವಚನವನ್ನು, ಶ್ರುತ್ವಾ = ಕೇಳಿ ॥ 65 ॥

**ವಿರಚ್ಯ ವೇದಿಕಾಂ ತತ್ರ ಮೌಕ್ತಿಕೈಶ್ಚತುರಸ್ರಿಕಾಮ್ ।**
**ಶ್ರೀನಿವಾಸಂ ಪ್ರತಿಷ್ಠಾಪ್ಯ ಸಂಕಲ್ಪವಿಧಿಪೂರ್ವಕಮ್ ॥ 66 ॥**

**ಚಕ್ರೇ ಪುಣ್ಯಾಹ ಕರ್ಮಾಣಿ ವರಯಿತ್ವಾ ದ್ವಿಜನ್ಮನಃ ।**
**ಅಷ್ಟವರ್ಗಂ ತತಶ್ಚಕ್ರೇ ಸೃಷ್ಟಿಕರ್ತಾ ಪಿತಾಮಹಃ ॥ 67 ॥**

ಮೌಕ್ತಿಕೈಃ = ಮುತ್ತುಗಳಿಂದ, ಚತುರಸ್ರಿಕಾಂ = ಚೌಕವಾದ, ವೇದಿಕಾಂ = ವೇದಿಕೆಯನ್ನು, ವಿರಚ್ಯ = ರಚಿಸಿ, ತತ್ರ = ಅಲ್ಲಿ, ಶ್ರೀನಿವಾಸಂ = ಶ್ರೀನಿವಾಸನನ್ನು, ಪ್ರತಿಷ್ಠಾಪ್ಯ = ಕೂಡಿಸಿ, ಸಂಕಲ್ಪವಿಧಿಪೂರ್ವಕಂ = ವಿದ್ಯುಕ್ತಸಂಕಲ್ಪಪೂರ್ವಕವಾಗಿ, ದ್ವಿಜನ್ಮನಃ = ಬ್ರಾಹ್ಮಣರಿಗೆ, ವರಯಿತ್ವಾ = ವರಣೆಯನ್ನು ಕೊಟ್ಟು, ಪುಣ್ಯಾಹಕರ್ಮಾಣಿ = ಪುಣ್ಯಾಹಮುಂತಾದ ಕರ್ಮಗಳನ್ನು, ಚಕ್ರೇ = ಮಾಡಿದನು, ತತಃ = ಆದಾದಮೇಲೆ, ಸೃಷ್ಟಿಕರ್ತಾ = ಜಗತ್‌ಸೃಷ್ಟಿಕರ್ತನಾದ, ಪಿತಾಮಹಃ = ಬ್ರಹ್ಮದೇವನು, ಅಷ್ಟವರ್ಗಂ = ಅಷ್ಟವರ್ಗಕರ್ಮಗಳನ್ನು, ಚಕ್ರೇ = ನೆರವೇರಿಸಿದನು ॥ 66-67 ॥

**ತತೋ ನಿಯುಕ್ತಾ ವಿಧಿನಾ ದತ್ವಾ ತಾಂಬೂಲ ದಕ್ಷಿಣಾಃ ।**
**ವಿಪ್ರಾಣಾಂ ವೇದವಿದುಷಾಂ ತಥಾ ಮಂಗಲವಾದಿನಾಮ್ ॥ 68 ॥**

**ದದುರ್ದೇವಾ ಧನಂ ವಸ್ತ್ರಂ ವಾಸುದೇವಸ್ಯ ಯೇ ಪ್ರಿಯಾಃ ।**
**ತತಃ ಸಮಾಪ್ಯ ಕರ್ಮಾಣಿ ಶಾಸ್ತ್ರೋಕ್ತಾನಿ ಯಥಾವಿಧಿ ॥ 69 ॥**

**ಕುಲದೇವಮಪೃಚ್ಛತ್ತಂ ವಸಿಷ್ಠೋ ವಸುಧಾಧಿಪ ।**
**ಸ ತಸ್ಯ ವಚನಂ ಶ್ರುತ್ವಾ ಭಗವಾನಾಹ ವೈ ಮುನಿಮ್ ॥ 70 ॥**

ತತಃ = ತರುವಾಯ, ನಿಯುಕ್ತವಿಧಿನಾ = ಮಂಗಳಕಾಲದ ನಿಯಮವನ್ನನುಸರಿಸಿ, ವೇದವಿದುಷಾಂ = ವೇದಪಂಡಿತರಿಗೆ, ಮಂಗಲವಾದಿನಾಂ = ಮಂಗಳಶಾಸನ ಮಾಡುವವರಿಗೆ, ವಿಪ್ರಾಣಾಂ = ಬ್ರಾಹ್ಮಣರಿಗೆ, ತಾಂಬೂಲದಕ್ಷಿಣಾಃ = ತಾಂಬೂಲ ದಕ್ಷಿಣೆಗಳನ್ನು, ದತ್ವಾ = ಕೊಟ್ಟು (ಕೊಟ್ಟನು). ವಾಸುದೇವಸ್ಯ = ಶ್ರೀಹರಿಗೆ, ಯೇ ಪ್ರಿಯಾಃ = ಪ್ರಿಯರಾದ, ದೇವಾಃ = ದೇವತೆಗಳು, ವಸ್ತ್ರಂ = ವಸ್ತ್ರವನ್ನೂ, ಧನಂ = ಹಣವನ್ನೂ, ದದುಃ = ಕೊಟ್ಟರು (ಉಡುಗೊರೆ ನೀಡಿದರು). ತತಃ = ಅನಂತರ, ಶಾಸ್ತ್ರೋಕ್ತಾನಿ = ಶಾಸ್ತ್ರದಲ್ಲಿ ಹೇಳಲ್ಪಟ್ಟ, ಕರ್ಮಾಣಿ = ಕರ್ಮಗಳನ್ನು, ಯಥಾವಿಧಿ = ನಿಯಮಾನುಸಾರವಾಗಿ, ಸಮಾಪ್ಯ = ಮಾಡಿ ಮುಗಿಸಿ, ವಸುಧಾಧಿಪ = ಎಲೈ ಜನಕರಾಯ, ವಸಿಷ್ಠಃ = ವಸಿಷ್ಠಮುನಿಯು, ತಂ = ಶ್ರೀನಿವಾಸನನ್ನು, ಕುಲದೇವಂ = ಕುಲದೇವತೆಯನ್ನು ಕುರಿತು, ಅಪೃಚ್ಛತ್ = ಕೇಳಿದನು. ಸಃ ಭಗವಾನ್ = ಪೂಜ್ಯನಾದ ಶ್ರೀನಿವಾಸನು, ತಸ್ಯ = ವಸಿಷ್ಠನ, ವಚನಂ = ಮಾತನ್ನು, ಶ್ರುತ್ವಾ = ಕೇಳಿ, ಮುನಿಂ ವೈ = ವಸಿಷ್ಠನನ್ನು ಕುರಿತು, ಆಹ = ಹೇಳಿದನು ॥ 68-70 ॥

**ವಸಿಷ್ಠ ಮಮ ಕಲ್ಯಾಣೀ ಕುಲದೇವೀ ಶಮೀಸ್ಮೃತಾ ।**
**ಮಮಾಪಿ ಪಾಂಡವಾನಾಂ ಚ ನಾತ್ರ ಕಾರ್ಯಾ ವಿಚಾರಣಾ ॥ 71 ॥**

ಶ್ರೀಭಗವಾನುವಾಚ = ಭಗವಂತನು ಹೇಳುತ್ತಿದ್ದಾನೆ. ವಸಿಷ್ಠ = ಎಲೈ ವಸಿಷ್ಠಮುನಿಯೇ, ಮಮ = ನನಗೆ, ಕಲ್ಯಾಣೀ = ಮಂಗಳಕರಳಾದ, ಮಾಮಾಪಿ = ನನಗೂ, ಪಾಂಡವಾನಾಂಚ = ಪಾಂಡವರಿಗೂ ಸಹ, ಕುಲದೇವೀ = ಕುಲದೇವತೆಯು, ಶಮೀಸ್ಮೃತಾ = ಶಮೀ ಎಂದು ಸ್ಮೃತಳಾಗಿದ್ದಾಳೆ. ಅತ್ರ = ಇದರಲ್ಲಿ, ವಿಚಾರಣಾ ನಕಾರ್ಯಾ = ವಿಚಾರಮಾಡಬೇಕಾಗಿಲ್ಲ ॥ 71 ॥

**ವಸಿಷ್ಠೋವಾಚ-**

**ಕ್ವಚಾಸ್ತಿ ಸ ದ್ರುಮಶ್ರೇಷ್ಠ ಇತ್ಯುಕ್ತೇಽಗಸ್ಯ ಊಚಿವಾನ್ ।**

*ಅಗಸ್ತ್ಯ ಉವಾಚ –*

**ಅತ್ರೈವೋತ್ತರದಿಗ್ಭಾಗೇ ತೀರ್ಥೇ ಕೌಮಾರಸಂಜ್ಞಕೇ** ॥ 72 ॥

**ವರ್ತತೇ ವೃಕ್ಷರಾಜಶ್ಚ ತತ್ರ ಗತ್ವಾ ತಮಾನಯ ।**
**ಅಗಸ್ತ್ಯವಚನೇನೈವಂ ತತ್ರ ಗತ್ವಾಥ ತಂ ದ್ರುಮಮ್** ॥ 73 ॥

**ಕೃತ್ವಾ ಪ್ರದಕ್ಷಿಣಂ ರಾಜನ್ ಭಗವಾನ್ ಲೌಕಿಕೀತನುಃ* ।**
**ನಮಶ್ಚಕ್ರೇ ಶಮೀವೃಕ್ಷಂ ಕುಲದೇವಂ ವೃಷಾಕಪಿಃ** ॥ 74 ॥

ವಸಿಷ್ಠೋವಾಚ = ವಸಿಷ್ಠರು ಹೇಳುತ್ತಿದ್ದಾರೆ, ಸಃ = ಆ, ದ್ರುಮಶ್ರೇಷ್ಠಃ = ಶ್ರೇಷ್ಠವೃಕ್ಷವು, ಕ್ವಚಾಸ್ತಿ = ಎಲ್ಲಿದೆ? ಇತ್ಯುಕ್ತೇ = ಇಂತು ಪ್ರಶ್ನಿಸಲಾಗಿ, ಅಗಸ್ತ್ಯ ಉವಾಚ = ಅಗಸ್ತ್ಯರು ಹೇಳುತ್ತಿದ್ದಾರೆ, ಅತ್ರೈವ = ಇಲ್ಲಿಯೇ, ಉತ್ತರದಿಗ್ಭಾಗೇ = ಉತ್ತರದಿಕ್ ಪ್ರದೇಶದಲ್ಲಿ, ಕೌಮಾರಸಂಜ್ಞಕೇ = ಕುಮಾರ ಎಂಬ ಹೆಸರಿನ, ತೀರ್ಥೇ = ತೀರ್ಥದ ಬಳಿ, ವೃಕ್ಷರಾಜಶ್ಚ = ಶಮೀವೃಕ್ಷವು, ವರ್ತತೇ = ಇದೆ. ತತ್ರ = ಅಲ್ಲಿಗೆ, ಗತ್ವಾ = ಹೋಗಿ, ತಂ = ಅದನ್ನು, ಆನಯ = ತೆಗೆದುಕೊಂಡು ಬಾ, ಏವಂ = ಇಂತು, ಅಗಸ್ತ್ಯವಚನೇನ = ಅಗಸ್ತ್ಯರ ಮಾತಿನಿಂದ, ಅಥ = ಅನಂತರ, ರಾಜನ್ = ಎಲೈ ಜನಕಭೂಪತಿಯೇ, ಲೌಕಿಕೀತನುಃ = ಲೌಕಿಕದೇಹವನ್ನು ಪಡೆದ ಮಾನವರಂತೆ (ಪಾ : ಲೌಕಿಕೈಃ ಸಮಃ = ಪ್ರಾಕೃತಮಾನವರಿಗೆ ಸಮಾನನಾಗಿ), ಭಗವಾನ್ = ಷಡ್ಗುಣೈಶ್ವರ್ಯಪೂರ್ಣನಾದ ಶ್ರೀಹರಿಯು, ತತ್ರ = ಅಲ್ಲಿಗೆ, ಗತ್ವಾ = ಹೋಗಿ, ಕುಲದೇವಂ = ಕುಲದೇವತೆಯಾದ, ಶಮೀವೃಕ್ಷಂ = ಬನ್ನಿಮರವನ್ನು, ಪ್ರದಕ್ಷಿಣಂ ಕೃತ್ವಾ = ಪ್ರದಕ್ಷಿಣೆ ಮಾಡಿ, ವೃಷಾಕಪಿಃ = ಶ್ರೀನಿವಾಸನು, ನಮಶ್ಚಕ್ರೆ = ನಮಸ್ಕಾರ ಮಾಡಿದನು ॥ 72–74 ॥

*ಶ್ರೀಭಗವಾನುವಾಚ–*

**ಶಮಿ ಪಾಪಂ ಶಮಯ ಮೇ ಶಮಿ ಶತ್ರುವಿನಾಶಿನಿ ।**
**ಅರ್ಜುನಸ್ಯ ಧನುರ್ಧಾರಿ ರಾಮಸ್ಯ ಪ್ರಿಯದರ್ಶಿನಿ** ॥ 75 ॥

**ಮಾತರ್ಮೇ ಕುರು ಕಲ್ಯಾಣಮವಿಘ್ನೇನ ಸುರಪ್ರಿಯೆ ।**
**ಕಲಹಃ ಸರ್ವದೇವಾನಾಂ ರಾಜ್ಞಸ್ತಸ್ಯ ಚ ನೋದ್ಭವೇತ್** ॥ 76 ॥

ಶ್ರೀಭಗವಾನುವಾಚ = ಭಗವಂತನಿಂತು ಹೇಳಿದನು. ಶಮಿ = ಎಲೈ ಶಮಿಯೇ, ಶತ್ರುನಾಶಿನಿ = ರಿಪುಗಳನ್ನು ನಾಶಪಡಿಸುವವಳೇ, ಮೇ = ನನ್ನ, ಪಾಪಂ = ಪಾಪವನ್ನು, ಶಮಯ = ಪರಿಹರಿಸು, ರಾಮಸ್ಯ = ರಾಮಚಂದ್ರನ, ಪ್ರಿಯದರ್ಶಿನಿ = ಪ್ರಿಯಳಾದ ಸೀತೆಯನ್ನು ದರ್ಶನ ಮಾಡಿದವಳೇ, ಅರ್ಜುನಸ್ಯ = ಅರ್ಜುನನ, ಧನುರ್ಧಾರಿ = ಧನುವನ್ನು ಧರಿಸಿದವಳೇ, ಹೇಮಾತಃ = ಎಲೈ ತಾಯಿಯೇ, ಅವಿಘ್ನೇನ = ವಿಘ್ನವಿಲ್ಲದಂತೆ, ಮೇ = ನನಗೆ, ಕಲ್ಯಾಣಂ = ಮದುವೆಯನ್ನು (ಮಂಗಳವನ್ನು), ಕುರು = ಉಂಟುಮಾಡು, ಸುರಪ್ರಿಯೇ = ದೇವತೆಗಳಿಗೆ ಪ್ರೀತ್ಯಾಸ್ಪದಳಾದವಳೇ, ತಸ್ಯ ರಾಜ್ಞಃ = ಆ ಆಕಾಶರಾಜನಿಗೂ, ಸರ್ವದೇವಾನಾಂ ಚ = ಸಮಸ್ತದೇವತೆಗಳಿಗೂ ಸಹ, ಕಲಹಃ = ಜಗಳವು (ವ್ಯಾಜ್ಯವು), ನೋದ್ಭವೇತ್ = ಉಂಟಾಗದಿರಲಿ ॥ 75–76 ॥

---

* ಪಾ : ಲೌಕಿಕೈಃ ಸಮಃ

ಪುರುಷಶ್ರೇಷ್ಠಃ = ಪುರುಷೋತ್ತಮನಾದ ಶ್ರೀನಿವಾಸನು, ಲಕ್ಷ್ಮ್ಯಾಚ = ಲಕ್ಷ್ಮಿಯಿಂದಲೂ, ಪರಮೇಷ್ಠಿನಾ = ಬ್ರಹ್ಮನಿಂದಲೂ, ಮಾತ್ರಾಚ = ತಾಯಿಯಿಂದಲೂ, ಸಶೇಷಃ = ಶೇಷದಿಂದ ಯುಕ್ತನಾಗಿ, ಗರುಡಾನ್ವಿತಃ = ಗರುಡನಿಂದೊಡಗೂಡಿ, ಬುಭುಜೇ = ಭೋಜನ ಮಾಡಿದನು ॥ 287 ॥

**ದತ್ವಾ ವಸ್ತ್ರಾಣಿ ದಿವ್ಯಾನಿ ಜಾಮಾತುಃ ಶ್ರೀಪತೇರ್ನೃಪ ।**
**ಜಗಾಮ ಭವನಂ ರಾಜಾ ವಾಸುದೇವಾಜ್ಞಯಾ ತದಾ ॥ 288 ॥**

ನೃಪ = ಎಲೈ ಜನಕರಾಯ! ಜಾಮಾತುಃ = ಅಳಿಯನಾದ, ಶ್ರೀಪತೇಃ = ಲಕ್ಷ್ಮೀಪತಿಗೆ, ದಿವ್ಯಾನಿ = ದೇವಯೋಗ್ಯವಾದ, ವಸ್ತ್ರಾಣಿ = ಪೀತಾಂಬರಾದಿ ವಸ್ತ್ರಗಳನ್ನು, ದತ್ವಾ = ಕೊಟ್ಟು, ರಾಜಾ = ಆಕಾಶರಾಜನು, ವಾಸುದೇವಾಜ್ಞಯಾ = ಶ್ರೀನಿವಾಸನ ಅಪ್ಪಣೆ ಪಡೆದು, ತದಾ = ಆಗ, ಭವನಂ = ತನ್ನ ಗೃಹವನ್ನು ಕುರಿತು, ಜಗಾಮ = ಹೋದನು. ॥ 288 ॥

**ಗತೇ ರಾಜ್ಞಿ ಮಹಾರಾಜ ಶ್ರೀನಿವಾಸ ಸ್ಸುಖಾನ್ವಿತಃ ।**
**ನಿದ್ರಾಂ ಚಕಾರ ವಿಧಿವನ್ನಿರ್ದೋಷೋಽಪಿ ಸುಖಾಸನೇ ॥ 289 ॥**

ಮಹಾರಾಜ = ಜನಕಭೂಪತಿಯೇ, ರಾಜ್ಞಿ = ಆಕಾಶರಾಜನು, ಗತೇ (ಸತಿ) = ಹೋದಮೇಲೆ, ಸುಖಾನ್ವಿತಃ = ಸುಖವಾಗಿ, ನಿರ್ದೋಷೋಽಪಿ = ದೋಷವಿಲ್ಲದವನಾದಾಗ್ಯೂ, ವಿಧಿವತ್ = ನಿಯಮಾನುಸಾರವಾಗಿ, ಸುಖಾಸನೇ = ಸುಪ್ಪತ್ತಿಗೆಯಲ್ಲಿ, ನಿದ್ರಾಂ ಚಕಾರ = ನಿದ್ರೆಮಾಡಿದನು ॥ 289 ॥

**ಏವಂ ಗತಾ ಚ ಸಾ ರಾತ್ರಿಃ ಪ್ರಭಾತಸಮಯೋಽಭವತ್ ।**
**ಪೂರ್ವದೇವಗುರೋರ್ವಾರಃ ಸಂಪ್ರಾಪ್ತೋ ದಶಮೀದಿನೇ ॥ 290 ॥**

ಏವಂ = ಹೀಗೆ, ಸಾ ರಾತ್ರಿಃ = ಅಂದಿನ ರಾತ್ರಿಯು, ಗತಾ = ಕಳೆಯಿತು, ಪ್ರಭಾತ ಸಮಯಃ = ಪ್ರಾತಃ ಕಾಲ ಸಮಯವು, ಅಭವತ್ = ಆಯಿತು, ದಶಮೀ ದಿನೇ = ದಶಮಿಯ ದಿವಸ, ಪೂರ್ವದೇವಗುರೋಃ = ದೇವಗುರುವಾರ ಮೊದಲಾದ (ಅಂದರೆ ಶುಕ್ರನ), ವಾರಃ = ದಿನವು (ಶುಕ್ರನ ವಾರವು), ಸಂಪ್ರಾಪ್ತಃ = ಬಂದಿತು ॥ 290 ॥

**ಸಮುತ್ಥಿತೋ ವಾಸುದೇವಃ ಕೃತಮಂಗಲಮಜ್ಜನಃ ।**
**ವಸಿಷ್ಠಮಬ್ರವೀದ್ರಾಜನ್ ಭಗವಾನ್ ವೇಂಕಟೇಶ್ವರಃ ॥ 291 ॥**

ವಾಸುದೇವಃ = ಶ್ರೀನಿವಾಸನು, ಸಮುತ್ಥಿತಃ = ಎಚ್ಚರಗೊಂಡು ಮೇಲೆದ್ದವನಾಗಿ, ಕೃತಮಂಗಲ ಮಜ್ಜನಃ = ಮಾಡಲ್ಪಟ್ಟ ಮಂಗಳಸ್ನಾನವುಳ್ಳವನಾಗಿ (ಮಂಗಳ ಸ್ನಾನ ಮಾಡಿ) ರಾಜನ್ = ಜನಕರಾಯ, ಭಗವಾನ್ = ಪೂಜ್ಯನಾದ, ವೇಂಕಟೇಶ್ವರಃ = ಶ್ರೀ ವೇಂಕಟೇಶನು, ವಸಿಷ್ಠಂ = ವಸಿಷ್ಠಋಷಿಯನ್ನು ಕುರಿತು, ಅಬ್ರವೀತ್ = ಹೇಳಿದನು ॥ 291 ॥

*ಶ್ರೀಭಗವಾನುವಾಚ-*

**ನ ಮಯಾ ಭೋಜನಂ ಕಾರ್ಯಂ ಲಕ್ಷ್ಮ್ಯಾ ಚ ಪರಮೇಷ್ಠಿನಾ ।**
**ಮಾತ್ರಾ ಪುರೋಹಿತೇನಾಪಿ ವಯಂ ಪಂಚಾನ್ನ ವರ್ಜಿತಾಃ ॥ 292 ॥**

ಶ್ರೀ ಭಗವಾನುವಾಚ = ಶ್ರೀನಿವಾಸನು ಹೇಳುತ್ತಿದ್ದಾನೆ - ಮಯಾ = ನನ್ನಿಂದ, ಲಕ್ಷ್ಮ್ಯಾ = ಲಕ್ಷ್ಮಿಯಿಂದ, ಚ = ಮತ್ತು, ಪರಮೇಷ್ಠಿನಾ = ಬ್ರಹ್ಮನಿಂದ, ಪುರೋಹಿತೇನ = ಪುರೋಹಿತನಿಂದ, ಭೋಜನಂ = ಭೋಜನವು, ನ ಕಾರ್ಯಂ

= ಮಾಡತಕ್ಕದ್ದಲ್ಲ. ವಯಂ = ಗಂಡಿನ ಕಡೆಯವರಾದ ನಾವು, ಪಂಚ = ಐದು ಜನರು, ಅನ್ನವರ್ಜಿತಾಃ = ಊಟವಿಲ್ಲದೆ ನಿಯಮದಿಂದಿರತಕ್ಕವರು ॥ 292 ॥

**ರಾಜ್ಞಸ್ತು ಭವನೇ ರಾಜಾ ರಾಜಪತ್ನೀ ಪತಿವ್ರತಾ ।**
**ಕನ್ಯಾ ಪುರೋಹಿತೋ ಭ್ರಾತಾ ತೇಽಪಿ ಪಂಚಾನ್ನವರ್ಜಿತಾಃ ॥ 293 ॥**

ರಾಜ್ಞಸ್ತು = ಮಹಾರಾಜನ, ಭವನೇ = ಮನೆಯಲ್ಲಿ, ರಾಜಾ = ಆಕಾಶರಾಜನು, ಪತಿವ್ರತಾ = ಪತಿವ್ರತೆಯಾದ, ರಾಜಪತ್ನೀ = ರಾಣಿಯಾದ ಧರಣೀ ದೇವಿಯು, ಕನ್ಯಾ = ವಧುವಾದ ಪದ್ಮಾವತೀ, ಪುರೋಹಿತಃ = ಹೆಣ್ಣಿನ ಕಡೆಯ ಪುರೋಹಿತ, ಭ್ರಾತಾ = ತಮ್ಮನಾದ ವಸುಧಾನನು, ಹೀಗೆ, ತೇಽಪಿ ಪಂಚ = ಅವರೂ ಐದು ಜನರು, ಅನ್ನವರ್ಜಿತಾಃ = ಊಟವಿಲ್ಲದೆ ಇರತಕ್ಕದ್ದು ॥ 293 ॥

**ಏವಮುಕ್ತ್ವಾ ವಸಿಷ್ಠಂತು ಪುರೋಹಿತಮರಿಂದಮ ।**
**ಕುಬೇರಮಬ್ರವೀದ್ರಾಜನ್ ಶ್ರೀನಿವಾಸಃ ಸತಾಂಗತಿಃ ॥ 294 ॥**

ಪುರೋಹಿತಂ = ಪುರೋಹಿತನಾದ, ವಸಿಷ್ಠಂತು = ವಸಿಷ್ಠಮುನಿಯನ್ನು ಕುರಿತು, ಏವಂ = ಹೀಗೆ, ಉಕ್ತ್ವಾ = ಹೇಳಿ, ರಾಜನ್ = ಎಲೈ ಜನಕರಾಯ, ಸತಾಂಗತಿಃ = ಸಜ್ಜನರಿಗೆ ಆಶ್ರಯನಾದ, ಶ್ರೀನಿವಾಸಃ = ಶ್ರೀನಿವಾಸನು, ಕುಬೇರಂ = ಕುಬೇರನನ್ನು ಕುರಿತು, ಅಬ್ರವೀತ್ = ಹೇಳಿದನು ॥ 294 ॥

*ಶ್ರೀನಿವಾಸ ಉವಾಚ -*

**ಗಚ್ಛ ಯಕ್ಷಗಣಾಧ್ಯಕ್ಷ ರಾಜಾನಂ ವಿಪ್ರಕಾರಣಾತ್ ।**
**ಇತಿ ತದ್ವಚನಂ ಶ್ರುತ್ವಾ ಯಕ್ಷರಾಡ್ರಾಜಸತ್ತಮಮ್ ॥ 295 ॥**

**ಗತ್ವಾಹ ಭಾರತೀಂ ಪುಣ್ಯಾಂ ಶ್ರೀನಿವಾಸೇನ ಭಾಷಿತಾಮ್ ।**

*ಕುಬೇರ ಉವಾಚ -*

**ಭೋಜನಂ ಋಷಿಮುಖ್ಯಾನಾಂ ಕರ್ತವ್ಯಂ ಪೂರ್ವಮೇವ ಹಿ ॥ 296 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನಿಂತೆಂದನು - ಯಕ್ಷಗಣಾಧ್ಯಕ್ಷ = ಯಕ್ಷರಗುಂಪಿಗೆ ಅಧ್ಯಕ್ಷ(ನಾಯಕ)ನಾದ, ಕುಬೇರ = ಎಲೈ ಕುಬೇರನೇ! ವಿಪ್ರಕರಣಾತ್ = ಬ್ರಾಹ್ಮಣರಿಗೆ ಭೋಜನ ಮಾಡಿಸುವ ನಿಮಿತ್ತವಾಗಿ, ರಾಜಾನಂ = ಆಕಾಶರಾಜನನ್ನು ಕುರಿತು, ಗಚ್ಛ = ಹೋಗುವವನಾಗು. ಇತಿ = ಹೀಗೆ, ತದ್ವಚನಂ = ಶ್ರೀಹರಿಯ ಮಾತನ್ನು, ಶ್ರುತ್ವಾ = ಕೇಳಿ, ಯಕ್ಷರಾಟ್ = ಯಕ್ಷರಿಗಧಿಪತಿಯಾದ ಕುಬೇರನು, ರಾಜಸತ್ತಮಂ = ಆಕಾಶರಾಜನನ್ನು ಕುರಿತು, ಗತ್ವಾ = ಹೋಗಿ, ಶ್ರೀನಿವಾಸೇನ = ಶ್ರೀನಿವಾಸನಿಂದ, ಭಾಷಿತಂ = ಹೇಳಲ್ಪಟ್ಟ, ಪುಣ್ಯಂ = ಪುಣ್ಯಕರವಾದ, ಭಾರತೀಂ = ವಚನವನ್ನು, ಆಹ = ಹೇಳಿದನು. ಕುಬೇರ ಉವಾಚ = ಕುಬೇರನು ಇಂತೆಂದನು - ಋಷಿಮುಖ್ಯಾನಾಂ = ಋಷಿಮುನಿಗಳೇ ಮೊದಲಾದವರಿಗೆ, ಪೂರ್ವಮೇವಹಿ = ವಿವಾಹಕ್ಕೆ ಮೊದಲೇ, ಭೋಜನಂ = ಭೋಜನವು, ಕರ್ತವ್ಯಂ = ಮಾಡಿಸಬೇಕು ॥ 2965-296 ॥

**ಮುಹೂರ್ತಕಾಲೇ ರಾತ್ರೌತು ನಾಡಿಕಾನಾಂ ತ್ರಯೋದಶ ।**
**ತದಾಽಸಾಧ್ಯಂ ಮಹಾರಾಜ ರಾತ್ರ್ಯಾಂ ಬ್ರಾಹ್ಮಣಭೋಜನಮ್ ॥ 297 ॥**

ರಾತ್ರೌ = ರಾತ್ರಿಯಲ್ಲಿ, ನಾಡಿಕಾನಾಂತು ತ್ರಯೋದಶ = ಹದಿಮೂರು ಘಳಿಗೆ, ಮುಹೂರ್ತಕಾಲೇ = ವಿವಾಹ ಮುಹೂರ್ತ ಕಾಲವು ಇರುವುದು, ತದಾ = ಆವಾಗ, ಬ್ರಾಹ್ಮಣ ಭೋಜನಂ = ಭೂಸುರರ ಭೋಜನವು, ರಾತ್ರ್ಯಾಂ = ರಾತ್ರಿಯಲ್ಲಿ, ಅಸಾಧ್ಯಂ = ಸಾಧ್ಯವಾಗುವುದಿಲ್ಲ ।। 297 ।।

**ಇತಿ ಸಂದಿಶ್ಯ ರಾಜಾನಂ ಕುಬೇರಃ ಪುನರಾಗತಃ ।**
**ತಥಾ ಚಕಾರ ರಾಜರ್ಷಿ ರ್ಭೋಜನಂ ಬ್ರಹ್ಮವಾದಿನಾಮ್ ।। 298 ।।**

ಇತಿ = ಹೀಗೆ, ರಾಜಾನಂ = ಆಕಾಶರಾಜನನ್ನು ಕುರಿತು, ಸಂದಿಶ್ಯ = ಶ್ರೀಹರಿಯ ಸಂದೇಶವನ್ನು ಅರುಹಿ, ಕುಬೇರಃ = ಕುಬೇರನು, ಪುನರಾಗತಃ = ಮರಳಿಬಂದನು, ರಾಜರ್ಷಿಃ = ಆಕಾಶರಾಜನು, ತಥಾ = ಶ್ರೀನಿವಾಸನು ಹೇಳಿ ಕಳಿಸಿದಂತೆಯೇ, ಬ್ರಹ್ಮವಾದಿನಾಂ = ಬ್ರಾಹ್ಮಣರಿಗೆ, ಭೋಜನಂ = ಊಟದ ವ್ಯವಸ್ಥೆಯನ್ನು, ಚಕಾರ = ಮಾಡಿದನು ।। 298 ।।

**ದದೌ ಚ ದಕ್ಷಿಣಾಂ ನಿಷ್ಕಂ ತಾಂಬೂಲಂ ಚ ದ್ವಿಜನ್ಮನಾಮ್ ।**
**ಏವಂ ಭೂತೇ ಮಹೀಪಾಲ ಕಲ್ಯಾಣದಿವಸೇ ಹರೇಃ ।। 299 ।।**

ದ್ವಿಜನ್ಮನಾಂ = ಬ್ರಾಹ್ಮಣರಿಗೆ, ತಾಂಬೂಲಂ = ತಾಂಬೂಲವನ್ನು, ನಿಷ್ಕಂ ದಕ್ಷಿಣಾಂ ಚ = ಬಂಗಾರದ ನಾಣ್ಯ ದಕ್ಷಿಣೆಯನ್ನು, ದದೌ = ಕೊಟ್ಟನು, ಮಹೀಪಾಲ = ಜನಕರಾಯ, ಏವಂ ಭೂತೇ = ಈ ಪ್ರಕಾರವಾದ, ಹರೇಃ = ಶ್ರೀನಿವಾಸನ, ಕಲ್ಯಾಣದಿವಸೇ = ಮದುವೆಯದಿನದಂದು ।। 299 ।।

**ಶುಕ್ರವಾರೇ ದಶಮ್ಯಾಂಚ ಸಾಯಂಕಾಲೇ ವಿಯನ್ನೃಪಃ ।**
**ಚತುರಂಗಬಲಂ ಸರ್ವಂ ನಿಧಾಯ ಪುರತಸ್ಸುತಮ್ ।। 300 ।।**

ದಶಮ್ಯಾಂ = ದಶಮಿಯದಿವಸ, ಶುಕ್ರವಾರೇ = ಶುಕ್ರವಾರದ ದಿನ, ಸಾಯಂಕಾಲೇ = ಸಂಧ್ಯಾಕಾಲದಲ್ಲಿ, ವಿಯನ್ನೃಪಃ = ಆಕಾಶರಾಜನು, ಸರ್ವಂ = ಸಮಸ್ತವಾದ, ಚತುರಂಗಬಲಂ = ಚತುರಂಗ ಸೈನ್ಯವನ್ನು, ಪುರತಃ = ಮುಂಭಾಗದಲ್ಲಿ, ಸುತಂ = ಮಗನನ್ನೂ, ನಿಧಾಯ = ಇಟ್ಟು, ಮಹಾರಾಜ = ಜನಕರಾಯ! ।। 300 ।।

**ವಿಶ್ವಕ್ಸೇನಂ ಮಹಾರಾಜ ತೋಂಡಮಾನಂ *ಚ ಸೋದರಮ್ ।**
**ಪುರೋಹಿತಂ ಪುರಸ್ಕೃತ್ಯ ಸುಹೃತ್ಸಂಬಂಧಿಬಾಂಧವಾನ್ ।। 301 ।।**

ವಿಶ್ವಕ್ಸೇನಂ = ವಿಶ್ವಕ್ಸೇನನನ್ನು, ಸ್ವೋದರಂ (ಸಹೋದರಂ) = ತಮ್ಮನಾದ, ತೋಂಡಮಾನಂ ಚ = ತೋಂಡಮಾನನನ್ನೂ, ಸುಹೃತ್ = ಮಿತ್ರರು, ಸಂಬಂಧಿಬಾಂಧವಾನ್ = ಸಂಬಂಧಿಗಳು, ಬಾಂಧವರನ್ನೂ, ಪುರಸ್ಕೃತ್ಯ = ಮುಂದೆ ಮಾಡಿಕೊಂಡು ।। 301 ।।

**ಐರಾವತಂ ಮಹಾನಾಗಂ ರತ್ನಕಂಬಲಭೂಷಿತಮ್ ।**
**ಮೇಘಾರವೇಣ ಸಂಯುಕ್ತಂ ಬದ್ಧಘಂಟಾಕುಲಾನ್ವಿತಮ್ ।। 302 ।।**

ಮೇಘಾರವೇಣ = ಮೇಘಗರ್ಜನೆಯಿಂದ, ಸಂಯುಕ್ತಂ = ಕೂಡಿರುವ, ರತ್ನಕಂಬಲಭೂಷಿತಂ = ರತ್ನ ಕಂಬಳಿಗಳಿಂದ ಶೃಂಗರಿಸಲ್ಪಟ್ಟ, ಬದ್ಧಘಂಟಾಕುಲಾನ್ವಿತಂ = ಕಟ್ಟಲ್ಪಟ್ಟ ಘಂಟೆಗಳ ಸಮೂಹಯುಕ್ತವಾದ, ಮಹಾನಾಗಂ = ಶ್ರೇಷ್ಠಗಜವಾದ,

*ಪಾ : ಸಹೋದರಂ

ಮಹಾರಾವಂ = ಮಹಾಧ್ವನಿಗೈಯ್ಯುವ, ಚತುರ್ದಂತಂ = ನಾಲ್ಕು ದಂತಗಳುಳ್ಳ, ಕರ್ಣಬದ್ಧಸುಚಾಮರಂ = ಕಿವಿಗಳಿಗೆ ಕಟ್ಟಿದ ಚಾಮರಗಳುಳ್ಳ, ಐರಾವತಂ = ಐರಾವತವೆಂಬ ಇಂದ್ರನ ಆನೆಯನ್ನು, ಪುರಂದರಂ = ದೇವೇಂದ್ರನನ್ನೂ, ತಥಾ = ಹಾಗೆಯೇ, ಐರಾವತಂ ಚ = ಐರಾವತವನ್ನು ಕೂಡ, ಪುರಸ್ಕೃತ್ಯ = ಮುಂದೆ ಮಾಡಿಕೊಂಡು, ತದಾ = ಆಗ, ಆಹ್ವಾನ ಕಾರಣಾತ್ = ಶ್ರೀನಿವಾಸ ಮತ್ತು ವರನ ಕಡೆಯವರನ್ನು ಆಹ್ವಾನಿಸಲು, ಶ್ರೀನಿವಾಸಾಲಯಂ = ಶ್ರೀನಿವಾಸನ ಮಂದಿರವನ್ನು ಕುರಿತು, ಪ್ರಾಪ್ತಃ = ಬಂದನು.

**ಚತುರ್ದಂತಂ ಮಹಾರಾವಂ ಕರ್ಣಬದ್ಧ ಸುಚಾಮರಮ್ ।**
**ಪುರಂದರಂ ಪುರಸ್ಕೃತ್ಯ ಗಜಮೈರಾವತಂ ತಥಾ** ॥ 303 ॥

**ಆಹ್ವಾನಕಾರಣಾತ್ಪ್ರಾಪ್ತಃ ಶ್ರೀನಿವಾಸಾಲಯಂ ತದಾ ।**
**ತಸ್ಮಿನ್ ಮಹಾಗೃಹೇ ರಾಜನ್ ಅಯುತಸ್ತಂಭಶೋಭಿತಾಮ್** ॥ 304 ॥

ರಾಜನ್ = ಎಲೈ ಜನಕರಾಯ! ತಸ್ಮಿನ್ ಮಹಾಗೃಹೇ = ಆ ಮಹಾಮಂದಿರದಲ್ಲಿ, ರತ್ನಾಢ್ಯಾಂ = ರತ್ನಗಳಿಂದ ಶೋಭಿಸುವ, ಅಯುತಃ = ಹತ್ತುಸಾವಿರ ಸಂಖ್ಯೆಯ, ಸ್ತಂಭಶೋಭಿತಾಂ = ಕಂಬಗಳಿಂದ ಕಂಗೊಳಿಸುವ ॥ 303–304 ॥

**ಸಭಾಂ ಚಕಾರ ರತ್ನಾಢ್ಯಾಂ ವಿಶ್ವಕರ್ಮಾ ವಿಭೋಃಪ್ರಿಯಾಮ್ ।**
**ತತ್ರಾಸನೇ ಮಹಾಭಾಗಾ ಬ್ರಹ್ಮಾದ್ಯಾಸ್ಸರ್ವದೇವತಾಃ** ॥ 305 ॥

ವಿಭೋಃ ಪ್ರಿಯಾಂ = ಪ್ರಭುವಾದ ಶ್ರೀನಿವಾಸನಿಗೆ ಪ್ರಿಯವಾದ, ಸಭಾಂ = ಸಭೆಯನ್ನು, ವಿಶ್ವಕರ್ಮಾ = ವಿಶ್ವಕರ್ಮನು, ಚಕಾರ = ಮಾಡಿದ್ದನು. ಮಿಥಿಲೇಶ್ವರ = ಎಲೈ ಜನಕರಾಯ, ತತ್ರ = ಆ ರಾಜಸಭೆಯಲ್ಲಿ, ಆಸನೇ = ಪೀಠದಲ್ಲಿ, ಮಹಾಭಾಗಾಃ = ಮಹನೀಯರಾದ, ಬ್ರಹ್ಮಾದ್ಯಾಃ = ಬ್ರಹ್ಮದೇವನೇ ಮೊದಲಾದ, ಸರ್ವದೇವತಾಃ = ಸಮಸ್ತ ದೇವತೆಗಳು ॥ 305 ॥

**ವಿಶ್ವಾಮಿತ್ರೋ ಭರದ್ವಾಜೋ ವಸಿಷ್ಠೋ ಗೌತಮಸ್ತಥಾ ।**
**ಭೃಗುರತ್ರಿಃ ಪುಲಸ್ತ್ಯಶ್ಚ ವಾಲ್ಮೀಕಿರ್ಮಿಥಿಲೇಶ್ವರ** ॥ 306 ॥

ವಿಶ್ವಾಮಿತ್ರಃ = ವಿಶ್ವಾಮಿತ್ರ ಋಷಿಯು, ಭರದ್ವಾಜಃ = ಭರದ್ವಾಜನು, ವಸಿಷ್ಠಃ = ವಸಿಷ್ಠಋಷಿಯು, ತಥಾ = ಅದರಂತೆಯೇ, ಗೌತಮಃ = ಗೌತಮ ಮುನಿಯು, ಭೃಗುಃ = ಭೃಗು ಋಷಿಯು, ಅತ್ರಿಃ = ಅತ್ರಿ ಋಷಿಯು, ಚ = ಮತ್ತು, ಪುಲಸ್ತ್ಯಃ = ಪುಲಸ್ತ್ಯನು, ವಾಲ್ಮೀಕಿಃ = ವಾಲ್ಮೀಕಿ ಋಷಿಯು ॥ 306 ॥

**ವೈಖಾನಸಾಶ್ಚ ದೂರ್ವಾಸಾ ಮಾರ್ಕಂಡೇಯೋಽಥ ಗಾಲವಃ ।**
**ದಧೀಚಿಶ್ಚ್ಯವನೋ ರಾಜನ್ ಸನಕಶ್ಚ ಸನಂದನಃ** ॥ 307 ॥

**ಏತೇ ಶ್ರೇಷ್ಠತಮಾ ಲೋಕೇ ಮುನಯೋ ವೀತಕಲ್ಮಷಾಃ ।**
**ಜಟಾಮುಕುಟಭೂಷಾಂಗಾ ಜ್ವಲತ್ಕೃಷ್ಣಾಜಿನಾಂಬರಾಃ** ॥ 308 ॥

ರಾಜನ್ = ಜನಕರಾಯ, ವೈಖಾನಸಾಶ್ಚ = ವೈಖಾನಸರು, ದೂರ್ವಾಸಾಃ = ದೂರ್ವಾಸರು, ಮಾರ್ಕಂಡೇಯಃ = ಮಾರ್ಕಂಡೇಯರು, ಅಥ = ಅನಂತರ, ಗಾಲವಃ = ಗಾಲವ ಋಷಿಯು, ದಧೀಚಿಃ = ದಧೀಚಿಯು, ಚ್ಯವನಃ =

ಚ್ಯವನಋಷಿಯು, ಸನಕಶ್ಚ ಸನಂದನಃ = ಸನಕ ಮತ್ತು ಸನಂದನರು, ರಾಜನ್ = ಎಲೈ ರಾಜಾ ಜನಕನೇ, ಏತೇ = ಇವರೆಲ್ಲರೂ, ವೀತಕಲ್ಮಷಾಃ = ಕಲ್ಮಷರಹಿತರು, ಜಟಾಮುಕುಟಭೂಷಾಂಗಾಃ = ಜಟಾಮುಕುಟವಿಭೂಷಿತ ಶರೀರವುಳ್ಳ, ಜ್ವಲತ್ಕೃಷ್ಣಾಜಿನಾಂಬರಾಃ = ಪ್ರಜ್ವಲಿಸುವ ಕೃಷ್ಣಾಜಿನವೇ ವಸ್ತ್ರವಾಗುಳ್ಳವರಾದ, ಶ್ರೇಷ್ಠತಮಾಃ = ಅತಿ ಶ್ರೇಷ್ಠರಾದ, ಮುನಯಃ = ಮುನಿಗಳು ॥ 307-308 ॥

**ಕಶ್ಯಪಂತು ಪುರಸ್ಕೃತ್ಯ ಸಮಾಸೀನಾಃ ಸಭಾಂತರೇ ।**
**ತನ್ಮಧ್ಯೇ ವಾಸುದೇವಸ್ತು ರತ್ನಕಂಬಲಮಾಸ್ಥಿತಃ ॥ 309 ॥**

ಕಶ್ಯಪಂ ತು = ಕಶ್ಯಪ ಋಷಿಗಳನ್ನು, ಪುರಸ್ಕೃತ್ಯ = ಮುಂದೆ ಮಾಡಿಕೊಂಡು, ಸಭಾಂತರೇ = ಆ ಮಹಾಸಭೆಯಲ್ಲಿ, ಸಮಾಸೀನಾಃ = ಕುಳಿತುಕೊಂಡಿದ್ದರು. ತನ್ಮಧ್ಯೇ = ಅವರ ಮಧ್ಯಭಾಗದಲ್ಲಿ ವಾಸುದೇವಃ = ಶ್ರೀನಿವಾಸನು, ರತ್ನಕಂಬಲಮಾಸ್ಥಿತಃ = ರತ್ನಗಂಬಳಿಯ ಮೇಲೆ ಕುಳಿತಿದ್ದನು ॥ 309 ॥

**ಕೃತಾಂಜಲಿಪುಟಸ್ತಸ್ಥೌ ಬ್ರಹ್ಮಾ ಲೋಕಪಿತಾಮಹಃ ।**
**ತತ್ಸಭಾದ್ವಾರಮಾಸಾದ್ಯ, ರಾಜಾ ಸತ್ಯಪರಾಕ್ರಮಃ ॥ 310 ॥**

ಲೋಕಪಿತಾಮಹಃ = ಸರ್ವಲೋಕಗಳಿಗೆ ಪಿತಾಮಹನಾದ, ಬ್ರಹ್ಮಾ = ಬ್ರಹ್ಮದೇವನು, ಕೃತಾಂಜಲಿಪುಟಃ = ಕರಜೋಡಿಸಿ, ತಸ್ಥೌ= ಕುಳಿತಿದ್ದನು. ಇಂತಹ = ತತ್ಸಭಾದ್ವಾರಮಾಸಾದ್ಯ = ಆ ಸಭೆಯ ಬಾಗಿಲಿಗೆ ಬಂದು, ಸತ್ಯಪರಾಕ್ರಮಃ = ಸತ್ಯವಂತನೂ ಪರಾಕ್ರಮಿಯೂ ಆದ, ರಾಜಾ = ಆಕಾಶರಾಜನು ॥ 310 ॥

**ಪುರೋಹಿತಂ ಪುರಸ್ಕೃತ್ಯ ಸಂಪ್ರಾಪ್ತೋ ಹರಿಸನ್ನಿಧಿಮ್ ।**
**ಸಮುತ್ತಸ್ಥೌ ವಾಸುದೇವೋ ದೃಷ್ಟ್ವಾ ರಾಜಾನಮಾಗತಮ್ ॥ 311 ॥**

ಪುರೋಹಿತಂ = ಪುರೋಹಿತರಾದ ಬೃಹಸ್ಪತ್ಯಾಚಾರ್ಯರನ್ನು, ಪುರಸ್ಕೃತ್ಯ = ಮುಂಭಾಗದಲ್ಲಿಟ್ಟುಕೊಂಡು, ಹರಿಸನ್ನಿಧಿಂ = ಶ್ರೀನಿವಾಸನ ಸನ್ನಿಧಿಗೆ, ಸಂಪ್ರಾಪ್ತಃ = ಬಂದನು. ಆಗತಂ = ತನ್ನೆಡೆಗೆ ಬಂದ, ರಾಜಾನಂ = ಆಕಾಶಭೂಪತಿಯನ್ನು, ದೃಷ್ಟ್ವಾ = ನೋಡಿ, ವಾಸುದೇವಃ = ಶ್ರೀನಿವಾಸನು, ಸಮುತ್ತಸ್ಥೌ = ಎದ್ದು ನಿಂತನು. ॥ 311 ॥

**ಪರಿರಂಭಣಮಾಸಾದ್ಯ ಭಗವಾನ್ ವಾಕ್ಯಮಬ್ರವೀತ್ ।**

*ಶ್ರೀನಿವಾಸ ಉವಾಚ -*

**ಭವಾನ್ ಶ್ರೇಷ್ಠತಮೋಽತ್ಯಂತಂ ವೃದ್ಧೋಽಸಿ ನೃಪಸತ್ತಮ ॥ 312 ॥**

ಪರಿರಂಭಣಂ = ರಾಜನ ಆಲಿಂಗನವನ್ನು, ಆಸಾದ್ಯ = ಪಡೆದು, ಭಗವಾನ್ = ಷಡ್ಗುಣೈಶ್ವರ್ಯಪೂರ್ಣನಾದ ಶ್ರೀಹರಿಯು, ವಾಕ್ಯಮಬ್ರವೀತ್ = ಮಾತನಾಡಿದನು.

ಶ್ರೀನಿವಾಸ ಉವಾಚ = ಶ್ರೀನಿವಾಸನು ಮಾತನಾಡಿದನು, ನೃಪಸತ್ತಮ = ರಾಜಶ್ರೇಷ್ಠ! ಭವಾನ್ = ನೀನು, ಶ್ರೇಷ್ಠತಮಃ = ಅತ್ಯಂತ ಉತ್ತಮನು, ಅತ್ಯಂತಂ = ಬಹಳ, ವೃದ್ಧೋಽಸಿ = ಮುದುಕನಾಗಿದ್ದೀಯೆ ॥ 312 ॥

**ಕಿಮರ್ಥಮಾಗತೋಽಸಿ ತ್ವಂ ಮದ್ಗೃಹಂ ರಾಜಸತ್ತಮ ।**
**ವಿಶ್ವಕ್ಸೇನಂತು ರಾಜೇಂದ್ರ ಸಮಾಹ್ವಾನೇ ನಿಯೋಜಯ ॥ 313 ॥**

ರಾಜಸತ್ತಮ = ಹೇ ರಾಜಶ್ರೇಷ್ಠ! ತ್ವಂ = ಇಂತಹ ನೀನು, ಮದ್ಗೃಹಂ = ನನ್ನ ಮನೆಯನ್ನು ಕುರಿತು, ಕಿಮರ್ಥಂ = ಏತಕ್ಕಾಗಿ, ಆಗತೋಽಸಿ = ಬಂದಿದ್ದೀಯೇ? ರಾಜೇಂದ್ರ = ನೃಪೋತ್ತಮ! ವಿಶ್ವಕ್ಸೇನಂ ತು = ವಿಶ್ವಕ್ಸೇನನನ್ನು, ಸಮಾಹ್ವಾನೇ = ಇಂಥ ಆಹ್ವಾನ ಕಾರ್ಯದಲ್ಲಿ, ನಿಯೋಜಯ = ನಿಯಮಿಸು ‖ 313 ‖

**ವದತ್ಯೇವಂ ಶ್ರೀನಿವಾಸೇ ಪುರೋಹಿತಮಭಾಷತ ।**

*ರಾಜೋವಾಚ-*

**ವಿಲಂಬಃ ಕ್ರಿಯತೇ ಕಸ್ಮಾತ್ಪೂಜಾಂ ಕುರು ರಮಾಪತೇಃ ‖ 314 ‖**

ಶ್ರೀನಿವಾಸೇ = ಶ್ರೀನಿವಾಸನು, ಏವಂ = ಹೀಗೆ, ವದತಿ (ಸತಿ) = ಹೇಳುತ್ತಿರಲು, (ರಾಜನು) ಪುರೋಹಿತಂ = ಪುರೋಹಿತನನ್ನುದ್ದೇಶಿಸಿ, ಅಭಾಷತ = ಮಾತನಾಡಿದನು. ರಾಜೋವಾಚ = ಮಹಾರಾಜನಿಂತೆಂದನು - ಕಸ್ಮಾತ್ = ಏತಕ್ಕಾಗಿ, ವಿಲಂಬಃಕ್ರಿಯತೇ = ತಡಮಾಡಲ್ಪಡುತ್ತಿದೆ? ರಮಾಪತೇಃ = ಲಕ್ಷ್ಮೀವಲ್ಲಭನ, ಪೂಜಾಂ = ಪೂಜೆಯನ್ನು (ವರಪೂಜೆಯನ್ನು), ಕುರು = ಮಾಡು ‖ 314 ‖

**ಸ ರಾಜವಚನಂ ಶ್ರುತ್ವಾ ಧರಣೀಂ ವಾಕ್ಯಮಬ್ರವೀತ್ ।**

*ವಸಿಷ್ಠ ಉವಾಚ -*

**ಅರುಂಧತೀಂ ಪುರಸ್ಕೃತ್ಯ ಕುರು ಪೂಜಾಂ ರಮಾಪತೇಃ ‖ 315 ‖**

ಸ ಚ = ಆ ಪುರೋಹಿತನು, ರಾಜವಚನಂ = ನೃಪತಿಯ ನುಡಿಯನ್ನು, ಶ್ರುತ್ವಾ = ಆಲಿಸಿ, ಧರಣೀಂ = ಧರಣೀದೇವಿಯನ್ನು ಕುರಿತು, ವಾಕ್ಯಮಬ್ರವೀತ್ = ಮಾತನಾಡಿದನು. ವಸಿಷ್ಠ ಉವಾಚ = ವಸಿಷ್ಠಮುನಿಯು ಹೇಳುತ್ತಲಿದ್ದಾನೆ ಅರುಂಧತೀಂ = ಅರುಂಧತೀದೇವಿಯನ್ನು, ಪುರಸ್ಕೃತ್ಯ = ಮುಂದಿಟ್ಟುಕೊಂಡು, ರಮಾಪತೇಃ = ಲಕ್ಷ್ಮೀರಮಣನಿಗೆ, ಪೂಜಾಂ ಕುರು = ಪೂಜೆಯನ್ನು ಮಾಡು ‖ 315 ‖

**ಸಾ ಸಂಭ್ರಮಾತ್ಸಮುತ್ಥಾಯ ಬಾಷ್ಪಸಂದಿಗ್ಧಲೋಚನಾ ।**
**ಮುಖಂ ವಿಲೋಕ್ಯ ರಾಜೇಂದ್ರ ಕೃಷ್ಣಸ್ಯ ನೃಪವಲ್ಲಭಾ ‖ 316 ‖**

ರಾಜೇಂದ್ರ = ಜನಕರಾಯ, ಸಾ ನೃಪವಲ್ಲಭಾ = ರಾಣಿಯಾದ ಧರಣೀ ದೇವಿಯು, ಕೃಷ್ಣಸ್ಯ = ಶ್ರೀನಿವಾಸನ, ಮುಖಂ = ವದನವನ್ನು, ವಿಲೋಕ್ಯ = ನೋಡಿ, ಸಂಭ್ರಮಾತ್ = ಸಂಭ್ರಮದಿಂದ, ಸಮುತ್ಥಾಯ = ಮೇಲೆದ್ದು ನಿಂತು, ಬಾಷ್ಪಸಂದಿಗ್ಧಲೋಚನಾ = ಆನಂದಬಾಷ್ಪಸಿಕ್ತ ಕಣ್ಣುಳ್ಳವಳಾಗಿ ‖ 316 ‖

**ಮತ್ವಾ ಕೃತಾರ್ಥಮಾತ್ಮಾನಮಾನಂದಪರಿಪೂಜಿತಾ ।**
**ಸಲಜ್ಜಾ ಪೂಜಯಾಮಾಸ ಸಚ್ಚಿದಾನಂದವಿಗ್ರಹಮ್ ‖ 317 ‖**

ಪರಮಾನಂದಪೂರಿತಾ = ಹರ್ಷನಿರ್ಭರಳಾಗಿ, ಆತ್ಮಾನಂ = ತನ್ನನ್ನು, ಕೃತಾರ್ಥಂ ಮತ್ವಾ = ಕೃತಾರ್ಥಳನ್ನಾಗಿ ತಿಳಿದು, ಲಜ್ಜಯಾ = ಸ್ತ್ರೀ ಸಹಜ ನಾಚಿಕೆಯಿಂದ, ಸಚ್ಚಿದಾನಂದ ವಿಗ್ರಹಂ = ನಿರವಧಿಕಾನಂದಮಯ ಶರೀರನಾದ ಶ್ರೀನಿವಾಸನನ್ನು, ಪೂಜಯಾಮಾಸ = ಪೂಜಿಸಿದಳು ‖ 317 ‖

**ತಾಂ ದೃಷ್ಟ್ವಾ ಯೋಷಿತಸ್ಸರ್ವಾ ವಿಸ್ಮಯಾಕುಲಮಾನಸಾಃ ।**
**ಪ್ರಾಹುಃ ಪ್ರಹೃಷ್ಟಹೃದಯಾಃ ಧರಣೀಂ ರಾಜವಲ್ಲಭಾಮ್ ‖ 318 ‖**

ಸರ್ವಾಃ = ಸಕಲರಾದ, ಯೋಷಿತಃ = ಸ್ತ್ರೀಯರು, ವಿಸ್ಮಯಾಕುಲ ಮಾನಸಾಃ = ಆಶ್ಚರ್ಯದಿಂದ ಆಕುಲವಾದ ಮನಸ್ಸುಳ್ಳವರಾಗಿ, ರಾಜವಲ್ಲಭಾಂ = ರಾಜನ ಮಡದಿಯಾದ, ಧರಣೀಂ = ಧರಣೀದೇವಿಯನ್ನು ಕುರಿತು, ಪ್ರಹೃಷ್ಟ-ಹೃದಯಾಃ = ಸಂತಸಮಯ ಮನಸ್ಸಿನಿಂದ (ಸಂತೋಷಚಿತ್ತರಾಗಿ), ಪ್ರಾಹುಃ = ಹೇಳಿದರು ॥ 318 ॥

*ಯೋಷಿತ ಊಚುಃ-*

**ಕಿಂ ತ್ವಯಾ ಚರಿತಂ ಪುಣ್ಯಂ ಪೂರ್ವಜನ್ಮನಿ ಹೇ ಧರೇ ।**
**ವಾಸುದೇವಾರ್ಚನವಿಧೌ ನಿರ್ಮಿತಾ ಪರಮೇಷ್ಠಿನಾ ॥ 319 ॥**

**ಯಾ ತ್ವಮಿತ್ಥಂ ಪೂಜಯಸಿ ಸಾಕ್ಷಾನ್ನಾರಾಯಣಂ ಸ್ವಯಮ್ ।**
**ಇತ್ಯೇವಂ ಸಂಸ್ತುತಾ ದೇವೀ ಧರಣೀ ರಾಜವಲ್ಲಭಾ ॥ 320 ॥**

ಯೋಷಿತ ಊಚುಃ = ಹೆಂಗಸರು ಹೇಳುತ್ತಲಿದ್ದಾರೆ - ಹೇ ಧರೇ = ಎಲೈ ಧರಣೀದೇವಿ! ವಾಸುದೇವಾರ್ಚನ ವಿಧೌ = ಶ್ರೀಕೃಷ್ಣಪರಮಾತ್ಮನ ಪೂಜೆ ಮಾಡುವುದಕ್ಕಾಗಿ, ಪರಮೇಷ್ಠಿನಾ = ಬ್ರಹ್ಮನಿಂದ, ನಿರ್ಮಿತಾ = ಸೃಜಿಸಲ್ಪಟ್ಟ ಯಾ ತ್ವಂ = ಯಾವ ನೀನು, ಪೂರ್ವಜನ್ಮನಿ = ಹಿಂದಿನ ಜನ್ಮದಲ್ಲಿ, ತ್ವಯಾ = ನಿನ್ನಿಂದ, ಕಿಂ ಪುಣ್ಯಂ = ಅದೇನು ಪುಣ್ಯವು, ಆಚರಿತಂ = ಮಾಡಲ್ಪಟ್ಟಿತು? ಇತ್ಥಂ = ಹೀಗೆ, ಸ್ವಯಂ = ನಿನ್ನ ಕೈಯಾರ, ಸಾಕ್ಷಾತ್ = ಪ್ರತ್ಯಕ್ಷವಾಗಿ, ನಾರಾಯಣಂ = ಶ್ರೀಮನ್ನಾರಾಯಣನನ್ನು, ಪೂಜಯಸಿ = ಪೂಜಿಸುತ್ತಿರುವೆ! ಇತ್ಯೇವಂ = ಈ ಪ್ರಕಾರವಾಗಿ, ಸಂಸ್ತುತಾ = ಸ್ತುತಿಸಲ್ಪಟ್ಟವಳಾದ, (ಸ್ತುತಿಸಿಕೊಂಡ) ರಾಜವಲ್ಲಭಾ = ಮಹಾರಾಣಿಯಾದ, ಧರಣೀದೇವೀ = ಧರಣೀದೇವಿಯು ॥ 319-320 ॥

**ತೈಲಕರ್ಪೂರ ಗಂಧೇನ ಚಂದನೇನ ಸುಗಂಧಿನಾ ।**
**ಅರ್ಚಯಾಮಾಸ ಕಲ್ಯಾಣೀ ಶ್ರೀನಿವಾಸಂ ಸುರೇಶ್ವರಮ್ ॥ 321 ॥**

**ವಸ್ತ್ರೈರ್ನಾನಾವಿಧೈಃ ರತ್ನೈರ್ಮುಕ್ತಾನಿರ್ಮಿತಭೂಷಣೈಃ ।**
**ತತಃ ಪುರೋಹಿತಾಜ್ಞಪ್ತಃ ಪುರಾಣಪುರುಷೋತ್ತಮಮ್ ॥ 322 ॥**

**ಗಜಮಾರೋಪಯದ್ರಾಜಾ ಜಾಮಾತರಮನಾಮಯಮ್ ।**
**ಸಹಿತೋ ವಾಸುದೇವಸ್ತು ಬ್ರಹ್ಮಣಾ ಶಂಭುನಾ ತಥಾ ॥ 323 ॥**

ಸುರೇಶ್ವರಂ = ದೇವತಾಸಾರ್ವಭೌಮನಾದ, ಶ್ರೀನಿವಾಸಂ = ಶ್ರೀಹರಿಯನ್ನು, ತೈಲಕರ್ಪೂರಗಂಧೇನ = ಪಚ್ಚಕರ್ಪೂರ ಸುಗಂಧಮಿಶ್ರಿತ ತೈಲದಿಂದ, ಸುಗಂಧಿನಾ = ಪರಿಮಳಭರಿತವಾದ ಸುಗಂಧದಿಂದ, ನಾನಾವಿಧೈಃ = ಅನೇಕ ವಿಧಗಳಾದ, ವಸ್ತ್ರೈಃ = ವಸ್ತ್ರಗಳಿಂದಲೂ, ರತ್ನೈಃ = ರತ್ನಗಳಿಂದಲೂ, ಮುಕ್ತಾನಿರ್ಮಿತ ಭೂಷಣೈಃ = ಮುತ್ತುಗಳಿಂದ ನಿರ್ಮಿಸಿದ ಆಭರಣಗಳಿಂದಲೂ, ಕಲ್ಯಾಣೀ = ಮಂಗಳಾಂಗಿಯಾದ ಧರಣೀದೇವಿಯು, ಅರ್ಚಯಾಮಾಸ = ಪೂಜಿಸಿದಳು, ತತಃ = ಆ ತರುವಾಯ, ಪುರೋಹಿತಾಜ್ಞಪ್ತಃ = ಪುರೋಹಿತನಿಂದ ಆಜ್ಞಾಪಿಸಲ್ಪಟ್ಟ, ರಾಜಾ = ಆಕಾಶರಾಜನು, ಪುರಾಣ-ಪುರುಷೋತ್ತಮಂ = ಅನಾದಿ ಪುರುಷೋತ್ತಮನಾದ, ಅನಾಮಯಂ = ರೋಗ್ಯಾದ್ಯುಪದ್ರವಗಳಿಲ್ಲದ, ಜಾಮಾತರಂ = ಅಳಿಯನಾದ ಶ್ರೀನಿವಾಸನನ್ನು, ಗಜಮಾರೋಪಯತ್ = ಆನೆಯ ಮೇಲೆ ಕೂಡಿಸಿದನು. ವಾಸುದೇವಸ್ತು = ಶ್ರೀಕೃಷ್ಣನು, ಬ್ರಹ್ಮಣಾ = ಬ್ರಹ್ಮದೇವನಿಂದಲೂ, ಶಂಭುಣಾ = ರುದ್ರದೇವನಿಂದಲೂ ॥ 321-323 ॥

**ಕುಬೇರೇಣಾಹಿರಾಜೇನ ಗರುಡೇನಾಗ್ನಿನಾ ತಥಾ**
**ವಾಯುನಾ ವರುಣೇನಾಪಿ ಯಮೇನ ಮರುತಾಂಗಣೈಃ** **॥ 324 ॥**

ತಥಾ = ಹಾಗೆಯೇ, ಕುಬೇರೇಣ = ಕುಬೇರನಿಂದ, ಅಹಿರಾಜೇನ = ಶೇಷನಿಂದ, ಗರುಡೇನ = ಗರುಡನಿಂದಲೂ, ಅಗ್ನಿನಾ = ಅಗ್ನಿಯಿಂದಲೂ, ವಾಯುನಾ = ವಾಯುವಿನಿಂದಲೂ, ವರುಣೇನಾಪಿ = ವರುಣನಿಂದಲೂ ಸಹ, ಯಮೇನ = ಯಮನಿಂದಲೂ, ಮರುತಾಂಗಣೈಃ = ಮರುದ್ಗಣಗಳಿಂದಲೂ, ಸಹಿತಃ = ಕೂಡಿಕೊಂಡು ॥ 324 ॥

**ಸ್ವಸ್ತ್ರೀಭಿಃ ಸಹಿತೈಸ್ಸರ್ವೈಃ ಸಹ ಶ್ರೀವೇಂಕಟೇಶ್ವರಃ ।**
**ವಸಿಷ್ಠಾದಿ ಮುನಿಶ್ರೇಷ್ಠೈಃ ಸದಾರೈಃ ಸಸುತೈ ಸ್ತಥಾ ॥**
**ಜಗಾಮ ರಾಜಭವನಂ ರತ್ನತೋರಣಮಂಡಿತಮ್** **॥ 325 ॥**

ಸ್ವಸ್ತ್ರೀಭಿಃ = ತಮ್ಮ ತಮ್ಮ ಸ್ತ್ರೀಯ (ಪತ್ನಿಯ)ರಿಂದ, ಸಹಿತೈಃ = ಸಹಿತರಾದ, ವಸಿಷ್ಠಾದಿ ಮುನಿಶ್ರೇಷ್ಠೈಃ = ವಸಿಷ್ಠರೇ ಮೊದಲಾದ ಮುನಿವರ್ಯರಿಂದ, ತಥಾ = ಹಾಗೆಯೇ, ಸದಾರೈಃ = ಪತ್ನೀಸಹಿತರಾದ, ಸುತೈಃ ಸಹ = ಮಕ್ಕಳೊಡನೆ, ಶ್ರೀವೇಂಕಟೇಶ್ವರಃ = ಶ್ರೀನಿವಾಸನು, ರತ್ನತೋರಣಮಂಡಿತಂ = ರತ್ನಮಯ ತೋರಣಗಳಿಂದ ಕೂಡಿರುವ, ರಾಜಭವನಂ = ರಾಜಭವನವನ್ನು ಕುರಿತು, ಜಗಾಮ = ಹೋದನು ॥ 325 ॥

**ನಾನಾಜನಸಮಾಕೀರ್ಣಂ ನಾನಾಲಂಕಾರಮಂಡಿತಮ್ ।**
**ಮಹಾವಾದ್ಯಸ್ವನೈರ್ಯುಕ್ತೋ ದೀಪಾಯುತವಿದೀಪಿತಮ್** **॥ 326 ॥**

**ಜಾಮಾತೃ ಸಹಿತೋ ರಾಜಾ ದ್ವಾರತೋರಣಸನ್ನಿಧೌ ।**
**ಚತುರಂಗಬಲಂ ಮುಕ್ತ್ವಾ ಗೃಹಾಂತರ್ಗಂತುಮುದ್ಯತಃ** **॥ 327 ॥**

ನಾನಾಜನ ಸಮಾಕೀರ್ಣಂ = ಅನೇಕಜನರಿಂದ ನಿಬಿಡವಾದ, ನಾನಾಲಂಕಾರಮಂಡಿತಂ = ಬಗೆ ಬಗೆಯ ಅಲಂಕಾರದಿಂದ ಕೂಡಿರುವ, ರಾಜಭವನಂ = ರಾಜನ ಅರಮನೆಯನ್ನು ಕುರಿತು, ಜಗಾಮ = ಹೋದನು. ಮಹಾವಾದ್ಯಸ್ವನೈರ್ಯುಕ್ತೋ = ಮಹಾವಾದ್ಯಘೋಷಯುಕ್ತನಾಗಿ, ದೀಪಾಯುತ ಸಮಾಯುಕ್ತಂ = ಹತ್ತುಸಾವಿರ ದೀಪಗಳಿಂದಯುಕ್ತವಾದ, ಜಾಮಾತೃ ಸಹಿತಃ = ಅಳಿಯನಿಂದ ಕೂಡಿಕೊಂಡು, ರಾಜಾ = ಆಕಾಶರಾಜನು, ದ್ವಾರತೋರಣಸನ್ನಿಧೌ = ಮಹಾದ್ವಾರಬಾಗಿಲಿನಬಳಿ, ಚತುರಂಗಬಲಂ = ಚತುರಂಗ ಸೈನ್ಯಬಲವನ್ನು, ಮುಕ್ತ್ವಾ = ಬಿಟ್ಟು, ಗೃಹಾಂತರ್ಗಂತುಮುದ್ಯತಃ = ಅರಮನೆಯೊಳಗೆ ಹೋಗಲು ಉದ್ಯುಕ್ತನಾದನು ॥ 326-327 ॥

**ತತ್ರಾಂತರೇ ಶ್ರೀನಿವಾಸಂ ನೀರಾಜಯಿತುಮಾಗತಾ ।**
**ತೋಂಡಮಾನ್ನೃಪತೇರ್ಭಾರ್ಯಾ ಕುಂಕುಮೋದಕಭಾಜನಮ್ ॥**
**ಸಮಾದಾಯಾಶು ಕಲ್ಯಾಣೀ ವಾಸುದೇವಮಪೂಜಯತ್** **॥ 328 ॥**

**ಹತ್ವಾ ಪಶೂನ್ಮಹಾರಾಜ ತದ್ವಾರನಿಕಟೇ ನೃಪಃ ।**
**ತತಃ ಪಶ್ಚಾಚ್ಛ್ರೀನಿವಾಸಃ ಪ್ರಾವಿಶದ್ರಾಜಮಂದಿರಮ್** **॥ 329 ॥**

ತತ್ರಾಂತರೇ = ಅಷ್ಟರಲ್ಲಿ, ತೋಂಡಮಾನ್ನೃಪತೇಃ = ತೋಂಡಮಾನ ರಾಜನ, ಭಾರ್ಯಾ = ಪತ್ನಿಯು, ಕುಂಕುಮೋದಕ ಭಾಜನಂ = ಆರತಿಯ ತಟ್ಟೆಯನ್ನು, ಸಮಾದಾಯ = ತೆಗೆದುಕೊಂಡು, ಆಶು = ಬೇಗನೆ, ಶ್ರೀನಿವಾಸಂ =

ಶ್ರೀನಿವಾಸನನ್ನು ಕುರಿತು, ನೀರಾಜಯಿತುಂ = ಆರತಿ ಬೆಳಗಲು, ಆಗತಾ (ಸತಿ) = ಬಂದವಳಾಗಿ, ಕಲ್ಯಾಣೀ = ಮಂಗಳಾಂಗಿಯಾದ ಆಕೆಯು, ವಾಸುದೇವಂ = ಶ್ರೀನಿವಾಸನನ್ನು, ಅಪೂಜಯತ್ = ಪೂಜಿಸಿದಳು. ಮಹಾರಾಜ = ಜನಕರಾಯ! ತದ್ವಾರ ನಿಕಟೇ = ಅರಮನೆಯ ಬಾಗಿಲ ಬಳಿ, ನೃಪಃ = ಆಕಾಶರಾಜನು, ಪಶೂಮ್ = ಪಶುಗಳನ್ನು, ಹತ್ವಾ ಪಶ್ಚಾತ್ = ದೃಷ್ಟಿನಿವಾರಣೆಗಾಗಿ ಬಲಿಕೊಟ್ಟ ಬಳಿಕ, ಶ್ರೀನಿವಾಸಃ = ಶ್ರೀನಿವಾಸನು, ತತಃ = ಅನಂತರ, ರಾಜಮಂದಿರಂ = ಅರಮನೆಯನ್ನು, ಪ್ರಾವಿಶತ್ = ಪ್ರವೇಶಿಸಿದನು ॥ 328-329 ॥

**ದ್ವಾರಾಣ್ಯತೀತ್ಯಾಥ ಬಹೂನಿ ಮಾಧವೋ ರಾಜ್ಞಾ ಸಮೇತೋ ಭವನಂ ಪ್ರವಿಶ್ಯ ।**
**ರತ್ನಾಸನೇ ರಾಜವಿನಿರ್ಮಿತೇ ಹರಿಃ[27] ರರಾಜ ರಾಜೀವಸಮಾನ ನೇತ್ರಃ ॥ 330 ॥**

ಬಹೂನಿ = ಅನೇಕವಾದ, ದ್ವಾರಾಣಿ = ಬಾಗಿಲುಗಳನ್ನು, ಅತೀತ್ಯ = ದಾಟಿ, ಅಥ = ಅನಂತರ, ಮಾಧವಃ = ಶ್ರೀನಿವಾಸನು, ರಾಜ್ಞಾಸಮೇತಃ = ರಾಜನೊಡನೆ, ಭವನಂ = ರಾಜಮಂದಿರವನ್ನು, ಪ್ರವಿಶ್ಯ = ಪ್ರವೇಶಿಸಿ, ರಾಜನಿರ್ಮಿತೇ = ನೃಪತಿಯು ತಯಾರುಮಾಡಿಸಿದ, ರತ್ನಾಸನೇ = ರತ್ನಮಯ ಸಿಂಹಾಸನದಲ್ಲಿ, ರಾಜೀವನೇತ್ರಃ = ಕಮಲನಯನನಾದ, ಹರಿಃ (ಹರೀ) = ಶ್ರೀನಿವಾಸನು, ರರಾಜ = ವಿರಾಜಿಸಿದನು ॥ 330 ॥

**ಚತುಸ್ತಂಭಾಂ ರತ್ನವೇದೀಮಧಿಷ್ಠಾಪ್ಯ ಖಗಧ್ವಜಮ್ ।**
**ಪರಿವಾರ್ಯ ಚ ತಸ್ಥುಸ್ತೇ ಮುನಯೋ ವೀತಕಲ್ಮಷಾಃ ॥ 331 ॥**

**ಬ್ರಹ್ಮಾಣಮಗ್ರತಃ ಕೃತ್ವಾ ಸರ್ವೇ ದೇವಾ ಯಥಾಸುಖಮ್ ।**
**ಸ್ವರ್ಣಾಸನೇ ಸಮಾಸೀನಾಃ ಪಶ್ಯಂತೋ ನಯನೋತ್ಸವಮ್ ॥ 332 ॥**

ಚತುಸ್ತಂಭಾಂ = ನಾಲ್ಕು ಸ್ತಂಭಗಳಿರುವ, ರತ್ನವೇದೀಂ = ರತ್ನಮಯ ವೇದಿಕೆಯ ಮೇಲೆ, ಖಗಧ್ವಜಂ = ಗರುಡಧ್ವಜವನ್ನು, ಅಧಿಷ್ಠಾಪ್ಯ = ಅಧಿರೋಹಿಸಿ (ಏರಿಸಿ), ಪರಿವಾರ್ಯ = ಅದನ್ನು ಸುತ್ತುವರೆದು, ವೀತಕಲ್ಮಷಾಃ = ಕಲ್ಮಷರಹಿತರಾದ, ತೇ ಮುನಯಃ = ಆ ಋಷಿಮುನಿಗಳು, ಸರ್ವೇ ದೇವಾಃ = ಸಕಲದೇವತೆಗಳು, ಬ್ರಹ್ಮಾಣಂ = ಬ್ರಹ್ಮದೇವನನ್ನು, ಅಗ್ರತಃ = ಮುಂಭಾಗದಲ್ಲಿ, ಕೃತ್ವಾ = ಮಾಡಿಕೊಂಡು, ಸ್ವರ್ಣಾಸನೇ = ಬಂಗಾರದ ಪೀಠದಲ್ಲಿ ಯಥಾಸುಖಂ = ಸುಖಕರವಾಗುವಂತೆ, ಸಮಾಸೀನಾಃ = ಕುಳಿತವರಾಗಿ, ನಯನೋತ್ಸವಂ = ಕಣ್ಣಿಗೆ ಹಬ್ಬವಾದ ಉತ್ಸವವನ್ನು, ಪಶ್ಯಂತಃ = ನೋಡುತ್ತಾ, ತಸ್ಥುಃ = ಇದ್ದರು (ಕುಳಿತಿದ್ದರು) ॥ 331-332 ॥

**ಸಾಪಿ ಸ್ನಾತ್ವಾ ಮಹಾರಾಜ ತೈಲೇನ ಚ ಸುಗಂಧಿನಾ ॥ 333 ॥**

**ಅಲಂಚಕಾರಾಲಂಕಾರೈಃ ಸ್ವಾತ್ಮಾನಂ ರಾಜವಲ್ಲಭಾ ।**
**ಸ್ವಾಮಿಪುಷ್ಕರಿಣೀತೋಯಂ ಹೇಮಕುಂಭಪ್ರಪೂರಿತಮ್ ॥ 334 ॥**

ಮಹಾರಾಜ = ಜನಕರಾಜ! ತತಃ = ಆ ಬಳಿಕ, ಧರ್ಮಾತ್ಮಾ = ಧರ್ಮಿಷ್ಠನಾದ, ಸಃ ರಾಜಾ = ಆ ಆಕಾಶ-ಭೂಪತಿಯು, ಮಂಗಲಮಜ್ಜನಂ = ಮಂಗಳಸ್ನಾನವನ್ನು, ಚಕ್ರೇ = ಮಾಡಿದನು, ರಾಜವಲ್ಲಭಾ = ರಾಜನಿಗೆ ಪ್ರಿಯಳಾದ, ಸಾ ಪಿ = ಧರಣೀದೇವಿಯೂ ಸಹ, ಸುಗಂಧಿನಾ = ಪರಿಮಳೋಪೇತವಾದ, ತೈಲೇನ = ಎಣ್ಣೆಯಿಂದ, ಸ್ನಾತ್ವಾ = ಅಭ್ಯಂಜನ ಮಾಡಿಕೊಂಡು, ಅಲಂಕಾರೈಃ = ಭೂಷಣಗಳಿಂದ, ಸ್ವಾತ್ಮಾನಂ = ತನ್ನನ್ನು, ಅಲಂಚಕಾರ = ಶೃಂಗರಿಸಿಕೊಂಡಳು.

27. ಪಾ : ಹರೀ.

ಹೇಮಕುಂಭಪ್ರಪೂರಿತಂ = ಬಂಗಾರದ ಕೊಡಗಳಲ್ಲಿ ತುಂಬಿದ, ಸ್ವಾಮಿಪುಷ್ಕರಿಣೀತೋಯಂ = ಸ್ವಾಮಿ ಪುಷ್ಕರಿಣಿಯ ಜಲವನ್ನು ।। 333-334 ।।

**ಸಮಾನೀಯ ಬ್ರಾಹ್ಮಣೈಶ್ಚ ಹರಿಪಾದಾವನೇಜನಮ್ ।**
**ಸಂಕಲ್ಪಂ ವಿಧಿವಚ್ಚಕ್ರೇ ಕನ್ಯಾದಾನಸ್ಯ ಸಾದರಮ್ ।। 335 ।।**

ಬ್ರಾಹ್ಮಣೈಶ್ಚ = ಬ್ರಾಹ್ಮಣರುಗಳಿಂದ, ಸಮಾನೀಯ = ತರಿಸಿ, ಹರಿಪಾದಾವನೇಜನಂ = ಶ್ರೀಹರಿಯ ಪಾದವನ್ನು ತೊಳೆಯಲು, ಕನ್ಯಾದಾನಸ್ಯ = ಕನ್ಯಾದಾನಕ್ಕೆ, ವಿಧಿವತ್ = ವೇದೋಕ್ತನಿಯಮದಂತೆ, ಸಂಕಲ್ಪಂ = ಸಂಕಲ್ಪವನ್ನು, ಸಾದರಂ = ಆದರದಿಂದ, ಚಕ್ರೇ = ಮಾಡಿದನು ।। 335 ।।

**ತತಶ್ಚಕಾರ ರಾಜೇಂದ್ರ ಮಧುಪರ್ಕಂ ಪುರೋಹಿತಃ ।**
**ಪುರೋಹಿತೋಕ್ತಮಂತ್ರೇಣ ತಸ್ಯ ಪಾದಾವನೇಜನಮ್ ।। 336 ।।**

**ಸಹಸ್ರಶೀರ್ಷಾ ಪುರುಷಃ ಇತಿಮಂತ್ರಂ ಸಮುಚ್ಚರನ್ ।**
**ಧರಣ್ಯಾ ಸ್ರಾವಿತೈಃ ಕೃತ್ವಾ ಸ್ವಾಮಿತೀರ್ಥಜಲೈ ಶ್ಶುಭೈಃ ।। 337 ।।**

ರಾಜೇಂದ್ರ = ಜನಕರಾಯ! ತತಃ = ಆ ತರುವಾಯ, ಪುರೋಹಿತಃ = ಪುರೋಹಿತನು, ಮಧುಪರ್ಕಂ = ಮಧುಪರ್ಕವನ್ನು, ಪುರೋಹಿತೋಕ್ತಮಂತ್ರೇಣ = ಪುರೋಹಿತರು ಹೇಳಿದ ಮಂತ್ರದಿಂದ, ಸಹಸ್ರಶೀರ್ಷಾಪುರುಷಃ = ಸಹಸ್ರಶೀರ್ಷಾಪುರುಷಃ, ಇತಿ = ಎಂಬ, ಮಂತ್ರಂ = ಪುರುಷಸೂಕ್ತ ಮಂತ್ರವನ್ನು, ಸಮುಚ್ಚರನ್ = ಉಚ್ಚರಿಸುತ್ತಾ (ತಾನೂ ಹೇಳುತ್ತಾ), ಧರಣ್ಯಾ = ಧರಣೀದೇವಿಯಿಂದ, ಸ್ರಾವಿತೈಃ = ಧಾರಾಕಾರವಾಗಿ ಬೀಳಿಸಿದ, ಶುಭೈಃ = ಮಂಗಳಕರಗಳಾದ, ಸ್ವಾಮಿತೀರ್ಥಜಲೈಃ = ಸ್ವಾಮಿಪುಷ್ಕರಿಣಿಯ ನೀರುಗಳಿಂದ, ತಸ್ಯ = ಶ್ರೀನಿವಾಸನಿಗೆ, ಹರಿಪಾದಾವನೇಜನಂ = ಪಾದಪ್ರಕ್ಷಾಳನವನ್ನು, ಕೃತ್ವಾ = ಮಾಡಿ, ।। 336-337 ।।

**ಹರಿಪಾದೋದಕಂ ಪುಣ್ಯಂ ದಧಾರ ಶಿರಸಾ ನೃಪಃ ।**
**ಭಾರ್ಯಾಪುತ್ರಂ ಭ್ರಾತರಂ ಚ ಭವನಂ ಕೋಶಮೇವ ಚ ।। 338 ।।**

**ಗಜಾಗಾರಂ ರಥಾಗಾರಂ ವಸ್ತ್ರಾಗಾರಂ ಚ ತಜ್ಜಲೈಃ ।**
**ಮಾರ್ಜಯಾಮಾಸ ರಾಜೇಂದ್ರಃ ಶ್ರೀನಿವಾಸಪರಾಯಣಃ ।। 339 ।।**

ನೃಪಃ = ಆಕಾಶರಾಜನು, ಪುಣ್ಯಂ = ಪುಣ್ಯಕರವಾದ, ಹರಿಪಾದೋದಕಂ = ಶ್ರೀಹರಿಯ ಚರಣಜಲವನ್ನು, ಶಿರಸಾ = ಶಿರಸ್ಸಿನಲ್ಲಿ, ದಧಾರ = ಧರಿಸಿದನು, ಚ = ಮತ್ತು, ಭಾರ್ಯಾ = ಹೆಂಡತಿ, ಪುತ್ರಂ = ಮಗನನ್ನು, ಭ್ರಾತರಂ = ತಮ್ಮನನ್ನೂ, ಭವನಂ = ಅರಮನೆ, ಕೋಶಮೇವ ಚ = ಧನಾಗಾರವನ್ನೂ ಸಹ, ಗಜಾಗಾರಂ = ಆನೆಗಳಿರುವ ಭವನ, ರಥಾಗಾರಂ = ರಥದ ಮನೆಯನ್ನೂ, ವಸ್ತ್ರಾಗಾರಂ ಚ = ವಸ್ತ್ರಗಳಿಡುವ ಗೃಹವನ್ನೂ ಕೂಡ, ಶ್ರೀನಿವಾಸಪರಾಯಣಃ = ಶ್ರೀನಿವಾಸನಲ್ಲಿ ನಿರತನಾದ (ಭಕ್ತನಾದ), ರಾಜೇಂದ್ರಃ = ಆಕಾಶರಾಜನು, ತಜ್ಜಲೈಃ = ಶ್ರೀನಿವಾಸನ ಪಾದೋದಕಗಳಿಂದ, ಮಾರ್ಜಯಾಮಾಸ = ಪ್ರೋಕ್ಷಣ ಮಾಡಿಸಿದನು ।। 338 - 339 ।।

ರಾಜೋವಾಚ-

**ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಮ್ ।**
**ಅದ್ಯ ಮೇ ಪಿತರಸ್ತುಷ್ಟಾಃ ವಾಸುದೇವಪದೋದಕಾತ್ ॥ 340 ॥**

ರಾಜೋವಾಚ = ಆಕಾಶರಾಜನು ಇಂತು ಹೇಳಲಾರಂಭಿಸಿದನು. ಅದ್ಯ = ಈಗ, ಮೇ = ನನ್ನ, ಜನ್ಮ = ಹುಟ್ಟುವಿಕೆಯು, ಸಫಲಂ = ಸಫಲವಾಯಿತು, ಜೀವಿತಂ ಚ = ಜೀವನವೂ ಕೂಡ, ಸುಜೀವಿತಂ = ಸಮೀಚೀನವಾದ ಜೀವನವಾಯಿತು, ಅದ್ಯ = ಈಗ, ಮೇ = ನನ್ನ, ಪಿತರಃ = ಪಿತೃಗಳು, ವಾಸುದೇವಪದೋದಕಾತ್ = ಶ್ರೀಹರಿಯ ಪಾದೋದಕದಿಂದ, ತುಷ್ಟಾಃ = ಸಂತುಷ್ಟರಾದರು ॥ 340 ॥

**ಏವಮುಕ್ತ್ವಾ ಮಹಾರಾಜಃ ಕನ್ಯಾಂ ಕಮಲಲೋಚನಾಮ್ ।**
**ಅಲಂಚಕ್ರೇ ವಿಚಿತ್ರೈಸ್ತಾಮಲಂಕಾರೈ ರ್ಮಹೀಪತೇ ॥ 341 ॥**

ಮಹಾರಾಜ = ಎಲೈ ಜನಕರಾಯ! ಏವಮುಕ್ತ್ವಾ = ಇಂತು ಹೇಳಿ, ಮಹಾರಾಜಃ = ಆಕಾಶರಾಜನು, ಕಮಲಲೋಚನಾಂ = ಪದ್ಮನಯನಳಾದ, ಕನ್ಯಾಂ = ಪದ್ಮಾವತಿಯನ್ನು, ವಿಚಿತ್ರೈಃ = ಚಿತ್ರ ವಿಚಿತ್ರಗಳಾದ, ಅಲಂಕಾರೈಃ = ಆಭರಣಗಳಿಂದ, ಅಲಂಚಕ್ರೇ = ಅಲಂಕರಿಸಿದನು ॥ 341 ॥

**ತತಸ್ತು ಘಟಿಕಾಘೋಷಂ ಕೃತವಾನ್ ದೈವಚಿಂತಕಃ ।**
**ಸುಮುಹೂರ್ತೋऽ ಯಮಿತ್ಯೇವ ಮಂಗಲಾಷ್ಟಕಮಬ್ರುವನ್ ॥ 342 ॥**

ತತಃಸ್ತು = ಆ ಕಾಲದಲ್ಲಿ, ದೈವಚಿಂತಕಃ = ಜ್ಯೋತಿಷಿಯು (ದೈವಜ್ಞನು), ಸುಮುಹೂರ್ತೋऽಯಂ = ಇದು ಸುಮುಹೂರ್ತವು, ಇತ್ಯೇವಂ = ಹೀಗೆಂದು, ಘಂಟಾಘೋಷಂ = ಮುಹೂರ್ತ ಘಳಿಗೆಯ ಘಂಟಾನಾದವನ್ನು, ಕೃತವಾನ್ = ಮಾಡಿದನು. (ವಿಪ್ರಾಃ = ಬ್ರಾಹ್ಮಣರು) ಮಂಗಲಾಷ್ಟಕಂ = ವಿವಾಹಕಾಲದಲ್ಲಿ ಹೇಳುವ ಮಂಗಳಾಷ್ಟಕವನ್ನು, ಅಬ್ರುವನ್ = ಹೇಳಿದರು ॥ 342 ॥

**ಕನ್ಯಾಪ್ರದಾನಸಮಯೇ ದಕ್ಷಿಣಾಂ ರಾಜಸತ್ತಮಃ ।**
**ಕೋಟಿಸಂಖ್ಯಾನ್ನಿಷ್ಕಪುಂಜಾನ್ ದತ್ತವಾನ್ವೇಂಕಟೇಶಿತುಃ ॥ 343 ॥**

ರಾಜಸತ್ತಮಃ = ರಾಜಶ್ರೇಷ್ಠನಾದ ಆಕಾಶರಾಜನು, ಕನ್ಯಾಪ್ರದಾನ ಸಮಯೇ = ಕನ್ಯಾದಾನ ಮಾಡುವ ಸಮಯದಲ್ಲಿ, ವೇಂಕಟೇಶಿತುಃ = ಶ್ರೀನಿವಾಸನಿಗೆ, ಕೋಟಿಸಂಖ್ಯಾಕಾನ್ = ಅನೇಕ ಕೋಟಿ ಸಂಖ್ಯೆಯಲ್ಲಿ, ನಿಷ್ಕಪುಂಜಾನಿ = ಬಂಗಾರದ ನಾಣ್ಯಗಳ ಸಮೂಹವನ್ನು, ದಕ್ಷಿಣಾಂ = ವರದಕ್ಷಿಣೆಯನ್ನಾಗಿ, ದತ್ತವಾನ್ = ಕೊಟ್ಟನು ॥ 343 ॥

**ತಂ ದೃಷ್ಟ್ವಾ ಧನರಾಶಿಂತು ಭಗವಾನಾಹ ಭೂಮಿಪಮ್ ।**

ಶ್ರೀನಿವಾಸ ಉವಾಚ –

**ದಾತವ್ಯಂ ಕಿಂ ತ್ವಯಾ ರಾಜನ್ ಪುತ್ರಸ್ಯ ತವ ಭೂಪತೇ ॥ 344 ॥**

ತಂ ಧನರಾಶಿಂತು = ಆ ಧನರಾಶಿಯನ್ನು, ದೃಷ್ಟ್ವಾ = ನೋಡಿ, ಭಗವಾನ್ = ಶ್ರೀನಿವಾಸನು, ಭೂಮಿಪಂ = ಆಕಾಶರಾಜನನ್ನು ಕುರಿತು, ಆಹ = ಹೇಳಿದನು.

ಶ್ರೀನಿವಾಸ ಉವಾಚ = ಶ್ರೀನಿವಾಸನು ಇಂತು ಹೇಳಿದನು - ರಾಜನ್ = ಮಹಾರಾಜ, ತವ = ನಿನ್ನ, ಪುತ್ರಸ್ಯ = ಮಗನಿಗೆ (ಮಗನ ಸಮಾನನಾದ ನನಗೆ), ಭೂಪತೇ = ಎಲೈ ರಾಜ! ತ್ವಯಾ = ನಿನ್ನಿಂದ. ದಾತವ್ಯಂ ಕಿಂ?=ಕೊಡುವುದೇನಿದೆ?॥344॥

**ವಿವಾಹಕರ್ಮ ನಿಪುಣೋ ಭವಾನ್ ದಾನಪರಾಯಣಃ ।**
**ದದಸ್ವ ಭೂಷಣಾನ್ಯಂಗ ಬಹುರತ್ನಾನ್ವಿತಾನಿ ಚ ॥ 345 ॥**

ಭವಾನ್ = ನೀನು, ವಿವಾಹಕರ್ಮನಿಪುಣಃ = ಲಗ್ನವನ್ನು ನೆರವೇರಿಸುವುದರಲ್ಲಿ ಚತುರನು, ದಾನಪರಾಯಣಃ = ಬಹುದಾನಶೀಲನು, ಅಂಗ = ಪ್ರೀತ್ಯಾಸ್ಪದನೇ, ಬಹುರತ್ನಾನ್ವಿತಾನಿ = ಬಹುರತ್ನಗಳಿಂದ ಕೂಡಿದ, ಭೂಷಣಾನಿ = ಆಭರಣಗಳನ್ನು, ದದಸ್ವ = ಕೊಡುವವನಾಗು ॥ 345 ॥

**ಇತ್ಯುಕ್ತೋ ವಾಸುದೇವಾಯ ಭೂಷಣಾನಿ ದದೌ ನೃಪಃ ।**
**ಕಿರೀಟಂ ಶತಭಾರಂ ತು ಕಟಿಕಾಂಚೀಂ ಚ ತಾವತೀಮ್ ॥ 346 ॥**

ಇತ್ಯುಕ್ತಃ = ಇಂತು ಹೇಳಲ್ಪಟ್ಟ, ನೃಪಃ = ಆಕಾಶರಾಜನು, ವಾಸುದೇವಾಯ = ಶ್ರೀಕೃಷ್ಣನಿಗೋಸ್ಕರವಾಗಿ, ಭೂಷಣಾನಿ = ಆಭರಣಗಳನ್ನು, ದದೌ = ಕೊಟ್ಟನು. ಶತಭಾರಂತು = ಎರಡು ಸಾವಿರ ತೊಲಗಳ ತೂಕದ, ಕಿರೀಟಂ = ಬಂಗಾರದ ಕಿರೀಟವನ್ನು, ತಾವತೀಂ = ಅಷ್ಟೇ ತೂಕದ, ಕಟಿಕಾಂಚೀಂ = ನಡುಪಟ್ಟಿಯನ್ನೂ ॥ 346 ॥

**ಕೇಯೂರನೂಪುರೇ ದಿವ್ಯೇ ತದರ್ಧಂ ಚೈವ ಪಾದುಕಾಮ್ ।**
**ಪದಕಾನಿ ದದೌ ಸಪ್ತಾನರ್ಘಾಣ್ಯಥ ನೃಪೋತ್ತಮಃ ॥ 347 ॥**

ತದರ್ಧಂ = ಅದರ ಅರ್ಧ ಭಾಗ ತೂಕದ, ದಿವ್ಯೇ = ದಿವ್ಯವಾದ, ಕೇಯೂರನೂಪುರೇ = ಕೇಯೂರಹಾರ, ಕಾಲುಂಗುರ, ತದರ್ಧಂ = ಅದರ ಅರ್ಧ ಭಾಗ ತೂಕದ, ಪಾದುಕಾಂಚೈವ = ಕನಕಮಯ ಪಾದುಕೆಗಳನ್ನೂ ಸಹ, ಅಥ = ಅನಂತರ, ನೃಪೋತ್ತಮಃ = ರಾಜಶ್ರೇಷ್ಠನು, ಅನರ್ಘಾಣಿ = ಬೆಲೆಕಟ್ಟಲಾಗದ, ಸಪ್ತ = ಏಳು, ಪದಕಾನಿ = ಪದಕಗಳನ್ನೂ, ದದೌ = ಕೊಟ್ಟನು ॥ 347 ॥

**ಮಾಲಿಕಾ ಮೌಕ್ತಿಕಾನಾಂ ಚ ಭುಜಭೂಷಣಯುಗ್ಮಕಮ್ ।**
**ಕರ್ಣಭೂಷೌ ಮೌಕ್ತಿಕಾಢ್ಯಾವಂಸಪರ್ಯಂತಲಂಬಿನೌ ॥ 348 ॥**

ಮೌಕ್ತಿಕಾನಾಂ = ಮುತ್ತುಗಳ, ಮಾಲಿಕಾ = ಹಾರವು, ಚ = ಮತ್ತು, ಭುಜಭೂಷಣಯುಗ್ಮಕಂ = ಭುಜಗಳಿಗೆ ಅಲಂಕಾರವಾದ (ಭುಜಕೀರ್ತಿ) ಎರಡು ಆಭರಣಗಳು, ಮೌಕ್ತಿಕಾಢ್ಯಾ = ಮುತ್ತಿನಿಂದ ಬೆಡಗುಗೊಂಡ, ಅಂಸಪರ್ಯಂತ-ಲಂಬಿನೌ = ಭುಜದವರೆಗೆ ಉದ್ದವಾಗಿರುವ, ಕರ್ಣಭೂಷೌ = ಕಡಕು (ಮಕರಕುಂಡಲ)ಗಳನ್ನೂ ॥ 348 ॥

**ಕಂಕಣೇ ರತ್ನಮಾಣಿಕ್ಯ ವಜ್ರವೈಢೂರ್ಯನಿರ್ಮಿತೇ ।**
**ದ್ವಾತ್ರಿಂಶದ್ಭಾರಸಂಯುಕ್ತೇ ಅನರ್ಘೇ ದತ್ತವಾನ್ನೃಪಃ ॥ 349 ॥**

ರತ್ನಮಾಣಿಕ್ಯವಜ್ರವೈಢೂರ್ಯ ನಿರ್ಮಿತೇ = ರತ್ನ (ಕೆಂಪು) ಮಾಣಿಕ್ಯ-ವಜ್ರ-ವೈಢೂರ್ಯಾದಿಗಳಿಂದ ನಿರ್ಮಿಸಲ್ಪಟ್ಟ, ಅನರ್ಘೇ = ಅಮೂಲ್ಯವಾದ, ದ್ವಾದ್ರಿಂಶದ್ ಭಾರಸಂಯುತೇ = ಮೂವತ್ತೆರಡು *ಭಾರತೂಕವುಳ್ಳ (640 ತೊಲಾ ತೂಕವುಳ್ಳ), ಕಂಕಣೇ = ಎರಡು ಕಡಗಗಳನ್ನು, ನೃಪಃ = ಆಕಾಶರಾಜನು, ದತ್ತವಾನ್ = ಕೊಟ್ಟನು ॥ 349 ॥

* ಭಾರ = 20 ತೊಲ

**ನಾಗಭೂಷಣಯುಗ್ಮಂ ಚ ಬಾಹುಪೂರಾದಿಕಾಂಸ್ತಥಾ ।**
**ಭೂಷಣಾನ್ಯಂಗುಲೀಯಾಂಶ್ಚ ದಶಾನಾಂ ವೀರಮುದ್ರಿಕಾಮ್ ॥ 350 ॥**

ನಾಗಭೂಷಣಯುಗ್ಮಂ = ನಾಗರಹೆಡೆಯುಳ್ಳ ಎರಡು (ತೊಡಾ) ಆಭರಣಗಳನ್ನು, ಬಾಹುಪೂರಾದಿಕಾಂ ತಥಾ = ನಾಗಮುರುಗೆ ಮುಂತಾದ, ಭೂಷಣಾನಿ = ಬಗೆಬಗೆಯ ಆಭರಣಗಳನ್ನೂ, ದಶಾನಾಂ = ಹತ್ತು, ಅಂಗುಲೀಯಾಂಶ್ಚ = ಉಂಗುರಗಳನ್ನೂ, ವೀರಮುದ್ರಕಾಂ = ವೀರಮುದ್ರಾ ಉಂಗುರವನ್ನೂ ॥ 350 ॥

**ಕಟಿಸೂತ್ರಂ ಸ್ವರ್ಣಮಯಂ ವರವಜ್ರಸಮನ್ವಿತಮ್ ।**
**ಏಕಾದಶ ಶತೀಭಾರಂ ಬಹುರತ್ನಸಮನ್ವಿತಮ್ ॥ 351 ॥**
**ಪಾದುಕೇ ಚ ತತೋ ರಾಜಾ ದತ್ತವಾನ್ ಮಧುಘಾತಿನೇ ।**
**ದದೌ ಭೋಜನಪಾತ್ರಂ ಚ ಷಷ್ಟಿಭಾರಯುತಂ ಪ್ರಭೋಃ ॥ 352 ॥**

ವರವಜ್ರಸಮನ್ವಿತಂ = ಶ್ರೇಷ್ಠವಜ್ರಗಳಿಂದ ಖಚಿತವಾದ, ಸ್ವರ್ಣಮಯಂ = ಬಂಗಾರಮಯವಾದ, ಏಕಾದಶ ಶತಭಾರಂ = ಒಂದು ಸಾವಿರದನೂರು ಭಾರ ತೂಕದ, ಕಟಿಸೂತ್ರಂ = ಕಟಿಸೂತ್ರಂ (ಉಡುದಾರ)ವನ್ನೂ, ಬಹುರತ್ನಸಮನ್ವಿತಂ = ಅನೇಕ ರತ್ನಗಳಿಂದ ಕೂಡಿದ, ಪಾದುಕೇ = ಎರಡು ಪಾದುಕೆಗಳನ್ನೂ, ತತಃ = ಅನಂತರ, ರಾಜಾ = ಆಕಾಶರಾಜನು, ಮಧುಘಾತಿನೇ = ಮಧುನಾಮಕದೈತ್ಯಸಂಹಾರಕನಾದ ಶ್ರೀಹರಿಗೆ, ಷಷ್ಟಿಭಾರಯುತಂ = ಸಾವಿರದ ಇನ್ನೂರು ತೊಲೆಯ ತೂಕವುಳ್ಳ, ಭೋಜನಪಾತ್ರಂ = ಬಂಗಾರದ ಊಟದ ತಟ್ಟೆ (ಅಥವಾ) ಬಂಗಾರದ ಊಟದ ಎಲೆ)ಯನ್ನು, ಪ್ರಭೋಃ = ಸ್ವಾಮಿಯಾದ ಶ್ರೀನಿವಾಸನಿಗೆ, ದದೌ = ಕೊಟ್ಟನು ॥ 351-352 ॥

**ಲಘುಪಾತ್ರಸಮೋಪೇತಂ ಬೃಹತ್ಪಾತ್ರಮಪಾಂ ತಥಾ ।**
**ಕಂಬಲಾನಾಂ ಚತುಃಶಷ್ಟಿಂ ದತ್ತವಾನ್ರಾಜಸತ್ತಮಃ ॥ 353 ॥**

ಲಘುಪಾತ್ರಸಮೋಪೇತಂ = ಸಣ್ಣಪಾತ್ರೆಗಳಿಗೆ ಸಮನಾಗಿ, ಬೃಹತ್ಪಾತ್ರಮಪಾಂ = ದೊಡ್ಡ ದೊಡ್ಡ ನೀರುತುಂಬುವ ಪಾತ್ರೆಗಳ ಸಮೂಹವನ್ನು, ತಥಾ = ಅದರಂತೆಯೇ, ರಾಜಸತ್ತಮಃ = ಆಕಾಶರಾಜನು, ಕಂಬಲಾನಾಂ = ಕಂಬಳಿಗಳು (ರತ್ನಕಂಬಳಿಗಳು) ಚತುಃಷಷ್ಠಿಂ = ಅರವತ್ನಾಲ್ಕನ್ನು, ದತ್ತವಾನ್ = ಕೊಡುವವನಾದನು ॥ 353 ॥

**ಭೂಷಣೈರ್ಭೂಷಿತಾಂಗಸ್ಯ ಕನ್ಯಾದಾನಮಥಾಕರೋತ್ ।**
**ಕನ್ಯಾಪ್ರವರಮೂಚೇಽಥ ಗುರುಸ್ಸಾಕ್ಷಾದ್ಬೃಹಸ್ಪತಿಃ ॥ 354 ॥**

ಅಥ = ಅನಂತರ, ಭೂಷಣೈಃ = ಆಭರಣಗಳಿಂದ, ಭೂಷಿತಾಂಗಸ್ಯ = ಅಲಂಕೃತ ಶರೀರವುಳ್ಳ ಶ್ರೀನಿವಾಸನಿಗೆ, ಕನ್ಯಾದಾನಂ = ಕನ್ಯಾಪ್ರದಾನವನ್ನು, ಅಕರೋತ್ = ಮಾಡಿದನು, ಸಾಕ್ಷಾತ್ = ಪ್ರತ್ಯಕ್ಷನಾದ, ಗುರುಃ = ಕುಲಗುರುವಾದ, ಬೃಹಸ್ಪತಿಃ = ಬೃಹಸ್ಪತ್ಯಾಚಾರ್ಯನು, ಕನ್ಯಾಪ್ರವರಂ = ಕನ್ಯೆಯ ಪ್ರವರವನ್ನು, ಊಚೇ = ಹೇಳಿದನು ॥ 354 ॥

ಬೃಹಸ್ಪತಿರುವಾಚ-

**ಅತ್ರಿಗೋತ್ರಸಮುದ್ಭೂತಾಂ ಸುವೀರಸ್ಯ ಪ್ರಪೌತ್ರಿಕಾಮ್ ।**
**ಸುಧರ್ಮಣಸ್ತು ಪೌತ್ರೀಂ ಚ ಪುತ್ರೀಮಾಕಾಶಭೂಪತೇಃ ॥ 355 ॥**

**ತಾಮಂಗೀಕುರು ಗೋವಿಂದ ಕನ್ಯಾಂ ಕಮಲಲೋಚನಾಮ್ ।**
**ಏವಮುಕ್ತೇ ಮಹಾರಾಜ ಮಧ್ಯೇ ರತ್ನಾಂಬರಂ ದಧತ್ ॥ 356 ॥**

ಬೃಹಸ್ಪತಿರುವಾಚ = ಬೃಹಸ್ಪತ್ಯಾಚಾರ್ಯನು ಹೇಳಹತ್ತಿದನು - ಅತ್ರಿಗೋತ್ರ ಸಮುದ್ಭೂತಾಂ = ಅತ್ರಿಋಷಿಯ ಗೋತ್ರದಲ್ಲಿ ಜನಿಸಿದ, ಸುವೀರಸ್ಯ = ಸುವೀರರಾಜನ, ಪ್ರಪೌತ್ರೀಂ = ಮರಿಮಗಳಾದ, ಸುಧರ್ಮಣಸ್ತು = ಸುಧರ್ಮರಾಜನ, ಪೌತ್ರೀಂ = ಮೊಮ್ಮಗಳಾದ, ಚ = ಮತ್ತು, ಆಕಾಶಭೂಪತೇಃ = ಆಕಾಶರಾಜನ, ಪುತ್ರೀಂ = ಮಗಳಾದ, ಕಮಲಲೋಚನಾಂ = ಕಮಲದಂತೆ ಕಣ್ಣುಗಳುಳ್ಳ, ತಾಂ = ಪದ್ಮಾವತಿಯೆಂಬ, ಕನ್ಯಾಂ = ಕನ್ಯೆಯನ್ನು, ಹೇ ಗೋವಿಂದ = ಎಲೈ ಶ್ರೀನಿವಾಸ! ಅಂಗೀಕುರು = ಸ್ವೀಕರಿಸು, ಮಹಾರಾಜ = ಎಲೈ ಜನಕಮಹಾರಾಜ! ಏವಮುಕ್ತೇ = ಹೀಗೆ ಬೃಹಸ್ಪತ್ಯಾಚಾರ್ಯನು ಹೇಳಲು, ಮಧ್ಯೇ = ವಧೂವರರ ಮಧ್ಯದಲ್ಲಿ, ರತ್ನಾಂಬರಂ = ರತ್ನಮಯ ಶಹಲನ್ನು, ದಧತ್ = ಅಡ್ಡ ಹಿಡಿದರು ॥ 355-356 ॥

*ವಸಿಷ್ಠ ಉವಾಚ -*

**ಪ್ರಪೌತ್ರಸ್ಯ ಯಯಾತೇಸ್ತು ಪೌತ್ರಸ್ಯಾಮಿತತೇಜಸಃ ।**
**ಶೂರಸೇನಸ್ಯ ರಾಜೇಂದ್ರ ವಸುದೇವಸ್ಯ ಭೂಪತೇಃ ॥ 357 ॥**

**ಪುತ್ರಸ್ಯ ವೇಂಕಟೇಶಸ್ಯ ಗೋತ್ರೇ ವಾಸಿಷ್ಠಸಂಜ್ಞಕೇ ।**
**ಜಾತಸ್ಯಾತ್ರಿಕುಲೋತ್ಪನ್ನಾಂ ಕನ್ಯಾಂ ಕನಕಭೂಷಿತಾಮ್ ॥ 358 ॥**

ವಸಿಷ್ಠ ಉವಾಚ = ವಸಿಷ್ಠಮುನಿಯು ಹೇಳಿದನು - ಯಯಾತೇಸ್ತು = ಯಯಾತಿ ಮಹಾರಾಜನ, ಪ್ರಪೌತ್ರಸ್ಯ = ಮರಿಮಗನಾದ, ಅಮಿತತೇಜಸಃ = ಅತಿಶಯ ತೇಜಸ್ವಿಯಾದ, ಶೂರಸೇನಸ್ಯ = ಶೂರಸೇನ ಮಹಾರಾಜನ, ಪೌತ್ರಸ್ಯ = ಮೊಮ್ಮಗನಾದ, ರಾಜೇಂದ್ರ = ಎಲೈ ಜನಕರಾಯ! ವಸುದೇವಸ್ಯ ಭೂಪತೇಃ = ವಸುದೇವ ಮಹಾರಾಜನ, ಪುತ್ರಸ್ಯ = ಮಗನಾದ, ವಾಸಿಷ್ಠಸಂಜ್ಞಕೇ = ವಸಿಷ್ಠ ಎಂಬ ಸಂಜ್ಞೆಯ, ಗೋತ್ರೇ = ಗೋತ್ರದಲ್ಲಿ, ಜಾತಸ್ಯ = ಅವತರಿಸಿದ, ವೇಂಕಟೇಶಸ್ಯ = ಶ್ರೀವೇಂಕಟೇಶನಿಗೆ, ಅತ್ರಿಕುಲೋತ್ಪನ್ನಾಂ = ಅತ್ರಿಋಷಿಯ ವಂಶ (ಗೋತ್ರ)ದಲ್ಲಿ ಜನಿಸಿದ, ಕನಕಭೂಷಿತಾಂ = ಸ್ವರ್ಣಾಭರಣಗಳಿಂದ ಭೂಷಿತಳಾದ, ಕನ್ಯಾಂ = ಕನ್ಯೆಯನ್ನು ॥ 357-358 ॥

**ಗೃಹಿಷ್ಯಾಮೋ ವಯಂ ರಾಜಂಸ್ತವ ಪುತ್ರೀಂ ನೃಪೋತ್ತಮ ।**
**ಕನ್ಯಾವರಪ್ರವರಯೋರಿತ್ಯುಚ್ಚಾರಿತಯೋರಥ ॥ 359 ॥**

**ಧರಣ್ಯಾ ಸಹ ರಾಜೇಂದ್ರಃ ಕನ್ಯಾದಾನಪರಾಯಣಃ ।**
**ಪ್ರಹೃಷ್ಟಹೃದಯಃ ಪ್ರಾಹ ಶ್ರೀನಿವಾಸಂ ಪರಾತ್ಪರಮ್ ॥ 360 ॥**

ರಾಜನ್ = ಎಲೈ ಆಕಾಶರಾಜನೇ! ತವ ಪುತ್ರೀಂ = ನಿನ್ನ ಕುಮಾರಿಯನ್ನು, ವಯಂ = ನಾವು, ಗೃಹಿಷ್ಯಾಮಃ = ಸ್ವೀಕರಿಸುತ್ತೇವೆ. ಕನ್ಯಾವರ ಪ್ರವರಯೋಃ = ಕನ್ಯಾ-ವರರ ಪ್ರವರಗಳನ್ನು, ಇತಿ = ಹೀಗೆ, ಉಚ್ಚಾರಿತಯೋಃ = ಉಚ್ಚಾರ ಮಾಡಿದಮೇಲೆ, ಅಥ = ಆ ತರುವಾಯ, ಕನ್ಯಾದಾನ ಪರಾಯಣಃ = ಕನ್ಯಾದಾನಮಾಡುವುದರಲ್ಲಿ ಆಸಕ್ತನಾದ, ರಾಜೇಂದ್ರಃ = ಆಕಾಶರಾಜನು, ಧರಣ್ಯಾ ಸಹ = ಧರಣೀ ದೇವಿಯಿಂದೊಡಗೂಡಿ, ಪ್ರಹೃಷ್ಟಹೃದಯಃ = ಸಂತುಷ್ಟ ಮನಸ್ಸುಳ್ಳವನಾಗಿ, ಪರಾತ್ಪರಂ = ಸರ್ವೋತ್ತಮನಾದ, ಶ್ರೀನಿವಾಸಂ = ಶ್ರೀನಿವಾಸನನ್ನು ಕುರಿತು, ಪ್ರಾಹ = ಹೇಳಿದನು ॥ 359-360 ॥

**ನಾಗಭೂಷಣಯುಗ್ಮಂ ಚ ಬಾಹುಪೂರಾದಿಕಾಂಸ್ತಥಾ ।**
**ಭೂಷಣಾನ್ಯಂಗುಲೀಯಾಂಶ್ಚ ದಶಾನಾಂ ವೀರಮುದ್ರಿಕಾಮ್ ॥ 350 ॥**

ನಾಗಭೂಷಣಯುಗ್ಮಂ = ನಾಗರಹೆಡೆಯುಳ್ಳ ಎರಡು (ತೊಡಾ) ಆಭರಣಗಳನ್ನು, ಬಾಹುಪೂರಾದಿಕಾಂ ತಥಾ = ನಾಗಮುರುಗೆ ಮುಂತಾದ, ಭೂಷಣಾನಿ = ಬಗೆಬಗೆಯ ಆಭರಣಗಳನ್ನೂ, ದಶಾನಾಂ = ಹತ್ತು, ಅಂಗುಲೀಯಾಂಶ್ಚ = ಉಂಗುರಗಳನ್ನೂ, ವೀರಮುದ್ರಕಾಂ = ವೀರಮುದ್ರಾ ಉಂಗುರವನ್ನೂ ॥ 350 ॥

**ಕಟಿಸೂತ್ರಂ ಸ್ವರ್ಣಮಯಂ ವರವಜ್ರಸಮನ್ವಿತಮ್ ।**
**ಏಕಾದಶ ಶತೀಭಾರಂ ಬಹುರತ್ನಸಮನ್ವಿತಮ್ ॥ 351 ॥**
**ಪಾದುಕೇ ಚ ತತೋ ರಾಜಾ ದತ್ತವಾನ್ ಮಧುಘಾತಿನೇ ।**
**ದದೌ ಭೋಜನಪಾತ್ರಂ ಚ ಷಷ್ಟಿಭಾರಯುತಂ ಪ್ರಭೋಃ ॥ 352 ॥**

ವರವಜ್ರಸಮನ್ವಿತಂ = ಶ್ರೇಷ್ಠವಜ್ರಗಳಿಂದ ಖಚಿತವಾದ, ಸ್ವರ್ಣಮಯಂ = ಬಂಗಾರಮಯವಾದ, ಏಕಾದಶ ಶತಭಾರಂ = ಒಂದು ಸಾವಿರದನೂರು ಭಾರ ತೂಕದ, ಕಟಿಸೂತ್ರಂ = ಕಟಿಸೂತ್ರಂ (ಉಡುದಾರ)ವನ್ನೂ, ಬಹುರತ್ನಸಮನ್ವಿತಂ = ಅನೇಕ ರತ್ನಗಳಿಂದ ಕೂಡಿದ, ಪಾದುಕೇ = ಎರಡು ಪಾದುಕೆಗಳನ್ನೂ, ತತಃ = ಅನಂತರ, ರಾಜಾ = ಆಕಾಶರಾಜನು, ಮಧುಘಾತಿನೇ = ಮಧುನಾಮಕದೈತ್ಯಸಂಹಾರಕನಾದ ಶ್ರೀಹರಿಗೆ, ಷಷ್ಟಿಭಾರಯುತಂ = ಸಾವಿರದ ಇನ್ನೂರು ತೊಲೆಯ ತೂಕವುಳ್ಳ, ಭೋಜನಪಾತ್ರಂ = ಬಂಗಾರದ ಊಟದ ತಟ್ಟೆ (ಅಥವಾ) ಬಂಗಾರದ ಊಟದ ಎಲೆ)ಯನ್ನು, ಪ್ರಭೋಃ = ಸ್ವಾಮಿಯಾದ ಶ್ರೀನಿವಾಸನಿಗೆ, ದದೌ = ಕೊಟ್ಟನು ॥ 351-352 ॥

**ಲಘುಪಾತ್ರಸಮೋಪೇತಂ ಬೃಹತ್ಪಾತ್ರಮಪಾಂ ತಥಾ ।**
**ಕಂಬಲಾನಾಂ ಚತುಃಶಷ್ಟಿಂ ದತ್ತವಾನ್ರಾಜಸತ್ತಮಃ ॥ 353 ॥**

ಲಘುಪಾತ್ರಸಮೋಪೇತಂ = ಸಣ್ಣಪಾತ್ರೆಗಳಿಗೆ ಸಮನಾಗಿ, ಬೃಹತ್ಪಾತ್ರಮಪಾಂ = ದೊಡ್ಡ ದೊಡ್ಡ ನೀರುತುಂಬುವ ಪಾತ್ರೆಗಳ ಸಮೂಹವನ್ನು, ತಥಾ = ಅದರಂತೆಯೇ, ರಾಜಸತ್ತಮಃ = ಆಕಾಶರಾಜನು, ಕಂಬಲಾನಾಂ = ಕಂಬಳಿಗಳು (ರತ್ನಕಂಬಳಿಗಳು) ಚತುಃಷಷ್ಟಿಂ = ಅರವತ್ನಾಲ್ಕನ್ನು, ದತ್ತವಾನ್. = ಕೊಡುವವನಾದನು ॥ 353 ॥

**ಭೂಷಣೈರ್ಭೂಷಿತಾಂಗಸ್ಯ ಕನ್ಯಾದಾನಮಥಾಕರೋತ್ ।**
**ಕನ್ಯಾಪ್ರವರಮೂಚೇಽಥ ಗುರುಸ್ಸಾಕ್ಷಾದ್ಬೃಹಸ್ಪತಿಃ ॥ 354 ॥**

ಅಥ = ಅನಂತರ, ಭೂಷಣೈಃ = ಆಭರಣಗಳಿಂದ, ಭೂಷಿತಾಂಗಸ್ಯ = ಅಲಂಕೃತ ಶರೀರವುಳ್ಳ ಶ್ರೀನಿವಾಸನಿಗೆ, ಕನ್ಯಾದಾನಂ = ಕನ್ಯಾಪ್ರದಾನವನ್ನು, ಅಕರೋತ್ = ಮಾಡಿದನು, ಸಾಕ್ಷಾತ್ = ಪ್ರತ್ಯಕ್ಷನಾದ, ಗುರುಃ = ಕುಲಗುರುವಾದ, ಬೃಹಸ್ಪತಿಃ = ಬೃಹಸ್ಪತ್ಯಾಚಾರ್ಯನು, ಕನ್ಯಾಪ್ರವರಂ = ಕನ್ಯೆಯ ಪ್ರವರವನ್ನು, ಊಚೇ = ಹೇಳಿದನು ॥ 354 ॥

ಬೃಹಸ್ಪತಿರುವಾಚ-

**ಅತ್ರಿಗೋತ್ರಸಮುದ್ಭೂತಾಂ ಸುವೀರಸ್ಯ ಪ್ರಪೌತ್ರಿಕಾಮ್ ।**
**ಸುಧರ್ಮಣಸ್ತು ಪೌತ್ರೀಂ ಚ ಪುತ್ರೀಮಾಕಾಶಭೂಪತೇಃ ॥ 355 ॥**

**ತಾಮಂಗೀಕುರು ಗೋವಿಂದ ಕನ್ಯಾಂ ಕಮಲಲೋಚನಾಮ್ ।**
**ಏವಮುಕ್ತೇ ಮಹಾರಾಜ ಮಧ್ಯೇ ರತ್ನಾಂಬರಂ ದಧತ್ ॥ 356 ॥**

ಬೃಹಸ್ಪತಿರುವಾಚ = ಬೃಹಸ್ಪತ್ಯಾಚಾರ್ಯನು ಹೇಳಹತ್ತಿದನು - ಅತ್ರಿಗೋತ್ರ ಸಮುದ್ಭೂತಾಂ = ಅತ್ರಿಋಷಿಯ ಗೋತ್ರದಲ್ಲಿ ಜನಿಸಿದ, ಸುವೀರಸ್ಯ = ಸುವೀರರಾಜನ, ಪ್ರಪೌತ್ರೀಂ = ಮರಿಮಗಳಾದ, ಸುಧರ್ಮಣಸ್ತು = ಸುಧರ್ಮರಾಜನ, ಪೌತ್ರೀಂ = ಮೊಮ್ಮಗಳಾದ, ಚ = ಮತ್ತು, ಆಕಾಶಭೂಪತೇಃ = ಆಕಾಶರಾಜನ, ಪುತ್ರೀಂ = ಮಗಳಾದ, ಕಮಲಲೋಚನಾಂ = ಕಮಲದಂತೆ ಕಣ್ಣುಗಳುಳ್ಳ, ತಾಂ = ಪದ್ಮಾವತಿಯೆಂಬ, ಕನ್ಯಾಂ = ಕನ್ಯೆಯನ್ನು, ಹೇ ಗೋವಿಂದ = ಎಲೈ ಶ್ರೀನಿವಾಸ! ಅಂಗೀಕುರು = ಸ್ವೀಕರಿಸು, ಮಹಾರಾಜ = ಎಲೈ ಜನಕಮಹಾರಾಜ! ಏವಮುಕ್ತೇ = ಹೀಗೆ ಬೃಹಸ್ಪತ್ಯಾಚಾರ್ಯನು ಹೇಳಲು, ಮಧ್ಯೇ = ವಧೂವರರ ಮಧ್ಯದಲ್ಲಿ, ರತ್ನಾಂಬರಂ = ರತ್ನಮಯ ಶಹಲನ್ನು, ದಧತ್ = ಅಡ್ಡ ಹಿಡಿದರು ॥ 355-356 ॥

*ವಸಿಷ್ಠ ಉವಾಚ -*

**ಪ್ರಪೌತ್ರಸ್ಯ ಯಯಾತೇಸ್ತು ಪೌತ್ರಸ್ಯಾಮಿತತೇಜಸಃ ।**
**ಶೂರಸೇನಸ್ಯ ರಾಜೇಂದ್ರ ವಸುದೇವಸ್ಯ ಭೂಪತೇಃ ॥ 357 ॥**

**ಪುತ್ರಸ್ಯ ವೇಂಕಟೇಶಸ್ಯ ಗೋತ್ರೇ ವಾಸಿಷ್ಠಸಂಜ್ಞಕೇ ।**
**ಜಾತಸ್ಯಾತ್ರಿಕುಲೋತ್ಪನ್ನಾಂ ಕನ್ಯಾಂ ಕನಕಭೂಷಿತಾಮ್ ॥ 358 ॥**

ವಸಿಷ್ಠ ಉವಾಚ = ವಸಿಷ್ಠಮುನಿಯು ಹೇಳಿದನು - ಯಯಾತೇಸ್ತು = ಯಯಾತಿ ಮಹಾರಾಜನ, ಪ್ರಪೌತ್ರಸ್ಯ = ಮರಿಮಗನಾದ, ಅಮಿತತೇಜಸಃ = ಅತಿಶಯ ತೇಜಸ್ವಿಯಾದ, ಶೂರಸೇನಸ್ಯ = ಶೂರಸೇನ ಮಹಾರಾಜನ, ಪೌತ್ರಸ್ಯ = ಮೊಮ್ಮಗನಾದ, ರಾಜೇಂದ್ರ = ಎಲೈ ಜನಕರಾಯ! ವಸುದೇವಸ್ಯ ಭೂಪತೇಃ = ವಸುದೇವ ಮಹಾರಾಜನ, ಪುತ್ರಸ್ಯ = ಮಗನಾದ, ವಾಸಿಷ್ಠಸಂಜ್ಞಕೇ = ವಸಿಷ್ಠ ಎಂಬ ಸಂಜ್ಞೆಯ, ಗೋತ್ರೇ = ಗೋತ್ರದಲ್ಲಿ, ಜಾತಸ್ಯ = ಅವತರಿಸಿದ, ವೇಂಕಟೇಶಸ್ಯ = ಶ್ರೀವೇಂಕಟೇಶನಿಗೆ, ಅತ್ರಿಕುಲೋತ್ಪನ್ನಾಂ = ಅತ್ರಿಋಷಿಯ ವಂಶ (ಗೋತ್ರ)ದಲ್ಲಿ ಜನಿಸಿದ, ಕನಕಭೂಷಿತಾಂ = ಸ್ವರ್ಣಾಭರಣಗಳಿಂದ ಭೂಷಿತಳಾದ, ಕನ್ಯಾಂ = ಕನ್ಯೆಯನ್ನು ॥ 357-358 ॥

**ಗೃಹಿಷ್ಯಾಮೋ ವಯಂ ರಾಜಂಸ್ತವ ಪುತ್ರೀಂ ನೃಪೋತ್ತಮ ।**
**ಕನ್ಯಾವರಪ್ರವರಯೋರಿತ್ಯುಚ್ಚಾರಿತಯೋರಥ ॥ 359 ॥**

**ಧರಣ್ಯಾ ಸಹ ರಾಜೇಂದ್ರಃ ಕನ್ಯಾದಾನಪರಾಯಣಃ ।**
**ಪ್ರಹೃಷ್ಟಹೃದಯಃ ಪ್ರಾಹ ಶ್ರೀನಿವಾಸಂ ಪರಾತ್ಪರಮ್ ॥ 360 ॥**

ರಾಜನ್ = ಎಲೈ ಆಕಾಶರಾಜನೇ! ತವ ಪುತ್ರೀಂ = ನಿನ್ನ ಕುಮಾರಿಯನ್ನು, ವಯಂ = ನಾವು, ಗೃಹಿಷ್ಯಾಮಃ = ಸ್ವೀಕರಿಸುತ್ತೇವೆ. ಕನ್ಯಾವರ ಪ್ರವರಯೋಃ = ಕನ್ಯಾ-ವರರ ಪ್ರವರಗಳನ್ನು, ಇತಿ = ಹೀಗೆ, ಉಚ್ಚಾರಿತಯೋಃ = ಉಚ್ಚಾರ ಮಾಡಿದಮೇಲೆ, ಅಥ = ಆ ತರುವಾಯ, ಕನ್ಯಾದಾನ ಪರಾಯಣಃ = ಕನ್ಯಾದಾನಮಾಡುವುದರಲ್ಲಿ ಆಸಕ್ತನಾದ, ರಾಜೇಂದ್ರಃ = ಆಕಾಶರಾಜನು, ಧರಣ್ಯಾ ಸಹ = ಧರಣೀ ದೇವಿಯಿಂದೊಡಗೂಡಿ, ಪ್ರಹೃಷ್ಟಹೃದಯಃ = ಸಂತುಷ್ಟ ಮನಸ್ಸುಳ್ಳವನಾಗಿ, ಪರಾತ್ಪರಂ = ಸರ್ವೋತ್ತಮನಾದ, ಶ್ರೀನಿವಾಸಂ = ಶ್ರೀನಿವಾಸನನ್ನು ಕುರಿತು, ಪ್ರಾಹ = ಹೇಳಿದನು ॥ 359-360 ॥

**ನಾಗಭೂಷಣಯುಗ್ಮಂ ಚ ಬಾಹುಪೂರಾದಿಕಾಂಸ್ತಥಾ ।**
**ಭೂಷಣಾನ್ಯಂಗುಲೀಯಾಂಶ್ಚ ದಶಾನಾಂ ವೀರಮುದ್ರಿಕಾಮ್ ॥ 350 ॥**

ನಾಗಭೂಷಣಯುಗ್ಮಂ = ನಾಗರಹೆಡೆಯುಳ್ಳ ಎರಡು (ತೊಡಾ) ಆಭರಣಗಳನ್ನು, ಬಾಹುಪೂರಾದಿಕಾಂ ತಥಾ = ನಾಗಮುರುಗೆ ಮುಂತಾದ, ಭೂಷಣಾನಿ = ಬಗೆಬಗೆಯ ಆಭರಣಗಳನ್ನೂ, ದಶಾನಾಂ = ಹತ್ತು, ಅಂಗುಲೀಯಾಂಶ್ಚ = ಉಂಗುರಗಳನ್ನೂ, ವೀರಮುದ್ರಕಾಂ = ವೀರಮುದ್ರಾ ಉಂಗುರವನ್ನೂ ॥ 350 ॥

**ಕಟಿಸೂತ್ರಂ ಸ್ವರ್ಣಮಯಂ ವರವಜ್ರಸಮನ್ವಿತಮ್ ।**
**ಏಕಾದಶ ಶತೀಭಾರಂ ಬಹುರತ್ನಸಮನ್ವಿತಮ್ ॥ 351 ॥**
**ಪಾದುಕೇ ಚ ತತೋ ರಾಜಾ ದತ್ತವಾನ್ ಮಧುಘಾತಿನೇ ।**
**ದದೌ ಭೋಜನಪಾತ್ರಂ ಚ ಷಷ್ಟಿಭಾರಯುತಂ ಪ್ರಭೋಃ ॥ 352 ॥**

ವರವಜ್ರಸಮನ್ವಿತಂ = ಶ್ರೇಷ್ಠವಜ್ರಗಳಿಂದ ಖಚಿತವಾದ, ಸ್ವರ್ಣಮಯಂ = ಬಂಗಾರಮಯವಾದ, ಏಕಾದಶ ಶತಭಾರಂ = ಒಂದು ಸಾವಿರದನೂರು ಭಾರ ತೂಕದ, ಕಟಿಸೂತ್ರಂ = ಕಟಿಸೂತ್ರಂ (ಉಡುದಾರ)ವನ್ನೂ, ಬಹುರತ್ನಸಮನ್ವಿತಂ = ಅನೇಕ ರತ್ನಗಳಿಂದ ಕೂಡಿದ, ಪಾದುಕೇ = ಎರಡು ಪಾದುಕೆಗಳನ್ನೂ, ತತಃ = ಅನಂತರ, ರಾಜಾ = ಆಕಾಶರಾಜನು, ಮಧುಘಾತಿನೇ = ಮಧುನಾಮಕದೈತ್ಯಸಂಹಾರಕನಾದ ಶ್ರೀಹರಿಗೆ, ಷಷ್ಟಿಭಾರಯುತಂ = ಸಾವಿರದ ಇನ್ನೂರು ತೊಲೆಯ ತೂಕವುಳ್ಳ, ಭೋಜನಪಾತ್ರಂ = ಬಂಗಾರದ ಊಟದ ತಟ್ಟೆ (ಅಥವಾ) ಬಂಗಾರದ ಊಟದ ಎಲೆ)ಯನ್ನು, ಪ್ರಭೋಃ = ಸ್ವಾಮಿಯಾದ ಶ್ರೀನಿವಾಸನಿಗೆ, ದದೌ = ಕೊಟ್ಟನು ॥ 351-352 ॥

**ಲಘುಪಾತ್ರಸಮೋಪೇತಂ ಬೃಹತ್ಪಾತ್ರಮಪಾಂ ತಥಾ ।**
**ಕಂಬಲಾನಾಂ ಚತುಃಶಷ್ಟಿಂ ದತ್ತವಾನ್ರಾಜಸತ್ತಮಃ ॥ 353 ॥**

ಲಘುಪಾತ್ರಸಮೋಪೇತಂ = ಸಣ್ಣಪಾತ್ರೆಗಳಿಗೆ ಸಮನಾಗಿ, ಬೃಹತ್ಪಾತ್ರಮಪಾಂ = ದೊಡ್ಡ ದೊಡ್ಡ ನೀರುತುಂಬುವ ಪಾತ್ರೆಗಳ ಸಮೂಹವನ್ನು, ತಥಾ = ಅದರಂತೆಯೇ, ರಾಜಸತ್ತಮಃ = ಆಕಾಶರಾಜನು, ಕಂಬಲಾನಾಂ = ಕಂಬಳಿಗಳು (ರತ್ನಕಂಬಳಿಗಳು) ಚತುಃಷಷ್ಟಿಂ = ಅರವತ್ನಾಲ್ಕನ್ನು, ದತ್ತವಾನ್ = ಕೊಡುವವನಾದನು ॥ 353 ॥

**ಭೂಷಣೈರ್ಭೂಷಿತಾಂಗಸ್ಯ ಕನ್ಯಾದಾನಮಥಾಕರೋತ್ ।**
**ಕನ್ಯಾಪ್ರವರಮೂಚೇಽಥ ಗುರುಸ್ಸಾಕ್ಷಾದ್ಬೃಹಸ್ಪತಿಃ ॥ 354 ॥**

ಅಥ = ಅನಂತರ, ಭೂಷಣೈಃ = ಆಭರಣಗಳಿಂದ, ಭೂಷಿತಾಂಗಸ್ಯ = ಅಲಂಕೃತ ಶರೀರವುಳ್ಳ ಶ್ರೀನಿವಾಸನಿಗೆ, ಕನ್ಯಾದಾನಂ = ಕನ್ಯಾಪ್ರದಾನವನ್ನು, ಅಕರೋತ್ = ಮಾಡಿದನು, ಸಾಕ್ಷಾತ್ = ಪ್ರತ್ಯಕ್ಷನಾದ, ಗುರುಃ = ಕುಲಗುರುವಾದ, ಬೃಹಸ್ಪತಿಃ = ಬೃಹಸ್ಪತ್ಯಾಚಾರ್ಯನು, ಕನ್ಯಾಪ್ರವರಂ = ಕನ್ಯೆಯ ಪ್ರವರವನ್ನು, ಊಚೇ = ಹೇಳಿದನು ॥ 354 ॥

ಬೃಹಸ್ಪತಿರುವಾಚ-

**ಅತ್ರಿಗೋತ್ರಸಮುದ್ಭೂತಾಂ ಸುವೀರಸ್ಯ ಪ್ರಪೌತ್ರಿಕಾಮ್ ।**
**ಸುಧರ್ಮಣಸ್ತು ಪೌತ್ರೀಂ ಚ ಪುತ್ರೀಮಾಕಾಶಭೂಪತೇಃ ॥ 355 ॥**

**ತಾಮಂಗೀಕುರು ಗೋವಿಂದ ಕನ್ಯಾಂ ಕಮಲಲೋಚನಾಮ್ ।**
**ಏವಮುಕ್ತೇ ಮಹಾರಾಜ ಮಧ್ಯೇ ರತ್ನಾಂಬರಂ ದಧತ್ ॥ 356 ॥**

ಬೃಹಸ್ಪತಿರುವಾಚ = ಬೃಹಸ್ಪತ್ಯಾಚಾರ್ಯನು ಹೇಳಹತ್ತಿದನು - ಅತ್ರಿಗೋತ್ರ ಸಮುದ್ಭೂತಾಂ = ಅತ್ರಿಋಷಿಯ ಗೋತ್ರದಲ್ಲಿ ಜನಿಸಿದ, ಸುವೀರಸ್ಯ = ಸುವೀರರಾಜನ, ಪ್ರಪೌತ್ರೀಂ = ಮರಿಮಗಳಾದ, ಸುಧರ್ಮಣಸ್ತು = ಸುಧರ್ಮರಾಜನ, ಪೌತ್ರೀಂ = ಮೊಮ್ಮಗಳಾದ, ಚ = ಮತ್ತು, ಆಕಾಶಭೂಪತೇಃ = ಆಕಾಶರಾಜನ, ಪುತ್ರೀಂ = ಮಗಳಾದ, ಕಮಲಲೋಚನಾಂ = ಕಮಲದಂತೆ ಕಣ್ಣುಗಳುಳ್ಳ, ತಾಂ = ಪದ್ಮಾವತಿಯೆಂಬ, ಕನ್ಯಾಂ = ಕನ್ಯೆಯನ್ನು, ಹೇ ಗೋವಿಂದ = ಎಲೈ ಶ್ರೀನಿವಾಸ! ಅಂಗೀಕುರು = ಸ್ವೀಕರಿಸು, ಮಹಾರಾಜ = ಎಲೈ ಜನಕಮಹಾರಾಜ! ಏವಮುಕ್ತೇ = ಹೀಗೆ ಬೃಹಸ್ಪತ್ಯಾಚಾರ್ಯನು ಹೇಳಲು, ಮಧ್ಯೇ = ವಧೂವರರ ಮಧ್ಯದಲ್ಲಿ, ರತ್ನಾಂಬರಂ = ರತ್ನಮಯ ಶಹಲನ್ನು, ದಧತ್ = ಅಡ್ಡ ಹಿಡಿದರು ॥ 355-356 ॥

ವಸಿಷ್ಠ ಉವಾಚ -

**ಪ್ರಪೌತ್ರಸ್ಯ ಯಯಾತೇಸ್ತು ಪೌತ್ರಸ್ಯಾಮಿತತೇಜಸಃ ।**
**ಶೂರಸೇನಸ್ಯ ರಾಜೇಂದ್ರ ವಸುದೇವಸ್ಯ ಭೂಪತೇಃ ॥ 357 ॥**

**ಪುತ್ರಸ್ಯ ವೇಂಕಟೇಶಸ್ಯ ಗೋತ್ರೇ ವಾಸಿಷ್ಠಸಂಜ್ಞಕೇ ।**
**ಜಾತಸ್ಯಾತ್ರಿಕುಲೋತ್ಪನ್ನಾಂ ಕನ್ಯಾಂ ಕನಕಭೂಷಿತಾಮ್ ॥ 358 ॥**

ವಸಿಷ್ಠ ಉವಾಚ = ವಸಿಷ್ಠಮುನಿಯು ಹೇಳಿದನು - ಯಯಾತೇಸ್ತು = ಯಯಾತಿ ಮಹಾರಾಜನ, ಪ್ರಪೌತ್ರಸ್ಯ = ಮರಿಮಗನಾದ, ಅಮಿತತೇಜಸಃ = ಅತಿಶಯ ತೇಜಸ್ವಿಯಾದ, ಶೂರಸೇನಸ್ಯ = ಶೂರಸೇನ ಮಹಾರಾಜನ, ಪೌತ್ರಸ್ಯ = ಮೊಮ್ಮಗನಾದ, ರಾಜೇಂದ್ರ = ಎಲೈ ಜನಕರಾಯ! ವಸುದೇವಸ್ಯ ಭೂಪತೇಃ = ವಸುದೇವ ಮಹಾರಾಜನ, ಪುತ್ರಸ್ಯ = ಮಗನಾದ, ವಾಸಿಷ್ಠಸಂಜ್ಞಕೇ = ವಸಿಷ್ಠ ಎಂಬ ಸಂಜ್ಞೆಯ, ಗೋತ್ರೇ = ಗೋತ್ರದಲ್ಲಿ, ಜಾತಸ್ಯ = ಅವತರಿಸಿದ, ವೇಂಕಟೇಶಸ್ಯ = ಶ್ರೀವೇಂಕಟೇಶನಿಗೆ, ಅತ್ರಿಕುಲೋತ್ಪನ್ನಾಂ = ಅತ್ರಿಋಷಿಯ ವಂಶ (ಗೋತ್ರ)ದಲ್ಲಿ ಜನಿಸಿದ, ಕನಕಭೂಷಿತಾಂ = ಸ್ವರ್ಣಾಭರಣಗಳಿಂದ ಭೂಷಿತಳಾದ, ಕನ್ಯಾಂ = ಕನ್ಯೆಯನ್ನು ॥ 357-358 ॥

**ಗೃಹಿಷ್ಯಾಮೋ ವಯಂ ರಾಜಂಸ್ತವ ಪುತ್ರೀಂ ನೃಪೋತ್ತಮ ।**
**ಕನ್ಯಾವರಪ್ರವರಯೋರಿತ್ಯುಚ್ಚಾರಿತಯೋರಥ ॥ 359 ॥**

**ಧರಣ್ಯಾ ಸಹ ರಾಜೇಂದ್ರಃ ಕನ್ಯಾದಾನಪರಾಯಣಃ ।**
**ಪ್ರಹೃಷ್ಟಹೃದಯಃ ಪ್ರಾಹ ಶ್ರೀನಿವಾಸಂ ಪರಾತ್ಪರಮ್ ॥ 360 ॥**

ರಾಜನ್ = ಎಲೈ ಆಕಾಶರಾಜನೇ! ತವ ಪುತ್ರೀಂ = ನಿನ್ನ ಕುಮಾರಿಯನ್ನು, ವಯಂ = ನಾವು, ಗೃಹಿಷ್ಯಾಮಃ = ಸ್ವೀಕರಿಸುತ್ತೇವೆ. ಕನ್ಯಾವರ ಪ್ರವರಯೋಃ = ಕನ್ಯಾ-ವರರ ಪ್ರವರಗಳನ್ನು, ಇತಿ = ಹೀಗೆ, ಉಚ್ಚಾರಿತಯೋಃ = ಉಚ್ಚಾರ ಮಾಡಿದಮೇಲೆ, ಅಥ = ಆ ತರುವಾಯ, ಕನ್ಯಾದಾನ ಪರಾಯಣಃ = ಕನ್ಯಾದಾನಮಾಡುವುದರಲ್ಲಿ ಆಸಕ್ತನಾದ, ರಾಜೇಂದ್ರಃ = ಆಕಾಶರಾಜನು, ಧರಣ್ಯಾ ಸಹ = ಧರಣೀ ದೇವಿಯಿಂದೊಡಗೂಡಿ, ಪ್ರಹೃಷ್ಟಹೃದಯಃ = ಸಂತುಷ್ಟ ಮನಸ್ಸುಳ್ಳವನಾಗಿ, ಪರಾತ್ಪರಂ = ಸರ್ವೋತ್ತಮನಾದ, ಶ್ರೀನಿವಾಸಂ = ಶ್ರೀನಿವಾಸನನ್ನು ಕುರಿತು, ಪ್ರಾಹ = ಹೇಳಿದನು ॥ 359-360 ॥

*ಆಕಾಶರಾಜ ಉವಾಚ -*

**ಕನ್ಯಾಮಿಮಾಂ ಪ್ರದಾಸ್ಯಾಮಿ ಗೃಹಾಣ ಪುರುಷೋತ್ತಮ ।**
**ಇತ್ಯುಕ್ತ್ವಾ ಪ್ರಾಕ್ಷಿಪದ್ರಾಜಾ ಧರಣ್ಯಾ ಸ್ರಾವಿತಾಂ ತದಾ ॥ 361 ॥**

**ಮಂತ್ರಪೂತಾಂ ಸ್ವಾಮಿತೀರ್ಥಧಾರಾಂ ಸಕನಕಾಂ ಕರೇ ।**
**ದಕ್ಷಿಣೇ ಶ್ರೀನಿವಾಸಸ್ಯ ದದೌ ಪದ್ಮಾವತೀಂ ತತಃ ॥ 362 ॥**

ಆಕಾಶರಾಜ ಉವಾಚ = ಆಕಾಶರಾಜನು ಹೇಳಿದನು – ಪುರುಷೋತ್ತಮ = ಎಲೈ ಪುರುಷೋತ್ತಮನೇ! ಇಮಾಂ ಕನ್ಯಾಂ = ಈ ನನ್ನ ಕನ್ಯೆಯನ್ನು, ಪ್ರದಾಸ್ಯಾಮಿ = ಕೊಡುತ್ತಿದ್ದೇನೆ, ಗೃಹಾಣ = ಸ್ವೀಕರಿಸು, ಇತ್ಯುಕ್ತ್ವಾ = ಹೀಗೆ ಹೇಳಿ, ರಾಜಾ = ಆಕಾಶರಾಜನು, ತದಾ = ಆವಾಗ, ಧರಣ್ಯಾ = ಧರಣೀದೇವಿಯಿಂದ, ಸ್ರಾವಿತಾಂ = ಧಾರಾಕಾರವಾಗಿ ಸುರಿಸಲ್ಪಟ್ಟ, ಮಂತ್ರಪೂತಾಂ = ವೇದಮಂತ್ರಗಳಿಂದ ಪಾವನವಾದ, ಸಕನಕಾಂ = ಸುವರ್ಣಸಹಿತವಾದ, ಸ್ವಾಮಿತೀರ್ಥಧಾರಾಂ = ಸ್ವಾಮಿಪುಷ್ಕರಣಿಯ ಜಲಧಾರೆಯನ್ನು, ಶ್ರೀನಿವಾಸಸ್ಯ = ಶ್ರೀನಿವಾಸನ, ದಕ್ಷಿಣೇಕರೇ = ಬಲಕರದಲ್ಲಿ, ಪ್ರಾಕ್ಷಿಪತ್ = ಬಿಟ್ಟನು. ತತಃ = ಆನಂತರ, ಪದ್ಮಾವತೀಂ = ಪದ್ಮಾವತಿಯನ್ನು, ದದೌ = ಕನ್ಯಾದಾನ ಮಾಡಿಕೊಟ್ಟನು ॥361–362॥

**ವಿಧಾನಂ ಚ ತತಶ್ಚಕ್ರೇ ರಾಜೇಂದ್ರ ಸ್ಸಪುರೋಹಿತಃ ।**
**ಪೂಜಯಿತ್ವಾ ಜಗನ್ನಾಥಂ ಗಂಧವಸ್ತ್ರಾನುಲೇಪನೈಃ ॥ 363 ॥**

**ಕಂಕಣಂ ಬಂಧಯಾಮಾಸ ವಾಸುದೇವಕರಾಂಬುಜೇ ।**
**ಪದ್ಮಾವತ್ಯಾ ಕರಾಂಭೋಜೇಽಬಂಧಯತ್ಕಂಕಣಂ ಗುರುಃ ॥ 364 ॥**

ತತಃ = ಆ ಬಳಿಕ, ಸಪುರೋಹಿತಃ = ಪುರೋಹಿತನಿಂದ ಸಹಿತನಾದ, ರಾಜೇಂದ್ರಃ = ಆಕಾಶರಾಜನು, ವಿಧಾನಂ ಚ = ವಿಧಿನಿಯಮವನ್ನೂ, ಚಕ್ರೇ = ಮಾಡಿದನು. ಜಗನ್ನಾಥಂ = ಶ್ರೀನಿವಾಸನನ್ನು, ಗಂಧವಸ್ತ್ರಾನುಲೇಪನೈಃ = ಸುಗಂಧವಸ್ತ್ರ ಅನುಲೇಪನಾದಿಗಳಿಂದ, ಪೂಜಯಿತ್ವಾ = ಪೂಜೆಮಾಡಿ, ವಾಸುದೇವಕರಾಂಬುಜೇ = ಶ್ರೀನಿವಾಸನ ಕರಕಮಲದಲ್ಲಿ ಕಂಕಣಂ = ಕಂಕಣವನ್ನು, ಬಂಧಯಾಮಾಸ = ಕಟ್ಟಿಸಿದನು. ಗುರುಃ = ಬೃಹಸ್ಪತಿಯು, ಪದ್ಮಾವತ್ಯಾಃ = ಪದ್ಮಾವತಿಯ, ಕರಾಂಭೋಜೇ = ಕರಕಮಲದಲ್ಲಿ, ಕಂಕಣಂ = ಕಂಕಣವನ್ನು, ಅಬಂಧಯತ್ = ಕಟ್ಟಿಸಿದನು ॥ 363–364 ॥

**ತಥಾ ಮಾಂಗಲ್ಯಸೂತ್ರಸ್ಯ ಬಂಧಂ ವೈವಾಹಿಕಂ ತದಾ ।**
**ಶ್ರೀನಿವಾಸೇನ ದೇವೇನಾಕಾರಯತ್ಸ ಪುರೋಹಿತಃ ॥ 365 ॥**

ತಥಾ = ಅದರಂತೆಯೇ, ಶ್ರೀನಿವಾಸೇನ ದೇವೇನ = ಪ್ರಭುವಾದ ಶ್ರೀನಿವಾಸನಿಂದ, ಸಃ = ಆ, ಪುರೋಹಿತಃ = ಪುರೋಹಿತನಾದ ಬೃಹಸ್ಪತಿಯು, ವೈವಾಹಿಕಂ = ವಿವಾಹಸಂಬಂಧಿಯಾದ, ಮಾಂಗಲ್ಯಸೂತ್ರಸ್ಯ = ಮಂಗಳಸೂತ್ರದ, ಬಂಧನಂ = ಕಟ್ಟುವುದನ್ನು, ತದಾ = ಆಗ, ಅಕಾರಯತ್ = ನೆರವೇರಿಸಿದನು. ॥ 365 ॥

*ಸುವಾಸಿನ್ಯ ಊಚುಃ-*

**ಸಾವಿತ್ರೀವ ಚ ಕಲ್ಯಾಣಿ ಬಹುಪುತ್ರವತೀ ಭವ ।**
**ಸರ್ವಲೋಕಸ್ಯ ಜನನೀ ಭವ ಮಂಗಲದಾಯಿನೀ ॥ 366 ॥**

ಸುವಾಸಿನ್ಯ ಊಚುಃ = ಮುತ್ತೈದೆಯರಾದ ಹೆಂಗಸರು ಮಾತನಾಡಿದರು. ಕಲ್ಯಾಣಿ = ಎಲೈ ಮಂಗಳಾಂಗಿಯಾದ ಪದ್ಮಾವತಿ! ಸಾವಿತ್ರೀವ = ಸಾವಿತ್ರೀದೇವಿಯಂತೆ, ಬಹುಪುತ್ರವತೀ ಭವ = ಅನೇಕ ಪುತ್ರರನ್ನು ಪಡೆಯುವವಳಾಗು, ಚ = ಮತ್ತು ಮಂಗಲದಾಯಿನೀ = ಮಂಗಳದಾಯಕಳಾದ, ಸರ್ವಲೋಕಸ್ಯ = ಸಮಸ್ತ ಜಗತ್ತಿಗೂ, ಜನನೀ ಭವ = ತಾಯಿಯಾಗು ॥ 366 ॥

**ಇತ್ಥಂ ಸುಮಂಗಲೀಸ್ತ್ರೀಷು ಗಾಯಂತೀಷು ಶುಭಾಶಿಷಃ ।**
**ಬ್ರಾಹ್ಮಣಾನಾಂ ಕರಸ್ಪರ್ಶಾದ್ರಾಜ್ಞಶ್ಚಾಪಿ ಮಹಾತ್ಮನಃ ॥ 367 ॥**

***ಮಾಂಗಲ್ಯತಂತುನಾನೇನ ಜಗಜ್ಜೀವನಹೇತುನಾ ।***
***ಕಂಠೇ ಬಧ್ನಾಮಿ ಸುಭಗೇ ಚಿರಂಜೀವ ಮಯಾ ಸಹ ॥***
**ಮಂತ್ರೇಣಾನೇನ ಗೋವಿಂದಃ ಕಂಠೇ ತಸ್ಯಾ ಬಬಂಧ ಚ ॥ 368 ॥**

ಇತ್ಥಂ = ಈ ಪ್ರಕಾರವಾಗಿ, ಸುಮಂಗಲಸ್ತ್ರೀಷು = ಮುತ್ತೈದೆಯರು, ಶುಭಾಶಿಷಃ = ಮಂಗಳಾಶೀರ್ವಾದ ಪೂರ್ವಕವಾಗಿ, ಗಾಯಂತೀಷು (ಸತ್ಸು) = ಹಾಡುತ್ತಿರಲಾಗಿ, ಬ್ರಾಹ್ಮಣಾನಾಂ = ಭೂಸುರರ, ಮಹಾತ್ಮನಃ = ಮಹನೀಯನಾದ, ರಾಜ್ಞಶ್ಚಾಪಿ = ಮಹಾರಾಜನಿಂದಲೂ, ಕರಸ್ಪರ್ಶಾತ್ = ಮಾಂಗಲ್ಯವನ್ನು ಕೈಯಿಂದ ಮುಟ್ಟಿಸಿದ ಮೇಲೆ, ಶ್ರೀನಿವಾಸನು – ''ಅನೇನ = ಈ, ಜಗಜ್ಜೀವನಹೇತುನಾ = ಜಗತ್ತಿನ ಜೀವನಕ್ಕೆ ಕಾರಣವಾಗಿರುವ, ಮಾಂಗಲ್ಯತಂತುನಾ = ಮಂಗಳಸೂತ್ರದಿಂದ, ಸುಭಗೇ = ಎಲೈ ಪದ್ಮಾವತಿಯೇ, ಕಂಠೇಬಧ್ನಾಮಿ = ನಿನ್ನ ಕೊರಳಲ್ಲಿ ಕಟ್ಟುತ್ತೇನೆ. ಮಯಾ ಸಹ = ಸಹಧರ್ಮಿಣಿಯಾಗಿ ನನ್ನ ಜೊತೆಯಲ್ಲಿ, ಚಿರಂಜೀವ = ಚಿರಕಾಲ ಬಾಳುವವಳಾಗು'' ಅನೇನ = ಈ ಯಾವ, ಮಂತ್ರೇಣ = ಮಂತ್ರದಿಂದ, ಗೋವಿಂದಃ = ಶ್ರೀನಿವಾಸನು, ತಸ್ಯಾಃ = ಪದ್ಮಾವತಿಯ, ಕಂಠೇ = ಕುತ್ತಿಗೆಯಲ್ಲಿ, ಬಬಂಧ = ಮಂಗಳಸೂತ್ರವನ್ನು ಕಟ್ಟಿದನು. ॥ 367–368 ॥

**ಮುನಿಭಿಸ್ಸಹ ವಿದ್ವದ್ಭಿರ್ಲಾಜಾಹೋಮಂ ಪುರೋಹಿತಃ ।**
**ವಸಿಷ್ಠೋಽಕಾರಯತ್ಪದ್ಮಾವತ್ಯಂಜಲ್ಯರ್ಪಿತೈಸ್ತತಃ ॥ 369 ॥**

ಪುರೋಹಿತಃ = ಪುರೋಹಿತನಾದ, ವಸಿಷ್ಠಃ = ವಸಿಷ್ಠಮುನಿಯು, ವಿದ್ವದ್ಭಿಃ = ಪಂಡಿತರಿಂದ, ಮುನಿಭಿಃ ಸಹ = ಮುನಿಗಳಿಂದ ಸಹಿತನಾಗಿ, ಪದ್ಮಾವತ್ಯರ್ಪಿತೈಃ = ಪದ್ಮಾವತಿಯ ಬೊಗಸೆಯಿಂದ ಅರ್ಪಿಸಲ್ಪಟ್ಟ, ಲಾಜಾಹೋಮಂ = ಲಾಜಾ (ಅರಳು) ಹೋಮವನ್ನು, ಅಕಾರಯತ್ = ಮಾಡಿಸಿದನು ॥ 369 ॥

**ಯಜುಃಶಾಖಾಕ್ರಮೇಣೈವ ಜುಹಾವಾಗ್ನೌ ಯಥಾವಿಧಿ ।**
**ಸರ್ವಂ ವೈವಾಹಿಕವಿಧಿಂ ವಸಿಷ್ಠೋಽಥ ಸಮಾಪಯತ್ ॥ 370 ॥**

ಯಜುಃಶಾಖಾಕ್ರಮೇಣೈವ = ಯಜುರ್ವೇದದ ರೀತಿಯಿಂದಲೇ, ಯಥಾವಿಧಿ = ವಿಧ್ಯುಕ್ತ ಪ್ರಕಾರವಾಗಿ, ಜುಹಾವ = ಹೋಮ ಮಾಡಿಸಿದನು. ಅಥ = ಅನಂತರ, ವಸಿಷ್ಠಃ = ವಸಿಷ್ಠಮುನಿಯು, ಸರ್ವಂ = ಸಮಸ್ತವಾದ, ವೈವಾಹಿಕಂ ವಿಧಿಂ = ವಿವಾಹಕ್ಕೆ ಸಂಬಂಧಿಸಿದ ನಿಯಮವನ್ನು, ಸಮಾಪಯತ್ = ಪೂರ್ಣಗೊಳಿಸಿದನು ॥ 370 ॥

**ತತಃ ಪುರೋಹಿತೋ ರಾಜ್ಞಃ ಸ್ವಸ್ತಿವಾಚನಪೂರ್ವಕಮ್ ।**
**ಮುನೀನಾಮಂಜಲಿಪುಟೇ ನವರತ್ನಾಕ್ಷತಾನ್ ದದೌ ॥ 371 ॥**

ತತಃ = ಆ ತರುವಾಯ, ರಾಜ್ಞಃ = ರಾಜನ, ಪುರೋಹಿತಃ = ಪುರೋಹಿತನಾದ ಬೃಹಸ್ಪತಿಯು, ಸ್ವಸ್ತಿವಾಚನಪೂರ್ವಕಂ = ಮಂಗಳವಾಚನಪೂರ್ವಕವಾಗಿ, ಮುನೀನಾಂ = ಋಷಿಗಳ, ಅಂಜಲಿಪುಟೇ = ಕರಪುಟದಲ್ಲಿ, ನವರತ್ನಾಕ್ಷತಾನ್ = ನವರತ್ನಮಯ ಮಂತ್ರಾಕ್ಷತೆಗಳನ್ನು, ದದೌ = ಕೊಟ್ಟನು ॥ 371 ॥

**ತೇ ವೇದಮಂತ್ರೈ ರ್ಜಗದೀಶಮೂರ್ಧ್ನಿ ರತ್ನಾಕ್ಷತಾನ್ವೇದವಿದಃ ಪ್ರಚಿಕ್ಷುಪುಃ ।**
**ತದಾ ನೃಣಾಂ ತತ್ರ ಮಹೋತ್ಸವೋಽಭೂ-ದಾಕಾಶರಾಜಸ್ಯಪುರೀನಿವಾಸಿನಾಮ್ ॥ 372 ॥**

ವೇದಮಂತ್ರೈಃ = ವೇದಮಂತ್ರಗಳಿಂದ, ವೇದವಿದಃ = ವೇದವಿದ್ಯಾವಿಶಾರದರಾದ, ತೇ = ಆ ಮುನಿಗಳು, ಜಗದೀಶಮೂರ್ಧ್ನಿ = ಶ್ರೀನಿವಾಸನ ಶಿರಸ್ಸಿನಲ್ಲಿ, ರತ್ನಾಕ್ಷತಾನ್ = ರತ್ನಮಂತ್ರಾಕ್ಷತೆಗಳನ್ನು, ಪ್ರಚಿಕ್ಷಿಪುಃ = ಹಾಕಿದರು, ತದಾ = ಆವಾಗ, ಆಕಾಶರಾಜಸ್ಯ = ಆಕಾಶರಾಜನ, ಪುರಿನಿವಾಸಿನಾಂ = ಪುರನಿವಾಸಿಗಳಾದ, ನೃಣಾಂ = ಮನುಷ್ಯರಿಗೆ, ಮಹೋತ್ಸವಃ = ದೊಡ್ಡ ಉತ್ಸವವು (ಸಮಾರಂಭವು), ಅಭೂತ್ = ಆಯಿತು ॥ 372 ॥

**ತಸ್ಮಿನ್ಕಾಲೇ ಮಹಾರಾಜೋ ದಕ್ಷಿಣಾಂ ಬ್ರಹ್ಮವಾದಿನಾಮ್ ।**
**ದಾಪಯಾಮಾಸ ಸಂಹೃಷ್ಟೋ ವಿಪ್ರೈಸ್ತಾಂಬೂಲಪೂರ್ವಕಮ್ ॥ 373 ॥**

ತಸ್ಮಿನ್ ಕಾಲೇ = ಆ ವಿವಾಹಸಮಯದಲ್ಲಿ, ಮಹಾರಾಜಃ = ಆಕಾಶರಾಜನು, ಸಂಹೃಷ್ಟಃ = ಸಂತುಷ್ಟನಾಗಿ, ಬ್ರಹ್ಮವಾದಿನಾಂ = ಬ್ರಹ್ಮಜ್ಞಾನಿಗಳಾದ ಋಷಿಮುನಿಗಳಿಗೆ, ವಿಪ್ರೈಃ = ಬ್ರಾಹ್ಮಣರಿಗೆ, ತಾಂಬೂಲಪೂರ್ವಕಂ = ತಾಂಬೂಲ ಸಹಿತವಾಗಿ, ದಕ್ಷಿಣಾಂ = ದಕ್ಷಿಣೆಯನ್ನು, ದಾಪಯಾಮಾಸ = ಕೊಡಿಸಿದನು ॥ 373 ॥

**ಗವಾಂಕೋಟಿಸಹಸ್ರಾಣಿ ಚಾಶ್ವಾನಾಮಯುತಂ ತಥಾ ।**
**ವಸ್ತ್ರಾಣಾಂ ನಿಚಯಂ ರಾಜನ್ ವಿಪ್ರೇಭ್ಯೋ ದತ್ತವಾನ್ವಿಭುಃ ॥ 374 ॥**

ರಾಜನ್ = ಎಲೈ ಜನಕರಾಜ! ಕೋಟಿಸಹಸ್ರಾಣಿ = ಒಂದುಸಾವಿರ ಕೋಟಿ ಗವಾಂ = ಆಕಳುಗಳ, ಅಶ್ವಾನಾಂ ಅಯುತಂ = ಹತ್ತುಸಾವಿರ ಕುದುರೆಗಳನ್ನು, ತಥಾ = ಹಾಗೆಯೇ, ವಸ್ತ್ರಾಣಾಂ = ವಸ್ತ್ರಗಳ, ನಿಚಯಂ = ಸಮೂಹವನ್ನು, ವಿಭುಃ = ಪ್ರಭುವಾದ ಆಕಾಶರಾಜನು, ವಿಪ್ರೇಭ್ಯಃ = ಬ್ರಾಹ್ಮಣರುಗಳಿಗೆ, ದತ್ತವಾನ್ = ನೀಡಿದನು ॥ 374 ॥

**ಏವಂ ಮಹೋತ್ಸವಸ್ತತ್ರ ಸಮಭೂದ್ದಶಮೀ ದಿನೇ ।**
**ವಧೂವರೌ ಪ್ರತಿಷ್ಠಾಪ್ಯ ಭೋಜಯಾಮಾಸ ವೈ ತತಃ ॥ 375 ॥**

ದಶಮೀದಿನೇ = ದಶಮಿಯದಿವಸ, ಏವಂ = ಹೀಗೆ, ತತ್ರ = ನಾರಾಯಣಪುರದಲ್ಲಿ, ಮಹೋತ್ಸವಃ = ಮಹಾಸಮಾರಂಭವು, ಸಮಭೂತ್ = ನೆರವೇರಿತು. ತತಃ = ಅನಂತರ, ವಧೂವರೌ = ಹೆಣ್ಣುಗಂಡುಗಳನ್ನು, ಪ್ರತಿಷ್ಠಾಪ್ಯ = ಭೂಮದಲ್ಲಿ ಕೂಡಿಸಿ, ಭೋಜನಯಾಮಾಸ = ಭೋಜನ ಮಾಡಿಸಿದನು ॥ 375 ॥

**ಅನ್ನಂ ಬಹುವಿಧಂ ಸೂಪರಸಭಕ್ಷ್ಯ ಸಮನ್ವಿತಮ್ ।**
**ಪರಮಾನ್ನಂ ಚ ಸಘೃತಂ ಸಕ್ಷೀರಂ ಶರ್ಕರಾಯುತಮ್ ॥ 376 ॥**

ಬಹುವಿಧಂ = ಅನೇಕ ಬಗೆಯ, ಸೂಪರಸಭಕ್ಷ್ಯಸಮನ್ವಿತಂ = ತೊವ್ವೆ, ಸಾರು, ವಿವಿಧ ರಸಗಳು, ಭಕ್ಷ್ಯಗಳಿಂದ ಕೂಡಿದ, ಚ = ಮತ್ತು, ಸಘೃತಂ = ತುಪ್ಪಸಹಿತವಾದ, ಸಕ್ಷೀರಂ = ಹಾಲಿನಿಂದೊಡಗೂಡಿದ, ಶರ್ಕರಾಯುತಂ =

ಸಕ್ಕರೆಯಿಂದ ಸಹಿತವಾದ, ಅನ್ನಂ = ಭೋಜನವನ್ನು (ತೊವ್ವೆ, ಸಾರು, ವಿವಿಧ ರಸಗಳು, ವಿವಿಧ ಭಕ್ಷ್ಯಗಳು, ಪಾಯಸ, ತುಪ್ಪ, ಹಾಲು, ಸಕ್ಕರೆಗಳಿಂದ ಸಹಿತವಾದ ಮೃಷ್ಟಾನ್ನಭೋಜನವನ್ನು ಮಾಡಿಸಿದನು) ।। 376 ।।

**ಪುರೋಹಿತೇನ ಸಹಿತೋ ಭೋಜನಂ ಕೃತವಾನ್ ಹರಿಃ ।**
**ಮಾತ್ರಾ ಲಕ್ಷ್ಮ್ಯಾ ಚ ಸಹಿತಃ ಪುತ್ರೇಣ ಸಹಿತ ಸ್ತಥಾ ।। 377 ।।**

ಪುರೋಹಿತೇನ ಸಹಿತಃ = ಪುರೋಹಿತನಾದ ವಸಿಷ್ಠನಿಂದೊಡಗೂಡಿ, ಹರಿಃ = ಶ್ರೀನಿವಾಸನು, ಮಾತ್ರಾ = ತಾಯಿಯಿಂದ, ಲಕ್ಷ್ಮ್ಯಾ ಚ = ಲಕ್ಷ್ಮಿಯಿಂದಲೂ, ಸಹಿತಃ = ಯುಕ್ತನಾಗಿ, ತಥಾ = ಹಾಗೆಯೇ, ಪುತ್ರೇಣಸಹಿತಃ = ಬ್ರಹ್ಮನಿಂದಲೂ ಸಹಿತನಾಗಿ, ಭೋಜನಂ ಕೃತವಾನ್ = ಊಟವನ್ನು ಮಾಡಿದನು ।। 377 ।।

**ಆಕಾಶರಾಜೋ ಧರ್ಮಾತ್ಮಾ ಭುಕ್ತವಾನ್ ಕೃಷ್ಣಸನ್ನಿಧೌ ।**
**ಲಕ್ಷ್ಮ್ಯಾಸಮೇತಾ ಧರಣೀ ತಥಾ ಬಕುಲಮಾಲಯಾ ।। 378 ।।**
**ಅಭುಂಕ್ತಾನ್ನಂ ರಸ್ಯೈರ್ಯುಕ್ತಂ ಪತಿಪುತ್ರಸಮನ್ವಿತಾ ।**
**ತತಃ ಪ್ರಭಾತೇ ರಾಜೇಂದ್ರ ಸುವಾಸಿನ್ಯಃ ಸುರೇಶಿತುಃ ।। 379 ।।**

ಧರ್ಮಾತ್ಮಾ = ಧರ್ಮಿಷ್ಠನಾದ, ಆಕಾಶರಾಜಃ = ಆಕಾಶಭೂಪತಿಯು, ಕೃಷ್ಣಸನ್ನಿಧೌ = ಶ್ರೀನಿವಾಸನ ಸನ್ನಿಧಿಯಲ್ಲಿ, ಭುಕ್ತವಾನ್ = ಭೋಜನಮಾಡಿದನು. ಧರಣೀ = ಧರಣೀದೇವಿಯು, ಲಕ್ಷ್ಮ್ಯಾಸಮೇತಾ = ಲಕ್ಷ್ಮಿಯೊಡನೆ, ತಥಾ = ಹಾಗೆಯೇ, ಬಕುಲಮಾಲಯಾ = ಬಕುಳಾದೇವಿಯಿಂದ ಯುಕ್ತಳಾಗಿ, ಪತಿಪುತ್ರಸಮನ್ವಿತಾ = ಪತಿ-ಮಗ ಇವರಿಂದೊಡಗೂಡಿ, ರಸ್ಯೈರ್ಯುತಂ = ಸಾರಿನಿಂದ (ವಿವಿಧ ರಸಗಳಿಂದ) ಸಹಿತವಾದ, ಅನ್ನಂ = ಮೃಷ್ಟಾನ್ನವನ್ನು, ಅಭುಂಕ್ತ = ಊಟಮಾಡಿದಳು. ರಾಜೇಂದ್ರಃ = ಜನಕರಾಯ! ತತಃ = ಆ ತರುವಾಯ, ಪ್ರಭಾತೇ = ಪ್ರಾತಃಕಾಲದಲ್ಲಿ, ಸುವಾಸಿನ್ಯಃ = ಸುಮಂಗಲೆಯರು, ಸುರೇಶಿತುಃ = ದೇವತೆಗಳಿಗೆ ಪ್ರಭುವಾದ ಶ್ರೀನಿವಾಸನಿಗೆ ।। 378-379 ।।

**ಮಜ್ಜನಂ ಕಾರಯಾಮಾಸುಃ ಗಂಧತೈಲೈಸ್ಸುನಿರ್ಮಲೈಃ ।**
**ಅನ್ಯೋನ್ಯಪೂಜನಂ ತತ್ರ ಚಾನ್ಯೋನ್ಯೋದ್ವರ್ತನಂ ತಥಾ ।। 380 ।।**
**ಹರಿಪದ್ಮಾವತೀದೇವ್ಯೋಸ್ತಾ ಸಹಾಸಮಕಾರಯನ್ ।**
**ಸ ರಾಜಾ ವಿಪ್ರಮುಖ್ಯಾನಾಂ ಸುರಾಣಾಂ ಬಹುಭೋಜನಮ್ ।। 381 ।।**

ಸುನಿರ್ಮಲೈಃ = ಬಹುಸ್ವಚ್ಛವಾದ, ಗಂಧತೈಲೈಃ = ಸುಗಂಧದ ಎಣ್ಣೆಗಳಿಂದ, ಮಜ್ಜನಂ = ಮಂಗಳಸ್ನಾನವನ್ನು ಕಾರಯಾಮಾಸುಃ = ಮಾಡಿಸುವವರಾದರು. ತತ್ರ = ಅಲ್ಲಿ (ಆ ಕಾಲದಲ್ಲಿ), ಅನ್ಯೋನ್ಯಪೂಜನಂ = ಒಬ್ಬರಿಗೊಬ್ಬರು ಪೂಜಿಸುವುದು (ಮರ್ಯಾದೆ ಮಾಡುವುದು), ಅನ್ಯೋನ್ಯದ್ವರ್ತನಂ = ಪರಸ್ಪರವಾಗಿ ಮೈತಿಕ್ಕುವುದು (ಉಜ್ಜುವುದು) ಮುಂತಾದುವನ್ನು, ಹರಿಪದ್ಮಾವತೀದೇವ್ಯೋಃ = ಶ್ರೀನಿವಾಸ-ಪದ್ಮಾವತಿಯರಿಗೆ, ತಾಃ = ಸುಮಂಗಲಿಯರು, ಸಹಾಸಂ = ಹಾಸ್ಯ, ನಗುವಿನಿಂದ ಕೂಡಿದವರಾಗಿ, ಅಕಾರಯನ್ = ಮಾಡಿಸಿದರು.

ಸಃ = ಆ, ರಾಜಾ = ಆಕಾಶರಾಜನು, ವಿಪ್ರಮುಖ್ಯಾನಾಂ = ಬ್ರಾಹ್ಮಣರೇ ಮೊದಲಾದವರಿಗೆ, ಸುರಾಣಾಂ = ದೇವತೆಗಳಿಗೆ, ಸ್ತ್ರೀಣಾಂ = ಹೆಂಗಸರು, ಪುರುಷಾಣಾಂ ಚ = ಗಂಡಸರುಗಳಿಗೂ, ಬಹುಭೋಜನಂ = ಹೆಚ್ಚಾದ ಮೃಷ್ಟಾನ್ನ ಭೋಜನವನ್ನು ।। 380-381 ।।

**ಸ್ತ್ರೀಣಾಂ ಚ ಪುರುಷಾಣಾಂ ಚ ಬಹುಮಾನಪುರಸ್ಸರಮ್ ।**
**ಯಥೇಷ್ಟಂ ದಾಪಯಾಮಾಸ ಹೃಷ್ಟ ಆಕಾಶಭೂಮಿಪಃ ॥ 382 ॥**

**ಅಪೂಪಾನ್ವಿವಿಧಾಂಶ್ಚಕ್ರೇ ಸೂಪಶಾಕಾದಿಕಾಂಸ್ತಥಾ ।**
**ಘೃತಕುಲ್ಯಾಂ ಕ್ಷೀರಕುಲ್ಯಾಂ ದಧಿಕುಲ್ಯಾಂತತಃ ಪರಮ್ ॥ 383 ॥**

ಹೃಷ್ಟಃ = ಸಂತೋಷಗೊಂಡ, ಆಕಾಶಭೂಮಿಪಃ = ಆಕಾಶರಾಜನು, ಬಹುಮಾನಪುರಸ್ಸರಂ = ಮರ್ಯಾದಾಪೂರ್ವಕವಾಗಿ, ಯಥೇಷ್ಟಂ = ಯಥೇಚ್ಛವಾಗಿ, ವಿವಿಧಾನ್ = ವಿಧವಿಧವಾದ, ಅಪೂಪಾನ್ = ಕಜ್ಜಾಯ-ಕಡುಬುಗಳನ್ನು, ಸೂಪಶಾಕಾದಿಕಾಂಸ್ತಥಾ = ತೊವ್ವೆ, ಪಲ್ಯಗಳನ್ನೂ ಸಹ, ದಾಪಯತ್ = ಮಾಡಿಸಿ ನೀಡಿದನು. ಘೃತಕುಲ್ಯಾಂ = ತುಪ್ಪದಕಾಲುವೆಯನ್ನು, ಕ್ಷೀರಕುಲ್ಯಾಂ = ಹಾಲಿನಕಾಲುವೆಯನ್ನು, ದಧಿಕುಲ್ಯಾಂ = ಮೊಸರಿನ ಕಾಲುವೆಯನ್ನೂ ಸಹ, (ಬಡಿಸುವಾಗ ಹರಿದುಹೋಗುವಂತೆ) ಚಕ್ರೇ = ಉಂಟುಮಾಡಿದನು ॥ 382-383 ॥

**ತತ ಉದ್ಧೃತ್ಯನಿಕ್ಷಿಪ್ತಂ ಬಹಿರ್ಭುಕ್ತವತಾಂ ನೃಣಾಂ ।**
**ಉಚ್ಛಿಷ್ಟಪಾತ್ರಜಾಲಂಚ ಪುಷ್ಕಲಾನ್ನಾದಿ ಸಂಯುತಮ್ ॥ 384 ॥**

**ಸಾರಮೇಯಗಣೈಃಕೀರ್ಣಂ ರಾಕ್ಷಸಾನಾಂ ಗಣೈಸ್ತಥಾ ।**
**ಏವಂ ಕೋಲಾಹಲಂ ಚಕ್ರೇ ದಿವಸಾಂಶ್ಚತುರಸ್ತಥಾ ॥ 385 ॥**

ತತಃ ಪರಂ = ಆ ತರುವಾಯ, ಉದ್ಧೃತ್ಯನಿಕ್ಷಿಪ್ತಂ = ಉಂಡುಮಿಕ್ಕಿ ಎತ್ತಿಟ್ಟಿದ್ದನ್ನೂ, ತತಃ = ನಂತರ, ಬಹಿಃ = ಹೊರಗಡೆ, ಭುಕ್ತವತಾಂ = ಊಟ ಮಾಡಿದ, ನೃಣಾಂ = ಪುರುಷರ, ಪುಷ್ಕಲಾನ್ನಾದಿಸಂಯುತಂ = ಉಂಡುಮಿಕ್ಕಿ ಹೆಚ್ಚಾದ ಅನ್ನಾದಿಗಳಿಂದಯುಕ್ತವಾದ, ಉಚ್ಛಿಷ್ಟಪಾತ್ರಜಾಲಂ ಚ = ಎಂಜಲು ಪಾತ್ರಗಳ (ಎಲೆಗಳ) ಸಮೂಹವನ್ನು (ತಿನ್ನಲು ಆ ಪ್ರದೇಶವು) ಸಾರಮೇಯಗಣೈಃ = ನಾಯಿಗಳ ಗುಂಪುಗಳಿಂದಲೂ, ತಥಾ = ಹಾಗೆಯೇ, ರಾಕ್ಷಸಾನಾಂ = ರಾಕ್ಷಸರುಗಳ, ಗಣೈಃ = ಗುಂಪುಗಳಿಂದಲೂ, ಕೀರ್ಣಂ = ವ್ಯಾಪ್ತವಾಗಿದ್ದಿತು. ಏವಂ = ಹೀಗೆ, ಚತುರಃ = ನಾಲ್ಕು, ದಿವಸಾನ್ = ದಿನಗಳ ಕಾಲ (ಜನರಗುಂಪು), ಕೋಲಾಹಲಂ = ಕೋಲಾಹಲವನ್ನು, ಚಕ್ರೇ = ಉಂಟುಮಾಡಿತು ॥ 384-385 ॥

**ಹಾಸಸ್ತತ್ರ ವಿನೋದೇನ ನಿತ್ಯಮಾಸೀಚ್ಚ ಮಜ್ಜನಮ್ ।**
**ದಿವಸೇ ಪಂಚಮೇ ಪ್ರಾಪ್ತೇ ಕೃತ್ವಾ ನಾಕಬಲಿಂ ತಥಾ ॥ 386 ॥**

**ಕಲಶಾಂಶ್ಚತುರೋ ನ್ಯಸ್ಯ ದೀಪಜ್ವಾಲಾವಿರಾಜಿತಾನ್ ।**
**ವಧೂವರೌ ಪ್ರತಿಷ್ಠಾಪ್ಯ ರತ್ನಸಿಂಹಾಸನೇ ಶುಭೇ ॥ 387 ॥**

ತತ್ರ = ಆ ವಿವಾಹ ಮಂಟಪದಲ್ಲಿ, ನಿತ್ಯಂ = ಪ್ರತಿದಿನವೂ, ಮಜ್ಜನಂ = ಓಕುಳಿ ಸ್ನಾನ, ವಿನೋದೇನ = ವಿನೋದದಿಂದ, ಹಾಸಃ = ನಗೆ ಚಾಟಿಕೆಯೂ, ಆಸೀಚ್ಚ = ಆಗುವಂಥಾದ್ದಾಯಿತು, ಪಂಚಮೇ = ಐದನೆಯ, ದಿವಸೇ = ದಿನವು, ಪ್ರಾಪ್ತೇ (ಸತಿ) = ಬರುತ್ತಿರಲು, ದೀಪಜ್ವಾಲಾ ವಿರಾಜಿತಾನ್ = ದೀಪದ ಜ್ವಾಲೆಯಿಂದ ವಿರಾಜಿಸುವ, ಚತುರೋ = ನಾಲ್ಕು, ಕಲಶಾನ್ = ಕಳಶಗಳನ್ನು, ನ್ಯಸ್ಯ = ಇಟ್ಟು, ಶುಭೇ = ಮಂಗಳಕರವಾದ, ರತ್ನಸಿಂಹಾಸನೇ = ರತ್ನಸಿಂಹಾಸನದಲ್ಲಿ, ವಧೂವರೌ = ವಧೂವರರಾದ ಪದ್ಮಾವತೀ-ಶ್ರೀನಿವಾಸರನ್ನು, ಪ್ರತಿಷ್ಠಾಪ್ಯ = ಮಂಡಿಸಿ, ನಾಕಬಲಿಂ = ನಾಕಬಲಿ ಎಂಬ ವಿಧಿಯನ್ನು, ಕೃತ್ವಾ = ಮಾಡಿ, ॥ 386-387 ॥

**ಪೂಜಯಾಮಾಸ ಗೋವಿಂದಂ ಜಾಮಾತರಮನಾಮಯಮ್ ।**
**ಆಕಾಶರಾಜೋ ಧರ್ಮಾತ್ಮಾ ಕ್ಷೀರಪಾತ್ರಂ ಕರೇದಧತ್ ॥ 388 ॥**

ಅನಾಮಯಂ = ರೋಗಾದಿರಹಿತನಾದ, ದೋಷರಹಿತನಾದ, ಜಾಮಾತರಂ = ಅಳಿಯನಾದ, ಗೋವಿಂದಂ = ಶ್ರೀನಿವಾಸನನ್ನು, ಪೂಜಯಾಮಾಸ = (ಆಕಾಶರಾಜನು) ಪೂಜಿಸಿದನು, ಧರ್ಮಾತ್ಮಾ = ಧರ್ಮಿಷ್ಠನಾದ, ಆಕಾಶರಾಜಃ = ಆಕಾಶರಾಜನು, ಕ್ಷೀರಪಾತ್ರಂ = ಹಾಲಿನ ಬಟ್ಟಲನ್ನು, ಕರೇ = ತನ್ನ ಕರದಲ್ಲಿ, ದಧತ್ = ಹಿಡಿದನು ॥ 388 ॥

**ಮಾತರಂ ವಾಸುದೇವಸ್ಯ ನಾಮ್ನಾ ಬಕುಲಮಾಲಿಕಾಮ್ ।**
**ಪೂಜಯಿತ್ವಾ ವಿಧಾನೇನ ವಸ್ತ್ರಾಲಂಕಾರ ಭೂಷಣೈಃ ॥ 389 ॥**
**ನಾಭಿಂ ಕ್ಷೀರೇಣ ಸಂಮೃಜ್ಯ ಪುತ್ರೀಂ ಪದ್ಮಾವತೀಂ ತದಾ ।**
**ಅರ್ಪಯಾಮಾಸ ದುಃಖೇನ ಬ್ರಹ್ಮಣ್ಯೋ ರಾಜಸತ್ತಮಃ ॥ 390 ॥**

ವಾಸುದೇವಸ್ಯ = ಶ್ರೀನಿವಾಸನ, ಮಾತರಂ = ತಾಯಿಯಾದ, ನಾಮ್ನಾ = ಹೆಸರಿನಿಂದ, ಬಕುಲಮಾಲಿಕಾಂ = ಬಕುಳಮಾಲಿಕೆಯನ್ನು, ವಸ್ತ್ರಾಲಂಕಾರ ಭೂಷಣೈಃ = ಸೀರೆ, ಖಣ, ಅಲಂಕಾರದ ಆಭರಣಗಳಿಂದ, ವಿಧಾನೇನ = ಶಾಸ್ತ್ರೋಕ್ತ ಪದ್ಧತಿಯಿಂದ, ಪೂಜಯಿತ್ವಾ = ಪೂಜಿಸಿ ಅಂದರೆ ಗೌರವಿಸಿ (ಸಂಭಾವಿಸಿ), ಕ್ಷೀರೇಣ = ಹಾಲಿನಿಂದ, ನಾಭಿಂ = ಬಕುಳಾದೇವಿಯ ಹೊಕ್ಕಳನ್ನು, ಸಂಮೃಜ್ಯ = ತೋಯಿಸಿ (ಒರೆಸಿ), ಪುತ್ರೀಂ = ಮಗಳಾದ, ಪದ್ಮಾವತೀಂ = ಪದ್ಮಾವತಿಯನ್ನು, ಬ್ರಹ್ಮಣ್ಯಃ = ಬ್ರಾಹ್ಮಣಪ್ರಿಯನಾದ, ರಾಜಸತ್ತಮಃ = ಆಕಾಶರಾಜನು, ದುಃಖೇನ = ವ್ಯಥೆಯಿಂದ ಕೂಡಿದವನಾಗಿ, ಅರ್ಪಯಾಮಾಸ = ಅರ್ಪಿಸಿ (ಒಪ್ಪಿಸಿ)ಕೊಟ್ಟನು ॥ 389-390 ॥

**ಮಹಾಲಕ್ಷ್ಮ್ಯಾಃ ನಾಭಿಮೂಲಂ ಸಘೃತಕ್ಷೀರಸೇಚಿತಮ್ ।**
**ಕೃತ್ವಾರ್ಪಯಾಮಾಸ ಪುತ್ರೀಂ ರುದನ್ಗದ್ಗದ ಕಂಠವಾನ್ ॥ 391 ॥**

**ಶ್ರೀನಿವಾಸಸ್ಯ ಕೃಷ್ಣಸ್ಯ ಶೇಷಾಚಲನಿವಾಸಿನಃ ।**
**ರಾಜಭಾರ್ಯಾ ಮಹಾಭಾಗಾ ರುದಂತೀ ಕುರರೀವ ಚ ॥ 392 ॥**

**ಪುತ್ರೀ ಹಸ್ತಂ ಪ್ರದಾಯಾಥ ಹಸ್ತೇ ರಾಜಕುಲಾಂಗನಾ ।**
**ಕ್ಷೀರಂ ಸಂಯೋಜ್ಯ ಕೃಷ್ಣಸ್ಯ ನಾಭಿಮೂಲೇಽತಿ ದುಃಖಿತಾ ॥ 393 ॥**

**ಭೃಶಂ ರುದಂತೀ ಮಂತ್ರೇಣ ದುಃಖಸಂದಿಗ್ಧಲೋಚನಾ ।**
**ಅರ್ಪಯಾಮಾಸ ಕೃಚ್ಛ್ರೇಣ ಪುತ್ರೀಂ ಪದ್ಮಾವತೀಂ ತತಃ ॥ 394 ॥**

ಮಹಾಲಕ್ಷ್ಮ್ಯಾಃ = ಶ್ರೀಮಹಾಲಕ್ಷ್ಮಿಯ, ನಾಭಿಮೂಲಂ = ಹೊಕ್ಕಳಿನ ಮೂಲ ಪ್ರದೇಶವನ್ನು, ಘೃತಕ್ಷೀರಸೇಚಿತಂ = ತುಪ್ಪ ಹಾಲುಗಳಿಂದ ಅಭಿಷೇಚನ ಮಾಡಲ್ಪಟ್ಟಿದ್ದನ್ನಾಗಿ, ಕೃತ್ವಾ = ಮಾಡಿ, ಗದ್ಗದಕಂಠವಾನ್ = ಗದ್ಗದ ಕಂಠದಿಂದ, ರುದನ್ = ಅಳುತ್ತಾ, ಪುತ್ರೀಂ = ಪದ್ಮಾವತಿಯನ್ನು, ಅರ್ಪಯಾಮಾಸ = ಒಪ್ಪಿಸಿಕೊಟ್ಟನು. ತತಃ = ಆನಂತರ, ಶೇಷಾಚಲನಿವಾಸಿನಃ = ಶೇಷಾಚಲದಲ್ಲಿ ವಾಸಮಾಡುವ, ಶ್ರೀನಿವಾಸಸ್ಯ = ಲಕ್ಷ್ಮೀದೇವಿಗೆ ಆವಾಸಭೂತನಾದ, ಕೃಷ್ಣಸ್ಯ = ಶ್ರೀವಾಸುದೇವನಿಗೆ, ಕುರರೀರಿವ = ಕುರರೀಪಕ್ಷಿಯಂತೆ, ರುದಂತೀ = ಅಳುತ್ತಾ, ಮಹಾಭಾಗಾ = ಮಹನೀಯಳಾದ,

ರಾಜಭಾರ್ಯಾ = ರಾಜನ ಪತ್ನಿಯಾದ ಧರಣೀದೇವಿಯು, ಪುತ್ರೀಹಸ್ತಂ = ಮಗಳ ಹಸ್ತವನ್ನು, ಕೃಷ್ಣಸ್ಯ = ಶ್ರೀನಿವಾಸನ, ಹಸ್ತೇ = ಕರದಲ್ಲಿ, ಪ್ರದಾಯ = ಕೊಟ್ಟು (ಇಟ್ಟು), ರಾಜಕುಲಾಂಗನಾ = ಅರಸುಕುಲದ ಸ್ತ್ರೀಯಾದ ಧರಣಿಯು, ಕೃಷ್ಣಸ್ಯ = ಶ್ರೀನಿವಾಸನ, ನಾಭಿಮೂಲೇ = ನಾಭಿಯ ಒಳಪ್ರದೇಶದಲ್ಲಿ, ಕ್ಷೀರಂ = ಹಾಲನ್ನು, ಸಂಯೋಜ್ಯ = ಸೇರಿಸಿ, ಅತಿದುಃಖಿತಾ = ಅತ್ಯಂತ ವ್ಯಥೆಯುಳ್ಳವಳಾಗಿ, ಭೃಶಂ = ಹೆಚ್ಚಾಗಿ, ರುದಂತೀ = ಅಳುತ್ತಾ, ದುಃಖಸಂದಿಗ್ಧಲೋಚನಾ = ದುಃಖಪೂರ್ಣಕಣ್ಣುಳ್ಳವಳಾಗಿ, ಕೃಚ್ಛ್ರೇಣ = ''ಜೀವಂ ರುದಂತಿ ಮಂತ್ರೇಣ'' ಎಂಬ, ಮಂತ್ರೇಣ = ಮಂತ್ರದಿಂದ, ಪುತ್ರೀಂ = ಮಗಳಾದ, ಪದ್ಮಾವತೀಂ = ಪದ್ಮಾವತಿಯನ್ನು, ಅರ್ಪಯಾಮಾಸ = ಒಪ್ಪಿಸಿಕೊಟ್ಟಳು ॥ 391-394 ॥

**ಪ್ರೋವಾಚ ಚ ಶ್ರೀನಿವಾಸಂ ರುದಂತೀ ರಾಜವಲ್ಲಭಾ ।**

*ಧರಣ್ಯುವಾಚ-*

**ಪಾಲಿತಾಂ ಲಾಲಿತಾಂ ಪುತ್ರೀಂ ನವಮಾಸಧೃತಾಂ ಮಯಾ ॥ 395 ॥**

**ತ್ವದಧೀನಾಂ ಜಗನ್ನಾಥ ಕರಿಷ್ಯೇ ಮಮ ನಂದಿನೀಮ್ ।**
**ಇತ್ಯೇವಮರ್ಪಯಾಮಾಸ ಶ್ರೀನಿವಾಸ ಕರಾಂಬುಜೇ ॥ 396 ॥**

ರುದಂತೀ = ಅಳುತ್ತಿರುವ, ರಾಜವಲ್ಲಭಾ = ಮಹಾರಾಣಿಯು, ಶ್ರೀನಿವಾಸಂ = ಶ್ರೀಹರಿಯನ್ನು ಕುರಿತು, ಪ್ರೋವಾಚ ಚ = ಹೇಳಿದಳು.

ಧರಣ್ಯುವಾಚ = ಧರಣೀದೇವಿಯು ಹೇಳುತ್ತಿದ್ದಾಳೆ - ಜಗನ್ನಾಥ = ಹೇ ಜಗತ್ಪ್ರಭುವಾದ ಶ್ರೀನಿವಾಸ, ಮಯಾ = ನನ್ನಿಂದ, ನವಮಾಸಧೃತಾಂ = ಒಂಬತ್ತು ತಿಂಗಳು ಹೊತ್ತವಳಾದ (ಹೊರಲ್ಪಟ್ಟ), ಪುತ್ರೀಂ = ಮಗಳನ್ನು, ಪಾಲಿತಾಂ = ಪಾಲಿಸಲ್ಪಟ್ಟ, ಲಾಲಿತಾಂ = ಲಾಲಿಸಲ್ಪಟ್ಟ, ಮಮ = ನನ್ನ, ನಂದಿನೀಂ = ಕುಮಾರಿಯನ್ನು, ತ್ವದಧೀನಾಂ = ನಿನಗಧೀನಳನ್ನಾಗಿ, ಕರಿಷ್ಯೇ = ಮಾಡುತ್ತೇನೆ, ಇತ್ಯೇವಂ = ಈ ಪ್ರಕಾರವಾಗಿ, ಶ್ರೀನಿವಾಸಕರಾಂಬುಜೇ = ಶ್ರೀನಿವಾಸನ ಕರಕಮಲದಲ್ಲಿ, ಅರ್ಪಯಾಮಾಸ = ಒಪ್ಪಿಸಿಕೊಟ್ಟಳು ॥ 395-396 ॥

**ಸ ತಸ್ಯಾ ರೋದನಂ ದೃಷ್ಟ್ವಾ ರಾಜಾ ದುಃಖಪರಾಯಣಃ ।**
**ರುರೋದ ದೀನವದನಃ ಪುತ್ರೀಮಾಲಿಂಗ್ಯ ಭೂಪತಿಃ ॥ 397 ॥**

ಸಃ ರಾಜಾ = ಆ ಆಕಾಶರಾಜನು, ತಸ್ಯಾಃ = ಪತ್ನಿಯ, ರೋದನಂ = ಅಳುವನ್ನು, ದೃಷ್ಟ್ವಾ = ನೋಡಿ, ಭೂಪತಿಃ = ರಾಜನು, ದುಃಖಪರಾಯಣಃ = ದುಃಖಿತನಾಗಿ, ಪುತ್ರೀಂ = ಪದ್ಮಾವತಿಯನ್ನು, ಆಲಿಂಗ್ಯ = ಆಲಂಗಿಸಿಕೊಂಡು, ದೀನವದನಃ = ದೀನಮುಖವಾಗಿ, ರುರೋದ = ಅತ್ತನು ॥ 397 ॥

*ರಾಜೋವಾಚ-*

**ಹಾ ಪುತ್ರಿ ಮಂದಭಾಗ್ಯೋಽಹಂ ತ್ವದ್ವಿಯೋಗೇನ ಕೇವಲಮ್ ।**
**ಜೀವನಂ ಮಮ ಕಲ್ಯಾಣಿ ನ ಸ್ಥಿರಂ ಚ ಭವಿಷ್ಯತಿ ॥ 398 ॥**

ರಾಜೋವಾಚ = ಆಕಾಶರಾಜನು ಮಾತನಾಡಿದನು. ಹಾ ಪುತ್ರೀ = ಅಯ್ಯೋ ಮಗಳೇ! ಅಹಂ = ನಾನು, ಮಂದಭಾಗ್ಯಃ = ಮಂದಭಾಗ್ಯನು, ಕೇವಲಂ ತ್ವದ್ವಿಯೋಗೇನ = ನಿನ್ನ ವಿಯೋಗದಿಂದಲೇ, ಕಲ್ಯಾಣಿ = ಮಂಗಳಕರಳೇ, ಮಮ = ನನ್ನ, ಜೀವನಂ = ಬದುಕು, ಸ್ಥಿರಂ = ಸ್ಥಿರವಾದುದು, ನ ಚ ಭವಿಷ್ಯತಿ = ನೀನಿಲ್ಲದಿದ್ದರೆ ಆಗುವುದಿಲ್ಲ ॥ 398 ॥

**ಕ್ರೀಡಾಗೃಹೇ ರಾಜಪುತ್ರಿ ತಥಾ ಭೋಜನ ಸದ್ಮನಿ ।**
**ಭ್ರಾತಾ ತವ ಕಥಂ ಕ್ರೀಡಾಂ ಭೋಜನಂ ವಾ ಕರಿಷ್ಯತಿ ॥ 399 ॥**

ರಾಜಪುತ್ರಿ = ರಾಜಕುಮಾರಿ! ಕ್ರೀಡಾಗೃಹೇ = ಆಟದ (ಕ್ರೀಡೆಯ) ಮನೆಯಲ್ಲಿ, ತಥಾ = ಹಾಗೂ, ಭೋಜನ-ಸದ್ಮನಿ = ಊಟದ ಮನೆಯಲ್ಲಿ, ತವ = ನಿನ್ನ, ಭ್ರಾತಾ = ತಮ್ಮನು, ಕ್ರೀಡಾಂ = ಆಟವನ್ನು, ಭೋಜನಂ ವಾ = ಭೋಜನವನ್ನಾಗಲಿ, ಕಥಂ = ಹೇಗೆ, ಕರಿಷ್ಯತಿ = ಮಾಡುವನು? ॥ 399 ॥

**ಏವಂ ರುದಂತಮಾಲೋಕ್ಯ ಭ್ರಾತರಂ ದೀನಚೇತಸಮ್ ।**
**ತೋಂಡಮಾನೋ ನೃಪಶ್ರೇಷ್ಠೋ ದುಃಖಿತೋ ವಾಕ್ಯಮಬ್ರವೀತ್ ॥ 400 ॥**

ಏವಂ = ಇಂತು, ರುದಂತಂ = ಅಳುತ್ತಿರುವ, ದೀನಚೇತಸಂ = ದೀನಚಿತ್ತ(ಚೇತನ)ನಾದ, ಭ್ರಾತರಂ = ಅಣ್ಣನನ್ನು, ಆಲೋಕ್ಯ = ಅವಲೋಕಿಸಿ, ನೃಪಶ್ರೇಷ್ಠಃ = ರಾಜಶ್ರೇಷ್ಠನಾದ, ತೋಂಡಮಾನಃ = ತೋಂಡಮಾನನು, ದುಃಖಿತಃ = ವ್ಯಥೆಯುಳ್ಳವನಾಗಿ, ವಾಕ್ಯಂ = ಮಾತನ್ನು, ಅಬ್ರವೀತ್ = ಹೇಳಿದನು ॥ 400 ॥

*ತೋಂಡಮಾನ ಉವಾಚ -*

**ವಯಂ ದರಿದ್ರಾ ನಿರ್ಭಾಗ್ಯಾಃ ಕೃಪಣಾ ದೀನಚೇತಸಃ ।**
**ವಯಂ ಮರಣಮಾಪನ್ನಾ ನಾತ್ರ ಕಾರ್ಯಾ ವಿಚಾರಣಾ ॥ 401 ॥**

ತೋಂಡಮಾನ ಉವಾಚ = ತೋಂಡಮಾನನು ಹೇಳಹತ್ತಿದನು - ವಯಂ = ನಾವು, ದರಿದ್ರಾಃ = ಬಡವರು, ನಿರ್ಭಾಗ್ಯಾಃ = ಭಾಗ್ಯಹೀನರು, ಕೃಪಣಾಃ = ಕೃಪಣರು, ದೀನಚೇತಸಃ = ದೀನಚೇತನರು, ವಯಂ = ನಾವು, ಮರಣಮಾಪನ್ನಾಃ = ಮರಣೋನ್ಮುಖರಾದವರು, ಅತ್ರ = ಇದರಲ್ಲಿ (ಈ ವಿಷಯದಲ್ಲಿ), ವಿಚಾರಣಾ = ವಿಚಾರವು, ನ ಕಾರ್ಯಾ = ಮಾಡಬೇಕಾಗಿಲ್ಲ ॥ 401 ॥

**ಏತಾದೃಶೀಚ ಕಲ್ಯಾಣೀ ನೈವ ಲಬ್ಧಾ ಕಲೌಯುಗೇ ।**
**ಇತ್ಥಂ ವಯಂ ನಿಶ್ಚಿನುಮೋ ವಿಯೋಗಭೃಶದುಃಖಿತಾಃ ॥ 402 ॥**

ಕಲೌಯುಗೇ = ಈ ಕಲಿಯುಗದಲ್ಲಿ, ಏತಾದೃಶೀ = (ನಿನ್ನಂತಹ) ಇಂತಹ, ಕಲ್ಯಾಣೀ = ಮಂಗಳಕರಳಾದವಳು, ನೈವಲಬ್ಧಾ = ದೊರಕಲಸದಳವು, ವಿಯೋಗದುಃಖಿತಾಃ = ನಿನ್ನ ವಿಯೋಗವ್ಯಥೆಯಿಂದ ಕೂಡಿದವರಾದ, ವಯಂ = ನಾವು, ಇತ್ಥಂ = ಹೀಗೆ, ನಿಶ್ಚಿನುಮಃ = ನಿಶ್ಚಯಿಸುತ್ತೇವೆ ॥ 402 ॥

**ಏವಂ ತಾನ್ ರುದತೋ ದೃಷ್ಟ್ವಾ ವಸುಧಾನೋಽತಿ ದುಃಖಿತಾಮ್ ।**
**ಭಗಿನೀಂ ದೀನವದನಾಮಾಲಿಂಗ್ಯಾಹ ರುದನ್ ಮುಹುಃ ॥ 403 ॥**

ಏವಂ = ಹೀಗೆ, ರುದಿತ = ಅಳುತ್ತಿರುವ, ತಾನ್ = ಅವರನ್ನು, ದೃಷ್ಟ್ವಾ = ನೋಡಿ, ವಸುಧಾನಃ = ತಮ್ಮನಾದ ವಸುಧಾನನು, ಅತಿದುಃಖಿತಾಂ = ಬಹುವ್ಯಥೆಗೊಂಡಿರುವ, ದೀನವದನಾಂ = ದೀನಮುಖಿಯಾದ, ಭಗಿನೀಂ = ಅಕ್ಕ ಪದ್ಮಾವತಿಯನ್ನು, ಆಲಿಂಗ್ಯ = ವಾತ್ಸಲ್ಯದಿಂದ ಆಲಿಂಗಿಸಿ, ಮುಹುಃ = ಮತ್ತೆ ಮತ್ತೆ, ರುದನ್ = ಅಳುತ್ತಾ, ಆಹ = ಹೇಳಿದನು ॥ 403 ॥

ವಸುಧಾನ ಉವಾಚ -

**ಮಾತರಂ ಬಾಲಕಂ ತ್ಯಕ್ತ್ವಾ ಯಥಾ ಲೋಕೇ ಧನಾರ್ಜಕಃ ।**
**ಗಚ್ಛೇತ್ತಥಾ ಮಾಂ ಭಗಿನಿ ತಕ್ತ್ವಾ ತ್ವಂ ಕ್ವನು ಗಚ್ಛಸಿ ॥ 404 ॥**

ವಸುಧಾನ ಉವಾಚ = ವಸುಧಾನ ಹೇಳಹತ್ತಿದನು - ಭಗಿನಿ = ಸಹೋದರಿ! ಲೋಕೇ = ಜಗತ್ತಿನಲ್ಲಿ, ಧನಾರ್ಜಕಃ = ಧನಸಂಪಾದಿಸುವವನು, ಮಾತರಂ = ತಾಯಿಯನ್ನು, ಬಾಲಕಂ = ಮಗನನ್ನು (ಪತ್ನೀಪುತ್ರರನ್ನು), ತ್ಯಕ್ತ್ವಾ = ತ್ಯಜಿಸಿ, ಯಥಾ = ಹೇಗೆ, ಗಚ್ಛೇತ್ = ಹೋಗುವನೋ, ತಥಾ = ಹಾಗೆ, ಮಾಂ = ನನ್ನನ್ನು, ತ್ಯಕ್ತ್ವಾ = ಬಿಟ್ಟು, ಕ್ವನು ಗಚ್ಛಸಿ = ಎಲ್ಲಿಗೆ ಹೋಗುತ್ತಿರುವೆ? ॥ 404 ॥

**ಏವಂ ಪ್ರಸಂಗಸ್ತತ್ರಾಸೀತ್ ದೇವಾನಾಮಪಿ ಭೂಮಿಪ ।**
**ಋಷೀಣಾಂ ಕಶ್ಯಪಾದೀನಾಂ ದುಃಖಮತ್ಯಂತದಾರುಣಮ್ ॥ 405 ॥**

ಭೂಮಿಪ = ಎಲೈ ಜನಕರಾಜ! ಏವಂ ಪ್ರಸಂಗಾತ್ = ಈ ಬಗೆಯಾದ ಪ್ರಸಂಗದಿಂದ, ದೇವಾನಾಂ = ದೇವತೆಗಳಿಗೂ, ಕಶ್ಯಪಾದೀನಾಂ = ಕಶ್ಯಪರೇ ಮೊದಲಾದ, ಋಷೀಣಾಮಪಿ = ಋಷಿಗಳಿಗೂ ಸಹ, ಅತ್ಯಂತ ದಾರುಣಂ = ಅತಿದಾರುಣವಾದ, ದುಃಖಂ = ವ್ಯಥೆಯು, ಆಸೀತ್ = ಆಯಿತು ॥ 405 ॥

**ರುದಂತಂ ನೃಪತಿಂ ದೃಷ್ಟ್ವಾ ಶ್ರೀನಿವಾಸಃ ಸತಾಂಗತಿಃ ।**
**ಸ್ವಯಂ ರುರೋದ ಗೋವಿಂದೋ ಭಗಿನೀಂ ಪಾರ್ಥವಲ್ಲಭಾಮ್ ॥ 406 ॥**

**ಸ್ಮೃತ್ವಾ ಶ್ರೀದೇವಕೀಪುತ್ರಃ ತದದ್ಭುತಮಿವಾಭವತ್ ।**
**ಇತ್ಥಂ ಕೃತ್ವಾ ಲೋಕರೀತಿಮೈರಾವತಮುಪಾಸ್ಥಿತಃ ॥ 407 ॥**

**ಪದ್ಮಾವತ್ಯಾ ತಯಾ ಸಾರ್ಧಂ ಸರ್ವವಾದ್ಯ ಸಮನ್ವಿತಃ ।**
**ಗ್ರಾಮಂ ಪ್ರದಕ್ಷಿಣೀಕೃತ್ಯ ರಮಯಾ ಸಹಿತೋ ಹರಿಃ ॥ 408 ॥**

ರುದಂತಂ = ಅಳುತ್ತಿರುವ, ನೃಪತಿಂ = ಮಹಾರಾಜನನ್ನು, ದೃಷ್ಟ್ವಾ = ನೋಡಿ, ಸತಾಂಗತಿಃ = ಸಜ್ಜನರಿಗೆ ಆಶ್ರಯನಾದ, ಶ್ರೀನಿವಾಸಃ = ಶ್ರೀನಿವಾಸನು, ಪಾರ್ಥವಲ್ಲಭಾಂ = ಅರ್ಜುನನ ಮಡದಿಯಾದ, ಭಗಿನೀಂ = ತನ್ನ ತಂಗಿಯಾದ ಸುಭದ್ರೆಯನ್ನು, (ಸುಭದ್ರೆಯು ಪತಿಗೃಹಕ್ಕೆ ಹೋದಾಗಿನ ಸಂದರ್ಭವನ್ನು), ಸ್ಮೃತ್ವಾ = ಸ್ಮರಿಸಿಕೊಂಡು, ದೇವಕೀಪುತ್ರಃ = ದೇವಕಿಯ ಪುತ್ರನಾದ, ಗೋವಿಂದಃ = ಶ್ರೀಹರಿಯು, ಸ್ವಯಂ = ತಾನೂ, ರುರೋದ = ಅತ್ತನು, ತತ್ = ಅವನ ಆ ನಟನೆಯು, ಅದ್ಭುತಮಿವ = ಅದ್ಭುತದಂತೆ (ಆಶ್ಚರ್ಯ ರೀತಿಯಲ್ಲಿ), ಅಭವತ್ = ಆಯಿತು. ಇತ್ಥಂ = ಹೀಗೆ, ಲೋಕರೀತಿಂ = ಮಾನವರ ರೀತಿಯನ್ನು, ಕೃತ್ವಾ = ಮಾಡಿ, ಐರಾವತಂ = ಇಂದ್ರನ ಆನೆಯನ್ನು, ಉಪಾಶ್ರಿತಃ = ಆಶ್ರಯಿಸಿದವನಾಗಿ (ಏರಿ ಕುಳಿತು), ರಮಾಯಾಸಹಿತಃ = ಲಕ್ಷ್ಮಿಯಿಂದೊಡಗೂಡಿದ, ಹರಿಃ = ಶ್ರೀನಿವಾಸನು, ತಯಾ = ಪತ್ನಿಯಾದ, ಪದ್ಮಾವತ್ಯಾ = ಪದ್ಮಾವತಿಯ, ಸಾರ್ಧಂ = ಸಹಿತನಾಗಿ, ಸರ್ವವಾದ್ಯ ಸಮನ್ವಿತಃ = ಸಕಲವಾದ್ಯವೈಭವದಿಂದೊಡಗೂಡಿ, ಗ್ರಾಮಂ = ನಾರಾಯಣಪುರವನ್ನು, ಪ್ರದಕ್ಷಿಣೀಕೃತ್ಯ = ಪ್ರದಕ್ಷಿಣೆಮಾಡಿ, ॥ 406-408 ॥

**ಸ್ವನಿವೇಶ ಗೃಹಂ ಭೇಜೇ ಪದ್ಮಾಸನ ಭವಾದಿಕೈಃ ।**
**ತತೋ ಹರಿಃ ಶ್ರೀನಿವಾಸಃ ಸ್ವಸ್ಥಾನಂ ಗಂತುಮೀಹತ ॥ 409 ॥**

ಪದ್ಮಾಸನ ಭವಾದಿಕೈಃ = ಬ್ರಹ್ಮ-ರುದ್ರಾದಿಗಳೊಡನೆ, ಸ್ವನಿವೇಶಗೃಹಂ = ತನ್ನ ವಾಸಮಂದಿರವನ್ನು ಕುರಿತು, ಭೇಜೆ = ಹೋದನು (ಹೊಂದಿದನು?) ತತಃ = ಆ ಬಳಿಕ, ಶ್ರೀನಿವಾಸಃ = ರಮಾದೇವಿಗೆ ಆಶ್ರಯನಾದ, ಹರಿಃ = ಶ್ರೀಹರಿಯು, ಸ್ವಸ್ಥಾನಂ = ತನ್ನ ವಾಸಸ್ಥಳವನ್ನು ಕುರಿತು, ಗಂತುಂ = ಹೋಗಲು, ಈಹತ = ಅಪೇಕ್ಷಿಸಿದನು ॥ 409 ॥

**ಗರುಡಸ್ಕಂಧಮಾರೂಢಃ ಪತ್ನೀಂ ಪದ್ಮಾವತೀಮಪಿ ।**
**ಆರೋಪಯನ್ವರಾರೋಹಾ ಮನ್ಯೋಽನ್ಯಂ ಪರಿರಭ್ಯ ಚ ॥ 410 ॥**
**ಗರುಡಸ್ಕಂಧಮಾರೂಢೋ ಗಂತುಂ ಸ್ವಸ್ಥಾನಮುತ್ಸುಕಃ ।**
**ಹರಿರಾಮಂತ್ರಣಾರ್ಥಂತು ಶ್ವಶ್ರೂಶ್ವಶುರಯೋಸ್ತದಾ ॥ 411 ॥**

ಗರುಡಸ್ಕಂಧಮಾರೂಢಃ = ಗರುಡನ ಹೆಗಲೇರಿದವನಾಗಿ, ವರಾರೋಹಾಂ = ಶ್ರೇಷ್ಠಳಾದ, ಪತ್ನೀಂ = ಹೆಂಡತಿಯಾದ, ಪದ್ಮಾವತೀಮಪಿ = ಪದ್ಮಾವತಿಯನ್ನು ಕೂಡ, ಆರೋಪ್ಯ = ಏರಿಸಿಕೊಂಡು, ಅನ್ಯೋನ್ಯಂ = ಪರಸ್ಪರ, ಪರಿರಭ್ಯಚ = ಅಪ್ಪಿಕೊಂಡು, ಗರುಡಸ್ಕಂಧಂ = ಗರುಡನಭುಜವನ್ನು, ಆರೂಢಃ = ಹತ್ತಿಕುಳಿತವನಾಗಿ, ಸ್ವಸ್ಥಾನಂ = ತನ್ನ ವಾಸಸ್ಥಳವಾದ ವೇಂಕಟಾಚಲವನ್ನು ಕುರಿತು, ಗಂತುಂ = ಹೋಗಲು, ಉತ್ಸುಕಃ = ಉತ್ಸುಕನಾಗಿ, ತದಾ = ಆವಾಗ, ಶ್ವಶ್ರೂಃ ಶ್ವಶುರಯೋಃ = ಅತ್ತೆ ಮಾವಂದಿರ, ಆಮಂತ್ರಣಾರ್ಥಂ = ಆಹ್ವಾನಿಸಲು ॥ 410-411 ॥

**ಪುನರ್ಗೃಹಂ ಸಂಪ್ರವಿಶ್ಯ ಗಮನೇಚ್ಛುರಭೂದಥ ।**
**ಶ್ವಶುರೌ ಪರ್ಯಪೃಚ್ಛಚ್ಚ ಸಾಷ್ಟಾಂಗಂ ಪ್ರಣಿಪತ್ಯ ವೈ ॥ 412 ॥**

ಪುನಃ = ಮತ್ತೆ, ಗಮನೇಚ್ಛುಃ = ಅವರಲ್ಲಿಗೆ ಹೊರಡಲಿಚ್ಛೆಯುಳ್ಳವನು, ಅಭೂತ್ = ಆದನು. ಅಥ = ತರುವಾಯ, ಶ್ವಶುರೌ = ಅತ್ತೆ ಮಾವಂದಿರನ್ನು, ಸಾಷ್ಟಾಂಗಂ ಪ್ರಣಿಪತ್ಯ = ಸಾಷ್ಟಾಂಗ ನಮಸ್ಕಾರಮಾಡಿ, ಪರ್ಯಪೃಚ್ಛಚ್ಚ = ಆಶೀರ್ವದಿಸುವಂತೆ ಕೇಳಿದನು ॥ 412 ॥

**ಆಶೀರ್ವಾದಂ ತತಶ್ಚಕ್ರೇ ಸ್ವಜಾಮಾತುರನಾಮಯಮ್ ।**
**ಆಕಾಶರಾಜಃ ಶ್ವಶುರಃ ಶ್ವಶ್ರ್ವಾ ಚ ಧರಯಾ ಸಹ ॥ 413 ॥**

ಶ್ವಶುರಃ = ಮಾವನಾದ, ಆಕಾಶರಾಜಃ = ಆಕಾಶರಾಜನು, ಶ್ವಶ್ರ್ವಾ = ಅತ್ತೆಯಾದ, ಧರಯಾ ಸಹ = ಧರಣೀದೇವಿಯಿಂದ ಸಹಿತನಾಗಿ, ಅನಾಮಯಂ = ರೋಗರಹಿತನಾದ ದೋಷದೂರನಾದ, ಸ್ವಜಾಮಾತರಂ = ತನ್ನ ಅಳಿಯನಾದ ಶ್ರೀನಿವಾಸನಿಗೆ, ಆಶೀರ್ವಾದಂ = ಆಶೀರ್ವಾದವನ್ನು, ಚಕ್ರೇ = ಮಾಡಿದನು, ತತಃ = ತರುವಾಯ. ॥ 413 ॥

*ಆಕಾಶರಾಜ ಉವಾಚ -*

**ದೀರ್ಘಾಯುರ್ಭವ ಗೋವಿಂದ ಸರ್ವಲೋಕ ಧುರಂಧರ ।**
**ಇತ್ಯಾಶಿಷಾಭಿನಂದ್ಯಾಥ ಧರಣೀ ವಾಕ್ಯಮಬ್ರವೀತ್ ॥ 414 ॥**

ಆಕಾಶರಾಜ ಉವಾಚ = ಆಕಾಶಭೂಪತಿಯು ಮಾತನಾಡಿದನು, ಸರ್ವಲೋಕಧುರಂಧರ = ಸಮಸ್ತ ಲೋಕಗಳ ರಕ್ಷಣೆಯ ಭಾರವನ್ನು ಹೊತ್ತಿರುವವನೇ, ಗೋವಿಂದ = ಹೇ ಶ್ರೀನಿವಾಸ! ದೀರ್ಘಾಯುರ್ಭವ = ದೀರ್ಘ ಆಯುಷ್ಯವಂತನಾಗು, ಇತ್ಯಾಶಿಷಾ = ಇಂತು ಆಶೀರ್ವಾದದಿಂದ, ಅಭಿನಂದ್ಯ = ಅಭಿನಂದಿಸಿದ ಮೇಲೆ, ಧರಣೀ = ಧರಣೀ ದೇವಿಯು, ವಾಕ್ಯಮಬ್ರವೀತ್ = ಮಾತನಾಡಿದಳು ॥ 414 ॥

*ಧರಣ್ಯುವಾಚ-*

**ಮಾಸಾಂತೇ ಗಚ್ಛ ಗೋವಿಂದ ವಧ್ವಾ ಸಹ ನವೋಢಯಾ ।**
**ಇದಂ ತೇ ಶ್ವಶುರಸ್ಯೈವ ವಾಕ್ಯಂ ಮಾನಯ ಮಾಧವ ॥ 415 ॥**

ಧರಣ್ಯುವಾಚ = ಧರಣೀದೇವಿಯು ಅಂದಳು - ಗೋವಿಂದ = ಶ್ರೀನಿವಾಸ! ನವೋಢಯಾ = ನೂತನವಾಗಿ ವಿವಾಹಿತಳಾದ, ವಧ್ವಾ = ವಧುವಾದ ಪದ್ಮಾವತಿಯೊಡನೆ, ಮಾಸಾಂತೇ = ಒಂದು ತಿಂಗಳಾದ ಮೇಲೆ (ತಿಂಗಳ ನಾಕಬಲಿ ಸಮಾರಂಭವಾದ ಮೇಲೆ), ಗಚ್ಛ = ಹೋಗುವವನಾಗು, ಮಾಧವ = ಶ್ರೀಹರಿಯೇ, ಇದಂ ವಾಕ್ಯಂ = ಈ ಮಾತು, ತೇ = ನಿನ್ನ, ಶ್ವಶುರಸ್ಯೈವ = ಮಾವನು ಹೇಳಿದ ವಚನವೆಂದೇ ತಿಳಿದು, (ನಿನ್ನ ಮಾವನ ಮಾತನ್ನು), ಮಾನಯ = ಗೌರವಿಸು. ॥ 415 ॥

**ಇತಿ ತಸ್ಯಾ ವಚಃ ಶ್ರುತ್ವಾ ವಾಸುದೇವೋಽಬ್ರವೀನ್ನೃಪಮ್ ।**

*ಶ್ರೀನಿವಾಸ ಉವಾಚ -*

**ನೃಪ ವಾಕ್ಯಂ ಶ್ರುಣು ಮಮ ಕಾರ್ಯಸ್ಯ ಮಹತೀ ತ್ವರಾ ॥ 416 ॥**
**ತಸ್ಮಾದಾಜ್ಞಾಂ ಚ ಮಾಂ ದೇಹಿ ರಾಜನ್ ತೇ ಸ್ಯಾತ್ಕೃಪಾ ಮಯಿ ।**
**ಇತ್ಯುಕ್ತ್ವಾ ವಾಸುದೇವಸ್ತು ಗರುಡಸ್ಕಂಧಮಾಸ್ಥಿತಃ ॥ 417 ॥**

ಇತಿ = ಈ ರೀತಿಯ, ತಸ್ಯಾಃ = ಧರಣೀದೇವಿಯ, ವಚಃಶ್ರುತ್ವಾ = ಮಾತನ್ನು ಕೇಳಿ, ವಾಸುದೇವಃ = ಶ್ರೀಕೃಷ್ಣನು, ನೃಪಃ = ರಾಜನನ್ನು ಕುರಿತು, ಅಬ್ರವೀತ್ = ಹೇಳಿದನು.

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳುತ್ತಿದ್ದಾನೆ - ನೃಪ = ಮಹಾರಾಜ! ಮಮ = ನನ್ನ, ವಾಕ್ಯಂ = ಮಾತನ್ನು, ಶ್ರುಣು = ಕೇಳು, ಕಾರ್ಯಸ್ಯ = ಮಾಡಬೇಕಾದ ಕಾರ್ಯವು, ಮಹತೀತ್ವರಾ = ಅತ್ಯವಸರದ್ದಾಗಿದೆ, ತಸ್ಮಾತ್ = ಆದ್ದರಿಂದ, ರಾಜನ್ = ದೊರೆಯೇ, ಮಾಮ್ = ನನಗೆ, ಆಜ್ಞಾಂ = ಹೊರಡಲನುಮತಿಯನ್ನು, ದೇಹಿ = ಕೊಡು, ಹಾಗೆ ಮಾಡಿದಲ್ಲಿ, ತೇ = ನಿನ್ನ, ಕೃಪಾ = ಕರುಣೆಯು, ಮಯಿ = ನನ್ನಲ್ಲಿ, ಸ್ಯಾತ್ = ಉಂಟಾದೀತು. ಇತ್ಯುಕ್ತ್ವಾ = ಇಂತೆಂದು, ವಾಸುದೇವಸ್ತು = ಶ್ರೀನಿವಾಸನು, ಗರುಡಸ್ಕಂಧಮಾಸ್ಥಿತಃ = ಗರುಡನ ಭುಜದಲ್ಲಿ ಕುಳಿತು ॥416-417॥

**ಜಗಾಮ ಭಗವಾನ್ ಸಾಕ್ಷಾತ್ಸರ್ವದೇವಸಮನ್ವಿತಃ ।**
**ಆಕುಲಾ ವ್ಯಾಕುಲಾ ಸ್ಸರ್ವೇ ನಗರಸ್ಥಾ ಜನಾಸ್ತದಾ ॥ 418 ॥**

ಸರ್ವದೇವ ಸಮನ್ವಿತಃ = ಸಕಲದೇವತೆಗಳಿಂದ ಸಹಿತನಾಗಿ, ಸಾಕ್ಷಾತ್ ಭಗವಾನ್ = ಸಾಕ್ಷಾತ್ ಷಡ್ಗುಣೈಶ್ವರ್ಯಪೂರ್ಣನಾದ ಶ್ರೀನಿವಾಸನು, ಜಗಾಮ = ಪ್ರಯಾಣ ಬೆಳೆಸಿದನು. ತದಾ = ಆವಾಗ, ನಗರಸ್ಥಾಃ = ನಾರಾಯಣ- ಪುರದಲ್ಲಿರುವ, ಸರ್ವೇ = ಸಮಸ್ತರಾದ, ಜನಾಃ = ಪ್ರಜಾಜನರು, ಆಕುಲಾಃ = ಒಟ್ಟಾಗಿ, ವ್ಯಾಕುಲಾಃ = ವ್ಯಾಕುಲವುಳ್ಳವರಾಗಿ, ॥418॥

**ಪ್ರಾಕಾರಗೋಪುರಾರೂಢಾಃ ಪಶ್ಯಂತಃ ಸ್ವದೃಶಾಽವದನ್ ।**

*ಜನಾ ಊಚುಃ ॥*

**ಧನ್ಯಾ ರಾಜಕುಲೋತ್ಪನ್ನಾ ಪದ್ಮಾ ಕಮಲಲೋಚನಾ ॥ 419 ॥**

ಪ್ರಾಕಾರಗೋಪುರಾರೂಢಾಃ = ಕೋಟೆ, ಗೋಡೆ ಮತ್ತು ಗೋಪುರಗಳ ಮೇಲೆ ಹತ್ತಿದವರಾಗಿ, ಸ್ವ ದೃಶಾ = ತಮ್ಮ ಕಣ್ಣುಗಳಿಂದ, ಪಶ್ಯಂತಿಸ್ಮ = ಶ್ರೀನಿವಾಸಾದಿಗಳು ಪ್ರಯಾಣ ಬೆಳೆಸುವುದನ್ನು ನೋಡುತ್ತಿರುವವರಾಗಿ, ಅವದನ್ = ಹೇಳಿದರು, ಜನಾ ಊಚುಃ = ಜನರು ಇಂತೆಂದರು – ರಾಜಕುಲೋತ್ಪನ್ನಾ = ರಾಜವಂಶದಲ್ಲಿ ಜನಿಸಿದ, ಕಮಲಲೋಚನಾ = ಅರವಿಂದಾಕ್ಷಿಯಾದ, ಪದ್ಮಾ = ಪದ್ಮಾವತಿಯು, ಧನ್ಯಾ = ಧನ್ಯಳು ।। 419 ।।

**ಅನುಗಚ್ಛತಿ ಗೋವಿಂದಂ ಪಶ್ಯತೇತಿ ಪರಸ್ಪರಮ್ ।**
**ತದಾ ದದೌ ಮಹಾರಾಜಃ ಪಾರಿಬರ್ಹಂ ಶ್ರಿಯಃಪತೇಃ ।। 420 ।।**

ಗೋವಿಂದಂ = ಶ್ರೀಹರಿಯನ್ನು, ಅನುಗಚ್ಛತಿ = ಅನುಸರಿಸಿ ಹೋಗುತ್ತಿದ್ದಾಳೆ, ಪಶ್ಯತ = ನೋಡಿರಿ, ಇತಿ = ಹೀಗೆ, ಪರಸ್ಪರಂ = ಒಬ್ಬರಿಗೊಬ್ಬರು, (ಊಚುಃ = ಹೇಳಿದರು) ತದಾ = ಆವಾಗ, ಮಹಾರಾಜಃ = ಆಕಾಶರಾಜನು, ಶ್ರಿಯಃಪತೇಃ = ರಮಾಕಾಂತನಿಗೆ, ಪಾರಿಬರ್ಹಣಂ = ಪಾರಿತೋಷಕಗಳನ್ನು, ದದೌ = ಕೊಟ್ಟನು. ।। 420 ।।

**ತಂಡುಲಾನ್ ಶಾಲಿಸಂಭೂತಾನ್ ವೃಷಭಾಣಾಂ ರಥೋಪರಿ ।**
**ಆರೋಪ್ಯ ಪ್ರೇಷಯಾಮಾಸ ಶತಂ ಖಾರೀರ್ವಿಯನ್ನೃಪಃ ।। 421 ।।**

ವಿಯನ್ನೃಪಃ = ಆಕಾಶರಾಜನು, ಶಾಲಿಸಂಭೂತಾನ್ = ಭತ್ತದಿಂದಾದ, ತಂಡುಲಾನ್ = ಅಕ್ಕಿಗಳನ್ನು (ಅರಳುಗಳನ್ನು), ವೃಷಭಾಣಾಂ = ಎತ್ತುಗಳ, ರಥೋಪರಿ = ಗಾಡಿಯ ಮೇಲೆ, ಆರೋಪ್ಯ = ಏರಿಸಿ, ಶತಂಖಾರೀಃ = ಒಂದು ನೂರು (ಇನ್ನೂರು?) ನಾರಿನ ಚೀಲಗಳನ್ನು, ಪ್ರೇಷಯಾಮಾಸ = ಕಳುಹಿಸಿದನು ।। 421 ।।

**ಮುದ್ಗಾನ್ಗೋಸ್ವಾಮಿಸಂರೂಢಾಂಸ್ತ್ರಿಂ ಶತ್ಖಾರೀರ್ದದೌ ಹರೇಃ ।**
**ಗುಡಭಾರಂ ಮಹಾಂತಂ ಚ ತಿಂತ್ರಿಣೀಭಾರಮೇವ ಚ ।। 422 ।।**

ಹರೇಃ = ಶ್ರೀನಿವಾಸನಿಗೆ, ಗೋಸ್ವಾಮಿಸಂರೂಢಾನ್ = ವೃಷಭಗಳ ಮೇಲೇರಿಸಿದ, ತ್ರಿಂಶತ್ = ಮೂವತ್ತು, (ಮೂರುನೂರು) ಖಾರೀಃ = ಚೀಲಗಳು, ಮುದ್ಗಾನ್ = ಮುದ್ಗಗಳನ್ನು, ದದೌ = ನೀಡಿದನು, ಚ = ಮತ್ತು, ಮಹಾಂತಂ = ಅತಿದೊಡ್ಡದಾದ, ಗುಡಭಾರಂ = ಬೆಲ್ಲದ (ಮಟ್ಟೆ)ಮೂಟೆಯನ್ನು, ತಿಂತ್ರಿಣೀಭಾರ ಮೇವಚ = ಹುಣಸೇಹಣ್ಣಿನ (ಮಟ್ಟೆ) ಮೂಟೆಯನ್ನೂ ।।422 ।।

**ಪಯೋಘಟ ಸಹಸ್ರಾಣಿ ದಧಿಭಾಂಡಶತಾನಿ ಚ ।**
**ಸಹಸ್ರಾರ್ಧಂ ಘೃತಪೂರ್ಣಂ ಚರ್ಮಪಾತ್ರಾಣಿ ಸರ್ಷಪಾನ್ ।। 423 ।।**

ಪಯೋಘಟಸಹಸ್ರಾಣಿ = ಹಾಲಿನ ಒಂದು ಸಾವಿರ (ಕೊಡ) ಭಾಂಡೆಗಳನ್ನೂ, ಚ = ಮತ್ತು, ದಧಿಭಾಂಡಶತಾನಿ = ನೂರು ಗುಡಾಣ(ಭಾಂಡೆ)ಗಳಷ್ಟು ಮೊಸರನ್ನೂ, ಘೃತ ಪೂರ್ಣಂ = ತುಪ್ಪ ತುಂಬಿದ, ಸಹಸ್ರಾರ್ಧಂ = ಐದುನೂರು, ಚರ್ಮ ಪಾತ್ರಾಣಿ = ಚರ್ಮದ ಪಾತ್ರೆಗಳನ್ನೂ, ಸರ್ಷಪಾನ್ = ಸಾಸುವೆಗಳನ್ನೂ ।। 423 ।।

**ಮೇಥಿಕಾನ್ ಹಿಂಗುಲವಣ ತೈಲಪಾತ್ರಾಣಿ ಚೈವ ಹಿ ।**
**ತಥಾ ಶರ್ಕರಯಾ ಪೂರ್ಣಘಂಟಾಸ್ತು ದ್ವೇಶತೇ ತಥಾ ।। 424 ।।**

ಮೇಥಿಕಾನ್ = ಮೆಂತ್ಯಗಳು, ಹಿಂಗುಲವಣತೈಲಪಾತ್ರಾಣಿ - ಹಿಂಗು = ಇಂಗು, ಲವಣ = ಉಪ್ಪು, ತೈಲ = ಎಣ್ಣೆ ಇವುಗಳ, ಪಾತ್ರಾಣಿ ಚೈವ = ಪಾತ್ರೆಗಳನ್ನೂ ಸಹ, ತಥಾ = ಅದರಂತೆ, ದ್ವೇಶತೇ = ಎರಡುನೂರು, ಶರ್ಕರಯಾ = ಸಕ್ಕರೆಯಿಂದ, ಪೂರ್ಣಘಟಾಂಸ್ತು = ತುಂಬಿದ ಕೊಡಗಳನ್ನೂ ॥ 424 ॥

**ಊರ್ವಾರುಕಂ ಚೂತಕಂ ಚ ರಾಜರಂಭಾಫಲಾನಿ ಚ ।**
**ಕೂಷ್ಮಾಂಡಕಂದಮೂಲಾನಿ ಮರೀಚಾಮಲಕಾನಿ ಚ[28] ॥ 425 ॥**

ತಥಾ = ಅದರಂತೆಯೇ, ಉರ್ವಾರುಕಂ = ಸೌತೇಕಾಯಿ, ಚೂತಕಂ = ಮಾವಿನಕಾಯಿ (ಮಾವಿನ ಉಪ್ಪಿನಕಾಯಿ?) ಚ = ಮತ್ತು, ರಾಜರಂಭಾಫಲಾನಿ ಚ = ರಾಜಬಾಳೇಹಣ್ಣುಗಳನ್ನೂ ಸಹ, ಕೂಷ್ಮಾಂಡಂ = ಕುಂಬಳಕಾಯಿ, ಕಂದಮೂಲಾನಿ = ಗೆಡ್ಡೆ ಗೆಣಸುಫಲಗಳು, ಮರೀಚಾ, (ಚ್ಯಾ) ಮಲಕಾನಿ ಚ = ಮೆಣಸು, ನೆಲ್ಲಿಕಾಯಿ (ಚೆಟ್ಟು)ಗಳು ॥ 425 ॥

**ಮಧುಭಾಂಡ ಶತೇ ದ್ವೇ ಚ ರಂಭಾ ಪತ್ರಾಣಿ ಕಾಷ್ಠಕಾನ್ ।**
**ಅಶ್ವಾನಾಮಯುತಂ ದತ್ವಾ ಗಜಾನಾಂ ಚ ಸಹಸ್ರಕಮ್ ॥ 426 ॥**

ದ್ವೇಶತೇ = ಎರಡುನೂರು, ಮಧುಭಾಂಡೇ ಚ = ಜೇನುತುಪ್ಪದ (ಗುಡಾಣಿ) ಭಾಂಡೆಗಳನ್ನೂ, ರಂಭಾಪತ್ರಾಣಿ = ಬಾಳೆಯ ಎಲೆಗಳನ್ನು, ಕಾಷ್ಠಕಾನ್ = ಕಟ್ಟಿಗೆಗಳನ್ನೂ, ಅಶ್ವಾನಾಂ ಆಯುತಂ = ಹತ್ತು ಸಾವಿರ ಕುದುರೆಗಳನ್ನೂ, ಸಹಸ್ರಕಂ = ಒಂದು ಸಾವಿರ, ಗಜಾನಾಂಚ = ಆನೆಗಳನ್ನೂ (ಗಜಾನಾಂ = ಆನೆಗಳ, ಸಹಸ್ರಕಂ = ಒಂದು ಸಾವಿರವನ್ನು) ದತ್ವಾ = ಕೊಟ್ಟು ॥ 426 ॥

**ಧೇನೂನಾಂ ಪಂಚಸಾಹಸ್ರಮಾವಿಕಾನಾಂ ಶತಂ ತಥಾ ।**
**ದಾಸೀನಾಂ ದ್ವೇಶತೇ ರಾಜನ್ ದಾಸಾನಾಂ ತ್ರಿಶತಂ ತಥಾ ॥ 427 ॥**

**ವಸ್ತ್ರಾಣಿ ವಿವಿಧಾನ್ಯಾಶು ಪರ್ಯಂಕಂ ರತ್ನಭೂಷಿತಮ್ ।**
**ಉಪಬರ್ಹಂ ರತ್ನಯುತಂ ಪಾರಿಬರ್ಹೇಣ ಸಂಯುತಮ್ ॥ 428 ॥**

ಧೇನೂನಾಂ = ಆಕಳುಗಳು, ಪಂಚಸಾಹಸ್ರಂ = ಐದುಸಾವಿರವನ್ನೂ (ಐದುಸಾವಿರ ಆಕಳುಗಳನ್ನೂ), ಆವಿಕಾನಾಂ = ದನಕಾಯುವ ಗೋಪಾಲಕರುಗಳು (ಅಥವಾ ಚರ್ಮದಿಂದ ಕೆಲಸಮಾಡುವವರು) ಶತಂ = ನೂರು ಜನರನ್ನೂ, ತಥಾ = ಅದರಂತೆ, ರಾಜನ್ = ಎಲೈ ಜನಕರಾಯ! ದಾಸೀನಾಂ = ದಾಸಿಯರು, ದ್ವೇಶತೇ = ಎರಡುನೂರನ್ನೂ (2 ನೂರು ದಾಸಿಯರನ್ನೂ), ದಾಸಾನಾಂ = ಸೇವಕರುಗಳು, ತ್ರಿಶತಂ = ಮೂರುನೂರನ್ನು, (ಮೂರುನೂರು ಸೇವಕರನ್ನೂ), ತಥಾ = ಹಾಗೆಯೇ, ವಿವಿಧಾನಿ = ಬಗೆಬಗೆಯ, ವಸ್ತ್ರಾಣಿ = ಬಟ್ಟೆಗಳು, ಆಶು = ಜಾಗ್ರತೆಯಾಗಿ, ರತ್ನಭೂಷಿತಂ = ರತ್ನದಿಂದ ಅಲಂಕರಿಸಲ್ಪಟ್ಟ, ಪರ್ಯಂಕಂ = ಮಂಚವನ್ನು, ರತ್ನಂಯುತಂ = ರತ್ನಮಂಡಿತವಾದ, ಉಪಬರ್ಹಂ = ಸುಪ್ಪತ್ತಿಗೆಯಿಂದ ಸಹಿತವಾದ, ಪಾರಿಬರ್ಹೇಣ = ಪಾರಿತೋಷಕದಿಂದ, ಸಂಯುತಂ = ಯುಕ್ತವಾದ ॥ 427-428 ॥

**ಏವಮಾದೀನಿ ವಸ್ತೂನಿ ಗೃಹೀತ್ವಾ ನೃಪಸತ್ತಮಃ ।**
**ಪುತ್ರೇಣ ಸಹಿತೋ ರಾಜಾ ಶ್ರೀನಿವಾಸಪರಾಯಣಃ ॥ 429 ॥**

---

28. ಪಾ : ಮರೀಚ್ಯಾಮಲಕಾನಿ ಚ.

ಏವಮಾದೀನಿ = ಇವೇ ಮೊದಲಾದ, ವಸ್ತೂನಿ = ವಸ್ತುಗಳನ್ನು, ನೃಪಸತ್ತಮಃ = ರಾಜಶ್ರೇಷ್ಠನು, ಗೃಹೀತ್ವಾ = ತೆಗೆದುಕೊಂಡು, ಪುತ್ರೇಣ = ಮಗನಿಂದ, ಸಹಿತಃ = ಉಕ್ತನಾಗಿ, ಶ್ರೀನಿವಾಸಪರಾಯಣಃ = ಶ್ರೀನಿವಾಸನಲ್ಲಿ ರತನಾದ (ಆಸಕ್ತನಾದ), ರಾಜಾ = ದೊರೆಯಾದ ॥ 429 ॥

**[29]ಆಕಾಶರಾಜೋ ಧರ್ಮಜ್ಞಃ ಶ್ರೀನಿವಾಸಸ್ಯ ಸನ್ನಿಧಿಮ್ ।**
**ಆಗತಃ [30]ಶ್ವಶುರಂ ದೃಷ್ಟ್ವಾ ಚೋತ್ತಸ್ಥೌ ಜಗದೀಶ್ವರಃ ॥ 430 ॥**

ಧರ್ಮಜ್ಞಃ = ಧರ್ಮಜ್ಞನಾದ, ಆಕಾಶರಾಜಃ = ಆಕಾಶರಾಜನು, ಶ್ರೀನಿವಾಸಸ್ಯ ಸನ್ನಿಧಿಂ = ಶ್ರೀನಿವಾಸ ಸನ್ನಿಧಿಗೆ, (ಪಾ :- ಸಂಪ್ರಾಪ್ತಃ = ಬಂದನು) ಆಗತಃ = ಬಂದನು (ಪಾ :- ಆಗತಂ = ಬಂದಂಥ), ಶ್ವಶುರಂ = ಮಾವನನ್ನು, ದೃಷ್ಟ್ವಾ = ನೋಡಿ, ಜಗದೀಶ್ವರಃ = ಜಗತ್ಪ್ರಭುವಾದ ಶ್ರೀನಿವಾಸನು, ಉತ್ತಸ್ಥೌ = ಎದ್ದು ನಿಂತನು ॥ 430 ॥

ಶ್ರೀನಿವಾಸ ಉವಾಚ -

**ದೂರಾಧ್ವಾನಂ ಮಹಾರಾಜ ಕಿಮರ್ಥಂ ತ್ವಂ ಸಮಾಗತಃ ।**
**ದಾತವ್ಯಂ ಕಿಂ ನೃಪಶ್ರೇಷ್ಠ ತವ ಪುತ್ರಸ್ಯ ಮೇಽನಘ ॥ 431 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಲಾರಂಭಿಸಿದನು - ಮಹಾರಾಜ = ಎಲೈ ದೊರೆಯೇ, ದೂರಾಧ್ವಾನಂ = ಬಹುದೂರದಮಾರ್ಗವಾದ ಇಲ್ಲಿಗೆ, ತ್ವಂ = ನೀನು, ಕಿಮರ್ಥಂ = ಏತಕ್ಕಾಗಿ, ಸಮಾಗತಃ = ಬರುವವನಾಗಿದ್ದೀಯೇ? ಅನಘ = ಪಾಪರಹಿತನಾದ, ನೃಪಶ್ರೇಷ್ಠ = ರಾಜೋತ್ತಮನೇ, ತವ = ನಿನ್ನ, ಪುತ್ರಸ್ಯ = ಮಗನಾದ, ಮೇ = ನನಗೆ, ದಾತವ್ಯಂ ಕಿಂ = ಇವಲ್ಲ ಕೊಡಬೇಕೇನು? ॥ 431 ॥

**ಕನ್ಯಾ ದತ್ತಾ ಸುಖಂ ಪ್ರಾಪ್ತಂ ಸುಕೃತಂ ಕಿಂ ಕೃತಂ ತ್ವಯಾ ।**
**ಸಂತೋಷಶ್ಚಾತುಲಃ ಪ್ರಾಪ್ತೋ ಮಮತಾತ[31] ನಸಂಶಯಃ ॥ 432 ॥**

ಕನ್ಯಾ = ನಿನ್ನ ಕನ್ಯೆಯು, ದತ್ತಾ = ಕೊಡಲ್ಪಟ್ಟಳು, (ಮೇ = ನನಗೆ), ಸುಖಂ = ಸುಖವು, ಪ್ರಾಪ್ತಂ = ಉಂಟಾಯಿತು, ತ್ವಯಾ = ನಿನ್ನಿಂದ, ಕಿಂ = ಏನು, ಸುಕೃತಂ = ಪುಣ್ಯವು, ಕೃತಂ = ಮಾಡಲ್ಪಟ್ಟಿತು (ಅಥವಾ - ಕನ್ಯೆಯನ್ನು ಕೊಟ್ಟು ಪುಣ್ಯವನ್ನು ಮಾಡಿದ್ದೀಯೆ), ಮಮ ತಾವತ್ (ತಾತ = ಪ್ರಿಯನೇ) = ನನಗಾದರೋ, ಅತುಲಃ = ಅಳೆಯಲು ಸುಲಭವಲ್ಲದಷ್ಟು (ಹೆಚ್ಚಾದ), ಸಂತೋಷಃ = ಆನಂದವು, ಪ್ರಾಪ್ತಃ = ಉಂಟಾಯಿತು, ನ ಸಂಶಯಃ = ಇದರಲ್ಲಿ ಸಂದೇಹವಿಲ್ಲ ॥ 432 ॥

**ಕಿಂ ತೇ ಮನೋಗತಂ ರಾಜನ್ ತನ್ಮಮಾಚಕ್ಷ್ವ ಭೂಪತೇ ।**
**ಸಂದೇಹಂ ಮಾಕುರುಷ್ವಾತ್ರ ದಾನಾದಾನೇ ಮಹೀಪತೇ ॥ 433 ॥**

ಭೂಪತೇ = ಧರಣೀಶನಾದ, ರಾಜನ್ = ಆಕಾಶರಾಜನೇ! ತೇ = ನಿನ್ನ, ಮನೋಗತಂ = ಮನಸ್ಸಿನಲ್ಲೇನಿರುವುದೋ, ತತ್ = ಅದನ್ನು, ಮಮ = ನನಗೆ, ಆಚಕ್ಷ್ವ = ಹೇಳುವವನಾಗು. ಮಹೀಪತೇ = ಭೂಮೀಶ್ವರ! ದಾನಾದಾನೇ = ಕೊಡುವುದು - ಕೊಡದಿರುವುದು ಎಂದು, ಅತ್ರ = ಈ ವಿಷಯದಲ್ಲಿ, ಸಂದೇಹಂ = ಅನುಮಾನವನ್ನು, ಮಾ ಕುರುಷ್ವ = ಮಾಡಬೇಡ ॥ 433 ॥

29. ಪಾ : ಆಕಾಶರಾಜಃ ಸಂಪ್ರಾಪ್ತಃ 30. ಪಾ : ಆಗತಂ. 31. ಪಾ : ತಾವತ್

ಮೇಥಿಕಾನ್ = ಮೆಂತ್ಯಗಳು, ಹಿಂಗುಲವಣತೈಲಪಾತ್ರಾಣಿ - ಹಿಂಗು = ಇಂಗು, ಲವಣ = ಉಪ್ಪು, ತೈಲ = ಎಣ್ಣೆ ಇವುಗಳ, ಪಾತ್ರಾಣಿ ಚೈವ = ಪಾತ್ರೆಗಳನ್ನೂ ಸಹ, ತಥಾ = ಅದರಂತೆ, ದ್ವೇಶತೇ = ಎರಡುನೂರು, ಶರ್ಕರಯಾ = ಸಕ್ಕರೆಯಿಂದ, ಪೂರ್ಣಘಟಾಂಸ್ತು = ತುಂಬಿದ ಕೊಡಗಳನ್ನೂ ॥ 424 ॥

**ಊರ್ವಾರುಕಂ ಚೂತಕಂ ಚ ರಾಜರಂಭಾಫಲಾನಿ ಚ ।**
**ಕೂಷ್ಮಾಂಡಕಂದಮೂಲಾನಿ ಮರೀಚಾಮಲಕಾನಿ ಚ[28] ॥ 425 ॥**

ತಥಾ = ಅದರಂತೆಯೇ, ಉರ್ವಾರುಕಂ = ಸೌತೇಕಾಯಿ, ಚೂತಕಂ = ಮಾವಿನಕಾಯಿ (ಮಾವಿನ ಉಪ್ಪಿನಕಾಯಿ?) ಚ = ಮತ್ತು, ರಾಜರಂಭಾಫಲಾನಿ ಚ = ರಾಜಬಾಳೇಹಣ್ಣುಗಳನ್ನೂ ಸಹ, ಕೂಷ್ಮಾಂಡಂ = ಕುಂಬಳಕಾಯಿ, ಕಂದಮೂಲಾನಿ = ಗೆಡ್ಡೆ ಗೆಣಸುಫಲಗಳು, ಮರೀಚಾ (ಚ್ಯಾ) ಮಲಕಾನಿ ಚ = ಮೆಣಸು, ನೆಲ್ಲಿಕಾಯಿ (ಚೆಟ್ಟು)ಗಳು ॥ 425 ॥

**ಮಧುಭಾಂಡ ಶತೇ ದ್ವೇ ಚ ರಂಭಾ ಪತ್ರಾಣಿ ಕಾಷ್ಠಕಾನ್ ।**
**ಅಶ್ವಾನಾಮಯುತಂ ದತ್ವಾ ಗಜಾನಾಂ ಚ ಸಹಸ್ರಕಮ್ ॥ 426 ॥**

ದ್ವೇಶತೇ = ಎರಡುನೂರು, ಮಧುಭಾಂಡೇ ಚ = ಜೇನುತುಪ್ಪದ (ಗುಡಾಣಿ) ಭಾಂಡೆಗಳನ್ನೂ, ರಂಭಾಪತ್ರಾಣಿ = ಬಾಳೆಯ ಎಲೆಗಳನ್ನು, ಕಾಷ್ಠಕಾನ್ = ಕಟ್ಟಿಗೆಗಳನ್ನೂ, ಅಶ್ವಾನಾಂ ಆಯುತಂ = ಹತ್ತು ಸಾವಿರ ಕುದುರೆಗಳನ್ನೂ, ಸಹಸ್ರಕಂ = ಒಂದು ಸಾವಿರ, ಗಜಾನಾಂಚ = ಆನೆಗಳನ್ನೂ (ಗಜಾನಾಂ = ಆನೆಗಳ, ಸಹಸ್ರಕಂ = ಒಂದು ಸಾವಿರವನ್ನು) ದತ್ವಾ = ಕೊಟ್ಟು ॥ 426 ॥

**ಧೇನೂನಾಂ ಪಂಚಸಾಹಸ್ರಮಾವಿಕಾನಾಂ ಶತಂ ತಥಾ ।**
**ದಾಸೀನಾಂ ದ್ವೇಶತೇ ರಾಜನ್ ದಾಸಾನಾಂ ತ್ರಿಶತಂ ತಥಾ ॥ 427 ॥**

**ವಸ್ತ್ರಾಣಿ ವಿವಿಧಾನ್ಯಾಶು ಪರ್ಯಂಕಂ ರತ್ನಭೂಷಿತಮ್ ।**
**ಉಪಬರ್ಹಂ ರತ್ನಯುತಂ ಪಾರಿಬರ್ಹೇಣ ಸಂಯುತಮ್ ॥ 428 ॥**

ಧೇನೂನಾಂ = ಆಕಳುಗಳು, ಪಂಚಸಾಹಸ್ರಂ = ಐದುಸಾವಿರವನ್ನೂ (ಐದುಸಾವಿರ ಆಕಳುಗಳನ್ನೂ), ಆವಿಕಾನಾಂ = ದನಕಾಯುವ ಗೋಪಾಲಕರುಗಳು (ಅಥವಾ ಚರ್ಮದಿಂದ ಕೆಲಸಮಾಡುವವರು) ಶತಂ = ನೂರು ಜನರನ್ನೂ, ತಥಾ = ಅದರಂತೆ, ರಾಜನ್ = ಎಲೈ ಜನಕರಾಯ! ದಾಸೀನಾಂ = ದಾಸಿಯರು, ದ್ವೇಶತೇ = ಎರಡುನೂರನ್ನೂ (2 ನೂರು ದಾಸಿಯರನ್ನೂ), ದಾಸಾನಾಂ = ಸೇವಕರುಗಳು, ತ್ರಿಶತಂ = ಮೂರುನೂರನ್ನು, (ಮೂರುನೂರು ಸೇವಕರನ್ನೂ), ತಥಾ = ಹಾಗೆಯೇ, ವಿವಿಧಾನಿ = ಬಗೆಬಗೆಯ, ವಸ್ತ್ರಾಣಿ = ಬಟ್ಟೆಗಳು, ಆಶು = ಜಾಗ್ರತೆಯಾಗಿ, ರತ್ನಭೂಷಿತಂ = ರತ್ನದಿಂದ ಅಲಂಕರಿಸಲ್ಪಟ್ಟ, ಪರ್ಯಂಕಂ = ಮಂಚವನ್ನು, ರತ್ನಂಯುತಂ = ರತ್ನಮಂಡಿತವಾದ, ಉಪಬರ್ಹಂ = ಸುಪ್ಪತ್ತಿಗೆಯಿಂದ ಸಹಿತವಾದ, ಪಾರಿಬರ್ಹೇಣ = ಪಾರಿತೋಷಕದಿಂದ, ಸಂಯುತಂ = ಯುಕ್ತವಾದ ॥ 427-428 ॥

**ಏವಮಾದೀನಿ ವಸ್ತೂನಿ ಗೃಹೀತ್ವಾ ನೃಪಸತ್ತಮಃ ।**
**ಪುತ್ರೇಣ ಸಹಿತೋ ರಾಜಾ ಶ್ರೀನಿವಾಸಪರಾಯಣಃ ॥ 429 ॥**

28. ಪಾ : ಮರೀಚ್ಯಾಮಲಕಾನಿ ಚ.

ಏವಮಾದೀನಿ = ಇವೇ ಮೊದಲಾದ, ವಸ್ತೂನಿ = ವಸ್ತುಗಳನ್ನು, ನೃಪಸತ್ತಮಃ = ರಾಜಶ್ರೇಷ್ಠನು, ಗೃಹೀತ್ವಾ = ತೆಗೆದುಕೊಂಡು, ಪುತ್ರೇಣ = ಮಗನಿಂದ, ಸಹಿತಃ = ಉಕ್ತನಾಗಿ, ಶ್ರೀನಿವಾಸಪರಾಯಣಃ = ಶ್ರೀನಿವಾಸನಲ್ಲಿ ರತನಾದ (ಆಸಕ್ತನಾದ), ರಾಜಾ = ದೊರೆಯಾದ ॥ 429 ॥

**[29]ಆಕಾಶರಾಜೋ ಧರ್ಮಜ್ಞಃ ಶ್ರೀನಿವಾಸಸ್ಯ ಸನ್ನಿಧಿಮ್ ।**
**ಆಗತಃ [30]ಶ್ವಶುರಂ ದೃಷ್ಟ್ವಾ ಚೋತ್ತಸ್ಥೌ ಜಗದೀಶ್ವರಃ ॥ 430 ॥**

ಧರ್ಮಜ್ಞಃ = ಧರ್ಮಜ್ಞನಾದ, ಆಕಾಶರಾಜಃ = ಆಕಾಶರಾಜನು, ಶ್ರೀನಿವಾಸಸ್ಯ ಸನ್ನಿಧಿಂ = ಶ್ರೀನಿವಾಸ ಸನ್ನಿಧಿಗೆ, (ಪಾ :- ಸಂಪ್ರಾಪ್ತಃ = ಬಂದನು) ಆಗತಃ = ಬಂದನು (ಪಾ :- ಆಗತಂ = ಬಂದಂಥ), ಶ್ವಶುರಂ = ಮಾವನನ್ನು, ದೃಷ್ಟ್ವಾ = ನೋಡಿ, ಜಗದೀಶ್ವರಃ = ಜಗತ್ಪ್ರಭುವಾದ ಶ್ರೀನಿವಾಸನು, ಉತ್ತಸ್ಥೌ = ಎದ್ದು ನಿಂತನು ॥ 430 ॥

*ಶ್ರೀನಿವಾಸ ಉವಾಚ –*

**ದೂರಾಧ್ವಾನಂ ಮಹಾರಾಜ ಕಿಮರ್ಥಂ ತ್ವಂ ಸಮಾಗತಃ ।**
**ದಾತವ್ಯಂ ಕಿಂ ನೃಪಶ್ರೇಷ್ಠ ತವ ಪುತ್ರಸ್ಯ ಮೇಽನಘ ॥ 431 ॥**

ಶ್ರೀನಿವಾಸ ಉವಾಚ = ಶ್ರೀನಿವಾಸನು ಹೇಳಲಾರಂಭಿಸಿದನು – ಮಹಾರಾಜ = ಎಲೈ ದೊರೆಯೇ, ದೂರಾಧ್ವಾನಂ = ಬಹುದೂರದಮಾರ್ಗವಾದ ಇಲ್ಲಿಗೆ, ತ್ವಂ = ನೀನು, ಕಿಮರ್ಥಂ = ಏತಕ್ಕಾಗಿ, ಸಮಾಗತಃ = ಬರುವವನಾಗಿದ್ದೀಯೇ? ಅನಘ = ಪಾಪರಹಿತನಾದ, ನೃಪಶ್ರೇಷ್ಠ = ರಾಜೋತ್ತಮನೇ, ತವ = ನಿನ್ನ, ಪುತ್ರಸ್ಯ = ಮಗನಾದ, ಮೇ = ನನಗೆ, ದಾತವ್ಯಂ ಕಿಂ = ಇವೆಲ್ಲ ಕೊಡಬೇಕೇನು? ॥ 431 ॥

**ಕನ್ಯಾ ದತ್ತಾ ಸುಖಂ ಪ್ರಾಪ್ತಂ ಸುಕೃತಂ ಕಿಂ ಕೃತಂ ತ್ವಯಾ ।**
**ಸಂತೋಷಶ್ಚಾತುಲಃ ಪ್ರಾಪ್ತೋ ಮಮತಾತ[31] ನಸಂಶಯಃ ॥ 432 ॥**

ಕನ್ಯಾ = ನಿನ್ನ ಕನ್ಯೆಯು, ದತ್ತಾ = ಕೊಡಲ್ಪಟ್ಟಳು, (ಮೇ = ನನಗೆ), ಸುಖಂ = ಸುಖವು, ಪ್ರಾಪ್ತಂ = ಉಂಟಾಯಿತು, ತ್ವಯಾ = ನಿನ್ನಿಂದ, ಕಿಂ = ಏನು, ಸುಕೃತಂ = ಪುಣ್ಯವು, ಕೃತಂ = ಮಾಡಲ್ಪಟ್ಟಿತು (ಅಥವಾ – ಕನ್ಯೆಯನ್ನು ಕೊಟ್ಟು ಪುಣ್ಯವನ್ನು ಮಾಡಿದ್ದೀಯೆ), ಮಮ ತಾವತ್ (ತಾತ = ಪ್ರಿಯನೇ) = ನನಗಾದರೋ, ಅತುಲಃ = ಅಳೆಯಲು ಸುಲಭವಲ್ಲದಷ್ಟು (ಹೆಚ್ಚಾದ), ಸಂತೋಷಃ = ಆನಂದವು, ಪ್ರಾಪ್ತಃ = ಉಂಟಾಯಿತು, ನ ಸಂಶಯಃ = ಇದರಲ್ಲಿ ಸಂದೇಹವಿಲ್ಲ ॥ 432 ॥

**ಕಿಂ ತೇ ಮನೋಗತಂ ರಾಜನ್ ತನ್ಮಮಾಚಕ್ಷ್ವ ಭೂಪತೇ ।**
**ಸಂದೇಹಂ ಮಾಕುರುಷ್ವಾತ್ರ ದಾನಾದಾನೇ ಮಹೀಪತೇ ॥ 433 ॥**

ಭೂಪತೇ = ಧರಣೀಶನಾದ, ರಾಜನ್ = ಆಕಾಶರಾಜನೇ! ತೇ = ನಿನ್ನ, ಮನೋಗತಂ = ಮನಸ್ಸಿನಲ್ಲೇನಿರುವುದೋ, ತತ್ = ಅದನ್ನು, ಮಮ = ನನಗೆ, ಆಚಕ್ಷ್ವ = ಹೇಳುವವನಾಗು. ಮಹೀಪತೇ = ಭೂಮೀಶ್ವರ! ದಾನಾದಾನೇ = ಕೊಡುವುದು – ಕೊಡದಿರುವುದು ಎಂದು, ಅತ್ರ = ಈ ವಿಷಯದಲ್ಲಿ, ಸಂದೇಹಂ = ಅನುಮಾನವನ್ನು, ಮಾ ಕುರುಷ್ವ = ಮಾಡಬೇಡ ॥ 433 ॥

29. ಪಾ : ಆಕಾಶರಾಜಃ ಸಂಪ್ರಾಪ್ತಃ 30. ಪಾ : ಆಗತಂ. 31. ಪಾ : ತಾವತ್

**ವಾಸುದೇವವಚಃ ಶ್ರುತ್ವಾ ವಾಸುದೇವಮಭಾಷತ ।**

**ರಾಜೋವಾಚ-**

**ಸರ್ವಮಂಗಲಮಸ್ಮಾಕಂ ತ್ವತ್ಪ್ರಸಾದೇನ ಕೇಶವ ॥ 434 ॥**

ವಾಸುದೇವ ವಚಃ = ಶ್ರೀನಿವಾಸನ ಮಾತನ್ನು, ಶ್ರುತ್ವಾ = ಕೇಳಿ, ವಾಸುದೇವಂ = ಶ್ರೀಕೃಷ್ಣನನ್ನು ಕುರಿತು, ಅಭಾಷತ = ಮಾತನಾಡಿದನು.

ರಾಜೋವಾಚ = ಆಕಾಶರಾಜನು ಹೇಳಹತ್ತಿದನು - ಕೇಶವ = ಬ್ರಹ್ಮರುದ್ರಾದಿಗಳಿಗೆ ನಿಯಾಮಕನಾದ ಶ್ರೀಹರಿಯೇ! ತ್ವತ್ಪ್ರಸಾದೇನ = ನಿನ್ನ ಅನುಗ್ರಹದಿಂದ, ಅಸ್ಮಾಕಂ = ನಮಗೆ, ಸರ್ವಮಂಗಲಂ = ಸಮಸ್ತವೂ ಮಂಗಳವು ॥ 434 ॥

**ನಾನ್ಯದ್ಯಾಚೇ ಜಗನ್ನಾಥ ತವ ಪಾದಸರೋರುಹೇ ।**
**ಭಕ್ತಿಂ ದೇಹ್ಯಚಲಾಂ ಕೃಷ್ಣ ಸಕುಟುಂಬಸ್ಯ ಮೇಽನಘ ॥ 435 ॥**

ಜಗನ್ನಾಥ = ಹೇ ಜಗತ್ಪ್ರಭುವೇ! ಅನ್ಯತ್ = ಬೇರಾವುದನ್ನೂ, ನ ಯಾಚೆ = ಬೇಡುವುದಿಲ್ಲ. ಕೃಷ್ಣ = ಶ್ರೀನಿವಾಸ! ಅನಘ = ಪಾಪವಿದೂರನೇ! ಸಕುಟುಂಬಸ್ಯ = ಕುಟುಂಬಸಹಿತನಾದ, ಮೇ = ನನಗೆ, ತವ = ನಿನ್ನ, ಪಾದಸರೋರುಹೇ = ಚರಣಕಮಲಗಳಲ್ಲಿ, ಅಚಲಾಂ = ಸ್ಥಿರವಾದ, ಭಕ್ತಿಂ = ಭಕ್ತಿಯನ್ನು, ದೇಹಿ = ಕೊಡು ॥ 435 ॥

**ತಚ್ಛ್ರುತ್ವಾ ವಚನಂ ತಸ್ಯ ಶ್ವಶುರಸ್ಯ ಮಹಾತ್ಮನಃ ।**
**ದತ್ತವಾಂಸ್ತಸ್ಯ ಸಾಯುಜ್ಯಮಾಕಾಶನೃಪತೇಸ್ತದಾ ॥ 436 ॥**

ಮಹಾತ್ಮನಃ = ಮಹನೀಯನಾದ, ತಸ್ಯ = ಆ, ಶ್ವಶುರಸ್ಯ = ಮಾವನ, ತದ್ವಚನಂ = ಆ ಮಾತನ್ನು, ಶ್ರುತ್ವಾ = ಆಲಿಸಿದವನಾಗಿ, ತದಾ = ಆಗ, ಆಕಾಶನೃಪತೇಃ = ಆಕಾಶರಾಜನಿಗೆ, ಸಾಯುಜ್ಯಂ = ಸಾಯುಜ್ಯ ಮೋಕ್ಷವನ್ನು, ದತ್ತವಾನ್ = ಕೊಡುವವನಾದನು ॥ 436 ॥

**ಶ್ಯಾಲಕಸ್ಯ ದದೌ ವಸ್ತ್ರಂ ಸ್ವಾಂಗಸ್ಥಂ ಮಧುಸೂದನಃ ।**
**ಜಾಮಾತ್ರಾ ಚ ಸಮಾಜ್ಞಪ್ತಃ ಪುತ್ರೀಭವನಮಭ್ಯಗಾತ್ ॥ 437 ॥**

ಮಧುಸೂದನಃ = ಮಧುನಾಮಕ ದೈತ್ಯಸಂಹಾರಿಯಾದ ಶ್ರೀನಿವಾಸನು, ಶ್ಯಾಲಕಸ್ಯ = ಹೆಂಡತಿಯ ತಮ್ಮನಾದ ವಸುಧಾನನಿಗೆ, ಸ್ವಾಂಗಸ್ಥಂ = ತನ್ನ ಶರೀರದಲ್ಲಿ (ಹೊದ್ದಿರುವ), ವಸ್ತ್ರಂ = ಪೀತಾಂಬರವನ್ನು, ದದೌ = ಕೊಟ್ಟನು, ಜಾಮಾತ್ರಾ = ಅಳಿಯನಿಂದ, ಸಮಾಜ್ಞಪ್ತಃ = ಅಪ್ಪಣೆ ಪಡೆದು, ಪುತ್ರೀಭವನಂ = ಮಗಳ ಮನೆಯನ್ನು ಕುರಿತು, ಅಭ್ಯಗಾತ್ = ಬಂದನು ॥ 437 ॥

**ಪುತ್ರಿ ಗಚ್ಛಾಮಿ ನಗರಂ ವಿಹರಸ್ವ ಹರಿಪ್ರಿಯೇ ।**
**ಶಯನೇ ಶ್ರೀನಿವಾಸಸ್ಯ ಶಯನಂ ಕುರು ಮಂಗಲೇ ॥ 438 ॥**

ಮಂಗಲೆ! = ಮಂಗಳಕರಳೇ, ಪುತ್ರೀ = ಮಗಳೇ, (ಅಹಂ = ನಾನು) ನಗರಂ = ನಾರಾಯಣಪುರವನ್ನು ಕುರಿತು, ಗಚ್ಛಾಮಿ = ಹೋಗುತ್ತೇನೆ, ಹರಿಪ್ರಿಯೆ! = ಶ್ರೀನಿವಾಸನಿಗೆ ಪ್ರಿಯಳಾದ ಪದ್ಮಾವತಿ!, ವಿಹರಸ್ವ = ಪತಿಯೊಡನೆ ವಿಹರಿಸು, ಶ್ರೀನಿವಾಸಸ್ಯ = ಶ್ರೀನಿವಾಸನ, ಶಯನೇ = ಮಲಗಿದ ಮೇಲೆ, ಶಯನಂ = (ನೀನ) ಮಲಗಿಕೋ, ॥ 438 ॥

**ಇತಿ ರಾಜಾ ಸಾಂತ್ವಯಿತ್ವಾ ಪುತ್ರೀಂ ಕಮಲಲೋಚನಾಮ್ ।**
**ಶಾಸಿತಾ ಸಾಗತಾ ತತ್ರ +ಶೀಘ್ರಂ ಮಾಧವಮಭ್ಯಗಾತ್ ॥ 439 ॥**

ಇತಿ = ಈ ಪ್ರಕಾರವಾಗಿ, ರಾಜಾ = ಆಕಾಶರಾಜನು, ಕಮಲಲೋಚನಾಂ = ಅರವಿಂದಾಕ್ಷಿಯಾದ, ಪುತ್ರೀಂ = ಪದ್ಮಾವತಿಯನ್ನು, ಸಾಂತ್ವಯಿತ್ವಾ = ಸಮಾಧಾನಗೊಳಿಸಿ, ಶಶಾಸ = ಮೇಲೆ ಹೇಳಿದಂತೆ ಶಾಸನ ಮಾಡಿದನು. (ಪಾ:- ಶಶಾಸ ಸಾ ಸ್ವಪಿತ್ರೋಕ್ತಂ - ಸಾ = ಪದ್ಮಾವತಿಯು, ಪಿತ್ರೋಕ್ತಂ = ತಂದೆಯು ಹೇಳಿದಂತೆ, ಶಶಾಸ = ಅವನ ಶಾಸನವನ್ನು ಜಾರಿಗೆ ತಂದಳು) ಸಾ = ಪದ್ಮಾವತಿಯು ಶಾಸಿತಾ = ತಂದೆಯಿಂದ ಇಂತು ಶಾಸಿತಳಾಗಿ, ತತ್ರ = ಅಲ್ಲಿಗೆ, ಆಗತಾ = ಬಂದಳು, ಶೀಘ್ರಂ = ಜಾಗ್ರತೆಯಾಗಿ, ಮಾಧವಂ = ಶ್ರೀನಿವಾಸನನ್ನು ಕುರಿತು, ಅಭ್ಯಗಾತ್ = ಬಂದಳು ॥ 439 ॥

**ರುದನ್ ಗದ್ಗದಕಂಠೇನ ಜಗಾಮ ನಗರಂ ನೃಪಃ ।**
**ಪದ್ಮಾವತ್ಯನುಗೋ ದೇವೋ ಬ್ರಹ್ಮರುದ್ರಾದಿಕೈರ್ಯುತಃ ॥ 440 ॥**

ನೃಪಃ = ಆಕಾಶರಾಜನು, ಗದ್ಗದಕಂಠೇನ = ಗದ್ಗದವಾದ ಕಂಠದಿಂದ, ರುದನ್ = ಅಳುತ್ತಾ, ನಗರಂ = ನಾರಾಯಣಪುರನ್ನು ಕುರಿತು, ಜಗಾಮ = ಹೊರಟನು (ಪ್ರಯಾಣಬೆಳೆಸಿದನು). ದೇವಃ = ಶ್ರೀನಿವಾಸನು, ಬ್ರಹ್ಮರುದ್ರಾದಿಕೈಃ = ಬ್ರಹ್ಮದೇವರು, ರುದ್ರದೇವರು ಮೊದಲಾದವರಿಂದ, ಯುತಃ = ಸಹಿತನಾಗಿ ॥ 440 ॥

**ಸುವರ್ಣಮುಖರೀಂ ಪ್ರಾಪ್ಯ ತತ್ರ ವಾಸಮಕಲ್ಪಯತ್ ।**
**ಷಣ್ಮಾಸಾವಧಿಪರ್ಯಂತಂ ದೀಕ್ಷಿತೋಽಹಂ ಮಹಾಮತೇ* ॥ 441 ॥**

ಸುವರ್ಣಮುಖರೀಂ = ಸುವರ್ಣಮುಖರೀ ನದಿಯನ್ನು, ಪ್ರಾಪ್ಯ = ಹೊಂದಿ, ತತ್ರ = ಅಲ್ಲಿ, ವಾಸಂ = ವಾಸವನ್ನು, ಅಕರೋತ್ = ಮಾಡಿದನು, ಮಹಾಮತೆ = ಎಲೈ ಬುದ್ಧಿವಂತನೇ, (ಪಾ:- ಮಹೀಪತೇ = ಜನಕಮಹಾರಾಜನೇ), ದೇವರಾಟ್ = ದೇವೋತ್ತಮನಾದ ಶ್ರೀನಿವಾಸನು, ಅಹಂ = ನಾನು, ಷಣ್ಮಾಸಾವಧಿಪರ್ಯಂತಂ = ಆರುತಿಂಗಳುಗಳವರೆಗೆ, ದೀಕ್ಷಿತಃ (ಅಸ್ಮಿ) = ದೀಕ್ಷೆಯುಳ್ಳವನಾಗಿದ್ದೇನೆ ॥ 441 ॥

**ನ ಶೈಲರಾಜಮರೋಹೇ ಇತಿ ನಿಶ್ಚಿತ್ಯ ದೇವರಾಟ್ ।**
**ಅಗಸ್ತ್ಯಭವನಂ ಗತ್ವಾ ತತ್ರ ವಾಸಮಕಲ್ಪಯತ್ ॥ 442 ॥**

ಶೈಲರಾಜಂ = ಶ್ರೇಷ್ಠಗಿರಿಯಾದ ವೇಂಕಟಾಚಲವನ್ನು, ನ ಆರೋಹೇ = ಹತ್ತುವುದಿಲ್ಲ, ಇತಿ = ಹೀಗೆ, ನಿಶ್ಚಿತ್ಯ = ನಿಶ್ಚಯಿಸಿದವನಾಗಿ, ಅಗಸ್ತ್ಯಭವನಂ = ಅಗಸ್ತ್ಯ ಋಷಿಗಳ ಆಶ್ರಮವನ್ನು ಕುರಿತು, ಗತ್ವಾ = ಹೋಗಿ, ತತ್ರ = ಅಲ್ಲಿ, ವಾಸಂ = ವಾಸವನ್ನು, ಅಕಲ್ಪಯತ್ = ಕಲ್ಪಿಸಿಕೊಂಡನು ॥ 442 ॥

**ದೇವಾನ್ ಸಂಪ್ರೇಷಯಾಮಾಸ ಸ್ವಧಾಮಾನಿ ವೃಷಾಕಪಿಃ ॥ 443 ॥**

ವೃಷಾಕಪಿಃ = ಶ್ರೀನಿವಾಸನು, ದೇವಾನ್ = ದೇವತೆಗಳನ್ನು, ಸ್ವಧಾಮ = ತಮ್ಮ ತಮ್ಮ ಲೋಕಗಳಿಗೆ, ಪ್ರೇಷಯಾಮಾಸ = ಕಳುಹಿಸಿದನು ॥ 443 ॥

---

+ ಪಾ : ಶಶಾಸ ಸಾ ಸ್ವಪಿತ್ರೋಕ್ತಂ. * ಪಾ : ಮಹೀಪತೆ

**ಬ್ರಹ್ಮಾದೀನಾಂ ಸುರಾಣಾಂ ಚ ಮುನೀನಾಮೂರ್ಧ್ವರೇತಸಾಮ್ ।**
**ದದೌ ವಸ್ತ್ರಂ ಯಥಾಯೋಗ್ಯಂ ಭಗವಾನ್ ಭಕ್ತವತ್ಸಲಃ ॥ 444 ॥**

ಬ್ರಹ್ಮಾದೀನಾಂ = ಬ್ರಹ್ಮದೇವರೇ ಮೊದಲಾದ, ಸುರಾಣಾಂ = ದೇವತೆಗಳಿಗೆ, ಚ = ಮತ್ತು, ಊರ್ಧ್ವರೇತಸಾಂ = ಊರ್ಧ್ವರೇತಸ್ಸುಳ್ಳ (ಜಿತೇಂದ್ರಿಯರಾದ), ಋಷೀಣಾಂ = ಋಷಿಮುನಿಗಳಿಗೆ, ಭಕ್ತವತ್ಸಲಃ = ಭಕ್ತರಲ್ಲಿ ವಾತ್ಸಲ್ಯವುಳ್ಳ, ಭಗವಾನ್ = ಪೂಜ್ಯನಾದ ಶ್ರೀನಿವಾಸನು, ಯಥಾಯೋಗ್ಯಂ = ಯೋಗ್ಯತಾನುಸಾರವಾಗಿ, ವಸ್ತ್ರಂ = ಪೀತಾಂಬರಾದಿ ವಸ್ತ್ರಗಳನ್ನು (ಉಡುಗೊರೆಯಾಗಿ), ದದೌ = ಕೊಟ್ಟನು ॥ 444 ॥

**ತೇನಾಜ್ಞಪ್ತಾ ಜಗದ್ಧಾತ್ರಾ ಜಗ್ಮುರ್ಲೋಕಂ ಸ್ವಕಂ ಸುರಾಃ ।**
**ಋಷಯಶ್ಚ ತತೋಽರಣ್ಯಂ ಜಗ್ಮುರ್ನಾರಾಯಣಾಜ್ಞಯಾ ॥ 445 ॥**

ತೇನ ಜಗದ್ಧಾತ್ರಾ = ಜಗದ್ಧಾರಕನಾದ ಶ್ರೀನಿವಾಸನಿಂದ, ಆಜ್ಞಪ್ತಾಃ = ಅಪ್ಪಣೆ ಪಡೆದವರಾದ (ಬೀಳ್ಕೊಂಡ), ಸುರಾಃ = ದೇವತೆಗಳು, ಸ್ವಕಂ = ತಮ್ಮ, ಲೋಕಂ = ಲೋಕವನ್ನು ಕುರಿತು, ಜಗ್ಮುಃ = ಹೋದರು. ತತಃ = ಆ ತರುವಾಯ, ಋಷಯಶ್ಚ = ಋಷಿಮುನಿಗಳೂ ಸಹ, ನಾರಾಯಣಾಜ್ಞಯಾ = ಶ್ರೀಹರಿಯ ಅಪ್ಪಣೆಯಂತೆ, ಅರಣ್ಯಂ = ವನಕ್ಕೆ ತಪಸ್ಸು ಮಾಡಲು, ಜಗ್ಮುಃ = ಹೊರಟು ಹೋದರು ॥ 445 ॥

**ಲಕ್ಷ್ಮೀರ್ಜಗಾಮ ರಾಜೇಂದ್ರ ಕರವೀರಪುರಂ ತದಾ ॥ 446 ॥**

ರಾಜೇಂದ್ರ = ಎಲೈ ಜನಕಮಹಾರಾಜ! ತದಾ = ಆವಾಗ, ಲಕ್ಷ್ಮೀಃ = ಶ್ರೀಲಕ್ಷ್ಮೀದೇವಿಯು, ಕರವೀರಪುರಂ = ಶ್ರೀಹರಿಯ ಅಣತಿಯಂತೆ ಕೊಲ್ಹಾಪುರಕ್ಕೆ, ಜಗಾಮ = ಪ್ರಯಾಣ ಬೆಳೆಸಿದಳು ॥ 446 ॥

**ಮಹೋತ್ಸವಂ ತಂ ತ್ವನುಭೂಯ ದೇವತಾ ಬ್ರಹ್ಮೇಶಪೂರ್ವಾಃ**
**ಸಮಹರ್ಷಿಸತ್ತಮಾಃ ।**
**ಜಗ್ಮುಃ ಸ್ವಕಂ ಧಾಮ ಮಹಾನುಭಾವಾ ರಾಜೇಂದ್ರ ಪೂಜ್ಯಂ**
**ಪ್ರಶಶಂಸುರಾದರಾತ್ ॥ 447 ॥**

ರಾಜೇಂದ್ರ = ಜನಕಮಹಾರಾಜ! ಮಹಾನುಭಾವಾಃ = ಮಹಾನುಭಾವರಾದ (ಶ್ರೇಷ್ಠ ಅನುಭಾವಿಗಳಾದ), ಬ್ರಹ್ಮೇಶ ಪೂರ್ವಾಃ = ಚತುರ್ಮುಖಬ್ರಹ್ಮ, ರುದ್ರದೇವನೇ ಮೊದಲಾದ, ದೇವತಾಃ = ಸುರರು, ಸಮಹರ್ಷಿಸತ್ತಮಾಃ = ಮಹರ್ಷಿಶ್ರೇಷ್ಠರೊಡನೆ, ತಂ = ಆ, ಮಹೋತ್ಸವಂ = (ಸಂತೋಷದಿಂದ) ಅನುಭವಿಸಿ, ಸ್ವಕಂ = ತಮ್ಮ, ಧಾಮ = ಗೃಹಗಳನ್ನು ಕುರಿತು, ಜಗ್ಮುಃ = ಪಯಣಿಸಿದರು, ಪೂಜ್ಯಂ = ಪೂಜ್ಯನಾದ ಶ್ರೀನಿವಾಸನನ್ನು (ಅಥವಾ ಆಕಾಶರಾಜನನ್ನು), ಆದರಾತ್ = ಆದರದಿಂದ, ಪ್ರಶಶಂಸುಃ = ಪ್ರಶಂಸಿಸಿದರು ॥ 447 ॥

**ಗತೇ ದೇವಗಣೇ ತತ್ರ ತ್ವಗಸ್ತ್ಯನಿಲಯಂ ಗತಃ ॥ 448 ॥**

ದೇವಗಣೇ = ದೇವತಾಸಮೂಹವು, ಗತೇ (ಸತಿ) = ಪ್ರಯಾಣ ಬೆಳೆಸಿದ ಮೇಲೆ, ತತ್ರ = ಅಲ್ಲಿ, ಅಗಸ್ತ್ಯನಿಲಯಂ = ಅಗಸ್ತ್ಯಾಶ್ರಮವನ್ನು ಕುರಿತು, ಗತಃ = ಹೋದವನಾಗಿ, ॥ 448 ॥

**ಭುಂಜಾನೋ ಭೋಗಮತುಲಂ ತತ್ರಾಸ್ತೇ ಭಗವಾನ್ ಹರಿ ।**

*ಶತಾನಂದ ಉವಾಚ -*

**ವಿವಾಹಾಧ್ಯಾಯಮಾಹಾತ್ಮ್ಯಂ ಯೇ ಶ್ರುಣ್ವಂತಿ ಜನೇಶ್ವರ** || 449 ||

(ತತ್ರ = ಅಲ್ಲಿ) ಭಗವಾನ್ = ಷಡ್ಗುಣೈಶ್ವರ್ಯಪರಿಪೂರ್ಣನಾದ, ಹರಿಃ = ಶ್ರೀನಿವಾಸನು, ಅತುಲಂ = ಅತಿಶಯವಾದ, ಭೋಗಂ = ಭೋಗವನ್ನು, ಭುಂಜಾನಃ = ಅನುಭವಿಸುತ್ತಾ, ತತ್ರಾಸ್ತೇ = ಆ ಅಗಸ್ತ್ಯಾಶ್ರಮದಲ್ಲಿ ವಿರಾಜಿಸುತ್ತಿದ್ದಾನೆ.

ಶತಾನಂದ ಉವಾಚ = ಶತಾನಂದ ಮುನಿಗಳು ಹೇಳುತ್ತಿದ್ದಾರೆ. ಜನೇಶ್ವರ = ಜನರಿಗೆ ಪ್ರಭುವಾದ ಎಲೈ ಜನಕಮಹಾರಾಜ! ವಿವಾಹಾಧ್ಯಾಯಮಾಹಾತ್ಮ್ಯಂ = ಶ್ರೀನಿವಾಸಕಲ್ಯಾಣೋತ್ಸವದ ಅಧ್ಯಾಯದ ಮಹಿಮೆಯನ್ನು, ಯೇ = ಯಾರು, ಶ್ರುಣ್ವಂತಿ = ಕೇಳುತ್ತಾರೆಯೋ || 449 ||

**ತೇಷಾಂ ಭಾಗ್ಯೋದಯಂ ವಕ್ಷ್ಯೇ ಶ್ರುಣು ರಾಜನ್ ಸವಿಸ್ತರಮ್ ।**
**ಕೋಟಿಕನ್ಯಾಪ್ರದಾನೇನ ಯಾವದ್ಭೂಮಿಪ್ರದಾನತಃ** || 450 ||

ರಾಜನ್ = ಮಹಾರಾಜ! ತೇಷಾಂ = ಅವರ, ಭಾಗ್ಯೋದಯಂ = ಭಾಗ್ಯೋದಯವನ್ನು, ಸವಿಸ್ತರಂ = ವಿಸ್ತಾರವಾಗಿ, ವಕ್ಷ್ಯೇ = ಹೇಳುತ್ತೇನೆ. ಶ್ರುಣು = ಕೇಳುವವನಾಗು. ಕೋಟಿಕನ್ಯಾಪ್ರದಾನೇನ = ಒಂದು ಕೋಟಿ ಕನ್ಯಾದಾನ ಮಾಡುವುದರಿಂದ ; ಯಾವತ್ ಭೂಮಿಪ್ರದಾನತಃ = ಸಮಸ್ತ ಭೂಮಿಯನ್ನು ದಾನ ಮಾಡುವುದರಿಂದ || 450 ||

**ಯತ್ಫಲಂ ಲಭತೇ ದೇಹೀ ತತ್ಫಲಂ ಶ್ರವಣಾದರಾತ್ ।**
**ಯೇ ಉತ್ಸವಂ ಕಾರಯಂತಿ ವೈವಾಹಂ ವೇಂಕಟೇಶಿತುಃ** || 451 ||

ದೇಹೀ = ಮಾನವನು, ಫಲಂ ಯತ್ = ಯಾವ ಫಲವನ್ನು, ಲಭತೇ = ಹೊಂದುತ್ತಾನೆಯೋ, ಶ್ರವಣಾದರಾತ್ = ಆದರಪೂರ್ವಕವಾಗಿ ಈ ವಿವಾಹಧ್ಯಾಯ ಕಥೆಯನ್ನು ಕೇಳುವುದರಿಂದ, ತತ್ ಫಲಂ = ಆ ಫಲವನ್ನು (ಲಭತೇ = ಹೊಂದುತ್ತಾನೆ), ವೇಂಕಟೇಶಿತುಃ = ವೇಂಕಟಾಚಲಕ್ಕೆ ಪ್ರಭುವಾದ ಶ್ರೀನಿವಾಸನ, ವೈವಾಹಂ = ವಿವಾಹ ಸಂಬಂಧಿಯಾದ, ಉತ್ಸವಂ = ಮಹೋತ್ಸವವನ್ನು, ಯೇ = ಯಾರು, ಕಾರಯಂತಿ = ಮಾಡಿಸುವರೋ || 451 ||

**ತಸ್ಯೋತ್ಸವೋ ಭವೇದ್ರಾಜನ್ ವೇಂಕಟೇಶಪ್ರಸಾದತಃ ।**
**ಇತಿ ತೇ ಕಥಿತಂ ರಾಜನ್ ವಿವಾಹಚರಿತಂ ಹರೇಃ** || 452 ||

ರಾಜನ್ = ಜನಕಮಹಾರಾಜ! ತಸ್ಯೋತ್ಸವಂ = ಅಂಥವರಿಗೆ ಮಹೋತ್ಸವವು, ವೇಂಕಟೇಶಪ್ರಸಾದತಃ = ಶ್ರೀನಿವಾಸನ ಪ್ರಸಾದ (ಅನುಗ್ರಹ)ದಿಂದ, ಭವೇತ್ = ಉಂಟಾಗುವುದು, ಇತಿ = ಹೀಗೆ, ರಾಜನ್ = ಎಲೈ ಜನಕಮಹಾರಾಜನೇ! ತೇ = ನಿನಗೆ, ಹರೇಃ = ಶ್ರೀಹರಿಪರಮಾತ್ಮನ, ವಿವಾಹ ಚರಿತಂ = ವಿವಾಹ ಮಂಗಳ ಮಹೋತ್ಸವದ ಚರಿತ್ರೆಯು (ಕಥೆಯು), ಕಥಿತಂ = ನನ್ನಿಂದ ಹೇಳಲ್ಪಟ್ಟಿತ್ತು || 452 ||

**ಶ್ರುಣುಯಾಚ್ಛ್ರಾವಯೇದ್ವಾಪಿ ಸರ್ವಾಭೀಷ್ಟಮವಾಪ್ನುಯಾತ್ ।**
**ಶುಭದಂ ಶ್ರುಣ್ವತಾಂ ಚೈವ ಸರ್ವೇಷಾಂ ಮಂಗಲಪ್ರದಮ್** || 453 ||

ಶೃಣುಯಾತ್ = ಈ ಮಂಗಳ ವಿವಾಹ ಮಹೋತ್ಸವ ಕಥೆಯನ್ನು ಕೇಳಿದಲ್ಲಿ, ಶ್ರಾವಯೇದ್ವಾಪಿ = ಶ್ರವಣ ಮಾಡಿಸಿದರೂ ಕೂಡ, ಸರ್ವಾಭೀಷ್ಟಂ = ಸಕಲ ಅಭೀಷ್ಟಗಳನ್ನೂ, ಆಪ್ನುಯಾತ್ = ಹೊಂದುವವನಾಗುತ್ತಾನೆ. ಶೃಣ್ವತಾಂ ಚೈವ = ಕೇಳುವವರಿಗೂ ಸಹ, ಶುಭದಂ = ಮಂಗಳಪ್ರದವು, ಸರ್ವೇ = ಸಕಲರಿಗೂ, ಮಂಗಲಂ = ಮಂಗಳ-ವಾಗುವುದು ॥ 453 ॥

## ಕಥಾಸಾರವು

ಜನಕಮಹಾರಾಜನು ಶತಾನಂದ ಋಷಿಗಳನ್ನು ಕುರಿತು – ''ಪೂಜ್ಯ ಮುನಿವರ್ಯರೇ! ಶ್ರೀಲಕ್ಷ್ಮೀದೇವಿಯರೊಡನೆ ಪರಮಾತ್ಮನ ಸಮಾಗಮವಾದ ಮೇಲೆ ಸುಜನಾಶ್ರಯನಾದ, ಕಮಲಾಸಹಾಯನಾದ ಶ್ರೀನಿವಾಸನು ಏನು ಮಾಡಿದನು? ಆ ವೃತ್ತಾಂತವನ್ನು ನನಗೆ ವಿಸ್ತಾರವಾಗಿ ನಿರೂಪಿಸಿರಿ'' ಎಂದು ಕೋರಿದನು. ಅವನ ಪ್ರಾರ್ಥನೆಯಂತೆ ಶತಾನಂದರು ಮುಂದಿನ ಕಥಾ ಭಾಗವನ್ನು ಹೇಳಲಾರಂಭಿಸಿದರು–

ಶತಾನಂದ:– ರಾಜನ್! ನಾನು ಹೇಳುವುದನ್ನು ಶ್ರದ್ಧೆಯಿಂದ ಕೇಳು. ವೇದಪ್ರತಿಪಾದ್ಯಮಹಿಮಳಾದ ಸಿರಿದೇವಿಯಿಂದೊಡಗೂಡಿದ ಕಾಂತಿ-ಸಂಪದ್ಭರಿತನೂ, ವೇದಗಳಿಂದ ಪ್ರತಿಪಾದ್ಯವಾದ ಮಹಿಮೆಯುಳ್ಳವನೂ ಆದ ಶ್ರೀನಿವಾಸನು ಅತಿ ಪ್ರೀತಿಯಿಂದ ಮುಂದಿನ ಕಾರ್ಯವನ್ನು ನೆರವೇರಿಸಲು ಬ್ರಹ್ಮದೇವನನ್ನು ನಿಯೋಜಿಸುತ್ತಾ 'ಕುಮಾರ! ಚತುರಾನನ, ನೀನೀಗ ಅತಿ ಜಾಗರೂಕತೆಯಿಂದ ಮುಂದಿನ ಮಂಗಳಕಾರ್ಯಗಳನ್ನು ಜಾಗ್ರತೆಯಾಗಿ ನೆರವೇರಿಸು' ಎಂದು ಆಜ್ಞಾಪಿಸಿದನು. ತಂದೆಯ ಮಾತನಾಲಿಸಿ ಬ್ರಹ್ಮದೇವನು ಆನಂದತುಂದಿಲನಾಗಿ ಮಂಗಳ ಕಾರ್ಯಕ್ಕೆ ಅವಶ್ಯವಾದ ಕೊಪ್ಪರಿಗೆ ಮುಂತಾದ ಪಾತ್ರೆಗಳನ್ನು ತರುವಂತೆ ನಾರಾಯಣ ಪರಾಯಣರೂ, ಶೂರರೂ ಆದ ಗರುಡಾದಿದೇವತೆಗಳನ್ನು ಕಳುಹಿಸಿದನು. ಪಿತಾಮಹನ ಆಣತಿಯಂತೆ ಗರುಡಾದಿಗಳು ಬೇರೆಬೇರೆಯಾಗಿ ಹೊರಟು ಕ್ಷಣಮಾತ್ರದಲ್ಲಿ ಭಾಂಡೆಗಳನ್ನು ತೆಗೆದುಕೊಂಡು ಬಂದರು. ತರುವಾಯ ದಿವ್ಯವಾದ ಪಾವನಸ್ಥಳಗಳಲ್ಲುದ್ಭವಿಸಿರುವ ಶುಭಕರವೂ, ಪರಿಮಳೋಪೇತವೂ ಆದ ಜಲಸಮೂಹವನ್ನು ಜಲಾಧಿಪತಿಯಾದ ವರುಣದೇವನು ಆ ಭಾಂಡೆಗಳಲ್ಲಿ ತುಂಬಿಸಿದನು. ಆ ತರುವಾಯ ಸಕಲ ಸುಮಂಗಲೆಯರು ವಸ್ತ್ರಾಭರಣಗಳಿಂದ ಅಲಂಕೃತರಾಗಿ, ವಸಿಷ್ಠರ ಪತ್ನಿಯಾದ ಅರುಂಧತೀ ದೇವಿಯನ್ನು ಮುಂದಿಟ್ಟುಕೊಂಡು ಶುಭಕಾರ್ಯೋತ್ಸುಕರಾಗಿ, ದೀಪಶೋಭಿತವಾದ ಕಳಶವನ್ನು ಹಿಡಿಯುವ ವಿಚಾರದಲ್ಲಿ ಪಾರ್ವತಿಯನ್ನು ನಿಯೋಜಿಸಿದರು. ಅಂದರೆ ಪಾರ್ವತಿದೇವಿಯನ್ನು ಮಂಗಳಮಹೋತ್ಸವದ 'ಕಳಶಗಿತ್ತಿ'ಯನ್ನಾಗಿ ಮಾಡಿ, ಸಾವಿತ್ರೀದೇವಿಯನ್ನು ಮುಂದೆ ಮಾಡಿಕೊಂಡು ಸರ್ವರೂ ಶುಭಕಾರ್ಯಗಳನ್ನು ನೆರವೇರಿಸಿದರು.

ಎಲೈ ಜನಕಮಹಾರಾಜ! ಉತ್ತಮಲಲನೆಯರಾದ ಅವರು ಶ್ರೀಹರಿಯ 'ದಶಾವತಾರಗಳ ಲೀಲಾವಿಲಾಸ' ನಿರೂಪಣಪರಗಳಾದ ಮಂಗಳಗೀತೆಗಳನ್ನು ಹಾಡುತ್ತಾ, ಕೃಷ್ಣಾವತಾರ ಕಾಲದ ವೈಭವವನ್ನು ಗಾನಮಾಡುತ್ತಾ ಆ ಅಮರಾಂಗನೆಯರು, ಸಿದ್ಧಾಂಗನೆಯರು ಮತ್ತು ವೈಖಾನಸ ಸ್ತ್ರೀಯರುಗಳು ಗಾನಮಾಡಿದರು. ಹೀಗೆ ಶ್ರೀವೇಂಕಟೇಶನ ಪುಣ್ಯಕರ ವಿವಾಹಸಮಾರಂಭದ ಶುಭಕಾರ್ಯಗಳು ಜರುಗುತ್ತಿರಲು, ಮನಮೋಹಕ ನಯನವಿರಾಜಿತರಾದ ಶ್ರೀಹರಿಯ ಸೊಸೆಯರು ನಗುನಗುತ್ತಾ ಶ್ರೀವಾಸುದೇವನ ತಾಯಿಯಾದ ಬಕುಳಾದೇವಿ ಮತ್ತು ಶ್ರೀಹರಿಯ ಸಹೋದರಿಯಾದ ಗಿರಿಜೆಯನ್ನು ಮುಂದೆಮಾಡಿಕೊಂಡು ಪರಮ ಸಂಭ್ರಮೋತ್ಸಾಹಗಳಿಂದ ಮಂಗಳಕಾರ್ಯದಲ್ಲಿ ಮಗ್ನರಾದರು. ಇಂತು ಆ ವೇಂಕಟಗಿರಿಯಲ್ಲಿ ವೈಶಾಖ-ಶುಕ್ಲ ಸಪ್ತಮಿಯ ದಿವಸ ಅತಿ ವೈಭವದಿಂದ ಮಹೋತ್ಸವವು ನೆರವೇರಿತು. ಹೇ ಜನಕರಾಜ! ಈ ದೇವತಾ ರಮಣಿಯರು ನಾಲ್ಕುದಿಕ್ಕುಗಳಲ್ಲಿ ಓಕುಳಿಯಿಂದ ತುಂಬಿದ ನಾಲ್ಕು ಕಳಶಗಳನ್ನಿಟ್ಟು, ಅದಕ್ಕೆ ದಾರವನ್ನು ಸುತ್ತಿ,

ಚೌಕವಾದ ಆ ಮಂಡಲದ ಮಧ್ಯಭಾಗದಲ್ಲಿ ರತ್ನಮಯಪೀಠವನ್ನಿಟ್ಟು, ಸಂಭ್ರಮದಿಂದ ಶ್ರೀನಿವಾಸನನ್ನು ಕುರಿತು ''ಹೇ ಪುರುಷೋತ್ತಮ! ಏಳು ಈ ಸೂತ್ರಮಂಡಲದ ಮಧ್ಯದಲ್ಲಿರುವ ರತ್ನಪೀಠದಲ್ಲಿ ಮಂಡಿಸು'' ಎಂದು ವಿನಂತಿಸಿದರು. ಆಗ ಶ್ರೀಪತಿಯು ಆ ಸುರಾಂಗನೆಯರ ಮುಂಭಾಗದಲ್ಲಿ ಕಣ್ಣೀರಿಡುತ್ತಾ ದೀನನಾಗಿ ಬ್ರಹ್ಮದೇವನನ್ನುದ್ದೇಶಿಸಿ ಹೀಗೆ ಹೇಳಿದನು.

ಶ್ರೀನಿವಾಸ:- ಪಿತಾಮಹ! ನನ್ನ ಈ ವಿವಾಹ ಮಹೋತ್ಸವದಲ್ಲಿ ಸಂಪ್ರದಾಯಾನುಸಾರವಾಗಿ ಆಶೀರ್ವಾದ (ಆಶಂಸನ) ಪೂರ್ವಕವಾಗಿ ನನಗೆ ಯಾರು ಅಭ್ಯಂಜನಮಾಡಿಸುವರು? ಬ್ರಹ್ಮದೇವ, ಯಾರಿಗೆ ತಂದೆತಾಯಿಗಳಿಲ್ಲವೋ, ವಿವಾಹ-ವಿಪತ್ತು ಹಾಗು ಮರಣ ಸಮಯದಲ್ಲಿ, ತಮ್ಮವರೆಂಬುವವರಾರೂ ಇಲ್ಲದ ಅಂಥವನ ಜನ್ಮಕ್ಕೆ, ಜೀವನಕ್ಕೆ ಧಿಕ್ಕಾರವಿರಲಿ. ಅಕ್ಕತಂಗಿಯರು, ಅಣ್ಣತಮ್ಮಂದಿರು, ಸೋದರಮಾವಂದಿರು, ಸೋದರಳಿಯಂದಿರು, ಹೀಗೆ ನನಗೆ ಯಾರೂ ಇಲ್ಲ! ಬುದ್ಧಿಶಾಲಿಯಾದ ಹೇ ಚತುರಾನನ! ಅಂದಮೇಲೆ ನನಗೆ ಯಾರು ಮಂಗಳಾಭಿಷೇಕ ಮಾಡಿಸುವರು? ತಂದೆತಾಯಿಗಳಿಲ್ಲದವರಿಗೆ ಯಾವ ಗತಿಯಾಗುವುದೋ ನಾನರಿಯೆನು. ತಾಯಿಗೆ ಸಮನಾದ ಮಿತ್ರನೂ, ತಂದೆಗೆ ಸಮವಾದ ಸುಖವೂ ಇಲ್ಲ ಮತ್ತು ಪತ್ನಿಗೆ ಸಮವಾದ ಸಂಪತ್ತು (ಭಾಗ್ಯ), ಪುತ್ರನಿಗೆ ಸಮವಾದ ಗತಿಯೂ ಇಲ್ಲವು. ಅಣ್ಣತಮ್ಮಂದಿರಿಗೆ ಸರಿಯಾದ ಸ್ನೇಹವಿಲ್ಲ, ವಿಷ್ಣುವಿಗಿಂತ ಶ್ರೇಷ್ಠನಾದ ದೇವತೆಯಿಲ್ಲ!

ಇಂತು ಲೀಲಾಮಾನುಷವಿಗ್ರಹನಾದ ಶ್ರೀನಿವಾಸನು ಬ್ರಹ್ಮದೇವನ ಮುಖವನ್ನು ನೋಡುತ್ತಾ ಲೋಕಸಾಮಾನ್ಯ ಮಾನವರಂತೆ ಅಳಹತ್ತಿದನು. ಆಗ ಕಮಲಸಂಭವನಾದ ಬ್ರಹ್ಮದೇವನು ಭಗವಂತನ ಮಾತನ್ನು ಗ್ರಹಿಸಿ ಶ್ರೀಹರಿಯನ್ನು ಸಾಂತ್ವನಗೊಳಿಸುತ್ತಾ ಹೀಗೆ ಹೇಳಿದನು.

ಬ್ರಹ್ಮ:- ಪ್ರಭು! ನಿನ್ನ ಮಾಯೆಯೆಂಬ ಪಂಜರದಲ್ಲಿ ಸಿಲುಕಿರುವ ನಮ್ಮನ್ನು ಏತಕ್ಕಾಗಿ ಇಂತು ಮೋಹಗೊಳಿಸುತ್ತಿರುವೆ? ಹೇ ಚತುರ್ಭುಜ! ನೀನು 'ನನಗಾರೂ ಇಲ್ಲ'ವೆಂದು ಹೇಳಿದ ಮಾತು ಸತ್ಯಕ್ಕೆ ದೂರವಾದುದು! ಮಂಗಳಕರನಾದ ಶ್ರೀಹರಿಯೇ! ಅಖಿಲಲೋಕಪಿತಾಮಹನಾದ ನಾನು ನಿನ್ನ ಮಗನಾಗಿದ್ದೇನೆ. ಸಾಕ್ಷಾತ್ ಮುಕ್ಕಣ್ಣನಾದ ರುದ್ರದೇವನು ನಿನ್ನ ಮೊಮ್ಮಗನು! ನಿನ್ನ ಮತ್ತೊಬ್ಬ ಪುತ್ರನು ಮನ್ಮಥನು ; ಆರುಮುಖದ ಷಣ್ಮುಖನು ನಿನ್ನ ಮರಿಮಗನು. ಇನ್ನು ಜಗತ್ಪ್ರಾಣನಾದ ವಾಯುದೇವನು ನಿನ್ನ ಜ್ಯೇಷ್ಠಪುತ್ರನಾಗಿದ್ದಾನೆ! ಹೇ ಶ್ರೀನಿವಾಸ! ನಿನಗೆ ಭಾರತೀದೇವಿಯು ಸೊಸೆಯಾಗಿರುವಳು. ಸರಸ್ವತೀ ಮೊದಲಾದ ಸಕಲ ಸ್ತ್ರೀಯರೂ ನಿನ್ನ ಚರಣಸೇವಿಕೆಯರು. ಸ್ವತಃ ನೀನಾದರೋ ಸರ್ವೋತ್ತಮನಾದ ಪುರುಷನಾಗಿದ್ದೀಯೆ! (ಅಂದರೆ ಪುರುಷಲಿಂಗವಾಚ್ಯನಾಗಿರುವೆ), ನಿನ್ನ ಪತ್ನಿಯಾದ ಶ್ರೀಮಹಾಲಕ್ಷ್ಮಿಯಾದರೋ ಸಮಸ್ತಪ್ರಪಂಚಕ್ಕೂ ಸಾಕ್ಷಾತ್ ತಾಯಿಯಾಗಿದ್ದಾಳೆ! ಶ್ರೀನಿವಾಸ, ನಿನ್ನೀಕಾರ್ಯವು ಕೇವಲ ಕ್ರೀಡೆಯೆಂದು ನಾನು ಭಾವಿಸುವೆನು. ದೇವ! ಹೀಗೆ ಸಕಲಸಂಪತ್ತು-ವೈಭವಗಳಿಂದ ಕಂಗೊಳಿಸುವ ನೀನು ವ್ಯರ್ಥವಾಗಿ ನಮ್ಮನ್ನು ಮೋಹಗೊಳಿಸುತ್ತಿದ್ದೀಯೆ!'' ಹೀಗೆ ಚತುರ್ಮುಖ ಬ್ರಹ್ಮದೇವನು ಹೇಳಿದ ಮಾತನ್ನು ಕೇಳಿ ಕಮಲಾಸಖನಾದ ಶ್ರೀಹರಿಯು ರಮಾದೇವಿಯನ್ನು ನೋಡಿ ಸಂಜ್ಞೆ ಮಾಡಿದನು. ಆಗ ಶ್ರೀಕಮಲೆಯು ಇಂತು ವಿಜ್ಞಾಪಿಸಿದಳು-

ಲಕ್ಷ್ಮೀ :- ವೇಂಕಟವಲ್ಲಭ! ಶ್ರೀನಿವಾಸ, ನಿನ್ನ ಮನದ ಭಾವವನ್ನು ಅರಿತಿರುವೆನು. ಪುರುಷೋತ್ತಮ! ಎಣ್ಣೆಯನ್ನು ಹಚ್ಚಿ ಮಂಗಳಸ್ನಾನ ಮಾಡಿಸುವುದೇ ಮೊದಲಾದ ನಿನ್ನ ಸೇವೆಯನ್ನು ನಾನು ಮಾಡುತ್ತೇನೆ. ಎದ್ದೇಳು. ನಿನ್ನೀ ದುಃಖ ಪ್ರದರ್ಶನವನ್ನು ಸಾಕುಮಾಡು! ದೇವ, ಉತ್ತಮವಾದ ಈ ರತ್ನಪೀಠವನ್ನಲಂಕರಿಸು.

ಹೇ ಜನಕರಾಜ! ರಮಾದೇವಿಯ ನಲುನುಡಿಯನಾಲಿಸಿ ಆನಂದಾಶ್ರುಹರಿಸುತ್ತಾ ನರನ ಸಾರಥಿಯಾದ ಶ್ರೀಕೃಷ್ಣನು, ಕಶ್ಯಪರು, ಅತ್ರಿಗಳು, ಭರದ್ವಾಜರು, ವಿಶ್ವಾಮಿತ್ರರೇ ಮೊದಲಾದ ಋಷಿಗಳನ್ನು ಆನಂದಗೊಳಿಸುತ್ತಾ, ಅವರಿಗೆ ನಮಸ್ಕರಿಸಿ ಜಗತ್ತನ್ನು ವಿಡಂಬನೆಗೊಳಿಸುತ್ತಾ ವಸಿಷ್ಠರನ್ನು ಕುರಿತು ''ಬ್ರಹ್ಮಜ್ಞಾನಿಗಳಾದ ವಸಿಷ್ಠಮುನಿಗಳೇ! ಮಂಗಳಸ್ನಾನಮಾಡಲು

ನನಗೆ ಅಪ್ಪಣೆಕೊಡಿರಿ'' ಎಂದು ವಿಜ್ಞಾಪಿಸಿದನು. ಪುರೋಹಿತರಾದ ಆ ವಸಿಷ್ಠಮುನಿಗಳು ''ದೇವ, ಹಾಗೆಯೇ ಆಗಲಿ'' ಎಂದು ಅನುಜ್ಞೆ ನೀಡಿದರು. ತರುವಾಯ ಸಪತ್ನೀಕರಾದ ದೇವತೆಗಳು, ಋಷಿಮಂಡಲಗಳಿಂದ ಅಪ್ಪಣೆಯನ್ನು ಹೊಂದಿ ದೇವೋತ್ತಮನಾದ ಶ್ರೀವೇಂಕಟೇಶನು ಜೊತೆಗಾರರಿಂದೊಡಗೂಡಿ ಮೇಲೆದ್ದನು. ಆ ತರುವಾಯ ಕೇಶಪುಂಖಗಳನ್ನು ಬಿಚ್ಚಿ ಪೂರ್ವಾಭಿಮುಖವಾಗಿ ಕುಳಿತನು. ಆಗ ಅಮರನಾರಿಯರು ಶ್ರೀನಿವಾಸನನ್ನು ರತ್ನಪೀಠದ ಮೇಲೆ ಕುಳಿತುಕೊಳ್ಳುವಂತೆ ವಿಜ್ಞಾಪಿಸಿ ಕುಳ್ಳಿರಿಸಿದರು. ಆ ಸುರಾಂಗನೆಯರ ಮಧ್ಯಭಾಗದಲ್ಲಿ ಅಂಬುಜಾಕ್ಷಿಯಾದ ಸಿಂಧುಕುಮಾರಿ ರಮಾದೇವಿಯು ಸುಗಂಧದೆಣ್ಣೆಯಿಂದ ತುಂಬಿದ ಸುವರ್ಣಪಾತ್ರೆಯನ್ನು ಕರದಲ್ಲಿ ಪಿಡಿದು, ಆದರದಿಂದ ಶುಭಾಶೀರ್ವಾದ (ಶುಭಾಶಂಸನ) ಪೂರ್ವಕವಾಗಿ ವೇಂಕಟೇಶನನ್ನು ಅಭಿನಂದಿಸಿ ಅಭ್ಯಂಜನ ಮಾಡಿಸಿದಳು. ಆಗ ಕಮಲಾಸನೆಯಾದ ಮಹಾಲಕುಮಿಯು ''ಹೇ ಶ್ರೀನಿವಾಸ! ದೀರ್ಘಾಯುವಾಗು, ಬಹುಪುತ್ರವಂತನಾಗು, ಸಿರಿವಂತನಾಗು, ಹದಿನಾಲ್ಕು ಲೋಕಗಳಿಗೂ ಏಕಛತ್ರಾಧಿಪತಿಯಾದ ಸಾಮ್ರಾಟನಾಗು'' ಎಂದು ಶುಭಾಶಂಸನೆ ಮಾಡಿ ಅತಿಪರಿಮಳಭರಿತವಾದ ಎಣ್ಣೆಯಿಂದ ಪರಮಾತ್ಮನ ಅಂಗಗಳನ್ನು ಮರ್ದಿಸಿ, ಅಭ್ಯಂಜನ ಮಾಡಿಸಿದಳು. ಆಗ ಬ್ರಹ್ಮನ ಪತ್ನಿಯಾದ ಸರಸ್ವತಿಯು ಕೇಸರ ಪಚ್ಚಕರ್ಪೂರ ಮಿಶ್ರಿತ ರಸವನ್ನು ನೀಡಿದಳು. ರಮಾದೇವಿಯು ಆದರಿಂದ ಮತ್ತು ಪುನಗು ಚೆಟ್ಟಿನ ತೈಲ, ಕಸ್ತೂರಿಪಂಕ, ಹರಿದ್ರಾಚೂರ್ಣದ ಮುದ್ದೆಗಳಿಂದ ಶ್ರೀನಿವಾಸನ ಅಂಗಗಳನ್ನು ಉಜ್ಜಿ, ಮಂಗಳಕರ ವಾದ್ಯಘೋಷ-ವೇದಘೋಷಗಳಾಗುತ್ತಿರಲು ಸುತ್ತಮುತ್ತಲಿನ ಪುಣ್ಯತೀರ್ಥಗಳ ಪವಿತ್ರಜಲಗಳಿಂದ ತುಂಬಿದ ಸುವರ್ಣಕುಂಭಗಳನ್ನು ಆನೆಯಕುಂಭಸ್ಥಳಗಳ ಮೇಲಿಟ್ಟು ಎಲ್ಲ ಬೀದಿಗಳಲ್ಲೂ ಮೆರವಣಿಗೆಯಿಂದ ತೆಗೆದುಕೊಂಡುಬಂದು, ಹಿತಮಿತವಾಗಿ ಕಾಯಿಸಿದ ಬಿಸಿನೀರಿನಿಂದಲೂ, ರತ್ನಗಳಿಂದೊಡಗೂಡಿದ ಬಂಗಾರದ ಕೊಡಗಳಿಂದ ಜಗದೀಶನಾದ ಶ್ರೀನಿವಾಸನಿಗೆ ಅಭಿಷೇಕ ಮಾಡಿದಳು. ಅನಂತರ ಕಮಲೆಯು ಶ್ರೀಹರಿಗೆ ಆಪಾದಮೌಲಿಪರ್ಯಂತವಾಗಿ ಊದ್ವರ್ತನಮಾಡಿ, ಶ್ರೀಹರಿಯ ಸೇವೆಯಿಂದ ತಾನು ಕೃತಾರ್ಥಳಾದೆನೆಂದು ತಿಳಿದು ಆನಂದಿಸಿದಳು.

ಎಲೈ ಜನಕಭೂಪತಿಯೇ! ಆಗ ನಾಲ್ಕು ಜನ ಮುತ್ತೈದೆಯರು ಕರಗಳಲ್ಲಿ ಕಳಶಗಳನ್ನು ಹಿಡಿದು, ಮುತ್ತಿನ ನೀರಿನಿಂದ ದೇವತಾಸಾರ್ವಭೌಮನಾದ ಶ್ರೀನಿವಾಸನಿಗೆ ಅಭಿಷೇಕಮಾಡಿದರು. ಸುರಾಂಗನೆಯರು ''ಅನೇಕ ಪುತ್ರರುಳ್ಳವನಾಗು, ಸಿರಿವಂತನಾಗು'' ಎಂದು ಶುಭಾಶಂಸನಗಳಿಂದ ಅಭಿನಂದಿಸುತ್ತಾ ನೀರಿನಿಂದ ದೃಷ್ಟಿತೆಗೆದರು. ದೀಪದಾರತಿಯೆತ್ತಿದರು. ಅನಂತರ ಸಕಲ ಸ್ತ್ರೀಯರೂ ಮಂಗಳಗೀತೆಗಳನ್ನು ಹಾಡುತ್ತಾ ಕುಂಕುಮ ಮಿಶ್ರಿತವಾದ ಮಂಗಳಕರ (ಕದಲಾರತಿಯನ್ನು) ಆರತಿಯನ್ನು ಮಾಡಿದರು. ಆಗ ಬ್ರಹ್ಮನರಸಿಯಾದ ಸಾವಿತ್ರೀದೇವಿಯು ಶ್ರೇಷ್ಠವಸ್ತ್ರವನ್ನೀಯಲು ಶ್ರೀಲಕ್ಷ್ಮೀದೇವಿಯು ಆದರಿಂದ ಶ್ರೀನಿವಾಸನ ಎಲ್ಲ ಅವಯವಗಳನ್ನೊರೆಸಿದಳು. ಪಾರ್ವತೀದೇವಿಯು ಹಾಲುಮಡ್ಡಿ ಮುಂತಾದ ಸುಗಂಧ ಧೂಪಗಳನ್ನು ರಮೆಯ ಕರಪದ್ಮಗಳಲ್ಲಿಟ್ಟಳು. ಲಕ್ಷ್ಮೀದೇವಿಯು ಮಧುಸೂದನನ ಕೇಶಗಳನ್ನು ಬಂಧನದಿಂದ ಬಿಚ್ಚಿ, ಕೆದರಿ, ಪರಿಮಳದ ಧೂಪವನ್ನು ಹಾಕಿ ಮತ್ತೆ ದೇವನ ಕೂದಲುಗಳನ್ನು ಗಂಟುಕಟ್ಟಿದಳು. ಆಗ ಸಾವಿತ್ರೀ ದೇವಿಯು ಬಂಗಾರದ ಕಟ್ಟು ಹಾಕಿರುವ ಕನ್ನಡಿಯನ್ನು ಶ್ರೀನಿವಾಸನಿಗೆ ತೋರಿಸಿದಳು. ರತೀದೇವಿ-ಶಚೀದೇವಿಯರು ಚಂದ್ರನಂತೆ ಬಿಳುಪಾಗಿ ಬೆಳಗುವ ಎರಡು ಚಾಮರಗಳಿಂದ ಬೀಸಿದರು. ಜಗದ್ವಿಖ್ಯಾತಳಾದ ಶ್ರೀಭಾರತೀದೇವಿಯು ಶ್ರೀಹರಿಗೆ ಭಕ್ತಿಯಿಂದ ಶ್ವೇತಛತ್ರವನ್ನು ಹಿಡಿದಳು. ಆ ಸಮಯದಲ್ಲಿ ಗಂಗಾದೇವಿಯ ಜನಕನಾದ ಶ್ರೀನಿವಾಸನಿಗೆ ಮಂಗಳಪ್ರದಳಾದ ಗಂಗಾದೇವಿಯು ಎರಡು ಪಾದುಕೆಗಳನ್ನು ಅರ್ಪಿಸಿದಳು. ಹಿಂದೆ ಯಾವ ಗೌತಮಮುನಿಗಳ ಶಾಪದಿಂದ ಶಿಲೆಯಾಗಿದ್ದ ಅಹಲ್ಯೆಯು ಯಾವ ಪರಮಾತ್ಮನ ಪಾದಸ್ಪರ್ಶದಿಂದ ಶಾಪಮೋಚನಪೂರ್ವಕವಾಗಿ ಮೊದಲಿನಂತೆ ನಿಜಶರೀರವನ್ನು ಪಡೆದು ಪಾವನಳಾದಳೋ, ಅಂತಹ ಶರಣ ಜನರ ಸಂಕಟ ಪರಿಹಾರಕನಾದ ಶ್ರೀನಿವಾಸನು ಗಂಗಾದೇವಿಯು ಅರ್ಪಿಸಿದ ಆ ಎರಡು ಪಾದುಕೆಗಳಲ್ಲಿ ತನ್ನೆರಡು ಪಾದಗಳನ್ನಿಟ್ಟು (ಪಾದುಕೆಗಳನ್ನು ಮೆಟ್ಟಿ), ಧರೆಯಲ್ಲಿ ಸಂಚರಿಸುತ್ತಾ ಉತ್ತಮವಾದ

ಭದ್ರಪೀಠದ ಬಳಿಗೆ ಚಿತ್ತೈಸಿದನು. ಆಗ ದೇವತಾ ಶ್ರೇಷ್ಠರಾದ ಬ್ರಹ್ಮಾದಿಗಳು, ಇಂದ್ರಾದಿ ಲೋಕಪಾಲಕರು, ಕಶ್ಯಪಾದಿ ಮುನಿವರ್ಯರು, ವಸಿಷ್ಠರೇ ಮುಂತಾದ ತಪೋಧನರು, ಭೃಗುಮುನಿ ಮೊದಲಾದ ಋಷಿಶ್ರೇಷ್ಠರು, ಅರ್ಯಮಾದಿ ಪಿತೃಗಳು, ತುಂಬುರು ಮುಂತಾದ ಗಾಯಕರು, ರಂಭಾದಿ ನರ್ತಕಿಯರು, ಸೂತರು, ಮಾಗಧರು, ಸ್ತುತಿಪಾಠಕರುಗಳು ರಮ್ಯ ಸಿಂಹಾಸನದಲ್ಲಿ ಬೆಡಗುಗೊಂಡಿರುವ ಪುರುಷೋತ್ತಮನಾದ ಶ್ರೀನಿವಾಸನನ್ನು ಭಕ್ತಿಯಿಂದವಲೋಕಿಸುತ್ತಾ ಉಪಾಸನ ಮಾಡಿದರು. ಆ ತರುವಾಯ ಸ್ವಾಮಿಪುಷ್ಕರಿಣಿಯ ದಕ್ಷಿಣದಿಗ್ಭಾಗದಲ್ಲಿ ಸಜ್ಜನ ಪರಿಪಾಲಕನೂ, ಗರುಡವಾಹನನೂ ಆದ ಶ್ರೀಹರಿಪರಮಾತ್ಮನು, ಅಷ್ಟಮಿಯ ಚಂದ್ರನ ಕಲೆಯಂತೆ, ಸ್ವಚ್ಛ ಕನ್ನಡಿಯಂತೆ ಹೊಳೆಯುವ ತನ್ನ ಹಣೆಯಲ್ಲಿ ಊರ್ಧ್ವ ಪುಂಡ್ರನಾಮವನ್ನು ಧರಿಸಿದನು. ಆಗ ದೈವಜ್ಞರು ''ಮುಹೂರ್ತಕಾಲ ಬಂದಿತೆಂದು'' ಅರುಹಿದರು. ಶ್ರೀನಿವಾಸನ ಮಾತೆಯಾದ ಬಕುಳಾದೇವಿಯು ಜಗನ್ಮಾತೆಯಾದ ಶ್ರೀರಮಾದೇವಿಯನ್ನು ಕರೆದು, ''ಮಂಗಳಾಂಗಿ! ಶ್ರೀನಿವಾಸನ ಹಣೆಯಲ್ಲಿ ಕಸ್ತೂರೀಕುಂಕುಮದ ತಿಲಕವನ್ನು ಹಚ್ಚು'' ಎಂದಳು. ದೇವಮಾತೆಯ ಮಾತನಾಲಿಸಿ ಲಕುಮಿಯು ಸಡಗರದಿಂದ ಶ್ರೀಹರಿಯ ಫಾಲಪ್ರದೇಶದಲ್ಲಿ ತಿಲಕವನ್ನು ಹಚ್ಚಿದಳು. ಬಕುಳೆಯು ಪುತ್ರನಾದ ಶ್ರೀನಿವಾಸನಿಗೆ ಅಲಂಕಾರಗಳನ್ನು ನೀಡಿದಳು.

ಹೇ ಜನಕಮಹಾರಾಜ! ಆ ಬಳಿಕ ಶ್ರೀಲಕ್ಷ್ಮೀದೇವಿಯು ಕುಬೇರನಲ್ಲಿ ಆಭರಣಗಳನ್ನು ಕೇಳಿ ತಂದು ಅವನ್ನು ಶ್ರೀಹರಿಗೆ ತೋರಿದಳು. ಆಗ ಶ್ರೀನಿವಾಸನು ನಗೆಮೊಗದಿಂದ ಜಗದೊಡೆಯನಾದ ವೇಂಕಟೇಶನು ''ಪ್ರಿಯೆ, ಸುಂದರಾನನೆ! ಈ ಆಭರಣಗಳಿಂದ ನನ್ನನ್ನು ಚೆನ್ನಾಗಿ ಅಲಂಕರಿಸು'' ಎನ್ನಲು, ಲಕ್ಷ್ಮೀದೇವಿಯು ನಸುನಗುತ್ತಾ ಶ್ರೀಹರಿಯನ್ನು ವಿವಿಧಾಭರಣಗಳಿಂದ ಶೃಂಗರಿಸಿದಳು. ಅನಂತರ ಶ್ರೀನಿವಾಸನು ಸುಂದರಪೀತಾಂಬರವನ್ನುಟ್ಟು ಅಮೂಲ್ಯವಾದ ಉಡುದಾರವನ್ನು ಕಟ್ಟಿಕೊಂಡು ಕನಕಮಯ ವಸ್ತ್ರಾಭರಣಗಳಿಂದ ಭೂಷಿತನಾಗಿ, ಕಶ್ಯಪ-ಅತ್ರಿ-ಭರದ್ವಾಜ-ವಸಿಷ್ಠಾದಿ ಮಹಾಮುನಿಗಳಿಗೆ ಸ್ವಯಂ ಬ್ರಹ್ಮರುದ್ರಾದ್ಯಮರ ವೃಂದವಂದಿತನಾದಾಗ್ಯೂ ಆದರದಿಂದ ನಮಸ್ಕರಿಸಿದನು ಮತ್ತು ಸಂಧ್ಯೋಪಾಸನೆ, ತಾತ್ಕಾಲಿಕ ಕ್ರಿಯೆಗಳನ್ನು ನಿಯಮಾನುಸಾರ ನೆರವೇರಿಸಿ ಅತ್ಯಾನಂದೋದ್ರಿಕ್ತ ಮನಸ್ಸಿನಿಂದ ವಸಿಷ್ಠರನ್ನು ಕರೆದು ''ಮುನಿವರ್ಯರೇ, ಮುಂದಿನ ಕಾರ್ಯಗಳನ್ನು ನೆರವೇರಿಸಿರಿ'' ಎಂದನು. ಆಗ ಮಹಾವಾಗ್ಮಿಗಳಾದ ವಸಿಷ್ಠರು ಶ್ರೀಹರಿಪರಮಾತ್ಮನ ಆಣತಿಯಂತೆ ಮುತ್ತುಗಳಿಂದ ಚೌಕಾಕಾರದ ವೇದಿಕೆಯನ್ನು ರಚಿಸಿ, ಅಲ್ಲಿ ದಿವ್ಯಪೀಠದ ಮೇಲೆ ಶ್ರೀನಿವಾಸನನ್ನು ಕೂಡಿಸಿ, ಸಂಕಲ್ಪಪೂರ್ವಕವಾಗಿ, ಬ್ರಾಹ್ಮಣರುಗಳಿಗೆ ವರಣವನ್ನು ಕೊಟ್ಟು ಪುಣ್ಯಾಹ ಮುಂತಾದ ಕರ್ಮಗಳನ್ನು ನೆರವೇರಿಸಿದರು. ಅದಾದಮೇಲೆ ಜಗತ್ಸೃಷ್ಟಿಕರ್ತನಾದ ಬ್ರಹ್ಮದೇವನು, ಅಷ್ಟವರ್ಗವನ್ನು (ಅಷ್ಟವರ್ಗವೆಂದರೆ, ಗಣಪತಿಪೂಜಾ, ವರುಣಪೂಜಾ, ನಾಂದೀದೇವತಾ, ಇಷ್ಟದೇವತಾ, ಕುಲದೇವತೆ ಇವುಗಳ ಪೂಜೆ. ಗೌದಾನಿಕ ವ್ರತ ಮತ್ತು ಸಮಾವರ್ತನೆ ಹೀಗೆ ಎಂಟು ವಿಧ ಕಾರ್ಯಗಳಿಗೆ ಅಷ್ಟವರ್ಗವೆಂದು ಹೆಸರು) ನೆರವೇರಿಸಿದನು. ಅನಂತರ ಮಂಗಳಮಹೋತ್ಸವದ ನಿಯಮದಂತೆ ವೇದವಿದ್ಯಾವಿಶಾರದರಾದ ಪಂಡಿತರಿಗೂ, ಭೂಸುರರಿಗೂ ತಾಂಬೂಲ ದಕ್ಷಿಣೆಗಳನ್ನು ನೀಡಿದನು. ಅನಂತರ ಶ್ರೀವಾಸುದೇವನಿಗೆ ಪ್ರಿಯರಾದ ದೇವತೆಗಳು ವಿವಿಧವಸ್ತ್ರ-ಧನವನ್ನೂ ಉಡುಗೊರೆಯಾಗಿ ಅರ್ಪಿಸಿದರು. ಆ ಬಳಿಕ ಶಾಸ್ತ್ರೋಕ್ತವಾದ ಕರ್ಮಗಳನ್ನು ವಿಧಿಪೂರ್ವಕವಾಗಿ ಮಾಡಿ ಮುಗಿಸಿ, ವಸಿಷ್ಠ ಋಷಿಗಳು ಕುಲದೇವತೆಯ ಬಗೆಗೆ ಶ್ರೀನಿವಾಸನನ್ನು ಪ್ರಶ್ನಿಸಿದರು. ಆಗ ಭಗವಾನ್ ಶ್ರೀನಿವಾಸನು ''ವಸಿಷ್ಠರೇ! ನನಗೂ ಪಾಂಡವರಿಗೂ, ಮಂಗಳಕರಳಾದ ಕುಲದೇವತೆಯು ಶಮೀ ಎಂದು ಸ್ಮೃತಳಾಗಿರುವಳು. ಇದರಲ್ಲಿ ವಿಚಾರ್ಯಾಂಶವೇನಿಲ್ಲ'' ಎಂದನು. ವಸಿಷ್ಠರು ''ದೇವ! ಆ ಶ್ರೇಷ್ಠವೃಕ್ಷರಾಜನು ಎಲ್ಲಿದ್ದಾನೆ?'' ಎಂದು ಕೇಳಿದರು. ಆಗ ಸಮೀಪದಲ್ಲೇ ಇದ್ದ ಅಗಸ್ತ್ಯಮುನಿಗಳು ''ಋಷಿವರ್ಯ! ಇಲ್ಲಿಯೇ ಉತ್ತರ ದಿಕ್ ಪ್ರದೇಶದಲ್ಲಿ, ಕುಮಾರಧಾರಾತೀರ್ಥದ ಬಳಿಯಲ್ಲಿ ಆ ಶಮೀವೃಕ್ಷವಿದೆ. ಶ್ರೀನಿವಾಸ! ನೀನಲ್ಲಿಗೆ ತೆರಳಿ. ಅದನ್ನು ತೆಗೆದುಕೊಂಡು ಬರಬೇಕು'' ಎಂದರು.

ಎಲೈ ಜನಕಮಹಾರಾಜ! ಅಗಸ್ತ್ಯರ ನುಡಿಯನಾಲಿಸಿ, ಲೌಕಿಕದೇಹ ಪಡೆದವನಂತೆ ಅಂದರೆ ಪ್ರಾಕೃತ ಶರೀರಿಯಾದ ಮಾನವನಂತೆ ಷಡ್ಗುಣೈಶ್ವರ್ಯಪೂರ್ಣನಾದ ಶ್ರೀಹರಿಯು ಕುಮಾರತೀರ್ಥದ ಸನಿಹಕ್ಕೆ ಹೋಗಿ, ಕುಲದೇವತೆಯಾದ ಶಮೀವೃಕ್ಷಕ್ಕೆ ಪ್ರದಕ್ಷಿಣೆಮಾಡಿ ನಮಸ್ಕಾರ ಮಾಡಿ ''ಎಲೈ ಶಮಿಯೇ! ಶತ್ರುಗಳನ್ನು ನಾಶಪಡಿಸುವವಳೇ, ನನ್ನ ಪಾಪಗಳನ್ನು ಪರಿಹರಿಸಮ್ಮ! ಶ್ರೀರಾಮಚಂದ್ರನಿಗೆ ಪ್ರಿಯಳಾದ ಸೀತಾದೇವಿಯ ದರ್ಶನ ಮಾಡಿಸಿದ ಹೇ ಶಮಿಯೇ! ಅರ್ಜುನನ ಗಾಂಡೀವವನ್ನು ಧರಿಸಿದವಳೇ, ಎಲೈ ತಾಯಿ, ಯಾವ ವಿಧವಾದ ವಿಘ್ನವೂ ಬಾರದಂತೆ, ನನ್ನ ಕಲ್ಯಾಣೋತ್ಸವವನ್ನು ನೆರವೇರಿಸು. ನನಗೆ ಮಂಗಳವನ್ನುಂಟುಮಾಡು. ದೇವತೆಗಳಿಗೆ ಪ್ರೀತ್ಯಾಸ್ಪದಳಾದ ಎಲೈ ದೇವಿ! ಆಕಾಶರಾಜನಿಗೂ, ಸಕಲ ದೇವತೆಗಳಿಗೂ ಯಾವ ವಿಧವಾದ ಕಲಹವೂ (ವ್ಯಾಜ್ಯವೂ) ಉಂಟಾಗದಿರಲಿ! ಇಂತು ಅನುಗ್ರಹಿಸಮ್ಮಾ'' ಎಂದು ದೇವತಾಸಾರ್ವಭೌಮನಾದ ಶ್ರೀವೇಂಕಟೇಶನು ಅಮರವಂದಿತಳಾದ ಕುಲದೇವಿಯನ್ನು ಪ್ರಾರ್ಥಿಸಿ, ಪದ್ಧತಿಯಂತೆ ಪೂಜಿಸಿ, ಶಮೀವೃಕ್ಷದ ಒಂದು ಸಣ್ಣ ಟೊಂಗೆಯನ್ನು ಕತ್ತರಿಸಿ, ಅದನ್ನು ತಲೆಯ ಮೇಲಿಟ್ಟುಕೊಂಡು ಮಂಗಳವಾದ್ಯಗಳು ಭೋರ್ಗರೆಯುತ್ತಾ ಸಕಲ ಗಗನ ಪ್ರದೇಶಗಳನ್ನೂ ಧ್ವನಿಗೊಳಿಸುತ್ತಿರಲು ಮತ್ತೆ ತನ್ನ ನಿವಾಸಸ್ಥಾನಕ್ಕೆ ಆಗಮಿಸಿದನು. ಸ್ವಸ್ಥಾನಕ್ಕೆ ಬಂದ ಮೇಲೆ ಶ್ರೀನಿವಾಸನು ''ಸ್ವಾಮಿ, ವಸಿಷ್ಠಋಷಿಗಳೇ, ಈ ನಮ್ಮ ಕುಲದೇವತೆಯನ್ನು ಎಲ್ಲಿ ಪ್ರತಿಷ್ಠಾಪಿಸಬೇಕು'' ಎಂದು ಪ್ರಶ್ನಿಸಿದನು. ಆಗ ಅಲ್ಲೇ ಇದ್ದ ದೇವರ್ಷಿ ನಾರದರು ಮುಂದೆ ಬಂದು ಮಧುನಾಮಕ ದೈತ್ಯವಿದಾರಿಯಾದ ಶ್ರೀಹರಿಯನ್ನು ಕುರಿತು ''ಪ್ರಭು! ಎಲ್ಲಿ ಸ್ವಂತವಾದ ಮನೆಯಿರುವುದೋ ಅಲ್ಲಿ ಕುಲದೇವತೆಯನ್ನು ಸ್ಥಾಪಿಸಿ ಪೂಜಿಸಬೇಕು. ಇದು ಪಂಡಿತರ ಅಭಿಪ್ರಾಯ. ಹಿಂದೆ ಶ್ರೀಬ್ರಹ್ಮದೇವನು ಹೀಗೆ ನಿಯಮ ಮಾಡಿದ್ದಾನೆ'', ಎಂದು ವಿಜ್ಞಾಪಿಸಿದರು. ಆಗ ಶ್ರೀನಿವಾಸನು ವಸಿಷ್ಠ ಮಹರ್ಷಿಗಳೊಡನೆ ಶ್ರೀವರಾಹದೇವರ ಸನ್ನಿಧಿಗೆ ಹೋಗಿ ಧರಣೀವರಾಹಸ್ವಾಮಿಯನ್ನು ಕುರಿತು ''ದೇವ! ವರಾಹಮೂರ್ತಿ, ನಿನ್ನ ಅನುಗ್ರಹದಿಂದ ನಾನು ವಿವಾಹವಾಗಲು ಉತ್ಸುಕನಾಗಿದ್ದೇನೆ. ಆದುದರಿಂದ ನೀನು ಧರಾದೇವಿಯೊಡನೆ ನಮ್ಮೊಡನೆ ಆಕಾಶರಾಜನ ಅರಮನೆಗೆ ಬರಬೇಕು'' ಎಂದು ಕೋರಿದನು. ಆಗ ಶ್ರೀವರಾಹಸ್ವಾಮಿಯು ''ಶ್ರೀನಿವಾಸ! ನನ್ನ ಸ್ಥಾನದಲ್ಲಿ ನನ್ನ ಸಖಿಯಾದ ಬಕುಳಾದೇವಿಯನ್ನು ಕರೆದುಕೊಂಡು ಹೋಗು. ಈ ಕ್ಷೇತ್ರವು ನನ್ನದಾಗಿರುವುದರಿಂದ ನನ್ನ ಹೊಲವು ಪಕ್ವವಾಗಿರುವುದರಿಂದ ನಾನಿದನ್ನು ಬಿಟ್ಟು ಬರುವಂತಿಲ್ಲ. ಆದ್ದರಿಂದ ನನ್ನನ್ನು ಬಿಟ್ಟುಕೊಡು. ನಾನು ಬರಲೇಬೇಕೆಂದು ಬಲಾತ್ಕರಿಸಬೇಡ'' ಎಂದು ಹೇಳಿದನು. ಶ್ರೀನಿವಾಸನು ವರಾಹಸ್ವಾಮಿಯ ಮಾತನ್ನು ಮನ್ನಿಸಿ ''ಸರಿ ದೇವ! ನಿನ್ನ ಸನ್ನಿಧಿ (ಮನೆ) ಯಲ್ಲಿ ಕುಲದೇವಿಯ ಪ್ರತಿಷ್ಠಾಪನೆ ಮಾಡುತ್ತೇನೆ. ಅದಕ್ಕೆ ಒಪ್ಪಿಗೆ ನೀಡು'' ಎಂದು ಕೋರಲು ವರಾಹಮೂರ್ತಿಯು ರಮಾಸಹಾಯನೂ, ಸರ್ವೋತ್ತಮನೂ ಆದ ಶ್ರೀಹರಿಯನ್ನು ಕುರಿತು ''ಆಗಬಹುದು. ಹಾಗೆಯೇ ಮಾಡು'' ಎಂದು ಅನುಮತಿ ನೀಡಿದನು.

ಆ ತರುವಾಯ ಸಜ್ಜನರಕ್ಷಕನಾದ ಶ್ರೀವೇಂಕಟೇಶನು ರತ್ನಖಚಿತವಾದ ಕಳಶದಲ್ಲಿ ಮುತ್ತುಗಳನ್ನು ತುಂಬಿ ಕಳಶಕ್ಕೆ ವಸ್ತ್ರವೇಷ್ಟನ ಮಾಡಿ ವಿದ್ಯುಕ್ತ ರೀತಿಯಿಂದ ಮಾನವನಂತೆ ವಿಡಂಬನ ಮಾಡುತ್ತಾ ಪೂಜೆ ಮಾಡಿ, ಶ್ರೀವರಾಹ ಸನ್ನಿಧಿ ಯಲ್ಲಿ ಕುಲದೇವತೆಯನ್ನು ಸ್ಥಾಪಿಸಿ, ಶ್ರೀಹರಿಯು ಮತ್ತೆ ತನ್ನ ಸ್ವಸ್ಥಾನಕ್ಕೆ ಮರಳಿ ಬಂದು ನಾರಾಯಣಪುರಕ್ಕೆ ಹಸಿದೇ (ಊಟಮಾಡದೆಯೇ) ಹೋಗಲು ನಿಶ್ಚಯಿಸಿ ಬೇಗ ಹೊರಡಲನುವಾಗಿ ಬ್ರಹ್ಮದೇವನನ್ನು ಕರೆದು ''ಎಲೈ ಚತುರಾನನ ಬ್ರಹ್ಮ! ನಾರಾಯಣಪುರಕ್ಕೆ ಜಾಗ್ರತೆಯಾಗಿ ಹೋಗಬೇಕು. ಆದುದರಿಂದ ನಿನ್ನ ಚತುರಂಗ ಬಲವನ್ನು ಈಗಲೇ ಹೊರಡಿಸು! ಕುಮಾರ! ಇಲ್ಲಿ ಅನವಶ್ಯಕವಾಗಿ ಕಾಲಹರಣ ಮಾಡುವುದು ಬೇಡ. ನಾರಾಯಣಪುರದ ದಾರಿಯು ಬಹುದೀರ್ಘವಾಗಿದೆ. ಅರಣ್ಯದಲ್ಲಿ ವೃದ್ಧರು, ಮಕ್ಕಳು, ಅಬಲೆಯರಾದ ಹೆಂಗಸರು ಇವರನ್ನು ಜೊತೆಗೂಡಿ, ಮುನಿವೃಂದದೊಡನೆ ಸಮಸ್ತ ಸೇನೆಯೂ ಮೆಲ್ಲನೆ ಪಯಣಿಸಲಿ'' ಶ್ರೀಹರಿಯ ಮಾತನಾಲಿಸಿ ಪಿತಾಮಹನು ತಂದೆಯಾದ ಪುರುಷೋತ್ತಮನಲ್ಲಿ ಇಂತು ವಿಜ್ಞಾಪಿಸಿದನು–

ಬ್ರಹ್ಮ :- ಗೋವಿಂದ! ಪುಣ್ಯಾಹ ಮುಂತಾದ ಮಂಗಳಕಾರ್ಯಗಳನ್ನು ಆಚರಿಸಿ, ಕುಲದೇವತೆಯನ್ನು ಪ್ರತಿಷ್ಠಾಪಿಸಿ ಭೋಜನಮಾಡದೆ ಪ್ರಯಾಣ ಮಾಡಬಾರದೆಂದು ನನ್ನ ಅಭಿಪ್ರಾಯ. ದೇವ! ಇದೂ ಅಲ್ಲದೆ, ಈ ಶುಭ ಮಹೋತ್ಸವಕ್ಕಾಗಿ ಬಂದ ಮುನಿಗಳು, ಅದರಂತೆ ಬಾಲಕರು-ಮುದುಕರು ಮುಂತಾಗಿ ಎಲ್ಲರೂ ಹಸಿದಿದ್ದಾರೆ. ಅವರೆಲ್ಲರಿಗೂ ಭೋಜನ ಮಾಡಿಸಿ ನಂತರ ಹೊರಡುವುದು ವಿಹಿತವೆಂದು ನನ್ನ ಮನೀಷೆ.

ಹೀಗೆ ಹೇಳಿದ ಬ್ರಹ್ಮದೇವನ ನುಡಿಯನಾಲಿಸಿ ಚಕ್ರಪಾಣಿಯಾದ ಶ್ರೀಹರಿಪರಮಾತ್ಮನು ಹೀಗೆ ಹೇಳಿದನು.

ಶ್ರೀನಿವಾಸ :- ಕುಮಾರ, ಬ್ರಹ್ಮದೇವ! ನಿನ್ನ ಮಾತುಗಳು ಬಹು ಬೆಲೆಬಾಳುವಂತಹುದಪ್ಪ! ಮಗನೇ, ನೀನದೆಂತು ಕಾರ್ಯಾಕಾರ್ಯವನ್ನರಿಯದವನಾಗಿದ್ದೀಯೆ? ದೇಶ-ಕಾಲ-ಪರಿಸ್ಥಿತಿಗಳನ್ನು ವಿವೇಚಿಸದೆ, ಏನೂ ತಿಳಿಯದವನಂತೆ ಮಾತನಾಡುತ್ತಿರುವೆಯಲ್ಲ! ಚತುರಾನನ, ನಾನು ಈ ಅರಣ್ಯಕ್ಕೆ ಬಂದು ಹತ್ತುಸಾವಿರ ವರ್ಷಗಳಾಗಿ ಹೋದವು. ನನ್ನಲ್ಲೀಗ ಏನೂ ಉಳಿದಿಲ್ಲ. ಈಗ ನಾನು ನಿರ್ಧನನಾಗಿರುವುದನ್ನು ಕಣ್ಣಿದ್ದೂ ಅದೆಂತು ಕಾಣದವನಾಗಿರುವೆ? ನನ್ನ ಕಡುಬಡತನವನ್ನು ತಿಳಿದೂ ಹೀಗೆ ಹೇಳಿದರೆ ಮಾಡುವುದೇನು?

ಹೇ ಜನಕಮಹಾರಾಜ! ಶ್ರೀಹರಿಯು ಇಂತೆನಲು ಪಿತಾಮಹ ಬ್ರಹ್ಮದೇವನು ಭಗವಂತನ ಮುಂದೆ ಮೌನವಹಿಸಿ ನಿಂತನು. ಆಗ ಶೂಲಪಾಣಿಯಾದ ರುದ್ರದೇವನು ತನ್ನ ಜನಕನ ತಂದೆಯಾದ ಶ್ರೀನಿವಾಸನನ್ನು ಉದ್ದೇಶಿಸಿ ಹೀಗೆ ಹೇಳಿದನು.

ರುದ್ರ :- ತಾತ, ಮಾಧವ! ಬಾಲಕನಾದ, ನನ್ನ ಮಾತನ್ನಿಷ್ಟು ಲಾಲಿಸು. ದೇವ, ಲಗ್ನ ಮಾಡುವಾಗ, ಮನೆಯನ್ನು ಕಟ್ಟಿಸುವಾಗ, ಯಾವನು ಪ್ರಾರಂಭಿಸಿದ ಕಾರ್ಯವನ್ನು ಕೊನೆಮುಟ್ಟಿಸುವನೋ, ಅಂಥವನನ್ನು ಮಾನವಜಗತ್ತಿನಲ್ಲಿ ಪುರುಷನೆಂದು ತಿಳಿಯಬೇಕು. ಪ್ರಭು! ಮಂಗಳಕಾರ್ಯಗಳಲ್ಲಿ ಬಹು ಹೆಚ್ಚು ದ್ರವ್ಯವನ್ನು ಖರ್ಚು ಮಾಡಿಯಾದರೂ ಸಕಲ ಸಾಮಗ್ರಿಗಳನ್ನು ಸಂಪಾದಿಸಬೇಕು. ಅದಕ್ಕೆ ಹಣವಿಲ್ಲದಿದ್ದರೆ ಸಾಲವನ್ನು ಮಾಡಬೇಕು !

ಶಂಬರಾರಿಯ ಪಿತನಾದ ಶ್ರೀನಿವಾಸನು ರುದ್ರದೇವನ ನುಡಿಯನ್ನು ಕೇಳಿ ಹೀಗೆ ಹೇಳಿದನು.

ಶ್ರೀಭಗವಾನ್ :- ರುದ್ರದೇವ! ಭಲೇ, ಸಭೆಯಲ್ಲಿ ಬಹುಪೌರುಷದಿಂದ ಮಾತನಾಡಿಬಿಟ್ಟೆಯಲ್ಲ! ಮಗು, ನನ್ನೀ ವಿವಾಹಕ್ಕೆ ಹೆಚ್ಚಾಗಿ ಬೇಕಾದ ಧನವನ್ನು ಸಾಲವಾಗಿ ಕೊಡುವವರು ಯಾರಿದ್ದಾರೆ? ಬರೀ ಪೌರುಷದ ಮಾತಿಗಿಂತಲೂ ಕಾರ್ಯವನ್ನು ಮಾಡಿ ತೋರಿಸಿ ಮಾತನಾಡಿದರೆ ಚೆನ್ನ. ಕೇವಲ ಮಾತಿನಿಂದೇನೂ ಪ್ರಯೋಜನವಿಲ್ಲ.

ಇಂತು ನುಡಿದು ಸಿರಿಯರಸನು ಕುಬೇರನತ್ತ ತಿರುಗಿ ''ಅಯ್ಯಾ ಧನಾಧಿಪತಿ! ನಿನ್ನೊಡನೆ ಮಾತನಾಡುವುದಿದೆ. ಸ್ವಲ್ಪ ಇತ್ತ ಬಾ'' ಎಂದು ಕರೆಯಲು ಕುಬೇರನು ಪಿತಾಮಹ ಬ್ರಹ್ಮನೊಡನೆ ಶ್ರೀಹರಿಯ ಸನಿಹಕ್ಕೆ ಬಂದನು. ಶ್ರೀನಿವಾಸನು ಅವರನ್ನು ಹಾಗೂ ಶೂಲಪಾಣಿ ಶಿವನನ್ನೂ ಕರೆದುಕೊಂಡು ಸ್ವಾಮಿಪುಷ್ಕರಣಿಯ ಪಶ್ಚಿಮ ದಿಕ್ಕಿನಲ್ಲಿರುವ ಅಶ್ವತ್ಥವೃಕ್ಷದ ಬಳಿಗೆ ಬಂದು ಹೀಗೆಂದನು.

ಶ್ರೀನಿವಾಸ :- ಮಹನೀಯನಾದ ಕುಬೇರ! ನನ್ನ ವಿವಾಹದ ವೆಚ್ಚಕ್ಕಾಗಿ ನನ್ನ ಪುತ್ರನಾದ ಬ್ರಹ್ಮದೇವನು ಅಪೇಕ್ಷಿಸುವಷ್ಟು ದ್ರವ್ಯವನ್ನು ಕೊಟ್ಟು ಈ ಕಲಿಯುಗದಲ್ಲಿ (ನೆರವೇರುವ) ನನ್ನ ವಿವಾಹ ಮಹೋತ್ಸವವು ಯಶಸ್ವಿಯಾಗುವಂತೆ ಮಾಡು.

ಕುಬೇರ :- ಜಗದೊಡೆಯ! ಚೇತನಾಚೇತನಾತ್ಮಕವಾದ ಈ ಸಮಸ್ತ ಜಗತ್ತೂ ನಿನ್ನ ಅಧೀನಕ್ಕೊಳಪಟ್ಟಿರುವುದು. ಸ್ವಾಮಿ! ಅನೇಕ ಜೀವರ ಸಮೂಹದಲ್ಲಿ ನಾನೆಷ್ಟರವನು? ನೀನು ಧನಸಂರಕ್ಷಣೆಗಾಗಿ ನನ್ನನ್ನು ನಿಯಮಿಸಿದ್ದೀಯೆ. ನಿನ್ನ ಧನವನ್ನು ನಾನು ಸಂರಕ್ಷಿಸುತ್ತಿದ್ದೇನೆ, ಅಷ್ಟೇ! ಹೇ ಗರುಡಧ್ವಜ! ಆ ಧನವನ್ನು ಕೊಡಲೂ, ಕೊಡದಿರಲೂ ನನಗೆ

ಅಧಿಕಾರವಾಗಲೀ, ಶಕ್ತಿಯಾಗಲೀ ಇಲ್ಲ. ಕೊಡುವವನೂ, ತೆಗೆದುಕೊಳ್ಳುವವನೂ ನೀನೇ ಆಗಿದ್ದೀಯೆ. ಆದುದರಿಂದ ಈ ವಿಚಾರದಲ್ಲಿ ನೀನೊಬ್ಬನೇ ಸ್ವತಂತ್ರನು.

ಧನಪತಿಯಾದ ಕುಬೇರನ ಮಾತನ್ನು ಕೇಳಿ ಶ್ರೀಪತಿಯು ಹೀಗೆ ಹೇಳಿದನು.

ಶ್ರೀನಿವಾಸ:- ಕುಬೇರ! ಬ್ರಹ್ಮದೇವನ ಒಂದು ದಿನದಲ್ಲಿನಾನು ಹತ್ತು ಅವತಾರಗಳನ್ನೆತ್ತುವೆನು. ನಾನು ಅವತರಿಸುವಾಗ ವೈಕುಂಠಮಂದಿರದಿಂದ ಧನವನ್ನು ಭುವಿಗೆ ತರುವುದಿಲ್ಲ. ಎಲೈ ಯಕ್ಷರಿಗೆ ರಾಜನಾದ ಕುಬೇರ! ನಾನು ಅವತಾರ ಕಾರ್ಯ ಮುಗಿಸಿ ಮತ್ತೆ ನಿಜಮಂದಿರಕ್ಕೆ ತೆರಳುವಾಗ ಭೂಮಿಯಲ್ಲಿರುವ ಧನವನ್ನು ಸಹ ವೈಕುಂಠಕ್ಕೆ ಕೊಂಡೊಯ್ಯುವುದಿಲ್ಲ! ನಾನು ಯುಗಾನುಸಾರವಾಗಿ, ಆಯಾ ಕಾಲಕ್ಕೆ ತಕ್ಕಂತೆ, ಆಯಾ ದೇಶಗಳಿಗನುಗುಣವಾಗಿ, ವಯಸ್ಸನ್ನು ಅನುಸರಿಸಿ ಭೂಮಿಯಲ್ಲಿ ಆವಿರ್ಭವಿಸಿ (ಅವತರಿಸಿ), ಈ ಧರೆಯಲ್ಲಿ ಲಕ್ಷ್ಮೀದೇವಿಯೊಡನೆ ಕ್ರೀಡಿಸುತ್ತೇನೆ. ದೇಶಕಾಲಾನುಗುಣವಾಗಿ, ಈ ಯುಗಕ್ಕೆ ತಕ್ಕಂತೆ ವರ್ತಿಸುವ ನನಗೆ ನೀನು ನಿಮಿತ್ತಮಾತ್ರನಾಗಿ ಹಣವನ್ನು ಕೊಡು.

ಕುಬೇರ:- ಚಕ್ರಧಾರಿಯಾದ ಶ್ರೀಹರಿಯೇ! ಯುಗವನ್ನು ಅನುಸರಿಸಿ ವರ್ತಿಸುವ ನಿನಗೆ ಈಗ ಹೇಗೆ ಧನಪ್ರದಾನ ಮಾಡಲಿ? ಸಿರಿರಮಣ! ದುಡ್ಡಿಲ್ಲದವನು ಪ್ರಪಂಚದಲ್ಲಿ ಧನವಂತನನ್ನು ಹೇಗೆ ಧನವನ್ನು ಅಪೇಕ್ಷಿಸಿ ಕೇಳುವನೋ, ಅದರಂತೆಯೇ ದೇವ! ನೀನು ಸಾಲಪತ್ರವನ್ನು ಬರೆದುಕೊಟ್ಟಲ್ಲಿ, ನಿನಗೆ ಧನವನ್ನು ನೀಡುತ್ತೇನೆ.

ಎಲೈ ಜನಕಮಹಾರಾಜ! ಮಾನವ ಶರೀರವನ್ನು ಧರಿಸಿರುವ, ಭಗವಾನ್ ಶ್ರೀಹರಿಯು ಕುಬೇರನ ಮಾತನ್ನು ಕೇಳಿ, ಬ್ರಹ್ಮನನ್ನು ಉದ್ದೇಶಿಸಿ ''ಕುಮಾರ! ಸಾಲ ಪಡೆಯಲು ಹೇಗೆ ಸಾಲಪತ್ರವನ್ನು ಬರೆದುಕೊಡಬೇಕೆಂಬುದನ್ನು ನನಗೀಗ ತಿಳಿಸು'' ಎನಲು ಬ್ರಹ್ಮದೇವನು ಹೇಳಲಾರಂಭಿಸಿದನು.

ಬ್ರಹ್ಮ :- ಸಾಲತೆಗೆದುಕೊಳ್ಳುವವನು ಶ್ರೀನಿವಾಸನು, ಹಣವನ್ನು ಕೊಡುವವನು ಧನಾಧಿಪತಿಯಾದ ಕುಬೇರನು. ಸ್ವಂತ ಕಾರ್ಯನಿಮಿತ್ತವಾಗಿ ಅಂದರೆ, ಈ ಕಲಿಯುಗದಲ್ಲಿ ವಿವಾಹ ನಿಮಿತ್ತವಾಗಿ, ವಿಲಂಬಿ ಸಂವತ್ಸರದ ವೈಶಾಖ ಶುಕ್ಲ ಸಪ್ತಮಿ ದಿವಸದಂದು ಹದಿನಾಲ್ಕು ಲಕ್ಷ ಸಂಖ್ಯಾಕವಾದ ಸುವರ್ಣ ರಾಮಟಂಕಿವರಾಹರೂಪ ಧನವನ್ನು, ಅದಕ್ಕೆ ಅಭಿವೃದ್ಧಿ ದ್ರವ್ಯವನ್ನು (ಬಡ್ಡಿಯನ್ನು), ಸ್ವೀಕರಿಸುವ ಉದ್ದೇಶದಿಂದ ಕುಬೇರನಿಂದ ಸಾಲವಾಗಿ ಕೊಡಲ್ಪಟ್ಟಿತು. ಶ್ರೀನಿವಾಸನು ಸಾಲವನ್ನು ಪಡೆದನು. ಮದುವೆಯ ವರ್ಷದಿಂದ ಆರಂಭಿಸಿ ಒಂದು ಸಾವಿರ ವರ್ಷಗಳ ತರುವಾಯ ಶ್ರೀನಿವಾಸನು ಯಕ್ಷೇಶ್ವರನಾದ ಕುಬೇರನಿಗೆ ಅಸಲು (ಮೂಲ) ಧನವನ್ನು ವಾಪಸು ಕೊಡತಕ್ಕದ್ದು. ಈ ವ್ಯವಹಾರಕ್ಕೆ ನಾಲ್ಮೊಗನಾದ ಬ್ರಹ್ಮದೇವನು ಮೊದಲನೆಯ ಸಾಕ್ಷಿ, ಎರಡನೆಯ ಸಾಕ್ಷಿಯು ತ್ರಿಲೋಚನನಾದ ರುದ್ರದೇವನು. ಇವೆಲ್ಲವನ್ನೂ ಚೆನ್ನಾಗಿ ತಿಳಿದಿರುವ ಅಶ್ವತ್ಥ ವೃಕ್ಷರಾಜನು ಮೂರನೆಯ ಸಾಕ್ಷಿಯು. ಇದರಲ್ಲಿ ಯಾವ ಸಂದೇಹಕ್ಕೂ ಅವಕಾಶವಿಲ್ಲ.

ಹೀಗೆ ಬ್ರಹ್ಮದೇವನು ಹೇಳಿದ ಋಣಪತ್ರದ ಅಭಿಪ್ರಾಯವನ್ನು ತಿಳಿದು ಲಕ್ಷ್ಮೀಕಾಂತನು ಸಾಲಪತ್ರವನ್ನು ಸ್ವಹಸ್ತದಿಂದ ಬರೆದು ಕುಬೇರನಿಗೆ ಕೊಟ್ಟು ''ಕುಬೇರ, ಸಾಲಪತ್ರದಲ್ಲಿ ನಮೂದಿಸಿರುವಷ್ಟು ಧನವನ್ನು ಕೊಡು'' ಎಂದು ಹೇಳಿದನು. ಆಗ ಧನೇಶನಾದ ಕುಬೇರನು ವಾಸುದೇವನ ವಚನದಂತೆ ಸಾಲಪತ್ರದಲ್ಲಿ ಕಂಡ ದ್ರವ್ಯವನ್ನು ಅಂದರೆ ಹದಿನಾಲ್ಕು ಲಕ್ಷ ರಾಮಟಂಕಿವರಹಗಳನ್ನು ಶ್ರೀನಿವಾಸನಿಗೆ ಪ್ರದಾನಮಾಡಿದನು. ಹೇ ಜನಕಮಹಾರಾಜ! ಕುಬೇರನು ಕೊಟ್ಟ ಆ ಧನರಾಶಿಯನ್ನು ನೋಡಿ, ಭಗವಾನ್ ಶ್ರೀನಿವಾಸನು. ಆ ಧನವನ್ನು ಪುನಃ ಕುಬೇರನ ಕೈಗೇ ಕೊಟ್ಟು ವಿವಾಹಕ್ಕೆ ಅವಶ್ಯಕವಾದ ಸಾಮಗ್ರಿ-ಪದಾರ್ಥಗಳನ್ನು ತರುವಂತೆ ಇಂತು ಆಜ್ಞಾಪಿಸಿದನು.

ಶ್ರೀಭಗವಾನ್:- ಕುಬೇರ, ಪ್ರಸ್ಥಮೂಲವಾದ ಅಂದರೆ, ಸಮಾರಂಭಕ್ಕೆ ಮುಖ್ಯವಾದ ಅಕ್ಕಿಯನ್ನು ತರಿಸು. ಉದ್ದು, ಹೆಸರು, ತೊಗರಿಗಳನ್ನೂ, ಬೆಲ್ಲ, ಎಣ್ಣೆ, ಜೇನುತುಪ್ಪ, ಹಾಲು, ಸಕ್ಕರೆ, ತುಪ್ಪ, ಮೊಸರು ಮುಂತಾದವುಗಳನ್ನು

ತರಿಸು. ಯೋಗ್ಯ ಬೆಲೆಬಾಳುವ ಉಡುವ ಪಂಚೆಗಳು, ಹೊದೆಯುವ ಪಂಚೆಗಳನ್ನು ತರಿಸು. ಎಳ್ಳು, ಇಂಗು, ಮೆಣಸು, ಮುಂತಾದವು, ಜೀರಿಗೆ, ಸಾಸುವೆ, ಮೆಂತ್ಯಗಳನ್ನೂ ತರಿಸು. ಬ್ರಾಹ್ಮಣ ಸ್ತ್ರೀಯರಿಗೆ ಅರಿಶಿಣದಿಂದ ತೋಯಿಸಿದ ಸೀರೆಗಳನ್ನು ಸಿದ್ಧಪಡಿಸಬೇಕು. ಕಂಬಳಿಗಳನ್ನು (ಶಾಲುಗಳನ್ನೂ) ಖರೀದಿಸು. ದೇವತೆಗಳಿಗೆ ಶ್ರೇಷ್ಠವಾದ ಉತ್ತರೀಯ (ಹೊದೆಯುವ ವಸ್ತ್ರ)ಗಳನ್ನೂ, ದೇವಸ್ತ್ರೀಯರಿಗೆ ರೇಶ್ಮೆಯಸೀರೆಗಳು, ಕಣಗಳನ್ನೂ, ಸಿದ್ಧಪಡಿಸು. ದಿವ್ಯವಾದ ಅಡಿಕೆ, ವಿಳ್ಳೇದೆಲೆಗಳನ್ನು, ಏಲಕ್ಕಿ, ಲವಂಗ, ಪಚ್ಚಕರ್ಪೂರ, ಕಸ್ತೂರಿ, ಪುನಗಿನ ಚೆಟ್ಟು(ರಸ) ಇವುಗಳನ್ನೂ ; ವಧು (ಕನ್ಯೆಗಾಗಿ)ವಿಗಾಗಿ ಮಂಗಳಸೂತ್ರ, ಕಿರುಬೆರಳಿಗಿಡುವ ಉಂಗುರ, ನನಗಾಗಿ ಕೈ ಬೆರಳಿಗೆ ಉಂಗುರಗಳನ್ನು ಜಾಗ್ರತೆಯಾಗಿ ನಿರ್ಮಾಣಮಾಡಿಸು.

ಹೀಗೆ ಶ್ರೀನಿವಾಸನು ಹೇಳಲು ಕುಬೇರನು ಕ್ಷಣಮಾತ್ರದಲ್ಲಿ ಸಮಸ್ತವನ್ನೂ ಸಿದ್ಧಪಡಿಸಿ ಭಗವಂತನ ಬಳಿಗೆ ಬಂದು ''ಶ್ರೀಪರಮಾತ್ಮ! ನಿನ್ನ ಅನುಗ್ರಹದಿಂದ ನಿನ್ನ ಅಣತಿಯಂತೆ ಎಲ್ಲವನ್ನೂ ಸಿದ್ಧಪಡಿಸಿದ್ದೇನೆ. ಹೇ ಕಮಲನಯನ! ಇನ್ನು ಮುಂದೆ ಅಡಿಗೆ ಮಾಡಲು ಅಗ್ನಿದೇವನನ್ನು ನಿಯೋಜಿಸಬಹುದು'' ಎಂದು ವಿನಂತಿಸಿದನು. ಸಜ್ಜನಪಾಲಕನಾದ ಶ್ರೀನಿವಾಸನು ಅಗ್ನಿಯನ್ನು ಕರೆತರಲು ಷಣ್ಮುಖನನ್ನು ಕಳುಹಿಸಿದನು. ಷಣ್ಮುಖನು ತ್ವರೆಯಾಗಿ ತೆರಳಿ ಶ್ರೀನಿವಾಸನ ಆಣತಿಯನ್ನು ಅಗ್ನಿದೇವನಿಗರುಹಿದನು. ಜಾತವೇದಸನು ಶ್ರೀಹರಿಯ ಬಳಿಗೈ ತಂದು ನಮಿಸಿ ನಿಂತನು. ಆಗ ಶ್ರೀನಿವಾಸನು ''ಅಗ್ನಿದೇವ! ಜಾಗ್ರತೆಯಾಗಿ ಕ್ಷಣಮಾತ್ರದಲ್ಲಿ ನೀನು ಸ್ವಾಹಾದೇವಿಯಿಂದೊಡಗೂಡಿ ಭಕ್ಷ್ಯಗಳು, ವಿವಿಧ ಅನ್ನಗಳು, ಪಲ್ಯಗಳು - ಇವೆಲ್ಲವನ್ನೂ ಸಿದ್ಧಪಡಿಸು'' ಎಂದು ಆಜ್ಞಾಪಿಸಿದನು. ವೈಶ್ವಾನರನು ''ಶ್ರೀನಿವಾಸ! ಬಹು ಜನರಿಗೆ ಅಡಿಗೆ ಮಾಡಬೇಕಾಗಿದೆ. ಭಕ್ತವತ್ಸಲ! ಅಡಿಗೆ ಮಾಡಲು ನನ್ನ ಬಳಿ ಒಂದಾದರೂ ಸಣ್ಣ-ದೊಡ್ಡ ಪಾತ್ರೆ, ಭಾಂಡೆಗಳಿಲ್ಲ, ಹೇಗೆ ಮಾಡುವುದು ಸ್ವಾಮಿ'' ಎಂದು ವಿಜ್ಞಾಪಿಸಿದನು.

ಶ್ರೀನಿವಾಸ :- ಅಯ್ಯಾ ವೈಶ್ವಾನರ ; ನಿಮ್ಮ ಮನೆಗಳಲ್ಲಿ ಯಾವುದಾದರೊಂದು ಸಣ್ಣ ಸಮಾರಂಭವಾದರೂ ಪಾತ್ರೆಗಳು ಆಲದ ಬೀಜಗಳಂತೆ ಅಭಿವೃದ್ಧಿಸುವುವು! ಆದರೆ, ನನ್ನ ಮದುವೆಯ ಕಾಲದಲ್ಲಿ ಮಾತ್ರ ಒಂದು ಪಾತ್ರೆಯೂ ಕಾಣುವುದಿಲ್ಲ! ಅಲ್ಲವೆ? ಹೂಂ, ಎಲ್ಲ ಅನುಕೂಲಗಳಿಗೂ ದೈವಸಹಾಯವೇ ದೊಡ್ಡದೆಂದು ಭಾವಿಸುವೆನು. ಹೇ ಸಪ್ತಾಸ್ಯ (ಏಳು ನಾಲಗೆಗಳುಳ್ಳ ಅಗ್ನಿಯೇ)! ಅಡಿಗೆಗೆ ಅವಶ್ಯವಾದ ಪಾತ್ರೆಗಳು ಮತ್ತು ಅದಕ್ಕೆ ಉಪಾಯವನ್ನು ಹೇಳುತ್ತೇನೆ ಕೇಳು. ಸ್ವಾಮಿಪುಷ್ಕರಿಣಿಯ ಮಧ್ಯದಲ್ಲಿ ಅನ್ನವನ್ನು ಮಾಡು! ಪಾಪನಾಶಿನಿಯಲ್ಲಿ ತೊವ್ವೆಯನ್ನೂ, ಆಕಾಶಗಂಗಾ ಸರಸ್ಸಿನಲ್ಲಿ ವಿಶೇಷಾಕಾರವಾಗಿ ಬೆಲ್ಲದ ಪರಮಾನ್ನವನ್ನೂ, ದೇವತೀರ್ಥದಲ್ಲಿ ಪಲ್ಯವನ್ನೂ, ಅದರಂತೆ ತುಂಬುರು ತೀರ್ಥದಲ್ಲಿ ತುಪ್ಪವನ್ನು ಕಾಯಿಸು, ಕುಮಾರಧಾರಾತೀರ್ಥದಲ್ಲಿ ಬಗಬಗೆಯ ಭಕ್ಷ್ಯಗಳನ್ನೂ, ಮತ್ತು ಪಾಂಡುತೀರ್ಥದಲ್ಲಿ ಉತ್ತಮವಾದ ಹುಣಸೇಹಣ್ಣಿನ ಗೊಜ್ಜು, ಸಾರು, ಇವುಗಳನ್ನು ಮಾಡು. ಇನ್ನು ಬೇರೆ ಬೇರೆ ತೀರ್ಥಗಳಲ್ಲಿ ಗೆಡ್ಡೆ-ಗೆಣಸು-ಫಲಗಳಿಂದ ಸಹಿತವಾದ ವ್ಯಂಜನ ಪದಾರ್ಥಗಳನ್ನೂ, ಇತರ ತೀರ್ಥಗಳಲ್ಲಿ ಲೇಹ್ಯ, ಪೇಯ ಅಂದರೆ ಬಾಡಿಸಿಕೊಳ್ಳುವ, ಕುಡಿಯುವ ಪದಾರ್ಥಗಳನ್ನು ಸಿದ್ಧಪಡಿಸು! ಶ್ರೀಕೃಷ್ಣನ ಮಾತನಾಲಿಸಿ ಮಹಾ ಋಷಿಗಳು ಅವನನ್ನು ಶ್ಲಾಘಿಸಿದರು. ವೇದಶಾಸ್ತ್ರ ವಿಶಾರದನೂ, ಪಾಕಶಾಸ್ತ್ರಕೋವಿದನೂ ಆದ ಅಗ್ನಿದೇವನು ಪರಮಾತ್ಮನ ಅಪ್ಪಣೆಯಂತೆಯೇ ಸಮಸ್ತ ಅಡಿಗೆಯನ್ನು ಸಿದ್ಧಪಡಿಸಿದನು. ಆಗ ಯುಗಗಳಿಗನುಗುಣವಾಗಿ ವರ್ತಿಸುವ ವೈಕುಂಠಪತಿಯಾದ ಶ್ರೀವಿಷ್ಣುವಿನ ಕೃತಿಗಳೆಲ್ಲವೂ ಇಂತು ಆಶ್ಚರ್ಯಜನಕದ್ದಾಗಿವೆ! ಅದೊಂದು ಅದ್ಭುತ ವಿಡಂಬನವು. ಈ ಬಗೆಯ ದೇವತಾಕಾರ್ಯಗಳು ಮಾನವರಿಂದ ಯೋಚಿಸಲೂ ಸಾಧ್ಯವಾಗದಂತಹವು! ಬಾಯಿಂದ ಹೇಳಲೂ, ಮನಸ್ಸಿನಿಂದ ಅರಿಯಲೂ ಆಗದಂತಹವು!! ಶ್ರೀನಿವಾಸನ ಆಜ್ಞೆಯಂತೆ ಅಡುಗೆಯನ್ನು ಸಿದ್ಧಪಡಿಸಿದ ಅಗ್ನಿದೇವನು ಶ್ರೀಹರಿಪರಮಾತ್ಮನಲ್ಲಿ ಇಂತು ಬಿನ್ನವಿಸಿದನು -

ಅಗ್ನಿ:- ಪ್ರಭು! ಪಾಕವು ಸಿದ್ಧವಾಗಿದೆ. ಮೊಸರನ್ನ-ಚಿತ್ರಾನ್ನಗಳು, ಜೇನುತುಪ್ಪದ ರಸೋಪೇತ ಪರಮಾನ್ನ, ಅಂಬೊಡೆಗಳು, ಅತಿರಸ-ಕಜ್ಜಾಯಗಳು, ಎರಡು ಬಗೆಯ ಪಲ್ಯಗಳು, ಕುಂಬಳಕಾಯಿಯ ಹೋಳಿನಿಂದ ಕೂಡಿದ-

ಹುಣಸೇರಸಭರಿತವಾದ ಹುಳಿ, ತೊವ್ವೆ, ಗೆಡ್ಡೆ-ಗೆಣಸು, ಹಾಲು-ಹಣ್ಣುಗಳ ಪದಾರ್ಥಗಳೂ, ಭಕ್ಷ್ಯಕಾರರು ತಯಾರಿಸಿದ ವಿವಿಧ ಭಕ್ಷ್ಯಗಳೂ ಸಹ ಪರಿಪಕ್ವವಾಗಿ ಸಿದ್ಧವಾಗಿವೆ. ಹೇ ಕೇಶವ! ಇವೆಲ್ಲವೂ ನಿನ್ನ ಪ್ರಸಾದದಿಂದ ಸಿದ್ಧವಾಗಿವೆ, ಸ್ವಾಮಿ, ಭೋಜನಕ್ಕೆ ಬ್ರಾಹ್ಮಣೋತ್ತಮರನ್ನೂ, ದೇವತೆಗಳನ್ನೂ ಮತ್ತು ಮುನಿವರ್ಯರನ್ನೂ ಆಹ್ವಾನಿಸಬಹುದು.

ಎಲೈ ಜನಕರಾಯ! ಅಗ್ನಿದೇವನ ಮಾತನ್ನು ಕೇಳಿ, ನಿರಾಮಯನಾದ ಶ್ರೀನಿವಾಸನು ರುದ್ರನಂದನನಾದ ಕುಮಾರಸ್ವಾಮಿಯನ್ನು ಸರ್ವರನ್ನೂ ಭೋಜನಕ್ಕೆ ಆಹ್ವಾನಿಸಲು ಕಳುಹಿಸಿದನು. ಷಣ್ಮುಖನು ಅತಿವೇಗವಾಗಿ ಹೋಗಿ, ಜಪ-ತಪಾನುಷ್ಠಾನಗಳಲ್ಲಿ ಔಪಾಸನ-ಯಜ್ಞಾದಿಗಳಲ್ಲಿ ನಿರತರಾದ ವೇದವಿದ್ಯಾವಿಶಾರದರಾದ ಭೂಸುರರ ಬಳಿಸಾರಿ - ''ಎಲೈ ದೇವತೆಗಳೇ, ದ್ವಿಜವರ್ಯರೇ! ಅಡುಗೆಯು ಸಿದ್ಧವಾಗಿದೆ. ಎಲ್ಲರೂ ಭೋಜನಕ್ಕೆ ದಯಮಾಡಿಸಿರಿ'' ಎಂದು ಆಹ್ವಾನಿಸಿದನು. ಅನಂತರ ಷಣ್ಮುಖನು ಕಶ್ಯಪ-ಅತ್ರಿ ಮೊದಲಾದ ಮುನಿಗಳು ಹಾಗೂ ಅಮರನಿಕರರನ್ನೂ ಸಹ ಅಡುಗೆ ಮನೆಯ ಸಮೀಪಕ್ಕೆ ಕಳುಹಿಸಿಕೊಟ್ಟನು.

ಅಲ್ಲಿ ಪದ್ಧತಿಯಂತೆ ಬೇರೆ ಬೇರೆ ಸ್ಥಾನಮಾನಗಳುಳ್ಳವರನ್ನು ಪ್ರತ್ಯೇಕ-ಪ್ರತ್ಯೇಕವಾಗಿ ವಿಂಗಡಿಸಿ, ನಂತರ ತಾರತಮ್ಯಾನುಸಾರವಾಗಿ, ಪಂಕ್ತಿಗಳನ್ನೇರ್ಪಡಿಸಿ, ಪಾತ್ರಾಪಾತ್ರ ವಿಚಕ್ಷಣನಾದ ರುದ್ರದೇವನು ಎಲೆಗಳನ್ನು ಹಾಕಿಸಿದನು. ಶ್ರೀನಿವಾಸನ ಆ ಕಲ್ಯಾಣ ಮಹೋತ್ಸವದಲ್ಲಿ ಪಾಂಡುತೀರ್ಥದಿಂದಾರಂಭಿಸಿ, ಶ್ರೀಶೈಲದವರೆಗೆ ಬ್ರಾಹ್ಮಣರು, ದೇವತೆಗಳೆಲ್ಲರೂ ಗುಂಪುಗುಂಪಾಗಿ ತಮ್ಮ ತಮ್ಮ ಎಲೆಗಳ ಬಳಿಯಲ್ಲಿ ಬೇರೆ ಬೇರೆಯಾಗಿ ಕುಳಿತಿದ್ದರು. ಜನಕಮಹಾರಾಜ! ಆಗ ಪೂಜ್ಯನಾದ ಶ್ರೀನಿವಾಸನು ''ಕುಮಾರ! ಬ್ರಹ್ಮದೇವ! ಭಗವಂತನಿಗೆ ಸಮರ್ಪಿಸದೇ ಭೂಸುರರಿಗೆ ಭೋಜನ ಬಡಿಸಬಾರದು. ಆದುದರಿಂದ ಪರಮಾತ್ಮನಿಗೆ ನಿವೇದನ ಮಾಡು'' ಎಂದು ಚತುರಾನನನಿಗೆ ಹೇಳಿದನು. ಆಗ ಬ್ರಹ್ಮದೇವನು ತಂದೆಯನ್ನು ಕುರಿತು ಹೀಗೆ ಹೇಳಿದನು.

ಬ್ರಹ್ಮ :- ಹೇ ಗೋವಿಂದ! ನೀನೇ ಸಕಲಲೋಕಾಧಿಪತಿಗಳಾದ ಎಲ್ಲರಿಗೂ ಪ್ರಭುವೆಂದೂ, ಸರ್ವಜ್ಞನೆಂದೂ, ಸರ್ವವನ್ನೂ ಭುಜಿಸುವವನೆಂದೂ ನಾನು ತಿಳಿದಿದ್ದೇನೆ. ನಿನಗೆ ಸಮಾನರಾಗಲಿ ಅಥವಾ ಅಧಿಕರಾದವರಾಗಲೀ - ಬೇರೊಬ್ಬರಿಲ್ಲ! ಹೇ ಕಮಲಾಕಾಂತ! ಆದುದರಿಂದ ನಾನಾರಿಗೆ ನೈವೇದ್ಯ ಮಾಡಬೇಕು? ಆಜ್ಞಾಪಿಸು.

ಮಗನ ನುಡಿಯನಾಲಿಸಿ ಶ್ರೀಹರಿಯು ಮಂದಹಾಸವನ್ನು ಬೀರಿ ''ಅಹೋಬಿಲದ ಶ್ರೀನೃಸಿಂಹದೇವರನ್ನು ಪೂಜಿಸಿ ನೈವೇದ್ಯ ಸಮರ್ಪಣೆ ಮಾಡು'' ಎಂದು ಆಜ್ಞಾಪಿಸಿದನು. ಶ್ರೀವಾಸುದೇವನ ಅಪ್ಪಣೆಯಂತೆ ಪಿತಾಮಹನು ಸಕಲರಿಗೂ, ಮುಖ್ಯವಾಗಿ ಋಷಿ-ಮುನಿಗಳಿಗೂ ಸಮ್ಮತವಾದ ಶ್ರೀನೃಸಿಂಹದೇವನನ್ನು ಅರ್ಚಿಸಿ ನೈವೇದ್ಯ ಸಮರ್ಪಣೆ ಮಾಡಿದನು. ಆ ತರುವಾಯ ದೇವತೆಗಳ ಪೂಜೆ, ವೈಶ್ವದೇವಾದಿಗಳನ್ನು ನೆರವೇರಿಸಿ, ವಿಧ್ಯುಕ್ತಪ್ರಕಾರವಾಗಿ ಸಕಲವಿಪ್ರರಿಗೂ ಸಹ ಅರ್ಘ್ಯ, ಪಾದ್ಯ, ಗಂಧಾಕ್ಷತೆಗಳಿಂದಲೂ, ಧೂಪದೀಪಾದಿಗಳಿಂದಲೂ, ಪರಿಮಳ ದ್ರವ್ಯಗಳಿಂದಲೂ ಪೂಜೆಯನ್ನು ಅರ್ಪಿಸಿದನು. ಅನಂತರ ಚತುರಾನನ ಬ್ರಹ್ಮದೇವನು ನಾಮ (ಹೆಸರು) ಅದಕ್ಕೆ ಸಂಬಂಧಿಸಿದ ಮಂತ್ರೋಚ್ಚಾರಣಪೂರ್ವಕವಾಗಿ ನವಗ್ರಹಗಳನ್ನು ಆರಾಧಿಸಿದನು. ಇಷ್ಟಾದ ಮೇಲೆ ಭಗವಾನ್ ಶ್ರೀನಿವಾಸನು ಮಾನವ ಶರೀರಿಯಂತೆ ಆನಂದಪೂರ್ಣನಾಗಿ ಎಲ್ಲರಿಗೂ ನಮಸ್ಕರಿಸಿದನು. ಆ ತರುವಾಯ ವಿಖ್ಯಾತರಾದ ಅಷ್ಟದಿಕ್ಪಾಲಕರುಗಳು ಪಾತ್ರಾಭಿಗಾರಪೂರ್ವಕವಾಗಿ ಪರಿಶೇಚನ ಮಾಡಿದರು. ಅವರು ಉಪ್ಪಿನಿಂದಾರಂಭಿಸಿ ತುಪ್ಪದವರೆಗೆ ಶಿಸ್ತಿನಿಂದ ಬ್ರಾಹ್ಮಣರ ಎಲೆಗಳಿಗೆ ಬಡಿಸುವ ಕಾರ್ಯವನ್ನು ನೆರವೇರಿಸಿದರು. ಪರಿಶೇಚನ ಕಾರ್ಯವು ನೆರವೇರಿದ್ದನ್ನು ಅಗ್ನಿದೇವನಿಂದ ತಿಳಿದ ಶ್ರೀಹರಿಯು ''ಒಬ್ಬನೇ ಒಬ್ಬನಾದ ಸರ್ವಸ್ವತಂತ್ರ ಪ್ರಭುವಾದ ಶ್ರೀಮನ್ನಾರಾಯಣನು ಸಮಸ್ತಪ್ರಾಣಿಸಮೂಹವೇ ಅಂಗಗಳಾಗಿರುವ ವಿರಾಡ್ರೂಪನಾಗಿದ್ದಾನೆ. ಆ ವಿರಾಡ್ರೂಪದಲ್ಲಿ ಬೇರೆಯಾಗಿ, ಪ್ರಾಣಿಗಳು ಅನೇಕ ಸಂಖ್ಯಾಕವಾಗಿವೆ. ಸಮಸ್ತ ಪ್ರಪಂಚವನ್ನೂ ಪ್ರಳಯಕಾಲದಲ್ಲಿ

ತಿನ್ನುತ್ತಿರುವವನಾದ ರಕ್ಷಿಸುವ (ವಿಶ್ವಭುಕ್) ನಾಶರಹಿತನಾದ ನಾರಾಯಣನು ಮೂರುಲೋಕಗಳನ್ನೂ ವ್ಯಾಪಿಸಿಕೊಂಡು (ಆವರಿಸಿಕೊಂಡು) ಸಕಲಭೂತಗಳ (ಅಂದರೆ ಪ್ರಾಣಿಗಳ) ಅಂತರ್ಯಾಮಿಯಾಗಿದ್ದುಕೊಂಡು ಭುಜಿಸುತ್ತಾನೆ'' ಹೀಗೆ ಸರ್ವತ್ರ ವ್ಯಾಪ್ತನಾದುದರಿಂದ ಶ್ರೀವಿಷ್ಣುಶಬ್ದವಾಚ್ಯನಾದ ಅಹೋಬಿಲಕ್ಷೇತ್ರದ ಶ್ರೀನರಸಿಂಹದೇವರಿಗೆ ಅಂದರೆ ಶ್ರೀಕೃಷ್ಣನಿಗೆ ಸರ್ವ ಸಮರ್ಪಣೆ ಮಾಡಿದನು. ಆ ಬಳಿಕ ಶ್ರೀಹರಿಯು ಕಶ್ಯಪಾದಿ ಋಷಿಗಳನ್ನು ಕುರಿತು 'ಭೋಜನಮಾಡಿರಿ' ಎಂದು ವಿಜ್ಞಾಪಿಸಿದನು.

''ಮಹಾನುಭಾವರೇ! ಜ್ಞಾನಪೂರ್ಣರಾದ ನಿಮಗೆ ನನ್ನ ಈ ಅನ್ನದಿಂದ ಪೂರ್ಣತೆಯೇನುಂಟಾದೀತು? ತಪೋಧನರೂ, ಕರುಣಾಶಾಲಿಗಳೂ, ಅತಿಪ್ರಾಜ್ಞರೂ ಆದ ಹೇ ಋಷಿವರ್ಯರೇ! ನಾನು ದರಿದ್ರನೆಂದು ಭಾವಿಸಿ, ನಾನು ನೀಡಿದ ನೀರು ಮತ್ತು ಸ್ವಲ್ಪ ಅನ್ನವನ್ನೇ (ಭೋಜನವನ್ನೇ) ಮಹತ್ತಾಗಿ ತಿಳಿದು (ಬಹಳವೆಂದು ತಿಳಿದು) ಸ್ವೀಕರಿಸಿರಿ!'' ಎಂದು ಪ್ರಾಕೃತ ಶರೀರಿಯಾದ ಮನುಜನಂತೆ ಭೂಸುರರನ್ನು ಶ್ರೀನಿವಾಸನು ಪ್ರಾರ್ಥಿಸಿದನು. ವಾಸುದೇವನ ವಚನವನ್ನಾಲಿಸಿ ಮಹೀಸುರರು ''ಪರಮಾತ್ಮ! ನೀನು ಅನುಗ್ರಹಿಸಿದ ಈ ಅನ್ನವು ಅಮೃತಸಮಾನವು; ಮೋಕ್ಷಮಾರ್ಗಕ್ಕೆ ಸಾಧನವು! ಪಾಪದಿಂದ ಆಕುಲಿತವಾದ ಕಲಿಯುಗದಲ್ಲಿ ನಾವೆಲ್ಲರೂ ಧನ್ಯರೂ, ಕೃತಾರ್ಥರೂ ಆಗಿದ್ದೇವೆ'' ಎಂದು ಮುಂತಾಗಿ ಋಷಿಮುನಿಗಳು ಶ್ರೀನಿವಾಸನನ್ನು ಅಭಿನಂದಿಸಿ, ಪರಮಸಂತುಷ್ಟರಾಗಿ ಭೋಜನಮಾಡಿದರು. ಭಗವಾನ್ ಶ್ರೀನಿವಾಸನು ಬ್ರಾಹ್ಮಣರ ಭೋಜನವಾದ ಮೇಲೆ ಯಥಾಯೋಗ್ಯವಾಗಿ ಭೂಸುರರಿಗೆ ತಾಂಬೂಲದಕ್ಷಿಣಾ ಪ್ರದಾನ ಮಾಡಿದನು. ಅಂದರೆ ಬ್ರಾಹ್ಮಣೋತ್ತಮರಿಗೆ ಬಂದು ನಾಣ್ಯ, ಬ್ರಹ್ಮವಾದಿಗಳಿಗೆ ಅರ್ಧನಾಣ್ಯ, ಬ್ರಹ್ಮಚಾರಿಗಳಿಗೆ ನಾಲ್ಕನೇ ಒಂದು ಭಾಗದ ನಾಣ್ಯಗಳನ್ನು, ದಕ್ಷಿಣೆಯಾಗಿ ದಯಪಾಲಿಸಿದನು. ಆನಂತರ ಶ್ರೀಹರಿಯು ಪುತ್ರನಾದ ವಿರಿಂಚ, ಮೊಮ್ಮಗನಾದ ರುದ್ರದೇವ, ಪತ್ನಿಯಾದ ರಮಾದೇವಿ, ಬಂಧುಗಳು, ಅಗ್ನಿ, ಲೋಕಪಾಲಕರು, ಶೇಷ-ಗರುಡ, ಇವರೊಡನೊಡಗೂಡಿ ತಾನೂ ಸಹ ಭೋಜನಮಾಡಿದನು. ಎಲ್ಲರ ಭೋಜನವಾಗುವ ವೇಳೆಗೆ ರವಿಯು ಅಸ್ತಾದ್ರಿಯನ್ನು ಸೇರಿದನು (ರಾತ್ರಿಯಾಯಿತು). ಶ್ರೀಕೃಷ್ಣನು ಮಹಾಲಕ್ಷ್ಮಿಯೊಡನೆ ಪರ್ಯಂಕದಲ್ಲಿ ಮಲಗಿ ನಿದ್ರಿಸಿದನು. ಸ್ವಯಂ ನಿದ್ರಾರಹಿತನಾಗಿದ್ದರೂ ಮಹಾಪ್ರಭುವಾದ ಶ್ರೀಮನ್ನಾರಾಯಣನು ಪ್ರಾಕೃತ ಶರೀರಿಯಾದ ಮಾನವನಂತೆ ಕ್ರೀಡಿಸಿದನು.

ಎಲೈ ಜನಕಮಹಾರಾಜ! ಹೀಗೆ ಆ ಮಹೋತ್ಸವದಲ್ಲಿ ಪಾಲ್ಗೊಂಡ ಸಮಸ್ತ ಸುರರು, ಋಷಿಮುನಿಗಳು, ಇನ್ನಿತರ ಭೂಸುರರೂ ಸಹ ಬಹು ಸಂಭ್ರಮಾನಂದ ಆತುರಗಳಿಂದ ಅಂದಿನ ಸಪ್ತಮಿಯ ರಾತ್ರಿಯನ್ನು ಕಳೆದರು. ಬ್ರಹ್ಮಾದಿ ದೇವತೆಗಳ ಗುಂಪು, ಕಶ್ಯಪ-ಅತ್ರಿ ಮೊದಲಾದ ಋಷಿಗಳು, ಕಂದರಗಳಲ್ಲಿ, ಗುಹೆಗಳಲ್ಲಿ, ಗಿಡಗಳ ಬುಡಭಾಗಗಳಲ್ಲಿ, ಬೆಟ್ಟ ಗುಡ್ಡಗಳಲ್ಲಿ, ಗವಿಗಳಲ್ಲಿ, ಹೊದರುಗಳಲ್ಲಿ ಸಹ ಮಲಗಿ ನಿದ್ರಿಸಿದರು.

ಹೇ ಜನಕ ಭೂಮಿಪಾಲ! ಆನಂತರ ನಿರ್ಮಲವಾದ ಪ್ರಾತಃಕಾಲದಲ್ಲಿ ಸಜ್ಜನರಿಗೆ ಆಶ್ರಯನಾದ ಶ್ರೀಹರಿಯು ಬ್ರಹ್ಮದೇವನನ್ನು ಕರೆದು ತರಲು ವೈನತೇಯನನ್ನು ಕಳಿಸಿದನು. ಗರುಡನು ವಾಯುವೇಗದಿಂದ ಕಮಲಸಂಭವನೆಡೆಗೆ ತಂದು ಮಂಚದಲ್ಲಿ ಮಂಡಿಸಿರುವ ಪಿತಾಮಹನಿಗೆ ಪರಮಾಭರಣಾದಿಗಳಿಂದ ಪರಿಶೋಭಿತನಾಗಿ ಹಂಸವಾಹನನಾಗಿ, ಆಕಾಶರಾಜನ ನಗರಕ್ಕೆ ಪಯಣಿಸಲು ಸಿದ್ಧವಾಗಿ ತನ್ನ ಬಳಿಗೆ ಬರುವತೆ ನಿನ್ನ ಜನಕನು ಆಜ್ಞಾಪಿಸಿದ್ದಾನೆ. ಆದುದರಿಂದ ಹೇ ದೇವ! ಜಾಗ್ರತೆಯಾಗಿ ಹೊರಡು; ವಿಧವಿಚಿತ್ರಗಳಾದ ಮಹಾವಾದ್ಯಗಳು ಮೊಳಗಲಿ, ಆನೆಯ ಮೇಲೆ ದೊಡ್ಡ ನಗಾರಿಯನ್ನೇರಿಸಿ ಧ್ವನಿಸಲ್ಪಡಲಿ, ರಾಜನಗರಿಗೆ ಸಂಭ್ರಮದಿಂದ ಹೋಗಲು ಆಶ್ಚರ್ಯಕರಗಳಾದ ವಾಹನಗಳು, ಪಲ್ಲಕ್ಕಿ-ರಥಗಳನ್ನೂ ಅಲಂಕರಿಸಿರಿ'', ಎಂದು ಪಕ್ಷಿರಾಜನು ನುಡಿಯಲು ಅದನ್ನು ಕೇಳಿ ಪಕ್ಷಿವಾಹನನ ಪ್ರೀತಿಯ ಕುವರನಾದ ನಾಲ್ಮೊಗನು ಸಂತಸದಿಂದ ದೇವಸೇನೆಯನ್ನು ಹೊರಡಿಸಲು ಆಜ್ಞಾಪಿಸಿದನು. ಆನೆಗಳು, ಕುದುರೆಗಳು,

ವೃಷಭಗಳ ಗುಂಪನ್ನು ಚೆನ್ನಾಗಿ ಶೃಂಗರಿಸಿ, ಶೂರಸೈನಿಕ ಸಮೂಹವನ್ನು ಬ್ರಹ್ಮದೇವನು ಹೊರಡಿಸಿದನು. ಶೂರರೂ, ರಣವಿದ್ಯಾಪರಿಣತರೂ ಆದ ಅವರೆಲ್ಲರೂ ಪಿತಾಮಹನನ್ನು ಮುಂದೆಮಾಡಿಕೊಂಡು ಶ್ರೀಹರಿಯ ಸನ್ನಿಧಿಗೆ ಹೋದರು. ತನ್ನ ಬಳಿ ಬಂದ ಸಕಲ ಲೋಕಗಳಿಗೆ ಸ್ವಾಮಿಯಾದ ಬ್ರಹ್ಮದೇವನನ್ನು ಕಂಡು ಪೂಜ್ಯನಾದ ಶ್ರೀನಿವಾಸನು ''ವತ್ಸ! ಪ್ರಯಾಣ ಮಾಡಲು ಏತಕ್ಕೆ ತಡಮಾಡುತ್ತಿರುವಿರಿ? ಸಮಸ್ತ ಸೈನ್ಯವನ್ನೂ ಆಕಾಶರಾಜನ ರಾಜಧಾನಿಯತ್ತ ಹೊರಡಿಸು'' ಎಂದು ಹೇಳಲು ಶ್ರೀಕೃಷ್ಣನ ಸುತನಾದ ಬ್ರಹ್ಮದೇವನು ''ದೇವ! ಶತ್ರು ಸಂಹಾರಕನಾದ ಶ್ರೀಹರಿ! ಆಯುಧಗಳನ್ನು ಧರಿಸಿರುವ ಸಮಸ್ತ ಸೈನ್ಯವೂ ಸಿದ್ಧವಾಗಿನಿಂತಿದೆ. ಪುರುಷೋತ್ತಮ! ಎದ್ದೇಳು, ಗರುಡನ ಭುಜವನ್ನೇರು'' ಎಂದು ಅರುಹಲು ಭಗವಾನ್ ಶ್ರೀಹರಿಯು ಗರುಡನ ಹೆಗಲನ್ನೇರಿ ಕುಳಿತು ಬ್ರಹ್ಮದೇವನನ್ನು ಅಗ್ರಭಾಗದಲ್ಲಿ ಮಾಡಿಕೊಂಡು ಷಣ್ಮುಖನನ್ನು ಹಿಂಭಾಗದಲ್ಲಿ ಬರುವಂತೆ ಮಾಡಿ, ರಮಾದೇವಿಯನ್ನು ಸುವರ್ಣಮಯ ರಥದಲ್ಲಿ ಕುಳ್ಳಿರಿಸಿ, ತಾಯಿಯಾದ ಬಕುಳಮಾಲಿಕೆಯನ್ನು ದಿನಮಣಿಯಂತೆ ಬೆಳಗುವ ವಿಮಾನದಲ್ಲಿ ಮಂಡಿಸಿ ಭಕ್ತವತ್ಸಲನಾದ ಶ್ರೀನಿವಾಸನು ಸ್ವತಃ ಗರುಡಾರೂಢನಾಗಿ ಹೊರಟನು. ಹೇ ಜನಕಮಹಾರಾಜ! ಆಗ ಆದಿಶೇಷನು ಚಂದ್ರನಂತೆ ಬಿಳುಪಾದ ಶ್ವೇತಛತ್ರವನ್ನು ಪರಮಾತ್ಮನಿಗೆ ಹಿಡಿದನು. ವಾಯುದೇವನು ಚಂದ್ರಸಂಕಾಶಗಳಾದ ಎರಡು ಚಾಮರಗಳನ್ನು ಬೀಸಹತ್ತಿದನು. ಪರಾಕ್ರಮಿಯಾದ ವಿಶ್ವಕ್ಸೇನನು ರತ್ನಖಚಿತದಂಡ ಶೋಭಿತವಾದ ವ್ಯಜನ (ಬೀಸಣಿಕೆ)ಯಿಂದ ಮಾಧವನಿಗೆ ಗಾಳಿಹಾಕಲಾರಂಭಿಸಿದನು. ಭೇರೀದುಂದುಭಿಗಳು, ಮೊಳಗುತ್ತಿರಲು, ವಿವಿಧ ವಾದ್ಯಗಳು ಧ್ವನಿಸುತ್ತಿರಲು, ನರ್ತಕ-ನರ್ತಕಿಯರು, 'ಹಾಹಾಹೂಹೂ' ನಾಮಕರಾದ ಗಾಯಕರ ನರ್ತನ-ಗಾಯನಗಳಿಂದ ಪರಿಶೋಭಿಸಿ, ಸರ್ವಾತ್ಮನಾದ ಭಗವಂತನು ಈ ಬಗೆಯ ಮಹಾವೈಭವದಿಂದ ಹೊರಟನು. ಶ್ರೀವಾಸುದೇವನ ಈ ದಿಗ್ವಿಜಯ ಪಯಣಕಾಲದಲ್ಲಿ ದೇವತೆಗಳು, ಋಷಿಮುನಿಗಳು, ರಾಕ್ಷಸರು, ವೇಗವಾದಗಮನವುಳ್ಳ ಗಂಧರ್ವರು, ಹೀಗೆ ಅಲ್ಲಿ ಕಿಕ್ಕಿರಿದು ನೆರೆದು ದೊಡ್ಡ ಸಮ್ಮರ್ದವೇ ಉಂಟಾಯಿತು! ಆ ಪ್ರಯಾಣ ಕಾಲದಲ್ಲಿ, ಪಶು-ಪಕ್ಷಿಗಳಿಗೆ, ಮಾನವರಲ್ಲಿ ಗಂಡಸರು, ಹೆಂಗಸರು, ವೃದ್ಧರು, ಬಾಲಕರು, ರಾಕ್ಷಸರು, ಋಷಿಕನ್ನಿಕೆಯರು, ದೇವತೆಗಳ ಸಮೂಹದಲ್ಲಿ ದೇವತಾ ಸ್ತ್ರೀಯರುಗಳಲ್ಲಿ ಪರಸ್ಪರ ಕಲಹವು ಉಂಟಾಯಿತು!

ಎಲೈ ಜನಕಭೂಪತಿ! ಆ ಪ್ರಯಾಣದ ಮಾರ್ಗಮಧ್ಯದಲ್ಲಿ ಬಗೆಬಗೆಯ ಘಟನೆಗಳು ಜರುಗಿದವು. ಅಲ್ಲಿ ಸಂಪದ್ವಿಹೀನರಾದ ಬಡವರು ಹೋಗುತ್ತಿದ್ದರು, ಒಬ್ಬಳು ತನ್ನ ಪತಿಯನ್ನು ಅವಲಂಬಿಸಿ, ಟೊಂಕದಲ್ಲಿ ಮಗನನ್ನು ಕೂಡಿಸಿಕೊಂಡು (ಪಾ :- ಭುಜದಲ್ಲಿ ಮಗನನ್ನು ಎತ್ತಿಕೊಂಡು) ತಲೆಯ ಮೇಲೆ ಭಾರವಾದ ಪದಾರ್ಥಗಳನ್ನು ಹೊತ್ತು ಕಾಲುನಡಿಗೆಯಿಂದಲೇ ಪಯಣಿಸುತ್ತಿದ್ದಳು. ಆಗ ರಥದಲ್ಲಿ ಕುಳಿತಿರುವ ಅಮರಾಂಗನೆಯರು ಬಹುವೇಗವಾಗಿ ರಥವನ್ನು ನಡೆಸುತ್ತಾ ಅಡ್ಡ ಬಂದ ಕೃಶರಾದ ದರಿದ್ರರನ್ನು ಬೆದರಿಸುತ್ತಾ, ನಿಂದಿಸುತ್ತಾ ರಭಸದಿಂದ ಮುನ್ನಡೆದರು. ಆಗ ಆ ಗದ್ದಲದಲ್ಲಿ ಗಂಡನಿಂದ ಬೇರ್ಪಟ್ಟು, ಭಾರವನ್ನು ಹೊತ್ತಿದ್ದ ಆ ಹೆಣ್ಣು ಮಗಳು ''ಹಾ ನಾಥ! ಎಲ್ಲಿರುವೆ? ಈ ಅರಣ್ಯಮಧ್ಯದಲ್ಲಿ ನನ್ನೊಬ್ಬಳನ್ನೇ ಬಿಟ್ಟುಹೋಗುವುದು ಯುಕ್ತವಲ್ಲ'', ಎಂದು ಬಡಬಡಿಸುತ್ತಾ ಆ ವಿಪ್ರಪತ್ನಿಯು ಮಗನೊಡನೆ ನೆಲಕ್ಕುರುಳಿದಳು. ಆ ಗಲಾಟೆಯಲ್ಲಿ ಶಿಶುಗಳು ಅಳುತ್ತಿದ್ದವು. ಆಗ ಕೆಲವರು ಅದನ್ನು ಕಂಡು ನಗುತ್ತಿದ್ದರು. ಕೆಲವರು ಹಾಲನ್ನು ಅಪೇಕ್ಷಿಸುತ್ತಿದ್ದರೆ, ಮತ್ತೆ ಕೆಲವರು ಊಟವನ್ನು ಬಯಸುತ್ತಿದ್ದರು. ಇನ್ನೂ ಹಲವರು ಕ್ಷೀರಾನ್ನವನ್ನೂ, ಮತ್ತೆ ಕೆಲವರು ಮೊಸರನ್ನವನ್ನೂ ಉಣ್ಣುತ್ತಿದ್ದರು. ಎಲೈ ನರಪತಿಯೇ, ಅಲ್ಲಿ ಕೆಲವರು ನಗುತ್ತಿದ್ದರೆ, ಅಳುವವರು ಹಲವರು, ಇವಾವುದನ್ನೂ ಲೆಕ್ಕಿಸದೆ ತಮ್ಮಿಷ್ಟಕ್ಕೆ ತಾವು ಹೋಗುತ್ತಿದ್ದವರು ಇನ್ನೂ ಹಲವರು. ಮತ್ತೆ ಕೆಲವರು ಪ್ರಲಪಿಸುತ್ತಿದ್ದರು. ಇನ್ನು ಬೇರೆಯವರು ಮುಗ್ಗರಿಸಿ ಬೀಳುತ್ತಿದ್ದವರನ್ನು ನೆಲಕ್ಕೆ ಬೀಳದಂತೆ ತಮ್ಮ ಕರಗಳಿಂದ ಎತ್ತಿಹಿಡಿಯುತ್ತಿದ್ದರು. ಇವೆಲ್ಲ ಗೊಂದಲವನ್ನು ಕಂಡು ಇನ್ನೂ ಕೆಲವರು ಗಹಗಹಿಸಿ ನಗುತ್ತಿದ್ದರು! ಹೀಗೆ ವಿವಿಧ ಅವಸ್ಥೆಗಳಿಗೀಡಾದ ಸುರನಾರಿಯರು, ವೈಖಾನಸಾಂಗನೆಯರು, ಋಷಿಸ್ತ್ರೀಯರು, ಚಾರುನಯನೆಯರಾದ ಗಂಧರ್ವ ಸ್ತ್ರೀಯರು - ಇಂತು ಶ್ರೀನಿವಾಸ

ಪರಾಯಣರಾದ ಅವರೆಲ್ಲರೂ ವೇಂಕಟಗಿರಿಯಿಂದ ಕೆಳಗಿಳಿದು ಪ್ರಯಾಣಮಾಡಹತ್ತಿದರು. ಶೇಷಗಿರಿಯಿಂದಾರಂಭಿಸಿ, ನಾರಾಯಣಪುರದವರೆವಿಗೆ ಆ ಮಾರ್ಗಮಧ್ಯದಲ್ಲಿ ಎಳ್ಳುಹಾಕಲು ಸಾಧ್ಯವಾಗದಷ್ಟು ಜನಸಮ್ಮರ್ದವಿತ್ತು. ಶ್ರೀನಿವಾಸನ ಆ ಮಹಾವಾಹಿನಿಯು (ಸೈನ್ಯವು), ಪದ್ಮಸರೋವರವನ್ನು ಮಧ್ಯಭಾಗವನ್ನಾಗಿ ಮಾಡಿಕೊಂಡು ಮುಂದುವರೆಯಿತು. ಋಗ್ವೇದ-ಯಜುರ್ವೇದ-ಸಾಮವೇದ-ಅಥರ್ವಣವೇದಗಳಿಂದ ಗಾನಮಾಡಿಸಿಕೊಳ್ಳುತ್ತಾ ಜಗದ್ಗುರುವಾದ, ನಿಖಿಲಜಗತ್ಕಾರಣನಾದ ಸಚ್ಚಿದಾನಂದ ಸ್ವರೂಪನಾದ ಶ್ರೀಕಮಲಾಕಾಂತನು ಪದ್ಮಸರೋವರವೆಂಬ ಹೆಸರಿನ ಶ್ರೇಷ್ಠ ಪುಣ್ಯತೀರ್ಥಕ್ಕೆ ದಯಮಾಡಿಸಿದನು. ಎಲೈ ಜನಕಮಹಾರಾಜ! ಸುರಾಸುರಗಂಧರ್ವರು, ಸಿದ್ಧರು, ಸಾಧ್ಯರು, ಮರುತ್ತುಗಳ ಸಮೂಹದಿಂದೊಡಗೂಡಿ, ಗರುಡವಾಹನನಾಗಿ ಬಂದ ಶ್ರೀಹರಿ ಪರಮಾತ್ಮನಿಗೆ ಕೃಷ್ಣದ್ವೈಪಾಯನರ (ವೇದವ್ಯಾಸರ) ಪುತ್ರರಾದ ಶುಕಾಚಾರ್ಯರು, ಸಾಷ್ಟಾಂಗ ಪ್ರಣಾಮ ಮಾಡಿ, ವಿಜ್ಞಾಪಿಸಿದರು :-

ಶುಕ :- ಪುರುಷೋತ್ತಮನಾದ ಶ್ರೀಹರಿಯೇ ! ಇಂದಿಗೆ ನಾನೆಸಗಿದ ತಪಸ್ಸು ಸಫಲವಾಯಿತೆಂದು ಭಾವಿಸುವೆನು. ನಿನ್ನ ದರ್ಶನವು ನಾನು ಮಾಡಿದ ತಪಸ್ಸಿನ ಸುಫಲದಿಂದ ಲಭ್ಯವಾಯಿತೆಂದು ತಿಳಿಯುವೆನು. ವೇದಗಳಿಗೆ ಮಾತ್ರ ಗೋಚರಿಸುವ ಪುರಾಣಪುರುಷೋತ್ತಮನಾದ ನೀನು ಬ್ರಹ್ಮ-ರುದ್ರೇಂದ್ರಾದಿಗಳಿಂದಲೂ ಹೊಂದಲಸದಳನಾಗಿದ್ದೀಯೆ! ಇಂಥ ಮಹಾನುಭಾವನಾದ ನಿನ್ನನ್ನು ನನ್ನ ಕಣ್ಣಾರೆ ಕಾಣುತ್ತಿದ್ದೇನೆ. ಪುತ್ರ-ಮಿತ್ರರು, ಸಮಸ್ತಲೋಕಪಾಲಕರು, ಶೇಷ, ಸಾಕ್ಷಾತ್ ಜಗನ್ಮಾತೆಯಾದ ಲಕ್ಷ್ಮೀದೇವಿ - ಇವರಿಂದ ಸಹಿತನಾಗಿರುವ ಹೇ ಮುರಾರಿ! ಕಮಲನಾಭ!! ಭಾಗ್ಯೋದಯಕಾರಕವಾದ ನನ್ನೆರಡು ನೇತ್ರಗಳಿಂದ ನಿನ್ನ ಚರಣಕಮಲಗಳನ್ನು ನೋಡುತ್ತಿರುವುದರಿಂದ ನಾನು ಮಾಡಿದ ನಿನ್ನ ಪಾದಪೂಜೆಯು ಇಂದಿಗೆ ಫಲಪ್ರದವಾಯಿತು. ಸಕಲ ದೇವತೆಗಳಿಗೆ ಸ್ವಾಮಿಯಾದ, ವೇಂಕಟಾಚಲಕ್ಕೆ ಪ್ರಭುವಾದ ಶ್ರೀವಾಸುದೇವ! ನನ್ನ ಬಿನ್ನಹವನ್ನಾಲಿಸು. ನಿನ್ನ ಪ್ರಸಾದಕ್ಕೆ ಕಾರಣವಾಗುವ, ನಾನು ಅರ್ಪಿಸುವ ಹಣ್ಣುಹಂಪಲು, ಗೆಡ್ಡೆಗೆಣಸುಗಳನ್ನು ದಯಮಾಡಿ ಭುಂಜಿಸಿ ನನ್ನನ್ನು ಉದ್ಧಾರಮಾಡು.

ಭಗವಾನ್:- ಹೇ ತಾಪಸಶಾರ್ದೂಲ, ಶುಕಾಚಾರ್ಯ! ಸಜ್ಜನಸಮ್ಮತವಾದ ನನ್ನ ಮಾತನ್ನು ಕೇಳು. ನೀನು ತಪಸ್ಸಿನಿಂದ ಕೃಶನಾದವನು. ವೈರಾಗ್ಯಶಾಲಿಯು, ಒಬ್ಬಂಟಿಗನಾದ ಬ್ರಹ್ಮಚಾರಿಯು, ನಿಯಮನಿಷ್ಠನು, ನಾನಾದರೋ ಸಂಸಾರನಿರತನು. ನನ್ನೊಡನೆ ಅನೇಕ ಜನ ಬ್ರಾಹ್ಮಣರಿದ್ದಾರೆ. ಆದ್ದರಿಂದ ನಾನು ಮಹನೀಯನಾದ ಆಕಾಶರಾಜನ ಪಟ್ಟಣಕ್ಕೆ ಈಗಲೇ ಹೋಗಿ ಅಲ್ಲಿಯೇ ಭೋಜನಮಾಡಬೇಕೆಂದು ನಿಶ್ಚಯಿಸಿದ್ದೇನೆ. ಆದುದರಿಂದ ಋಷಿವರ್ಯ! ನೀನು ಅನವಶ್ಯಕವಾಗಿ ಶ್ರಮತೆಗೆದುಕೊಳ್ಳಬೇಡ. ಪರಮಾತ್ಮನ ಮಾತನ್ನು ಕೇಳಿ ವ್ಯಾಸಕುಮಾರರಾದ ಶುಕಾಚಾರ್ಯರು ''ಬಡವರಿಗೆ ಪ್ರಿಯನಾದ ಹೇ ಶ್ರೀನಿವಾಸ! ನಾನು ಬಡವನು : ನೀನು ನಿಷ್ಕಿಂಚನಪ್ರಿಯನು. ನೀನುಂಡರೆ ಜಗತ್ತೇ ಭೋಜನಮಾಡಿದಂತೆ! ಇದರಲ್ಲಿ ಸಂದೇಹವಿನಿತಿಲ್ಲ'' ಎಂದು ವಿಜ್ಞಾಪಿಸುತ್ತಿರಲು, ಬಕುಳಾದೇವಿಯು ''ಶ್ರೀನಿವಾಸ, ಲಕ್ಷ್ಮೀರಮಣ! ಶುಕಮುನಿಗಳ ಪ್ರಾರ್ಥನೆಯನ್ನು ಮನ್ನಿಸು. ನಿನ್ನ ವಿವಾಹ ವಿಷಯದಲ್ಲಿ ಅವರು ಆಕಾಶರಾಜನಿಗೆ ಸರಿಯಾದ ಬಗೆಯಿಂದ ತಿಳಿಸಿಹೇಳಿ, ನಿನ್ನ ಲಗ್ನದ ನಿಶ್ಚಯಕ್ಕಾಗಿ ಬಹುವಾಗಿ ಪ್ರಯತ್ನಿಸಿ ಸೇವೆ ಸಲ್ಲಿಸಿದ್ದಾರೆ'' ಎಂದು ಹೇಳಲು ಶ್ರೀನಿವಾಸನು ಮಾತೆಯ ಮಾತನ್ನಾಲಿಸಿ ಮಮತೆಯಿಂದ ಮುನಿವರ್ಯರನ್ನು ಕುರಿತು ಇಂತೆಂದನು-

ಶ್ರೀನಿವಾಸ :- ಮುನಿವರ್ಯರೇ! ನಿಮ್ಮ ವಚನರೂಪ ಅಮೃತಪಾನದಿಂದ ಬಹುತೃಪ್ತನಾಗಿದ್ದೇನೆ. ಇನ್ನಿತರ ಪ್ರಾಕೃತ ಫಲ, ಅಲ್ಪರಸದಿಂದ ನನಗೇನು? ಆದರೂ ಶುಕಾಚಾರ್ಯರೇ! ನಿಮ್ಮ ಕೋರಿಕೆಯಂತೆ ಭೋಜನವನ್ನು ಮಾಡುತ್ತೇನೆ.

ಹೀಗೆ ನುಡಿದ ಶ್ರೀಹರಿಯು ಗರುಡನಿಂದಿಳಿದು, ಶುಕಮುನಿಗಳನ್ನು ಸಮಾಧಾನಗೊಳಿಸಿ ತನ್ನವರೊಡನೆ ಪುತ್ರನಿಂದೊಡಗೂಡಿ ಶುಕಾಶ್ರಮವನ್ನು ಪ್ರವೇಶಿಸಿ ಆ ಪರಾತ್ಪರನು ದರ್ಭೆಗಳಿಂದ ನಿರ್ಮಿಸಿದ ಮನೋಜ್ಞವಾದ ಆಸನದಲ್ಲಿ

ಕುಳಿತನು. ಆಗ ಶುಕಾಚಾರ್ಯರು ಪದ್ಮಸರೋವರದಲ್ಲಿ ಸ್ನಾನಮಾಡಿ ಭಕ್ತಿಯುಕ್ತರಾಗಿ ಪಾಕವನ್ನು ಸಿದ್ಧಪಡಿಸಿದರು. ಅವರು ಅಮೃತಬೀಜಗಳನ್ನು (ಒನಕೆಯಿಂದ) ಕೈಮುಷ್ಟಿಯಿಂದ ಕುಟ್ಟಿ ಆ ಅಕ್ಕಿಯಿಂದ ದಿವ್ಯವಾದ ಅನ್ನವನ್ನೂ, ಉತ್ತಮವಾದ ರಾಮಗುಳ್ಳದ (ನೆಲಗುಳ್ಳ) ಬಜ್ಜಿಯನ್ನೂ, ಹುಣಸೇಹಣ್ಣಿನ ರಸದ ಗೊಜ್ಜನ್ನೂ ತಯಾರಿಸಿದರು. ಯಾವ ಮಾನವನು ದಿನದಿನವೂ ತನ್ನ ಅಂತರ್ಯಾಮಿಗೆ ಪೂಜೆಸಲ್ಲಿಸುವನೋ, ಬಹಿರ್ಗತನಾದ ಅದೇ ಪರಮಾತ್ಮನ ಪೂಜನವು ಸಜ್ಜನ ಸಮ್ಮತವೆಂದರಿತು ಶಾಸ್ತ್ರಜ್ಞರಾದ ಶುಕಾಚಾರ್ಯರು ಭಗವಂತನ ಪಾದಗಳನ್ನು ತೊಳೆದು, ಕಮಲದ ಎಲೆಗಳಿಂದ ತಯಾರಿಸಿದ ಎಲೆಯಲ್ಲಿ ಗೊಜ್ಜು-ಬಜ್ಜಿಗಳಿಂದ ಸಹಕೃತವಾದ ಅನ್ನವನ್ನಿಟ್ಟು ಪರಮಾತ್ಮನಿಗಭಿವಂದಿಸಿ ''ಸರ್ವದಾ ಪರಿಪೂರ್ಣಮನೋರಥನಾದ ಶ್ರೀನಿವಾಸ! ಭೋಜನ(ಆರೋಗಣೆ) ಮಾಡು'' ಎಂದು ಪ್ರಾರ್ಥಿಸಿದರು. ಶುಕಮುನಿಗಳ ವಿಜ್ಞಾಪನೆಯತೆ ಸ್ವತಂತ್ರನಾಗಿ ತನ್ನಿಚ್ಛೆಯಿಂದಲೇ (ಆತ್ಮಭೂಃ) ಪ್ರಾದುರ್ಭವಿಸುವ (ಅವತರಿಸುವ) ಷಡ್ಗುಣೈಶ್ವರ್ಯ ಪೂರ್ಣನಾದ, ಸಕಲವನ್ನು ಭುಜಿಸುವ(ಸರ್ವಭುಕ್), ಶ್ರೀನಿವಾಸನು ಋಷಿಗಳಿಗೆ ಯೋಗ್ಯವಾದ ಆಹಾರವನ್ನು ಭೋಜನಮಾಡಿದನು. ಪರಮಾತ್ಮನ ಅಪ್ಪಣೆಯಂತೆ ಲಕ್ಷ್ಮೀದೇವಿಯು, ತಾಯಿಯಾದ ಬಕುಲಮಾಲಿಕೆಯೊಡನೆ ಶುಕಮುನಿಗಳು ನೀಡಿದ ಅಮೃತತುಲ್ಯವಾದ ಮುನಿಗಳ ಆಹಾರವಾದ ಆ ಅನ್ನವನ್ನು ಉಂಡಳು. ಇಂತು ಭಗವಂತನು ಭೋಜನಮಾಡಲು, ಶಾಪಾನುಗ್ರಹ ಸಮರ್ಥ ಸಾಧನವುಳ್ಳ, ತಪೋಧನರಾದ ಋಷಿಮುನಿಗಳು ಕುಪಿತರಾಗಿ ಶುಕಾಚಾರ್ಯರನ್ನು ಬೆದರಿಸುತ್ತಾ ತಮ್ಮ ಆಸನಗಳಿಂದ, ಮೇಲೆದ್ದರು. ಪೂಜ್ಯನಾದ ಶ್ರೀನಿವಾಸನು ಋಷಿ-ಮುನಿಗಳ ಮನದಿಂಗಿತವನ್ನರಿತು ಕೂಡಲೇ ಪರ್ಣಶಾಲೆಯಿಂದ ಹೊರಬಂದು ಸರ್ವರಿಗೂ ತೃಪ್ತಿಯಾಗಲೆಂದು ಪೂತ್ಕರಿಸಿದನು (ತೇಗಿದನು). ಸಕಲರ ತೃಪ್ತಿಗೆ ಕಾರಣವಾದ ಭಗವಂತನ ವದನ ಸರೋಜದಿಂದ ಹೊರಹೊಮ್ಮಿದ ಆ ಗಾಳಿಯಿಂದ (ತೇಗುವಿಕೆಯಿಂದ) ಕಾಮಧೇನುವಿನಿಂದೆಂಬಂತೆ ಸಕಲ ಮುನಿಗಳೂ ಸಂತೃಪ್ತರಾದರು. ಆಗ ಆ ಋಷಿಗಳು ಸ್ತೋತ್ರ-ಶ್ಲಾಘನಪರ ನುಡಿಗಳಿಂದ ಶುಕಮುನಿಗಳನ್ನು ಹರುಷಗೊಳಿಸಿದರು.

ಎಲೈ ಜನಕಮಹಾರಾಜ! ಆ ಅಷ್ಟಮಿಯ ದಿವಸ ಶುಕಾಚಾರ್ಯರ ಆಶ್ರಮ ಪ್ರದೇಶದಲ್ಲಿ ವಾಸಮಾಡಿ, ಮರುದಿನ ನವಮಿ-ಗುರುವಾರವು ಬರುತ್ತಿರಲು ಸೂರ್ಯೋದಯ ಕಾಲದಲ್ಲಿ ಚತುರಂಗಬಲಾಧ್ಯಕ್ಷನೂ, ಸಮಸ್ತ ಜಗತ್ತಿಗೆ ಗುರುವೂ ಆದ ಶ್ರೀನಿವಾಸನು ಗಡಿಬಿಡಿಯಿಂದ ಆ ಗುರುವಾರದಂದು ಗರುಡಾರೂಢನಾಗಿ ತನ್ನ ಚತುರಂಗಿಣಿಯ ನಾಯಕನೂ, ಪಿತಾಮಹನೂ ಆದ ಬ್ರಹ್ಮದೇವನನ್ನು ಅಗ್ರಭಾಗದಲ್ಲಿಟ್ಟುಕೊಂಡು, ಜಗದೀಶ್ವರನು ಆಕಾಶರಾಜನಗರಿಗೆ ಹೊರಟನು. ಸೂರ್ಯನು ಅಸ್ತಾದ್ರಿಯನ್ನು ಸೇರುತ್ತಿರಲು ಇತ್ತ ಆ ಸಮಯದಲ್ಲಿ ಆಕಾಶರಾಜನು ಸ್ವಯಂ ನೆರವೇರಿಸಲಿರುವ ಮಂಗಳಮಹೋತ್ಸವ ಕುತೂಹಲದಿಂದ ಅಥವಾ ಕೃತಮಂಗಳ ಕಾರ್ಯನಾಗಿ ಅಂದರೆ ಮಂಗಳಸ್ನಾನ ಮಾಡಿ, ಅಷ್ಟವರ್ಗವನ್ನು ನೆರವೇರಿಸಿ, ಸುವಾಸನೆಯ ತೈಲದಿಂದ ಪದ್ಮಾವತಿಗೆ ಮಂಗಳಾಭ್ಯಂಜನವನ್ನು ಮಾಡಿಸಿ, ಆ ಶ್ರೇಷ್ಠ ಕನ್ಯೆಯನ್ನು ಸರ್ವಾಭರಣಗಳಿಂದ ಶೃಂಗರಿಸಿ, ತ್ವರೆಯಿಂದ ಕುಮಾರಿ ಪದ್ಮಾವತಿಯನ್ನು ಆನೆಯ ಮೇಲೆ ಕೂಡಿಸಿ ಪುತ್ರೀಹಿತರತನಾದ, ಧರ್ಮಾತ್ಮನಾದ ಆಕಾಶಭೂಪತಿಯು ಮಗಳು, ಪುರೋಹಿತರಾದ ಬೃಹಸ್ಪತ್ಯಾಚಾರ್ಯರು, ಇಂದ್ರದೇವರು ಮತ್ತು ಸಹೋದರನಾದ ತೋಂಡಮಾನ, ಇವರಿಂದ ಸಹಿತನಾಗಿ ವರನನ್ನು ಎದುರುಗೊಳ್ಳಲು ರಾಜಧಾನಿಯಿಂದ ಹೊರಟನು. ಜಗತ್ಕಾರಣನೂ, ರಮಾರಮಣನೂ ಆದ ನಾರಾಯಣನನ್ನು ನೋಡುವ ತವಕದಿಂದ ಆಕಾಶರಾಜನು ಸಕಲ ಗಜ-ತುರಗ-ರಥಗಳಿಂದೊಡಗೂಡಿದ ಚತುರಂಗಸೈನ್ಯಗಳಿಂದ, ಧ್ವಜ-ಪತಾಕೆ-ಚಾಮರ-ಬೀಸಣಿಕೆಗಳಿಂದಲೂ, ನಗಾರಿ-ದುಂದುಭಿಗಳ ಮಹಾರವಗಳಿಂದಲೂ, ಮಂಗಳವಾದ್ಯಗಳ ನಿರ್ಘೋಷಗಳಿಂದಲೂ, ನರ್ತಕ-ನರ್ತಕಿಯರು, ನಟವರು, ತಾಳಸ್ತುತಿ ಪಾಠಕರು, ಬಿರುದಾವಳಿ ಘೋಷಕರು, ಹೊಗಳುಭಟರು, ಇವರುಗಳಿಂದ ಸ್ತುತಿಸಿಕೊಳ್ಳುತ್ತಾ, ಅಗಾಧವಾದ ಆ ಸೈನ್ಯದ ನಡುಭಾಗದಲ್ಲಿ ವಿರಾಜಿಸಿದನು. ಆಗ ಆಕಾಶಭೂಪತಿಯು

ದೇವೇಂದ್ರನು ತೋರಿಸಿದ ಶ್ರೀನಿವಾಸನನ್ನು ನೋಡಿದನು. ಆಕಾಶದಲ್ಲಿ ನಕ್ಷತ್ರಮಂಡಲಗಳಿಂದ ಸಹಿತನಾದ ಚಂದ್ರನಂತೆ ಕಂಗೊಳಿಸುವ ಶ್ರೀಹರಿಯನ್ನು ಕಂಡನು. ಗರುಡನ ಭುಜವೇರಿ, ಶ್ವೇತಛತ್ರಾದಿಗಳಿಂದ ಯುಕ್ತನಾದ, ಸುಕುಮಾರನೂ, ಸುರಸುಂದರನೂ, ತರುಣನೂ, ಸುಂದರಾನನನೂ ಆದ, ಉತ್ಕೃಷ್ಟಾನಂದಮಯ ಶರೀರನೂ, ಜಗತ್ತಿಗೆ ಮೂಲಕಾರಣನೂ ಆದ ಶ್ರೀನಿವಾಸನನ್ನು ಕಂಡು ಅಮಿತಾನಂದತುಂದಿಲನಾದ ಆಕಾಶರಾಜನು ಭರದಿಂದ ತನ್ನ ರಥದಿಂದ ಕೆಳಗಿಳಿದು, ಕುಮಾರಿ ಪದ್ಮಾವತಿಯನ್ನು ಮುಂದಿಟ್ಟುಕೊಂಡು ಪುರೋಹಿತರನ್ನು ಪುರಸ್ಕರಿಸಿ ನಿಂತನು ಮತ್ತು ರೋಮಾಂಚನ ಪುಲಕಿತನಾಗಿ ''ನಾನು ಧನ್ಯನು! ಕೃತಾರ್ಥನಾದೆನು, ಸ್ವರ್ಗದ ಮಾರ್ಗವನ್ನಾಶ್ರಯಿಸಿದವನಾದೆ!'' ಎಂದುಸುರಿದನು. ಇಂತು ನುಡಿಯುತ್ತಿರುವ ರಾಜಶಾರ್ದೂಲನಾದ ಆಕಾಶರಾಜನನ್ನು ನಾರದ ಮಹರ್ಷಿಗಳು ಶ್ರೀನಿವಾಸನಿಗೆ ತೋರಿಸುತ್ತಾ ''ದೇವ! ದೀರ್ಘವಾದ ಮೀಸೆ, ನೀಳತೋಳುಗಳಿಂದ ಎತ್ತರವಾಗಿ ಕಾಣುವ, ಶ್ವೇತಛತ್ರವಿಶೋಭಿತನಾದ ನಿನ್ನ ಮಾವನಾದ ಆಕಾಶರಾಜನನ್ನು ನೋಡು'' ಎಂದನು. ಶ್ರೀನಿವಾಸನು ಆಕಾಶಭೂಪತಿಯನ್ನು ನೋಡಿ ''ನಾರದಮುನೀಂದ್ರ! ಧನ್ಯನಾದೆ. ನನ್ನ ಅವತಾರಕಾರ್ಯವಿಂದು ಸಫಲವಾಯಿತು! ಅಂತೆಯೇ ಆಕಾಶರಾಜನು ನನಗೆ ಈಗ ಬಾಂಧವನಾದನು. ಅವನ ಸಂಬಂಧವು ನನಗೊದಗಿ ಬಂದಿತು. ಹಿಂದೆ ನಾನು ಅದೇನು ಸುಕೃತಮಾಡಿದ್ದೆನೋ!'' ಎಂದುದ್ಗರಿಸಿದನು.

ಸತ್ಯಶೀಲನೂ, ಪರಾಕ್ರಮಿಯೂ ಆದ ಆಕಾಶರಾಜನು ನಗರದ್ವಾರ (ಕೋಟೆಯ ಬಾಗಿಲು)ದ ಬಳಿಗಾಗಮಿಸಿ, ಶ್ರೀನಿವಾಸನನ್ನು ನೆಟ್ಟ ಕಣ್ಣುಗಳಿಂದ ನಿಟ್ಟಿಸಿ ನೋಡಿದನು. ಹೇ ಜನಕರಾಜ! ಅನಂತರ ಆ ನರೋತ್ತಮನಾದ ವಸ್ತ್ರ-ಆಭರಣ-ಸುಗಂಧತೈಲ-ಪರಿಮಳದ್ರವ್ಯಗಳಿಂದ ಅಳಿಯನಾದ ಸಿರಿನಿವಾಸನನ್ನು ಪೂಜಿಸಿದನು. ಪರಮಪಾವನಮೂರ್ತಿಯಾದ, ಪತಿಯಾದ ಶ್ರೀನಿವಾಸನನ್ನು ಆಯತಾಕ್ಷಿಯಾದ ಪದ್ಮಾವತಿಯು ಲಜ್ಜೆಯಿಂದ ಅತಿಮೋಹಿತಳಾಗಿ ಕಡೆಗಣ್ಣಿನ ನೋಟದಿಂದ ನೋಡಿದಳು. ಜಗತ್ಕಾರಣನಾದ ಶ್ರೀನಿವಾಸನು ಅಂಬುಜಾಕ್ಷಿಯಾದ ಪದ್ಮಾವತಿಯನ್ನು ನೋಡಿ ಮುದಭರಿತನಾದನು. ಆಗ ಪದ್ಮಾವತಿ-ಶ್ರೀನಿವಾಸರು ವಾಹನಗಳಿಂದಿಳಿದು ನಿಂತು ಒಬ್ಬರನ್ನೊಬ್ಬರು ಅವಲೋಕಿಸಿದರು. ಆ ತರುವಾಯ ವಾಸುದೇವನ ಭಕ್ತರಾದವರೆಲ್ಲರೂ ಪರಸ್ಪರ ಆಲಂಗಿಸಿದರು. ರಾಜಧಾನಿಯ ಹೆಬ್ಬಾಗಿಲಿನ ಬಳಿಯಿರುವ ದೇವಾಲಯದಲ್ಲಿ ವಿರಾಜಿಸುವ ಶ್ರೀದುರ್ಗಾದೇವಿಯ ಸನ್ನಿಧಿಗೆ ಭಕುತಿಯಿಂದ ಪದ್ಮಾವತಿಯ ಜೊತೆಗೂಡಿ ತೆರಳಿ, ಮಾಯಾವಿಯಾದ ಗೋವಿಂದನು ದೇವಿಗೆ ಭಕ್ತಿಯಿಂದಾನಮಿಸಿ ''ಈ ಪದ್ಮಾವತಿಯನ್ನು ನನ್ನ ಪತ್ನಿಯನ್ನಾಗಿ ಮಾಡು'' ಎಂದು ವಿಶೇಷವಾಗಿ ವರವನ್ನು ಬೇಡಿದನು. ಆಯತಾಕ್ಷಿಯಾದ ಪದ್ಮಾವತಿಯು ''ದೇವಿ! ಜಗದ್ವ್ಯಾಪಿಯಾದ ಈ ಶ್ರೀನಿವಾಸನೇ ನನಗೆ ಪತಿಯಾಗುವಂತೆ ಅನುಗ್ರಹಿಸು'' ಎಂದು ಉತ್ತಮ ವರವನ್ನು ಯಾಚಿಸಿದಳು. ಇಂತು ಪದ್ಮಾವತಿ-ಶ್ರೀನಿವಾಸರು ದೇವಿಗೊಂದಿಸಿ-ಸ್ತುತಿಸಿ, ವರಬೇಡಿದರು. ತರುವಾಯ ಪದ್ಮಾವತಿಯು 'ಐರಾವತ'ವೆಂಬ ದೇವಗಜವನ್ನೇರಿ ಕುಳಿತಳು. ಭಕ್ತವತ್ಸಲನಾದ ಶ್ರೀನಿವಾಸನು ಗರುಡನ ಭುಜವೇರಿ ಕುಳಿತನು. ಆಗ ಪದ್ಮಾವತಿ-ಶ್ರೀನಿವಾಸರ ಮೆರವಣಿಗೆ ಹೊರಟಿತು. ಆ ಭವ್ಯ ಮೆರವಣಿಗೆಯಲ್ಲಿ ಹತ್ತು ಸಹಸ್ರದೀಪಗಳು ಬೆಳಗುತ್ತಿದ್ದವು. ರಾಜಬೀದಿಯ ಇಕ್ಕೆಲಗಳಲ್ಲಿ ನಿಂತ ಪ್ರಜಾಜನರು ಅರಳು-ಹೂವು-ಮಂತ್ರಾಕ್ಷತೆಗಳನ್ನು ವರ್ಷಿಸುತ್ತಿದ್ದರು. ಸ್ತುತಿಪಾಠಕರು ಸ್ತೋತ್ರ ಮಾಡುತ್ತಿದ್ದರು. ಮಾಗಧರು ಪರಾಕು ಹೇಳುತ್ತಿದ್ದರು. ಹೊಗಳುಭಟರು ಹೊಗಳುತ್ತಿದ್ದರು. ಬಂದಿಗಳು ಬಿರುದಾವಳಿಗಳನ್ನು ಘೋಷಿಸುತ್ತಿದ್ದರು. ಇವರೆಲ್ಲರ ಜೊತೆಗೆ ವೇದಮಂತ್ರಘೋಷಪೂರ್ವಕವಾಗಿ ಶುಕಾಚಾರ್ಯರೇ ಮೊದಲಾದ ಭೂಸುರರು ಆಶೀರ್ವದಿಸುತ್ತಿರಲು, ಸುರಶ್ರೇಷ್ಠರಾದ ಶ್ರೀ ಬ್ರಹ್ಮಾದಿಗಳಿಂದ ಸಹಿತನಾದ ಶ್ರೀನಿವಾಸನನ್ನು ಎಲ್ಲ ಭಾಗಗಳಿಂದಲೂ ರಾಜಧಾನಿಯ ಸ್ತ್ರೀಪುರುಷರು ಆನಂದ ನಿರ್ಭರರಾಗಿ ನೋಡುತ್ತಿದ್ದರು. ಆ ಮೆರವಣಿಗೆಯ ವೈಭವವು ಅತ್ಯಂತ ಮನೋಹರವಾಗಿದ್ದಿತು. ವಾದ್ಯವಿದ್ಯಾವಿಶಾರದರು ವೀಣಾ, ವೇಣು, ಮೃದಂಗ, ದುಂದುಭಿ, ಆನಕದುಂದುಭಿಗಳನ್ನು ವೈಶಿಷ್ಟ್ಯ-ವೈವಿಧ್ಯಪೂರ್ಣವಾಗಿ ನುಡಿಸುತ್ತಾ ಬರುತ್ತಿದ್ದರು. ಆ ದಿಬ್ಬಣದಲ್ಲಿ ಗಣಿಕಾಸ್ತ್ರೀಯರ ಗುಂಪು, ಇತರ ಪ್ರಜಾನೀಕದೊಡನೆ ಬೆರೆತು ಬರುತ್ತಿದ್ದರು. ಸಂಗೀತ ಕುಶಲರಾದ ಗಂಧರ್ವರು,

ಸೂತರಾದ ಮಂತ್ರಿಗಳು, ಇವರೆಲ್ಲರೊಡನೆ ಸಹಿತನಾಗಿ, ಶ್ರೀನಿವಾಸಪರಾಯಣನಾದ, ಧರ್ಮಿಷ್ಠನಾದ ಆಕಾಶರಾಜನು ಪದ್ಮಾವತಿ-ಶ್ರೀನಿವಾಸರನ್ನು ಮೆರವಣಿಗೆಯಿಂದ ಕರೆದೊಯ್ದನು. ರಂಭಾಸ್ತಂಭ (ಬಾಳೆಯಕಂಬ)ಗಳು, ಕಬ್ಬಿನ ಜಲ್ಲೆಗಳು, ಅಡಿಕೆಯ ಚಿಗುರುಗಳಿಂದ (ಪಾ :- ಅಡಿಕೆಯ ಚಿಗುರಿನ ಗೊಂಚಲುಗಳಿಂದ ಹಸಿರು ವರ್ಣಮಯವಾಗಿ) ಅಲಂಕೃತವಾದ, ಮುತ್ತಿನಸರಗಳ ಜಾಲಗಳಿಂದ ಸುತ್ತಿರುವ, ಪದ್ಮರಾಗಮಣಿಗಳಿಂದ ಶೋಭಿಸುವ, ವಜ್ರವೈಢೂರ್ಯಗಳಿಂದ ಖಚಿತವಾದ, ಇಂದ್ರನೀಲಮಣಿ ನಿಭಕಾಂತಿಯುಳ್ಳ, ಮರಕತಮಣಿಸದೃಶ ತೋರಣಗಳಿಂದ ಪ್ರಕಾಶಮಾನವಾದ; ಕುಂಕುಮದ ನೀರಿನಿಂದ ಪೂರ್ಣವಾದ ಸುವರ್ಣತಾಂಬಾಣಗಳಿಂದ ಆರತಿಮಾಡುತ್ತಿರುವ ಸುದತಿಯರಿಂದ ಶೋಭಾಯಮಾನವಾದ, ನಾರಾಯಣಪುರದಲ್ಲಿ ನಾಲ್ಕು ರಾಜಬೀದಿಗಳನ್ನು ದಾಟಿ, ಮೂರುವೇದಿಕುಂಡಗಳನ್ನು ಪ್ರದಕ್ಷಿಣಾಕಾರವಾಗಿ ಸುತ್ತಿ, ವರನಿಗಾಗಿ, ಏರ್ಪಡಿಸಲಾಗಿರುವ ಸುಂದರಮಂದಿರಕ್ಕೆ ನಂದನಂದನನಾದ ಗೋವಿಂದನನ್ನು ಅಮಂದಾನಂದತುಂದಿಲನಾಗಿ ಮೆರವಣಿಗೆಯಿಂದ ಆಕಾಶರಾಜನು ಕರೆದುತಂದನು.

ಕಲಶಪಯೋಧಿಕನ್ನಿಕೆಯಾದ ಕಮಲಾದೇವಿಯಿಂದ ಸಹಿತನಾದ, ವೇಂಕಟಗಿರಿಗೆ ಪ್ರಭುವಾದ, ವರನಾದ ಶ್ರೀನಿವಾಸನನ್ನು ಅವನಿಗಾಗಿ ವ್ಯವಸ್ಥೆಮಾಡಲಾಗಿದ್ದ ಭವ್ಯ ಭವನಕ್ಕೆ ಕರೆದು ತಂದು ಮಂದಿರಪ್ರವೇಶಮಾಡಿಸಿದನು. ಮುನಿಗಳಿಂದ ರಕ್ಷಿತವಾದ, ಶ್ರೀಹರಿಯ ಬಾಂಧವಸಮೂಹವು, ಚತುರಂಗಬಲವೂ ಸಹ ಅವರವರಿಗೆ ಏರ್ಪಡಿಸಲಾಗಿದ್ದ ಗೃಹಗಳಿಗೆ ಹೋದರು. ಜನಕಮಹಾರಾಜ! ಆಗ ರಾತ್ರಿ ಐದು ಘಳಿಗೆಗಳಾದವು. ಆ ತರುವಾಯ ಆಕಾಶರಾಜನು ವರನಿಂದ ಬೀಳ್ಕೊಂಡು ತನ್ನ ಅರಮನೆಗೆ ತೆರಳಿದನು. ಸ್ವಲ್ಪ ಹೊತ್ತಾದಮೇಲೆ ತೋಂಡಮಾನ ರಾಜನು ಶ್ರೀಹರಿಮಂದಿರಕ್ಕೆ ಆಗಮಿಸಿದನು. ಹಸಿವೆಯಿಂದ ಕಂಗೆಟ್ಟ ಶ್ರೀನಿವಾಸನು ಕರುಣಾಪೂರ್ಣವಾಗಿ ಇಂತು ನುಡಿದನು.

ಶ್ರೀನಿವಾಸ :- ರಾಜ! ಮದುವೆಗಾಗಿ ಬಂದಿರುವ ಸಮಸ್ತಜನರೂ ಉಪವಾಸದಿಂದಿದ್ದಾರೆ. ನಾನು, ನನ್ನ ಪುತ್ರನಾದ ಬ್ರಹ್ಮದೇವ, ನನ್ನ ತಾಯಿ, ದೇವತೆಗಳು, ಪತಿವ್ರತೆಯಾದ ನನ್ನ ಮಡದಿ ಮಹಾಲಕ್ಷ್ಮೀ ಹೀಗೆ ನಾವೆಲ್ಲರೂ ಹಸಿವಿನಿಂದ ಬಳಲಿದ್ದೇವೆ. ಚೈತನ್ಯರಹಿತರಾಗಿದ್ದೇವೆ. ಎಲ್ಲರಿಗೂ ವಿವಿಧ ಭಕ್ಷ್ಯಗಳಿಂದ ಸಹಿತವಾದ ಭೋಜನವನ್ನು ವ್ಯವಸ್ಥೆ ಮಾಡು. ಜಿತೇಂದ್ರಿಯರಾದ ಋಷಿ-ಮುಂತಾದವರಿಗೆ ಬೇಗ ಅಡಿಗೆಯನ್ನು ಅಗ್ನಿದೇವನಿಂದ ಮಾಡಿಸು. ಹೇ ರಾಜಸತ್ತಮ! ನನಗೂ ಸಹ ಪಕ್ವವಾದ, ಸಿಹಿ-ಖಾರ ಮಿಶ್ರಿತವಾದ ಅನ್ನವನ್ನು ಕಳುಹಿಸಿಕೊಡು.

ವಾಸುದೇವನ ವಚನವನ್ನಾಲಿಸಿ ತೋಂಡಮಾನನು ''ಜಗದೀಶ್ವರ, ಹೇ ಮುಕುಂದ! ಈ ರಾಜ್ಯ ಮತ್ತು ನನ್ನೀ ಶರೀರ, ಎಲ್ಲವೂ ನಿನ್ನದಾಗಿದೆ. ಹೇ ಅನಂತ! ಜಗತ್ತಿನ ನೀತಿಯನ್ನು ಅನುಸರಿಸುವ ಮಾನವನಂತೆ ನೀನು ನನ್ನನ್ನು ಮೋಹಗೊಳಿಸುತ್ತಿರುವೆ! ಆಗಲಿ ಪ್ರಭು! ನಿನ್ನ ಆಣತಿಯನ್ನು ನೆರವೇರಿಸುತ್ತೇನೆ'' ಎಂದು ಬಿನ್ನವಿಸಿ ತನ್ನ ಅರಮನೆಗೆ ತೆರಳಿದನು. ಅಲ್ಲಿಗೆ ಶ್ರೀ ಅಗ್ನಿದೇವನನ್ನು ಕರೆಯಿಸಿಕೊಂಡು ಭಗವಂತನ ಅಪ್ಪಣೆಯನ್ನು ತಿಳಿಸಿ, ಅಗ್ನಿದೇವನಿಂದ ಒಂದು ಕ್ಷಣದೊಳಗೆ ಅಡಿಗೆಯನ್ನು, ಮಾಡಿಸಿದನು. ಆಕಾಶರಾಜನು ಋಷಿಮುನಿಗಳು, ವೇದಪಂಡಿತರು, ದೇವತೆಗಳು, ದೇವತಾಸ್ತ್ರೀಯರು ಅನ್ನಾಕಾಂಕ್ಷಿಗಳಾದ ಬ್ರಾಹ್ಮಣರಿಗೆ ಭೋಜನ ಮಾಡಿಸಿದನು. ಅವರೆಲ್ಲರೂ, ಭಕ್ಷ್ಯ-ಭೋಜ್ಯ ವಿವಿಧ ರಸೋಪೇತವಾದ ಮೃಷ್ಟಾನ್ನ ಭೋಜನ ಮಾಡಿದರು. ರಾಜನು ಬಹುಬಗೆಯ ಭಕ್ಷ್ಯವನ್ನೂ, ಮಧುಮಿಶ್ರಿತವಾದ ಅತಿರಸ ಮುಂತಾದವನ್ನೂ, ಅನ್ನ ಸಾರುಗಳನ್ನೂ ಶ್ರೀನಿವಾಸ ಮತ್ತು ಅವನ ಪರಿವಾರದವರಿಗೆ ಕಳುಹಿಸಿದನು. ಪುರುಷೋತ್ತಮನು ರಮಾ-ಬ್ರಹ್ಮ-ಬಕುಳಾದೇವಿ-ಶೇಷ-ಗರುಡಾದಿಗಳೊಡನೆ ಭೋಜನ ಮಾಡಿದನು. ಎಲೈ ಜನಕರಾಯ! ರಾಜನು ಅಳಿಯನಾದ ಶ್ರೀಪತಿಗೆ ದೇವಯೋಗ್ಯವಾದ ಪೀತಾಂಬರಾದಿ ಉತ್ತಮ ವಸ್ತ್ರಗಳನ್ನು ಉಡುಗೊರೆಯಾಗಿ ನೀಡಿ, ಶ್ರೀನಿವಾಸನ ಅಪ್ಪಣೆ ಪಡೆದು ತನ್ನ ಅರಮನೆಗೆ ಹೋದನು. ಆಕಾಶರಾಜನು ನಿರ್ಗಮಿಸಿದ ಮೇಲೆ ಶ್ರೀನಿವಾಸನು ಸುಖವಾಗಿ ದೋಷದೂರನಾದಾಗ್ಯೂ ನಿಯಮದಂತೆ

ಸುಪ್ಪತ್ತಿಗೆಯಲ್ಲಿ ಪವಡಿಸಿ ನಿದ್ರಿಸಿದನು. ಇಂತು ಅಂದಿನ ರಾತ್ರಿಯು ಕಳೆದು ಮರುದಿನ ಪ್ರಾತಃಕಾಲವಾಯಿತು. ದಶಮಿದಿವಸ ಶುಕ್ರವಾರವು ಬಂದಿತು. ಪೂಜ್ಯನಾದ ಶ್ರೀಹರಿಯು ನಿದ್ರೆಯಿಂದೆಚ್ಚರಗೊಂಡು, ತಲ್ಪದಿಂದ ಮೇಲೆದ್ದು ಮಂಗಳಸ್ನಾನ ಮಾಡಿ, ವಸಿಷ್ಠರನ್ನು ಕರೆಯಿಸಿಕೊಂಡು ಇಂತೆಂದನು–

ಶ್ರೀನಿವಾಸ :– ''ಸ್ವಾಮಿ, ವಸಿಷ್ಠರೇ! ಇಂದು ವಿವಾಹದಿನ, ಇಂದು ವರನ ಕಡೆಯ ಐವರು ಉಪವಾಸದಿಂದಿರಬೇಕು. ನಾನು, ಲಕ್ಷ್ಮೀ, ಬ್ರಹ್ಮ, ಕಳಶಗಿತ್ತಿ–ಪಾರ್ವತಿ ಮತ್ತು ಪುರೋಹಿತರಾದ ನೀವು, ಹೀಗೆ ಗಂಡಿನ ಕಡೆಯ ಐದು ಜನರು ಭೋಜನ ಮಾಡದೇ ನಿಯಮದಿಂದಿರಬೇಕು. ಹೆಣ್ಣಿನ ಕಡೆ ಆಕಾಶರಾಜ, ಧರಣೀದೇವಿ, ವಧುವಾದ ಪದ್ಮಾವತಿ, ತಮ್ಮನಾದ ವಸುಧಾನನು ಮತ್ತು ಪುರೋಹಿತರಾದ ಬೃಹಸ್ಪತ್ಯಾಚಾರ್ಯರು ಹೀಗೆ ಐದು ಜನ ಉಪೋಷಣ ನಿಯಮದಿಂದಿರಬೇಕು.''

ಹೀಗೆ ವಸಿಷ್ಠರಿಗೆ ತಿಳಿಸಿ ಶ್ರೀನಿವಾಸನು ಕುಬೇರನನ್ನು ಕರೆದು ''ಯಕ್ಷಗಣಾಧ್ಯಕ್ಷ, ಕುಬೇರ! ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕಾಗಿರುವುದರಿಂದ ನೀನು ಆಕಾಶರಾಜನ ಬಳಿಗೆ ಹೋಗಿ ಈ ವಿಚಾರವನ್ನು ತಿಳಿಸು'' ಎಂದು ಆಜ್ಞಾಪಿಸಿದನು. ಕುಬೇರನು ಜಾಗ್ರತೆಯಾಗಿ ಆಕಾಶರಾಜನ ಬಳಿಗೆ ಬಂದು ಶ್ರೀಹರಿಯ ಪುಣ್ಯಕರವಾದ ಆದೇಶವನ್ನು ಇಂತು ನಿರೂಪಿಸಿದನು – ''ರಾಜನ್! ಇಂದು ವಿವಾಹಕ್ಕೆ ಮೊದಲೇ ಋಷಿಗಳು ಮುನಿಗಳು ಮೊದಲಾದವರಿಗೆ ಭೋಜನ ಮಾಡಿಸಬೇಕು. ಏಕೆಂದರೆ, ರಾತ್ರಿ ಹದಿಮೂರು ಘಳಿಗೆಯ ನಂತರ ವಿವಾಹ ಮುಹೂರ್ತವಿದೆ. ಆಗ ರಾತ್ರಿಯಲ್ಲಿ ಭೂಸುರರಿಗೆ ಭೋಜನವು ಸಾಧ್ಯವಾಗಲಾರದು. ಆದುದರಿಂದ ವಿವಾಹಕ್ಕೆ ಮೊದಲೇ ಅವರೆಲ್ಲರಿಗೂ ಭೋಜನ ಮಾಡಿಸಬೇಕೆಂದು ಭಗವಂತನು ಆಜ್ಞಾಪಿಸಿದ್ದಾನೆ'' ಎಂದು ತಿಳಿಸಿ ಮರಳಿ ಶ್ರೀನಿವಾಸನ ಬಳಿಗೆ ಬಂದನು.

ರಾಜರ್ಷಿಯಾದ ಆಕಾಶರಾಜನು, ಶ್ರೀನಿವಾಸನ ಆಣತಿಯಂತೆ ಬ್ರಹ್ಮವಾದಿಗಳಾದ ಋಷಿ–ಮುನಿ–ಭೂಸುರರಿಗೆ ಮೃಷ್ಟಾನ್ನ ಭೋಜನವನ್ನು ಮಾಡಿಸಿ ಸಮಸ್ತರಿಗೂ ತಾಂಬೂಲ, ಸುವರ್ಣನಾಣ್ಯಗಳನ್ನು ದಕ್ಷಿಣೆಯಾಗಿ ನೀಡಿದನು. ಜನಕರಾಜ! ಈ ಪ್ರಕಾರವಾಗಿ ಬ್ರಾಹ್ಮಣರನ್ನು ತೃಪ್ತಿಪಡಿಸಿ, ಶ್ರೀನಿವಾಸನ ವಿವಾಹ ದಿನದಂದು ಅಂದರೆ ದಶಮಿ ಶುಕ್ರವಾರ ಸಾಯಂಕಾಲ, ಆಕಾಶರಾಜನು ಸಮಸ್ತ ಚತುರಂಗ ಬಲವನ್ನು ಮುಂದಿಟ್ಟುಕೊಂಡು, ಮಗನಾದ ವಸುಧಾನನ್ನು ಅಗ್ರಭಾಗದಲ್ಲಿರಿಸಿಕೊಂಡು, ವಿಶ್ವಕ್ಸೇನ, ಸಹೋದರ ತೋಂಡಮಾನ, ಮಿತ್ರರು, ಸಂಬಂಧಿಗಳು, ಬಾಂಧವರುಗಳೊಡನೆ ಅಲಂಕೃತವಾದ ಐರಾವತವನ್ನು ಮುಂಭಾಗದಲ್ಲಿಟ್ಟುಕೊಂಡು ಹೊರಟನು. ಇಂದ್ರನ ಆ ಐರಾವತ ಗಜವು ಅತಿಮನೋಹರವಾಗಿ ಅಲಂಕೃತವಾಗಿತ್ತು ಅದು ಮೇಘಗರ್ಜನೆ ಮಾಡುತ್ತಿತ್ತು. ರತ್ನ ಕಂಬಳಿಯಿಂದ ಶೃಂಗರಿಸಲ್ಪಟ್ಟಿತ್ತು. ಅದಕ್ಕೆ ಅನೇಕ ಘಂಟೆಗಳನ್ನು ಕಟ್ಟಲಾಗಿತ್ತು. ಅದು ನಾಲ್ಕು ದಂತಗಳಿಂದ ಶೋಭಿಸುತ್ತಿತ್ತು. ಆ ಶ್ರೇಷ್ಠ ಗಜವು ಮಹಾಧ್ವನಿಗೈಯ್ಯುತ್ತಿತ್ತು. ಅದರ ಕರ್ಣಗಳಿಗೆ ಚಾಮರಗಳನ್ನು ಕಟ್ಟಿದ್ದರು. ಇಂತು ಕಂಗೊಳಿಸುವ ಇಂದ್ರನ ಐರಾವತವೆಂಬ ಆ ಆನೆಯನ್ನೂ, ಇಂದ್ರನನ್ನೂ, ಮುಂಭಾಗದಲ್ಲಿ ಹೊರಡಿಸಿ ಆಕಾಶರಾಜನು ಶ್ರೀನಿವಾಸನನ್ನೂ, ವರನ ಕಡೆಯವರನ್ನೂ ಆಹ್ವಾನಿಸಲು ವರನ ಮಂದಿರಕ್ಕೆ ಆಗಮಿಸಿದನು. ಎಲೈ ಜನಕಭೂಪಾಲ! ಶ್ರೀನಿವಾಸನ ಮಂದಿರದ ಸೊಬಗು ಅವರ್ಣನೀಯ! ಆ ಸುಂದರಮಂದಿರವು ರತ್ನಗಳಿಂದ ದೇದೀಪ್ಯಮಾನವಾದ ಹತ್ತು ಸಾವಿರಸ್ತಂಭಗಳಿಂದ ಕಂಗೊಳಿಸುತ್ತಿತ್ತು. ಭಗವಂತನಿಗೆ ಪ್ರಿಯವಾದ ಆ ಸಭಾಭವನವನ್ನು ವಿಶ್ವಕರ್ಮನು ನಿರ್ಮಿಸಿದ್ದನು. ಆ ಮಹಾಸಭೆಯಲ್ಲಿ ವಿಧವಿಧಪೀಠದಲ್ಲಿ ಮಹನೀಯರಾದ ಚತುರಾನನ ಬ್ರಹ್ಮಾದಿ ಸಕಲದೇವತೆಗಳೂ, ವಿಶ್ವಾಮಿತ್ರ–ಭಾರದ್ವಾಜ–ವಸಿಷ್ಠ–ಗೌತಮ–ಭೃಗು–ಅತ್ರಿ–ಪುಲಸ್ತ್ಯ–ವಾಲ್ಮೀಕಿ ಮುಂತಾದ ಮಹರ್ಷಿಗಳೂ; ವೈಖಾನಸರು, ದೂರ್ವಾಸರು, ಮಾರ್ಕಂಡೇಯರು, ಗಾಲವರು, ದಧೀಚಿ–ಚ್ಯವನ–ಸನಕ–ಸನಂದನರು, ಇವರೇ ಮೊದಲಾದ ಕಲ್ಮಷರಹಿತರಾದ, ಜಟಾಮುಕುಟವಿಭೂಷಿತ ಶರೀರವುಳ್ಳ, ಪ್ರಜ್ವಲಿಸುವ ಕೃಷ್ಣಾಜಿನವಸ್ತ್ರಧಾರಿಗಳಾದ, ಅತಿಶ್ರೇಷ್ಠರಾದ ಮುನಿಗಳು ಕಶ್ಯಪ ಋಷಿಗಳನ್ನು ತಮ್ಮ ಅಗ್ರಭಾಗದಲ್ಲಿ ಕುಳ್ಳಿರಿಸಿಕೊಂಡು ಆ ಸಭೆಯಲ್ಲಿ ಕುಳಿತಿದ್ದರು. ಅವರ

ಮಧ್ಯಭಾಗದಲ್ಲಿ ರತ್ನಕಂಬಳಿಯ ಮೇಲೆ ಶ್ರೀನಿವಾಸನು ಮಂಡಿಸಿದ್ದನು. ಸರ್ವಲೋಕ ಪಿತಾಮಹನಾದ ಬ್ರಹ್ಮದೇವನು ಕರಜೋಡಿಸಿ ಕುಳಿತಿದ್ದನು. ಇಂತಹ ಮಹಾಸಭೆಯ ದ್ವಾರಪ್ರದೇಶಕ್ಕೆ ಬಂದ ಸತ್ಯಪರಾಕ್ರಮನಾದ ಆಕಾಶರಾಜನು ಪುರೋಹಿತರಾದ ಬೃಹಸ್ಪತ್ಯಾಚಾರ್ಯರನ್ನು ಪುರಸ್ಕರಿಸಿ ಶ್ರೀಹರಿಯ ಸನ್ನಿಧಿಗೆ ಬಂದನು.

ಆಗ ತನ್ನ ಬಳಿಗೆ ಬರುತ್ತಿರುವ ಆಕಾಶರಾಜನನ್ನು ಕಂಡು ಶ್ರೀವಾಸುದೇವನು ಎದ್ದು ನಿಂತು ಅವನನ್ನು ಸ್ವಾಗತಿಸಿ- ಆಲಿಂಗಿಸಿಕೊಂಡು ''ರಾಜೇಂದ್ರ! ನೀನು ಅತಿ ಉತ್ತಮನು, ಅತಿ ವೃದ್ಧನಾಗಿದ್ದೀಯೆ, ನೀನೇತಕ್ಕೆ ನನ್ನ ಮಂದಿರಕ್ಕೆ ಬಂದಿದ್ದೀಯೆ? ಇಂತಹ ಆಹ್ವಾನಾದಿ ಕಾರ್ಯ ನಿರ್ವಹಣೆಗೆ ವಿಶ್ವಕ್ಸೇನನನ್ನು ನಿಯಮಿಸು'' ಎಂದನಲು ಅದಕ್ಕೆ ಸೂಕ್ತ ಉತ್ತರವನ್ನಿತ್ತು ಆಕಾಶ ಭೂಪತಿಯು ''ಪುರೋಹಿತರೇ! ಏಕೆ ತಡಮಾಡುವಿರಿ? ಶ್ರೀಲಕ್ಷ್ಮೀಪತಿಗೆ ಪೂಜೆಯನ್ನು ಮಾಡಿಸಿರಿ'' ಎಂದನು. ಬೃಹಸ್ಪತ್ಯಾಚಾರ್ಯರು ''ಅಮ್ಮಾ, ಧರಣೀದೇವಿ! ವಸಿಷ್ಠರ ಪತ್ನಿಯಾದ ಅರುಂಧತಿದೇವಿಯನ್ನು ಮುಂದಿಟ್ಟುಕೊಂಡು ಶ್ರೀರಮಾರಮಣನಿಗೆ ಪೂಜೆಯನ್ನು ನೆರವೇರಿಸು'' ಎಂದು ಹೇಳಿದರು. ಎಲೈ ಜನಕಮಹೀಪಾಲ! ಆಗ ಮಹಾರಾಣಿ ಧರಣಿದೇವಿಯು ಶ್ರೀನಿವಾಸನ ಮುಖಕಮಲವನ್ನೀಕ್ಷಿಸಿ, ಸಂಭ್ರಮದಿಂದ ಮೇಲೆದ್ದು ಆನಂದಬಾಷ್ಪಸಿಕ್ತನಯನಳಾಗಿ, ಪ್ರಮೋದನಿರ್ಭರಳಾಗಿ ತಾನೇ ಕೃತಾರ್ಥಳೆಂದು ಭಾವಿಸಿ, ಸ್ತ್ರೀಸಹಜ ಲಜ್ಜೆಯಿಂದ, ನಿರವಧಿಕಾನಂದಮಯಶರೀರನಾದ ಶ್ರೀನಿವಾಸನನ್ನು ಪೂಜಿಸಿದಳು. ಆಗ ಅಲ್ಲಿದ್ದ ನಿಖಿಲಸ್ತ್ರೀಯರೂ ಅಚ್ಚರಿಯಿಂದ ಆಕುಲಿತ ಮನಸ್ಕರಾಗಿ ಧರಣೀದೇವಿಯನ್ನು ನೋಡಿ ಸಂತಸದಿಂದಿಂತೆಂದರು - ''ಧರಣೀದೇವಿ! ನೀನೆಂಥ ಭಾಗ್ಯವಂತಳು! ಶ್ರೀಕೃಷ್ಣ ಪರಮಾತ್ಮನ ಪೂಜೆಯನ್ನು ಮಾಡಲೆಂದೇ ಬ್ರಹ್ಮದೇವನಿಂದ ಸೃಷ್ಟಳಾದ ನೀನು ಪೂರ್ವಜನ್ಮದಲ್ಲಿ ಅದೇನು ಪುಣ್ಯಮಾಡಿದ್ದೆಯಮ್ಮಾ? ಆ ಸುಕೃತಫಲದಿಂದ ನೀನಿಂದು ನಿನ್ನ ಕೈಯಾರ ಸಾಕ್ಷಾತ್ ನಾರಾಯಣನನ್ನು ಪೂಜಿಸುತ್ತಿರುವೆ!''

ಇಂತು ಲಲನಾಮಣಿಯರಿಂದ ಶ್ಲಾಘಿತಳಾದ ಧರಣೀದೇವಿಯು ದೇವತಾಸಾರ್ವಭೌಮನಾದ ಶ್ರೀಮಾಧವ ನನ್ನು ಪಚ್ಚಕರ್ಪೂರಮಿಶ್ರಿತವಾದ ತೈಲದಿಂದ, ಪರಿಮಳಭರಿತಗಂಧದಿಂದ ಬಹುವಿಧ ವಸ್ತ್ರಗಳು, ರತ್ನಗಳು, ಮೌಕ್ತಿಕಹಾರ- ಮುಂತಾದ ಆಭರಣಗಳಿಂದ ಆ ಮಂಗಳಾಂಗಿಯು ಮಂಗಳವಾದ್ಯಗಳಾಗುತ್ತಿರಲು ಜಗನ್ಮಂಗಳ ಮೂರ್ತಿಯನ್ನು ಪೂಜಿಸಿದಳು. ಆ ತರುವಾಯ ಪುರೋಹಿತರ ಆದೇಶದಂತೆ ಆಕಾಶರಾಜನು ಅನಾದಿ ಪುರುಷೋತ್ತಮನೂ, ನಿರಾಮಯನೂ, ಅಳಿಯನೂ ಆದ ಶ್ರೀನಿವಾಸನನ್ನು ಆನೆಯ ಮೇಲೆ ಕೂಡಿಸಿದನು. ಬ್ರಹ್ಮ-ರುದ್ರ-ಕುಬೇರ-ಶೇಷ-ಗರುಡ-ಅಗ್ನಿ-ವಾಯು-ವರುಣ-ಯಮ-ಮರುದ್ಗಣಗಳು, ಇವರೆಲ್ಲರಿಂದೊಡಗೂಡಿ, ತಮ್ಮ ತಮ್ಮ ಪತ್ನಿಯರಿಂದ ಸಹಿತರಾದ ವಸಿಷ್ಠಾದಿಮುನಿಗಳು, ಪತ್ನೀಸಹಿತರಾದ ಮಕ್ಕಳುಗಳೊಡನೆ ವೇಂಕಟೇಶ್ವರನಾದ ಶ್ರೀನಿವಾಸನು ರತ್ನಮಯ ತೋರಣಗಳಿಂದ ಅಲಂಕೃತವಾದ ಅಸಂಖ್ಯ ಜನರಿಂದ ಕಿಕ್ಕಿರಿದು ತುಂಬಿರುವ ಬಗೆಬಗೆಯ ಅಲಂಕಾರಗಳಿಂದ ಬೆಡಗೊಂಡಿರುವ ರಾಜ ಪ್ರಾಸಾದಕ್ಕೆ ಕಲ್ಯಾಣ ಮಂಟಪಕ್ಕೆ ದಯಮಾಡಿಸಿದನು. ಹತ್ತು ಸಹಸ್ರದೀಪಗಳಿಂದಲೂ, ಮಹಾವಾದ್ಯಘೋಷಗಳಿಂದಲೂ, ಅಳಿಯನಿಂದೊಡಗೂಡಿದ ಆಕಾಶರಾಜನು ಅರಮನೆಯ ಮಹಾದ್ವಾರದ ಬಳಿ ಚತುರಂಗಬಲವನ್ನು ಬಿಟ್ಟು, ಅರಮನೆಯನ್ನು ಪ್ರವೇಶಿಸಲುದ್ಯುಕ್ತನಾದಾಗ ತೋಂಡಮಾನನ ಧರ್ಮಪತ್ನಿಯು ಆರತಿಯ ತಟ್ಟೆಯನ್ನು ಹಿಡಿದು ಬೇಗ ಶ್ರೀನಿವಾಸನ ಬಳಿಗೆ ಆರತಿ ಮಾಡಲು ಬಂದು ಆ ಮಂಗಳಾಂಗಿಯು ಶ್ರೀನಿವಾಸನನ್ನು ಪೂಜಿಸಿ ಆರತಿಯೆತ್ತಿದಳು. ಜನಕಮಹಾರಾಜ! ಆಗ ಅರಮನೆಯ ಬಳಿ ಆಕಾಶರಾಜನು ದೃಷ್ಟಿಪರಿಹಾರಕ್ಕಾಗಿ ಅನೇಕ ಪಶುಗಳನ್ನು ಬಲಿಕೊಡಿಸಿದ ನಂತರ, ಶ್ರೀನಿವಾಸನು ರಾಜಮಂದಿರವನ್ನು ಪ್ರವೇಶಿಸಿದನು. ಅನೇಕ ದ್ವಾರಗಳನ್ನು ದಾಟಿ, ತರುವಾಯ ಆಕಾಶಭೂಪತಿಯೊಡನೆ ರಾಜಗೃಹವನ್ನು ಪ್ರವೇಶಿಸಿ, ಅಲ್ಲಿ ನರೇಂದ್ರನು ನಿರ್ಮಾಣ ಮಾಡಿಸಿದ್ದ ನವರತ್ನಮಯ ಸಿಂಹಾಸನದಲ್ಲಿ ಮಂದಹಾಸರಂಜಿತಮುಖಾರವಿಂದನೂ, ಕಮಲನಯನನೂ ಆದ ಶ್ರೀಹರಿಯು ವಿರಾಜಿಸಿದನು.

ನಾಲ್ಕು ಸ್ತಂಭಗಳಿರುವ ರತ್ನಮಯವೇದಿಕೆಯ ಮೇಲೆ ಗರುಡಧ್ವಜವನ್ನೇರಿಸಿ, ಅದನ್ನು ಸುತ್ತುವರೆದು ಕಲ್ಮಷರಹಿತರಾದ ಆ ಮುನಿಗಳು, ನಿಖಿಲವೃಂದಾರಕರೂ, ಚತುರ್ಮುಖ ಬ್ರಹ್ಮದೇವನನ್ನು ಅಗ್ರಭಾಗದಲ್ಲಿ ಕೂಡಿಸಿಕೊಂಡು ಕನಕಮಯ ಪೀಠಗಳಲ್ಲಿ ಸುಖವಾಗಿ ಕುಳಿತು ಕಣ್ಣಿಗೆ ಹಬ್ಬವಾದ ಆ ಮಹೋತ್ಸವವನ್ನು ನಿರೀಕ್ಷಿಸುತ್ತಿದ್ದರು.

ಎಲೈ ಜನಕರಾಜೇಂದ್ರ! ಆ ಬಳಿಕ ಧರ್ಮನಿಷ್ಠನಾದ ಆಕಾಶಭೂಪತಿಯು ಮಂಗಳಸ್ನಾನವನ್ನು ಮಾಡಿದನು. ರಾಜನ ಮಡದಿಯಾದ ಧರಣೀದೇವಿಯೂ ಸಹಿತ ಸುವಾಸನೆಯ ತೈಲದಿಂದ ಅಭ್ಯಂಜನ ಮಾಡಿಕೊಂಡು ಭೂಷಣಗಳಿಂದ ತನ್ನನ್ನು ಅಲಂಕರಿಸಿಕೊಂಡು, ಬಂಗಾರದ ಬಿಂದಿಗೆಗಳಲ್ಲಿ ತುಂಬಿದ ಸ್ವಾಮಿಪುಷ್ಕರಿಣಿಯ ಜಲವನ್ನು ಭೂಸುರರಿಂದ ತರಿಸಿ ಆಕಾಶರಾಜನು ಶ್ರೀಹರಿಯ ಪಾದವನ್ನು ತೊಳೆಯಲು ಕನ್ಯಾದಾನಕ್ಕೆ ವೇದೋಕ್ತಕ್ರಮದಿಂದ ಆದರಪೂರ್ವಕವಾಗಿ ಸಂಕಲ್ಪವನ್ನು ನೆರವೇರಿಸಿದನು. ಜನಕರಾಜ! ಆನಂತರ ಪುರೋಹಿತನು ಹೇಳಿದ ಮಂತ್ರಗಳಿಂದ ''ಸಹಸ್ರಶೀರ್ಷಾಪುರುಷ'' ಎಂಬ ಪುರುಷಸೂಕ್ತಮಂತ್ರವನ್ನು ತಾನೂ ಉಚ್ಚರಿಸುತ್ತಾ ; ಧರಣೀದೇವಿಯು ಮಂಗಳಕರ ಸ್ವಾಮಿ ಪುಷ್ಕರಿಣಿಯ ಜಲವನ್ನು ಧಾರಾಕಾರವಾಗಿ ಹಾಕುತ್ತಿರಲು ಭಗವಂತನ ಪಾದಗಳನ್ನು ತೊಳೆದು ಪುಣ್ಯಕರವಾದ ಆ ಶ್ರೀಪರಿಪಾದೋದಕವನ್ನು ಶಿರಸಾ ಧರಿಸಿದನು. ನಂತರ ಪತ್ನೀ-ಪುತ್ರ-ಅನುಜ-ಅರಮನೆ, ಧನಗಾರ, ಗಜಾಗಾರ, ರಥದ ಮನೆ, ವಸ್ತ್ರಾಗಾರಗಳನ್ನು ಶ್ರೀನಿವಾಸ ನಿಷ್ಠನಾದ, ಗರಿಷ್ಠನಾದ ಆ ರಾಜಶ್ರೇಷ್ಠನು ಪರಮಾತ್ಮನ ಪಾದಜಲಗಳಿಂದ ಪ್ರೋಕ್ಷಿಸಿದನು. ಆಕಾಶರಾಜನು ಆನಂದತುಂದಿಲನಾಗಿ ''ಆಹಾ, ಈಗಲೀಗ ನನ್ನ ಹುಟ್ಟು ಸಫಲವಾಯಿತು! ನನ್ನ ಜೀವನ ಸುಜೀವನವಾಯಿತು. ಈಗ ನನ್ನ ಪಿತೃಗಳು ವಾಸುದೇವನ ಪಾದೋದಕದಿಂದ ಸಂತುಷ್ಟರಾದರು'' ಎಂದು ಉದ್ಗರಿಸಿ ಕಮಲಾಕ್ಷಿಯಾದ ಪದ್ಮಾವತಿಯನ್ನು ಚಿತ್ರ-ವಿಚಿತ್ರ ಆಭರಣಗಳಿಂದ ಅಲಂಕರಿಸಿದರು. ಆಗ ದೈವಜ್ಞನು ''ಇದು ಸುಮುಹೂರ್ತ'' ವೆಂದು ಘೋಷಿಸಿ ಮುಹೂರ್ತ ಘಳಿಗೆಯ ಘಂಟಾನಾದವನ್ನು ಮಾಡಿದನು. ವಿಪ್ರರು ವಿವಾಹ ಸಮಯದಲ್ಲಿ ಹೇಳುವ ಮಂಗಳಾಷ್ಟಕವನ್ನು ಹೇಳಿದರು. ಆಕಾಶರಾಜನು ಕನ್ಯಾದಾನ ಸಮಯದಲ್ಲಿ ಶ್ರೀವೇಂಕಟೇಶನಿಗೆ ಅನೇಕ ಕೋಟಿ ಸಂಖ್ಯೆಯಲ್ಲಿ ಸುವರ್ಣ ನಾಣ್ಯ ಸಮೂಹವನ್ನು ವರದಕ್ಷಿಣೆಯಾಗಿ ಸಮರ್ಪಿಸಿದನು. ಆ ಧನರಾಶಿಯನ್ನು ನೋಡಿ ಶ್ರೀನಿವಾಸನು ಆಕಾಶಮಹೀಪತಿಯನ್ನು ಉದ್ದೇಶಿಸಿ ಇಂತೆಂದನು.

ಶ್ರೀನಿವಾಸ :- ಮಹಾರಾಜ! ನಿನ್ನ ಪುತ್ರ ಸದೃಶನಾದ ನನಗೆ ನೀನು ಕೊಡುವುದೇನಿದೆ? ನೀನು ವಿವಾಹ ಕಾರ್ಯ ನಿರ್ವಹಣ ಚತುರನು. ಬಹುದಾನಶೀಲನು. ಪ್ರೀತಿಪಾತ್ರನಾದ ಎಲೈ ದೊರೆಯೆ! ನಿನಗೆ ಕೊಡುವ ಮನಸ್ಸಿದ್ದರೆ ಬಹುರತ್ನ ಖಚಿತವಾದ ಆಭರಣಗಳನ್ನು ಕೊಡು. ಶ್ರೀನಿವಾಸನ ನುಡಿಕೇಳಿ ಶ್ರೀನಿವಾಸಪರಾಯಣನಾದ ಆಕಾಶಭೂಪಾಲನು ಶ್ರೀನಿವಾಸದೇವನಿಗೆ ಅನೇಕ ರತ್ನಾಭರಣಗಳನ್ನರ್ಪಿಸಿದನು. ಎರಡು ಸಾವಿರ ತೊಲಗಳ ತೂಕದ ಸುವರ್ಣ ಕಿರೀಟವನ್ನು, ಅಷ್ಟೇ ತೂಕದ ವಡ್ಯಾಣ (ನಡುಪಟ್ಟಿ)ವನ್ನೂ, ಅದರರ್ಧತೂಕದ ದಿವ್ಯ ಕೇಯೂರಹಾರ-ಕಾಲುಂಗುರ (ಕಾಲ್ಗಡಗ)ವನ್ನೂ, ಅಮೂಲ್ಯಗಳಾದ ಏಳು ಪದಕಗಳನ್ನೂ ನೀಡಿದನು. ಮುತ್ತಿನಸರ, ಭುಜಗಳಿಗೆ ಭೂಷಣವಾದ ಭುಜಕೀರ್ತಿಗಳೆರಡನ್ನೂ, ರತ್ನ (ಕೆಂಪು) ಮಾಣಿಕ್ಯ ವಜ್ರವೈಢೂರ್ಯಾದಿಗಳಿಂದ ನಿರ್ಮಿತವಾದ ಅಮೂಲ್ಯಗಳಾದ 640 ತೊಲಗಳ ತೂಕವುಳ್ಳ ಎರಡು ಕಡಗಗಳನ್ನು, ಅಳಿಯನಿಗೆ ಕೊಟ್ಟನು. ಅದರಂತೆಯೇ ನಾಗಚಿನ್ಹಾಂಕಿತ (ತೊಡಾ) ಆಭರಣಗಳನ್ನೂ, ನಾಗಮುರಿಗೆಯನ್ನೂ, ಹತ್ತು ಉಂಗುರಗಳನ್ನೂ, ವೀರಮುದ್ರಾಂಗುಲೀಯಕವನ್ನೂ, ಶ್ರೇಷ್ಠ ವಜ್ರಗಳಿಂದ ಖಚಿತವಾದ ಒಂದು ಸಾವಿರದ ನೂರು ತೊಲೆಗಳ ತೂಕದ ಬಂಗಾರದ ಕಟಿಸೂತ್ರ (ಉಡುದಾರ)ವನ್ನೂ, ಅನೇಕ ರತ್ನಮಯವಾದ ಎರಡು ಪಾದುಕೆಗಳನ್ನೂ ನೀಡಿ; ಅನಂತರ ಮಧುವೈರಿಯಾದ ಶ್ರೀನಿವಾಸನಿಗೆ ಸಾವಿರದಿನ್ನೂರು ತೊಲಾ ತೂಕದ ಬಂಗಾರದ ತಟ್ಟೆ (ಬಂಗಾರದ ಊಟದ ಎಲೆ)ಯನ್ನು ಅರ್ಪಿಸಿದನು. ಸಣ್ಣ ಪುಟ್ಟ ಪಾತ್ರೆಗಳನ್ನೂ, ಅದಕ್ಕೆ ಸರಿಸಮವಾಗಿ ದೊಡ್ಡಪಾತ್ರೆಗಳ ಸಮೂಹವನ್ನೂ, ಅದರಂತೆಯೇ ಆ ದಾನಶೌಂಡನಾದ ರಾಜನು ಅರವತ್ನಾಲ್ಕು ರತ್ನಗಂಬಳಿಗಳನ್ನೂ ಕೊಟ್ಟನು. ಆ ತರುವಾಯ ಆಭರಣಗಳಿಂದ ಸಾಲಂಕೃತನಾದ ಶ್ರೀನಿವಾಸನಿಗೆ ಕನ್ಯಾದಾನ ಮಾಡಿದನು. ಆಗ ಸಾಕ್ಷಾತ್ ಬೃಹಸ್ಪತ್ಯಾಚಾರ್ಯರು ಕನ್ಯೆಯ ಪ್ರವರವನ್ನು ಹೇಳಿದರು.

ಬೃಹಸ್ಪತಿ :- ಅತ್ರಿ ಋಷಿಗಳಗೋತ್ರದಲ್ಲಿ ಜನಿಸಿದ, ಸುವೀರರಾಜನ ಮರಿಮಗಳಾದ, ಸುಧರ್ಮರಾಜನ ಮೊಮ್ಮಗಳಾದ, ಆಕಾಶರಾಜನ ಮಗಳಾದ ಕಮಲದಂತೆ ಕಣ್ಣುಗಳುಳ್ಳ, ಪದ್ಮಾವತಿಯೆಂಬ ಕನ್ಯೆಯನ್ನು ಎಲೈ ಶ್ರೀಗೋವಿಂದ ಸ್ವೀಕರಿಸು.

ಹೇ ಜನಕರಾಜ! ಹೀಗೆ ದೇವಗುರು ಬೃಹಸ್ಪತ್ಯಾಚಾರ್ಯರು ಕನ್ಯಾಪ್ರವರವನ್ನು ಹೇಳಲು, ವಧೂವರರ ಮಧ್ಯದಲ್ಲಿ ರತ್ನಮಯಶಾಲನ್ನೂ ಅಡ್ಡಹಿಡಿದರು. ಆಗ ಗಂಡಿನ ಕಡೆಯ ಪುರೋಹಿತರಾದ ವಸಿಷ್ಠಋಷಿಗಳು ವರನ ಪ್ರವರವನ್ನಿಂತು ಉಚ್ಚರಿಸಿದರು.

ವಸಿಷ್ಠ:- ಯಯಾತಿ ಮಹಾರಾಜನ ಮರಿಮಗನಾದ, ಅತಿ ತೇಜಸ್ವಿಯಾದ ಶೂರಸೇನ ಮಹಾರಾಜನ ಪೌತ್ರನಾದ, ವಸುದೇವ ಮಹಾರಾಜನ ಪುತ್ರನಾದ, ವಸಿಷ್ಠಗೋತ್ರೋದ್ಭವನಾದ, ಶ್ರೀವೇಂಕಟೇಶನಿಗೆ, ಅತ್ರಿಗೋತ್ರಸಂಜಾತಳಾದ, ಸರ್ವಾಭರಣಭೂಷಿತಳಾದ ಪದ್ಮಾವತಿ ನಾಮಕಳಾದ ಕನ್ಯೆಯನ್ನು, ಎಲೈ ಆಕಾಶರಾಜ! ನಿನ್ನ ಕುಮಾರಿಯನ್ನು ನಾವು ಸ್ವೀಕರಿಸುತ್ತೇವೆ.

ಹೀಗೆ ಕನ್ಯಾ-ವರರ ಪ್ರವರಗಳನ್ನು ಉಚ್ಚರಿಸಿದ ಮೇಲೆ ಕನ್ಯಾದಾನ ಪರಾಯಣನಾದ ಆಕಾಶರಾಜನು ಧರಣೀದೇವಿಯಿಂದೊಡಗೂಡಿ, ಅತ್ಯಂತ ಹರ್ಷದಿಂದ ಸರ್ವೋತ್ತಮನಾದ ಶ್ರೀನಿವಾಸನನ್ನು ಕುರಿತು ''ಹೇ ಪುರುಷೋತ್ತಮ! ನನ್ನ ಈ ಕನ್ಯೆಯನ್ನು ನಿನಗೆ ಪ್ರದಾನ ಮಾಡುತ್ತಿದ್ದೇನೆ. ಸ್ವೀಕರಿಸು'' ಎಂದು ಹೇಳಿ, ಧರಣೀದೇವಿಯು ಮಂತ್ರಪೂತವಾದ ಸ್ವಾಮಿತೀರ್ಥದ ಜಲವನ್ನು ಧಾರಾಕಾರವಾಗಿ ಹಾಕುತ್ತಿರಲು ಅದನ್ನು ಶ್ರೀನಿವಾಸನ ಬಲಕರದಲ್ಲಿ ಬಿಟ್ಟನು. ಅನಂತರ ಪದ್ಮಾವತಿಯನ್ನು ಪ್ರದಾನ ಮಾಡಿದನು (ಕನ್ಯಾದಾನ ಮಾಡಿದನು). ಆ ಬಳಿಕ ಆಕಾಶರಾಜನು ಪುರೋಹಿತರಿಂದ ಯುಕ್ತನಾಗಿ ವಿಧಿ-ನಿಯಮಗಳನ್ನು ನೆರವೇರಿಸಿದನು ಮತ್ತು ಸುಗಂಧ, ವಸ್ತ್ರ, ಅನುಲೇಪನಾದಿಗಳಿಂದ ಶ್ರೀನಿವಾಸನನ್ನು ಪೂಜಿಸಿ, ವಾಸುದೇವನ ಕರಕಮಲದಲ್ಲಿ ಕಂಕಣವನ್ನು ಕಟ್ಟಿದನು. ಬೃಹಸ್ಪತ್ಯಾಚಾರ್ಯರು ಪದ್ಮಾವತಿಯ ಕರಾಂಬುಜದಲ್ಲಿ ಕಂಕಣಬಂಧನಮಾಡಿದರು. ಅದೇ ಪ್ರಕಾರವಾಗಿ ಪ್ರಭುವಾದ ಶ್ರೀನಿವಾಸನಿಂದ ಅವರು ವಿವಾಹ ಸಂಬಂಧಿಯಾದ ಮಂಗಳಸೂತ್ರವನ್ನು ಪದ್ಮಾವತಿಯ ಕೊರಳಿಗೆ ಕಟ್ಟಿಸಿದರು.

ಆಗ ಸುಮಂಗಲೆಯರು ಹರಿಸಿದರು - ''ಮಂಗಳಾಂಗಿಯಾದ ಪದ್ಮಾವತಿ! ಸಾವಿತ್ರಿದೇವಿಯಂತೆ ನೀನು ಬಹುಪುತ್ರವತಿಯಾಗು. ಸಮಸ್ತ ಜಗತ್ತಿಗೂ ಮಂಗಳದಾಯಕಳಾದ ತಾಯಿಯಾಗು'' ಹೀಗೆ ಮುತ್ತೈದೆಯರು ಮಂಗಳಾಶೀರ್ವಾದಪೂರ್ವಕ ಗಾನಮಾಡುತ್ತಿರಲು, ಭೂಸುರರು, ಮಹನೀಯನಾದ ಆಕಾಶರಾಜ-ಮುಂತಾದವರ ಕರದಿಂದ ಮಂಗಳಸೂತ್ರವನ್ನು ಮುಟ್ಟಿಸಿ ಶ್ರೀನಿವಾಸನು -

**''ಮಾಂಗಲ್ಯಂ ತಂತುನಾನೇನ ಜಗಜ್ಜೀವನಹೇತುನಾ ।**
**ಕಂಠೇ ಬಧ್ನಾಮಿ ಸುಭಗೆ ! ಚಿರಂಜೀವ ಮಯಾಸಹ'' ।।**

*''ಜಗತ್ತಿನ ಜೀವನಕ್ಕೆ ಕಾರಣವಾಗಿರುವ ಈ ಮಂಗಳಸೂತ್ರವನ್ನು ಎಲೈ ಪದ್ಮಾವತಿ! ನಿನ್ನ ಕೊರಳಲ್ಲಿ ಕಟ್ಟುತ್ತೇನೆ. ನೀನು ನನ್ನ ಸಹಧರ್ಮಿಣಿಯಾಗಿ ನನ್ನ ಜೊತೆಯಲ್ಲಿ ಚಿರಕಾಲ ಬಾಳು!''* - ಎಂಬೀ ಮಂತ್ರವನ್ನು ಹೇಳಿ ಶ್ರೀನಿವಾಸನು ಪದ್ಮಾವತಿಯ ಕಂಠದಲ್ಲಿ ಮಂಗಳಸೂತ್ರವನ್ನು ಕಟ್ಟಿದನು.

ಆ ತರುವಾಯ ವಸಿಷ್ಠಋಷಿಗಳು, ಪಂಡಿತರು, ಮುನಿಗಳು, ಇವರಿಂದ ಸಹಿತರಾಗಿ, ಪದ್ಮಾವತಿಯು ತನ್ನ ಬೊಗಸೆಯಿಂದ ಶ್ರೀನಿವಾಸನ ಕರಪುಟದಲ್ಲಿ ಲಾಜಾವನ್ನು(ಅರಳನ್ನು) ಹಾಕಲು, ಶ್ರೀನಿವಾಸನಿಂದ 'ಲಾಜಾಹೋಮ' ವನ್ನು ಯಜುಶ್ಶಾಖಾಕ್ರಮದಿಂದ ವಿದ್ಯುಕ್ತವಾಗಿ ಮಾಡಿಸಿದರು. ಬಳಿಕ ವಸಿಷ್ಠರು ವಿವಾಹಕ್ಕೆ ಸಂಬಂಧಿಸಿದ ಸಕಲ ಕಾರ್ಯ

ಕಲಾಪಗಳನ್ನೂ ಪೂರ್ಣಗೊಳಿಸಿದರು. ಅನಂತರ ರಾಜಪುರೋಹಿತರಾದ ಬೃಹಸ್ಪತ್ಯಾಚಾರ್ಯರು ಸ್ವಸ್ತಿವಾಚನ ಪೂರ್ವಕವಾಗಿ ಸಕಲ ಋಷಿ-ಮುನಿಗಳ ಕರಪುಟಗಳಿಗೆ ನವರತ್ನಮಯ ಮಂತ್ರಾಕ್ಷತೆಯನ್ನು ನೀಡಲು, ವೇದವಿದ್ಯಾವಿಶಾರದರಾದ ಆ ಋಷಿ-ಮುನಿಗಳು ಶ್ರೀನಿವಾಸ-ಪದ್ಮಾವತಿಯರ ಶಿರಸ್ಸಿನಲ್ಲಿ ರತ್ನಮಂತ್ರಾಕ್ಷತೆಗಳನ್ನು ಹಾಕಿ, ವೇದಮಂತ್ರಗಳಿಂದ ಆಶೀರ್ವದಿಸಿದರು.

ಆವೊಂದು ಶುಭಸಂದರ್ಭವು ಆಕಾಶರಾಜನ ಪುರನಿವಾಸಿಗಳಾದ ಸಮಸ್ತ ಮಾನವರಿಗೆ ಮಹಾಸಮಾರಂಭವಾಗಿ ಪರಿಣಮಿಸಿತು. ಆ ಮಂಗಳ ವಿವಾಹಸಮಯದಲ್ಲಿ ಆಕಾಶರಾಜನು ಪರಮಾನಂದತುಂದಿಲನಾಗಿ ಬ್ರಹ್ಮಜ್ಞಾನಿಗಳಾದ ಋಷಿ-ಮುನಿಗಳಿಗೆ ಬ್ರಾಹ್ಮಣರಿಂದ ತಾಂಬೂಲ-ದಕ್ಷಿಣೆಗಳನ್ನು ಕೊಡಿಸಿದನು. ಎಲೈ ಜನಕರಾಯ! ಆಕಾಶರಾಜನು ಒಂದು ಕೋಟಿ ಗೋವುಗಳನ್ನೂ, ಹತ್ತು ಸಹಸ್ರ ಅಶ್ವಗಳನ್ನೂ, ಅದರಂತೆ ವಸ್ತ್ರಗಳ ಸಮೂಹವನ್ನೂ ಬ್ರಾಹ್ಮಣರಿಗೆ ನೀಡಿದನು. ದಶಮಿಯ ದಿವಸ ಇಂತು ನಾರಾಯಣಪುರದಲ್ಲಿ ಬಹುವೈಭವ-ಸಂಭ್ರಮಗಳಿಂದ ಮತ್ತು ಉತ್ಸಾಹದಿಂದ ಮಹಾಸಮಾರಂಭವು ನೆರವೇರಿತು. ಅನಂತರ ಆಕಾಶರಾಜನು ಅಳಿಯ-ಮಗಳು ಇವರನ್ನು ''ಹರಿಭೂಮ'' ಪೀಠಗಳಲ್ಲಿ ಕೂಡಿಸಿ ಭೋಜನ ಮಾಡಿಸಿದನು. ಹರಿಭೂಮಕ್ಕಾಗಿ ವಿವಿಧ ಬಗೆಯ ಪಕ್ವಾನ್ನಗಳು, ಪಾಯಸ-ಚಿತ್ರಾನ್ನಗಳು, ತೊವ್ವೆ-ಸಾರು-ಹುಳಿ-ವಿವಿಧ ರಸಗಳು, ಭಕ್ಷ್ಯಗಳು, ತುಪ್ಪ, ಹಾಲು, ಸಕ್ಕರೆ, ಮೊಸರು ಮುಂತಾದವುಗಳನ್ನು ಮಾಡಿಸಲಾಗಿತ್ತು. ಗಂಡು-ಹೆಣ್ಣಿನ ಕಡೆ ಬೀಗರು, ವಧೂ-ವರರು ಸರಸಸಲ್ಲಾಪ - ನಗೆಚಟಾಕಿಗಳನ್ನಾಡುತ್ತಾ ಆನಂದದಿಂದ ಮೃಷ್ಟಾನ್ನ ಭೋಜನ ಮಾಡಿದರು. ಆ ಸಂದರ್ಭವು, ಅತಿರಂಜಕವೂ ಮನೋಜ್ಞವೂ ಆಗಿದ್ದಿತು!

ಶ್ರೀಹರಿಯು ಪುರೋಹಿತರಾದ ವಸಿಷ್ಠರು, ತಾಯಿ-ಬಕುಳಾದೇವಿ, ಪತ್ನಿ-ಲಕ್ಷ್ಮೀದೇವಿ, ಪುತ್ರ-ಬ್ರಹ್ಮದೇವ, ಇವರೊಡನೆ 'ಭೂಮ'ದಲ್ಲಿ ಕುಳಿತು ನೂತನ ವಧುವಿನೊಡನೆ ಭೋಜನಮಾಡಿದನು. ಧರ್ಮಾತ್ಮನಾದ ಆಕಾಶರಾಜನೂ ಸಹ ಶ್ರೀನಿವಾಸನೊಡನೆ ಕುಳಿತು ಭೋಜನ ಮಾಡಿದನು. ಧರಣೀದೇವಿಯು, ಶ್ರೀಮಹಾಲಕ್ಷ್ಮೀ, ಬಕುಳಮಾಲಿಕೆ, ಪತಿ, ಪುತ್ರರೊಡನೆ ವಿವಿಧ ರಸೋಪೇತವಾದ ಮೃಷ್ಟಾನ್ನಭೋಜನ ಮಾಡಿದಳು. ಹೇ ಜನಕಮಹಾರಾಜ! ಇದಾದನಂತರ ಮರುದಿನ ಪ್ರಾತಃಕಾಲದಲ್ಲಿ ಸುಮಂಗಲೆಯರು ದೇವತೆಗಳಿಗೆ ಸ್ವಾಮಿಯಾದ ಶ್ರೀನಿವಾಸನಿಗೆ ಸ್ವಚ್ಛವಾದ ಸುವಾಸನೆಯ ತೈಲದಿಂದ ಮಂಗಳ ಸ್ನಾನ ಮಾಡಿಸಿದರು. ಆ ಸಮಯದಲ್ಲಿ ವಧೂವರರು ಪರಸ್ಪರ ಮೈ ಉಜ್ಜುವುದು, ಹಾಸ್ಯ-ಮಂದಹಾಸ ರಂಜಿತರಾದ ಪದ್ಮಾವತಿ-ಶ್ರೀನಿವಾಸರಿಂದ ಒಬ್ಬರಿಗೊಬ್ಬರು ಪರಿಮಳದ ತೈಲ ಹಚ್ಚುವುದು, ಮೈತಿಕ್ಕುವುದು ಮುಂತಾಗಿ ಮಂಗಳಾಭ್ಯಂಜನ ಮಾಡಿಸಿದರು. ಅದಾದ ಮೇಲೆ ಆಕಾಶರಾಜನು ಭೂಸುರರು, ದೇವತೆಗಳು, ಹೆಂಗಸರು-ಗಂಡಸರು, ಇನ್ನುಳಿದ ಜನರಿಗೂ ಮೃಷ್ಟಾನ್ನ ಭೋಜನವನ್ನು ಮಾಡಿಸಿ ವಿವಿಧ ಭಕ್ಷ್ಯ-ಭೋಜ್ಯ, ಪಕ್ವಾನ್ನ, ವಿವಿಧ ಗುಡಾಪೂಪ, ಕಜ್ಜಾಯಗಳು, ತೊವ್ವೆ-ಸಾರು, ಪಲ್ಯಗಳನ್ನು ಯಥೇಚ್ಛವಾಗಿ ಬಡಿಸಿ ಭೂಸುರಾದಿಗಳು ತೃಪ್ತರಾಗುವಂತೆ ಭೋಜನ ಮಾಡಿಸಿದನು. ಆಕಾಶರಾಜನ ಔದಾರ್ಯವೆಷ್ಟಿತ್ತೆಂದರೆ, ಆ ಭೋಜನಕಾಲದಲ್ಲಿ ಮಹಾರಾಜನು ತುಪ್ಪ, ಹಾಲು, ಮೊಸರುಗಳ ಕಾಲುವೆಯನ್ನೇ ಹರಿಸಿಬಿಟ್ಟನು! ತರುವಾಯ ಉಂಡುಳಿದು, ಎತ್ತಿಟ್ಟಿದ್ದನ್ನೂ, ನಂತರ ಹೊರಭಾಗದಲ್ಲಿ ಊಟ ಮಾಡಿದ ಪುರುಷರು ಊಟ ಮಾಡಿ ಹೆಚ್ಚಾಗಿ ಎಲೆಯಲ್ಲೇ ಉಳಿದಿದ್ದ ಬಹುವಾದ ಅನ್ನಾದಿಗಳಿಂದ ಕೂಡಿದ ಎಂಜಲು ಎಲೆಗಳ ಸಮೂಹವನ್ನು ಕಬಳಿಸಲು ಆ ಪ್ರದೇಶದಲ್ಲೆಲ್ಲಾ ನಾಯಿಗಳ ಗುಂಪು, ರಾಕ್ಷಸರ ಗುಂಪುಗಳು ನಿಬಿಡವಾಗಿ ಹೋಗಿದ್ದಿತು! ಹೀಗೆ ನಾಲ್ಕು ದಿನಗಳ ಕಾಲ ಜನಜಂಗುಳಿಯಿಂದ ಅಲ್ಲಿ ಅತ್ಯಂತ ಕೋಲಾಹಲವುಂಟಾಯಿತು.

ಇದರಂತೆ ಆ ಭವ್ಯ ಕಲ್ಯಾಣ ಮಂಟಪದ ಅಂಗಳದಲ್ಲಿ ಪ್ರತಿದಿನವೂ ವಸಂತೋತ್ಸವ ರೂಪವಾಗಿ ಓಕುಳಿಯ ಎರಚಾಟ, ಸ್ನಾನ, ಮಂಗಳಸ್ನಾನ, ವಿನೋದ, ಪರಿಹಾಸ, ನಗೆಚಾಟಿಕೆಯ ಸ್ಪರ್ಧೆ-ಇತ್ಯಾದಿಗಳು ನೆರವೇರುತ್ತಿತ್ತು. ಐದನೆಯ

ದಿನ ಪ್ರಾತಃಕಾಲ ಸುಮಂಗಲಿಯರು ದೀಪಜ್ವಾಲಾವಿರಾಜಿತವಾದ ನಾಲ್ಕು ಕಳಶಗಳನ್ನಿಟ್ಟರು. ಶುಭಕರ ರತ್ನಸಿಂಹಾಸನದಲ್ಲಿ ವಧೂವರರಾದ ಪದ್ಮಾವತಿ-ಶ್ರೀನಿವಾಸರನ್ನು ಮಂಡಿಸಿ ಪುರೋಹಿತರು ''ನಾಕಬಲಿ'' ಎಂಬ ವಿದ್ಯುಕ್ತಕಾರ್ಯವನ್ನು ನೆರವೇರಿಸಿದ ಮೇಲೆ ಆಕಾಶನರಪತಿಯು ಅಳಿಯನಾದ ಶ್ರೀರಮಾನಿವಾಸನನ್ನು ವೈಭವದಿಂದ ಪೂಜಿಸಿದನು.

ಆಗ ಧರ್ಮಿಷ್ಠನಾದ ಆಕಾಶರಾಜನು ತನ್ನ ಕರದಲ್ಲಿ ಕ್ಷೀರಪಾತ್ರೆಯನ್ನು ಹಿಡಿದು, ಶ್ರೀನಿವಾಸನ ತಾಯಿಯಾದ ಬಕುಳಾದೇವಿಗೆ ಸೀರೆ, ಕಣ, ಅಲಂಕಾರ ಆಭರಣಗಳನ್ನು ಉಡುಗೊರೆಯಾಗಿ ನೀಡಿ, ಶಾಸ್ತ್ರೋಕ್ತ ಪ್ರಕಾರವಾಗಿ ಸಂಭಾವಿಸಿ, ಹಾಲಿನಿಂದ ಬಕುಳಾದೇವಿಯ ನಾಭಿಪ್ರದೇಶವನ್ನು ತೋಯಿಸಿ ಕುಮಾರಿ ಪದ್ಮಾವತಿಯನ್ನು ವ್ಯಥೆಯಿಂದ ಕೂಡಿದವನಾಗಿ ಒಪ್ಪಿಸಿಕೊಟ್ಟನು. ಆ ಬಳಿಕ ಶ್ರೀಮಹಾಲಕ್ಷ್ಮಿಯ ನಾಭಿಮೂಲವನ್ನು ತುಪ್ಪ-ಹಾಲುಗಳಿಂದ ಅಭಿಷೇಚಿಸಿ ಗದ್ಗದ ಕಂಠದಿಂದ ರೋದಿಸುತ್ತಾ ಪದ್ಮಾವತಿಯನ್ನು ಒಪ್ಪಿಸಿಕೊಟ್ಟನು. ಆ ಬಳಿಕ ಶ್ರೀಮಹಾಲಕ್ಷ್ಮಿಯ ನಾಭಿಮೂಲವನ್ನು ತುಪ್ಪ-ಹಾಲುಗಳಿಂದ ಅಭಿಷೇಚಿಸಿ ಗದ್ಗದ ಕಂಠದಿಂದ ರೋದಿಸುತ್ತಾ ಪದ್ಮಾವತಿಯನ್ನು ಒಪ್ಪಿಸಿಕೊಟ್ಟನು. ಅನಂತರ ರಾಣಿಯೊಡನೆ ಆಕಾಶಭೂಪತಿಯು ಶ್ರೀಲಕ್ಷ್ಮೀದೇವಿಗೆ ಆವಾಸಭೂತನಾದ ಶ್ರೀವಾಸುದೇವನಿಗೆ ಕುರರೀಪಕ್ಷಿಯಂತೆ ಅಳುತ್ತಾ ಮಹನೀಯಳಾದ ರಾಣಿ ಧರಣೀದೇವಿಯು ಪುತ್ರಿಯ ಕರವನ್ನು ಅಳಿಯನ ಕರದಲ್ಲಿಟ್ಟು,ಶ್ರೀನಿವಾಸನ ನಾಭಿಮೂಲದಲ್ಲಿ ಹಾಲು ಸವರಿ ಅತಿದುಃಖಾರ್ತಳಾಗಿ ಕಣ್ಣೀರು ಸುರಿಸುತ್ತಾ ದುಃಖಪೂರ್ಣ ನೇತ್ರಗಳಿಂದ ''ಜೀವತಿ ರುದಂತೀ'' ಎಂಬ ಮಂತ್ರದಿಂದ ಮಗಳಾದ ಪದ್ಮಾವತಿಯನ್ನು ಒಪ್ಪಿಸಿಕೊಟ್ಟು ಶ್ರೀಹರಿಯನ್ನು ಕುರಿತು ''ಹೇ ಜಗತ್ಪ್ರಭುವಾದ ಶ್ರೀನಿವಾಸ! ಒಂಭತ್ತು ತಿಂಗಳು ಹೊತ್ತು, ಹೆತ್ತು ಪಾಲಿಸಿದ, ಕರುಳಿನ ಕುಡಿಯಾದ ನನ್ನ ಕುಮಾರಿಯನ್ನು ನಿನ್ನ ಸ್ವಾಧೀನಕ್ಕೆ ಒಪ್ಪಿಸಿ ಕೊಟ್ಟಿದ್ದೇನೆ. ಇನ್ನು ಮುಂದೆ ಇವಳ ಸಂರಕ್ಷಣಾದಿ ಸಮಸ್ತ ಭಾರವು ನಿನಗೇ ಸೇರಿದೆ'' ಎಂದು ನುಡಿದು ಧರಣೀದೇವಿಯು ಶ್ರೀನಿವಾಸನಿಗೆ ಪದ್ಮಾವತಿಯನ್ನು ಒಪ್ಪಿಸಿಕೊಟ್ಟಳು.

ಆಗ ಆಕಾಶರಾಜನು ಪತ್ನಿಯ ರೋದನವನ್ನು ಕಂಡು ವ್ಯಥೆಗೊಂಡು ಪುತ್ರಿಯಾದ ಪದ್ಮಾವತಿಯನ್ನು ಆಲಿಂಗಿಸಿ, ದೀನವದನನಾಗಿ, ''ಹಾ ಪುತ್ರಿ! ನಾನು, ಮಂದಭಾಗ್ಯನಮ್ಮ, ಮಂಗಳಾಂಗಿ! ನೀನು ಪತಿಯ ಮನೆಗೆ ತೆರಳಿದ ಮೇಲೆ ನನ್ನ ಬದುಕು ಅಸ್ಥಿರವಾಗುವುದು! ರಾಜಕುಮಾರಿ! ನೀನು ಕ್ರೀಡಿಸುತ್ತಿದ್ದ, ಸುಳಿದಾಡುತ್ತಿದ್ದ, ಕ್ರೀಡಾಗೃಹ, ಭೋಜನ ಗೃಹಗಳಲ್ಲಿ ನಿನ್ನ ಸಹೋದರನಾದ ವಸುಧಾನನು ಹೇಗೆ ತಾನೆ ಆಟವಾಡಿಯಾನು? ಊಟವನ್ನೆಂತು ಮಾಡುವನು?'' ಎಂದು ಬಡಬಡಿಸಹತ್ತಿದನು. ಆಗ ಅಣ್ಣನ ವ್ಯಥೆಯನ್ನು ನೋಡಿ ತೋಂಡಮಾನರಾಜನು ದುಃಖದಿಂದ ''ನಾವು ದರಿದ್ರರು, ಭಾಗ್ಯಹೀನರು, ಕೃಪಣರು, ದೀನಚೇತನರು, ನಾವು ಮರಣೋನ್ಮುಖರು ಇದರಲ್ಲಿ ಸಂದೇಹವಿಲ್ಲ! ಕುಮಾರಿ, ಪದ್ಮಾವತಿ! ನಿನ್ನಂತಹ ಮಂಗಳಕರಳು ದುರ್ಲಭಳು. ನಿನ್ನ ವಿಯೋಗ ವ್ಯಥೆಯಿಂದ ನಾವಿದನ್ನು ನಿಶ್ಚಯಿಸಿದ್ದೇವೆ'' ಹೀಗೆ ಹೇಳಿ ಅತ್ತನು.

ಇಂತು ಖತಿಗೊಂಡು ಅಳುತ್ತಿರುವ ಅವರನ್ನು ನೋಡಿ ಪದ್ಮಾವತಿಯ ಅನುಜನಾದ ವಸುಧಾನನು ಬಹು ವ್ಯಥೆಯಿಂದ ದೀನವದನಳಾಗಿರುವ ಅಕ್ಕ ಪದ್ಮಾವತಿಯನ್ನು ತಬ್ಬಿಕೊಂಡು ಪುನಃ ಪುನಃ ಅಳುತ್ತಾ ''ಸಹೋದರಿ, ಲೋಕದಲ್ಲಿ ದ್ರವ್ಯಾರ್ಜನೆಯಲ್ಲಿಯೇ ತತ್ಪರಮನಸ್ಸುಳ್ಳ ಮಾನವನು ಹೇಗೆ ತನ್ನ ಪತ್ನೀ ಪುತ್ರರನ್ನು ತೊರೆದು ಹೊರಟುಹೋಗುವನೋ ಅದರಂತೆ ನನ್ನನ್ನು ತ್ಯಜಿಸಿ ಎಲ್ಲಿಗೆ ಹೋಗುತ್ತಿರುವೆಯಮ್ಮಾ?'' ಎಂದು ದುಃಖತಪ್ತನಾಗಿ ಅತ್ತನು.

ಜನಕಮಹಾರಾಜ! ಈ ಬಗೆಯ ವಿಯೋಗದುಃಖಪ್ರಸಂಗದ ಆ ದೃಶ್ಯವು ದೇವತೆಗಳಿಗೂ ಕಶ್ಯಪಾದಿ ಋಷಿಗಳಿಗೂ ಅತಿದಾರುಣವಾದ ವ್ಯಥೆಯನ್ನುಂಟುಮಾಡಿತು. ದೀನನಾಗಿ ಅಳುತ್ತಿರುವ ಆಕಾಶರಾಜನನ್ನು ಕಂಡು ಸಜ್ಜನಾಶ್ರಯನಾದ ಶ್ರೀನಿವಾಸನು ಅರ್ಜುನನ ಮಡದಿಯಾದ ತನ್ನ ಪ್ರಿಯ ಭಗಿನೀ ಸುಭದ್ರೆಯು ಪತಿಗೃಹಕ್ಕೆ

ಹೊರಟಾಗಿನ ಸಂದರ್ಭವನ್ನು ಸ್ಮರಿಸಿಕೊಂಡು ದೇವಕಿನಂದನನಾದ ಶ್ರೀಹರಿಯು ತಾನೂ ಅಳಹತ್ತಿದನು. ಶ್ರೀನಿವಾಸನ ಆ ವಿಡಂಬನ, ನಟನೆಯು ಅದ್ಭುತವಾಗಿದ್ದಿತು. ಇಂತು ಲೋಕರೀತಿಯನ್ನು ಪ್ರಕಟಿಸಿ ತೋರಿ ಅನಂತರ ಲಕ್ಷ್ಮೀ ಪದ್ಮಾವತಿಯರೊಡನೆ ಐರಾವತವನ್ನೇರಿಕುಳಿತು ಬ್ರಹ್ಮರುದ್ರಾದಿಗಳಿಂದ ಸಹಿತನಾಗಿ ನಿಜಮಂದಿರಕ್ಕೆ ತೆರಳಿ ಅಲ್ಲಿಂದ ತನ್ನ ವಾಸಸ್ಥಾನಕ್ಕೆ ಹೊರಡಲಾಶಿಸಿದನು. ಗರುಡನ ಭುಜವೇರಿ ಪತ್ನಿಯಾದ ಪದ್ಮಾವತಿಯನ್ನು ಗರುಡನಮೇಲೇರಿಸಿಕೊಂಡು ಪ್ರಯಾಣಬೆಳೆಸಲು ಉತ್ಸುಕನಾದ ಶ್ರೀಹರಿಯು ಅತ್ತೆಮಾವಂದಿರ ಆಶೀರ್ವಾದ ಪಡೆಯಲು ಮತ್ತೆ ಅರಮನೆಗೆ ಬಂದನು. ಆಕಾಶರಾಜ ಧರಣೀದೇವಿಯರಿಗೆ ನಮಸ್ಕರಿಸಿದ ಶ್ರೀನಿವಾಸನು ಆಶೀರ್ವದಿಸುವಂತೆ ಕೋರಿದನು. ಪತ್ನಿಯೊಡನೆ ಆಕಾಶರಾಜನು ಶ್ರೀವಾಸುದೇವನಿಗೆ, ''ಪ್ರಭು, ಸರ್ವಲೋಕಧುರಂಧರ, ದೀರ್ಘಾಯುಷ್ಯವಂತನಾಗು'' ಎಂದಾಶೀರ್ವದಿಸಿ ಅಭಿನಂದಿಸಿದನು. ಧರಣೀದೇವಿಯು ''ಗೋವಿಂದ-ಪದ್ಮಾವತಿಯೊಡನೆ ನಮ್ಮ ಮನೆಯಲ್ಲಿ ಒಂದು ತಿಂಗಳಿದ್ದು ನಂತರ ಹೊರಡು. ಮಾಧವ ಇದು ನಿನ್ನ ಮಾವನ ನುಡಿಯೆಂದು ತಿಳಿದು ಮಾವನ ಮಾತನ್ನು ಗೌರವಿಸು'' ಎಂದಳು.

ಆಗ ಶ್ರೀಕೃಷ್ಣನು ''ಮಹಾರಾಜ, ನನಗೆ ಈಗ ಬಹು ಅವಸರದ ಕಾರ್ಯವಿದೆ. ಆದ್ದರಿಂದ ಹೊರಡಲು ಅನುಮತಿ ನೀಡು. ಅದರಿಂದ ನೀನು ನನ್ನಲ್ಲಿ ಕೃಪೆತೋರಿದಂತಾಗುವುದು'' ಎಂದು ಹೇಳಿ ಶ್ರೀನಿವಾಸನು ಗರುಡನ ಭುಜವೇರಿ ಸಕಲದೇವತೆಗಳಿಂದ ಒಡಗೂಡಿ ಎಲ್ಲರಿಂದ ಬೀಳ್ಕೊಂಡು ಭಗವಾನ್ ವಾಸುದೇವನು ಪ್ರಯಾಣ ಬೆಳೆಸಿದನು. ಆಗ ರಾಜಧಾನಿಯ ಸಕಲ ಪ್ರಜಾಜನರು ವಿವಾಹಾರ್ಥವಾಗಿ ಬಂದಿದ್ದ ಇತರದೇಶೀಯರೂ ಸಹ ವ್ಯಾಕುಲಚಿತ್ತರಾಗಿ, ಕೋಟೆ, ಗೋಡೆ ಮತ್ತು ಗೋಪುರಗಳ ಮೇಲೆ ಹತ್ತಿ ನಿಂತು ಶ್ರೀನಿವಾಸನು ಪಯಣಿಸುತ್ತಿದ್ದುದನ್ನು ನೋಡುತ್ತಿದ್ದರು. ಆಗ ''ರಾಜಕುಲಾವಚತಂಸಳೂ, ಕಮಲನಯನೆಯೂ ಆದ ಪದ್ಮಾವತಿಯು ಧನ್ಯಳು. ನೋಡಿ, ಸಾಕ್ಷಾತ್ ಶ್ರೀಹರಿಯನ್ನು ಅನುಸರಿಸಿ ಹೋಗುತ್ತಿರುವಳು'' ಎಂದು ಪುರದ ಹೆಂಗಳೆಯರು ಪರಸ್ಪರ ಮಾತನಾಡಿಕೊಂಡರು.

ಎಲೈ ಜನಕರಾಜ! ಇದಾದನಂತರ ಆಕಾಶರಾಜನು ಶ್ರೀರಮಾಕಾಂತನಿಗೆ ಸಂಪ್ರದಾಯದಂತೆ ಬಗೆಬಗೆಯ ಪಾರಿತೋಷಕಗಳನ್ನು ಕಳುಹಿಸಿ ತಾನೂ ಹೊರಟನು. ಅಕ್ಕಿ (ಅರಳು)ಗಳ ಒಂದು ನೂರು ಚೀಲಗಳನ್ನು ಎತ್ತು ಕಟ್ಟಿದ ಗಾಡಿಗಳ ಮೇಲೇರಿಸಿ, ಅದರಂತೆ ವೃಷಭಗಳ ಮೇಲೆ ಉತ್ತಮವಾದ ಮುದ್ಗ ಧಾನ್ಯದ ಮೂವತ್ತು ಚೀಲಗಳನ್ನೂ, ಅತಿದೊಡ್ಡದಾದ ಬೆಲ್ಲದಮೂಟೆ, ಹುಣಸೇ ಹಣ್ಣಿನ ಮೂಟೆಗಳನ್ನೂ ಒಂದು ಸಾವಿರ ಭಾಂಡೆ (ಕೊಡ) ಹಾಲನ್ನೂ, ನೂರು ಮೊಸರಿನ ಭಾಂಡೆಗಳನ್ನು, ತುಪ್ಪ ತುಂಬಿದ ಐದು ನೂರು ಪಾತ್ರೆಗಳನ್ನೂ, ಮೆಂತ್ಯ, ಇಂಗು, ಉಪ್ಪು, ಎಣ್ಣೆ ತುಂಬಿದ ಪಾತ್ರೆಗಳನ್ನೂ, ಸಕ್ಕರೆ ತುಂಬಿದ ಎರಡುನೂರು ಕೊಡಗಳು, ಕುಂಬಳಕಾಯಿ, ಗೆಡ್ಡೆ, ಗೆಣಸುಗಳನ್ನೂ, ಮೆಣಸು, ನೆಲ್ಲಿಕಾಯಿ ಚೆಟ್ಟುಗಳನ್ನೂ, ಜೇನುತುಪ್ಪದ ಎರಡು ನೂರು ಗುಡಾಣಗಳನ್ನೂ, ಬಾಳೆ ಎಲೆಗಳು, ಅಡುಗಬ್ಬು, ಐದುಸಾವಿರ ಗೋವುಗಳನ್ನೂ, ನೂರುಜನ ಗೋಪಾಲಕರು, ಇನ್ನೂರು ಜನ ದಾಸಿಯರು, ಮುನ್ನೂರು ಜನ ಸೇವಕರುಗಳನ್ನೂ, ಇದರಂತೆ ವಿಧವಿಧ ವಸ್ತುಗಳು, ರತ್ನಗಳಿಂದ ಅಲಂಕೃತವಾದ ಮಂಚ, ರತ್ನಮಂಡಿತ ಸುಪತ್ರಿಕೆ, ಇವೇ ಮೊದಲಾದ ವರೋಪಚಾರರೂಪ ಪಾರಿತೋಷಕಗಳೊಡನೆ, ಮಗನಾದ ವಸುಧಾನನಿಂದ ಸಹಿತನಾಗಿ ಧರ್ಮಜ್ಞನೂ ಶ್ರೀನಿವಾಸಪರಾಯಣನೂ ಆದ ಆಕಾಶಭೂಪತಿಯು ಶ್ರೀನಿವಾಸನ ಸನ್ನಿಧಿಗೆ ಆಗಮಿಸಿದನು. ಮಾವನು ಬಂದುದನ್ನು ಕಂಡು ಜಗದೀಶನಾದ ಶ್ರೀನಿವಾಸನು ಎದ್ದು ನಿಂತು ಸ್ವಾಗತಿಸಿ ಇಂತೆಂದನು.

ಶ್ರೀನಿವಾಸ :- ಮಹಾರಾಜ! ಬಹುದೂರ ಮಾರ್ಗವನ್ನು ಕ್ರಮಿಸಿ ಇಲ್ಲಿಗೆ ನೀನೇತಕ್ಕೆ ಬಂದಿದ್ದೀಯೆ. ಪಾಪರಹಿತನಾದ ರಾಜೋತ್ತಮನೇ! ನಿನ್ನ ಮಗನಾದ ನನಗೆ ಇವೆಲ್ಲವನ್ನೂ ಕೊಡಬೇಕೇನು? ನೀನು ಕನ್ಯೆಯನ್ನು ಪ್ರದಾನ ಮಾಡಿದೆ. ಅದರಿಂದ ನನಗೆ ಸುಖವುಂಟಾಯಿತು. ರಾಜನ್ ನೀನೆಷ್ಟು ಸುಕೃತವನ್ನು ಗಳಿಸಿದೆ! ಕನ್ಯಾದಾನ ಮಾಡಿ ಬಹುಪುಣ್ಯ

ಸಂಪಾದಿಸಿದ್ದೀಯೆ! ಪ್ರೀತ್ಯಾಸ್ಪದನಾದ ದೊರೆಯೇ! ನನಗಂತೂ ಅತುಲ ಸಂತೋಷ ಉಂಟಾಗಿದೆ. ಇದರಲ್ಲಿ ಸಂದೇಹವಿನಿತಿಲ್ಲ. ಮಹಾರಾಜ, ನಿನ್ನ ಮನದ ಅಭೀಷ್ಟವೇನಿದೆ ಹೇಳು. ದಾನಾದಾನ ವಿಷಯದಲ್ಲಿ ಸಂದೇಹಪಡಬೇಡ. ನಿನ್ನ ಮನೋಕಾಮನೆಯನ್ನು ಈಡೇರಿಸುತ್ತೇನೆ. ನಿನ್ನ ಅಭಿಷ್ಟವೇನು ತಿಳಿಸು.

ಆಕಾಶರಾಜ:- ಹೇ ಕೇಶವ! ನಿನ್ನ ಅನುಗ್ರಹದಿಂದ ನಮಗೆ ಸಕಲವೂ ಮಂಗಳವು. ಜಗನ್ನಾಥ, ನಾನು ಬೇರಾವುದನ್ನೂ ನಿನ್ನಲ್ಲಿ ಬೇಡುವುದಿಲ್ಲ. ಶ್ರೀನಿವಾಸ! ಕುಟುಂಬ ಸಹಿತನಾದ ನನಗೆ ನಿನ್ನ ಚರಣಕಮಲಗಳಲ್ಲಿ ಸ್ಥಿರವಾದ ಭಕ್ತಿಯೊಂದನ್ನು ಮಾತ್ರ ದಯಪಾಲಿಸು ಅಷ್ಟೇ ಸಾಕು.

ಮಹನೀಯನಾದ ಮಾವನ ಮಾತನ್ನು ಕೇಳಿ ಶ್ರೀಹರಿಯು ಆಗ ಆಕಾಶರಾಜನಿಗೆ ಸಾಯುಜ್ಯಮೋಕ್ಷವನ್ನು ಕರುಣಿಸಿದನು ಮತ್ತು ಶ್ರೀಮಧುಸೂದನನು ಪ್ರಿಯಸತಿಯ ಸಹೋದರನಾದ ವಸುಧಾನನಿಗೆ ಪ್ರೀತಿಯಿಂದ ತಾನು ಹೊದ್ದಿದ್ದ ಪೀತಾಂಬರವನ್ನು ಅನುಗ್ರಹಿಸಿದನು. ಆಕಾಶರಾಜನು ಅಳಿಯನ ಅಪ್ಪಣೆ ಪಡೆದು ಮಮತೆಯ ಮಗಳನ್ನು ನೋಡಲು ಅವಳ ಮಂದಿರಕ್ಕೆ ಬಂದು ಅಲ್ಲಿ ಅವಳನ್ನು ಕಂಡು ''ಕುಮಾರಿ, ಪದ್ಮಾವತಿ ನಾನು ಬಂದ ಕಾರ್ಯವಾಯಿತು. ನಾನೀಗ ನಾರಾಯಣಪುರಕ್ಕೆ ಹೊರಟಿದ್ದೇನೆ. ಶ್ರೀಹರಿಪ್ರಿಯಳಾದ ಪದ್ಮಾವತಿ, ಪತಿಯೊಡನೆ ಬಹುಕಾಲ ವಿಹರಿಸುತ್ತಾ ಸುಖವಾಗಿ ಬಾಳಮ್ಮ. ಪತಿಯು ಮಲಗಿದ ಮೇಲೆ ಅವನ ಸೇವೆಮಾಡಿ ನೀನು ಮಲಗು. ಪತಿಯು ಏಳುವುದಕ್ಕೆ ಮೊದಲೇ ಎದ್ದು ಅವನನ್ನು ಸೇವೆಮಾಡು'' ಎಂದು ಆಜ್ಞಾಪಿಸಿ ಕಮಲಲೋಚನಳಾದ ಪದ್ಮಾವತಿಯನ್ನು ಸಾಂತ್ವನಗೊಳಿಸಿದನು. ಪದ್ಮಾವತಿಯು ಪಿತನ ಆಣತಿಯಂತೆ ವರ್ತಿಸುವುದಾಗಿ ವಿಜ್ಞಾಪಿಸಿ ಪತಿಯ ಬಳಿಗೆ ತಂದಳು. ಆಕಾಶಭೂಪತಿಯು ಗದ್ಗದ ಕಂಠದಿಂದ ಕಣ್ಣೀರಿಡುತ್ತಾ ನಾರಾಯಣಪುರಕ್ಕೆ ಪ್ರಯಾಣ ಬೆಳೆಸಿದನು.

ಅನಂತರ ಶ್ರೀನಿವಾಸನು ಬ್ರಹ್ಮ-ರುದ್ರಾದಿಗಳೊಡನೆ ಸುವರ್ಣಮುಖೀ ನದೀತೀರಕ್ಕೆ ಬಂದು ಅಲ್ಲಿ ವಾಸಮಾಡಿದನು. ಎಲೈ ಜನಕರಾಜ, ದೇವೋತ್ತಮನಾದ ಶ್ರೀನಿವಾಸನು ''ಆರು ತಿಂಗಳವರೆಗೆ ನಾನು ದೀಕ್ಷೆ ವಹಿಸಿದ್ದೇನೆ. ಆದುದರಿಂದ ನಾನೀಗ ವೇಂಕಟಗಿರಿಯನ್ನು ಹತ್ತುವುದಿಲ್ಲ'' ಎಂದು ನಿಶ್ಚಯಿಸಿ ಅಗಸ್ತ್ಯಮುನಿಗಳ ಆಶ್ರಮಕ್ಕೆ ಹೋಗಿ ಅಲ್ಲಿ ವಾಸವನ್ನು ಕಲ್ಪಿಸಿಕೊಂಡನು. ಅನಂತರ ಶ್ರೀಹರಿಯ ವಿವಾಹಕ್ಕಾಗಿ ಬಂದಿದ್ದ ಎಲ್ಲ ದೇವತೆಗಳನ್ನು ಅವರವರ ಲೋಕಗಳಿಗೆ ಕಳುಹಿಸಿದನು. ಬ್ರಹ್ಮಾದಿ ದೇವತೆಗಳಿಗೆ ಮತ್ತು ಜಿತೇಂದ್ರಿಯರಾದ ಋಷಿ ಮುನಿಗಳಿಗೆ ಭಕ್ತವತ್ಸಲನಾದ ಭಗವಂತನು ಅವರವರ ಯೋಗ್ಯತಾನುಸಾರವಾಗಿ ಪೀತಾಂಬರಾದಿ ವಸ್ತುಗಳನ್ನು ಉಡುಗೊರೆಯಾಗಿ ಕೊಟ್ಟನು. ಜಗದ್ಧಾರಕನಾದ ಶ್ರೀನಿವಾಸನಿಂದ ಅಪ್ಪಣೆಪಡೆದು ಸುರರು ತಮ್ಮ ಲೋಕಗಳಿಗೆ ಪಯಣಿಸಿದರು. ಋಷಿಮುನಿಗಳೂ ಸಹ ಹರಿಯ ಅಪ್ಪಣೆ ಪಡೆದು ತಪಸ್ಸು ಮಾಡಲು ಅರಣ್ಯಕ್ಕೆ ಹೋದರು.

ಜನಕಮಹಾರಾಜ! ಆಗ ಶ್ರೀಲಕ್ಷ್ಮೀದೇವಿಯು ಶ್ರೀಹರಿಯ ಆಣತಿಯಂತೆ ಕೊಲ್ಹಾಪುರಕ್ಕೆ ದಯಮಾಡಿಸಿದಳು. ಮಹಾ ಅನುಭಾವಿಗಳಾದ ಬ್ರಹ್ಮಾದ್ಯಮರರು, ಮಹರ್ಷಿ ಶ್ರೇಷ್ಠರೊಡನೆ ಪದ್ಮಾವತಿ-ಶ್ರೀನಿವಾಸರ ಕಲ್ಯಾಣಮಹೋತ್ಸವವನ್ನು ಸಂತೋಷದಿಂದ ಕಂಡು ಭಾಗವಹಿಸಿ ಹರ್ಷಪುಲಕಿತ ಗಾತ್ರರಾಗಿ ಇಂತಹ ಮಂಗಳ ಮಹೋತ್ಸವವನ್ನು ನೋಡುವ ಭಾಗ್ಯವನ್ನು ಕರುಣಿಸಿದ ಭಗವಂತನನ್ನೂ, ಆಕಾಶರಾಜನನ್ನೂ ಪ್ರಶಂಸಿಸಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

ದೇವತೆಗಳು, ಋಷಿಗಳು ಹೊರಟ ಮೇಲೆ ಅಗಸ್ತ್ಯರ ಆಶ್ರಮಕ್ಕೆ ಹೋಗಿ ಅಲ್ಲಿ ಭಗವಾನ್ ಶ್ರೀನಿವಾಸನು ಪದ್ಮಾವತೀ ಸಹಿತನಾಗಿ ಅತಿಶಯ ಭೋಗಗಳನ್ನು ಅನುಭವಿಸುತ್ತಾ ವಿರಾಜಿಸುತ್ತಿದ್ದಾನೆ. ಇಷ್ಟು ಕಥೆಯನ್ನು ಜನಕರಾಯನಿಗೆ ನಿರೂಪಿಸಿದ ಶತಾನಂದರು ಕಥೆಗೆ ಮಂಗಳ ಹಾಡುತ್ತಾ ಇಂತೆಂದರು.

ಶತಾನಂದರು:- ಎಲೈ ಜನಕ ಮಹಾರಾಜ! ನಾನು ಇದುವರೆಗೆ ನಿನಗೆ ಶ್ರೀಹರಿಯ ವೇಂಕಟಾಚಲದ ಮಹಿಮೆ ಮತ್ತು ಶ್ರೀಭಗವಂತನಾದ ಶ್ರೀನಿವಾಸನ ಕಲ್ಯಾಣಮಹೋತ್ಸವ ಸಮಾರಂಭದ ಕಥಾನಕವನ್ನು ಹೇಳಿದೆನು. ಈಗ ಶ್ರೀನಿವಾಸನ ವಿವಾಹಮಹೋತ್ಸವದ ಈ ಅಧ್ಯಾಯವನ್ನು ಶ್ರವಣ ಮಾಡಿದವರಿಗೆ ಲಭಿಸುವ ಫಲಸ್ತುತಿಯನ್ನು ವಿವರಿಸುವೆನು ಕೇಳು. ರಾಜನ್, ಯಾರು ಶ್ರೀನಿವಾಸನ ಕಲ್ಯಾಣ ಮಹೋತ್ಸವದ ಈ ಅಧ್ಯಾಯದ ಮಹಿಮೆಯನ್ನು ಕೇಳುವರೋ ಅವರ ಭಾಗ್ಯೋದಯವನ್ನು ವಿಸ್ತಾರವಾಗಿ ನಿರೂಪಿಸುತ್ತೇನೆ. ಆದರದಿಂದ ಕೇಳುವವನಾಗು. ಒಂದು ಕೋಟಿ ಕನ್ಯಾದಾನ ಮಾಡುವುದರಿಂದ, ಸಮಸ್ತಭೂಮಿಯನ್ನು ದಾನಮಾಡುವುದರಿಂದ, ಮಾನವನು ಆದಾವ ಫಲವನ್ನು ಪಡೆಯುವನೋ ಅಂತಹ ಫಲವನ್ನು ಆದರಪೂರ್ವಕವಾಗಿ ಈ ವಿವಾಹಾಧ್ಯಾಯ ಕಥೆಯನ್ನು ಕೇಳುವುದರಿಂದ ಪಡೆಯುತ್ತಾನೆ. ಶ್ರೀ ವೇಂಕಟಾಚಲಕ್ಕೆ ಸ್ವಾಮಿಯಾದ ಶ್ರೀನಿವಾಸನ ವಿವಾಹ ಸಂಬಂಧಿಯಾದ ಮಂಗಳ ಮಹೋತ್ಸವವನ್ನು ಯಾರು ಮಾಡಿಸುವರೋ ಎಲೈ ಜನಕಮಹಾರಾಜ! ಅಂಥವನಿಗೆ ಶ್ರೀನಿವಾಸನ ಪ್ರಸಾದದಿಂದ ಮಹೋತ್ಸವವು ಉಂಟಾಗುವುದು. ಜನಕ ಭೂಪತಿಯೇ, ಇಂತು ನಾನು ನಿನಗೆ ಶ್ರೀಹರಿಪರಮಾತ್ಮನ ವಿವಾಹ ಮಂಗಳ ಮಹೋತ್ಸವದ ಚರಿತೆಯನ್ನು ಹೇಳಿದ್ದೇನೆ. ಶುಭವಿವಾಹ ಮಹೋತ್ಸವದ ಕಥೆಯನ್ನು ಕೇಳಿದವರು, ಹೇಳಿದವರು, ಶ್ರವಣ ಮಾಡಿಸಿದವರು (ಹೇಳಿದವರು) ಸಹ ಸಮಸ್ತ ಅಭೀಷ್ಟಗಳನ್ನು ಹೊಂದುವರು. ಕೇಳುವವರಿಗೂ ಸಹ ಇದು ಮಂಗಳಪ್ರದವು. ಸರ್ವರಿಗೂ ಇದರಿಂದ ಶುಭವುಂಟಾಗುವುದು ಎಂದು ಹೇಳಿ ಮಂಗಳವನ್ನಾಚರಿಸಿದರು.

*ಇಂತು ಶ್ರೀಭವಿಷ್ಯೋತ್ತರ ಪುರಾಣಾಂತರ್ಗತವಾದ ಶ್ರೀವೇಂಕಟೇಶಮಹಾತ್ಮ್ಯೆಯಲ್ಲಿ*
*ಶ್ರೀನಿವಾಸನ ವಿವಾಹ ಪ್ರಶಂಸೆ ಎಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು.*

*ಇಂತು ಶ್ರೀರಾಘವೇಂದ್ರ ಗುರುವಂಶಭೂಷಣರಾದ ರಾಜಾಶ್ರೀಗುರುರಾಜಾಚಾರ್ಯರು ಭಕ್ತಿಯಿಂದ*
*ರಚಿಸಿದ ಶ್ರೀವೇಂಕಟೇಶಮಹಾತ್ಮೆಯ ಕನ್ನಡಾನುವಾದವು ಮುಗಿದುದು.*

**ಶ್ರೀಸುಯಮೀಂದ್ರ ಶ್ರೀಸುಶೀಲೇಂದ್ರ ಶ್ರೀರಾಘವೇಂದ್ರ ಗುರ್ವಂತರ್ಗತ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ**
**ಇಷ್ಟದೇವತಾ ಕುಲದೇವತಾತ್ಮಕನಾದ ಶ್ರೀಮದ್ವೇಂಕಟೇಶನಿಗೆ ಈ ಗ್ರಂಥವು ಅರ್ಪಿತವಾಗಿದೆ.**

*ಇತಿಶಮ್*

**ಶ್ರಿಯಃ ಕಾಂತಾಯ ಕಲ್ಯಾಣನಿಧಯೇ ನಿಧಯೇಽರ್ಥಿನಾಮ್ ।**
**ಶ್ರೀವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಳಮ್ ॥**

*ಶ್ರೀಕೃಷ್ಣಾರ್ಪಣಮಸ್ತು*



ವಿದ್ಯಾವೈಭವ ವಿದ್ವಾನ್ ಶ್ರೀ ರಾಜಾ ಶ್ರೀಗುರುರಾಜಾಚಾರ್ಯರು ಮಾಧ್ವ ಸಮಾಜವೆಂಬ ಆಕಾಶದಲ್ಲಿ ಪ್ರಜ್ವಲವಾದ ಹೊಳೆಯುವ ತಾರೆಯಂತೆ ಇದ್ದರು. ಈಗಲೂ ತಮ್ಮ ಕೀರ್ತಿಶರೀರದಿಂದ ಅವರ ಪ್ರಕಾಶವು ಬೆಳಗುತ್ತಲೇ ಇದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಶ್ರೀ ರಾಜಾ. ಶ್ರೀ. ಗುರುರಾಜಾಚಾರ್ಯರು, ಶ್ರೀ ರಾಘವೇಂದ್ರ ಸ್ವಾಮಿಗಳವರ ಪೂರ್ವಾಶ್ರಮದ ಔರಸ ವಂಶ ಸಂಜಾತರು ಅನನ್ಯಾದೃಸ ಪ್ರತಿಭಾವಂತರಾದ ಮಹಾನುಭಾವರು.

ಶ್ರೀ ರಾಘವೇಂದ್ರ ಸ್ವಾಮಿಗಳ ಭವ್ಯ ಪೀಠದಲ್ಲಿ ಸಂಸ್ಥಾನಾಧಿಪತಿಗಳಾಗಿದ್ದ ಶ್ರೀ ಶ್ರೀ ಸುಯಮೀಂದ್ರತೀರ್ಥ ಶ್ರೀಪಾದಂಗಳವರ ದ್ವಿತೀಯ ಪುತ್ರರು. ಅವರ ಸಂಸ್ಕೃತ ಸಾಹಿತ್ಯದಲ್ಲಿರುವ ಪ್ರತಿಭೆ, ಮಧ್ವಶಾಸ್ತ್ರದ ಬಗ್ಗೆ ಇರುವ ಆಳವಾಧ ಜ್ಞಾನ, ಗ್ರಂಥ ರಚನಾ ಚಾತುರ್ಯ, ಕವಿತ್ವಪ್ರತಿಭೆ, ವಾಕ್ಪಟುತ್ವ, ಮಾನವ ಸಾಮಾನ್ಯರ ಬಗ್ಗೆ ಇರುವ ಕಳಕಳ ಹಾಗೂ ಸಂಘಟನಾ ಸಾಮರ್ಥ್ಯ, ಇತ್ಯಾದಿ ಗುಣಗಳನ್ನು ಕಂಡು, ವಿದ್ವತ್ಪ್ರಪಂಚವೂ ಕೂಡ ಬೆರಳುಕಚ್ಚುತ್ತಿತ್ತು. ಶ್ರೀ ಆಚಾರ್ಯರು ರಚಿಸಿದ ಅನೇಕ ಕೃತಿಗಳಲ್ಲಿ ಕಲಿಯುಗ ಕಲ್ಪತರು ಹಾಗೂ ಅಜಯ್ಯ ವಿಜಯೀಂದ್ರರು ಕೃತಿಗಳು ವಿಶೇಷವಾಗಿ ಉಲ್ಲೇಖನೀಯವಾಗಿವೆ. ಇವರು ಅನೇಕ ಅಪೂರ್ವ ಸಂಸ್ಕೃತ–ಕನ್ನಡ ಕೀರ್ತನೆಗಳನ್ನು ರಚಿಸಿದಲ್ಲದೆ ಶ್ರೀಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರವನ್ನು ಸಂಸ್ಥಾಪಿಸಿ ಅನೇಕ ಅಪೂರ್ವ ಅಪ್ರಕಟಿತ ಗ್ರಂಥರತ್ನಗಳನ್ನು ವಿದ್ವತ್ಪ್ರಪಂಚಕ್ಕೆ ಪ್ರಕಾಶನಗೊಳಿಸಿದ್ದಾರೆ. ಶ್ರೀ ಆಚಾರ್ಯರ ಅಮೋಘವಾದ ಜ್ಞಾನಕಾರ್ಯಗಳನ್ನು ಪ್ರತಿಭೆಯನ್ನು ಗಮನಿಸಿ ಅನೇಕ ಮಠಾಧಿಪತಿಗಳು, ಸಾಂಸ್ಕೃತಿಕ ಸಂಘ ಸಂಸ್ಥೆಗಳು ಸನ್ಮಾನಿಸಿ ಗೌರವಿಸಿವೆ. ಸಂಸ್ಕೃತ ಗ್ರಂಥಗಳ ರಕ್ಷಣೆ ಹಾಗೂ ಪ್ರಕಾಶನಕ್ಕಾಗಿ ಮತ್ತು ಸಂಸ್ಕೃತಭಾಷೆಯ ಪ್ರಚಾರಕ್ಕಾಗಿ ಶ್ರೀ ಆಚಾರ್ಯರಿಗೆ ರಾಷ್ಟ್ರಪತಿ ಪ್ರಶಸ್ತಿಯನ್ನು ದಯಪಾಲಿಸಿ ಗೌರವಿಸಿದ್ದಾರೆ.

ಶ್ರೀರಾಯರ ಮನೆತನದ ವಿದ್ವಾಂಸರಲ್ಲಿ ಪ್ರಪ್ರಥಮವಾಗಿ ರಾಷ್ಟ್ರಪತಿ ಪ್ರಶಸ್ತಿಯನ್ನುಗಳಿಸಿದ ಮಹಾನುಭಾವರು. ಶ್ರೀರಾಯರ ತ್ರಿಶತಮಾನೋತ್ಸವ ಹಾಗೂ ಶ್ರೀರಾಯರ 400ನೇ ಜನ್ಮದಿನೋತ್ಸವವು ವಿಶ್ವದಾದ್ಯಂತ ಆಚರಿಸುವಲ್ಲಿ ಶ್ರೀಆಚಾರ್ಯರದು ಪ್ರಮುಖ ಪಾತ್ರವೆಂಬುದು ಸರ್ವವೇದ್ಯ. ರಾಜಾ ಶ್ರೀ ಗುರುರಾಜಾಚಾರ್ಯರ ಕೀರ್ತಿಶರೀರವು ಶ್ರೀರಾಯರ ಸಮೀಪದಲ್ಲಿದ್ದು ಸಂಶೋಧಕ, ಕೃತಿರಚನೆಕಾರರಿಗೆ ಸ್ಫೂರ್ತಿಮೂರ್ತಿಗಳಾಗಿದ್ದಾರೆ.

**ವಾಚಸ್ಪತಿ ಡಾ. ವಾ. ರಾ. ಪಂಚಮುಖೀ**

ಕುಲಪತಿಗಳು, ಶ್ರೀ ಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ, ಮಂತ್ರಾಲಯ



*Published by :*

**Raja G. Sudheendracharya**

Sanchalak : Sri Suyami Raghavendra Research Center

Nanjangud - Bangalore. Cell : 99453 48633